ಶ್ರೀ ಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತ

ಶ್ರೀ ಸರ್ವಮೂಲ ಗ್ರಂಥಗಳು

# ಶ್ರೀಮದನುವ್ಯಾಖ್ಯಾನ

## ಭಾಗ - ೩

(ಮೂರನೆಯ ಮತ್ತು ನಾಲ್ಕನೆಯ ಅಧ್ಯಾಯ)



ಅನುವಾದಕರು

ವಿದ್ವಾನ್ ಎ. ಹರಿದಾಸ ಭಟ್ಟ ಎಂ.ಎ.

ಪ್ರಕಾಶಕರು

ಅಖಿಲ ಭಾರತ ಮಾಧ್ವ ಮಹಾಮಂಡಲ , ಬೆಂಗಳೂರು.

ಪೂರ್ಣಪ್ರಜ್ಞ ವಿದ್ಯಾಪೀಠ, ಬೆಂಗಳೂರು - 560 070

ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತ

# ಶ್ರೀ ಸರ್ವಮೂಲ ಗ್ರಂಥಗಳು

(ಕನ್ನಡ ಅನುವಾದ ವಿವರಣೆ ಸಹಿತ)

ಸಂಪುಟ - ೧೨ಬಿ

# ಶ್ರೀಮದನುವ್ಯಾಖ್ಯಾನ

ಭಾಗ - ೩

(ಮೂರನೆಯ ಮತ್ತು ನಾಲ್ಕನೆಯ ಅಧ್ಯಾಯ)

ಶ್ರೀ 108 ಶ್ರೀ ಪೇಜಾವರ ಮಠಾಧೀಶ ಶ್ರೀ ವಿಶ್ವೇಶತೀರ್ಥ
ಶ್ರೀಪಾದಂಗಳವರು ಅನುಗ್ರಹಿಸಿದ ಸುಧಾಸಾರ ಸಹಿತ

ಅನುವಾದಕರು

ವಿದ್ವಾನ್ ಎ. ಹರಿದಾಸ ಭಟ್ಟ ಎಮ್.ಎ.

ಪ್ರಕಾಶಕರು

ಅಖಿಲ ಭಾರತ ಮಾಧ್ವಮಹಾ ಮಂಡಲ (ರಿ),
ಪೂರ್ಣಪ್ರಜ್ಞ ವಿದ್ಯಾಪೀಠ
ಬೆಂಗಳೂರು - 560 070

# Sarvamoola Vol.12B

Sribrahmasutrabhashya Srimadanuvyakhyana Part III (3rd & 4th Adhyaya) of Srimadanandateertha containing **Srimadanuvyakhyana Sudhasara rendered by Paramapoojya Sri Sri Vishweshateertha Swamiji** of Sri Pejawarmutt in Kannada and essences in english rendered by **Prof. K.T. Pandurangi** with the main Kannada Anuvada rendered by Prof. A. Haridas Bhat, published by Akhila Bharata Madhwa Maha Mandala, released by Paramapoojya Sri Sri Vishweshateertha Swamiji of Sri Pajawar Mutt during his historic 82 Peetarohana Utasava observing at Poornaprajna Vidyapeetha, Bangalore on 10-12-2019


ಪುಟಗಳು : 996

ಮೊದಲನೆ ಮುದ್ರಣ : 2019

ಪ್ರತಿಗಳು : 1000

ಪ್ರತಿ ಬೆಲೆ : ರೂ.450/-







ಗ್ರಂಥಗಳು ದೊರೆಯುವ ಸ್ಥಳ

ಅಖಿಲ ಭಾರತ ಮಾಧ್ವ ಮಹಾ ಮಂಡಲದ ಕಾರ್ಯಾಲಯ

ಪೂರ್ಣಪ್ರಜ್ಞ ವಿದ್ಯಾಪೀಠ , ಪೂರ್ಣಪ್ರಜ್ಞ ನಗರ , ಬೆಂಗಳೂರು –28

ಮುಖಪುಟ ವಿನ್ಯಾಸ : ಡಾ. ಹೆಚ್.ಎನ್. ನಾರಾಯಣ ರಾವ್

ಅಕ್ಷರ ಜೋಡಣೆ : ಪ್ರೇಮ್‌ಕುಮಾರ್

ಮುದ್ರಣ : ಓಂಕಾರ್ ಆಫ್‌ಸೆಟ್ ಪ್ರಿಂಟರ್ಸ್, ನ್ಯೂತರಗು ಪೇಟೆ, ಬೆಂಗಳೂರು.

## ಶ್ರೀ 108 ಶ್ರೀಪೇಜಾವರ ಮಠಾಧೀಶರಾದ
## ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರ ಸಂದೇಶ

ತತ್ವಜ್ಞಾನ ಕ್ಷೇತ್ರದಲ್ಲಿ ಶ್ರೀಮನ್ ಮಧ್ವಾಚಾರ್ಯರ ಗ್ರಂಥಗಳಿಗೆ ಅಗ್ರಗಣ್ಯ ಸ್ಥಾನವಿದೆ. ಶ್ರೀ ಮಧ್ವಾಚಾರ್ಯರು ಬ್ರಹ್ಮಸೂತ್ರ, ಉಪನಿಷತ್ ಹಾಗೂ ಭಗವದ್ಗೀತೆಗಳಿಗೆ ಭಾಷ್ಯ-ವಿವರಣೆಗಳನ್ನು ಇತ್ತಿದ್ದಲ್ಲದೇ ವೇದ, ಭಾರತಪುರಾಣ ಹಾಗೂ ತಂತ್ರಶಾಸ್ತ್ರಗಳ ಬಗ್ಗೆಯೂ ತಾವು ಗ್ರಂಥಗಳನ್ನು ರಚಿಸಿದ್ದಾರೆ. ಈ ಮೂಲಕ ಸನಾತನ ಧರ್ಮದ ಮೂಲ ಗ್ರಂಥಗಳನ್ನು ಸರಿಯಾದ ಕ್ರಮದಲ್ಲಿ ಅರ್ಥಮಾಡಿಕೊಳ್ಳುವುದಕ್ಕೆ ಮಾರ್ಗದರ್ಶನವನ್ನಿತ್ತಿದ್ದಾರೆ. ಇವನ್ನು ಗೌರವದಿಂದ ಸರ್ವಮೂಲ ಗಳೆಂದು ಕರೆಯುತ್ತೇವೆ.

ಈ ಸರ್ವಮೂಲಗಳು ಸಂಸ್ಕೃತದಲ್ಲಿದ್ದು ಸಾಮಾನ್ಯ ಜನರಿಗೆ ಅರ್ಥವಾಗದಿರುವುದರಿಂದ ಕನ್ನಡದಲ್ಲಿ ಅನುವಾದ ಮಾಡುವ ಯೋಜನೆಯನ್ನು ಕೈಗೆತ್ತಿಕೊಳ್ಳಲಾಗಿದೆ. ಅಖಿಲ ಭಾರತ ಮಾಧ್ವ ಮಹಾ ಮಂಡಲದ ಮೂಲಕ ಮುಂದುವರೆದ ಕಾರ್ಯ ಇದೀಗ ಪೂರ್ಣ ಗೊಂಡಿದೆ. ಸಮಗ್ರ ಸರ್ವಮೂಲ ಗ್ರಂಥಗಳು 29 ಸಂಪುಟಗಳಲ್ಲಿ ಸಿಗುತ್ತಿವೆ.

ಅನೇಕ ವಿದ್ವಾಂಸರು ಹಾಗೂ ಕಾರ್ಯಕರ್ತರು ಇಲ್ಲಿ ಸೇವೆ ಸಲ್ಲಿಸಿ ದ್ದಾರೆ. ಕೆಲವು ಗ್ರಂಥಗಳು ವ್ಯಾಖ್ಯಾನಗಳ ವಿಷಯಗಳಿಂದಲೂ ಕೂಡಿವೆ. ಪರಮತವಿಮರ್ಶೆಯೂ ಇದ್ದು ಮಧ್ವಸಿದ್ಧಾಂತದ ವಿಶೇಷತೆಯನ್ನು ತಿಳಿಯಲು ಇದು ಸಹಕಾರಿಯಾಗಿದೆ.

ಇಂತಹ ಸಜ್ಜನೋಪಯೋಗಿ ಕೆಲಸಗಳು ಅಖಿಲ ಭಾರತ ಮಾಧ್ವ ಮಹಾ ಮಂಡಲದ ಮೂಲಕ ನಿರಂತರವಾಗಿ ನಡೆಯುತ್ತಿರಲಿ. ಈ ಮೂಲಕ ಜಿಜ್ಞಾಸುಗಳಿಗೆ ತತ್ವಜ್ಞಾನವು ಲಭಿಸಲಿ ಎಂದು ನಮ್ಮ ಉಪನ್ಯಾಸಮೂರ್ತಿ ಶ್ರೀ ರಾಮವಿಠ್ಠಲದೇವರಲ್ಲಿ ಪ್ರಾರ್ಥಿಸುತ್ತೇವೆ.

**ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರು**

ಶ್ರೀ ಪೇಜಾವರ ಮಠ, ಉಡುಪಿ

# ಆಶೀರ್ವಚನ

ಉಪನಿಷತ್‌ಪ್ರಸ್ಥಾನ, ಸೂತ್ರಪ್ರಸ್ಥಾನ, ಗೀತಾಪ್ರಸ್ಥಾನ ಇವು ಪ್ರಸ್ಥಾನತ್ರಯಗಳೆಂದು ಪ್ರಸಿದ್ಧವಾಗಿವೆ. ವೈದಿಕ ಸಿದ್ಧಾಂತಗಳು ಈ ಮೂರು ಪ್ರಸ್ಥಾನಗಳನ್ನು ಅವಲಂಬಿಸಿದ್ದರೆ ಮಾತ್ರ ಅದಕ್ಕೊಂದು ಮಹತ್ವ. ಆದ್ದರಿಂದಲೇ ಈ ಪ್ರಸ್ಥಾನತ್ರಯಕ್ಕೂ ಪ್ರಸಿದ್ಧ ದರ್ಶನತ್ರಯಾಚಾರ್ಯರೆನಿಸಿರುವ ಶಂಕರ-ರಾಮಾನುಜ-ಮಧ್ವಾಚಾರ್ಯರು ಭಾಷ್ಯಗಳನ್ನು ಬರೆದಿದ್ದಾರೆ. ಶ್ರೀಮಧ್ವಾಚಾರ್ಯರು ಈ ಪ್ರಸ್ಥಾನತ್ರಯದಲ್ಲಿ ಭಗವದ್ಗೀತೆಗೆ ಎರಡು ವ್ಯಾಖ್ಯಾನಗಳನ್ನು ಬರೆದಿದ್ದರೆ ಬ್ರಹ್ಮಸೂತ್ರಗಳಿಗೆ ನಾಲ್ಕು ವಿವರಣೆಗಳನ್ನು ಬರೆದಿದ್ದಾರೆ. ಭಾಷ್ಯ, ಅನುವ್ಯಾಖ್ಯಾನ, ನ್ಯಾಯವಿವರಣ ಮತ್ತು ಅಣುಭಾಷ್ಯ. ಇದರಿಂದಲೇ ಬ್ರಹ್ಮಸೂತ್ರಗಳಿಗೆ ಶ್ರೀಮಧ್ವಾಚಾರ್ಯರು ನೀಡಿದ ಪ್ರಾಶಸ್ತ್ಯವನ್ನು ಗಮನಿಸಬಹುದು. ಇದಲ್ಲದೆ ಅನುವ್ಯಾಖ್ಯಾನದಲ್ಲಿ ಬ್ರಹ್ಮಸೂತ್ರಗಳ ಮಹತ್ವವನ್ನು ಸ್ಪಷ್ಟವಾಗಿಯೇ ಹೇಳಿದ್ದಾರೆ-

**'ಅತೋ ನೈತಾದೃಶಂ ಕಿಂಚಿತ್ ಪ್ರಮಾಣತಮಮಿಷ್ಯತೇ'**

'ಬ್ರಹ್ಮಸೂತ್ರಗಳಿಗೆ ಸಮಾನವಾದ ಉತ್ತಮ ಪ್ರಮಾಣಗ್ರಂಥ ಇನ್ನೊಂದಿಲ್ಲ' ಎಂದು.

ಆಚಾರ್ಯರು ಬ್ರಹ್ಮಸೂತ್ರಗಳಿಗೆ ರಚಿಸಿರುವ ನಾಲ್ಕು ಕೃತಿಗಳಲ್ಲಿ 'ಅನುವ್ಯಾಖ್ಯಾನ' ಅತ್ಯಂತ ಮಹತ್ವಪೂರ್ಣವಾದ ಛಂದೋಬದ್ಧವಾದ ಗ್ರಂಥ. ಶಾಸ್ತ್ರಪ್ರಮೇಯಗಳನ್ನು ವಿಮರ್ಶಾತ್ಮಕವಾಗಿ ಈ ಕೃತಿಯಲ್ಲಿ ಆಚಾರ್ಯರು ನಿರೂಪಿಸಿದ್ದಾರೆ. ಇದಕ್ಕೆ ಶ್ರೀಮಜ್ಜಯತೀರ್ಥರ ವ್ಯಾಖ್ಯಾನವಾದ ನ್ಯಾಯಸುಧೆಯಂತೂ ಮಾಧ್ವಸಿದ್ಧಾಂತದ ಮೇರುಕೃತಿ ಎನಿಸಿದೆ. ಅನುವ್ಯಾಖ್ಯಾನವನ್ನು ಅವರು ನ್ಯಾಯಸುಧೆಯಲ್ಲಿ ಹೀಗೆ ಬಣ್ಣಿಸಿದ್ದಾರೆ-

**'ಅನುವ್ಯಾಖ್ಯಾನನಲಿನೇ ಚಂಚರೀಕತಿ ಮೇ ಮನಃ ।'**

'ಅನುವ್ಯಾಖ್ಯಾನವೆಂಬ ಕಮಲದ ಹೂವಿನಲ್ಲಿ ನನ್ನ ಮನಸ್ಸು ದುಂಬಿಯಂತೆ ಆಕರ್ಷಣೆಗೊಳ್ಳುತ್ತದೆ' ಎಂದು.

ಈ ಗ್ರಂಥದ ಹಿನ್ನೆಲೆಯೂ ವಿಶಿಷ್ಟವಾಗಿದೆ. ಆಚಾರ್ಯರು ಎಲ್ಲ ಗ್ರಂಥಗಳನ್ನು ರಚಿಸಿದ ಮೇಲೆ ಶಿಷ್ಯರು ಪ್ರಾರ್ಥಿಸಿದರು-

'ಅಪರೋಽಪೇಕ್ಷ್ಯತೇಽಸ್ಮಾಭಿಃ ಗ್ರಂಥೇಷ್ವೇತೇಷು ಸತ್ಸ್ವಪಿ ॥'

'ಹೇಗೆ ಇಂದ್ರಾದಿಗಳಿದ್ದರೂ ದೇವತೆಗಳು ತಮಗೆ ಸೇನಾನಿಯಾಗಿ ಸ್ಕಂದನನ್ನು ಬಯಸಿದರೋ ಹಾಗೆ ನಮಗೆ ಮತ್ತೊಂದು ಗ್ರಂಥವನ್ನು ನೀಡಬೇಕು' ಎಂದು. ಹೀಗೆ ಶಿಷ್ಯರ ಪ್ರಾರ್ಥನೆಯನ್ನು ಮನ್ನಿಸಿ ಆಚಾರ್ಯರು ಈ ಗ್ರಂಥವನ್ನು ರಚಿಸಿದರು. ರಚಿಸಿದ ಕ್ರಮವೂ ಅದ್ಭುತವಾದುದು. ಒಂದೊಂದು ಅಧ್ಯಾಯವನ್ನು ಬರೆದುಕೊಳ್ಳಲು ಒಬ್ಬೊಬ್ಬ ಶಿಷ್ಯರನ್ನು ನಿಯಮಿಸಿ ಕ್ರಮವಾಗಿ ಒಂದೇ ಬಾರಿಗೆ ಎಲ್ಲ ಶಿಷ್ಯರಿಗೂ ಆಯಾಯ ಅಧ್ಯಾಯಗಳ ಸೂತ್ರ ಪ್ರಮೇಯಗಳನ್ನು ಶ್ಲೋಕಬದ್ಧವಾಗಿ ಹೇಳಿ ಬರೆಸಿದರು. ಹೀಗೆ ಆಚಾರ್ಯರ ಅದ್ಭುತ ಅವಧಾರಣಶಕ್ತಿಗೆ ನಿದರ್ಶನವಾಗಿ ಈ ಗ್ರಂಥ ರಚನೆಗೊಂಡಿದೆ.

ಇಂತಹ ಗ್ರಂಥದ ಅನುವಾದಕಾರ್ಯ ಮಂಡಲದ ಕನ್ನಡ ಸರ್ವಮೂಲ ಯೋಜನೆಯಲ್ಲಿ ಆರಂಭಗೊಂಡಿದೆ. ಅದನ್ನು ನಮ್ಮ ಪ್ರಿಯ ಶಿಷ್ಯರಾದ ಎ. ಹರಿದಾಸ ಭಟ್ಟರು ಮಾಡಿದ್ದಾರೆ. ಇದರ ಹೆಚ್ಚಿನ ವಿವರಣೆಯನ್ನು ನಾವು 'ನ್ಯಾಯಸುಧಾಸಾರ' ಎಂಬ ಕನ್ನಡದ ಕೃತಿಯಲ್ಲಿ ನೀಡಿದ್ದೇವೆ. ಅದರ ಆಂಗ್ಲಭಾಷಾನುವಾದವನ್ನೂ ಈ ಪುಸ್ತಕ ಒಳಗೊಂಡಿದೆ. ಸಜ್ಜನರು ಈ ಗ್ರಂಥದ ಪೂರ್ಣ ಉಪಯೋಗವನ್ನು ಪಡೆದುಕೊಳ್ಳಬೇಕಾಗಿ ನಾವು ಅಪೇಕ್ಷಿಸುತ್ತೇವೆ.

ದಿನಾಂಕ : 10-12-2019

ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದರು
ಶ್ರೀ ಪೇಜಾವರ ಅಧೋಕ್ಷಜ ಮಠ,
ಉಡುಪಿ.

# ಪ್ರಕಾಶಕರ ನುಡಿ

ಶ್ರೀಮನ್ಮಧ್ವಾಚಾರ್ಯರ ಸರ್ವಮೂಲಗ್ರಂಥಗಳಲ್ಲೇ ಸೈದ್ಧಾಂತಿಕ ವಿಮರ್ಶೆಗಳುಳ್ಳ, ತರ್ಕಜಟಿಲಗ್ರಂಥಗಳಲ್ಲಿ ಗಾತ್ರ ಹಾಗೂ ವಿಷಯಗಳಿಂದ ಕೂಡಿದ ಅನುವ್ಯಾಖ್ಯಾನದಷ್ಟು ದೊಡ್ಡದಾದ ಮತ್ತೊಂದು ಗ್ರಂಥವಿಲ್ಲ. ಇದರ ಕನ್ನಡ ಅನುವಾದವೂ ಅತ್ಯಂತ ಜಾಗರೂಕತೆಯಿಂದ ಸರಳೀಕರಿಸಿ ನಡೆಸಬೇಕಾದುದು. ಈ ಅನುವಾದದ ಭಾರವನ್ನು ವಿದ್ವಾನ್ ಎ.ಹರಿದಾಸಭಟ್ಟರಿಗೆ ವಹಿಸಿಬಿಟ್ಟಿದ್ದೇವೆ. ಇದರ ಮೊದಲಭಾಗ ಎರಡು ವರ್ಷದ ಹಿಂದೆಯೇ ಪ್ರಕಟವಾಗಿದ್ದು ಅದರಲ್ಲಿ ಸಮನ್ವಯಾಧ್ಯಾಯವನ್ನು ಪೂರ್ತಿಯಾಗಿ ಅನುವಾದಿಸಲಾಗಿತ್ತು. ಎರಡನೇ ಭಾಗದಲ್ಲಿ ಎರಡನೇ ಅವಿರೋಧಾಧ್ಯಾಯದ ವಿವರಣೆಯೊಂದಿಗೆ ಅನುವಾದವನ್ನು ಮುದ್ರಿಸಿ ಪ್ರಕಟಿಸಿದ್ದೇವೆ.

ಪ್ರಸ್ತುತ, ಈ ಯೋಜನೆಯ ಕೊನೇಯ ಪುಸ್ತಕವಾಗಿ ಅನುವ್ಯಾಖ್ಯಾನದ (ಮೂರು ಹಾಗೂ ನಾಲ್ಕನೇ ಅಧ್ಯಾಯ) ಮೂರನೇ ಭಾಗವಾಗಿ ಪ್ರಕಟವಾಗುತ್ತಿದೆ. ಇದರೊಂದಿಗೆ ಪರಮಪೂಜ್ಯ ಶ್ರೀವಿಶ್ವೇಶತೀರ್ಥಶ್ರೀಪಾದರು ಬರೆದಿರುವ ನ್ಯಾಯಸುಧಾ ಸಾರದ ತೃತೀಯಾ ಹಾಗೂ ಚತುರ್ಥಾಧ್ಯಾಯವನ್ನೂ ಆರಂಭದಲ್ಲಿ ಮುದ್ರಿಸಿದ್ದೇವೆ. ಅತ್ಯಂತ ಸುಲಲಿತವಾದ ಈ ಸಾರಸಂಗ್ರಹವನ್ನು ಓದಿ ಗ್ರಂಥದ ಅಧ್ಯಯನದಲ್ಲಿ ತೊಡಗಿದರೆ ವಿಷಯ ಗ್ರಹಣವು ಸುಲಭವಾಗುವುದೆಂದು ಭಾವಿಸಿದ್ದೇವೆ.

ಅನುವ್ಯಾಖ್ಯಾನದ ಪಾರಾಯಣಕ್ಕೆ ಅನುಕೂಲವಾಗುವ ದೃಷ್ಟಿಯಿಂದ ಮೂಲ ಮಾತ್ರವನ್ನೂ ಪ್ರತ್ಯೇಕವಾಗಿಯೂ ಮುದ್ರಿಸಿದ್ದೇವೆ.

ಸುಧಾಸಾರವನ್ನು ಅನುಗ್ರಹಿಸಿದ ಪೂಜ್ಯ ಶ್ರೀಪಾದರಿಗೆ ಅನಂತ ಪ್ರಣಾಮಗಳು. ಅನ್ವಯಾರ್ಥ, ವಿವರಣೆ ಹಾಗೂ ಉಚಿತ ಶೀರ್ಷಿಕೆಗಳೊಂದಿಗೆ ಸುಗ್ರಾಹ್ಯವಾಗುವಂತೆ ಅನುವಾದಿಸಿದ ರಾಷ್ಟ್ರಪತಿ ಪ್ರಶಸ್ತಿ ಪುರಸ್ಕೃತರಾದ ಎ.ಹರಿದಾಸಭಟ್ಟರಿಗೆ ಕೃತಜ್ಞತೆಗಳು.

ಹಿಂದೆ ಪ್ರಕಟಣೆಗೊಂಡ ಎಲ್ಲಾ ಸರ್ವಮೂಲಗ್ರಂಥಗಳ ಮುದ್ರಣಕ್ಕೆ ಅತ್ಯಂತ ಶ್ರದ್ಧೆಯಿಂದ ಹಂತ ಹಂತ ಸೂಚನೆ ಸಲಹೆಗಳನ್ನು ನೀಡಿ ಉಪಕರಿಸಿದ ಮಂಡಲದ ಅಧ್ಯಕ್ಷರಾಗಿ, ಮೂವತ್ತು ವರ್ಷಗಳ ಕಾಲ ಮಂಡಲಿಗೆ ನಿರಂತರ ಸೇವೆಯನ್ನು ನೀಡಿದ್ದ ಶ್ರೀ ಕೆ. ವಿಷ್ಣುಮೂರ್ತಿ ಎರ್ಕಾಡಿತ್ತಾಯರನ್ನು ಈ ಸಂದರ್ಭದಲ್ಲಿಸ್ಮರಿಸುವುದು ಅತ್ಯವಶ್ಯಕವಾಗಿದೆ.

ಈ ಸರ್ವಮೂಲ ಗ್ರಂಥಗಳ ಪ್ರಕಟಣೆಯ ಸಂಪೂರ್ಣ ಜವಾಬ್ದಾರಿಯನ್ನು ವಹಿಸಿ ಮುದ್ರಣ ಮಾಡುವವರಿಗೂ, ಅನುವಾದಕರಿಗೂ ಹಾಗೂ ಇತರೆ ಕಾರ್ಯಕರ್ತರ ನಿರಂತರ ಸಂಪರ್ಕಕೊಂಡಿಯಂತೆ ತಮ್ಮನ್ನು ತಾವು ಅರ್ಪಿಸಿ, ಶ್ರೀ ಮಧ್ವಾಚಾರ್ಯರ ಸೇವೆಯಲ್ಲಿ ಸಿಂಹಪಾಲು ವಹಿಸಿದ ಮಂಡಲದ ಪ್ರಧಾನ ಕಾರ್ಯದರ್ಶಿಗಳಾದ ಡಾ. ಹೆಚ್.ಎನ್.ನಾರಾಯಣ ರಾವ್ ಹಾಗೂ ಈ ಕಾರ್ಯದಲ್ಲಿ ಇವರಿಗೆ ಸಹಕರಿಸಿದ ಕಾರ್ಯದರ್ಶಿ ಶ್ರೀ ಶ್ರೀಪಾದ ಸಿಂಗನಮಲ್ಲಿ ಹಾಗೂ ಇವರಿಗೆ ಕೃತಜ್ಞತೆಗಳು ಮತ್ತು ಈ ಮುದ್ರಣಕಾರ್ಯದಲ್ಲಿ ಪ್ರತಿ ಹಂತದಲ್ಲಿ ನೆರವು ನೀಡಿರುವ ಮಾಧ್ವ ಮಂಡಲದ ಎಲ್ಲಾ ಸಿಬ್ಬಂದಿ ವರ್ಗಕ್ಕೂ ಅಭಿನಂದನೆಗಳು. ಸಂಪುಟದ ಅಕ್ಷರಜೋಡಣೆಯನ್ನು ಮಾಡಿರುವ ಶ್ರೀ ಆರ್.ಎಸ್.ಪ್ರೇಮಕುಮಾರ್, ಅಂದವಾಗಿ ಸಕಾಲಕ್ಕೆ ಮುದ್ರಣವನ್ನು ಕೈಕೊಂಡ ಓಂಕಾರ ಆಫ್‌ಸೆಟ್ ಪ್ರಿಂಟರ್ಸ್‌ನ ಶ್ರೀ ವೆಂಕಟೇಶಬಾಬು ಅವರಿಗೂ ಅಭಿನಂದನೆಗಳು.

**ಹೆಚ್.ವಿ. ಗೌತಮ**
**ಅಧ್ಯಕ್ಷರು**
**ಅಖಿಲ ಭಾರತ ಮಾಧ್ವಮಹಾಮಂಡಲ**

ದಿನಾಂಕ : 10-12-2019
ಬೆಂಗಳೂರು

# ಸಂಪಾದಕ ಮಂಡಳಿಯ ನಿವೇದನೆ

ಪರಮಪೂಜ್ಯ ಪೇಜಾವರ ಶ್ರೀಪಾದರು ಕ್ರಿ.ಶ. 1986ರಲ್ಲಿ ಶ್ರೀಮಧ್ವಾ ಚಾರ್ಯರ 750ನೇ ಜಯಂತಿಯ ಅಂಗವಾಗಿ ಸಂಕಲ್ಪಿಸಿದ್ದ ಸರ್ವಮೂಲ ಭಾಷಾಂತರ ಕ್ರಿಯೆಯು ಅನುವ್ಯಾಖ್ಯಾನದ ಈ ಸಂಪುಟದೊಂದಿಗೆ ಮುಗಿದಿದೆ. ಋಗ್ಭಾಷ್ಯ, ನ್ಯಾಯವಿವರಣ, ಬ್ರಹ್ಮಸೂತ್ರಭಾಷ್ಯ, ಅಣುಭಾಷ್ಯ ಹಾಗೂ ಅನುವ್ಯಾಖ್ಯಾನಗಳನ್ನು ಶ್ರೀ ಸುವಿದ್ಯೇಂದ್ರತೀರ್ಥ ಶ್ರೀಪಾದರು, ಹಯವದನ ಪುರಾಣಿಕರು, ಹರಿದಾಸಭಟ್ಟರು, ಸಿ.ಹೆಚ್. ಬದರೀನಾಥಾಚಾರ್ಯ ಹಾಗೂ ಧನಂಜಯಾಚಾರ್ಯರು ಅನತಿಕಾಲದಲ್ಲಿ ಅನುವಾದಿಸಿ ಮುಗಿಸುವಲ್ಲಿ ಉಪಕಾರ ಮಾಡಿದ್ದಾರೆ.

ಶ್ರೀಮ್ಮಧ್ವಾಚಾರ್ಯರ ಸಮಗ್ರಗ್ರಂಥಗಳ ಕನ್ನಡ ಅನುವಾದದ ಯೋಜನೆ ಪ್ರಾರಂಭವಾಗಿ ಅನೇಕ ವರ್ಷಗಳು ಕಳೆದಿವೆ. ಸುಮಾರು 25ಕ್ಕೂ ಹೆಚ್ಚು ವಿದ್ವಾಂಸರು ಗ್ರಂಥಗಳ ಅನುವಾದವನ್ನು ಮಾಡಿಕೊಟ್ಟಿದ್ದಾರೆ. ಮಂಡಲದ ಸಂಸ್ಥಾಪಕರೂ, ಸಂರಕ್ಷಕರೂ ಹಾಗೂ ಮಹಾ ಪೋಷಕರಾದ ಪರಮಪೂಜ್ಯ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದರು ತಾವೇ ಸರ್ವಮೂಲಗ್ರಂಥಗಳ ಸಾರವನ್ನು ಬರೆದು ಅನುಗ್ರಹಿಸಿದ್ದಾರೆ. ಬಹುಶ್ರುತ ವಿದ್ವಾಂಸರಾದ ಪ್ರೊ|| ಕೆ.ಟಿ.ಪಾಂಡುರಂಗಿಯವರು ಸರಳವಾದ ಆಂಗ್ಲಭಾಷೆಯಲ್ಲಿ ಗ್ರಂಥಗಳ ಸಾರವನ್ನು ಸಂಗ್ರಹಿಸಿರುತ್ತಾರೆ. ಇವುಗಳನ್ನು ಆರಂಭದಲ್ಲಿ ನೀಡಿರುವುದರಿಂದ ವಾಚಕರಿಗೆ ಅನುಕೂಲವಾಗಲಿದೆ.

ಈ ಯೋಜನೆಯ ಕೊನೆಯ ಪುಸ್ತಕವಾಗಿ ಈ ಅನುವ್ಯಾಖ್ಯಾನದ 3ನೇ ಭಾಗ (3ನೇ ಹಾಗೂ 4ನೇ ಅಧ್ಯಾಯಗಳು) ಪ್ರಕಟವಾಗುತ್ತಿದೆ. ಇಲ್ಲಿಗೆ ಬೃಹತ್ ಯೋಜನೆಯೊಂದು ಸಾಕಾರಗೊಂಡಿದೆ. ಇಂದು ಜಿಜ್ಞಾಸುಗಳು ಸಮಗ್ರ ಸರ್ವಮೂಲ ಕನ್ನಡ ಅನುವಾದದ ಎಲ್ಲಾ ಸಂಪುಟಗಳನ್ನು ಒಟ್ಟಿಗೆ ಪಡೆಯಲು ಅವಕಾಶವಾಗಿದೆ. ಈ ಸಂದರ್ಭದಲ್ಲಿ , ಈ ಯೋಜನೆಯಲ್ಲಿ ಸಹಕರಿಸಿದ ಎಲ್ಲರಿಗೂ ಧನ್ಯವಾದಗಳನ್ನು ಅರ್ಪಿಸುತ್ತೇವೆ. ಪ್ರತಿಯೊಂದು ಹಂತದಲ್ಲಿಯೂ ಅನುಗ್ರಹ ನೀಡಿದ ಪರಮಪೂಜ್ಯ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರಿಗೆ ನಮ್ಮ ಅನಂತ ಪ್ರಣಾಮಗಳನ್ನು ಸಲ್ಲಿಸುತ್ತೇವೆ.

ಸೂತ್ರಪ್ರಸ್ಥಾನದ ಮೊದಲಗ್ರಂಥವಾಗಿ ಬ್ರಹ್ಮಸೂತ್ರಭಾಷ್ಯದ ಎಲ್ಲಾ

ಅಧ್ಯಾಯಗಳ ಕನ್ನಡಾನುವಾದ 2017ರಲ್ಲೇ ಬಿಡುಗಡೆಯಾಗಿದೆ. ಈ ಮಧ್ಯೆ ಭಾರತ ಹಾಗೂ ಭಾಗವತದ ತಾತ್ಪರ್ಯ ನಿರ್ಣಯಗಳು ಪೂರ್ಣಗೊಂಡವು. ಮತ್ತೆ ಸೂತ್ರಪ್ರಸ್ಥಾನದ ಕಾರ್ಯ ಚುರುಕುಗೊಂಡು ಅನುವ್ಯಾಖ್ಯಾನದ ಮೊದಲನೇಯ ಹಾಗೂ ಎರಡನೇಯ ಅಧ್ಯಾಯಗಳು ಈಗಾಗಲೇ ಮುದ್ರಣಗೊಂಡಿದ್ದು ಇದೀಗ ಮೂರನೇ ಹಾಗೂ ನಾಲ್ಕನೇಯ ಅಧ್ಯಾಯಗಳು ಪೂರ್ತಿಯಾಗಿ ಈ ಪುಸ್ತಕದಲ್ಲಿ ಅನುವಾದಗೊಂಡಿದೆ.

ಅನುವ್ಯಾಖ್ಯಾನವು ಸುಲಭಗ್ರಾಹ್ಯವಾದುದಲ್ಲ. ಶ್ರೀ ತ್ರಿವಿಕ್ರಮಪಂಡಿತರ ಪ್ರಾರ್ಥನೆಯ ಮೇರೆಗೆ ಆಚಾರ್ಯರು ಈ ಗ್ರಂಥವನ್ನು ರಚಿಸಿ ಕೊಟ್ಟಿದ್ದಾರೆ. ಇಲ್ಲಿ ಜಟಿಲವಾದ ಸೈದ್ಧಾಂತಿಕ ವಿಷಯಗಳ ನಿರೂಪಣೆಯಿದೆ. ಪರಮತ ವಿಮರ್ಶೆ ಯಿದೆ. ಬ್ರಹ್ಮಸೂತ್ರಕ್ಕೆ ಶ್ರೀವೇದವ್ಯಾಸ ಸಮ್ಮತವಾದ ಅರ್ಥ ಇದೇ ಆಗಬೇಕೆಂಬ ಯುಕ್ತಿಯುಕ್ತ ಪ್ರತಿಪಾದನೆಯಿದೆ. ಅದರ ಉಪಪಾದನೆಗಾಗಿ ನ್ಯಾಯ-ತರ್ಕ-ಅರ್ಥಾಪತ್ತಿಗಳನ್ನು ಹೇರಳವಾಗಿ ಬಳಸಿಕೊಳ್ಳಲಾಗಿದೆ. ಹಾಗಾಗಿ ಇದರ ಕನ್ನಡ ಅನುವಾದ ಸುಲಭವಲ್ಲ.

ವಿದ್ವಾಂಸರಾದ ಎ.ಹರಿದಾಸಭಟ್ಟರು ಕ್ಲಿಷ್ಟಗ್ರಂಥವನ್ನೂ ಸುಲಭವಾಗಿಸಿ ದ್ದಾರೆ. ಶ್ಲೋಕ-ಶ್ಲೋಕಗಳಿಗೂ ವಿಸ್ತಾರವಾದ ವಿವರಣೆಯನ್ನು ನೀಡುತ್ತಾ ನ್ಯಾಯಸುಧೆಯಲ್ಲಿ ಮೂಲಾನುಸಂಧಾನಕ್ಕೆ ಅಪೇಕ್ಷಿತವಾದುದನ್ನಷ್ಟೇ ತೆಗೆದು ಕೊಂಡು ಸಾರಗ್ರಾಹಿಯಾಗಿ ಅನುವಾದಿಸಿ ಜಿಜ್ಞಾಸುವೃಂದಕ್ಕೆ ಉಪಕಾರ ಮಾಡಿದ್ದಾರೆ.

ಕೇವಲ ಮೂಲದ ಅನುವಾದವನ್ನಷ್ಟೇ ಮಾಡಿದರೆ ಏನೂ ಅರ್ಥವಾಗ ಲಾರದು. ಇಲ್ಲಿಯ ವಿವರಣೆ ಅತ್ಯವಶ್ಯ. ನ್ಯಾಯಸುಧೆಯಿಂದಲ್ಲದೆ ಸೂತ್ರ ಭಾಷ್ಯವೇ ಮೊದಲಾದ ಸರ್ವಮೂಲಗಳಿಂದಲೂ ಇತರ ಟಿಪ್ಪಣಿಗಳಿಂದಲೂ ವಿಷಯವನ್ನು ಸಂಗ್ರಹಿಸಿ ಒತ್ತಟ್ಟಿಗಿಟ್ಟು ಅನುವ್ಯಾಖ್ಯಾನದ ಮೂಲದಲ್ಲಿ ಸಂಶಯವುಳಿಯದಂತೆ ವಿವರಣೆ ನೀಡಿರುವುದು ಈ ಗ್ರಂಥದ ವಿಶೇಷ. ಅನುವಾದಿಸಿದ ವಿದ್ವಾನ್ ಎ.ಹರಿದಾಸಭಟ್ಟರಿಗೆ ಕೃತಜ್ಞತೆಗಳು.

ಪರಮಪೂಜ್ಯ ಶ್ರೀ ವಿಶ್ವೇಶತೀರ್ಥಶ್ರೀಪಾದರು ನ್ಯಾಯಸುಧಾಸಾರವನ್ನು ಕನ್ನಡದಲ್ಲಿ ರಚಿಸಿದ್ದಾರೆ. ಸಾಮಾನ್ಯಜಿಜ್ಞಾಸುವಿಗೂ ಸೈದ್ಧಾಂತಿಕ ರಹಸ್ಯಗಳನ್ನು ಸುಲಭವಾಗಿ ತಿಳಿಸಿಕೊಡುವ ಭಾಷೆ ಇದರಲ್ಲಿದೆ. ವಾಚಕರು ಮೊದಲು ಶ್ರೀಮನ್ನ್ಯಾಯಸುಧಾಸಾರವನ್ನು ಓದಿಕೊಳ್ಳುವುದರಿಂದ ಅನುವ್ಯಾಖ್ಯಾನ

ಗ್ರಂಥಕ್ಕೆ ಪ್ರವೇಶಿಸುವುದು ಸುಲಭವಾಗುತ್ತದೆ. ಅದಕ್ಕಾಗಿ ಈ ಹೊತ್ತಿಗೆಯ ಆರಂಭದಲ್ಲಿ ಈ ಭಾಗಕ್ಕೆ ಸಂಬಂಧಿಸಿದ ಸುಧಾಸಾರವನ್ನು ಮುದ್ರಿಸಲಾಗಿದೆ. ಸುಧಾಸಾರವನ್ನು ಅನುಗ್ರಹಿಸಿದ ಶ್ರೀಪಾದರಿಗೆ ಭಕ್ತಿಪೂರ್ವಕ ಪ್ರಣಾಮಗಳು.

ಹಿಂದೆ ಪ್ರಕಟಣೆಗೊಂಡ ಎಲ್ಲಾ ಸರ್ವಮೂಲಗ್ರಂಥಗಳ ಮುದ್ರಣಕ್ಕೆ ಅತ್ಯಂತ ಶ್ರದ್ಧೆಯಿಂದ ಹಂತ ಹಂತ ಸೂಚನೆ ಸಲಹೆಗಳನ್ನು ನೀಡಿ ಉಪಕರಿಸಿದ ಮಂಡಲದ ಅಧ್ಯಕ್ಷರಾಗಿ, ಮೂವತ್ತು ವರ್ಷಗಳ ಕಾಲ ಮಂಡಲಿಗೆ ನಿರಂತರ ಸೇವೆಯನ್ನು ನೀಡಿದ್ದ ಶ್ರೀ ಕೆ. ವಿಷ್ಣುಮೂರ್ತಿ ಎರ್ಕಾಡಿತ್ತಾಯರನ್ನು ಈ ಸಂದರ್ಭದಲ್ಲಿ ಸ್ಮರಿಸುವುದು ಅತ್ಯವಶ್ಯಕವಾಗಿದೆ.

ಈ ಸರ್ವಮೂಲ ಗ್ರಂಥಗಳ ಪ್ರಕಟಣೆಯ ಸಂಪೂರ್ಣ ಜವಾಬ್ದಾರಿಯನ್ನು ವಹಿಸಿ ಮುದ್ರಣ ಮಾಡುವವರಿಗೂ, ಅನುವಾದಕರಿಗೂ ಹಾಗೂ ಇತರೆ ಕಾರ್ಯಕರ್ತರ ನಿರಂತರ ಸಂಪರ್ಕಕೊಂಡಿಯಂತೆ ತಮ್ಮನ್ನು ತಾವು ಅರ್ಪಿಸಿ, ಶ್ರೀ ಮಧ್ವಾಚಾರ್ಯರ ಸೇವೆಯಲ್ಲಿ ಸಿಂಹಪಾಲು ವಹಿಸಿದ ಮಂಡಲದ ಪ್ರಧಾನ ಕಾರ್ಯದರ್ಶಿಗಳಾದ ಡಾ. ಹೆಚ್.ಎನ್.ನಾರಾಯಣ ರಾವ್ ಹಾಗೂ ಈ ಕಾರ್ಯದಲ್ಲಿ ಇವರಿಗೆ ಸಹಕರಿಸಿದ ಕಾರ್ಯದರ್ಶಿ ಶ್ರೀ ಶ್ರೀಪಾದ ಸಿಂಗನಮಲ್ಲಿ ಹಾಗೂ ಇವರಿಗೆ ಕೃತಜ್ಞತೆಗಳು ಮತ್ತು ಈ ಮುದ್ರಣಕಾರ್ಯದಲ್ಲಿ ಪ್ರತಿ ಹಂತದಲ್ಲಿ ನೆರವು ನೀಡಿರುವ ಮಾಧ್ವ ಮಂಡಲದ ಎಲ್ಲಾ ಸಿಬ್ಬಂದಿ ವರ್ಗಕ್ಕೂ ಅಭಿನಂದನೆಗಳು. ಸಂಪುಟದ ಅಕ್ಷರಜೋಡಣೆಯನ್ನು ಮಾಡಿರುವ ಶ್ರೀ ಆರ್.ಎಸ್.ಪ್ರೇಮಕುಮಾರ್, ಅಂದವಾಗಿ ಸಕಾಲಕ್ಕೆ ಮುದ್ರಣವನ್ನು ಕೈಕೊಂಡ ಓಂಕಾರ ಆಫ್‌ಸೆಟ್ ಪ್ರಿಂಟರ್ಸ್‌ನ ಶ್ರೀ ವೆಂಕಟೇಶಬಾಬು ಅವರಿಗೂ ಅಭಿನಂದನೆಗಳು.

ದಿನಾಂಕ 10-12-2019 **ಸಂಪಾದಕ ಮಂಡಳಿ**

# ಒಮ್ಮೆ ಕಣ್ಣಾಡಿಸಿ

ಇದು ಬ್ರಹ್ಮಸೂತ್ರಾನುವ್ಯಾಖ್ಯಾನದ ಮೂರು ಮತ್ತು ನಾಲ್ಕನೆಯ ಅಧ್ಯಾಯಗಳ ಕನ್ನಡಾನುವಾದದ ಕೃತಿ. ಸರ್ವಮೂಲ ಕನ್ನಡಾನುವಾದದ ಕೊನೆಯ ಸಂಪುಟ. ಇಲ್ಲಿ ಕೊಟ್ಟಿರುವ ಸಂಖ್ಯೆಯಂತೆ, ಸುಮಾರು 915 ಶ್ಲೋಕಗಳು ಈ ಎರಡು ಅಧ್ಯಾಯಗಳಲ್ಲಿ ಇವೆ. ಮೂರನೆಯ ಅಧ್ಯಾಯದ ಮೊದಲಪಾದ ಮತ್ತು ನಾಲ್ಕನೆಯ ಅಧ್ಯಾಯದ ಮೂರನೆಯ ಪಾದಗಳಲ್ಲಿ ಕೇವಲ ನಾಲ್ಕೇ ಶ್ಲೋಕಗಳಿವೆ. ಇವೆರಡು ಕ್ರಮವಾಗಿ ವೈರಾಗ್ಯಪಾದ ಮತ್ತು ಮಾರ್ಗಪಾದಗಳು. ಮೂರನೆಯ ಅಧ್ಯಾಯದ ನಾಲ್ಕನೆಯ ಪಾದ ಅಂದರೆ ಜ್ಞಾನಪಾದದಲ್ಲಿ ಇನ್ನೂರ ಎಪ್ಪತ್ತು ಶ್ಲೋಕಗಳಿದ್ದರೆ ಇನ್ನೂರ ಎರಡು ಶ್ಲೋಕಗಳ ಪಾದ ಉಪಾಸನಾಪಾದ. ಭಕ್ತಿಪಾದದಲ್ಲಿ ಬರುವ ಎರಡನೆಯ ಅಧಿಕರಣ ಸಂಧ್ಯಾಧಿಕರಣ. ಅಲ್ಲಿ ಅನುಮಾನದೋಷಗಳ ಬಗ್ಗೆ ತಾರ್ಕಿಕರ ಅಭಿಪ್ರಾಯ ವಿಮರ್ಶೆಗೆ ಹೆಚ್ಚು ಪ್ರಾಶಸ್ತ್ಯವನ್ನು ನೀಡಲಾಗಿದೆ. ತಾರ್ಕಿಕರು ಅಪ್ರಮಾಣವೆಂದು ಪರಿಗಣಿಸಿರುವ 'ತರ್ಕ'ವನ್ನು ಪ್ರಮಾಣವೆಂದು ಸಾಧಿಸ ಲಾಗಿದೆ. ದೇಹಾತ್ಮ ಭ್ರಮೆಯು ದುಃಖಕ್ಕೆ ಕಾರಣ ಎಂದು ಇತರ ಎಲ್ಲ ದರ್ಶನಕಾರರು ಹೇಳಿದ್ದರೆ ಮೃಗಪಕ್ಷಿಗಳಿಗೂ ದೇಹಾತ್ಮಭ್ರಮ ಇಲ್ಲ, ಎಂದು ಸಮರ್ಥಿಸಿರುವುದು ಇಲ್ಲಿರುವ ವಿಶೇಷಾಂಶ. ಇದರಂತೆ ಸ್ವಾಪ್ನವಸ್ತುಗಳು ಸತ್ಯವಾಗಿವೆ ಎನ್ನುವ ಸಮರ್ಥನೆಯೂ ಮತ್ತೊಂದು ವಿಶೇಷ.

**ದೇಹಾತ್ಮಭೇದಜ್ಞಾನ—** ಪ್ರತ್ಯಕ್ಷ–ಅನುಮಾನ–ಆಗಮ ಈ ಮೂರು ಪ್ರಮಾಣಗಳಲ್ಲಿ ಪ್ರತ್ಯಕ್ಷವೇ ಪ್ರಬಲ. ಪರೀಕ್ಷಿತ ಪ್ರತ್ಯಕ್ಷವನ್ನು ಅನುಮಾನ–ಆಗಮಗಳೂ ಬಾಧಿಸಲಾರವು. ಆಗಮವೂ ಪ್ರತ್ಯಕ್ಷಕ್ಕೆ ವಿರುದ್ಧವಾದರೆ ಅದಕ್ಕೆ ಅರ್ಥಾಂತರವನ್ನು ಕಲ್ಪಿಸಿ ಪ್ರತ್ಯಕ್ಷವಿರೋಧವನ್ನು ಪರಿಹಾರಮಾಡಬೇಕು.

**ಕ್ವ ಚ ಪ್ರತ್ಯಕ್ಷತಃ ಪ್ರಾಪ್ತಂ ಅನುಮಾಗಮಬಾಧಿತಂ ॥** (ಅನು.3.2.61)

ಪ್ರತ್ಯಕ್ಷ ಪ್ರಮಿತವಾದ ವಿಷಯವನ್ನು ಅನುಮಾನ–ಆಗಮಗಳು ನಿರಾಕರಿಸಿರುವುದಕ್ಕೆ ಉದಾಹರಣೆಯೇ ಇಲ್ಲ.

ಈ ವಿಷಯಕ್ಕೆ ಸಂಬಂಧಿಸಿದಂತೆ ದೇಹಾತ್ಮ–ಅಭೇದ ಭ್ರಮೆಯ ಪ್ರಸ್ತಾವ ಅನುವ್ಯಾಖ್ಯಾನದಲ್ಲಿ ಬಂದಿದೆ. ಎಲ್ಲರಿಗೂ 'ನಾನು ಬಿಳಿ' ಎಂಬ ಜ್ಞಾನ ಇದೆ. ನಾನು ಎಂದರೆ ಆತ್ಮ. ಅವನು ಬಿಳಿಯೂ ಅಲ್ಲ, ಕಪ್ಪೂ ಅಲ್ಲ. ಬಿಳಿ, ಕಪ್ಪು ದೇಹ. ಅಂತಹ ದೇಹವೇ ನಾನು, ಎನ್ನುವ ಅಭೇದಭ್ರಮೆ ಎಲ್ಲರಿಗೂ ಇದೆ. ಅದು ಪ್ರತ್ಯಕ್ಷಭ್ರಮೆ. ಈ ಭ್ರಮೆ 'ದೇಹವೇ ಆತ್ಮನಲ್ಲ' ಎನ್ನುವ ಆಗಮದಿಂದಲೇ ನೀಗಬೇಕು. ಹೀಗೆ, ಪ್ರತ್ಯಕ್ಷವೂ ಆಗಮಬಾಧ್ಯ ವಾಗುತ್ತದೆ. ಈ ನಿದರ್ಶನ ಇರುವಾಗ ನಿದರ್ಶನವೇ ಇಲ್ಲ, ಎನ್ನುವುದು ಹೇಗೆ?

ನಮಗೆ 'ಅಹಂ ಗೌರಃ–ನಾನು ಬಿಳಿ' ಎಂಬ ಅನುಭವವೂ ಇದೆ, 'ಮಮ ದೇಹಃ' ಎನ್ನುವ ಅನುಭವವೂ ಇದೆ. ಮೊದಲ ಅನುಭವ ದೇಹಾತ್ಮರಿಗೆ ಅಭೇದವನ್ನು ಹೇಳಿದರೆ ಎರಡನೆಯ ಅನುಭವ ಅವೆರಡಕ್ಕೆ ಭೇದವನ್ನು ತಿಳಿಸುತ್ತದೆ. ಇತರ ದಾರ್ಶನಿಕರು ಅಭೇದಪ್ರತ್ಯಕ್ಷಕ್ಕೆ ಪ್ರಾಧಾನ್ಯ ವನ್ನು ಕೊಟ್ಟು 'ನನ್ನ ದೇಹ' ಎಂಬ ವ್ಯವಹಾರ 'ಮನೆಯ ಕಂಬ' ಎಂಬಂತೆ ಗೌಣ ಎನ್ನುತ್ತಾರೆ. ಕಂಬವು ಮನೆಯ ಒಂದು ಭಾಗವಾಗಿ ಮನೆಯಲ್ಲೇ ಸೇರಿದ್ದರೂ ಅದನ್ನು ಪ್ರತ್ಯೇಕಗೊಳಿಸಿ 'ಮನೆಯ ಕಂಬ' ಹೇಳಲಾಗುತ್ತದೆ. ಅದರಂತೆ 'ನಾನು' ಎಂದರೆ ದೇಹಾತ್ಮ ಸಂಘಾತ. ಅದರ ಒಂದು ಘಟಕ ದೇಹ. ಅದನ್ನು ಪ್ರತ್ಯೇಕಗೊಳಿಸಿ 'ನನ್ನ ದೇಹ' ಎನ್ನಲಾಗುತ್ತದೆ. ಇದು ಎಲ್ಲ ದಾರ್ಶನಿಕರ ವಾದ.

ಆದರೆ, ಆಚಾರ್ಯರು 'ಮಮ ದೇಹಃ' ಎಂಬ ಅನುಭವಕ್ಕೆ ಪ್ರಾಧಾನ್ಯವನ್ನು ನೀಡಿ 'ಅಹಂ ಗೌರಃ' ಎಂಬ ವ್ಯವಹಾರ ಗೌಣ, ಎಂದಿದ್ದಾರೆ. ಕಾದಕಬ್ಬಿಣದಲ್ಲಿ ಎಲ್ಲೆಡೆ ಬೆಂಕಿಯು ವ್ಯಾಪಿಸಿರುವುದರಿಂದ 'ಕಬ್ಬಿಣ ಸುಡುತ್ತದೆ' ಎನ್ನುತ್ತೇವೆ. ಸುಡುವ ಗುಣ ಬೆಂಕಿಯದು, ಎಂದು ತಿಳಿದವರೂ ಹೇಳುವುದು ಹೀಗೆಯೇ. ಇಂತಹ ಅನೇಕ ವ್ಯವಹಾರಗಳು ನಮ್ಮಲ್ಲಿವೆ.

ಅವುಗಳಂತೆ 'ಅಹಂ ಗೌರಃ' ಎಂಬ ವ್ಯವಹಾರ. 'ವ್ಯಾಪ್ತತ್ವಾದಾತ್ಮನೋ ದೇಹೇ' ಆತ್ಮನು ದೇಹದಲ್ಲಿ ವ್ಯಾಪ್ತನಾದುದರಿಂದ ಹೀಗೆ ವ್ಯವಹಾರ ಮಾಡಲಾಗುತ್ತದೆ.

ಅಥವಾ ಹೀಗೂ ಹೇಳಬಹುದು. ಅವಳಿ ಮಕ್ಕಳು ಉಳಿದವರಿಗೆ ಒಂದೇ ರೀತಿಯಾಗಿ ಕಂಡರೂ ತಾಯಿಗೆ ಅವರಲ್ಲಿ ಸ್ಪಷ್ಟವಾದ ಭೇದವು ತಿಳಿದಿರುತ್ತದೆ. ಆದರೆ, ತಾಯಿಗೆ ಅದನ್ನು ತಿಳಿಸುವ ಶಬ್ದಗಳಿಲ್ಲ. ಅದರಂತೆ, ದೇಹ ಬೇರೆ, ನಾನು ಬೇರೆ, ಎಂದು ನಮಗೆ ತಿಳಿದಿದ್ದರೂ ಅದನ್ನು ತಿಳಿಸಲಾಗದೆ ಅಭೇದ ವ್ಯವಹಾರ ಮಾಡುತ್ತೇವೆ–ವ್ಯವಹಾರೇಷು ಅಪಾಟವಾತ್.

ಅಥವಾ, ನಮಗೆ ದೇಹಾತ್ಮಭೇದಜ್ಞಾನವಿದ್ದರೂ ಸ್ಫುಟವಾದ ಭೇದಜ್ಞಾನ ವಿಲ್ಲ. ನಮ್ಮ ಮುಂದಿರುವ ಆನೆ–ಕುದುರೆಗಳು ಸ್ಫಟವಾಗಿ 'ಅದು ಇದಲ್ಲ' ಎಂದು ತಿಳಿಯುವಂತೆ ದೇಹ ಮತ್ತು ಆತ್ಮರಲ್ಲಿ ಅಂತರ ಅಜ್ಞಾನಿಗಳಿಗೆ ಸ್ಫುಟವಾಗಿ ತಿಳಿಯುವುದಿಲ್ಲ. ಅದಕ್ಕಾಗಿಯೇ ಪುರಾಣಗಳಲ್ಲಿ ಅವೆರಡಕ್ಕೆ ಭೇದವನ್ನು ಹೇಳಲಾಗಿದೆ. ಅದನ್ನು ಹೇಳಿರುವುದು ಭ್ರಾಂತಿಯ ಪರಿಹಾರಕ್ಕಾಗಿ ಅಲ್ಲ, ಭೇದವನ್ನು ಸ್ಪಷ್ಟಗೊಳಿಸುವುದಕ್ಕಾಗಿ. ಜ್ಞಾನಿಗಳಿಗೆ ದೇಹಾತ್ಮ ವಿವೇಕ ಸ್ಫುಟವಾಗಿ ಇರುತ್ತದೆ—'ನೈಷಾಂ ಮಮಾಹಮಿತಿ ಧೀಃ ಶ್ವಶೃಗಾಲಭಕ್ಷ್ಯೇ'.

ಆದ್ದರಿಂದ 'ದೇಹವೇ ನಾನು' ಎನ್ನುವ ಭ್ರಮೆ ಯಾರಿಗೂ ಇಲ್ಲ. ಮನುಷ್ಯರಿಗೆ ಮಾತ್ರವಲ್ಲ, ಪಶು–ಪಕ್ಷಿಗಳಿಗೂ ಇಲ್ಲ. ಆಗತಾನೇ ಹುಟ್ಟಿದ ಪಶುಗಳು, ಪಕ್ಷಿಗಳು ತಾಯಿಯ ಹಾಲನ್ನು ಕುಡಿಯುತ್ತವೆ. ಅದು ತಮಗೆ ಬೇಕಾದುದು, ಎನ್ನುವ ಜ್ಞಾನವು ಅವುಗಳಿಗೆ ಇಲ್ಲದಿದ್ದಲ್ಲಿ ಅವು ಆ ಪ್ರಯತ್ನವನ್ನೇ ಮಾಡಲಾರವು. ಆ ಜ್ಞಾನ ಈ ಜನ್ಮದಲ್ಲಿ ಇನ್ನೂ ಬಂದಿಲ್ಲ. ಅದು ಹಿಂದಿನ ಜನ್ಮದ ಸ್ಮರಣೆ. ಈ ಸ್ಮರಣೆ ಬರುವಾಗ ಜನ್ಮಾಂತರ ದೇಹದ ಸ್ಮರಣೆಯೂ ಬರುತ್ತದೆ. ಇದನ್ನು ಶ್ರೀಜಯತೀರ್ಥರು ನ್ಯಾಯಸುಧಾದದಲ್ಲಿ ಹೀಗೆ ಹೇಳಿದ್ದಾರೆ— 'ಪ್ರಾಗ್‌ಭವೀಯೋಪದೇಶಸ್ಯ, ಅನ್ವಯಾದೇಶ್ಚ ಸ್ಮರಣೇ ಪೂರ್ವದೇಹ ಸ್ಮರಣಮಪಿ ಅಂಗೀಕರ್ತವ್ಯಂ, ಸಮಾನಯೋಗಕ್ಷೇಮತ್ವಾತ್'

ಹೀಗೆ, ಹಿಂದಿನದೇಹದ ಸ್ಮರಣೆ ಇದ್ದಮೇಲೆ 'ಆ ದೇಹ ಹೋದರೂ ನಾನಿದ್ದೇನೆ' ಎನ್ನುವ ಜ್ಞಾನ ಎಲ್ಲರಿಗೂ ಇರಲೇಬೇಕು. ಅಂದಮೇಲೆ 'ದೇಹವೇ ನಾನು' ಎನ್ನುವ ಭ್ರಮೆ ಬರಲು ಅವಕಾಶವೇ ಇಲ್ಲ. ನಾಸ್ತಿಕರಿಗೂ ದೇಹಾತ್ಮರಿಗೆ ಭೇದಜ್ಞಾನವಿದ್ದರೂ ಅನುಮಾನ ಅಥವಾ ಮತ್ತೊಬ್ಬರ ಉಪದೇಶದಿಂದ ಅಭೇದಜ್ಞಾನವು ಇರಬಹುದು. ಅದು ಪರೋಕ್ಷಜ್ಞಾನ.

ಆದ್ದರಿಂದ ದೇಹಾತ್ಮ ಭೇದಜ್ಞಾನ ಸಂಸಾರಕ್ಕೆ ಕಾರಣವಲ್ಲ, ಭಿನ್ನವಾದ ದೇಹಾದಿಗಳಲ್ಲಿ ಆತ್ಮೀಯತ್ವಾಭಿಮಾನಾತಿರೇಕವೇ ದುಃಖಕ್ಕೆ ಕಾರಣ ಎಂದು ಆಚಾರ್ಯರ ಸಿದ್ಧಾಂತ.

**ಸ್ವಾಪ್ನವಸ್ತುಗಳು ಸತ್ಯವಾಗಿವೆ—** ಮೂರನೇ ಅಧ್ಯಾಯದ ಎರಡನೆಯ ಪಾದ ಭಕ್ತಿಪಾದ. ಭಕ್ತಿಯ ಉದ್ದೇಶದಿಂದ ಭಗವಂತನ ಮಹಾತ್ಮೆಯನ್ನು ಈ ಪಾದದಲ್ಲಿ ಹೇಳಲಾಗಿದೆ. ನಾವು ಪ್ರತಿದಿನ ಮೂರು ಅವಸ್ಥೆಗೆ ಒಳಗಾಗುತ್ತೇವೆ. ಎಚ್ಚರ ಸ್ವಪ್ನ ಮತ್ತು ನಿದ್ದೆ. ಎಚ್ಚರದಲ್ಲಿ ಮನಸ್ಸೂ ಸೇರಿದಂತೆ ಬಾಹ್ಯ ಪಂಚೇಂದ್ರಿಯಗಳು ಸಕ್ರಿಯವಾಗಿರುತ್ತವೆ. ಸ್ವಪ್ನಾವಸ್ಥೆಯಲ್ಲಿ ಮನಸ್ಸು ಮಾತ್ರ ಜಾಗೃತವಾಗಿರುತ್ತದೆ. ಅದೂ ನಿಷ್ಕ್ರಿಯವಾದಾಗ ನಿದ್ದೆ. ಈ ಮೂರು ಅವಸ್ಥೆಗಳಲ್ಲೂ ಭಗವಂತ ಕ್ರಿಯಾಶೀಲನಾಗಿರುತ್ತಾನೆ. ನಮ್ಮ ಪುಣ್ಯಪಾಪ ಗಳಿಗೆ ಅನುಗುಣವಾಗಿ ಜ್ಞಾನ, ಇಚ್ಛೆ, ಪ್ರಯತ್ನಗಳನ್ನು ಮಾಡಿಸಿ ಸುಖವನ್ನೋ ದುಃಖವನ್ನೋ ಅನುಭವಿಸುವಂತೆ ಮಾಡುತ್ತಾನೆ. ನಾವು ಮಲಗಿದರೂ ಅವನು ಮಲಗುವು ದಿಲ್ಲ.

**''ಯ ಏಷ ಸುಪ್ತೇಷು ಜಾಗರ್ತಿ ॥''**

ಭಗವಂತ ಈ ಮೂರೂ ಅವಸ್ಥೆಗಳಲ್ಲೂ ಪ್ರೇರಕನಾಗಿದ್ದರೂ ಸೂತ್ರಕಾರರು ಸ್ವಪ್ನಾವಸ್ಥಾನಿಯಾಮಕತ್ವವನ್ನು ಮೊದಲು ಹೇಳಿದ್ದಾರೆ. ಏಕೆಂದರೆ, ಆ ಅವಸ್ಥೆಯಲ್ಲಿ ನಾವು ಪೂರ್ಣ ಪರಾಧೀನರು. ಒಳ್ಳೆದೋ ಕೆಟ್ಟದ್ದೋ ಭಗವಂತ ತೋರಿಸಿದ್ದನ್ನು ನಾವು ನೋಡಬೇಕು. ಸ್ವಪ್ನಕಾಲದಲ್ಲಿ ವಿವಿಧ–ವಿಚಿತ್ರವಸ್ತುಗಳನ್ನು ಭಗವಂತ ಸೃಷ್ಟಿಮಾಡಿ, ನಮಗೆ ತೋರಿಸಿ, ಸುಖ–ದುಃಖಗಳನ್ನು ಕೊಡುವ ಮೂಲಕ ಪುಣ್ಯ–ಪಾಪಗಳನ್ನು

ಕರಗಿಸುತ್ತಾನೆ. ಆ ಸ್ವಾಪ್ನವಸ್ತುಗಳೊಳಗೆ ಅನೇಕ ಚೇತನರನ್ನು ಕೂಡಿಸಿ ಅವರ ಕರ್ಮಗಳನ್ನೂ ಕ್ಷಯಮಾಡುತ್ತಾನೆ. ಆದರೆ ಸ್ವಪ್ನದಲ್ಲಿ ನಾವು ಸತ್ಕರ್ಮವನ್ನೇ ಮಾಡಲಿ, ದುಷ್ಕರ್ಮವನ್ನೇ ಮಾಡಲಿ ಅದರಿಂದ ಪುಣ್ಯ-ಪಾಪಗಳ ಲೇಪವಿಲ್ಲ. ಇಂತಹ ಅದ್ಭುತ ಪ್ರಪಂಚವನ್ನು ನಮಗಾಗಿ ನಿರ್ಮಿಸಿ ಯಾವ ಸ್ವಾರ್ಥವೂ ಇಲ್ಲದೆ, ನಮ್ಮ ಪ್ರಾರಬ್ಧಕರ್ಮಗಳನ್ನು ಕ್ಷಯಮಾಡುವ ಪರಮಾತ್ಮ ಎಂತಹ ಕೃಪಾಳು, ಅವನ ಸಾಮರ್ಥ್ಯ ಎಷ್ಟು ಹಿರಿದು. ಹೀಗೆ ಇದನ್ನು ಪರಾಮರ್ಶಿಸಿದಾಗ ದೇವರಲ್ಲಿ ಭಕ್ತಿ ತನ್ನಷ್ಟಕ್ಕೇ ಹೆಚ್ಚುತ್ತದೆ. ಅದಕ್ಕಾಗಿ ಮೊದಲು ಭಗವಂತನ ಈ ಮಹಿಮೆಯನ್ನು ಸೂತ್ರದಲ್ಲಿ ಹೇಳಲಾಗಿದೆ.

ಸ್ವಾಪ್ನವಸ್ತುಗಳಿಗೆ ನಮ್ಮ ಮನಸ್ಸಿನಲ್ಲಿ ಹುದುಗಿರುವ ಸಂಸ್ಕಾರಗಳು ಉಪಾದಾನಕಾರಣಗಳಾದರೆ ಭಗವಂತನ ಇಚ್ಛೆ ನಿಮಿತ್ತಕಾರಣ. ಭಗವಂತ ತನ್ನ ಇಚ್ಛೆಯಂತೆ ಸಂಸ್ಕಾರಗಳನ್ನು ಬಳಸಿ ವಿಚಿತ್ರವಾದ ಸ್ವಾಪ್ನವಸ್ತುಗಳ ಚಿತ್ರಗಳನ್ನು ಬರೆಯುತ್ತಾನೆ. ಈ ಚಿತ್ರಗಳನ್ನು ನಿಜವೆಂದು ಭ್ರಮಿಸಿ ನಾವು ಹೆದರುತ್ತೇವೆ, ಸಂತಸಪಡುತ್ತೇವೆ. ಅದು ವಿಚಿತ್ರವಾದ ಸ್ವಾಪ್ನಲೋಕ. ನಿಜಪ್ರಪಂಚಕ್ಕಿಂತಲೂ ಅದ್ಭುತವಾದುದು. ಅಲ್ಲಿ ಕೆಲವೊಮ್ಮೆ ನಾವು ಆತ್ಮಹತ್ಯೆನ್ನು ಮಾಡಿಕೊಳ್ಳಬಹುದು. ಯಾವುದೋ ಜನ್ಮದಲ್ಲಿ ಮಾಡಿಕೊಂಡ ಇಂತಹ ಘೋರಕೃತ್ಯದ ಸಂಸ್ಕಾರವು ಸುಪ್ತವಾಗಿದ್ದು ಅದರ ಪಡಿಯಚ್ಚು ಈ ದೃಶ್ಯವಾಗಿರಬಹುದು. ಅಥವಾ, ಮತ್ತೊಬ್ಬರು ಹೀಗೆ ಮಾಡಿಕೊಂಡಿದ್ದನ್ನು ನೋಡಿಯೋ ಕೇಳಿಯೋ ಹುಟ್ಟಿದ ಸಂಸ್ಕಾರದಿಂದ ಈ ಚಿತ್ರ ನಮ್ಮ ಮನಸ್ಸಿನಲ್ಲಿ ಮೂಡಬಹುದು. ಅಥವಾ ನಾವು ಇದ್ದೇವೆ, ಆತ್ಮಹತ್ಯೆಯೂ ಮತ್ತೊಬ್ಬರಲ್ಲಿ ನಡೆದಿದೆ. ಆದರೆ, ಅದಕ್ಕೂ ನಮಗೂ ಸಂಬಂಧ ಮಾತ್ರ ಭ್ರಮೆಯಾಗಿರಬಹುದು.

**ದೃಷ್ಟಂ ಸಮಾಧಿಕರಣಂ ದೃಶ್ಯತೇಽತ್ರ ಸ ಚ ಭ್ರಮಃ ॥ (3.2.10)**

ಹೀಗೆ ಸ್ವಾಪ್ನವಸ್ತುಗಳು ವಾಸನಾಮಯವಾಗಿದ್ದು ಎಲ್ಲವೂ ಸತ್ಯವಾಗಿದ್ದರೂ ಕೆಲವೊಮ್ಮೆ ಇಂತಹ ಅಸತ್ಯ ಘಟನೆಗಳೂ ಕಾಣಬಹುದು. ಇದು ಅನುವ್ಯಾಖ್ಯಾನ ದಲ್ಲಿ ಹೇಳಿರುವ ವಿಶೇಷಾಂಶ.

**ನಿರ್ಗುಣ ಬ್ರಹ್ಮವಾದ ನಿರಾಸ—** ಬ್ರಹ್ಮ ನಿರ್ಗುಣನಾದರೆ ಬ್ರಹ್ಮಜಿಜ್ಞಾಸೆ ಯನ್ನೇ ಮಾಡಲಾಗದು. ಯುಕ್ತಿಗಳಿಂದ 'ಬ್ರಹ್ಮನು ಇಂತಹವನು' ಎಂದು ನಿರ್ಧರಿಸುವುದೇ ಬ್ರಹ್ಮಜಿಜ್ಞಾಸೆ. ಬ್ರಹ್ಮನಲ್ಲಿ ಗುಣಧರ್ಮಗಳೇ ಇಲ್ಲದಿದ್ದರೆ ಇಂತಹ ನಿರ್ಣಯ ಸಾಧ್ಯವಿಲ್ಲ. ಆದ್ದರಿಂದ ನಿರ್ಗುಣಬ್ರಹ್ಮವಾದವು ಸೂತ್ರಸಮ್ಮತವಲ್ಲ. ಶಾಸ್ತ್ರಸಮ್ಮತವೂ ಅಲ್ಲ. ಬ್ರಹ್ಮನ ಗುಣ-ಧರ್ಮಗಳನ್ನು ಶಾಸ್ತ್ರಗಳಿಂದಲೇ ತಿಳಿಯಬೇಕು. ಶಾಸ್ತ್ರಗಳು ತಾವೇ ಗುಣಧರ್ಮಗಳನ್ನು ತಿಳಿಸಿ ಅವುಗಳನ್ನು ನಿಷೇಧಮಾಡಿದರೆ ತಾವೇ ಭ್ರಾಂತಿಯನ್ನು ಹುಟ್ಟಿಸಿ ನಿರಾಕರಿಸಿದಂತಾಗುತ್ತದೆ. ಇಂತಹ ಕೆಲಸವನ್ನು ಶಾಸ್ತ್ರವು ಮಾಡಲಾರದು.

**ಅಪ್ರಾಪ್ತಾಂ ಭ್ರಾಂತಿಮಾಪಾದ್ಯ ಕಿಂ ವೇದೋ ಮಾನತಾಂ ವ್ರಜೇತ್ ।**
**(3.2.46)**

ಆದ್ದರಿಂದ ಬ್ರಹ್ಮನು ನಿರ್ಗುಣ ಎನ್ನುವುದು ಸೂತ್ರ ಹಾಗೂ ಶಾಸ್ತ್ರಗಳಿಗೆ ಸುಮ್ಮತವಲ್ಲ.

**ಈಶನ ಪ್ರತಿಬಿಂಬ ಜೀವ—** ಜೀವವರ್ಗವು ಈಶನ ಅಂಶ ಹಾಗೂ ಪ್ರತಿಬಿಂಬ. ಈ ಎರಡು ಶಬ್ದಗಳೂ ಲೋಕವ್ಯವಹಾರದಲ್ಲಿ ಇವೆ. 'ಬಟ್ಟೆಯ ಅಂಶ ನೂಲು' 'ಸೂರ್ಯನ ಪ್ರತಿಬಿಂಬ ನೀರಲ್ಲಿ ಕಾಣುತ್ತದೆ' ಎನ್ನಲಾಗುತ್ತದೆ. ನೂಲು ಬಟ್ಟೆಯಲ್ಲಿ ಸೇರಿರುವ ಭಾಗವಾದುದರಿಂದ ಅದಕ್ಕೂ ಬಟ್ಟೆಗೂ ಭೇದಾಭೇದವಿದೆ. ಸೂರ್ಯನ ಪ್ರತಿಬಿಂಬವು ಸೂರ್ಯನಿಗಿಂತ ಅತ್ಯಂತ ಭಿನ್ನವಾದರೂ ಅದು ಮೂಡಬೇಕಾದರೆ ನೀರು ಎಂಬ ಉಪಾಧಿ ಇರಬೇಕು. ಜೀವನು ಈಶನ ಅಂಶನಾದರೂ ನೂಲಿನಂತೆ ಈಶನಿಂದ ಅವನಿಗೆ ಅಭೇದವಿಲ್ಲ. ಅತ್ಯಂತ ಭೇದವಿದೆ. ಆದ್ದರಿಂದ ನೂಲಿನಂತೆ ಜೀವರು ಈಶಾಂಶರಲ್ಲ. 'ಸಮುದ್ರದ ನೀರಿನ ಒಂದಂಶವೂ ಭಾವಿಯಲ್ಲಿ ಇಲ್ಲ' ಎಂದಂತೆ ಇಲ್ಲಿ ಅಂಶ ಶಬ್ದದ ಪ್ರಯೋಗ.

ಅದರಂತೆ ಜೀವನು ಪ್ರತಿಬಿಂಬನಾದರೂ ನೀರಿನಂತೆ ಉಪಾಧಿಯು ಬೇಕಾಗಿಲ್ಲ. ಜೀವ ಪ್ರತಿಬಿಂಬ ಎಂದರೆ ಪ್ರತಿಬಿಂಬ ಸದೃಶ ಎಂದರ್ಥ. ಪ್ರತಿಬಿಂಬವು ಬಿಂಬದಂತೆ ಇರುತ್ತದೆ, ಬಿಂಬಾಧೀನವಾಗಿರುತ್ತದೆ. ಏಕೆಂದರೆ

ನಮ್ಮ ದೇಹದಲ್ಲಿ ಚಲನೆಯಾದರೆ ಮಾತ್ರ ಪ್ರತಿಬಿಂಬದಲ್ಲಿ ಚಲನೆಯಾಗುತ್ತದೆ. ಹೀಗೆ, ಪ್ರತಿಬಿಂಬದಲ್ಲಿ ಎರಡು ಧರ್ಮಗಳು ಇರುತ್ತವೆ. ಅಂತಹ ಧರ್ಮಗಳು ಜೀವರಲ್ಲೂ ಇವೆ. ಜೀವರೂ ಚೇತನರು, ಈಶನೂ ಚೇತನ. ಇಬ್ಬರಲ್ಲೂ ಚೇತನತ್ವವು ಸಮಾನವಾದ ಧರ್ಮ. ಜೀವರೆಲ್ಲರೂ ಈಶನ ಅಧೀನರೂ ಆಗಿದ್ದಾರೆ. ಇದರಿಂದಾಗಿ ಜೀವರು ಪರಮಾತ್ಮನ ಪ್ರತಿಬಿಂಬರೆನಿಸಿದ್ದಾರೆ.

**ಜೀವ ಆಭಾಸ ಉದ್ದಿಷ್ಟಃ ಸದೈವ ಪರಮಾತ್ಮನಃ ।**
**ನ ಜಲಾಯತ್ತಸೂರ್ಯಾದಿಪ್ರತಿಬಿಂಬತ್ವೋಪಮತ್ವತಃ ।**
**ತದಧೀನತ್ವಮೇವೇತಿ ಕಿಂಚಿತ್ ಸಾದೃಶ್ಯಮೇವ ಚ ॥**

(ಅನು.3.1.136)

ನೂಲು ಬಟ್ಟೆಗಳಂತೆ ಅಂಶಾಂಶಿಭಾವ ಇದ್ದಲ್ಲಿ ಜೀವೇಶರಿಗೆ ಅಭೇದ ವಿರಬೇಕಾಗುತ್ತದೆ. ಅಭೇದವಿದ್ದಲ್ಲಿ ಜೀವರ ದುಃಖದ ಸಂವೇದನೆ ಈಶನಿಗೂ ಬರಬೇಕಾಗುತ್ತದೆ. ಇಂದ್ರನ ಅಂಶ ಅರ್ಜುನ. ಅವನಿಗೆ ಬರುವ ಸುಖ-ದುಃಖ ಗಳು ಇಂದ್ರನಿಗೂ ಆಗುತ್ತವೆ. ಜೀವೇಶರಿಗೂ ಹೀಗೆ ಅಂಶಾಂಶಿಭಾವವು ಇದ್ದಲ್ಲಿ ಜೀವರ ದುಃಖದ ಅನುಸಂಧಾನ ಈಶನಿಗೂ ಇರಬೇಕಾಗುತ್ತದೆ. ಆಗ ಅವನಿಗೆ ಈಶತ್ವವೇ ಇಲ್ಲವೆನ್ನಬೇಕಾಗುತ್ತದೆ—

**ಸೇಶತಾನುಪಪನ್ನೈವ ಯದಿ ಜೀವೈಕತಾಸ್ಯ ಹಿ ॥** (3.2.141)

ಅಂಶಾಂಶಿಗಳಲ್ಲಿ ಅಭೇದವಿದ್ದರೂ ಅಂಶದಲ್ಲಿರುವ ಸುಖಾದಿಧರ್ಮಗಳ ಸಂವೇದನೆ ಅಂಶಿಗಿದೆ. ಅಂಶಿಯಲ್ಲಿರುವ ಎಲ್ಲ ಸುಖವೂ ಅಂಶಕ್ಕೆ ಬರುವುದಿಲ್ಲ. ಅಲ್ಲದೆ, ಅವೆರಡರಲ್ಲಿ ಪರಸ್ಪರ ವಿರೋಧವೂ ಬರುವುದಿದೆ. ಅರ್ಜುನ ಖಾಂಡವವನವನ್ನು ಸುಟ್ಟಾಗ ಇಂದ್ರ ಮಳೆ ಸುರಿಸಿ ಅದನ್ನು ವಿರೋಧಿಸಿದ. ಇಂತಹ ವೈಚಿತ್ರ್ಯಗಳನ್ನು ಭಗವಂತನ ಅಂಚಿತ್ಯಶಕ್ತಿಯಿಂದ ಸಮರ್ಥಿಸಬೇಕಾಗು ತ್ತದೆ.

**ಅನುಭೂಯತೇ ವಿಶೇಷಸ್ತು ಕಶ್ಚಿದೀಶಕೃತೋ ಭವೇತ್ ।**
**ಈಶಸ್ಯಾಚಿಂತ್ಯಶಕ್ತಿತ್ವಾತ್ ನಾಶಕ್ಯಂ ಕ್ವಾಪಿ ವಿದ್ಯತೇ ॥** (3-2-140)

ಇದು ಉಪಮಾಧಿಕರಣದಲ್ಲಿ ಬಂದಿರುವ ವಿಶೇಷಾಂಶ.

ಒಟ್ಟಿನಲ್ಲಿ ಈ ಅಧಿಕರಣದ ಸಾರಾಂಶ–ಸಕಲಗುಣಪೂರ್ಣತ್ವ ಸರ್ವದೋಷವಿಹೀನತ್ವ ಇದೇ ಭಗವಂತನ ಸ್ವರೂಪ. ಅವನ ಗುಣ–ರೂಪ ಗಳಲ್ಲಿ ಸ್ವಲ್ಪವೂ ಭೇದ–ವ್ಯತ್ಯಾಸಗಳಿಲ್ಲ—

**ಅತೋಽಶೇಷಗುಣೋನ್ನದ್ಧಂ ನಿರ್ದೋಷಂ ಯಾವದೇವ ಹಿ ।**
**ತಾವದೇವೇಶ್ವರೋ ನಾಮ ತತ್ರ ಭೇದೋಽಪಿ ನ ಕ್ವಚಿತ್ ॥**

(3.2.137)

ಮೂರನೇ ಅಧ್ಯಾಯದ ಮೂರನೇಪಾದ ಉಪಾಸನಾಪಾದ, ಮೊದಲ ಪಾದದಲ್ಲಿ ಹೇಳಲಾದ ಸಾಂಸಾರಿಕ ತೊಂದರೆಗಳನ್ನು ವಿಮರ್ಶಿಸಿ ಪ್ರಪಂಚ ದಲ್ಲಿ ವೈರಾಗ್ಯ ಬಂದರೆ ಎರಡನೇ ಪಾದದಲ್ಲಿ ನಿರೂಪಿಸಲಾದ ಭಗವನ್ಮಾಹಾತ್ಮ್ಯಜ್ಞಾನದಿಂದ ಅವನಲ್ಲಿ ಭಕ್ತಿಯು ದೃಢವಾಗುತ್ತದೆ. ಅದರಿಂದ ನಿಶ್ಚಲವಾದ ಧ್ಯಾನವು ಸಿದ್ಧಿಸುತ್ತದೆ. ಅದರಿಂದ ಭಗವಂತನ ಅಪರೋಕ್ಷ ವಾಗುತ್ತದೆ.

ಈ ಪಾದದ ಆರಂಭದಲ್ಲಿ ಆಚಾರ್ಯರು ಇದುವರೆಗೆ ಹೇಳಿರುವ ವಿಷಯಗಳ ಸಿಂಹಾವಲೋಕನವನ್ನು ಮಾಡಿದ್ದಾರೆ. ಆರಂಭದ ಐದು ಅಧಿಕರಣಗಳ ತಾತ್ಪರ್ಯವನ್ನು ನಿರೂಪಿಸಿ ಅವುಗಳಿಗೆ ಸಾಂಗತ್ಯವನ್ನು ತೋರಿಸಿದ್ದಾರೆ. ಮುಂದೆ ಅಧ್ಯಾಯ ಮತ್ತು ಪಾದಗಳ ತಾತ್ಪರ್ಯವನ್ನು ನಿರೂಪಿಸಿ ಅವುಗಳ ಕ್ರಮವನ್ನು ಸುಸಂಗತಗೊಳಿಸಿದ್ದಾರೆ. ಈ ಭಾಗವನ್ನೊಮ್ಮೆ ನೋಡಿದರೆ ಬ್ರಹ್ಮಸೂತ್ರಗಳ ಮೂರು ಅಧ್ಯಾಯಗಳ ಸ್ಥೂಲ ಪರಿಚಯ ವಾಗುತ್ತದೆ.

**ಶಾಸ್ತ್ರಾಭ್ಯಾಸವೂ ಧ್ಯಾನ—** ಉಪಾಸನಾಪಾದದ ಆರಂಭದಲ್ಲಿ, ಉಪಾಸನೆಯು ಎರಡು ವಿಧ, ಶಾಸ್ತ್ರಾಭ್ಯಾಸ ಮತ್ತು ಧ್ಯಾನರೂಪವಾದುದು ಎನ್ನಲಾಗಿದೆ. ಶಾಸ್ತ್ರಾಭ್ಯಾಸವನ್ನು ಸರ್ವಜ್ಞರಾದ ಗುರುಗಳಿಂದ ಮಾಡಬೇಕು. ಅಂತಹ ಗುರುಗಳು ಸಿಗದಿದ್ದರೆ ಸರ್ವಜ್ಞಕಲ್ಪರಿಂದ ಮಾಡಬೇಕು. ಅಂತಹವರೂ ಇಲ್ಲದಿದ್ದಾಗ ಅವರು ಬರೆದಿರುವ ನಿರ್ಣಯ ಗ್ರಂಥಗಳನ್ನು ಅಧ್ಯಯನ ಮಾಡಿರುವವರಿಂದ ಶ್ರವಣ ಮಾಡಬೇಕು. ಅವರೂ ಇಲ್ಲ

ದಿದ್ದಾಗ— ಸ್ವಯಮೇವ ಸಮಭ್ಯಸೇತ್–ತಾವೇ ಅಧ್ಯಯನ ಮಾಡಬೇಕು. ಅಂತೂ ಶಾಸ್ತ್ರಶ್ರವಣ–ಅಭ್ಯಾಸಗಳನ್ನು ಮಾಡದೆ ಕ್ಷಣವೂ ಸುಮ್ಮನಿರ ಬಾರದು—

**ಶ್ರವಣಾದಿವಿನಾ ನೈವ ಕ್ಷಣಂ ತಿಷ್ಠೇದಪಿ ಕ್ವಚಿತ್॥** (3.3.73)

ಹೀಗೆ ಶಾಸ್ತ್ರಾಭ್ಯಾಸಕ್ಕೆ ಆಚಾರ್ಯರು ಧ್ಯಾನದ ಸ್ಥಾನವನ್ನು ನೀಡಿ ಅದನ್ನು ಎತ್ತರಿಸಿದ್ದಾರೆ. ಆದ್ದರಿಂದ ಬ್ರಹ್ಮಾಪರೋಕ್ಷವನ್ನು ಪಡೆದ ದೇವತೆ ಗಳೂ ಶಾಸ್ತ್ರಶ್ರವಣವನ್ನು ಮಾಡುತ್ತಿರುತ್ತಾರೆ ಎಂದಿರುತ್ತಾರೆ—

**ಅದ್ಯಾಪಿ ತೇನ ದೇವಾದ್ಯಾಃ ಶೃಣ್ವತೇ ಮನ್ವತೇ ಸದಾ ॥** (3.3.69)

**ವಿಷ್ಣುವೈಷ್ಣವಭಕ್ತಿ**— ಮಹಾಭಾರತದ ವ್ಯಾಸರ ವಚನವನ್ನು ಉಲ್ಲೇಖಿಸಿ ಆಚಾರ್ಯರು ಸಾಧಕರು ಬಿಡಬೇಕಾದ ಮೂರು ದೋಷ ಗಳನ್ನು ಉಲ್ಲೇಖಿಸಿದ್ದಾರೆ—

1. ವಿಷಯಸಂಸರ್ಗ, 2.ದೇವರ ಬಗ್ಗೆ ಸಂದೇಹ 3.ಸಕಾಮ ಭಾವನೆ.

**ವಿಷಯೇಷು ಚ ಸಂಸರ್ಗಾತ್ ಶಾಶ್ವತಸ್ಯ ಚ ಸಂಶಯಾತ್ ।**
**ಮನಸಾ ಚಾನ್ಯದಾಕಾಂಕ್ಷಾತ್ ಪರಂ ನ ಪ್ರತಿಪದ್ಯತೇ ॥** (3.3.98)

ಈ ದೌರ್ಬಲ್ಯಗಳನ್ನು ಗೆದ್ದು ವಿಷ್ಣು ಮತ್ತು ವೈಷ್ಣವರಲ್ಲಿ ತಾರತಮ್ಯಾನುಸಾರವಾಗಿ ಭಕ್ತಿಯನ್ನು ಮಾಡಿ ಧ್ಯಾನಾಸಕ್ತನಾಗಬೇಕು.

**ಅತೋ ವಿಷ್ಣೌ ಪರಾ ಭಕ್ತಿಃ ತದ್ಭಕ್ತೇಷು ರಮಾದಿಷು ।**
**ತಾರತಮ್ಯೇನ ಕರ್ತವ್ಯಾ ಪುರುಷಾರ್ಥಮಭೀಪ್ಸತಾ ॥** (3.3.95)

ವಿಷ್ಣುಭಕ್ತನು ಎಂದೂ ವೈಷ್ಣವರನ್ನು ಕಡೆಗಣಿಸುವುದಲ್ಲ, ಅವರಲ್ಲೂ ಆದರ ಭಕ್ತಿಗಳನ್ನು ಮಾಡುತ್ತಾನೆ. ವಿಷ್ಣುಭಕ್ತನಾಗಿದ್ದು ವೈಷ್ಣವರನ್ನು ದ್ವೇಷಿಸು ವವನ ಭಕ್ತಿ ಪ್ರಶ್ನಾರ್ಹವಾಗುತ್ತದೆ.

**ಯೋ ಹಿ ಭಕ್ತಃ ಪ್ರಧಾನೇ ಸ್ಯಾತ್ ತದೀಯೇಷ್ವಪಿ ಭಕ್ತಿಮಾನ್ ।**
**ದೃಶ್ಯತೇಽಸೌ ನಿಯಮತಃ, ವಿಪರೀತೋ ವಿಪರ್ಯಯೇ ॥**

(3.4.95)

ಭಕ್ತಿಯಲ್ಲಿ ಸೇರಿರುವ ಒಂದಂಶ ಪ್ರೀತಿ. ನಮಗೆ ಅತಿಪ್ರಿಯರಾದವರು ನಾವೇ. ನಮ್ಮಲ್ಲಿ ನಮಗಿರುವ ಪ್ರೀತಿಗಿಂತಲೂ ಹೆಚ್ಚಿನ ಪ್ರೀತಿಯನ್ನು ವಿಷ್ಣುಪರ್ಯಂತರಾದ ಸ್ವೋತ್ತಮರಲ್ಲಿ ಮಾಡಬೇಕು. ಅದು ಕ್ರಮೇಣ ವೃದ್ಧಿಯಾಗುತ್ತಾ ಇರಬೇಕು. ಸಮಾನ ಸ್ಕಂಧರಲ್ಲಿ ನಮಗೆ ನಮ್ಮ ಮೇಲೆ ಇರುವಷ್ಟೇ ಸ್ನೇಹವೂ, ಕೆಳಗಿನವರಲ್ಲಿ ದಯೆಯೂ ಇರಬೇಕು. ಹೀಗಿದ್ದರೆ ಮಾತ್ರ ಭಗವಂತನ ಅಪರೋಕ್ಷವಾದೀತು.

**ಸಮೇಷು ಸ್ವಾತ್ಮವತ್ ಸ್ನೇಹಃ ಸತ್ವ್ಸ–ಅನ್ಯತ್ರ ತತೋ ದಯಾ ।**
**ಕಾರ್ಯೈವಮಾಪರೋಕ್ಷ್ಯೇಣ ದೃಶ್ಯತೇ ಕ್ಷಿಪ್ರಮೀಶ್ವರಃ ॥** (3.3.98)

**ನಾಸ್ತಿಕ್ಯವಾದಕ್ಕೆ ಬೆಲೆ ಇಲ್ಲ—** ವಿದ್ಯಾಧಿಕರಣದಲ್ಲಿ (3.3.29) ಮೋಕ್ಷಸಾಧನದ ಬಗ್ಗೆ ದಾರ್ಶನಿಕರಿಗೆ ಇರುವ ಅಭಿಪ್ರಾಯಭೇದವನ್ನು ವಿಮರ್ಶಿಸಲಾಗಿದೆ. ಮೊದಲು, ಮೋಕ್ಷವೇ ಇಲ್ಲ, ಎನ್ನುವ ನಾಸ್ತಿಕದರ್ಶನ ವನ್ನು ವಿಮರ್ಶೆಗೆ ಒಳಪಡಿಸಲಾಗಿದೆ. ನಮಗಿಂತ ಯಾವುದೇ ರೀತಿಯ ಮಹತ್ವ ಇಲ್ಲದ ಬುದ್ಧಿವಂತನೊಬ್ಬ ಬರೀ ತರ್ಕದ ಆಧಾರದಿಂದ ದೇವರಿಲ್ಲ, ಮೋಕ್ಷವಿಲ್ಲ ಎಂದು ಹೇಳಿದರೆ ಅದಕ್ಕೆ ಬೆಲೆಯೇ ಇಲ್ಲ.

**ನೇತಿ ವಕ್ತುಃ ಮಹತ್ವಂ ಚ ನ ಕಥಂಚನ ವಿದ್ಯತೇ ॥** (3.3.118)

ಆದರೆ, ದೇವರಿದ್ದಾರೆ ಎನ್ನುವ ವಸಿಷ್ಠಾದಿ ಋಷಿಗಳು ನಮ್ಮಂತಲ್ಲ. ಅಲೌಕಿಕಶಕ್ತಿ ಸಂಪನ್ನರು. ಅವರಿಗೆ ಯೋಗಸಿದ್ಧಿ ಇದೆ. ಅವರು ಮಾಡಿರುವ ಅಧ್ಯಾತ್ಮಸಾಧನೆಗೆ ಮೆಚ್ಚಿ ದೇವತೆಗಳು ತ್ರಿಕಾಲಜ್ಞಾನವನ್ನು ನೀಡಿದ್ದಾರೆ. ಅಗಸ್ತ್ಯರಂತಹ ತಪಸ್ವಿಗಳು ಸಮುದ್ರವನ್ನೇ ಆಪೋಷನ ಮಾಡಿದ್ದಾರೆ. ಅವರು ಕೊಟ್ಟ ಶಾಪ–ವರಗಳು ಫಲಿಸುತ್ತವೆ. ಹೀಗೆ, ನಮಗಿಲ್ಲದ ಸಾಮರ್ಥ್ಯ ಅವರಿಗಿದೆ. ಆದ್ದರಿಂದ ಅವರ ಮಾತು ನಂಬಿಕೆಗೆ ಅರ್ಹವಾಗಿದೆ. ಅಂತಹವರ ಮಾತನ್ನೂ ತಿರಸ್ಕಾರಮಾಡುವುದಾದರೆ ಇಂತಹ ಯಾವ ಮಹತ್ವವೂ ಇಲ್ಲದ ನಾಸ್ತಿಕವಾದಿಯ ಮಾತನ್ನು ತಿರಸ್ಕರಿಸದೇ ಇರಲು ಏನು ಕಾರಣವಿದೆ?

**ಯದಿ ತೇಽಪಿ ನಿಷಿದ್ಧ್ಯಂತೇ ಕಿಂ ನೋಕ್ತಿಸ್ತೇ ನಿಷಿದ್ಧ್ಯತೇ ॥**
(3.3.123)

ಹೀಗೆ ನಾಸ್ತಿಕರ ವಾದಕ್ಕೆ ಆಧಾರವೇ ಇಲ್ಲವಾದ್ದರಿಂದ ಅದನ್ನು ನಂಬಬಾರದು.

ಅವೈದಿಕವಾದ ಜೈನ-ಬೌದ್ಧ ದರ್ಶನಗಳೂ ಒಬ್ಬ ವ್ಯಕ್ತಿಯನ್ನು ಪೂರ್ಣವಾಗಿ ನಂಬಿ ಅವನ ಮಾತಿನ ಆಧಾರದಲ್ಲಿ ನಿಂತಿವೆ. ಜೈನರು ಅಲೋಕಾಕಾಶದ ಕಡೆಗೆ ದೀರ್ಘಕಾಲ ಮಾಡುವ ಪಯಣವನ್ನು ಮೋಕ್ಷ ವೆನ್ನುತ್ತಾರೆ. ಬೌದ್ಧರು ಆತ್ಮನಾಶವೇ ಮೋಕ್ಷ, ಎನ್ನುತ್ತಾರೆ.

ತಾರ್ಕಿಕರು ದುಃಖನಾಶವೇ ಮೋಕ್ಷ, ಅಲ್ಲಿ ಸುಖವೂ ಇಲ್ಲ ಎನ್ನುತ್ತಾರೆ. ಆದರೆ, ಲೋಕದ ಜನರು ಅಲ್ಪಸುಖಕ್ಕಾಗಿ ಅತಿಯಾದ ಪರಿಶ್ರಮವನ್ನು ಪಡುವುದು ಕಂಡಿದೆ. ಏನೇ ಆಗಲಿ, ಅವರು ಅಲ್ಪಸುಖವನ್ನು ಬಿಡಲು ಸಿದ್ಧರಿಲ್ಲ. ಸಾಮಾನ್ಯ ಜನರು ಹಾಗಿರಲಿ, ನಾರದರಂತಹ ಮಹಾತ್ಮರೂ ಇಂದ್ರ-ಬಲಿರಾಜರ ಯುದ್ಧರಸವನ್ನು ಸವಿಯುವುದಕ್ಕಾಗಿ ಬ್ರಹ್ಮಾಸ್ತ್ರದ ದುಃಖವನ್ನು ಸಹಿಸಿಕೊಂಡ ನಿದರ್ಶನಗಳಿವೆ. ಸಾಮಾನ್ಯಜನರಂತೂ ಅಲ್ಪಸುಖವನ್ನೂ ಬಿಟ್ಟುಕೊಡಲು ಸಿದ್ಧರಿಲ್ಲ. ಸುಖದ ಆಕರ್ಷಣೆ ಇಷ್ಟೊಂದು ಗಾಢವಾಗಿ ಇರುವಾಗ ಮೋಕ್ಷದಲ್ಲಿ ಇಲ್ಲಿರುವ ಸುಖವೆಲ್ಲವೂ ನಾಶವಾಗು ತ್ತದೆ, ಎಂದರೆ ಅಂತಹ ಮೋಕ್ಷವನ್ನು ಸಾಮಾನ್ಯಜನರು ಬಯಸಲಾರರು. ಆದ್ದರಿಂದ ತಾರ್ಕಿಕರು ಹೇಳುವ ಮೋಕ್ಷದಲ್ಲೂ ಆಕರ್ಷಣೆ ಇಲ್ಲ.

**ಅಲ್ಪಾಚ್ಚ ಸುಖಹಾನಾದ್ಧಿ ಬಿಭೇತ್ಯತಿತರಾಂ ಜನಃ ||** (4.2.94)

ಮೋಕ್ಷಸಾಧನದ ಬಗ್ಗೆಯೂ ದಾರ್ಶನಿಕರಲ್ಲಿ ಮತಭೇದವಿದೆ. ಕೆಲವರ ವಾದದಂತೆ ದೇವರ ಅಗತ್ಯವೇ ಇಲ್ಲ. ಈಶಪ್ರಸಾದವು ಮೋಕ್ಷಸಾಧನ ಎನ್ನುವ ಕಣಾದ-ಪತಂಜಲಿ ಮುಂತಾದವರೂ ಅದಕ್ಕೆ ಪ್ರಾಧಾನ್ಯವನ್ನು ಕೊಟ್ಟಿಲ್ಲ. ಮೀಮಾಂಸಕರಂತೂ ದೇವರನ್ನೇ ಅಲ್ಲಗಳೆದು ಕರ್ಮಕ್ಷಯ ದಿಂದಲೇ ಮೋಕ್ಷ ಎನ್ನುತ್ತಾರೆ. ನಿಷಿದ್ಧಕರ್ಮಗಳನ್ನು ಮಾಡದೆ ವಿಹಿತಕರ್ಮ ಗಳನ್ನು ಅನುಷ್ಠಾನ ಮಾಡುವುದರಿಂದ ಹೊಸಪಾಪಗಳ ಸಂಚಯವಾಗುವು ದಿಲ್ಲ. ಇದುವರೆಗೆ ಸಂಚಿತ ಕರ್ಮಗಳನ್ನು ಅನುಭವಿಸಿ ನಾಶಪಡಿಸಿಕೊಳ್ಳ ಬೇಕು. ಅವುಗಳು ಮುಗಿದ ಕೂಡಲೇ ಕರ್ಮವೇ ಇಲ್ಲದಂತಾಗಿ ದೇಹ, ಆದರಿಂದಾಗುವ ಸುಖ-ದುಃಖಾದಿಗಳೇ ಹುಟ್ಟುವುದಿಲ್ಲ ಎನ್ನುತ್ತಾರೆ.

**ಮೋಕ್ಷಾರ್ಥೀ ನ ಪ್ರವರ್ತೇತ ತತ್ರ ಕಾಮ್ಯನಿಷಿದ್ಧಯೋಃ ।**
**ನಿತ್ಯ–ನೈಮಿತ್ತಿಕೇ ಕುರ್ಯಾತ್ ಪ್ರತ್ಯವಾಯಜಿಘಾಂಸಯಾ ॥**

ಆದರೆ, ಇದು ಕೇವಲ ನಿರೀಕ್ಷೆ ಮಾತ್ರ. ನಿತ್ಯಕರ್ಮಗಳನ್ನು ಬಿಟ್ಟರೆ ಹೇಗೆ ಪಾಪವೋ ಅವುಗಳನ್ನು ಮಾಡುತ್ತಲಿದ್ದರೂ ಪಾಪಸಂಚಯವಾಗುತ್ತದೆ. ಅವುಗಳನ್ನು ದೇವತೆಗಳಷ್ಟೇ ಪಾಪವೇ ಬರದಂತೆ ಕಟ್ಟುನಿಟ್ಟಾಗಿ ಮಾಡಬಲ್ಲರು. ಮುನಿಗಳೂ ಅರ್ಧವಷ್ಟೇ ಸರಿಯಾಗಿ ಮಾಡುತ್ತಾರೆ. ಮನುಷ್ಯರು ಶೇಕಡಾ ಹತ್ತಂಶವಷ್ಟೇ ಸರಿಯಾಗಿ ಅನುಷ್ಠಾನ ಮಾಡುತ್ತಾರೆ.

**ಚರಂತಿ ದೇವಾ ವಿಹಿತಂ ಸಮಸ್ತಮ್,**
**ಅರ್ಧಮೇವ ಮುನಯಃ, ದಶಾಂಶತಃ ಮನುಷ್ಯಾಃ ॥**

ಹೀಗೆ ಎಲ್ಲ ಮತಗಳು, ದರ್ಶನದ ಮುಖ್ಯಫಲವಾದ ಮೋಕ್ಷ ಮತ್ತು ಮೋಕ್ಷಸಾಧನದ ಬಗ್ಗೆ ಸರಿಯಾದ ನಿರೂಪಣೆಯನ್ನು ಮಾಡಿಲ್ಲ. ಸಾಧಕರಿಗೆ ಮುಖ್ಯವಾಗಿ ಅಪೇಕ್ಷಿತವಾದ ಅಂಶವೇ ಅವರು ನಿರೂಪಿಸಿರುವ ಮೋಕ್ಷದಲ್ಲಿ ಇಲ್ಲ. ಸೂಕ್ಷ್ಮಪ್ರಮೇಯದಲ್ಲಿ ಅಭಿಪ್ರಾಯಭೇದ ಸಹ್ಯ. ಆದರೆ ಸಾಮಾನ್ಯ ಜನರೂ ತಿಳಿಯಬಲ್ಲ ವಿಷಯದ ಬಗ್ಗೆ ಅನ್ಯಥಾಜ್ಞಾನವು ದೊಡ್ಡಪ್ರಮಾದ.

**ಇತ್ಥಂ ಮತಾನಿ ಭ್ರಮಜಾನಿ ಯಸ್ಮಾತ್**
**ಮೋಕ್ಷಂ ಸಮುದ್ದೇಶ್ಯಮಪಿ ಭ್ರಮೇಣ ।**
**ವಿದುರ್ನ ಸಮ್ಯಗ್ ಯದಪೀಹ ಲೌಕಿಕಾಃ**
**ಸುಖಂ ಮಮ ಸ್ಯಾಚ್ಚ ಸದೇತಿ ಜಾನತೇ ॥** (4.2.119)

**ಜ್ಞಾನಿಗಳಿಗೆ ಕರ್ಮಲೇಪವಿಲ್ಲ—** ಅಪರೋಕ್ಷಜ್ಞಾನ ಬಂದಮೇಲೆ ಜ್ಞಾನಿಗಳು ಮಾಡುವ ದುಷ್ಕರ್ಮಗಳಿಂದ ಪಾಪಲೇಪವಿಲ್ಲ. ಗುರು ದ್ರೋಹಾದಿ ಮಹಾಪಾತಕಗಳನ್ನು ಮಾಡಿದರೆ ದೇವತೆಗಳಿಗೆ ಮೋಕ್ಷಾನಂದದ ಪ್ರಾಪ್ತಹಾನಿ, ಮನುಷ್ಯರಿಗೆ ಕ್ಲೃಪ್ತಹಾನಿ. ದೇವತೆಗಳು ತಮ್ಮ ಯೋಗ್ಯತೆಗೆ ಮೀರಿ ಸತ್ಕರ್ಮಗಳನ್ನು ಮಾಡಿದಾಗ ಮೋಕ್ಷಾನಂದವೂ ಅವರಿಗೆ ಅಧಿಕವಾಗಿ ಸಂಭವನೀಯವಾಗುತ್ತದೆ. ಅಂತಹ ಸಂದರ್ಭದಲ್ಲಿ ದುಷ್ಕರ್ಮಗಳನ್ನು ಮಾಡಿ ಅವರು ಅದನ್ನು ಕಳೆದುಕೊಳ್ಳುತ್ತಾರೆ. ಸುಗ್ರೀವ ತನಗಿಂತ

ಯೋಗ್ಯತೆಯಲ್ಲಿ ಹೆಚ್ಚಿರುವ ವಾಲಿಯ ಪತ್ನಿಯನ್ನು ಪರಿಗ್ರಹಿಸಿ ಯೋಗ್ಯತೆಗೆ ಮೀರಿ ಬಂದಿರುವ ಮೋಕ್ಷಾನಂದವನ್ನು ಕಳೆದುಕೊಂಡ. ಮನುಷ್ಯರು ಇಂತಹ ದುಷ್ಕರ್ಮವನ್ನು ಮಾಡಿದರೆ ಅವರಿಗೆ ಸಿಗಬೇಕಾದ ಆನಂದವು ಸಿಗುವುದಿಲ್ಲ. ಇದು ಕ್ಲ್ರುಪ್ತಹಾನಿ.

**ಮೋಕ್ಷದಲ್ಲೂ ತಾರತಮ್ಯ ಇದೆ**— ಇದು ದ್ವೈತದರ್ಶನದ ವಿಶೇಷ. ಸಂಸಾರದಲ್ಲಿರುವಂತೆಯೇ ಮೋಕ್ಷದಲ್ಲೂ ತಾರತಮ್ಯವಿದೆ. ತೈತ್ತಿರೀ-ಯೋಪನಿಷತ್ತಿನಲ್ಲಿ ಮನುಷ್ಯಚಕ್ರವರ್ತಿಯಿಂದ ಹಿಡಿದು ಚತುರ್ಮುಖ ಬ್ರಹ್ಮದೇವನವರೆಗೆ ಆನಂದದಲ್ಲಿ ತಾರತಮ್ಯವನ್ನು ಹೇಳಲಾಗಿದೆ. ಇಲ್ಲಿ ಅಮುಕ್ತರ ಆನಂದತಾರತಮ್ಯವನ್ನು ಹೇಳಲಾಗಿದೆ, ಎನ್ನುವುದು ಸರಿಯಲ್ಲ. ಏಕೆಂದರೆ, ಆ ಪ್ರಕರಣದಸಲ್ಲಿ ಆರಂಭದಿಂದ ಕೊನೆಯವರೆಗೆ ಎಲ್ಲರಿಗೂ ಅಕಾಮಹತ ಎಂಬ ವಿಶೇಷಣವಿದೆ. ಬಯಸಿದ ಕಾಮ್ಯವಸ್ತು ದೊರಕದಿದ್ದರೆ 'ಕಾಮಹತಿ' ಎನಿಸುತ್ತದೆ. ಮೋಕ್ಷ ಸಿಗುವವರೆಗೆ ಈ ಕೊರತೆ ಎಲ್ಲರಿಗೂ ಇದೆ. ಮೋಕ್ಷದಲ್ಲಿ ನಮ್ಮ ಇಚ್ಛೆಯು ಭಗವಂತನ ಇಚ್ಛೆಗೆ ಅನುಗುಣವಾಗಿಯೇ ಇರುವುದರಿಂದ ಅಪೇಕ್ಷಿತವಾದುದೆಲ್ಲವೂ ಸಿಗುತ್ತವೆ. ಅಲ್ಲಿ 'ಕಾಮಹತಿ' ಇಲ್ಲ. ಆದ್ದರಿಂದ ಮುಕ್ತರು ಅಕಾಮಹತರು. ಈ ಗುಣ ಮುಕ್ತರಲ್ಲೇ ಇರುವುದರಿಂದ ತೈತ್ತಿರೀಯದಲ್ಲಿ ಹೇಳಿರುವ ಆನಂದತಾರತಮ್ಯ ಮೋಕ್ಷದಲ್ಲೇ ಇರುವಂತಹುದು. ಹೀಗೆ ಮೋಕ್ಷದಲ್ಲೂ ಆನಂದತಾರತಮ್ಯವು ಶ್ರುತಿಪ್ರಮಾಣ ಸಿದ್ಧವಾಗಿದೆ.

ಇದಕ್ಕೆ ಸಾಧಕವಾದ ಯುಕ್ತಿಯೂ ಇದೆ— ಮನುಷ್ಯರು, ಋಷಿಗಳು, ಗಂಧರ್ವರು, ದೇವತೆಗಳು ಜೀವೋತ್ತಮರಾದ ಬ್ರಹ್ಮದೇವರು ಇವರೆಲ್ಲರೂ ಮೋಕ್ಷಸಾಧಕರು. ಇವರ ಸಾಧನೆ ಒಂದೇ ರೀತಿಯಲ್ಲ, ಅದರಲ್ಲಿ ತಾರತಮ್ಯ ವಿದೆ. ಬ್ರಹ್ಮಾದಿದೇವತೆಗಳು ಮಾಡುವ ಸಾಧನೆಯನ್ನು ಇತರ ದೇವತೆಗಳೂ ಮಾಡಲು ಸಾಧ್ಯವಿಲ್ಲ. ಇನ್ನು ಮನುಷ್ಯರು ಹೇಗೆ ತಾನೇ ಮಾಡಿಯಾರು? ಹೀಗೆ ಮೋಕ್ಷಕ್ಕಾಗಿ ಮಾಡುವ ಅಧ್ಯಾತ್ಮಸಾಧನೆಯಲ್ಲಿ ಅಸಮಾನತೆ ಇರುವುದರಿಂದಾಗಿ ಫಲವಾದ ಮೋಕ್ಷಾನಂದದಲ್ಲಿಯೂ ತಾರತಮ್ಯವಿದೆ.

**ಯತ್ನಶ್ಚ ದೃಶ್ಯತೇ ತೇಷಾಂ ಮಹಾನೇವ ಮಹಾತ್ಮನಾಮ್ ।**
**ಯತ್ರ ಸಾಧನಬಾಹುಲ್ಯಂ ಸಾಧ್ಯಬಾಹುಲ್ಯಮತ್ರ ಚ ॥** (3.4.37)

ಒಂದುವೇಳೆ ಹೆಚ್ಚು ಸಾಧನೆ ಮಾಡಿದವರಿಗೂ ಕಡಿಮೆ ಸಾಧನೆ ಮಾಡಿದವರಿಗೂ ಭಗವಂತ ಒಂದೇ ರೀತಿಯ ಫಲವನ್ನು ನೀಡಿದರೆ ಅವನಿಗೆ ಪಕ್ಷಪಾತದೋಷವು ಬಂದೀತು. ಆದ್ದರಿಂದ ಮೋಕ್ಷದಲ್ಲಿ ತಾರತಮ್ಯವು ಯುಕ್ತಿಯುಕ್ತವೂ ಆಗಿದೆ.

ಮೋಕ್ಷದಲ್ಲಿ ತಾರತಮ್ಯವಿದ್ದರೆ ದ್ವೇಷ–ಅಸೂಯೆ ಮುಂತಾದ ದೋಷ ಗಳಿಗೆ ಅವಕಾಶವಾಗುತ್ತದೆ, ಎನ್ನುವ ಆಕ್ಷೇಪ ಸರಿಯಲ್ಲ. ದ್ವೇಷ–ಅಸೂಯೆ ಗಳು ಅಜ್ಞಾನದ ಕಾರ್ಯಗಳು. ಮೋಕ್ಷದಲ್ಲಿ ಅಜ್ಞಾನವು ಇಲ್ಲದಿರುವುದ ರಿಂದ ಇಂತಹ ದೋಷಗಳಿಗೆ ಅವಕಾಶವಿಲ್ಲ. ಸಾಮ್ಯವಿದ್ದರೂ ರಾಗ–ದ್ವೇಷಾದಿಗಳ ಸಂಭವ ಇದ್ದೇ ಇದೆ. ಹೆಚ್ಚು ಸಾಧನ ಮಾಡಿದವನಿಗೂ ಕಡಿಮೆ ಸಾಧನೆ ಮಾಡಿದವನಿಗೂ ಒಂದೇ ರೀತಿಯ ಫಲ ದೊರೆತರೆ ಹೆಚ್ಚು ಸಾಧನೆ ಮಾಡಿದವನಿಗೆ ಕಡಿಮೆ ಸಾಧನೆ ಮಾಡಿದವನಲ್ಲಿ ದ್ವೇಷ–ಅಸಮಾಧಾನಗಳು ಬರಬಹುದು. ಅದಕ್ಕೆ ಮುಕ್ತರು ನಿರ್ದೋಷರು, ಅವರಿಗೆ ಇಂತಹ ಕ್ಷುಲ್ಲಕ ಭಾವನೆಗಳು ಬರುವುದಿಲ್ಲ, ಎಂದೇ ಸಮಾಧಾನವನ್ನು ಹೇಳಬೇಕಾಗುತ್ತದೆ. ಸಾತ್ವಿಕಸ್ವಭಾವದ ಶಿಷ್ಯನಿಗೆ ಗುರುಗಳ ಪಾಂಡಿತ್ಯದ ಬಗ್ಗೆ ಅಸೂಯೆಯ ಬದಲಾಗಿ ಗೌರವ ಹೆಮ್ಮೆಗಳೇ ಇರುವಂತೆ ಮೋಕ್ಷದಲ್ಲೂ ಯೋಗ್ಯತೆಯಲ್ಲಿ ಕಡಿಮೆ ಇದ್ದವರಿಗೆ ಹೆಚ್ಚು ಯೋಗ್ಯತೆವುಳ್ಳವರಲ್ಲಿ ಸ್ನೇಹ–ಗೌರವಭಾವಗಳೇ ಇರುತ್ತವೆ. ಏಕೆಂದರೆ, ಹಿರಿಯರ ಪ್ರಸಾದದಿಂದಾಗಿಯೇ ಕಿರಿಯರಲ್ಲಿ ಗುಣಗಳು ವ್ಯಕ್ತವಾಗುತ್ತವೆ.

**ಯತೋಽವರಾಣಾಂ ಸರ್ವೇಽಪಿ ಗುಣಾಃ ಸರ್ವಾ ಕ್ರಿಯಾ ಅಪಿ ।**
**ನಿಯಮೇನೈವ ಪೂರ್ವೇಷಾಂ ಸುಪ್ರಸಾದನಿಬಂಧನಾಃ ।**
**ಅತಃ ಸಚ್ಛಿಷ್ಯವತ್ ತೇಷಾಂ ನೈವೇರ್ಷ್ಯಾದಿಃ ಕಥಂಚನ ॥** (3.3.183)

ಆದ್ದರಿಂದ ಮೋಕ್ಷದಲ್ಲಿ ತಾರತಮ್ಯವಿದ್ದರೆ ಯಾವ ಬಾಧಕಗಳೂ ಇಲ್ಲ.

**ಅನಾದಿಯೋಗ್ಯತೆ—** ಪ್ರತಿಯೊಂದು ಜಡವಸ್ತುಗಳಿಗೂ ಅವುಗಳದೇ ಆದ ಗುಣಸ್ವಭಾವಗಳಿರುವಂತೆ ಚೇತನವರ್ಗದಲ್ಲೂ ಸ್ವಾಭಾವಿಕವಾದ ಗುಣ ಧರ್ಮಗಳಿರುತ್ತವೆ. ಅವುಗಳನ್ನು ಬದಲಿಸಲಾಗದು. ಎಲ್ಲವೂ ಅದೃಷ್ಟಾಧೀನ ವಾದುದು. ಆ ಅದೃಷ್ಟ ಪರಂಪರೆ ಚೇತನಸ್ವಭಾವಾಧೀನವಾಗಿದೆ. ಒಬ್ಬ

ವ್ಯಕ್ತಿಯಲ್ಲಿ ತೋರುವ ಸಜ್ಜನಿಕೆ ಅನಾದಿಯಾದ ಅವನ ಸ್ವಭಾವ ಅಲ್ಲವಾದರೆ ಇದ್ದಕ್ಕಿದ್ದಂತೆ ಅದು ಹೇಗೆ ಕಾಣಿಸಿಕೊಳ್ಳುತ್ತದೆ? ಜನ್ಮಾಂತರದ ಸುಕೃತದಿಂದ ಈಗ ಸಜ್ಜನಸ್ವಭಾವ. ಜನ್ಮಾಂತರದ ಸುಕೃತ ಅದರ ಹಿಂದಿನ ಜನ್ಮದ ಸುಕೃತಾಧೀನ. ಹೀಗೆ ಆ ಅದೃಷ್ಟಪರಂಪರೆ ಅನಾದಿಯಾಗಿದೆ. ಅಂತಹ ಅದೃಷ್ಟಪರಂಪರೆ ಯನ್ನು ಹೊಂದಿರುವುದೇ ಅವನ ಸ್ವಭಾವಯೋಗ್ಯತೆ.

**ಯದ್ಯನಾದಿ ವಿಶೇಷೋ ನ ಸಾಂಪ್ರತಂ ಕಥಮೇವ ಸಃ ।**
**ಅದೃಷ್ಟಾದೇವ ಚಾದೃಷ್ಟಂ ಸ್ವೀಕೃತಂ ಸರ್ವವಾದಿಭಿಃ ॥** (3.4.132)

ಇಂತಹ ಚೇತನಸಮೂಹವನ್ನು ಸ್ವಭಾವಕ್ಕೆ ಅನುಗುಣವಾಗಿ, ಸ್ಥೂಲವಾಗಿ ಮೂರು ಗುಂಪುಗಳಲ್ಲಿ ವಿಂಗಡಿಸಬಹುದು. ದೇವತೆಗಳು, ಮನುಷ್ಯರು, ದೈತ್ಯರು.

**ಅನಾದಿ ವೈಷ್ಣವಾ ಏವ ದೇವತಾಸ್ತು ಸ್ವಭಾವತಃ ।**
**ವಿಪರೀತಾಃ ಸ್ಮೃತಾ ದೈತ್ಯಾಃ ಸದೈವಾನಾದಿಕಾಲತಃ ।**
**ಮಾನುಷಾ ಮಿಶ್ರಮತಯಃ ವಿಮಿಶ್ರಗತಯೋಽಪಿ ಚ ॥** (3.4.130)

ದೇವತಾಸ್ವಭಾವದವರು ವೈಷ್ಣವರು, ದೈವದ್ವೇಷಿಗಳು ದೈತ್ಯರು, ಸರಿ–ತಪ್ಪುಜ್ಞಾನದ ಮಿಶ್ರಸ್ವಭಾವದವರು ಮನುಷ್ಯರು. ಅವರಿಗೆ ಸುಖ–ದುಃಖಮಿಶ್ರವಾದ ಸಾಂಸಾರಿಕ ಸ್ಥಿತಿಯೇ ಶಾಶ್ವತ.

ಹೀಗೆ ಜೀವರ ಮೂಲಭೂತ ಸ್ವಭಾವದಲ್ಲೇ ವ್ಯತ್ಯಾಸ ಇದೆ ಎನ್ನುವುದೇ ತಾರತಮ್ಯಸಿದ್ಧಾಂತ. ಇದನ್ನು ಶ್ರುತಿಯುಕ್ತಿಗಳಿಂದ ಅನುವ್ಯಾಖ್ಯಾನದ ಅಧಿಕಾಧಿಕರಣದಲ್ಲಿ ಸಮರ್ಥಿಸಲಾಗಿದೆ.

**ಸತ್ಕರ್ಮದಲ್ಲಿ ದೇವತೆಗಳಿಗೂ ಪಾಲಿದೆ—** ನಮ್ಮ ಜ್ಞಾನ–ಕರ್ಮೇಂದ್ರಿಯಗಳಲ್ಲಿದ್ದು ಜ್ಞಾನ–ಕ್ರಿಯಾದಿಗಳನ್ನು ಮಾಡಿಸುವವರು ದೇವತೆಗಳು. ನಮ್ಮ ಪೂರ್ವಕರ್ಮಕ್ಕೆ ಅನುಗುಣವಾಗಿಯೇ ಅವರು ನಮ್ಮನ್ನು ಪ್ರೇರಿಸುತ್ತಾರೆ. ಅದು ಅವರಿಗೆ ಭಗವಂತ ಮಾಡಿರುವ ಆದೇಶ. ಅದನ್ನು ಅವನ ಆರಾಧನೆ ಎಂದು ಭಾವಿಸಿ ದೇವತೆಗಳು ಭಗವದಾದೇಶವನ್ನು ಪಾಲಿಸುತ್ತಾರೆ. ಅದರಿಂದಾಗಿ ನಾವು ಮಾಡುವ ಸತ್ಕರ್ಮದ ಪುಣ್ಯ ದೇವತೆ

ಗಳಿಗೂ ಸೇರುತ್ತದೆ. ನಮ್ಮಿಂದ ದುಷ್ಕರ್ಮವನ್ನು ಮಾಡಿಸಿದರೂ ಅವರಿಗೆ ಪುಣ್ಯವೇ ಹೊರತು ಪಾಪದ ಪಾಲು ಇಲ್ಲ. ಏಕೆಂದರೆ, ರಾಗ–ದ್ವೇಷಗಳಿಂದ ಅವರು ನಮ್ಮಿಂದ ಕೆಟ್ಟ ಕೆಲಸವನ್ನು ಮಾಡಿಸಿಲ್ಲ.

**ಪ್ರೇರಯಂತಿ ಹಿ ತೇ ಜೀವಾನ್ ಪುಣ್ಯಪಾಪೇಷು ನಿತ್ಯಶಃ ।**
**ಹರ್ಯಾಜ್ಞಾಕರಣಾದೇವ ಪುಣ್ಯಮೇಭಿರವಾಪ್ಯತೇ ।**
**ಹರಿಪೂಜೇತಿಕರಣಾತ್ ಕಥಂ ನ ಶುಭಮಾಪ್ನುಯುಃ ॥**

(3.4.252,53)

ಇದರಂತೆ, ಶಿಷ್ಯನಿಗೆ ಜ್ಞಾನನೀಡಿದ ಗುರುಗಳು ಮೋಕ್ಷದಲ್ಲಿ ಶಿಷ್ಯನಿಗಿಂತ ಎಂಟುಪಟ್ಟು ಹೆಚ್ಚು ಫಲವನ್ನು ಪಡೆಯುತ್ತಾನೆ. ಆ ಗುರುವಿನ ಗುರುವಿಗೆ ಗುರು ಪಡೆದ ಫಲಕ್ಕಿಂತ ಎರಡುಪಟ್ಟು ಹೆಚ್ಚು ಫಲ. ಹೀಗೆ ದೇವತೆಗಳ ಪರ್ಯಂತ ಸಾವಿರಾರುಪಟ್ಟು ಹೆಚ್ಚು ಫಲವು ಲಭಿಸುತ್ತದೆ. ಎಲ್ಲರಿಗೂ ಗುರುವೆನಿಸಿರುವ ಬ್ರಹ್ಮದೇವರಿಗೆ 'ಮಹೌಘ' ಸಂಖ್ಯಾ ಪರಿಮಿತಫಲ.

ಈ ವಿಶೇಷವಿಷಯಗಳು ಮೂರನೆಯ ಅಧ್ಯಾಯ ಅನುವ್ಯಾಖ್ಯಾನ ದಲ್ಲಿ ನಿರೂಪಿಸಲ್ಪಟ್ಟಿವೆ.

ನಾಲ್ಕನೆಯ ಅಧ್ಯಾಯದ ಆರಂಭದಲ್ಲಿ ಭಗವಂತನನ್ನು ಆತ್ಮ, ಬ್ರಹ್ಮ ಎಂದು ಸರ್ವದಾ ಉಪಾಸನೆ ಮಾಡಬೇಕು, ಎಂದು ತಿಳಿಸಲಾಗಿದೆ. ಷಾಡ್ಗುಣ್ಯಗ್ರಂಥದ ವಚನವನ್ನು ಅನುವ್ಯಾಖ್ಯಾನದಲ್ಲಿ ಹೀಗೆ ಉಲ್ಲೇಖಿಸ ಲಾಗಿದೆ—

**ಮಮ ಸ್ವಾಮೀ ಹರಿರ್ನಿತ್ಯಂ ಸರ್ವಸ್ಯ ಪತಿರೇವ ಚ ।**
**ಇತಿ ಧ್ಯೇಯಃ ಸರ್ವದೈವ ಭಗವಾನ್ ವಿಷ್ಣುರವ್ಯಯಃ ॥** (4.1.18)

ಭಗವಂತನೇ ನನ್ನ ಆತ್ಮ–ಸ್ವಾಮಿ ಎಂದು ಸದಾ ಧ್ಯಾನಿಸುತ್ತಿರಬೇಕು. ಅಷ್ಟೇ ಆವಶ್ಯಕವಾದ ಮತ್ತೊಂದು ಅನುಸಂಧಾನ– ವಿಷ್ಣು ಬ್ರಹ್ಮ ಎನ್ನುವುದು. ಬ್ರಹ್ಮಶಬ್ದದ ಅರ್ಥ ಪೂರ್ಣತ್ವ. ಪೂರ್ಣತ್ವವು ಇರುವುದ ರಿಂದಲೇ ವಿಷ್ಣು ಸರ್ವೋತ್ತಮ. ಆದ್ದರಿಂದ 'ವಿಷ್ಣು ಬ್ರಹ್ಮ' ಎಂಬ

ಧ್ಯಾನವನ್ನೂ ಸದಾ ಮರೆಯದೇ ಮಾಡುತ್ತಿರಬೇಕು. ಇದನ್ನು ಭಗವಂತನೇ ರಚಿಸಿರುವ ಪ್ರಕಾಶಿಕಾ ಗ್ರಂಥ ವಚನದಿಂದ ತಿಳಿಸಲಾಗಿದೆ—

**ಆಧಿವ್ಯಾಧಿನಿಮಿತ್ತೇನ ವಿಕ್ಷಿಪ್ತಮನಸೋಽಪಿ ತು ।**
**ಧ್ಯೇಯೈವ ಬ್ರಹ್ಮತಾ ನಿತ್ಯಂ ವಿಷ್ಣೋರ್ಭಕ್ತ್ಯಾ ನಿರಂತರಮ್ ॥**

(4.1.35)

ಎಂದೂ ಜಡವಾದ ಪ್ರತಿಮೆಗಳನ್ನು ದೇವರೆಂದು ತಿಳಿಯಬಾರದು. ಜಡವಾದ ಪ್ರತಿಮೆಯನ್ನು ಸರ್ವೋತ್ತಮನಾದ ಬ್ರಹ್ಮನೆಂದು ತಿಳಿಯುವುದು ಭಗವಂತನನ್ನು ಅವಮಾನಿಸಿದಂತೆ. ಅದು ಅನ್ಯಥೋಪಾಸನೆ. ಅಂತಹ ಉಪಾಸನೆಯು ಮಹಾ ಅನರ್ಥಕ್ಕೆ ಕಾರಣವಾಗುತ್ತದೆ.

**ಪ್ರಾರಬ್ಧಭೋಗ—** ಭಗವಂತನ ಅಪರೋಕ್ಷವಾದಾಗ ಸಂಚಿತಕರ್ಮಗಳು ನಾಶವಾಗುತ್ತವೆ. ಪ್ರಾರಬ್ಧಕರ್ಮವನ್ನು ಅನುಭವಿಸಿಯೇ ತೀರಬೇಕು. ಅತಿದೀರ್ಘಕಾಲ ಪ್ರಾರಬ್ಧ ಬ್ರಹ್ಮದೇವರದು. ಅವರು ಅಪರೋಕ್ಷಜ್ಞಾನ ಪಡೆದು ಋಜುಗಣಕ್ಕೆ ಪ್ರವೇಶಮಾಡುತ್ತಾರೆ. ಅಲ್ಲಿಂದ, ನೂರು ಬ್ರಹ್ಮರು ಮುಕ್ತರಾಗುವವರೆಗೂ ಅವರು ಪ್ರಾರಬ್ಧವನ್ನು ಅನುಭವಿಸುತ್ತಲೇ ಇರುತ್ತಾರೆ. ರುದ್ರದೇವರಿಗೆ 40 ಬ್ರಹ್ಮರ ಕಾಲದಷ್ಟು ಪ್ರಾರಬ್ಧ. ಹೆಚ್ಚು ಪ್ರಾರಬ್ಧ ಇದ್ದಷ್ಟು ಮೋಕ್ಷದಲ್ಲಿ ಆನಂದವೂ ಹೆಚ್ಚು.

ನಾಲ್ಕನೆಯ ಅಧ್ಯಾಯದಲ್ಲಿ ಗರುಡಮಾರ್ಗ, ಶೇಷಮಾರ್ಗಗಳ ವಿವರವನ್ನು ಆಚಾರ್ಯರು ಪರಮಶ್ರುತಿಯ ಆಧಾರದಿಂದ ನಿರೂಪಿಸಿದ್ದಾರೆ. ಮನುಷ್ಯರಿಗೆ ಚರಮದೇಹದಿಂದ ಉತ್ಕ್ರಾಂತಿ ಮತ್ತು ಅರ್ಚಿರಾದಿ ಮಾರ್ಗಗಮನ ಇದೆ. ದೇವತೆಗಳಿಗೆ ಇವೆರಡೂ ಇಲ್ಲ, ಅವರಿಗೆ ಸ್ವೋತ್ತಮರಲ್ಲಿ ದೇಹಸಹಿತವಾಗಿ ಲಯ. ಯಾವ ದೇವತೆಗೆ ಯಾರಲ್ಲಿ ಲಯ ಎನ್ನುವುದರ ವಿಸ್ತೃತ ನಿರೂಪಣೆ ಈ ಅಧ್ಯಾಯದಲ್ಲಿದೆ. ಹೀಗೆ ಸಾಧನೆಯ ದೃಷ್ಟಿಯಿಂದ ಈ ಎರಡು ಅಧ್ಯಾಯಗಳು ಮುಖ್ಯ ಎನಿಸಿವೆ.

ಸರ್ವಮೂಲಗ್ರಂಥಗಳ ಕನ್ನಡಾನುವಾದವನ್ನು ಶ್ರೀವಿದ್ಯಾಮಾನ್ಯರು

ಮತ್ತು ಶ್ರೀವಿಶ್ವೇಶತೀರ್ಥಶ್ರೀಪಾದರು ಅಖಿಲಭಾರತ ಮಾಧ್ವಮಹಾ ಮಂಡಲಿಯ ಮೂಲಕ ಆರಂಭಿಸಿದ್ದು ಕ್ರಿ.ಶ.1985ನೇ ವರ್ಷದಲ್ಲಿ. ಮೊದಲ ಸಂಪುಟ ಗೀತಾಪ್ರಸ್ಥಾನ. ಅದರಲ್ಲಿ ಗೀತಾಭಾಷ್ಯವನ್ನು ಕನ್ನಡೀಕರಿಸುವ ಭಾಗ್ಯ ನನ್ನ ಪಾಲಿಗೆ ಬಂದಿತ್ತು. ಕೊನೆಯ ಸಂಪುಟ ಅನುವ್ಯಾಖ್ಯಾನದ ಮೂರನೆಯ ಭಾಗ. ಹೀಗೆ ಆರಂಭ ಮತ್ತು ಕೊನೆ ಎರಡನ್ನೂ ಶ್ರೀಗಳವರು ನನ್ನಿಂದಲೇ ಮಾಡಿಸಿದ್ದಾರೆ. ಇದನ್ನು ಜೀವನದ ಮಹೋನ್ನತ ಸಾಧನೆ ಎಂದು ನಾನು ಭಾವಿಸಿದ್ದೇನೆ. ಸೂತ್ರಭಾಷ್ಯ ಮತ್ತು ಅನುವ್ಯಾಖ್ಯಾನ ಎರಡೂ ಗ್ರಂಥಗಳು ಒಟ್ಟು ಆರು ಸಂಪುಟಗಳಲ್ಲಿ ನನ್ನಿಂದಲೇ ಅನುವಾದಗೊಂಡು ಪ್ರಕಟವಾಗುವಂತೆ ಆಚಾರ್ಯರೂ ಅನುಗ್ರಹಿಸಿದ್ದಾರೆ. ಇದರಿಂದ ಅಮೂಲ್ಯವಾದ ಜ್ಞಾನಸಂಪತ್ತು ನನಗೆ ಲಭಿಸಿದೆ. ಅನುವ್ಯಾಖ್ಯಾನವನ್ನು ಅನುವಾದಿಸುವಾಗ ಸಮಗ್ರ ಸುಧಾಗ್ರಂಥದ ಅಧ್ಯಯನದ ಲಾಭವೂ ಆಗಿದೆ. ಈ ಅವಕಾಶವನ್ನು ಕಲ್ಪಿಸಿಕೊಟ್ಟ ಗುರುಗಳಾದ ಶ್ರೀಗಳವರಿಗೆ ಹಾಗೂ ಮಾಧ್ವಮಹಾಮಂಡಲಕ್ಕೆ ಎಷ್ಟು ಕೃತಜ್ಞತೆಯನ್ನು ಹೇಳಿದರೂ ಸಾಲದು.

ಸರ್ವಮೂಲಗ್ರಂಥಗಳ ಕನ್ನಡಾನುವಾದಆವೃತ್ತಿ ವಿಳಂಬವಾಗಿ ಹೊರ ಬರಲೂ ಒಂದು ರೀತಿಯಿಂದ ನಾನೂ ಹೊಣೆಗಾರ. ಆದರೂ, ಆ ಜವಾಬ್ದಾರಿಯನ್ನು ನನ್ನಿಂದ ಬೇರಾರಿಗೂ ವರ್ಗಾಯಿಸುವ ಯೋಚನೆ ಯನ್ನೂ ಶ್ರೀಗಳವರಾಗಲೀ ಮಂಡಲದ ಪದಾಧಿಕಾರಿಗಳಾಗಲೀ ಮಾಡಿರ ಲಿಲ್ಲ. ಇದರಿಂದಾಗಿ ನಾನೇ ಮುಜುಗುರಕ್ಕೆ ಒಳಗಾಗಿ ಹೆಚ್ಚಿನ ಸಮಯವನ್ನು ಅದಕ್ಕಾಗಿ ಕೊಡುವುದು ಅನಿವಾರ್ಯವಾಯಿತು.

ಈ ಗ್ರಂಥದ ಡಿ.ಟಿ.ಪಿ. ಕಾರ್ಯವನ್ನು ಶ್ರೀ ಪ್ರೇಮ್‌ಕುಮಾರ್ ಅವರು ಶ್ರದ್ಧೆಯಿಂದ ಮಾಡಿದ್ದಾರೆ. ಸರ್ವಮೂಲದ ಎಲ್ಲಾ ಸಂಪುಟಗಳನ್ನೂ ಡಿ.ಟಿ.ಪಿ. ಮಾಡಿದವರೂ ಅವರೇ. ಯಾವುದೇ ಹಂತದಲ್ಲಿ ನಾನು ಅವರಿಂದ ವಿಳಂಬವನ್ನು ಕಂಡಿರಲಿಲ್ಲ. ಸುಮಾರು ಐದುಬಾರಿಯಾದರೂ ಪ್ರೂಫನ್ನು ಕೊಟ್ಟು ಮತ್ತೆ ಮತ್ತೆ ಮಾಡಿದ ತಿದ್ದುಪಡಿಯನ್ನು ಸಹನೆಯಿಂದ ಅಳವಡಿಸಿ ಕೊಟ್ಟಿದ್ದಾರೆ. ಅವರಿಗೂ ಕೃತಜ್ಞತೆಗಳು.

ಮತ್ತೊಮ್ಮೆ ಶ್ರೀಗಳವರಿಗೆ, ಮಂಡಲದ ಪದಾಧಿಕಾರಿಗಳಿಗೆ ಕೃತಜ್ಞತಾ ಪೂರ್ವಕ ವಂದನೆಗಳನ್ನು ಅರ್ಪಿಸಿ ಈ ಮಹತ್ಕಾರ್ಯರೂಪವಾದ ಸೇವೆಯನ್ನು ಮಾಡಿದ ಹರಿಗುರುಗಳಿಗೆ ಅನಂತ ಪ್ರಣಾಮಗಳನ್ನು ಸಮರ್ಪಿಸುತ್ತೇನೆ.

ದಿನಾಂಕ 31.10.2019
ಕಾರ್ತೀಕ ಶುದ್ಧ ಪಂಚಮಿ

**ಎ. ಹರಿದಾಸಭಟ್**
ನಿವೃತ್ತ ಪ್ರಾಚಾರ್ಯರು,
ಪೂರ್ಣಪ್ರಜ್ಞ ವಿದ್ಯಾಪೀಠ
ಬೆಂಗಳೂರು

# ವಿಷಯಾನುಕ್ರಮಣಿಕೆ

## ITRANS :

**Vowels :**

a, aa (A), i, ii (I), u, uu (U), R^i, R^I, L^,i, L^I, e, ai, o, au, aM, aH

**Consonants :**

| | | | | | |
|---|---|---|---|---|---|
| k | kh | g | gh | n^ | ka varga |
| c(ch) | ch (chh) | j | jh | JN | ca varga |
| T | Th | D | Dh | N | Ta varga |
| t | Hi | d | dh | n | ta varga |
| P | ph | b | bh | m | pa varga |

y, r, 1, v, sh, shh, s, h, L, x (ksh), GY, shr

**Special/Accents :**

Anusvara: .n, M (dot on top of previous akshara)

Avagraha : .a (S like symbol)

Chandra-Bindu : .N (chandra-bindu on top of previous akshara)

Ra ligature: .r (to get half-form in ii to get r sound, half r) (.r put after the intended consonant, e.g.: u {dhva} .r)

Visarga: H (visarga-look like a colon character)

OM: OM, AUM (Om symbol)

Consonants have been shown without any vowel, add suffix 'a' to produce a normal consonant, example, 'jaya' or 'jay' for (JA)-(YA), etc.

Each devanagari letter is constructed as C+C+C+..V (One or more consonants, followed by a vowel)

ITRANS package was developed by Avinash Chopde (avinash@acm.org.). For more details, check out his home page at **http://www.paranoia.com/-avinash.**

The English plural sign 's' has been addded to untranslated San-skrit words after one more 'a' or 'i'. For e.g.: Vedas, PramaaNaas etc.

# Brahmasūtrānuvyākhyāna

## Introduction

## Chapter - III Section - I

In this chapter साधन is discussed. In the first section to enable to inculcate वैराग्य the travel after death is described.

साधनविचारोऽयमध्यायः । वैराग्यार्थं गत्यादिनिरूपणं प्रथमपादे ।

The पूर्वपक्षयुक्ति and सिद्धान्तयुक्ति are briefly stated as under:

i) स्वाभाविकान्यथानामसहभावान्यथोक्तयः ।
अविशेषविशेषौ च सहभावो विमिश्रता
विरुद्धोक्तिः सहस्थानं वैयर्थ्यं चान्यथा गतिः ।
युक्तयः पूर्वपक्षस्य

ii) गुणाधिक्यार्थतो भवौ
उपपत्तिः द्विरूपत्वमाधिक्यमनुरूपता ।
योग्यता बलवत्त्वं च विभागः कारणाभवः
क्लृप्तिरन्यागतिश्चैव सिद्धान्तस्यैव साधकाः । (अ.व्या.)

These are worked out in detail in न्यायविवरण.

### योन्यधिकरणम् (III-1-20)

ॐ योनेः शरीरम् ॐ

**There are exceptions to the birth throw the Mother's womb**

In this adhikarana the question whether the birth of the body through the mother's womb is

mandatory or there are any exceptions, is discussed and it is concluded that there are exceptions, such as the birth of द्रोण, द्रुप, शुक etc.

The procedure of rebirth of Jīva is described as follows :

स्वर्गादर्वाग्गतो जीवो वृष्टिद्वारा व्रीह्यादिबीजेषु संक्रान्तो रेतसि पुरुषं प्रविश्य सह रेतसा मातृयोनिद्वारेण जठरं प्रविष्टः कललबुद्बुदादिक्रमेण उत्पन्नं शरीरमाप्नोति । (सुधा)

The Jīva while coming down from the heaven enters into the grains through rain. Then enters into the semen of the male person. Then enters into mother's womb. Then taking the form of uterus, embryo, develops into a body.

This procedure is described in the श्रुति–

'मेघो भूत्वा वर्षति । तद्य इह व्रीहियवाः ओषधिवनस्पतयः तिला माषा इति जायन्ते? यो यो अन्नमत्ति यो वा रेतः तद्रूपाद् भूय एव भवति तद्य इह रमणीयचरणा अभ्याशोह अभ्याशी यत्ते रमणीयां योनिमापद्यन्ते । (सुधा)

This is a general rule. However, there are exceptions द्रोण, द्रुपद, शुक etc are the instances of such exception.

Anuvyākhyāna states as-

बीजपूरुषयोनीनां सङ्गतिनियमोज्झितिम्

अथशब्देन भगवानाह कारणतश्च ताम् । (अ.व्या.)

The word अथ has to be brought from the earlier sutra रेत:सिग्योगोथ. This अथ indicates that other than योनिजन्म is possible.

रेत:सिग्योगोथेति पूर्वसूत्रादथ शब्दोऽत्राप्यनुवर्तते । स च प्रकृतादर्थादर्थान्तरे वर्तते । तथाच योनेः शरीरमापद्यते कचित् तदभावेनापीत्यथशब्देन भगवान् सूत्रकारो बीजादिसम्बन्धनियमाभावं सूत्रितवान् ।

(सुधा)

## Chapter-III Section-II

The development of भक्ति is the theme of this section. For this purpose the glory of the Supreme God is described here.

भक्तिरस्मिन् पादे उच्यते । भक्त्यर्थं भगवन्महिमोक्तिः इति प्रतिपाद्यं भाष्य एव स्फुटम् । (सुधा)

The पूर्वपक्षयुक्ति and सिद्धान्तयुक्तिs are briefly stated in अनुव्याख्यान as under :

i) **पश्चाददृष्ट्यविज्ञान कालदुःखपृथग्भवाः**
**स्थानभेदो विरुद्धत्वं न्यायसाम्यं स्वतोभवः ।**
**गुणसाम्यमयोगश्च तर्कबाधो विलोमता ।**
**नानाभावः प्रलोभश्च युक्तयः पूर्वपक्षगाः ।**

ii) **अशक्यकर्तृताशक्तिः स्वतोऽबोधस्तदेव च ।**
**अमानक्लृप्तिसन्मानव्यवस्थात्यल्पताभवाः**
**विशेषदृष्टिवाक्ये च पुंशक्तिः सुनिदर्शनम्**
**अलौकिकत्वमाधिक्यं स्वातन्त्र्यं निर्णयप्रमाः** ।।(अ.व्या.)

## सन्ध्यधिकरणम् (III-2-1)

In this adhikaraṇa it is stated that the Supreme God creates the dream objects.

स्वप्नावस्थाप्रवर्तकत्वलक्षणः भगवतः महिमा अस्मिन्नधिकरणे निर्णीयते । (सुधा)

**The reality of dream objects - Pūrvapakṣa view**

Pūrvapakṣin argues that It is not correct to say that the dream objects are created by God and are under his control as these are not real objects.

स्वप्नो नाम अर्थज्ञानात्मकः । तत्र तावत् स्वप्नपदार्थानां करितुरगादीनां परमेश्वरायत्तता नोपपद्यते । असत्यत्वात् ।

i) These cannot be claimed to be अनादिनित्य i.e. eternal, in that case these could have been found even before the dream and after it.

ii) These cannot be considered as created and destroyed. Even in this case these should have been available before and after. It cannot be claimed that these appear and disappear like the flash of विद्युत्. There is no evidence to hold such a view.

iii) Neither Jīva can create these nor परमात्मा. The very dreamer cannot create these as he is inactive. There is no evidence to hold that these are created by God.

i) न तावदिमे अनादिनित्याः स्वप्नावस्थातः प्रागूर्ध्वं च उपलब्धि-प्रसङ्गात् ।

ii) नापि उत्पत्तिनाशवन्तः । तथात्वेऽपि प्रागूर्ध्वमुपलम्भप्रसक्तेः ।
न च वाच्यं विद्युदादिवत् तदैव उत्पत्तिः विनाशश्चेति ।
इत्त्थंभावे प्रमाणाभावात् ।

iii) कर्ता च न जीवात्मा द्रष्टुः निर्व्यापरत्वात् । अपरस्य अदर्शनात् । नापि ईश्वरः । भ्रान्तित्वं च एतेषाम् । 'स्वप्रमायासरूपेति' स्वप्रमनोरथो यथा' इत्यादिश्रुतिस्मृतिभ्याम् । तदेवं स्वाप्रानामर्थानां नेश्वराधीनत्वम् । (सुधा)

The cognition of dream objects is not real. There is no valid means to generate this cognition. The eyes etc senses do not function during the dream. मनस् also cannot create these as these have colour etc qualities of external objects.

तज्ज्ञानस्य निमित्ताभावेन अपरमार्थत्वात् । न तावत् चक्षुरादीनां तन्निमित्तत्वम् । तेषामुपरतत्वात् । नापि मनसः रूपादिमत्यर्थे स्वातन्त्र्याभावात् । अत एव न साक्षिणः । अतोऽर्थज्ञानरूपा स्वप्रावस्था नहीश्वराधीना । (सुधा)

**The rejection of Pūrvapakṣa view**

The above पूर्वपक्ष is rejected by the sūtras :

ॐ सन्ध्ये सृष्टिराह हि ॐ

ॐ निर्मातारं चैके पुत्रादयश्च ॐ

ॐ मायामात्रं तु कात्स्न्र्येन अनभिव्यक्तस्वरूत्वात् ॐ

Anuvyākhyāna informs that there are अनादि वासनाs present in the manas of all Jīvas. This manas is of

the nature of three गुणs. It continues until liberation. All the संस्कारs are stored in it. Even during प्रलय these are in subtle form. These are activated at the time of सृष्टि. The God creates the dream objects by these संस्कारs and presents them in the dream to the dreamer.

वासनाः सर्ववस्तूनामनाद्यनुभवागताः ।
सन्त्येवाशेषजीवानामनादिमनसि स्थिताः ।
त्रिगुणात्मकं मनोऽस्त्येव यावन्मुक्तिः सदातनम् ।
तत्रैवाशेष संस्काराः सञ्चीयन्ते सदैव च ।
सूक्ष्मत्वेन लये सच्च प्राकृतैरुपचीयते ।
सृष्टिकाले यदा तन्न कुत; संसारसंस्थितिः ।
संस्कारैर्भगवानेव सृष्ट्वा नानाविधं जगत् ।
स्वप्नकाले दर्शयति भ्रान्ति र्जाग्रत्वमेवहि । (अ.व्या.)

Just as in the instances of Manoratha i.e. wishful thinking, and dhyāna i.e. meditation the objects are presented by sanskāra i.e. impresens of previous experiences, in dream also the objects are presented by sanskāras. The only difference between the two is that in the case of manoratha and dhyāna it is by human effort while in the case of dream it is by God's will.

इयांस्तु विशेषः मनोरथादौ प्रयत्नपूर्विकापदार्थसृष्टिः स्वप्ने पुनरीश्वरेच्छाधीनैव । (सुधा)

**Dream objects are real but taking them on par with the waking state objects is an illusion**

The objects of dream experience are real but taking them on par with the waking state objects is an error.

भ्रान्तिर्जाग्रत्वमेव च (अ.व्या.)

i) जाग्रत्वमिति तत्प्रतीतिमुपलक्षयति । एवेति पदार्थस्वरूपं व्यावर्तयति । जाग्रत्त्वं जागरानुभूतपदार्थैरेकत्वम् । (सुधा)

ii) अस्ति च जागृतप्रतीतेः बाधः (सुधा)

The sanskāra will not arise in respect of the objects that are not experienced nor heard.

अदृष्टादश्रुताद् भावात् न भाव उपजायते । (अ.व्या.)

Here the word भाव refers to पदार्थ in first occurance, and वासना in the second occurance.

भावः पदार्थ, भावः वासना (सुधा)

The संसार i.e. the chain of birth and death is अनादि i.e. has no begining in time. Hence, acts like cutting one's own head must have occured in some or other birth. In some cases the events that are heard also leave sanskrāra. In the case of objects like saśaviṣāna the sanskāra of hare and horn are true but their presence in the same object is not real either in the waking state or in dream.

i) संसारस्य अनादित्वात् कचित् जन्मनि स्वशिरच्छेदादेः अनुभव-सम्भवेन संस्कारोपपत्तेः ।

ii) अत्रापि जन्मनि श्रवणजनितसंस्कारः सम्भवति ।

iii) शशविषाणादीनां प्रमाभावेऽपि शब्दादिना भ्रान्तिसम्भवे संस्कारोपपत्तेः ।

iv) यद्यपि शशत्वविषाणत्वादीनां सामानाधिकरण्यं जागरे नानुभूतम् । तथापि विविक्तं शशत्वादिकमनुभूतमेवेति तत्संस्कारसम्भवेन न शशादीनामसत्त्वं वाच्यम् । (सुधा)

v) **समानाधिकरणं दृश्यतेऽत्र स च भ्रमः** । (अ.व्या.)

The dream objects arise from sanskāras only, hence these do not lead to the functions of waking state objects.

**वासनामात्रमूलत्वात् जाग्रद्वत् स्पष्टता नच** । (अ.व्या.)

स्पष्टता बाह्यार्थक्रियालक्षणा नास्ति । (सुधा)

The dream objects cannot be considered as unreal as these are not sublated. These cannot be considered as eternal as these are generated and perish. Therefore some cause has to be envisaged for these. The ordinary causes such as clay for jar and threads for cloth cannot be considred as causes for the jar, cloth etc in the dream.

Therefore वासना i.e. Sanskāra, is the cause of dream objects.

स्वाप्नाः तावत् घटादयः न असन्तः बाधाभावात् । नापि अनादि-

नित्त्याः पूर्वोत्तरमनुपलम्भात् । न च निरुपादानोत्पत्तिरुपपन्ना । ततः परिशेषात् वासनोपादानका एव ।

The above points are stated in the three sūtras.

तदनेन प्रबन्धेन 'सन्ध्ये सृष्टिराह हि' 'निर्मातारं चैके पुत्रादयश्च' 'मायामात्रं तु कात्स्न्येनानभिव्यक्तिस्वरूपत्वात्' इति त्रिसूत्री व्याख्याता भवति ।

**Advaitins interpret these sūtras differently**

Advaitin presents पूर्वपक्ष as follows :

i) The श्रुति 'अथ रथान् रथयोगान् पथः सृजते' states that in the dream state the cheriot, the horses and the paths are created. This creation is real as the creation during the waking state.

किं प्रबोध इव पारमार्थिकी सृष्टिः आहोस्वित् मायामयीति । तत्र तावत् प्रतिपद्यन्ते । सन्ध्ये सृष्टिराह हीति । प्रबोधसम्प्रसादयोः सन्धौ भवतीति सन्ध्यं स्वप्नस्थानम् । तत्र तथारूपैव सृष्टिः । कुतः। यतः प्रमाणभूता श्रुतिरेवमाह– 'अथ रथान् रथयोगान् पथः सृजते' इति ।

(सुधा)

Further in the same शाखा it is stated that Jīva creates whatever he desires to have during the dream.

अपि चैके शाखिनः सन्ध्ये कामानां निर्मातारमात्मानमामनन्ति 'य एषु सुप्तेषु जागर्ति कामं कामं पुरुषो निर्मिमाण इति । (सुधा)

This is stated in the Sūtra निर्मातारं चैके पुत्रादयश्च.

This creater of objects during the dream is प्राज्ञ. This is clear from the context.

प्राज्ञं च एनं निर्मातारं प्रकरणवाक्यशेषाभ्यां प्रतीमः । तस्मात् तथा भूतैव सन्ध्ये सृष्टिः । (सुधा)

Therefore, the objects created during the dream are real.

**सिद्धान्त as per Advaita interpretation**

Presenting the pūrvapakṣa as stated above the advaitin takes the sūtra 'मायामात्रं तु कात्स्न्र्येन अनभिव्यक्तस्वरूपत्वात्' as सिद्धान्तसूत्र and explains that the word माया refers to अविद्या and the Sūtra conveys that the dream objects are projected by अविद्या and these are not real.

मायेत्यनादिरनिर्वाच्या अविद्या उच्यते । मायैव सन्ध्ये सृष्टिः न परमार्थगन्धोप्यस्ति । कुतः । कात्स्न्र्येन अनभिव्यक्तस्वरूपत्वात् । (सुधा)

The word कात्स्न्र्य refers to the requirements of place, time, cause and the absence of sublation. None of these are available in respect of dream objects.

देशकालनिमित्तसम्पत्तिः अबाधश्च कात्स्न्र्यं तेन अभिव्यक्तस्वरूपत्वाभावात् ।

In the case of dream objects like chariot there is no proper place. Within the body there cannot be chariot.

A person sleeping in कुरुदेश dreams as if he in पाञ्चालदेश.

A person sleeping in the night experiences the day in the dream. Within a second experiences the events of a whole year.

Further the objects experienced during the dream are sublated when one is awake. Hence, these are not real. These are projected by अविद्या.

i) न तावत् रथादीनामुचितो देशः सम्भवति । नहि संवृते देहदेशे रथादयः अवकाशं लभेरन् ।

ii) कालविसंवादोपि स्वप्ने भवति । रजन्यां सुप्तोहि वासरं भारते वर्षे मन्यते । मुहूर्तमात्रमपि वर्षम् ।

iii) बाध्यन्ते चैते रथादयः स्वप्ने दृष्टाः प्रबोधे । (सुधा)

The expression कात्स्न्र्येन अनभिव्यक्तस्वरूपत्वात् is explained in another way also. It means that the dream objects cannot be stated either as distinct from the dreamer or identical or both distinct and identical.

द्रष्टुः भिन्नत्वादिना निर्वक्तुमशक्यत्वात् । न तावद् भेदः पार्श्व-स्थानामपि तदुपलम्भप्रसङ्गात् । नाप्यभेदः एकस्य विना भ्रान्तिं विचित्रानेकात्मकतायाः अनुपपत्तेः । न च भेदाभेदौ व्याघातात् । अतः अनिर्वाच्य अविद्याविलास एवायम् ।

The dream experiences give a hint of good and

bad omens. Though the dream experiences are not real. These hints are real.

स्वप्नः भविष्यतोः साध्वसाधुनोः सूचको भवति । तत्र भवतु सूच्यमानस्य सत्यत्वम् । सूचकस्य वैतथ्यमेव ।

The position taken in पूर्वपक्ष that प्राज्ञ is the creater of dream objects is not correct. In the श्रुति 'स्वयं विहत्य स्वयं निर्माय' it is clearly stated that जीव is the creater of dream objects.

Even if we accept प्राज्ञकर्तृत्व the dream objects are not real like the waking state objects. Ultimately even waking state objects are also not real. The only difference between the two is that the waking state objects are sublated by ब्रह्मत्मैक्यज्ञान but the dream objects are sublated every day.

i) यदप्येतदुक्तं प्राज्ञमेनं निर्मातारमामनन्तीति तदप्यसत् । श्रुत्यन्तरे 'स्वयं विहत्य स्वयं निर्माय' इति जीवव्यापारश्रवणात् ।

ii) अस्तु वा स्वप्नेपि प्राज्ञव्यापारः । न तावता वियदादिवत् स्वप्नस्य सत्यत्वम् । वैषम्यस्य उक्तत्वात् । वियदादिप्रपञ्चोप्यसत्य इत्युपपादित-मारम्भणाधिकरणे । ब्रह्मात्मदर्शनात् वियदादि प्रपञ्चो बाध्यते । सन्ध्याश्रयस्तु प्रतिदिनमित्यतो वैशेषिकमिदं सन्ध्यस्य मायामात्रत्वमुदितम् । (सुधा)

**Rejection of Advaita interpretation**

This interpretation of Advaitin takes the two sūtra viz. 'सन्ध्ये सृष्टिराहहि' 'निर्मातारं चैके पुत्रादयश्च' as पूर्वपक्षसूत्रs

and 'मायामात्रं तु' सूत्र as सिद्धान्तसूत्र. This is based on the assumption that the expression मायामात्र conveys the unreality of dream objects. This is not correct.

There is no प्रमाण to take it that way.

तदिदमनुपपन्नं व्याख्यानम् । यत्तावत् स्वप्नसृष्टेः पारमार्थिकत्व-प्रतिपादकं सूत्रद्वयं पूर्वपक्षानुवादपरमिति तत्तदा प्रतीमो यदि मायामात्र-मित्यनिर्वाच्यता प्रतिपादकं स्यात् । नचैवं तत्प्रतिपादकप्रमाणाभावात् ।

(सुधा)

The points made in support of the unreality of the dream object viz the place, time and cause cannot be worked out for dream objects, and also it cannot be properly explained whether the dream objects are distinct or identical with the dreamer are not valid points.

The distinction between the dreamer and dream objects is very clear. There is no scope for any doubt.

भेदादिविकल्पप्रश्नेन यत् दूषणमुक्तं तत्र प्रश्न एवायमनुपपन्नो दूरे दूषणाभिधानम् ।

Anuvyākhyāna makes it clear as- **द्रष्टुः स्वप्नस्य भेदस्य दृष्टत्वात् अखिलैर्जनैः** । (अ.व्या.)

**The grounds of doubt**

Here, Sudha discusses the ground of doubt such as समानधर्म i.e. common attribute and विप्रतिपत्ति i.e.

difference of opinion and points out that these are not available in the present case.

### The defects of विकल्पप्रश्न

In this context Anuvyākhyāna states the defects of विकल्पप्रश्न–

**प्रश्नदोषा हि चत्त्वारः स्वव्याहतिरसङ्गतिः ।**

**सिद्धार्थता च वैफल्यम् ।**

i) स्वव्याहति i.e. self contradition e.g. वन्ध्या पुत्रवती न वा i.e. whether a barren woman has a child or not.

ii) असङ्गतिः– Irrelevance e.g. when the statement 'God is blissful' is made asking the question whether the momentary nature of the world is cognised by preception or inference.

ईश्वरः सुखी इत्युक्ते प्रपञ्चस्य क्षणिकत्वे किं प्रत्यक्षं प्रमाणमुत अनुमितिः ।

iii) सिद्धार्थता i.e. already established e.g. सिद्धार्थतातु प्रकृतैव i.e. the present question whether the dream objects are distinct from the dreamer. This is already known.

iv) वैफल्यम् i.e. useless, e.g. काकस्य अष्टौ दश वा दन्ताः इति । Whether there are eight teeth or ten to a crow.

The question that suffer from these drawbacks cannot come in the way of तत्त्वनिर्णय.

ಕ್ಕಾಗಲೀ ಅವಿದ್ಯೆಗಾಗಲೀ ಪರಮಾತ್ಮನನ್ನು ವಿಭಜಿಸಿ ಅವನ ಒಂದು ಭಾಗದಲ್ಲಿ ಈ ಅನಿಷ್ಟಗಳನ್ನು ಉಂಟುಮಾಡಲು ಶಕ್ತಿಯಿಲ್ಲ. ಸರ್ವಶಕ್ತನಾದ ಭಗವಂತನ ಮೇಲೆ ಪ್ರಭಾವಬೀರುವ ಶಕ್ತಿಯು ಈ ಜಡ ಪದಾರ್ಥಗಳಿಗೆ ಇಲ್ಲ. ದೇವರೇ ಸ್ವೇಚ್ಛೆಯಿಂದ ತನ್ನನ್ನು ವಿಭಜಸಿಕೊಂಡು ತನ್ನ ಒಂದು ಭಾಗಕ್ಕೆ ದುಃಖ ದುರಂತವನ್ನು ತಂದುಕೊಂಡಿದ್ದಾನೆಂದು ಹೇಳಬೇಕು. ಇದಂತೂ ತುಂಬಾ ನಗೆಪಾಟಲಿನ ಸಂಗತಿ. ವಿಚಾರವಂತನಾದ ಯಾವ ವ್ಯಕ್ತಿಯೂ ತನ್ನ ದೇಹದ ಒಂದು ಭಾಗಕ್ಕೆ ಏನೂ ಪ್ರಯೋಜನವಿಲ್ಲದೆ ಮುಳ್ಳುಗಳಿಂದ ಚುಚ್ಚಿಸಿಕೊಳ್ಳು ತ್ತಾನೆಯೇ? ಹಾವು ಚೇಳುಗಳಿಂದ ಕಚ್ಚಿಸಿಕೊಳ್ಳುತ್ತಾನೆಯೇ? ಜೀವನು ಸರ್ವಶಕ್ತನಾದ ಬ್ರಹ್ಮನ ಭಾಗವಾಗಿದ್ದರೆ ಅವನಲ್ಲಿ ಇಂತಹ ಅನರ್ಥಗಳು ಸಂಭವಿಸಲು ಸಾಧ್ಯವೇ ಇಲ್ಲ. ಜೀವನು ಬ್ರಹ್ಮನ ಒಂದು ಅಂಶವಾಗಿದ್ದರೂ ಅಲ್ಲಿ ಸಂಭವಿಸುವ ದುಃಖ ಸಂಕಟಗಳು ಬ್ರಹ್ಮನಿಗೆ ಗೊತ್ತೇ ಆಗುವುದಿಲ್ಲ. ಬ್ರಹ್ಮನಿಗೆ ಅದರ ಅನುಭವವುಂಟಾಗುವುದಿಲ್ಲವೆನ್ನುವುದಂತೂ ತೀರಾ ಅಸಂಭವ. ಚೇತನ ಒಂದೇ ಆಗಿದ್ದರೆ ಬೇರೆ ಬೇರೆ ಉಪಾಧಿಗಳಿದ್ದರೂ ಪರಸ್ಪರ ಸುಖದುಃಖಗಳ ಅನುಭವವು ಆಗಲೇಬೇಕು. ದೇಹದಲ್ಲಿ ನಖಶಿಖಾಂತವಾಗಿ ಒಬ್ಬನೇ ಚೇತನನಿರುವನು. ಕೈಕಾಲು ಮುಂತಾದ ಅನೇಕ ಉಪಾಧಿಗಳಿವೆ. ಆದರೆ ದೇಹದ ಯಾವುದೇ ಭಾಗದಲ್ಲಿ ಉಂಟಾಗುವ ನೋವಿನ ಅನುಭವವು ಉಂಟಾಗುತ್ತದೆ. ಆತ್ಮನು ಒಂದೇ ಆಗಿದ್ದರೆ ತನ್ನ ಯಾವುದೇ ಭಾಗದಲ್ಲಿ ಸಂಭವಿಸುವ ನೋವು ನಲಿವುಗಳನ್ನು ಅವನು ಅನುಭವಿಸಲೇಬೇಕು. ಹಾಗಿದ್ದರೂ ಇಂತಹ ಪರಸ್ಪರಸಂವೇದನೆ ಯಾಗದಿದ್ದರೆ ಜೀವಬ್ರಹ್ಮರಿಗೆ ಐಕ್ಯವಿದೆಯೆನ್ನುವುದು ಅರ್ಥಶೂನ್ಯವಾಗುತ್ತದೆ. ಪರಸ್ಪರ ಸಂವೇದನೆ ಯಿಲ್ಲದಿದ್ದರೆ ಅದು ಐಕ್ಯವೆನಿಸಲು ಸಾಧ್ಯವೇ ಇಲ್ಲ.

ಭಗವಂತನು ಸರ್ವಜ್ಞನು. ಶ್ರೀ ಕೃಷ್ಣನು ಭಗವಂತನ ಅವತಾರ ವೆಂಬುದನ್ನು ವೇದಾನುಯಾಯಿಗಳು ಅಂಗೀಕರಿಸಿದ್ದಾರೆ. ಶ್ರೀ ಕೃಷ್ಣನೇ **''ದ್ವಾವಿಮೌ ಪುರುಷೌ ಲೋಕೇ''** ಎಂದು ಮುಂತಾಗಿ ತಾನು ಎಲ್ಲಾ ಜೀವರಿಂದ ಭಿನ್ನನಾದ ಪುರುಷೋತ್ತಮನೆಂದು ತನ್ನ ಬಗ್ಗೆ ಹೇಳಿಕೊಂಡಿದ್ದಾನೆ. ಸರ್ವಜ್ಞನಾದ ಭಗವಂತನಿಗೇ ಜೀವರಿಂದ ಅಭೇದದ ಅನುಭವವಿಲ್ಲವೆಂದ ಮೇಲೆ ಜೀವನು ಬ್ರಹ್ಮನ ಭಾಗವಾಗುವುದು ಹೇಗೆ?

ಇಂದ್ರನ ಅಂಶವಾದ ಅರ್ಜುನನಿಗೆ ಇಂದ್ರನ ಎಲ್ಲಾ ಸುಖ ವೈಭವದ ಅನುಭವವಿಲ್ಲ. ಭಗವಂತನ ಅಚಿಂತ್ಯಶಕ್ತಿಯಿಂದ ಇಂತಹ ಕೆಲವು ವಿಶೇಷ ಘಟನೆಗಳು ಜಗತ್ತಿನಲ್ಲಿ ಸಂಭವಿಸುತ್ತವೆ. ಭಗವಂತನ ಒಂದು ಭಾಗದಲ್ಲಿಯೇ ಅವಿದ್ಯೆಯ ಪ್ರಭಾವದಿಂದ ಇಂತಹ ಅಲೌಕಿಕ ಘಟನೆಗಳು ನಡೆದರೆ ಅವನ ಅಚಿಂತ್ಯ ಶಕ್ತಿಗೆ ಸಂಚಕಾರವಾಗುತ್ತದೆ. ಉಪಾಧಿಯ ಒತ್ತಡದಿಂದ ತನ್ನ ಒಂದು ಭಾಗದಲ್ಲಿ ದುಃಖದೋಷಗಳುಂಟಾಗುತ್ತಿದ್ದರೂ ಅದನ್ನು ತಡೆಯದೆ ಅಸಹಾಯಕಸ್ಥಿತಿಯನ್ನು ತಲುಪಿದ ದೇವರಿಗೆ ಅಚಿಂತ್ಯಶಕ್ತಿ ಇರಲು ಸಾಧ್ಯವೇ? ದೇವರು ತನ್ನ ಅಚಿಂತ್ಯಶಕ್ತಿಯಿಂದ ಉಳಿದ ಜೀವರಲ್ಲಿ ಕೆಲವೊಂದು ವಿಶಿಷ್ಟ ಸಂದರ್ಭದಲ್ಲಿ ಪರಸ್ಪರಸಂವೇದನೆಯುಂಟಾಗದಂತೆ ನೋಡಬಹುದು. ಆದರೆ ಅವನು ತನ್ನ ಒಂದು ಭಾಗದಲ್ಲಿಯೇ ದುಃಖವುಂಟಾಗುವುದನ್ನು ತಡೆಯದೆ ತನಗೆ ಕುಂದು ತಂದುಕೊಳ್ಳುವುದಾದರೆ ಆಗ ಅವನ ಅಚಿಂತ್ಯಶಕ್ತಿಗೇ ಹಾನಿಯುಂಟಾಗುತ್ತದೆ. ಇಂತಹ ಅಪೂರ್ಣ, ಅಸಮರ್ಥವ್ಯಕ್ತಿಯು ಅಚಿಂತ್ಯ ಶಕ್ತಿಸಂಪನ್ನನಾಗುವುದು ಹೇಗೆ? ದುರ್ಬಲರಾದ ಜೀವರ ಐಕ್ಯವನ್ನು ಪಡೆದವ ನಿಗೆ ಈ ಅದ್ಭುತ ಶಕ್ತಿಯಿರಲು ಸಾಧ್ಯವೇ? ಜೀವರ ದುಃಖದೀನತೆಗಳನ್ನೂ ಭಗವಂತನ ಆನಂದಪೂರ್ಣತೆಯನ್ನೂ ಅವಲೋಕಿಸಿದಾಗ ಜೀವರು ಭಗವಂತನ ತುಣುಕುಗಳು. ಅವನಿಂದ ಜೀವರಿಗೆ ಭೇದ ಅಭೇದಗಳೆರಡೂ ಇವೆಯೆಂಬುದು ವಿವೇಚನೆಯ ಮುಂದೆ ನಿಲ್ಲುವ ವಿಷಯವಲ್ಲ.

## ''ಓಂ ಅರೂಪವದೇವ ಹಿ ತತ್ಪ್ರಧಾನತ್ವಾತ್ ಓಂ''

ಪರಮಾತ್ಮನಿಗೆ ದೇಹವಿಲ್ಲ ರೂಪವಿಲ್ಲವೆಂದೂ ಅಲ್ಲಲ್ಲಿ ಉಲ್ಲೇಖವಿದೆ. ಅವನ ರೂಪ, ದೇಹಗಳ ವರ್ಣನೆಯೂ ಇದೆ. ಆದರೆ ಈ ಎರಡೂ ವಾಕ್ಯಗಳಿಗೆ ಪರಸ್ಪರ ವಿರೋಧವಿಲ್ಲ. ಭೌತಿಕದೇಹವಿಲ್ಲದುದರಿಂದ ಅವನು ದೇಹರಹಿತನೂ ಅಹುದು. ಆದರೆ ಅಪ್ರಾಕೃತ ಚೈತನ್ಯರೂಪವಾದ ದೇಹವು ಅವನಿಗಿದೆ. ಭೌತಿಕ ದೇಹವಿಲ್ಲದುದರಿಂದ ನಮ್ಮಂತೆ ಜನನ ಮರಣಗಳಿಗೆ ಅವನು ಒಳಗಾಗುವು ದಿಲ್ಲ. ಪರಮಾತ್ಮನ ಶರೀರವು ಭೌತಿಕವಲ್ಲದಿದ್ದರೆ ಅದನ್ನು ರೂಪ, ಶರೀರ ಮುಂತಾದ ಶಬ್ದಗಳಿಂದ ಕರೆಯಬಹುದೇ? ಭೌತಿಕವಸ್ತುಗಳಲ್ಲಿಯೇ ಈ ಶಬ್ದಗಳ ಬಳಕೆಯಿರುವುದರಿಂದ ಭಗವಂತನ ಅಲೌಕಿಕರೂಪದಲ್ಲಿ ಈ

ಶಬ್ದಗಳನ್ನು ಪ್ರಯೋಗಿಸಬಹುದೇ? ಎಂದು ಪ್ರಶ್ನಿಸಬಹುದು. ಉಪನಿಷತ್ತುಗಳಲ್ಲಿ ಪರಮಾತ್ಮನನ್ನು ಜ್ಯೋತಿಯೆಂದು ಕರೆದಿದ್ದಾರೆ. ಅವನು ಭೌತಿಕ ಪ್ರಕಾಶನಲ್ಲ. ಭಗವಂತನ ಜ್ಞಾನರೂಪವಾದ ಪ್ರಕಾಶವು ಅಗ್ನಿ ಸೂರ್ಯರಂತೆ ಲೌಕಿಕ ಪ್ರಕಾಶವಲ್ಲ. ಆದರೂ ಅವರಲ್ಲಿ ಬಳಕೆಯಾಗಿರುವ ಪ್ರಕಾಶ ಶಬ್ದವನ್ನು ಪರಮಾತ್ಮನಲ್ಲಿ ಉಪಯೋಗಿಸುವಂತೆ ಅಪ್ರಾಕೃತದಿವ್ಯವಿಗ್ರಹವನ್ನೂ ರೂಪ, ದೇಹ ಮುಂತಾದ ಶಬ್ದಗಳಿಂದ ಕರೆಯಬಹುದು.

## ಜೀವರ ಭಕ್ತಿ, ಆನಂದಗಳಲ್ಲಿ ತಾರತಮ್ಯ

ಜೀವರೆಲ್ಲರೂ ಭಗವಂತನ ಪ್ರತಿಬಿಂಬರು. ಅವನ ಅಧೀನರಾಗಿದ್ದುಕೊಂಡು ಜ್ಞಾನ, ಆನಂದ ಮುಂತಾದ ವಿಷಯದಲ್ಲಿ ಅವನ ಸ್ವಲ್ಪ ಹೋಲಿಕೆಯನ್ನು ಪಡೆದಿದ್ದಾರೆಂದು ಹಿಂದೆ ಹೇಳಿದೆ. ಪರಮಾತ್ಮನ ಪ್ರತಿಬಿಂಬರಾದ ಬ್ರಹ್ಮಾದಿದೇವತೆಗಳ ಜ್ಞಾನ, ಆನಂದ ಮುಂತಾದ ಗುಣಗಳೂ ಏಕರೂಪವಾಗಿಲ್ಲ. ಅವುಗಳಲ್ಲೂ ವಿಚಿತ್ರತೆಯಿದೆ. ಬಿಂಬರೂಪಿಯಾದ ಭಗವಂತನು ಏಕರೂಪನಾಗಿರುವಾಗ ಪ್ರತಿಬಿಂಬಗಳಲ್ಲಿ ವಿಚಿತ್ರತೆಯು ಹೇಗೆ? ಎಂದು ಪ್ರಶ್ನಿಸಬಹುದು. ಸೂರ್ಯನ ಕಿರಣವು ಸೂರ್ಯಕಾಂತದಲ್ಲಿ ಪ್ರತಿಫಲಿತವಾದಾಗ ಜ್ವಾಲೆಯುಂಟಾಗುತ್ತದೆ. ನೀರಲ್ಲಿ ಪ್ರತಿಬಿಂಬಗೊಂಡಾಗ ಇದು ಸಂಭವಿಸುವುದಿಲ್ಲ. ಬಿಂಬವು ಒಂದೇ ರೀತಿಯಲ್ಲಿದ್ದರೂ ಸ್ಥಾನಶಕ್ತಿಯಿಂದ ಪ್ರತಿಬಿಂಬದಲ್ಲಿ ವೈಚಿತ್ರ್ಯವುಂಟಾಗುವಂತೆ ಭಗವಂತನು ಏಕರೂಪನಾಗಿದ್ದರೂ ಸ್ವಾಭಾವಿಕವಾದ ಭಕ್ತಿ ಮುಂತಾದ ಗುಣಗಳ ವೈಚಿತ್ರ್ಯದಿಂದ ಭಗವಂತನ ಪ್ರತಿಬಿಂಬರಾದ ಬ್ರಹ್ಮಾದಿದೇವತೆಗಳಲ್ಲಿಯೂ ಏರುಪೇರುಗಳಿರಲು ಸಾಧ್ಯ. ಸೂರ್ಯನು ಪ್ರತಿಬಿಂಬಗೊಂಡಾಗ ಮಾತ್ರ ಸೂರ್ಯಕಾಂತಶಿಲೆಯಲ್ಲಿ ಜ್ವಾಲೆಯೇಳುತ್ತದೆ. ಬೇರೆ ಬೆಳಕು ಪ್ರತಿಫಲನಗೊಂಡಾಗ ಈ ಚಮತ್ಕಾರವು ಸಂಭವಿಸುವುದಿಲ್ಲ. ಸೂರ್ಯಕಾಂತಶಿಲೆಯಲ್ಲಿ ಜ್ವಾಲೆಯುಂಟಾಗಲು ಬಿಂಬವಾಗಿರುವ ಸೂರ್ಯನ ಶಕ್ತಿಯು ಕಾರಣವಾಗಿದೆ. ಅದರಂತೆ ಜೀವರ ಆನಂದವೈಚಿತ್ರ್ಯಕ್ಕೆ ಬಿಂಬರೂಪಿಯಾದ ಭಗವಂತನ ಶಕ್ತಿಯು ಕಾರಣ. ಬಿಂಬಶಕ್ತಿ, ಸ್ಥಾನಶಕ್ತಿ ಇವೆರಡೂ ಸೇರಿ ಜೀವರಲ್ಲಿ ಆನಂದ ಮುಂತಾದ ಗುಣಗಳಲ್ಲಿ ತಾರತಮ್ಯವುಂಟಾಗಿದೆ. ಭಕ್ತರ ಸಾಧನೆ ಮತ್ತು ಅದರ ಫಲ ಇವೆರಡೂ ಏಕರೂಪವಾಗಿಲ್ಲ. ಎರಡರಲ್ಲಿಯೂ ತಾರತಮ್ಯ ಮತ್ತು ವೈಚಿತ್ರ್ಯ

ಗಳು ಇವೆ. ಬಿಂಬರೂಪಿಯಾದ ಭಗವಂತನು ಮಾತ್ರ ನಿರ್ವಿಕಾರನಾಗಿ ಏಕರೂಪನಾಗಿ ಇರುತ್ತಾನೆ.

## ಪರಮಾತ್ಮನ ಪರಿಪಾಲನಶಕ್ತಿ

ಭಗವಂತನು ಸರ್ವಲೋಕಪರಿಪಾಲಕನೆಂದು ಯಾಕೆ ಹೊಗಳಬೇಕು? ಅಂತಹ ವಿಶಿಷ್ಟಮಹಿಮೆಯನ್ನು ದೇವರಲ್ಲಿ ಒಪ್ಪುವ ಆವಶ್ಯಕತೆಯಿಲ್ಲ. ಹುಟ್ಟಿದ ವಸ್ತುವು ನಾಶವಾಗುವವರೆಗೆ ಸಹಜವಾಗಿ ಇರಲೇಬೇಕಲ್ಲವೇ? ಪರಮಾತ್ಮನು ವಸ್ತುಗಳ ಸೃಷ್ಟಿಯನ್ನು ಮಾಡುವನು. ಸಂಹಾರವನ್ನೂ ಮಾಡುವನು. ಅವನು ವಿಶ್ವವನ್ನು ಸೃಜಿಸಿ ಸಂಹಾರಮಾಡುವವರೆಗೆ ಅದು ಮಧ್ಯಕಾಲದಲ್ಲಿ ಸಹಜವಾಗಿ ಇರುತ್ತದೆ. ಆಗ ಭಗವಂತನು ಅದರ ಪಾಲಕನೆಂದು ಹೇಳಬೇಕಾಗಿಲ್ಲ. ಸೃಷ್ಟಿ ಸಂಹಾರಗಳ ಹೊರತು ಮಧ್ಯದಲ್ಲಿ ಭಗವಂತನ ವ್ಯಾಪಾರವೇನೂ ಇಲ್ಲವೆಂಬುದಾಗಿ ವಿಶ್ವದ ಮೇಲೆ ಭಗವಂತನ ಪ್ರಭುತ್ವದ ವ್ಯಾಪ್ತಿಯನ್ನು ಮೊಟಕುಗೊಳಿಸುವುದನ್ನು ಬ್ರಹ್ಮಸೂತ್ರವು ಒಪ್ಪುವುದಿಲ್ಲ. ವಸ್ತುವಿನ ಎಲ್ಲಾ ಸ್ವಭಾವಗಳೂ ಭಗವಂತನ ಅಧೀನವೇ ಆಗಿವೆ. ಹುಟ್ಟು ಸಾವುಗಳ ಮಧ್ಯದಲ್ಲಿ ವಸ್ತುವಿನ ಅಸ್ತಿತ್ವವು ಸ್ವತಂತ್ರವಲ್ಲ. ವಸ್ತುವಿನ ಸಹಜವಾದ ಇರುವಿಕೆಯು ಭಗವಂತನ ಶಕ್ತಿಯನ್ನು ಅವಲಂಬಿಸಿದೆ. ವಸ್ತುವನ್ನು ನಿರ್ಮಿಸಿ ಅದು ನಾಶವಾಗುವವರೆಗೆ ಭಗವಂತನು ಸುಮ್ಮನೆ ಇರುವುದಿಲ್ಲ. ಅದರ ಮಧ್ಯಕಾಲೀನವಾದ ಅಸ್ತಿತ್ವ, ಅದರ ಬೆಳವಣಿಗೆ, ಪರಿವರ್ತನೆಗಳೆಲ್ಲವೂ ಪರಮಾತ್ಮನ ವ್ಯಾಪಾರದಿಂದಲೇ ನಡೆಯುತ್ತವೆ. ಭಗವಂತನು ಸೃಷ್ಟಿಕರ್ತನೂ ಸಂಹಾರಕರ್ತನೂ ಆಗಿರುವಂತೆ ಎಲ್ಲಾ ವಸ್ತುಗಳ ಪರಿಪಾಲಕನೂ ಆಗಿರುವನು. ಈ ಭಗವಂತನು ಸ್ವತಃ ಅವ್ಯಕ್ತನು. ನಮ್ಮ ಶಕ್ತಿ ಪ್ರಯತ್ನಗಳಿಂದ ಅವನನ್ನು ಸಾಕ್ಷಾತ್ಕರಿಸಲಾರೆವು. ನಮ್ಮ ಮೇಲಿನ ಅನುಗ್ರಹದೃಷ್ಟಿಯಿಂದ ತನ್ನ ಸ್ವಯಂ ಶಕ್ತಿಯಿಂದ ಭಗವಂತನು ಭಕ್ತರಿಗೆ ಪ್ರಕಟನಾಗುತ್ತಾನೆ.

## ಅಹಿಕುಂಡಲಾಧಿಕರಣ

ಭಗವಂತನ ಎಲ್ಲಾ ಗುಣಗಳೂ ಅವನ ಸ್ವರೂಪವೇ ಎಂದು ಈಗಾಗಲೇ ಹೇಳಿದೆ. ಆದುದರಿಂದ ಈ ಗುಣಗಳು ತಾತ್ಕಾಲಿಕವಾಗಿ ಬಂದು ಹೋಗುವುದಿಲ್ಲ. ಇವು ಅಸ್ವಾಭಾವಿಕವಲ್ಲ. ಭಗವಂತನಿಂದ ಎಂದೆಂದಿಗೂ ಇವುಗಳನ್ನು

ಬೇರ್ಪಡಿಸಲಾರೆವು. ವಿಶಿಷ್ಟಾದ್ವೈತದಲ್ಲಿ ಭಗವಂತನಲ್ಲಿ ಅನಂತಗುಣಗಳನ್ನು ಒಪ್ಪಿದರೂ ಅವುಗಳು ಭಗವಂತನ ಸ್ವರೂಪವಲ್ಲ. ಅಂತಹ ಚೈತನ್ಯ ಸ್ವರೂಪವಲ್ಲದ ಜಡಧರ್ಮಗಳನ್ನು ದೇವರಲ್ಲಿ ಒಪ್ಪಿದಂತಾಗುವುದು. ಪರಮಾತ್ಮನ ವ್ಯಕ್ತಿತ್ವದಲ್ಲಿ ಜಡಧರ್ಮಗಳಿಗೆ ಅವಕಾಶ ನೀಡದೆ ಅವನ ಪೂರ್ಣಚಿನ್ಮಯವ್ಯಕ್ತಿತ್ವವನ್ನು ಆಚಾರ್ಯರು ತೋರಿಸಿಕೊಟ್ಟಿದ್ದಾರೆ. ಆದರೆ ಪರಮಾತ್ಮನೂ ಅವನ ಗುಣಗಳೂ ಬೇರೆ ಬೇರೆಯಲ್ಲ. ಎಲ್ಲವೂ ಒಂದೇ ಚೈತನ್ಯ ಸ್ವರೂಪವಾಗಿದ್ದರೆ, ಭಗವಂತನಲ್ಲಿ ಗುಣಗಳಿವೆಯೆಂಬ ವ್ಯವಹಾರವು ಹೇಗೆ? ತನ್ನಲ್ಲಿ ತಾನು ಇರಲು ಸಾಧ್ಯವೇ? ಎಂಬ ಪ್ರಶ್ನೆಯುಂಟಾಗುತ್ತದೆ. ಎಲ್ಲಾ ವ್ಯಾವಹಾರಿಕವಸ್ತುಗಳಿಗೂ ಇದು ಅನ್ವಯವಾಗುತ್ತದೆ. ಹೂವಿನ ಸುಗಂಧ ವನ್ನು ಅದರಿಂದ ಬೇರ್ಪಡಿಸಲಾರೆವು. ಅವೆರಡೂ ಒಂದೇ ಆದರೂ ಹೂವಿನಲ್ಲಿ ಪರಿಮಳವಿದೆಯೆಂದು ಹೇಳುತ್ತೇವೆ. ವಸ್ತು ಮತ್ತು ಅದರ ಗುಣಗಳು ಒಂದೇ. ವಸ್ತುವಿನಲ್ಲಿ ಈ ಗುಣಗಳಿವೆಯೆಂದು ಕರೆಯಲು ವಸ್ತುವಿನಲ್ಲಿರುವ ವಿಶೇಷಶಕ್ತಿಯೇ ಕಾರಣವೆಂಬುದನ್ನು ಈ ಹಿಂದೆಯೇ ಸೂಚಿಸಲಾಗಿದೆ. ಭಗವಂತನ ಅನಂತಗುಣಗಳು ಭಗವಂತನ ಸ್ವರೂಪವೇ ಆಗಿದ್ದರೂ ಭಗವಂತನಲ್ಲಿ ಈ ಗುಣಗಳಿವೆಯೆಂಬುದನ್ನು ಈ ವಿಶೇಷ ಶಕ್ತಿಯೇ ಸಂಯೋಜಿಸುತ್ತದೆ. ಹಾವು ಕುಂಡಲಾಕಾರವಾಗಿ ಮಲಗಿದಾಗ ನಮಗೆ ತೋರುವ ಈ ಆಕೃತಿಯು ಹಾವಿನಿಂದ ಬೇರೆಯಲ್ಲ. ಹಾವು ಮತ್ತು ಅದರ ಆಕೃತಿಯು ಒಂದೇ ಆಗಿದ್ದರೂ ಹಾವಿಗೆ ಇಂತಹ ಆಕೃತಿಯಿದೆಯೆಂದು ಕರೆಯುತ್ತೇವೆ. ಸೂರ್ಯನ ಪ್ರಕಾಶವಂತೂ ಸೂರ್ಯನಿಂದ ಬೇರೆಯಾಗಿ ಇಲ್ಲವೇ ಇಲ್ಲ. ಸೂರ್ಯನು ಪ್ರಕಾಶಸ್ವರೂಪಿ. ಆದರೂ ಸೂರ್ಯನಲ್ಲಿ ಪ್ರಕಾಶವಿದೆಯೆಂದು ಹೇಳುತ್ತೇವೆ. ಕಾಲವು ಈಗ ಇದೆ. ಕಾಲವು ಹಿಂದೆ ಇತ್ತು ಎಂದು ಹೇಳುವಾಗ ಕಾಲದಲ್ಲಿಯೇ ಕಾಲವಿದೆಯೆಂದು ನಾವು ವ್ಯವಹರಿಸಿ ದಂತಾಗುವುದು. ವಸ್ತುವಿನ ವಿಶೇಷ ಶಕ್ತಿಯಿಂದಲೇ ಈ ವ್ಯವಹಾರವನ್ನು ನಾವು ನಿರ್ವಹಿಸುತ್ತೇವೆ. ಆದುದರಿಂದ ಭಗವಂತನು ಅನಂತಗುಣಸ್ವರೂಪನೂ ಅಹುದು. ಅನಂತಗುಣಪೂರ್ಣನೂ ಆಗಿದ್ದಾನೆ. ಈ ವಿಶೇಷ ಶಕ್ತಿಯ ಬಗ್ಗೆ ಹೆಚ್ಚಿನ ವಿಚಾರವನ್ನು ಈ ಗ್ರಂಥದ ದ್ವಿತೀಯ ಭಾಗದಲ್ಲಿ ವಿವರಿಸಲಾಗುವುದು.

**ಇಲ್ಲಿಗೆ ತೃತೀಯಾಧ್ಯಾಯದ ದ್ವಿತೀಯಪಾದ ಮುಗಿಯಿತು.**

# ತೃತೀಯಾಧ್ಯಾಯದ ತೃತೀಯಪಾದ

ಇಷ್ಟರವರೆಗಿನ ಎರಡು ಅಧ್ಯಾಯ ಮತ್ತು ಎರಡು ಪಾದಗಳನ್ನು ಬ್ರಹ್ಮಸೂತ್ರದ ಪೂರ್ವಭಾಗವೆಂದು ಹೇಳಬಹುದು. ಇಷ್ಟರವರೆಗೆ ಹೇಳಿದ ವಿಚಾರಗಳನ್ನೆಲ್ಲಾ ಅರಿತುಕೊಂಡು ಭಕ್ತಿ, ವೈರಾಗ್ಯ ಸಂಪನ್ನನಾದವನೇ ಉಪಾಸನೆಯನ್ನು ಮಾಡಲು ಅರ್ಹನಾಗುವನು.

ಶಾಸ್ತ್ರವಿಮರ್ಶೆ ಮತ್ತು ಧ್ಯಾನ ಇವು ಉಪಾಸನೆಯ ಎರಡು ಪ್ರಕಾರಗಳು. ಇವುಗಳಿಂದ ಬ್ರಹ್ಮಸಾಕ್ಷಾತ್ಕಾರವನ್ನು ಅದರಿಂದ ಮೋಕ್ಷವನ್ನು ಸಾಧಕನು ಪಡೆಯುತ್ತಾನೆ. ಈ ಎರಡು ಅಧ್ಯಾಯ ಮತ್ತು ಪಾದಗಳಲ್ಲಿ ಹೇಳಿದ ಪ್ರಮೇಯವನ್ನು ಸಂಗ್ರಹವಾಗಿ ಆಚಾರ್ಯರು ವಿವರಿಸಿದ್ದಾರೆ. ಸಕಲ ವೇದಗಳೂ ಪರಮಾತ್ಮನ ಮಹಿಮೆಯನ್ನು ಪ್ರತಿಪಾದಿಸುತ್ತವೆ ಎಂದು ತಿಳಿದುಕೊಳ್ಳಬೇಕು. ಅದಕ್ಕೆ ವಿರೋಧಿಗಳಾದ ಯುಕ್ತಿ ಮತ್ತು ದರ್ಶನಗಳನ್ನು ವಿಮರ್ಶಿಸಿ ಅವುಗಳಲ್ಲಿರುವ ದೋಷಗಳನ್ನು ಅರಿತುಕೊಳ್ಳಬೇಕು. ವೇದವಾಕ್ಯಗಳಲ್ಲಿ ಸಾಮಾನ್ಯವಾಗಿ ಕಂಡು ಬರುವ ವಿರೋಧಗಳನ್ನು ಪರಿಹರಿಸಿಕೊಳ್ಳಬೇಕು. ಬಾಹ್ಯವಸ್ತುಗಳಿಗೆ ವೇದವಾಕ್ಯಗಳ ವಿರೋಧವನ್ನು ಪರಿಹರಿಸಿಕೊಳ್ಳುವುದರ ಜೊತೆಗೆ ನಮ್ಮ ಸಮೀಪದಲ್ಲಿರುವ ಶಾರೀರಿಕವಸ್ತುಗಳಾದ ಇಂದ್ರಿಯ ಪ್ರಾಣಗಳಿಗೆ ಸಂಬಂಧಿಸಿದ ವೇದವಾಕ್ಯಗಳ ವಿರೋಧವನ್ನು ಪರಿಹರಿಸಿ ಕೊಳ್ಳಬೇಕು. ಕೆಲವೆಡೆ ವೇದವಾಕ್ಯಗಳು ಯುಕ್ತಿಗಳನ್ನು ಉಲ್ಲೇಖಿಸಿಕೊಂಡು ಇಷ್ಟರವರೆಗೆ ಹೇಳಿದ ಪ್ರಮೇಯಕ್ಕೂ ವಿರುದ್ಧವಾಗಿ ಹೇಳುವಂತೆ ನಮಗೆ ತೋರುತ್ತದೆ. ಇಂತಹ ವಿರೋಧವನ್ನೂ ಪರಿಹರಿಸಿಕೊಂಡು, ಮುಖ್ಯ ಪ್ರಾಣತತ್ತ್ವದ ಬಗ್ಗೆ ಸರಿಯಾದ ಪರಿಚಯವನ್ನು ಪಡೆದು, ಅವನ ಅನುಗ್ರಹಕ್ಕೆ ಪಾತ್ರರಾಗಬೇಕು. ಭಗವಂತನನ್ನು ನಮ್ಮ ಶರೀರಜನಕನೆಂದು, ಇಡೀ ವಿಶ್ವಕ್ಕೇ ಅವನು ಜನಕನೆಂಬುದನ್ನೂ ತಿಳಿದುಕೊಳ್ಳಬೇಕು. ದೇವರು ನಮ್ಮ ಶರೀರವನ್ನು ನಿರ್ಮಿಸಿದವನೆಂದು ತಿಳಿದಾಗ ಭಗವಂತನಿಗೂ ನಮಗೂ ಇರುವ ವೈಯಕ್ತಿಕ ಸಂಬಂಧವು ಬಲವಾಗುತ್ತದೆ. ನಮಗೆ ಅವನು ತಂದೆಯೆಂದು ವೈಯಕ್ತಿಕವಾಗಿ ಹೆಚ್ಚಿನ ಪ್ರೀತಿಯು ಬೆಳೆಯುತ್ತದೆ. ನಮ್ಮ ಶರೀರವನ್ನು ಮಾತ್ರ ನಿರ್ಮಿಸುವ ಸೀಮಿತ ಶಕ್ತಿ ಅವನದಲ್ಲ. ಅವನು ನಮ್ಮ ಹಾಗೂ ವಿಶ್ವದ ಕರ್ತನೂ ಆಗಿದ್ದಾನೆನ್ನುವುದರಿಂದ ಅವನಲ್ಲಿ ವಿಶೇಷಭಕ್ತಿ ಆದರಗಳು ನಮ್ಮಲ್ಲಿ

ಹುಟ್ಟುತ್ತವೆ. ಎಲ್ಲ ಕಡೆಗಳಲ್ಲಿಯೂ ಇರುವ ದುಃಖವನ್ನು ಕಂಡುಕೊಂಡು, ಈ ಪ್ರಪಂಚದಲ್ಲಿ ವೈರಾಗ್ಯವನ್ನು ಪಡೆದುಕೊಂಡು ಭಗವಂತನ ಗುಣಾತಿಶಯಗಳನ್ನು, ನಮ್ಮ ಎಲ್ಲಾ ಅವಸ್ಥೆಗಳಲ್ಲಿಯೂ ನಿಯಮಿಸುವ ಅವನ ಅದ್ಭುತ ವ್ಯಾಪಾರವನ್ನೂ ಕಂಡು ಅವನಲ್ಲಿ ಅತಿಶಯ ಭಕ್ತಿಯನ್ನು ಬೆಳೆಸಿ ಆ ಪರಬ್ರಹ್ಮನ ಉಪಾಸನೆಗೆ ಪ್ರವೃತ್ತರಾಗಬೇಕು. ಅವನ ವಿಮರ್ಶೆ ಮತ್ತು ಧ್ಯಾನವನ್ನು ಮಾಡಬೇಕು. ಜನ್ಮದಿಂದ ಮೋಕ್ಷದವರೆಗೂ ನಮ್ಮ ಎಲ್ಲಾ ವ್ಯಾಪಾರಗಳಿಗೂ ಕಾರಣನಾಗಿ ಕೊನೆಗೆ ನಮ್ಮ ಜೀವನದ ಪರಮಸಿದ್ಧಿಯಾದ ಮುಕ್ತಿಯನ್ನು ಕೊಡುವ ಆ ಪರಬ್ರಹ್ಮನ ಹೊರತು ಬೇರೆ ಯಾರನ್ನು ನಾವು ಅರಿತುಕೊಳ್ಳಬೇಕು?

ಶಾಸ್ತ್ರದಲ್ಲಿರುವ ಎಲ್ಲಾ ರೀತಿಯ ಪದಗಳನ್ನೂ ಭಗವಂತನಲ್ಲಿ ಸಮನ್ವಯಗೊಳಿಸಿ ಶಾಸ್ತ್ರದಿಂದ ಅನಂತಗುಣಪೂರ್ಣನೆಂದು ತಿಳಿದು, ಅವನಿಂದ ದೂರ ಹೋದಷ್ಟು ನಮಗೆ ಸಂಭವಿಸುವ ಅನರ್ಥಗಳನ್ನು ತಿಳಿದುಕೊಂಡು, ಅವನ ಅತಿಶಯಗುಣಗಳ ಪರಿಚಯದಿಂದ ನಮ್ಮ ಭಕ್ತಿಯನ್ನು ಅಭಿವರ್ಧಿಸಿಕೊಳ್ಳಬೇಕು.

ಭಗವಂತನಲ್ಲಿ ಏಕಾಗ್ರತೆಯುಳ್ಳ ಮನೋವೃತ್ತಿಯೇ ಉಪಾಸನೆಯೆನಿಸಿದೆ. ಧ್ಯಾನದಲ್ಲಿ ಈ ಏಕಾಗ್ರತೆಯಿರುವಂತೆ ಭಗವತ್ತತ್ವದ ಚಿಂತನ ಮಂಥನದಲ್ಲಿಯೂ ಈ ಏಕಾಗ್ರತೆ ಪಡೆಯಬಹುದು. ಆದುದರಿಂದ ಶಾಸ್ತ್ರವಿಮರ್ಶೆಯೂ ಉಪಾಸನೆಯೇ ಆಗಿದೆ.

ವೇದದ ಅಧ್ಯಯನ ವಿಮರ್ಶೆಗಳನ್ನು ಮಾಡುವವರು ತಮ್ಮ ತಮ್ಮ ಶಾಖೆಗಳನ್ನು ಮಾತ್ರ ಅಭ್ಯಾಸ ಮಾಡಿದರೆ ಸಾಕೇ? ಸಾಲದೆಂದು ಬ್ರಹ್ಮಸೂತ್ರವು ಹೇಳುತ್ತದೆ. ತಮ್ಮ ಶಾಖೆಯನ್ನು ಮಾತ್ರ ಅಧ್ಯಯನ ಮಾಡಿದರೆ ಸಾಕು, ಅಥವಾ ಇಂತಿಷ್ಟೇ ಭಾಗದ ಅಧ್ಯಯನವನ್ನು ಮಾಡಿದರೆ ಸಾಕು ಎನ್ನುವ ಮಿತಿಯಿಲ್ಲ, ಜೀವನದಲ್ಲಿ ತಮಗೆ ಎಷ್ಟು ಸಾಧ್ಯವೋ ಅಷ್ಟೆಲ್ಲಾ ವೇದಗಳ ಅಧ್ಯಯನವು ನಡೆಯಬೇಕೆಂದು ವ್ಯಾಸರು ಹೇಳಿದ್ದಾರೆ. ವ್ಯಕ್ತಿಯ ಶಕ್ತಿ ಯೋಗ್ಯತೆಗಳಿಗನುಗುಣವಾಗಿ ಸಾಧ್ಯವಾದಷ್ಟು ಹೆಚ್ಚಿನ ವೇದಭಾಗದ ಅಧ್ಯಯನವನ್ನು ಮಾಡಬೇಕೆಂದು ಬ್ರಹ್ಮಸೂತ್ರವು ಹೇಳುತ್ತದೆ. ಆದುದರಿಂದ ದೇವತೆಗಳು ಈಗಲೂ ಹೆಚ್ಚಿನ ಅಧ್ಯಯನವನ್ನು ನಡೆಸುತ್ತಲೇ ಇದ್ದಾರೆ.

ಜೀವನದುದ್ದಕ್ಕೂ ಈ ಅಧ್ಯಯನ ಚಿಂತನೆಗಳು ನಡೆಯುತ್ತಲೇ ಇರಬೇಕು. ಭಗವತ್‌ಸಾಕ್ಷಾತ್ಕಾರವಾದ ಮೇಲೆಯೂ ಈ ಸಾಧನೆಯು ನಡೆಯುತ್ತದೆ. ಈ ಅಧ್ಯಯನ ಮತ್ತು ಶಾಸ್ತ್ರವಿಮರ್ಶೆಯು ಧ್ಯಾನ ಮತ್ತು ಸಾಕ್ಷಾತ್ಕಾರಗಳಿಗೆ ಕಾರಣವಾದಂತೆ ಸಾಕ್ಷಾತ್ಕಾರ ಪಡೆದ ಜ್ಞಾನಿಗಳು ಮಾಡಿದ ಈ ಶ್ರವಣ ಮನನ ಗಳು ಮುಕ್ತಿಯಲ್ಲಿ ಆನಂದಾತಿಶಯಕ್ಕೆ ಕಾರಣವಾಗುತ್ತವೆ. ಆದುದರಿಂದ ಭಗವದ್ದರ್ಶನದ ಮೊದಲೂ ಹಾಗೂ ನಂತರವೂ ಇವುಗಳು ನಡೆಯಬೇಕು.

ನಮಗೆ ಅಧ್ಯಯನಕ್ಕೆ ಸರ್ವಜ್ಞರಾದ ಗುರುಗಳು ದೊರೆಯದಿದ್ದರೆ ಅವರು ರಚಿಸಿದ ಗ್ರಂಥದ ಆಧಾರದಿಂದ ತತ್ವೋಪದೇಶವನ್ನು ಮಾಡಬಲ್ಲ ಗುರುವಿನ ಸಹಾಯದಿಂದ ನಾವು ಅಧ್ಯಯನ ನಡೆಸಬೇಕು. ಅಂತಹ ವಿಶೇಷ ಜ್ಞಾನಿಯೂ ದೊರೆಯದಿದ್ದರೇ, ನಮಗಿಂತಲೂ ಹೆಚ್ಚು ತಿಳಿದುಕೊಂಡಿರುವ ಸಾಮಾನ್ಯಗುರುಗಳನ್ನಾದರೂ ಆಶ್ರಯಿಸಬೇಕು. ನಮಗೆ ಸಾಕಷ್ಟು ಉಪದೇಶ ಮಾಡಲು ಒಬ್ಬನೇ ಗುರುವು ದೊರೆಯದಿದ್ದರೆ! ಅಂತಹ ಅನೇಕ ಗುರುಗಳನ್ನು ಸಂಪರ್ಕಿಸಿ ಅವರಿಂದ ಜ್ಞಾನವನ್ನು ಪಡೆಯಬಹುದು. ಕೆಲವೊಮ್ಮೆ ನಾವಿರುವ ನಗರದಲ್ಲಿ ಅಂತಹ ಗುರುಗಳೂ ಸಿಗುವುದಿಲ್ಲ. ಇಂದಿನ ಯುಗದಲ್ಲಿಯಂತೂ ಉದ್ಯೋಗಕ್ಕಾಗಿ ಬೇರೆಬೇರೆ ಕಡೆಗೆ ಹೋಗುವ ಜನರು ಈ ಸಮಸ್ಯೆಯನ್ನು ವಿಶೇಷವಾಗಿ ಎದುರಿಸಬೇಕಾಗುತ್ತದೆ. ಆಗ ತಾವೇ ಸ್ವಯಂ ಅಧ್ಯಯನವನ್ನು ನಡೆಸಬೇಕು. ತನಗೆ ತಿಳಿದಿದ್ದನ್ನು ಉಳಿದವರಿಗೂ ತಿಳಿಸಬೇಕು. ನಾವು ಸ್ವಯಂ ಅಧ್ಯಯನ ಮಾಡಿ ಪಾಠವನ್ನು ಹೇಳುವಾಗ ಅನೇಕ ತಪ್ಪುಗಳು ಸಂಭವಿಸ ಬಹುದು. ಅಂತಹ ಸಣ್ಣಪುಟ್ಟ ತಪ್ಪುಗಳು, ಶಬ್ದ, ವ್ಯಾಕರಣ ದೋಷಗಳು ಬಂದರೂ ಚಿಂತೆಯಿಲ್ಲ. ಶಾಸ್ತ್ರವು ತಿಳಿಸಿದ ಮೂಲಭೂತವಾದ ಸಿದ್ಧಾಂತಕ್ಕೆ ವಿರುದ್ಧವಾಗದಂತೆ ಎಚ್ಚರ ವಹಿಸಿದರೆ ಸಾಕು. ಉಳಿದ ದೋಷಗಳು ಬಂದರೂ ಅಧ್ಯಯನವನ್ನು ನಿಲ್ಲಿಸಬೇಕಾಗಿಲ್ಲ, ಶ್ರವಣ, ಮನನಗಳು ನಮ್ಮ ಜೀವನದಲ್ಲಿ ನಿರಂತರ ನಡೆಯಬೇಕಾದ ಸಾಧನೆಗಳು. ಸಣ್ಣ ಪುಟ್ಟ ತಪ್ಪುಗಳಿಗೆ ಹೆದರಿ ಇದನ್ನು ಬಿಡಬಾರದು. ಕೆಲವೊಮ್ಮೆ ಆಯಾಸದಿಂದ, ನಿದ್ರೆ, ಖಾಹಿಲೆ ಬಂದು, ಅಧ್ಯಯನಕ್ಕೆ ತಡೆಯಾಗಬಹುದು. ಇಂತಹ ಅನಿವಾರ್ಯ ತೊಂದರೆ ಗಳುಂಟಾದಾಗ ತಾತ್ಕಾಲಿಕವಾಗಿ ನಿಲ್ಲಿಸಿ ಪುನಃ ನಮ್ಮ ಅಧ್ಯಯನವನ್ನು ಮುಂದುವರೆಸಬೇಕು.

## ಸತ್ಸಿದ್ಧಾಂತ

ಶಾಸ್ತ್ರದ ಮೂಲಭೂತವಾದ ಸತ್‌ಸಿದ್ಧಾಂತಕ್ಕೆ ವ್ಯತ್ಯಯವಾಗದಂತೆ ಅಧ್ಯಯನಪ್ರವಚನಗಳನ್ನು ನಡೆಸಬೇಕೆಂದು ಈಗಾಗಲೇ ಹೇಳಿದೆ. ಈ ಸತ್ಸಿದ್ಧಾಂತದ ಸ್ವರೂಪವನ್ನು ಸ್ಪಷ್ಟಪಡಿಸಿದ್ದಾರೆ. ಶ್ರೀನಾರಾಯಣನು ಅನಂತಗುಣಪೂರ್ಣನೂ, ನಿರ್ದೋಷನೂ, ಇಡೀ ವಿಶ್ವದ ಅಧಿಪತಿಯೂ ಆಗಿದ್ದಾನೆ. ಭಗವಂತನ ಸರ್ವೋತ್ತಮತ್ವವೇ ಪ್ರಧಾನಸಿದ್ಧಾಂತವಾಗಿದೆ. ಭಗವಂತನ ಸ್ವಾತಂತ್ರ್ಯ ಮತ್ತು ಜೀವ ಜಡದಿಂದ ಭಿನ್ನತೆ, ಇವು ಪರಮಾತ್ಮನ ಸರ್ವೋತ್ತಮತ್ವದ ಪ್ರಧಾನ ಸಿದ್ಧಾಂತಕ್ಕೆ ಪೂರಕವಾದ ಸಿದ್ಧಾಂತವಾಗಿದೆ. ಜೀವ ಜಡರಿಂದ ಭಗವಂತನಿಗೆ ಭೇದವಿಲ್ಲದ್ದಿದರೆ ಜೀವ ಜಡರಲ್ಲಿರುವ ದೋಷಗಳು ಅವನಿಗೆ ಸಂಭವಿಸುವುದರಿಂದ ಅವನ ನಿರ್ದೋಷಗುಣಪೂರ್ಣ ಸರ್ವೋತ್ತಮವ್ಯಕ್ತಿತ್ವಕ್ಕೆ ಧಕ್ಕೆಯುಂಟಾಗುತ್ತದೆ. ಅದರಂತೆ ಅವನಿಗೆ ಸ್ವಾತಂತ್ರ್ಯ ವಿಲ್ಲದಿದ್ದರೂ ಸರ್ವನಿಯಾಮಕತ್ವ ಉಳಿಯಲಾರದು. ಜಗನ್ಮಾತೆಯಾದ ಲಕ್ಷ್ಮೀದೇವಿಗೆ ಭಗವಂತನ ನಂತರದ ಸ್ಥಾನ, ವಾಯುದೇವರ ಜೀವೋತ್ತಮತೆ, ದೇವತೆಗಳ ತಾರತಮ್ಯ, ಜಗತ್ತಿನ ಸತ್ಯತೆ ಇವು ಈ ಪ್ರಧಾನಸಿದ್ಧಾಂತಕ್ಕೆ ಪೋಷಕವಾದ ಅಪರ ಸಿದ್ಧಾಂತಗಳು. ಈ ತತ್ವಗಳಿಗೆ ವಿರೋಧವಾಗದಂತೆ ನಮ್ಮ ಅಧ್ಯಯನಸೇವೆಯು ನಡೆಯಬೇಕು. ವೇದ ಮತ್ತು ಅವುಗಳಿಗೆ ಅನುಗುಣವಾದ ಮಹಾಭಾರತ, ಭಾಗವತ ಮುಂತಾದ ಸಚ್ಛಾಸ್ತ್ರಗಳ ಶ್ರವಣ ಮನನ ಪ್ರವಚನಗಳಿಂದ ತತ್ವನಿಶ್ಚಯವನ್ನು ಪಡೆಯುತ್ತೇವೆ. ಆದರೆ ಭಗವಂತನ ಸಾಕ್ಷಾತ್ಕಾರಕ್ಕೆ ಅಖಂಡವಾದ ಧ್ಯಾನವು ಆವಶ್ಯಕ. ಆದರೆ ನಾವು ಧ್ಯಾನಿಸಬೇಕಾದ ವಸ್ತುವಿನ ಸರಿಯಾದ ನಿಶ್ಚಯವಿಲ್ಲದೇ ಮನಸ್ಸು ಡೋಲಾಯಮಾನವಾಗಿದ್ದರೆ ನಾವು ಏಕಾಗ್ರತೆಯಿಂದ ಧ್ಯಾನಿಸಲು ಸಾಧ್ಯವಿಲ್ಲ. ಶ್ರವಣಮನನಗಳಿಂದ ವಸ್ತುವಿನ ದೃಢನಿಶ್ಚಯವಾದರೇ ನಂತರ ಅಖಂಡಧ್ಯಾನವನ್ನು ನಾವು ಸಾಧಿಸಬಲ್ಲೆವು. ಧ್ಯಾನದ ಅಂತಿಮ ಘಟ್ಟದಲ್ಲಿ ನಮಗೆ ಸಾಕ್ಷಾತ್ಕಾರವಾಗುವುದು. ನಾವು ಸ್ವಲ್ಪವೂ ಅಸಡ್ಡೆ ಮಾಡದೇ ನಮ್ಮ ಶಕ್ತಿಯಿರುವಷ್ಟೂ ಶಾಸ್ತ್ರದ ಅಧ್ಯಯನ ಚಿಂತನಗಳನ್ನು ನಡೆಸಿ ಸಾಧ್ಯವಿದ್ದಷ್ಟು ಭಗವಂತನ ಗುಣಗಳನ್ನು ತಿಳಿದುಕೊಂಡು ಅವನ ಉಪಾಸನೆಯನ್ನು ಮಾಡಬೇಕೆಂದು ಈ ಮೂರನೆಯ ಪಾದದಲ್ಲಿ ಬ್ರಹ್ಮಸೂತ್ರವು ಹೇಳಿದೆ.

ಉಪಾಸನೆಯನ್ನು ಮಾಡಲು ಅಧ್ಯಯನ ಚಿಂತನೆಗಳು ಆವಶ್ಯಕ ವಿರುವಂತೆ ಯಮ-ನಿಯಮಗಳೂ ಅತ್ಯಗತ್ಯ. ಬೇರೆ ಬೇರೆ ಕಾಲದಲ್ಲಿ ನಾವು ಮಾಡಬೇಕಾದ ಕೃತಿಗಳು ನಿಯಮವೆನಿಸಿದರೇ ನಿರಂತರವಾಗಿ ನಮ್ಮಲ್ಲಿರ ಬೇಕಾದ ಗುಣಗಳನ್ನು ಯಮವೆಂದು ಕರೆಯುತ್ತಾರೆ. ಸಂಧ್ಯಾಕಾಲದಲ್ಲಿ ನಾವು ಮಾಡಬೇಕಾದ ಜಪಾನುಷ್ಠಾನ, ಹದಿನೈದು ದಿನಗಳಿಗೊಮ್ಮೆ ನಾವು ಮಾಡುವ ಉಪವಾಸ ಮುಂತಾದವುಗಳು ನಿಯಮವಾಗಿವೆ. ಯಾವಾಗಲೂ ನಮ್ಮಲ್ಲಿ ಅಳವಡಿಸಿಕೊಳ್ಳಬೇಕಾದ ಭಗವದ್ಭಕ್ತಿ, ವೈರಾಗ್ಯ ಮುಂತಾದ ಸದ್ಗುಣಗಳನ್ನು ಯಮವೆಂದು ಹೇಳಬಹುದು. ಭಗವಂತನಲ್ಲಿ ಪ್ರೇಮ, ವಿಷಯ ಪದಾರ್ಥಗಳಲ್ಲಿ ವೈರಾಗ್ಯ ಇವೆರಡು ಇದ್ದರೇ ಎಲ್ಲವನ್ನೂ ತೊರೆದು ಭಗವಂತನನ್ನೇ ಏಕಾಗ್ರತೆಯಿಂದ ಚಿಂತಿಸಲು ಸಾಧ್ಯ. ಪ್ರೇಮದಂತೆ ದ್ವೇಷವೂ ಏಕಾಗ್ರತೆಗೆ ಸಾಧನವಾಗಬಹುದು. ನಾವು ಪ್ರೀತಿಸುವ ವ್ಯಕ್ತಿಯನ್ನು ಯಾವಾಗಲೂ ಚಿಂತಿಸುವಂತೆ ನಾವು ದ್ವೇಷಿಸುವ ವ್ಯಕ್ತಿಯ ಬಗ್ಗೆಯೂ ಯಾವಾಗಲೂ ಆಲೋಚಿಸುತ್ತೇವೆ. ಆದರೂ ನಿರ್ಮಲಾಂತಃಕರಣದಿಂದ ಧ್ಯಾನಿಸಲು ಪ್ರೇಮವೇ ಆವಶ್ಯಕವಾಗಿದೆ. ನಮ್ಮ ಧ್ಯಾನದಿಂದ ಭಗವಂತನು ಪ್ರಸನ್ನನಾಗಿ ಮೋಕ್ಷವನ್ನು ನೀಡುವನು. ದ್ವೇಷದಿಂದ ನಾವು ಏಕಾಗ್ರತೆ ಯನ್ನೇನೋ ಸಾಧಿಸಬಹುದು. ಆದರೇ ಭಗವಂತನನ್ನು ದ್ವೇಷಿಸುತ್ತಾ ಭಗವಂತನು ಲೋಕವ್ಯವಸ್ಥೆಗಾಗಿ ಮಾಡಿದ ನಿಯಮವನ್ನು ಉಲ್ಲಂಘಿಸುತ್ತಾ ಸ್ವಚ್ಛಂದಜೀವನವನ್ನು ನಡೆಸುವ ವ್ಯಕ್ತಿಯ ಬಗ್ಗೆ ಭಗವಂತನು ಪ್ರಸನ್ನ ನಾಗಲಾರನು. ಅವನ ಅನುಗ್ರಹವಿಲ್ಲದೇ ಮೋಕ್ಷವು ದೊರೆಯಲಾರದು. ಆ ಕಾರಣದಿಂದಲೇ ಪ್ರೇಮಪೂರ್ವಕವಾದ ಧ್ಯಾನವೇ ಮೋಕ್ಷಕ್ಕೆ ಕಾರಣವೆಂದು ವೇದಶಾಸ್ತ್ರವು ಹೇಳಿದೆ. ಆದುದರಿಂದ ಭಕ್ತಿವೈರಾಗ್ಯ ಮುಂತಾದ ನಮ್ಮಲ್ಲಿ ಸದಾಕಾಲ ಇರಬೇಕಾದ ಗುಣಗಳನ್ನು ಸಂಪಾದಿಸಲು ಯತ್ನಿಸಬೇಕು. ನಮ್ಮಲ್ಲಿ ನಮಗೆ ಸಹಜವಾದ ಪ್ರೀತಿಯಿದೆ. ನಮ್ಮನ್ನು ನಾವು ಪ್ರೀತಿಸುವುದಕ್ಕಿಂತಲೂ ಎಷ್ಟೋ ಪಾಲು ಅಧಿಕವಾಗಿ ಭಗವಂತನನ್ನು ನಾವು ಪ್ರೀತಿಸಬೇಕು. ದ್ವೇಷದಿಂದ ಏಕಾಗ್ರತೆಯನ್ನು ಸಾಧಿಸಿ ಮೋಕ್ಷವನ್ನು ನಾವು ಪಡೆಯಬಹುದಾದರೇ ನಮ್ಮ ಮುನಿಗಳು ಯಾವ ನಿಯಮ ನಿರ್ಬಂಧವೂ ಇಲ್ಲದ ಸುಲಭವಾದ ಈ ದ್ವೇಷ ಸಾಧನೆಯನ್ನೇ ಮಾಡದೇ ಈ ಭಕ್ತಿಮಾರ್ಗವನ್ನು ಯಾಕೆ ಅನುಸರಿಸಿದರು? ಅದಕ್ಕಾಗಿ ತಪಸ್ಸು ಉಪವಾಸಗಳ ಕಠಿಣಸಾಧನೆಯನ್ನು ಏಕೆ ನಡೆಸಿದರು?

ಭಗವಂತನ ದ್ವೇಷದಿಂದ ದುಷ್ಟರು ಭಾರೀ ಅನರ್ಥ ದುರಂತಗಳನ್ನು ಹೊಂದಿದ ಅನೇಕ ಘಟನೆಗಳ ವರ್ಣನೆಯು ಪುರಾಣಗಳಲ್ಲಿದೆ. ಭಗವಂತನ ದ್ವೇಷ, ನಿಂದನೆಗಳನ್ನು ಮಾಡಿದವರಿಗೆ ಬಹಳ ಅನರ್ಥವು ಕಾದಿದೆಯೆಂದು **''ಮಾಮಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂ ಗತಿಮ್''** ಎಂದು ಭಗವದ್ಗೀತೆಯು ಘೋಷಿಸಿದೆ. ಆದುದರಿಂದ ಭಕ್ತಿ ಮತ್ತು ಏಕಾಗ್ರತೆಯಿಂದ ಉಪಾಸನೆಯನ್ನು ಸಾಧಿಸಿ ಭಗವಂತನ ಅನುಗ್ರಹಕ್ಕೆ ಪಾತ್ರರಾಗಬೇಕು.

## ''ಓಂ ವಿದ್ಯೈವ ತು ನಿರ್ಧಾರಣಾತ್ ಓಂ''

ಮುಕ್ತಿಯ ಸಾಧನೆಯ ಬಗ್ಗೆ ಮತಭೇದಗಳಿವೆ. ಚಾರ್ವಾಕರಂತೂ ಮುಕ್ತಿಯನ್ನೇ ಅಂಗೀಕರಿಸುವುದಿಲ್ಲ. ಜೀವಮಾನದವರೆಗೆ ಸಾಂಸಾರಿಕ ಸುಖಾನುಭವವೇ ಪುರುಷಾರ್ಥವಲ್ಲದೇ ಜೀವನದ ನಂತರ ಮೋಕ್ಷವೆನ್ನುವುದೇ ಇಲ್ಲವೆಂದು ಅವರು ಹೇಳುತ್ತಾರೆ. ಮುಕ್ತಿಯನ್ನು ಅಂಗೀಕರಿಸುವವರೂ ಅದು ಈಗ ಅನುಭವವೇದ್ಯವೆಂದು ಹೇಳುವುದಿಲ್ಲ. ಜ್ಞಾನಿಗಳು ಈ ಭೌತಿಕದೇಹವನ್ನು ಕಳೆದುಕೊಂಡ ನಂತರ ಈ ಮುಕ್ತಿಸುಖವನ್ನು ಅನುಭವಿಸುತ್ತಾರೆಂದೇ ಮುಕ್ತಿಯನ್ನು ಅಂಗೀಕರಿಸುವ ದಾರ್ಶನಿಕರೆಲ್ಲರ ಅಭಿಪ್ರಾಯವಾಗಿದೆ. ಈ ಜೀವನದ ನಂತರ ಜ್ಞಾನಿಗಳಿಗೆ ಮುಕ್ತಿಯ ಪರಮಾನಂದವು ದೊರಕಿದೆಯೆಂದಾಗಲೀ ದೊರಕಿಲ್ಲವೆಂದಾಗಲೀ ಪ್ರತ್ಯಕ್ಷದಿಂದ ನಾವು ತಿಳಿಯಲಾರೆವು. ನಮ್ಮ ಕಣ್ಣೆದುರಿಗೆ ಇರುವ ವ್ಯಕ್ತಿಗೆ ಸುಖವಿಲ್ಲವೆಂಬುದನ್ನೇ ನಾವು ಪ್ರತ್ಯಕ್ಷದಿಂದ ತಿಳಿಯಲು ಸಾಧ್ಯವಿಲ್ಲದಿರುವಾಗ ಅಧ್ಯಾತ್ಮಸಾಧಕರಿಗೆ ಜನ್ಮಾಂತರದಲ್ಲಿ ಮೋಕ್ಷಸುಖವು ದೊರೆಯುವುದಿಲ್ಲವೆಂದು ಪ್ರತ್ಯಕ್ಷದಿಂದ ನಾವು ಹೇಗೆ ಸಾಧಿಸಬಲ್ಲೆವು? ಆದರೆ ಚಾರ್ವಾಕರು ಪ್ರತ್ಯಕ್ಷದ ಹೊರತು ಬೇರೆ ಪ್ರಮಾಣವನ್ನೇ ಅಂಗೀಕರಿಸುವುದಿಲ್ಲ. ಹೀಗಾಗಿ ಮೋಕ್ಷವಿಲ್ಲವೆಂದು ಸಾಧಿಸಲೂ ಅವರಲ್ಲಿ ಯಾವುದೇ ಪ್ರಮಾಣವಿಲ್ಲ. ತಮ್ಮ ಪೂರ್ವಾಚಾರ್ಯರು ತಮ್ಮ ಅಸಾಮಾನ್ಯ ಶಕ್ತಿಯಿಂದ ಮೋಕ್ಷವಿಲ್ಲವೆನ್ನುವುದನ್ನು ಪ್ರತ್ಯಕ್ಷದಿಂದಲೇ ಕಂಡಿದ್ದಾರೆಂದು ಹೇಳೋಣವೇ? ಉಳಿದ ಮಾನವರಲ್ಲಿ ಇಲ್ಲದ ಅಂತಹ ಅತೀಂದ್ರಿಯ ಶಕ್ತಿಯನ್ನು ಭೌತಿಕವಾದಿಗಳಾದ ಚಾರ್ವಾಕರು ತಮ್ಮ ಮತಾಚಾರ್ಯರೆನಿಸಿದ ಒಬ್ಬ ವ್ಯಕ್ತಿಯಲ್ಲಿ ಮಾತ್ರ ಒಪ್ಪಲು ಸಾಧ್ಯವೇ? ಆಸ್ತಿಕ ದರ್ಶನಗಳಲ್ಲಿ ಇಂತಹ ಅತೀಂದ್ರಿಯ ಯೌಗಿಕ ಶಕ್ತಿಗೆ ಅವಕಾಶವಿರುವುದರಿಂದ

ಮಾನವರಲ್ಲಿಯೇ ಕೆಲವರು ಅಸಾಮಾನ್ಯ ಪುರುಷರಿದ್ದಾರೆ. ತಮ್ಮ ಸಾಧನೆಯ ಬಲದಿಂದ ವಿಶಿಷ್ಟಶಕ್ತಿಯನ್ನು ಪಡೆದ ಇಂತಹ ಯೋಗಿಗಳು ದೇವರನ್ನು ಧರ್ಮ ಮೋಕ್ಷಗಳನ್ನೂ ಕಂಡಿದ್ದಾರೆಂದು ಹೇಳಲು ಸಾಧ್ಯ.

ಆದರೆ ಇಂತಹ ಅತೀಂದ್ರಿಯ ಶಕ್ತಿಯನ್ನು ಅಲ್ಲಗಳೆಯುವ ನಾಸ್ತಿಕರು ಆಸ್ತಿಕರಿಗೆ ಮೋಕ್ಷಸುಖವು ದೊರೆಯುವುದಿಲ್ಲವೆಂಬುದನ್ನು ಪ್ರತ್ಯಕ್ಷದಿಂದ ಕಾಣಲು ಸಾಧ್ಯವೇ? ಕಠಿಣ ಸಾಧನೆಗೈದು ದೇವತಾಸಾಕ್ಷಾತ್ಕಾರವನ್ನು ಪಡೆದ ಅನೇಕ ಮಹಾಪುರುಷರು ದೇವರು, ಮೋಕ್ಷ, ಧರ್ಮಗಳ ಬಗ್ಗೆ ಅಧಿಕಾರವಾಣಿಯಿಂದ ಹೇಳುತ್ತಿರುವಾಗ ಅದನ್ನು ನಾವು ನಿರಾಕರಿಸಲಾರೆವು. ಅವರು ನೀಡುವ ವರಗಳು, ಅವರು ಮಾಡುವ ಪವಾಡಗಳು ಅವರ ಅಸಾಮಾನ್ಯಶಕ್ತಿಗೆ ನಿದರ್ಶನಗಳಾಗಿವೆ. ಪುರಾಣಗಳಲ್ಲಿಯೂ ಪ್ರತ್ಯಕ್ಷದಲ್ಲಿಯೂ ಇಂತಹ ಅನೇಕ ಉದಾಹರಣೆಗಳಿರುವಾಗ ಸಾಮಾನ್ಯಜನರ ಭೌತಿಕ ದೃಷ್ಟಿಗೆ ಗೋಚರವಾಗಿಲ್ಲವೆಂದು ಅತೀಂದ್ರಿಯವಸ್ತುಗಳನ್ನು ಅಲ್ಲಗಳೆಯುವುದು ಸರಿಯಲ್ಲ. ಶ್ರೀಮದಾಚಾರ್ಯರೇ ತಮ್ಮ ಜೀವನದಲ್ಲಿ ಇಂತಹ ಅನೇಕ ಶಕ್ತಿಗಳನ್ನು ತೋರಿಸಿರುವುದನ್ನು ಇಲ್ಲಿ ಉಲ್ಲೇಖಿಸಬಹುದು. ಭೌತಿಕ ಸುಖಭೋಗವೇ ಜೀವನದ ಪರಮಪುರುಷಾರ್ಥವೆನ್ನುವ ನಾಸ್ತಿಕ್ಯದರ್ಶನದಿಂದ ಎಲ್ಲಾ ನೈತಿಕಮೌಲ್ಯಗಳೇ ಕುಸಿದು ಹೋಗಿ ಸಾಮಾಜಿಕವ್ಯವಸ್ಥೆಗೆ ಎಂತಹ ಹಾನಿಯಾಗಬಹುದೆಂಬುದನ್ನು ನಾಸ್ತಿಕ್ಯವಾದದ ಸಮೀಕ್ಷೆಯಲ್ಲಿ ಈಗಾಗಲೇ ವಿಶದೀಕರಿಸಿದ್ದೇವೆ.

ಮುಕ್ತಿ ಮತ್ತು ಅದರ ಸಾಧನೆಯ ವಿಷಯದಲ್ಲಿ ವೇದವೇ ನಮಗೆ ಪರಮ ಪ್ರಮಾಣ. ಅದರಲ್ಲಿ ಹೇಳಿದಂತೆ ಮುಕ್ತಿಯ ಸ್ವರೂಪವನ್ನು ಅದರ ಸಾಧನೆಯನ್ನು ನಾವು ತಿಳಿದುಕೊಳ್ಳಬೇಕು. ಸಂಸಾರದಲ್ಲಿ ಎಲ್ಲರೂ ದುಃಖಪರಂಪರೆಯನ್ನು ಅನುಭವಿಸುತ್ತಲೇ ಇರುವಾಗ ಕೆಲವರು ಈ ದುಃಖಸಂತತಿಯಿಂದ ಒಮ್ಮಲೇ ಬಿಡುಗಡೆ ಹೊಂದುತ್ತಾರೆಂಬುದನ್ನು ಕೇವಲ ಯುಕ್ತಿಯಿಂದ ನಿರ್ಧರಿಸಲಾರೆವು. ಪ್ರತ್ಯಕ್ಷ ಮತ್ತು ನಿರ್ದುಷ್ಟವಾಕ್ಯವನ್ನು ಅವಲಂಬಿಸಿಯೇ ಯುಕ್ತಿಯು ವಿಷಯವನ್ನು ತಿಳಿಸಿಕೊಡುತ್ತದೆ. ಅಂತಹ ಪ್ರತ್ಯಕ್ಷ ಮತ್ತು ವಾಕ್ಯಗಳ ಬೆಂಬಲವಿಲ್ಲದೆ, ಕೇವಲ ಯುಕ್ತಿಯಿಂದ ಮುಕ್ತಿ ಮತ್ತು ಅದರ ಸಾಧನೆಯನ್ನು ತಿಳಿದುಕೊಳ್ಳಲಾರೆವು.

ದರ್ಶನಕಾರರ ವಾಕ್ಯಗಳಿಂದ ಇದನ್ನು ನಿರ್ಧರಿಸಲು ಇರುವ ತೊಂದರೆಯನ್ನು ಈಗಾಗಲೇ ವಿವರಿಸಿದ್ದೇವೆ. ಅನೇಕ ದರ್ಶನಕಾರರು ಪರಸ್ಪರ ವಿರುದ್ಧವಾಗಿ ಹೇಳುತ್ತಿರುವಾಗ ನಾವು ಯಾರ ಮಾತಿನಂತೆ ನಡೆಯಬೇಕು? ಆದುದರಿಂದ ಅಪೌರುಷೇಯವಾದ ವೇದವನ್ನೇ ಆಧರಿಸಿ ಇದನ್ನು ನಿರ್ಧರಿಸಬೇಕೆಂಬುದು ಹಿಂದೆ ಮಾಡಿದ ಪ್ರತಿಪಾದನೆಯಿಂದ ಸ್ಪಷ್ಟವಾಗಿದೆ. ಆದುದರಿಂದ ಜೈನ, ಬೌದ್ಧ ಮುಂತಾದ ದರ್ಶನಕಾರರು ಯುಕ್ತಿ ಮತ್ತು ತಮ್ಮ ಪೂರ್ವಾಚಾರ್ಯರ ವಚನಗಳಿಂದ ಮುಕ್ತಿ ಮತ್ತು ಅದರ ಸಾಧನೆಯನ್ನು ನಿರೂಪಿಸಿರುವುದು ಸ್ವೀಕಾರಾರ್ಹವಾಗಲಾರದು.

## ಜೈನಸಿದ್ಧಾಂತ ಮೋಕ್ಷಸಾಧನವಿಮರ್ಶೆ

ಆತ್ಮಜ್ಞಾನವೇ ಮುಕ್ತಿಯ ಸಾಧನವೆಂದು ಜೈನದರ್ಶನವು ಹೇಳುತ್ತದೆ. ನಮ್ಮ ಕಷ್ಟಕೋಟಲೆಗಳ ನಿವಾರಣೆಯು ಇವುಗಳಿಂದ ಪೂರ್ಣವಾಗಿ ಮುಕ್ತನಾದ ಭಗವಂತನಿಂದಲೇ ಸಾಧ್ಯವಲ್ಲದೇ, ಈ ದುಃಖಬಂಧನಕ್ಕೆ ಒಳಗಾದ ನಮ್ಮ ಜ್ಞಾನದಿಂದ ಅಲ್ಲ. ಸರ್ವಶಕ್ತನಾದ ಭಗವಂತನು ನಮ್ಮ ಭಕ್ತಿಗೆ ಮೆಚ್ಚಿ ನಮ್ಮ ಮೇಲಿನ ಕರುಣೆಯಿಂದ ಈ ಅನಾದಿಬಂಧವನ್ನು ಕಿತ್ತೊಗೆದು ನಮ್ಮನ್ನು ಅನುಗ್ರಹಿಸಬಲ್ಲನು. ಇಂತಹ ಶಕ್ತಿಯಿಲ್ಲದ ಸ್ವಯಂ ಸಂಸಾರ ಬದ್ಧರಾದ ನಮ್ಮ ಜ್ಞಾನವು ನಮಗೆ ಏನೂ ಉಪಕಾರವನ್ನೂ ಮಾಡಲಾರದು. ಆತ್ಮಜ್ಞಾನವು ಸಂಸಾರಕ್ಕೆ ವಿರೋಧಿ. ಬೆಳಕು ಬಂದ ಕೂಡಲೇ ಕತ್ತಲು ಹರಿದು ಹೋಗುವಂತೆ ಆತ್ಮಜ್ಞಾನದಿಂದ ಸಂಸಾರವು ಏಕೆ ನಾಶಗೊಳ್ಳಬಾರದೆಂದು ಪ್ರಶ್ನಿಸಬಹುದು. ಜ್ಞಾನಿಗಳಾದ ಮಹಾತ್ಮರು ನಮ್ಮ ಮಧ್ಯದಲ್ಲಿಯೇ ಇದ್ದುಕೊಂಡು ತಾವು ಮುಕ್ತಿಗೆ ಹೋಗುವವರೆಗೂ ಸಿದ್ಧಜೀವನವನ್ನು ನಡೆಸುತ್ತಾರೆಂದು ಎಲ್ಲರೂ ಒಪ್ಪಿದ್ದಾರೆ. ಬೆಳಕು ಬಂದ ತಕ್ಷಣವೇ ಕತ್ತಲೆಯು ನಾಶವಾಗುವಂತೆ ಆತ್ಮಜ್ಞಾನದ ಉದಯವಾದ ಕೂಡಲೇ ಸಂಸಾರವು ಮಾಯವಾಗಲೇಬೇಕು. ಹಾಗಿದ್ದರೆ ಜೀವನ್ಮುಕ್ತರು ನಮ್ಮ ಜೊತೆಗೆ ಇರಲು ಹೇಗೆ ಸಾಧ್ಯ? ದೇವರ ಅನುಗ್ರಹದಿಂದ ನಮಗೆ ಮುಕ್ತಿಯಾಗುವುದಿದ್ದರೆ ಸಾಕ್ಷಾತ್ಕಾರದ ನಂತರವೂ ದೇವರ ಅನುಗ್ರಹಕ್ಕಾಗಿ ನಾವು ಕಾಯಬೇಕಾದುದರಿಂದ ಜ್ಞಾನಿಗಳಿಗೆ ಮುಕ್ತಿಯನ್ನು ಪಡೆಯಲು ವಿಲಂಬವಾಗುವುದು ಸಹಜ. ಇಂತಹ ಅನುಗ್ರಹದ ಅಪೇಕ್ಷೆಯಿಲ್ಲದೆ ಜ್ಞಾನಶಕ್ತಿಯಿಂದಲೇ ಮುಕ್ತಿಯು

ದೊರೆಯುವುದಾದರೆ ಈ ವಿಲಂಬವೇಕೆ? ಎಂಬ ಪ್ರಶ್ನೆಗೆ ಉತ್ತರವು ದೊರೆಯಲಾರದು. ಶೂನ್ಯಜ್ಞಾನದಿಂದ ಅಥವಾ ವಿಜ್ಞಾನತತ್ವದ ಜ್ಞಾನದಿಂದ ಮುಕ್ತಿಯು ದೊರೆಯುವುದೆನ್ನುವ ಬೌದ್ಧರೂ ಕೇವಲ ಬ್ರಹ್ಮಜ್ಞಾನದಿಂದ ಮುಕ್ತಿಯನ್ನು ಅಂಗೀಕರಿಸುವ ಅದ್ವೈತವಾದಿಗಳೂ ಈ ಪ್ರಶ್ನೆಯನ್ನು ಎದುರಿಸ ಬೇಕಾಗುತ್ತದೆ. ಜ್ಞಾನವುಂಟಾದರೂ ಪ್ರಬಲವಾದ ಕರ್ಮದ ತಡೆಯಿರುವುದ ರಿಂದ ಜ್ಞಾನಿಗಳು ಕೂಡಲೇ ಮುಕ್ತಿಯನ್ನು ಪಡೆಯುವುದಿಲ್ಲವೆಂದು ಇವರೆಲ್ಲರೂ ಸಮಾಧಾನವನ್ನು ಹೇಳಬಹುದು. ಅನಾದಿಯಾದ ಸಂಸಾರವನ್ನೇ ಕಿತ್ತೊಗೆಯಬಲ್ಲ ಜ್ಞಾನದ ಶಕ್ತಿಗೆ ಈ ಜಡವಾದ ಕರ್ಮವು ಯಾವ ಲೆಕ್ಕಕ್ಕೆ? ಬೆಳಕನ್ನು ಕತ್ತಲೆಯು ತಡೆಯಬಲ್ಲುದೆ? ಬೌದ್ಧ ಮತ್ತು ಅದ್ವೈತ ವೇದಾಂತದಲ್ಲಿ ಕರ್ಮವು ಅಜ್ಞಾನದ ಕಲ್ಪನೆಯಾಗಿದೆ. ಜ್ಞಾನದಿಂದ ವಿಶ್ವಕಲ್ಪನೆಯ ಮೂಲವಾದ ಅಜ್ಞಾನವು ನಾಶಗೊಳ್ಳುವಾಗ ಅದರ ಕೂಸು ಎನಿಸಿದ ಕರ್ಮಗಳು ಹೇಗೆ ಇರಬಲ್ಲವು? ಜ್ಞಾನಿಗಳಾದ ಜೀವನ್ಮುಕ್ತರು ಸಂಸಾರದಲ್ಲಿ ನಮ್ಮ ಮಧ್ಯದಲ್ಲಿ ಹೇಗೆ ಇರಬಲ್ಲರು? ಎಂಬುದನ್ನು ಭಗವದನುಗ್ರಹವನ್ನು ಒಪ್ಪದ ಯಾವ ದರ್ಶನಕಾರರೂ ಉತ್ತರಿಸಲಾರರು.

## ಅಸತ್ಯೋಪಾಸನೆ ಶಾಸ್ತ್ರಸಮ್ಮತವಲ್ಲ

ಅದ್ವೈತದರ್ಶನವು ಮುಕ್ತಿಯನ್ನು ಎರಡು ವಿಧವಾಗಿ ವಿಂಗಡಿಸಿದೆ. ಸಗುಣೋಪಾಸನೆ ಮತ್ತು ಪ್ರತಿಮೆಯನ್ನೇ ಭಗವಂತನೆಂದು ಧ್ಯಾನಿಸುವುದು ಮೊದಲಾದ ವಿಧಾನದಿಂದ ವೈಕುಂಠಾದಿಲೋಕವನ್ನು ಪಡೆಯಬಹುದು. ಇದು ಸಗುಣಮುಕ್ತಿಯೆನಿಸಿದೆ. ವಾಸ್ತವವಾಗಿ ಬ್ರಹ್ಮನು ಜಡವಾದ ಪ್ರತಿಮೆ ಯಲ್ಲ. ಆದರೂ ಆ ರೀತಿಯ ಉಪಾಸನೆಯಿಂದ ಫಲವನ್ನು ಪಡೆಯ ಬಹುದು. ಬ್ರಹ್ಮನು ನಿರ್ಗುಣನಾದರೂ ಅವನನ್ನು ಸಗುಣನೆಂದು ಧ್ಯಾನಿಸುವುದರಿಂದಲೂ ಫಲವನ್ನು ಹೊಂದಬಹುದು. ಉಪಾಸನೆಗೂ ಸತ್ಯಕ್ಕೂ ಸಂಬಂಧವಿಲ್ಲ. ವಸ್ತುಸ್ಥಿತಿಗಿಂತ ವ್ಯತ್ಯಾಸವಾಗಿ ಉಪಾಸನೆಯನ್ನು ಮಾಡಿಯೂ ಸಗುಣಮುಕ್ತಿಯನ್ನು ಪಡೆಯಬಹುದು. ಇನ್ನೊಂದು ವಿಧವಾದ ಮುಕ್ತಿ ನಿರ್ಗುಣಮುಕ್ತಿ. ನಿರ್ಗುಣಮುಕ್ತಿಯೇ ಪ್ರಧಾನವಾದ ಮುಕ್ತಿಯು. ಯಾವ ಗುಣಗಳೂ ಇಲ್ಲದ ಅದ್ವೈತಸ್ಥಿತಿಯು ಆಗ ದೊರೆಯುತ್ತದೆ. ಅದ್ವೈತ ಜ್ಞಾನವೇ ಈ ಮುಕ್ತಿಗೆ ಕಾರಣವೆಂದು ಪ್ರತಿಪಾದಿಸಿದೆ.

ಉಪನಿಷತ್ತಿನಲ್ಲಿಯೂ ಭಾಗವತದಲ್ಲಿಯೂ ಅಸತ್ಯೋಪಾಸನೆಯನ್ನು ಬಲವಾಗಿ ನಿಷೇಧಿಸಿದ್ದಾರೆ. ಸತ್ಯವನ್ನು ಪಡೆಯಲು ಸಾಧನೆಯು ನಿರ್ದುಷ್ಟ ವಾಗಿರಬೇಕು. ಅಸತ್ಯಮಾರ್ಗದಿಂದ ಸತ್ಯವನ್ನು ನಾವು ಪಡೆಯಲಾರೆವು. ಅನ್ಯಥಾಜ್ಞಾನದಿಂದ ಅನರ್ಥವೆಂದು ವೇದವು ಸಾರಿ ಹೇಳಿದೆ. ಆದುದರಿಂದ 'ಪ್ರತಿಮೆಯೇ ಭಗವಂತನು' ಎಂಬ ಅನ್ಯಥಾಜ್ಞಾನದಿಂದ ಶ್ರೇಯಸ್ಸು ದೊರೆಯದು. ಈಗಾಗಲೇ ಪರಮಾತ್ಮನು ಸರ್ವೋತ್ತಮನೆಂದು ಅನೇಕ ರೀತಿಯಿಂದ ಸಮರ್ಥಿಸಿದ್ದರಿಂದ ಅದ್ವೈತಜ್ಞಾನವೂ ಅನ್ಯಥಾಜ್ಞಾನವೇ ಆಗುತ್ತದೆ. ಆದುದರಿಂದ ಅದೂ ಮೋಕ್ಷಸಾಧನವಾಗಲಾರದು.

**ತಾರ್ಕಿಕಮತವಿಮರ್ಶೆ**

ತಾರ್ಕಿಕರು, ಸೇಶ್ವರಸಾಂಖ್ಯರು ಮುಕ್ತಿಗೆ ಭಗವಂತನ ಅನುಗ್ರಹವು ಅವಶ್ಯವೆಂದು ಹೇಳಿದರೂ ಮೋಕ್ಷವನ್ನು ನೀಡುವುದರಲ್ಲಿ ಅದಕ್ಕಿರುವ ಪ್ರಧಾನ ಪಾತ್ರವನ್ನು ಅರ್ಥ ಮಾಡಿಕೊಂಡಿಲ್ಲ. ಧರ್ಮದಿಂದ ನಾವು ಪಡೆಯುವ ಮೋಕ್ಷಕ್ಕೆ ಭಗವಂತನ ಅನುಗ್ರಹವು ಸಹಕಾರಿಯೆಂದು ಕೆಲವರು ಹೇಳಿದರೆ ತಪಸ್ಸು, ಧರ್ಮಾಚರಣೆಯ ಜೊತೆಗೆ ಅನುಗ್ರಹವೂ ಒಂದು ಕಾರಣವೆಂದು ಮತ್ತೆ ಕೆಲವರು ಹೇಳುತ್ತಾರೆ. ಭಗವಂತನ ಅನುಗ್ರಹವೇ ಮುಕ್ತಿಗೆ ಮುಖ್ಯ ವಾದ ಕಾರಣ. ಉಳಿದವುಗಳೆಲ್ಲವೂ ಅದಕ್ಕೆ ಸಹಕಾರಿಯೆನ್ನುವ ವೇದವಾಕ್ಯ ಗಳನ್ನು ಇವರು ಸರಿಯಾಗಿ ಅರ್ಥಮಾಡಿಕೊಂಡಿಲ್ಲ.

ತಾರ್ಕಿಕರು ಇನ್ನೊಂದು ವಿಷಯದಲ್ಲಿಯೂ ಎಡವಿಬಿದ್ದಿದ್ದಾರೆ. ಭಗವಂತನ ಸಾಕ್ಷಾತ್ಕಾರಿಯು ದೇವರ ಅನುಗ್ರಹಬಲದಿಂದ ತನ್ನ ಕರ್ಮ ಗಳನ್ನು ಕಳೆದುಕೊಳ್ಳುತ್ತಾನೆಂದು ಪುರಾಣ, ಉಪನಿಷತ್ತುಗಳಲ್ಲಿ ಅನೇಕ ವಾಕ್ಯಗಳಿವೆ. ತಾರ್ಕಿಕರು ಈ ವಾಕ್ಯಗಳನ್ನು ಅಲಕ್ಷಿಸಿ ಕರ್ಮಗಳನ್ನು ಅನುಭವಿಸದೆ ಅದರ ನಾಶವಾಗುವುದಿಲ್ಲವೆಂದು ಸಾರಿದ್ದಾರೆ. **''ಕ್ಷೀಯಂತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ''** ಎಂದು ಮುಂತಾಗಿ ಭಗವಂತನ ದರ್ಶನದಿಂದ ಕರ್ಮಗಳು ನಾಶವಾಗುತ್ತವೆಯೆಂಬ ಸ್ಪಷ್ಟವಾಕ್ಯಗಳಿರುವಾಗ ಅನುಭವಿಸಿಯೇ ಕರ್ಮನಾಶವಾಗುವುದೆಂಬ ಆಗ್ರಹವೇಕೆ? ಕರ್ಮದ ನಾಶವಾಗಬೇಕಾದರೆ ಅದನ್ನೂ ಅನುಭವಿಸಲೇಬೇಕು. ಕರ್ಮಭೋಗವಿಲ್ಲದೆ ಜ್ಞಾನದಿಂದಲೇ ಕರ್ಮನಾಶವೆನ್ನುವ ಎರಡೂ ತರದ ವಾಕ್ಯಗಳು ಇವೆ. ಈ

ಎರಡೂ ವಾಕ್ಯಗಳನ್ನೂ ಸಮನ್ವಯಿಸುವ ವಿಧಾನವನ್ನು ಆಚಾರ್ಯರು ತೋರಿದ್ದಾರೆ. ಕರ್ಮಗಳಲ್ಲಿ ಎರಡು ವಿಧವಿದೆ. ಯಾವ ಕರ್ಮಸಂಚಯವನ್ನು ನಾವು ಅನುಭವಿಸಲು ಪ್ರಾರಂಭಿಸಿದ್ದೇವೆಯೋ ಅವುಗಳನ್ನು ಪ್ರಾರಬ್ಧಕರ್ಮಗಳೆಂದು ಕರೆಯುತ್ತೇವೆ. ಈ ಕರ್ಮಗಳನ್ನು ನಾವು ಅನುಭವಿಸಲೇಬೇಕು. ಅಪರೋಕ್ಷಜ್ಞಾನಿಗಳಿಗೂ ಇದರಲ್ಲಿ ವಿನಾಯಿತಿಯಿಲ್ಲ. ಅವರೂ ಕರ್ಮಭೋಗದಿಂದಲೇ ತಮ್ಮ ಈ ಪ್ರಾರಬ್ಧಕರ್ಮಗಳ ಜಾಲವನ್ನು ಕಳೆದುಕೊಳ್ಳುತ್ತಾರೆ. ಕ್ಯಾನ್ಸರ್ ಮುಂತಾದ ಪ್ರಬಲರೋಗಗಳು ಸುಪ್ತಾವಸ್ಥೆಯಲ್ಲಿದ್ದರೆ ಅವುಗಳನ್ನು ಔಷಧಸೇವನೆಯಿಂದ ಸುಲಭವಾಗಿ ಕಳೆದುಕೊಳ್ಳಬಹುದು. ಆದರೆ ಅವುಗಳು ಉಲ್ಬಣವಾಗಿ ಪ್ರಕಟವಾಗಿದ್ದರೆ ರೋಗಿಗಳು ಅವುಗಳನ್ನು ಅನುಭವಿಸಲೇಬೇಕಾಗುತ್ತದೆ. ಪ್ರಾರಬ್ಧಕರ್ಮಗಳ ಗ್ರಂಥಿಯು ವ್ಯಕ್ತವಾದ ಖಾಹಿಲೆಯಂತಿದ್ದರೆ ಇನ್ನೂ ಅನುಭವಿಸಲು ಆರಂಭಿಸಿದ ಕರ್ಮಸಂಚಯವನ್ನು ಸುಪ್ತವಾದ ಮಹಾರೋಗಕ್ಕೆ ಹೋಲಿಸಬಹುದು. ''ಕರ್ಮಭೋಗವು ಅನಿವಾರ್ಯ'' ''ಭಗವಂತನ ದರ್ಶನದಿಂದ ಕರ್ಮನಾಶವಾಗುತ್ತದೆ'' ಎಂಬ ಎರಡೂ ವಾಕ್ಯಗಳನ್ನು ಈ ರೀತಿಯಲ್ಲಿ ಶ್ರೀಮದಾಚಾರ್ಯರು ಸಂಯೋಜಿಸಿದ್ದಾರೆ. ಪ್ರಮಾಣವಾಕ್ಯಗಳಿಗೆ, ಅನುಭವಗಳಿಗೆ ಪರಸ್ಪರ ವಿರೋಧವು ತೋರಿದಾಗ ಅವುಗಳನ್ನು ಸಮನ್ವಯಿಸುವುದು ಆಚಾರ್ಯರ ವೈಶಿಷ್ಟ್ಯವಾಗಿದೆ. ಆಚಾರ್ಯರ ಸಿದ್ಧಾಂತದುದ್ದಕ್ಕೂ ಹೆಜ್ಜೆಹೆಜ್ಜೆಗೆ ಈ ಸಮನ್ವಯವಿಧಾನವನ್ನು ನಾವು ಕಾಣಬಹುದು.

ಅನುಭವಿಸಿಯೇ ಕರ್ಮವು ನಾಶಗೊಳ್ಳುತ್ತದೆಯೆಂಬುದನ್ನು ಒಪ್ಪಿದರೆ ನಮ್ಮ ಕರ್ಮಗಳಿಗೆ ಮುಕ್ತಾಯವೇ ಇಲ್ಲದಂತಾಗುವುದು. ಕರ್ಮಗಳನ್ನು ಅನುಭವಿಸುವಾಗಲೂ ಹೊಸ ಕರ್ಮಗಳೂ ಹುಟ್ಟುತ್ತಲೇ ಇರುತ್ತವೆ. ಆ ಕರ್ಮಗಳನ್ನು ಅನುಭವಿಸುವಾಗ ಪುನಃ ಹೊಸ ಕರ್ಮಗಳು. ಹೀಗೆ ಈ ಕರ್ಮಪರಂಪರೆಗೆ ಮುಕ್ತಾಯವೆಲ್ಲಿ? ದುರ್ಗಾದೇವಿಯು ರಕ್ತಬೀಜಾಸುರನನ್ನು ಕೊಲ್ಲುವಾಗ ಅವನ ಒಂದೊಂದು ರಕ್ತಬಿಂದುವಿನಿಂದಲೂ ರಕ್ತಬೀಜಾಸುರರು ಹುಟ್ಟಿ ಅವರ ಸಂತಾನವೂ ಬೆಳೆಯುತ್ತಲೇ ಇದ್ದಂತೆ ಈ ಕರ್ಮಪರಂಪರೆಯೂ ಭೋಗದಿಂದ ಪೂರ್ತಿಯಾಗಿ ನಾಶವಾಗುವ ಬದಲು ಬೆಳೆಯುತ್ತಲೇ ಇರಬೇಕಾಗಬಹುದು. ಆದುದರಿಂದ ಪ್ರಾರಬ್ಧಕರ್ಮದ

ಹೊರತು ಉಳಿದ ಕರ್ಮಗಳು ಭಗವಂತನ ಸಾಕ್ಷಾತ್ಕಾರ ಮತ್ತು ಅವನ ಅನುಗ್ರಹದಿಂದ ನಾಶವಾಗುತ್ತದೆಯೆಂದು ಒಪ್ಪಲೇಬೇಕು.

ಶಿವ, ಗಣೇಶ, ಸ್ಕಂದ, ದುರ್ಗೆ ಮುಂತಾದ ದೇವತೆಗಳ ಅನುಗ್ರಹ ದಿಂದಲೇ ಮುಕ್ತಿಯಾಗುವುದೆಂದು ಬೇರೆ ಬೇರೆ ದರ್ಶನಗಳು ಸಾಧಿಸುತ್ತಿವೆ. ಪುರುಷಸೂಕ್ತದಲ್ಲಿ ಪರಮಪುರುಷನ ಜ್ಞಾನ ಮತ್ತು ಅನುಗ್ರಹದಿಂದಲೇ ಮುಕ್ತಿ, ಬೇರೆ ಯಾವುದರಿಂದಲೂ ಮುಕ್ತಿಯು ದೊರೆಯಲಾರದೆಂದು ಹೇಳಿದೆ. ಪುರುಷಸೂಕ್ತದಲ್ಲಿ ಹೇಳಿದ ಈ ಪುರುಷನು ನಾರಾಯಣನೇ ಆಗಿರುವನು. ನಾರಾಯಣಾನುವಾಕದಲ್ಲಿ ನಾರಾಯಣನನ್ನೇ ಪುರುಷನೆಂದು ಹೇಳಿದೆ. **''ಉತಾಮೃತತ್ವಸ್ಯ ಈಶಾನಃ''** ಎಂಬುದಾಗಿ ಪುರುಷಸೂಕ್ತದಲ್ಲಿ ಮುಕ್ತರಿಗೆ ನಿಯಾಮಕನೆಂಬುದಾಗಿ ಪುರುಷನನ್ನು ವರ್ಣಿಸಿದೆ. **'ಮುಕ್ತಾನಾಂ ಪರಮಾ ಗತಿಃ'** ಎಂದು ವರ್ಣಿಸಲಾದ ವಿಷ್ಣುವೇ ಈ ಪುರುಷನೆಂದು ಇದರಿಂದ ಸ್ಪಷ್ಟವಾಗುತ್ತದೆ. ಗೀತೆಯ ಹದಿನೈದನೆಯ ಅಧ್ಯಾಯದಲ್ಲಿ ಪುರುಷೋತ್ತಮ ನೆಂದು ಪ್ರಸಿದ್ಧನಾದ ಶ್ರೀಹರಿಯನ್ನು ಬಿಟ್ಟು ಪುರುಷಸೂಕ್ತವು ಬೇರೆ ಯಾರನ್ನೂ ಪುರುಷನೆಂದು ಹೇಳಲಾರದು. ಅಂತಹ ಪರಮಪುರುಷನಾದ ಶ್ರೀವಿಷ್ಣುವಿನ ಅನುಗ್ರಹದಿಂದಲ್ಲದೇ ಬೇರೆ ಯಾವ ದೇವತೆಗಳಿಂದಲೂ ಮೋಕ್ಷವು ದೊರೆಯಲಾರದು.

**''ಪುರುಷ ಏವೇದಂ ಸರ್ವಂ''**

ಪುರುಷಸೂಕ್ತವನ್ನು ನೋಡಿದಾಗ ನಮಗೆ ಒಂದು ಸಂದೇಹವುಂಟಾಗು ತ್ತದೆ. **''ಪುರುಷ ಏವೇದಂ ಸರ್ವಂ''** ಎಂಬುದಾಗಿ ಈ ಜಗತ್ತೆಲ್ಲವೂ ಪುರುಷನೇ ಎಂದು ಅಲ್ಲಿ ಹೇಳಿದೆ. ಜಗತ್ತಿಗೂ ಪುರುಷನಿಗೂ ಅಭೇದವನ್ನು ಅದು ಹೇಳಿರುವಾಗ ಪುರುಷನು ಮುಕ್ತರಿಗೆ ನಿಯಾಮಕನೆಂದು ಆ ಸೂಕ್ತವು ಹೇಗೆ ಹೇಳಬಲ್ಲುದು. ಪೂರ್ವಾಪರವಿರೋಧವಾಗುವುದಿಲ್ಲವೇ?

ಪುರುಷನೇ ಈ ಜಗತ್ತು ಎಂಬ ವಾಕ್ಯವು ಜಗತ್ತಿಗೂ ಪುರುಷನಿಗೂ ಅಭೇದವನ್ನು ಹೇಳುವುದಿಲ್ಲ. ಜಗತ್ತು ಭಗವಂತನ ಅಧೀನವೆಂಬುದೇ ಅದರ ಅರ್ಥ.

ಆಳರಸರನ್ನೂ, ರಾಜಕೀಯನಾಯಕರನ್ನೂ ಹೊಗಳುವ ಭರದಲ್ಲಿ 'ಈ

ರಾಷ್ಟ್ರವೆಂದರೆ ಅವರೇ' ಎಂದು ಹೇಳುವುದುಂಟು. ರಾಷ್ಟ್ರವು ಅವರ ಅಧೀನ ಎಂಬ ಅರ್ಥದಲ್ಲಿ ಈ ಮಾತನ್ನು ಬಳಸುವಂತೆ ಇದೆಲ್ಲವೂ ಭಗವಂತನೇ ಎಂಬ ವಾಕ್ಯವೂ ಭಗವಂತನ ಸಾರ್ವಭೌಮತೆಯನ್ನೇ ಹೇಳುತ್ತದೆ. ಮುಂದಿನ ವಾಕ್ಯದಲ್ಲಿ ಭಗವಂತನು ಸಂಸಾರಿಗಳನ್ನು ಮೀರಿದವನು. ಮುಕ್ತರಿಗೂ ನಿಯಾಮಕನು ಎಂದು ಹೇಳಿ ಆದಕ್ಕೆ ಪೂರ್ಣ ವ್ಯತಿರಿಕ್ತವಾಗಿ ಜಗತ್ತೇ ಪರಮಾತ್ಮನೆಂಬ ವಿಚಾರವನ್ನು ಮೊದಲಿನ ವಾಕ್ಯ ಹೇಳಲಾರದು. **''ಏತಾವಾನಸ್ಯ ಮಹಿಮಾ''** ಎಂಬುದಾಗಿ ಪರಮಾತ್ಮನ ಮಹಾಮಹಿಮೆಯನ್ನು ಹೇಳುತ್ತಾ ಈ ಜಡ ಜಗತ್ತೇ ಅವನು ಎಂಬುದಾಗಿ ಅವನ ಮಹಿಮೆಗೆ ಭಂಗಬರುವ ಮಾತನ್ನು ಈ ಮಂತ್ರವು ಹೇಳಲಾರದು. ಅಂತೂ ಮುಕ್ತರಿಗೂ, ಅಮುಕ್ತರಿಗೂ ನಿಯಾಮಕನಾಗಿರುವ ನಾರಾಯಣನ ಅನುಗ್ರಹದಿಂದಲೇ ಮುಕ್ತಿಯೆಂದು ಈ ಪುರುಷಸೂಕ್ತವನ್ನು ಸರಿಯಾಗಿ ಪರಿಶೀಲಿಸಿದಾಗ ನಮಗೆ ವೇದ್ಯವಾಗುತ್ತದೆ.

ಯಜ್ಞಯಾಗಾದಿಕರ್ಮಗಳನ್ನು ನಿರಂತರವಾಗಿ ಆಚರಿಸುತ್ತಿದ್ದರೆ ಅದರಿಂದಲೇ ಮುಕ್ತಿಯನ್ನು ಪಡೆಯಬಹುದೆಂದು ಭಾಟ್ಟದರ್ಶನವು ಹೇಳುತ್ತದೆ. ಜ್ಞಾನ, ಕರ್ಮಗಳೆರಡೂ ಸಮಾನವಾಗಿ ಮುಕ್ತಿಗೆ ಕಾರಣವೆಂದೂ ಕೆಲವರು ಹೇಳುತ್ತಾರೆ. ಜ್ಞಾನದಿಂದಲೇ ಭಗವಂತನ ಅನುಗ್ರಹದ ಮುಖಾಂತರವಾಗಿ ಮುಕ್ತಿಯಾಗುವುದೆಂಬ ನಿಃಸಂದಿಗ್ಧವಾಕ್ಯಗಳಿರುವಾಗ ಇಂತಹ ಯಾವ ವಿಚಾರಗಳೂ ಮಾನ್ಯವಾಗಲಾರವು. ಆದರೆ ಈಗ ಮಾಡುವ ಕರ್ಮಗಳು ಅಂತಃಕರಣ ನೈರ್ಮಲ್ಯವನ್ನು ಸಾಧಿಸಿ ಈ ಶುದ್ಧ ಅಂತಃಕರಣದಲ್ಲಿ ಜ್ಞಾನವುಂಟಾಗಲು ಸಹಾಯಕವಾಗುತ್ತವೆ. ಆ ಜ್ಞಾನದಿಂದಲೇ ಭಗವಂತನ ಅನುಗ್ರಹವನ್ನು ಪಡೆದು ಮುಕ್ತಿಯನ್ನು ಹೊಂದುವೆವು. ಈ ಜ್ಞಾನವನ್ನು ಪಡೆದ ಮೇಲೂ ಮುಕ್ತಿಯು ದೊರೆಯುವವರೆಗೆ ಸಾಧಕರು ಭಗವತ್ ಸೇವಾರೂಪವಾದ ನಿಷ್ಕಾಮಕರ್ಮವನ್ನು ಮುಂದುವರಿಸುತ್ತಾರೆ. ಇದು ಮುಕ್ತಿಯಲ್ಲಿ ಜೀವರಿಗೆ ಆನಂದಾತಿಶಯವು ದೊರೆಯಲು ಸಾಧನವಾಗುತ್ತದೆ ಯೆಂಬ ವಿಶೇಷಾಂಶವನ್ನು ನಾವು ತಿಳಿದುಕೊಳ್ಳಬೇಕು.

ಇಷ್ಟರವರೆಗಿನ ವಿಚಾರಮಂಥನದಿಂದ ಸಕಲಶಬ್ದವಾಚ್ಯನೂ ಅನಂತಗುಣಪೂರ್ಣನೂ ಸರ್ವೋತ್ತಮನೂ ಆದ ಶ್ರೀವಿಷ್ಣುವಿನ ಜ್ಞಾನ ಮತ್ತು

ಅನುಗ್ರಹವೇ ಮೋಕ್ಷಸಾಧನ, ಬೇರೆ ಬೇರೆ ದರ್ಶನಗಳು ತೋರಿದ ದಾರಿಯು ಮುಕ್ತಿಗೆ ನಮ್ಮನ್ನು ಕರೆದೊಯ್ಯಲಾರದು ಎಂಬ ವಿಚಾರವು ವಿಶದವಾಗಿದೆ.

## ಗುರುಗಳ ಅನುಗ್ರಹವೂ ಬೇಕು

ಶ್ರೀಹರಿಯು ಸರ್ವೋತ್ತಮನೆನ್ನುವ ಜ್ಞಾನದ ಜೊತೆಗೆ, ಮುಖ್ಯ ಪ್ರಾಣನು ಸರ್ವಜೀವೋತ್ತಮನು ಎಂಬ ಪರಿಜ್ಞಾನವು ನಮಗೆ ಆವಶ್ಯಕ. ಪುಷ್ಕರನಿಂದ ಆರಂಭಿಸಿ ಗರುಡ, ಶೇಷ, ರುದ್ರ, ಭಾರತೀ, ಸರಸ್ವತೀ, ವಾಯು, ಚತುರ್ಮುಖ ಬ್ರಹ್ಮದೇವರವರೆಗಿನ ತಾರತಮ್ಯಪರಿಜ್ಞಾನವೂ ಅವಶ್ಯ ವೆಂಬುದನ್ನು ಇಲ್ಲಿ ತಿಳಿಸಿದ್ದಾರೆ. ಶ್ರವಣ, ಮನನ, ಧ್ಯಾನ ಮುಂತಾದ ನಮ್ಮ ಪ್ರಯತ್ನದ ಜೊತೆಗೆ ಗುರುಗಳ ಅನುಗ್ರಹವೂ ಮುಕ್ತಿಯನ್ನು ಪಡೆಯಲು ಅತ್ಯಂತ ಆವಶ್ಯಕ. ಅಂತಹ ಉತ್ತಮಗುರುಗಳನ್ನು ಹುಡುಕಿ, ಅವರಿಂದ ಜ್ಞಾನವನ್ನು ಪಡೆದು, ಅವರ ಅನುಗ್ರಹಕ್ಕೆ ಪಾತ್ರರಾಗಲು ನಾವು ಪ್ರಯತ್ನಿಸಬೇಕು. ನಮಗಿಂತ ಉತ್ತಮರೆಲ್ಲರೂ ಗುರುಗಳೇ. ಎಲ್ಲರಿಗಿಂತ ಬ್ರಹ್ಮದೇವರು ಶ್ರೇಷ್ಠಗುರುಗಳು. ಪ್ರತಿಯೊಬ್ಬರೂ ಮುಕ್ತಿಯನ್ನು ಪಡೆಯುವ ಮೊದಲು ಚತುರ್ಮುಖ ಬ್ರಹ್ಮದೇವರಿಂದ ಉಪದೇಶವನ್ನು ಪಡೆಯಲೇ ಬೇಕು, ಎಂದು ಮುಂತಾಗಿ ಸಾಧನೆಯ ಬೇರೆ ಬೇರೆ ಮುಖಗಳನ್ನು ಇಲ್ಲಿ ವಿವರಿಸಿದ್ದಾರೆ.

ಪರಮಾತ್ಮನ ಅನುಗ್ರಹದಿಂದಲೇ ನಾವು ಮುಕ್ತಿಯನ್ನು ಪಡೆಯುವು ದಾದರೂ ನಾವು ಮಾಡಬಹುದಾದ ಸಾಧನೆಗಳಲ್ಲಿ ಭಕ್ತಿಯೇ ಪ್ರಧಾನವು. ಭಗವಂತನಲ್ಲಿ ಮತ್ತು ನಮಗಿಂತ ಉತ್ತಮರಲ್ಲಿ ಈ ಭಕ್ತಿಭಾವ ಬೆಳೆಯುತ್ತಾ ಇರಬೇಕು. ಮುಕ್ತಿಯನ್ನು ಪಡೆಯುವವರೆಗೂ ಈ ಭಕ್ತಿವಾಹಿನಿಯು ನಿರಂತರವಾಗಿ ಪ್ರವಾಹರೂಪವಾಗಿ ಹರಿಯುತ್ತಿರಬೇಕು. ಕೊನೆಗೆ ನಾವು ಭಕ್ತಿಯ ಸ್ವರೂಪವೇ ಆಗುತ್ತೇವೆ. ಭಕ್ತಿಯು ಈಗ ನಮ್ಮ ಬಾಹ್ಯವಾದ ಮಾನಸಿಕ ಭಾವನೆಯಾಗಿದ್ದರೆ, ಮುಕ್ತಿಯಲ್ಲಿ ನಮ್ಮ ಅವಿಭಾಜ್ಯ ಧರ್ಮವೇ ಆಗುತ್ತದೆ. ಕೊನೆಯವರೆಗೂ ನಾವು ಭಗವಂತನ ಭಕ್ತರೇ ಆಗಿರಬೇಕು. ನಾವು ಭಗವಂತನಿಗೆ ಸಮಾನರು, ಅಥವಾ ನಾವೇ ಪರಬ್ರಹ್ಮರಾಗಿದ್ದೇವೆಂಬ ಭಾವನೆಗೆ ಎಂದೆಂದಿಗೂ ಅವಕಾಶವನ್ನು ನೀಡಬಾರದು.

**ಇಲ್ಲಿಗೆ ತೃತೀಯಾಧ್ಯಾಯದ ತೃತೀಯಪಾದ ಮುಗಿಯಿತು.**

# ತೃತೀಯಾಧ್ಯಾಯದ ಚತುರ್ಥಪಾದ

## ಜ್ಞಾನಿಗಳು ಮಾಡಿದ ದುಷ್ಕರ್ಮದ ಫಲ

ಭಗವಂತನ ಸಾಕ್ಷಾತ್ಕಾರವು ನಮಗೆ ಮೋಕ್ಷವನ್ನು ಮಾತ್ರ ಕೊಡುವುದಿಲ್ಲ. ಇತರ ಎಲ್ಲಾ ಪುರುಷಾರ್ಥಗಳನ್ನೂ ಜ್ಞಾನದ ಶಕ್ತಿಯಿಂದ ಸಿದ್ಧಪುರುಷರು ಪಡೆಯಬಲ್ಲರು. ಅಪರೋಕ್ಷಜ್ಞಾನಿಗಳಿಂದ ಯಾವುದೇ ಕೆಟ್ಟ ಕೃತಿಗಳು ಸಂಭವಿಸುವುದಿಲ್ಲ. ಅಕಸ್ಮಾತ್ ಅಂತಹ ಕೃತಿಗಳು ಸಂಭವಿಸಿದರೂ ಅವರಿಗೆ ಅದರಿಂದ ನರಕಾದ್ಯನರ್ಥಗಳು ಉಂಟಾಗುವುದಿಲ್ಲ. ಬ್ರಹ್ಮದೇವರಂತೂ ಎಂದೆಂದಿಗೂ ಕೆಟ್ಟಕೃತಿಗಳನ್ನು ಮಾಡುವುದಿಲ್ಲ. ಇತರ ದೇವತೆಗಳಿಂದಲೂ ಇಂತಹ ನಿಷಿದ್ಧಕಾರ್ಯಗಳು ಪ್ರಾಯಃ ಸಂಭವಿಸುವುದಿಲ್ಲ. ಕೆಲವೊಮ್ಮೆ ಅಸುರಾವೇಶದಿಂದ ತಮಗಿಂತ ಶ್ರೇಷ್ಠರಿಗೆ ಅವರು ಅಪಚಾರ ಮಾಡುವ ಸಂಭವವಿದೆ. ಇಂತಹ ಅಕೃತ್ಯಗಳಿಂದ ಅವರು ನರಕಭಾಗಿಗಳಾಗುವುದಿಲ್ಲ. ಅವರು ಮಾಡಿದ ವಿಶೇಷಸಾಧನೆಗಳಿಂದ ತಮ್ಮ ಸಹಜವಾದ ಸ್ವರೂಪಾನಂದಕ್ಕಿಂತಲೂ ಮಿಗಿಲಾದ, ತಮ್ಮ ವ್ಯಕ್ತಿತ್ವದಲ್ಲಿ ಅಡಗಿದ ಆನಂದಕ್ಕಿಂತಲೂ ಹೆಚ್ಚಿನದನ್ನು ಅವರು ಪಡೆಯಬೇಕಾದ ಸಂದರ್ಭ ಒದಗಿತ್ತು. ಆದರೆ ತಮ್ಮ ಸ್ವರೂಪದಲ್ಲಿಯೇ ಇಲ್ಲದ ಆನಂದವನ್ನು ಅವರು ಮುಕ್ತಿಯಲ್ಲಾದರೂ ಹೇಗೆ ಪಡೆಯಲು ಸಾಧ್ಯ? ಮುಕ್ತಿಯಲ್ಲಿ ಬಾಹ್ಯ ಆನಂದಕ್ಕೆ ಅವಕಾಶವೇ ಇಲ್ಲ. ದೇವತೆಗಳು ತಮ್ಮ ವಿಶೇಷಸಾಧನೆಗಳಿಂದ ಪಡೆಯಬಹುದಾದ, ಆದರೂ ತಮ್ಮ ವ್ಯಕ್ತಿತ್ವದಲ್ಲಿ ಇಲ್ಲದ ಆನಂದವನ್ನು ತಾವು ಮಾಡಿದ ಇಂತಹ ಅಕೃತ್ಯಗಳಿಂದ ಕಳೆದುಕೊಳ್ಳುತ್ತಾರೆ. ಜ್ಞಾನಿಗಳಾದ ದೇವತೆಗಳಿಗೆ ತಮ್ಮಲ್ಲಿ ಇದ್ದದ್ದು ಯಾವುದೂ ಅಳಿಯುವುದಿಲ್ಲ. ಇಲ್ಲದೇ ಇದ್ದುದನ್ನು ತಮ್ಮ ಸಾಧನೆಗಳಿಂದ ಪಡೆಯಲು ಈ ಅಕೃತ್ಯಗಳು ತಡೆಯುತ್ತವೆ. ಜೀವರ ವ್ಯಕ್ತಿತ್ವದಲ್ಲಿರುವ ಸಮತೋಲನವನ್ನು ಕಾಪಾಡಲು ಈ ವ್ಯವಸ್ಥೆಯಿದೆ. ಹೀಗೆ ಜ್ಞಾನಿಗಳಾದ ದೇವತೆಗಳು ತಮ್ಮ ಅಕೃತ್ಯದಿಂದ ಯಾವ ನಷ್ಟವನ್ನೂ ಹೊಂದುವುದಿಲ್ಲ. ಇದು ಸಾಕ್ಷಾತ್ಕಾರದ ವಿಶೇಷ ಶಕ್ತಿಯಾಗಿದೆ.

ಉಳಿದವರಿಗೆ ಇಂತಹ ಅಕೃತ್ಯಗಳಿಂದ ತಾವು ತಮ್ಮ ವ್ಯಕ್ತಿತ್ವದಲ್ಲಿ ಇರುವ ಸ್ವರೂಪಾನಂದದ ಕೆಲವಂಶವನ್ನು ಕೆಲಕಾಲದವರೆಗೆ ಅನುಭವಿಸಲಾರದ

ಸ್ಥಿತಿಯು ಉಂಟಾಗುತ್ತದೆ. ಜ್ಞಾನಿಗಳಿಗೆ ನರಕಭೋಗದಂತಹ ಅನಿಷ್ಟವು ಸರ್ವಥಾ ಇಲ್ಲ. ಎಂತಹ ಅಕೃತ್ಯಗಳು ಜ್ಞಾನಿಗಳಿಂದ ನಡೆದರೂ ಅದು ಮೋಕ್ಷಕ್ಕೆ ಎರವಾಗುವುದಿಲ್ಲ. ಮುಕ್ತಿಯು ಅವರಿಗೆ ಖಚಿತವಾಗಿ ದೊರೆಯುತ್ತದೆ. ಆದರೆ ಈ ಹಿಂದೆ ತಿಳಿಸಿದಂತೆ ಪ್ರಾರಬ್ಧಕರ್ಮಗಳನ್ನು ಅನುಭವಿಸಿ ಕಳೆದುಕೊಳ್ಳುವ ವರೆಗೆ ಅವರು ಕಾಯಲೇಬೇಕು. ಅಲ್ಲಿಯವರೆಗೆ ಅವರು ಜೀವನ್ಮುಕ್ತರಾಗಿ, ಉಳಿದ ಸಂಸಾರಿಗಳಿಗೆ ಮಾರ್ಗದರ್ಶನ ತತ್ತ್ವೋಪದೇಶಗಳನ್ನು ನೀಡುತ್ತಾ, ಭಗವಂತನ ಮತ್ತು ಸಂಸಾರಿಗಳ ಮಧ್ಯವರ್ತಿಗಳಾಗಿ ಸಾಧನೆಗಳನ್ನು ನಡೆಸುತ್ತಾರೆ. ಬ್ರಹ್ಮಜ್ಞಾನದ ಅಚಿಂತ್ಯಮಹಿಮೆಯಿಂದ ಪ್ರಾರಬ್ಧ ಕರ್ಮಗಳೂ, ಉಳಿದ ಕರ್ಮಗಳ ಜೊತಗೆ ನಾಶವಾಗುತ್ತವೆಯೆಂದು ಕೆಲವರು ಹೇಳುತ್ತಾರೆ. ಹಾಗಾದರೆ ಈ ಸಂಸಾರದಲ್ಲಿ ಜ್ಞಾನಿಗಳಾದ ಸಿದ್ಧಪುರುಷರು ಯಾರೂ ಉಳಿಯದೆ, ಭಗವಂತನಿಗೂ ಸಂಸಾರಿಗಳಿಗೂ ಸಂಪರ್ಕಮಾಧ್ಯಮವೇ ಇಲ್ಲದಂತಾಗುವುದು. ಆದುದರಿಂದ ಪ್ರಾರಬ್ಧಕರ್ಮವನ್ನು ಅನುಭವಿಸುವ ವರೆಗೆ ಜ್ಞಾನಿಗಳು ಮುಕ್ತಿಯನ್ನು ಪಡೆಯುವುದಿಲ್ಲ. ಆದರೂ ಕರ್ಮದಿಂದ ಅಜ್ಞಾನಿಗಳಿಗೆ ಅನುಭವಿಸುವ ದುಃಖವನ್ನು ಜ್ಞಾನಿಗಳು ಅನುಭವಿಸುವುದಿಲ್ಲ. ಜ್ಞಾನಿಗಳು ಪ್ರಾರಬ್ಧಕರ್ಮವನ್ನು ಅನುಭವಿಸುವುದು ಅನಿವಾರ್ಯವಾದರೂ ಜ್ಞಾನದ ಶಕ್ತಿಯಿಂದ ಉಳಿದವರಿಗಿಂತ ಅವರ ದುಃಖವು ಕಡಿಮೆಯಾಗುತ್ತದೆ. ನೋವಿದ್ದರೂ ಔಷಧದಿಂದ ಅದರ ವೇದನೆಯು ಕಡಿಮೆಯಾಗುವಂತೆ ಜ್ಞಾನದ ಶಕ್ತಿಯಿಂದ ಅನುಭವಿಗಳು ತಮ್ಮ ನೋವನ್ನು ಕಡಿಮೆಮಾಡಿಕೊಳ್ಳ ಬಲ್ಲರು. ಇದನ್ನೇ ಪ್ರಾರಬ್ಧಕರ್ಮದ ಉಪಮರ್ದವೆಂದು ಬ್ರಹ್ಮಸೂತ್ರವು ಹೇಳಿದೆ. ಹೀಗೆ ಅಪರೋಕ್ಷಜ್ಞಾನದ ಮಹಿಮೆಯ ಅನೇಕ ಮುಖಗಳನ್ನು ಇಲ್ಲಿ ನಿರೂಪಿಸಲಾಗಿದೆ.

### ಆನಂದತಾರತಮ್ಯ

ಮುಕ್ತಿಯಲ್ಲಿ ಎಲ್ಲರೂ ಅನುಭವಿಸುವ ಆನಂದವು ಏಕರೂಪವೇ? ಅಥವಾ ಅದರಲ್ಲಿ ತಾರತಮ್ಯವಿದೆಯೇ? ಎಂಬ ಮಹತ್ತರವಿಷಯವನ್ನು ಇನ್ನು ಮುಂದೆ ವಿಮರ್ಶಿಸಿದ್ದಾರೆ. ಮುಕ್ತಿಯ ಆನಂದದಲ್ಲಿ ಯಾವ ಅಂತರವೂ ಇಲ್ಲ. ಎಲ್ಲರೂ ಒಂದೇ ರೀತಿಯ ಆನಂದವನ್ನು ಅನುಭವಿಸುತ್ತಾರೆಂದು ರಾಮಾನುಜರು ಹೇಳುತ್ತಾರೆ. ಆದರೆ ತೈತ್ತಿರೀಯ ಮತ್ತು ಬೃಹದಾರಣ್ಯಕ

ಉಪನಿಷತ್ತುಗಳಲ್ಲಿ ದೇವತೆಗಳ ಆನಂದದ ತಾರತಮ್ಯವನ್ನು ವಿಸ್ತಾರವಾಗಿ ವರ್ಣಿಸಲಾಗಿದೆ. ಒಬ್ಬ ದೇವತೆಗಿಂತ ಇನ್ನೊಬ್ಬ ದೇವತೆಯ ಆನಂದವು ನೂರುಪಾಲು ಹೆಚ್ಚು ಎಂದು ಮುಂತಾಗಿ ಅವುಗಳ ಬೇರೆ ಬೇರೆ ಸ್ತರಗಳನ್ನು ವಿವರಿಸಲಾಗಿದೆ. ಇದು ಸಂಸಾರದಲ್ಲಿ ಈ ದೇವತೆಗಳಿಗೆ ಇರುವ ತಾರತಮ್ಯದ ವರ್ಣನೆಯೆಂದು ಹೇಳಬಹುದಲ್ಲವೇ? ಎಂದು ವಾದಿಸಬಹುದು. ಇಲ್ಲಿ ಒಂದು ವಾಕ್ಯದಲ್ಲಿ ದೇವತೆಗಳಿಗೆ ತಾರತಮ್ಯವನ್ನು ಹೇಳಿ, ಇನ್ನೊಂದು ವಾಕ್ಯದಲ್ಲಿ ಯಾವ ಕಾಮನೆಯ ಉಪದ್ರವವಿಲ್ಲದ ಅವಸ್ಥೆಯಲ್ಲಿಯೂ ದೇವತೆಗಳಲ್ಲಿ ಇದೇ ತಾರತಮ್ಯವಿದೆಯೆಂದು ಹೇಳಲಾಗಿದೆ. ಕಾಮನೆಯ ಉಪದ್ರವವಿಲ್ಲವೆಂದರೆ ತನ್ನ ಕಾಮನೆಯೆಲ್ಲಾ ಪೂರ್ಣಗೊಂಡಿದೆಯೆಂದೇ ಅರ್ಥವಾಗುತ್ತದೆ. ಮುಕ್ತಿಯ ಹೊರತು ಬೇರೆಲ್ಲಿಯೂ ಈ ಸ್ಥಿತಿಯು ಬರಲಾರದು. ಈ ಆನಂದದ ತಾರತಮ್ಯವನ್ನು ಪಡೆದ ಜೀವರನ್ನು **''ಅವೃಜಿನಃ''** ಪಾಪಮುಕ್ತರೆಂದೂ ಹೇಳಿದೆ. ಅಜ್ಞಾನ ಹಾಗೂ ಪಾಪಗಳ ಬಂಧನಕ್ಕೆ ಒಳಗಾದ ಸಂಸಾರಿಗಳು ಯಾರೂ ಪಾಪಮುಕ್ತರೆನಿಸಲಾರರು. ಹೀಗೆ. **''ಅಕಾಮಹತ''** **''ಅವೃಜಿನ''** ಮುಂತಾದ ಅನೇಕ ಪದಗಳು ಈ ಎರಡೂ ಉಪನಿಷತ್ತುಗಳ ಆನಂದ ತಾರತಮ್ಯದ ವರ್ಣನೆಯ ಭಾಗದಲ್ಲಿ ಇವೆ. ಆದುದರಿಂದ ಇದು ಕೇವಲ ಸಂಸಾರಿಗಳ ವರ್ಣನೆಯಲ್ಲ. ಸಂಸಾರದಲ್ಲಿ ಜೀವರಿಗೆ ಆನಂದದ ಅಂತರವನ್ನು ಹೇಳಿ, ಮುಕ್ತಿಯಲ್ಲಿಯೂ ಇದೇ ರೀತಿಯಲ್ಲಿ ಅಂತರವು ಮುಂದುವರಿಯುತ್ತದೆಯೆಂದು ಈ ವಾಕ್ಯಗಳು ತಿಳಿಸುತ್ತಿವೆ. ಅಂತೂ ಈ ಎರಡೂ ಉಪನಿಷತ್ತುಗಳ ವಾಕ್ಯಗಳಿಂದ ಮುಕ್ತಿಯಲ್ಲಿ ಆನಂದದಲ್ಲಿ ತಾರತಮ್ಯವಿದೆಯೆಂದು ಗೊತ್ತಾಗುವುದು.

ಮುಕ್ತಿಯ ಬಗ್ಗೆ ಎಲ್ಲರ ಪ್ರಯತ್ನಸಾಧನೆಗಳು ಒಂದೇ ರೀತಿಯಲ್ಲಿ ಇಲ್ಲ. ಕೆಲವರು ಮೋಕ್ಷಕ್ಕಾಗಿ ಕಠಿಣ ಸಾಧನೆಯನ್ನು ಮಾಡಿದರೆ ಉಳಿದವರು ಅಷ್ಟು ಪರಿಶ್ರಮವನ್ನು ಪಡುವುದಿಲ್ಲ. ದೇವತೆಗಳ ಸಾಧನೆಗಳೂ ಒಂದೇ ರೀತಿಯಲ್ಲಿ ಇಲ್ಲ. ಅವರ ಕಠಿಣ ಸಾಧನೆಗಳ ಬೇರೆ ಬೇರೆ ಪ್ರಕಾರಗಳನ್ನೂ ಪುರಾಣಗಳು ವರ್ಣಿಸಿವೆ. ಸಾಧನೆಗಳು ವಿಭಿನ್ನವಾಗಿರುವಾಗ ಫಲವು ಒಂದೇ ರೀತಿಯಲ್ಲಿರಲು ಸಾಧ್ಯವೇ? ಈ ಸಾಧನೆಗಳು ವೈಚಿತ್ರ್ಯದಿಂದ ಮುಕ್ತರ ಆನಂದದಲ್ಲಿಯೂ ವೈವಿಧ್ಯವನ್ನು ಒಪ್ಪಲೇಬೇಕು. ಹೆಚ್ಚು ಸಾಧನೆಗಳನ್ನು

ಮಾಡಿದವರಿಗೂ, ಕಡಿಮೆಪರಿಶ್ರಮವನ್ನು ಪಟ್ಟವರಿಗೂ ಒಂದೇ ರೀತಿಯ ಫಲವನ್ನು ಭಗವಂತನು ನೀಡಿದರೆ, ಅವನ ನ್ಯಾಯವ್ಯವಸ್ಥೆಯನ್ನೇ ನಾವು ಪ್ರಶ್ನಿಸಬೇಕಾಗುತ್ತದೆ. ಸಾಧನೆ ಪ್ರಯತ್ನಗಳಿಗನುಗುಣವಾಗಿ ಫಲವನ್ನು ನೀಡುವುದು ಲೋಕಸಮ್ಮತ ನೀತಿಯಾಗಿದೆ. ಅದನ್ನು ಅತಿಕ್ರಮಿಸಿ ಭಗವಂತನು ಫಲವನ್ನು ನೀಡಿದರೆ ಅವನು ವೈಷಮ್ಯದೋಷಕ್ಕೆ ಒಳಗಾಗಲಾರನೇ?

ಇನ್ನೊಂದು ವಿಷಯವನ್ನು ನಾವು ಗಮನಿಸಬೇಕು. ಜ್ಞಾನವನ್ನು ಪಡೆದ ಮೇಲೂ ಮುಕ್ತಿಯು ದೊರೆಯುವವರೆಗೂ ಜ್ಞಾನಿಗಳು ಹೆಚ್ಚಿನ ಸಾಧನೆಯನ್ನು ಮಾಡುತ್ತಲೇ ಇರುತ್ತಾರೆ. ಜ್ಞಾನವನ್ನು ಪಡೆದವರಿಗೆ ಮುಕ್ತಿಯು ಖಚಿತವಾಗಿ ದೊರೆಯುತ್ತದೆ. ಮುಕ್ತಿಯಲ್ಲಿ ಆನಂದವು ಎಲ್ಲರಿಗೂ ಏಕರೂಪವಾಗಿರುವುದಾದರೆ ಮುಕ್ತಿಯು ಖಚಿತವಾದ ಮೇಲೂ ಜ್ಞಾನಿಗಳು ಹೆಚ್ಚಿನ ಸಾಧನೆಯನ್ನು ಯಾಕೆ ಮಾಡಬೇಕು? ಇವರಿಗೆ ಮುಕ್ತಿಯು ದೊರೆಯುವುದು ಈಗಾಗಲೇ ತೀರ್ಮಾನವಾಗಿದೆ. ಇವರು ಹೆಚ್ಚಿನ ಸಾಧನೆಯನ್ನು ಮಾಡುವುದರಿಂದ ಮುಕ್ತಿಯಲ್ಲಿ ವಿಶೇಷಆನಂದವು ದೊರೆಯುವುದಿಲ್ಲವೆಂದಮೇಲೆ, ಜ್ಞಾನವು ದೊರೆತ ಮೇಲೆ ತೆಪ್ಪಗೆ ಕುಳಿತುಕೊಳ್ಳಬಹುದಲ್ಲವೇ? ಈ ವ್ಯರ್ಥ ಪರಿಶ್ರಮವೇಕೆ? ಇದರಿಂದಲೂ ಮುಕ್ತಿಯಲ್ಲಿ ಎಲ್ಲರಿಗೂ ದೊರೆಯುವ ಆನಂದವು ಏಕರೂಪವಲ್ಲವೆಂದು ಸ್ಥಿರವಾಗುತ್ತದೆ.

ಮುಕ್ತಿಯಲ್ಲಿ ಎಲ್ಲರೂ ಸಮಾನರಾಗಿಲ್ಲ, ಜ್ಞಾನದಲ್ಲಿ, ಆನಂದದಲ್ಲಿ ವ್ಯತ್ಯಾಸವಿದೆಯೆಂಬುದನ್ನು ಪ್ರತಿಪಾದಿಸುವ ನೂರಾರು ವಾಕ್ಯಗಳನ್ನು ಆಚಾರ್ಯರು ಇಲ್ಲಿ ಉದಾಹರಿಸಿದ್ದಾರೆ. ಹೀಗೆ ಯುಕ್ತಿ ಮತ್ತು ಪ್ರಮಾಣ ವಾಕ್ಯಗಳ ಆಧಾರದಿಂದ ಮುಕ್ತಿಯಲ್ಲಿ ಆನಂದತಾರತಮ್ಯವನ್ನು ನಾವು ಸ್ವೀಕರಿಸಲೇಬೇಕು. ಮುಕ್ತಿಯಲ್ಲಿಯೂ ಸುಖದತಾರತಮ್ಯವಿದ್ದರೆ ಸಂಸಾರಕ್ಕೂ ಮುಕ್ತಿಗೂ ಏನು ವ್ಯತ್ಯಾಸ? ಈ ಏರುಪೇರುಗಳಿರುವುದರಿಂದಲೇ ಸಂಸಾರದಲ್ಲಿ ದಿನವೂ ಕಲಹಘರ್ಷಣೆಗಳು ಆಗುತ್ತಿವೆ. ಹೊಟ್ಟೆಕಿಚ್ಚಿನ ತಾಂಡವ ನಡೆಯುತ್ತಿದೆ. ಮುಕ್ತಿಯಲ್ಲಿಯೂ ಇದೇ ಸ್ಥಿತಿಯಾದರೆ ಸಂಸಾರದ ಹಗರಣವೆಲ್ಲವೂ ಮೋಕ್ಷಕ್ಕೂ ತಲುಪಬಹುದು. ಮುಕ್ತಿಯ ಸುಂದರ ಕಲ್ಪನೆಯೆಲ್ಲವೂ ನುಚ್ಚುನೂರಾಗುವುದು ಎಂದು ಮುಕ್ತಿಯ ತಾರತಮ್ಯದ ಸಿದ್ಧಾಂತವನ್ನು ಬಹಳ ಮಂದಿ ಆಕ್ಷೇಪಿಸುತ್ತಾರೆ.

ದ್ವೇಷ, ಅಸೂಯೆಗಳು ಮುಕ್ತಿಯಲ್ಲಿಯೂ ಸಂಭವಿಸಬಹುದೆಂದು ಗಾಬರಿಗೊಳ್ಳುವವರು ದ್ವೇಷ, ಅಸೂಯೆಗಳ ಕಾರಣವೇನು? ಎಂಬುದನ್ನು ವಿಶ್ಲೇಷಿಸಬೇಕು. ಎಲ್ಲರೂ ಸಮಾನರಾಗಿದ್ದರೂ ದ್ವೇಷ, ಅಸೂಯೆಗಳು ಉಂಟಾಗುವುದಿಲ್ಲವೇ? ತನ್ನ ಸಮಾನಿಕರನ್ನು ಕಂಡು ಹೊಟ್ಟೆಸಂಕಟದಿಂದ ಪರಿತಪಿಸುವವರು ಎಷ್ಟುಮಂದಿ ಇಲ್ಲ? ವಿಭಿನ್ನರೀತಿಯ ಸಾಧನೆ ಮಾಡಿದವರಿಗೆ ಒಂದೇ ಮಟ್ಟದಿಂದ ಫಲವನ್ನು ನೀಡಿದಾಗ ಕಲಹಕ್ಕೆ ಅವಕಾಶವಾಗುವುದಿಲ್ಲವೇ? ವಾಸ್ತವವಾಗಿ ದ್ವೇಷ, ಕಲಹಗಳಿಗೆ ಅಂತಃಕರಣ ದೋಷವೇ ಕಾರಣ. ಇಂತಹ ದೋಷದಿಂದ ಅತೀತರಾದ ಮುಕ್ತರಲ್ಲಿ ದ್ವೇಷ, ಅಸೂಯೆಗಳಿಗೆ ಅವಕಾಶವೆಲ್ಲಿ? ಯೋಗ್ಯಶಿಷ್ಯನು ತನ್ನ ಗುರುವಿನ ಪಾಂಡಿತ್ಯವನ್ನು ದ್ವೇಷಿಸುತ್ತಾನೆಯೇ? ಸಂಕಟಪಡುತ್ತಾನೆಯೇ? ತನಗಿಂತ ಹೆಚ್ಚು ಸಾಧನೆಯನ್ನು ಮಾಡಿ ಹೆಚ್ಚು ಆನಂದವನ್ನು ಅನುಭವಿಸುತ್ತಿರುವ ತನಗಿಂತ ಉತ್ತಮರನ್ನು ಭಕ್ತಿಗೌರವದಿಂದ ಮುಕ್ತನು ನೋಡುವನಲ್ಲದೆ, ದ್ವೇಷ ಅಸಮಾಧಾನದಿಂದ ವರ್ತಿಸಲಾರನು. ಅಜ್ಞಾನದ ಪರಿಧಿಯನ್ನು ದಾಟಿರುವ, ಮನೋದೋಷಗಳನ್ನು ಮೀರಿನಿಂತಿರುವ ಮುಕ್ತರ ಪರಿಶುದ್ಧ ಹೃದಯದಲ್ಲಿ ಇಂತಹ ಕೆಟ್ಟ ವಿಚಾರಗಳು ಸುಳಿಯಲಾರವು. ನಮ್ಮ ಕ್ಷುದ್ರಮನಸ್ಸಿನ ಮಟ್ಟದಿಂದ ಮುಕ್ತರ ವ್ಯಕ್ತಿತ್ವವನ್ನು ಅಳೆಯುವುದು ಸರಿಯಲ್ಲ. ಬೇರೆ ಬೇರೆ ಪಾತ್ರೆಗಳಲ್ಲಿ ತುಂಬಿರುವ ನೀರಿನ ಪ್ರಮಾಣದಲ್ಲಿ ಅಂತರವಿದ್ದರೂ ಎಲ್ಲಾ ಪಾತ್ರೆಗಳೂ ನೀರಿನಿಂದ ಪೂರ್ಣವಾಗಿರುವಂತೆ, ಮುಕ್ತಜೀವರ ಆನಂದದ ಪ್ರಮಾಣದಲ್ಲಿ ವ್ಯತ್ಯಾಸವಿದ್ದರೂ, ಎಲ್ಲರೂ ಪರಿಪೂರ್ಣರೇ ಆಗಿರುತ್ತಾರೆ. ಈ ಆನಂದದ ತಾರತಮ್ಯದಿಂದ ಮೋಕ್ಷದ ಸೌಂದರ್ಯ ಘನತೆಗಳಿಗೆ ಯಾವ ಆತಂಕವೂ ಇಲ್ಲ. ಇದೇ ರೀತಿಯಲ್ಲಿ ದುಷ್ಟರಾದ ದೈತ್ಯರ ಸ್ವಭಾವದಲ್ಲಿಯೂ ಸಹಜ ತಾರತಮ್ಯವನ್ನು ಅಂಗೀಕರಿಸಬೇಕು. ನಮ್ಮ ಪ್ರತ್ಯಕ್ಷ ಜೀವನದಲ್ಲಿ ಎಲ್ಲರಲ್ಲಿಯೂ ವೈಚಿತ್ರ್ಯ, ವೈವಿಧ್ಯಗಳನ್ನು ನಾವು ನೋಡುತ್ತಿದ್ದೇವೆ. ಕೆಲವರು ದಟ್ಟದರಿದ್ರರಾಗಿದ್ದರೆ, ಕೆಲವರು ಶ್ರೀಮಂತಿಕೆಯ ವೈಭವಾತಿಶಯದಲ್ಲಿ ಮೆರೆಯುತ್ತಾರೆ. ಕೆಲವರು ಅಜ್ಞಾನ, ಮೌಢ್ಯಗಳಿಗೆ ಬಲಿಯಾಗಿದ್ದರೆ, ಕೆಲವರು ಪಾಂಡಿತ್ಯ, ವಿವೇಕಗಳಿಂದ ಸರ್ವಜನಾದರಣೀಯರಾಗಿದ್ದಾರೆ. ಕೆಲವೆಡೆ ದರ್ಪ ಕ್ರೂರತನದ ಅತಿರೇಕವಿದ್ದರೆ, ಹಲವರದ್ದು ಶೀಲವಿನಯಸಂಪನ್ನ

ಆದರ್ಶವ್ಯಕ್ತಿತ್ವ, ಬ್ರಹ್ಮಾದಿದೇವತೆಗಳ ರೀತಿಯು ಒಂದಾದರೆ, ಕಲಿ ಮುಂತಾದವರ ವರ್ತನೆ ಇನ್ನೊಂದು ವಿಧ. ಜಗತ್ತಿನಲ್ಲಿ ಈ ವ್ಯತ್ಯಾಸದ ಕಾರಣವೇನು? ಎಲ್ಲರ ವ್ಯಕ್ತಿತ್ವ, ಸ್ವರೂಪ ಮೂಲತಃ ಒಂದೇ ವಿಧವಾಗಿದ್ದರೆ, ಪ್ರತ್ಯಕ್ಷಜೀವನದಲ್ಲಿ ಈ ಏರುಪೇರುಗಳೇಕೆ? ಅವರವರ ಅದೃಷ್ಟವೇ ಕಾರಣವೆಂದು ಹೇಳಿ ಸುಲಭವಾಗಿ ಇದನ್ನು ಬಗೆಹರಿಸಲಾರೆವು. ಎಲ್ಲರಿಗೂ ಒಂದೇ ರೀತಿಯ ಅದೃಷ್ಟಗಳು ಯಾಕೆ ಹುಟ್ಟಲಿಲ್ಲ? ಹಿಂದಿನ ಅದೃಷ್ಟವೇ ಅದಕ್ಕೆ ಕಾರಣವಾಗಿದ್ದರೆ ಆ ಅದೃಷ್ಟ ಪರಂಪರೆಯೂ ಎಲ್ಲರಲ್ಲಿ ಏಕರೂಪವಾಗಿ ಯಾಕೆ ಇರಬಾರದು? ಆದುದರಿಂದ ಮೂಲತಃ ಜೀವರ ವ್ಯಕ್ತಿತ್ವದಲ್ಲಿಯೇ ಸಹಜ ಅಂತರ-ವ್ಯತ್ಯಾಸಗಳನ್ನು ಒಪ್ಪಿದಾಗ ಮಾತ್ರ ಈ ಜಗತ್ತಿನಲ್ಲಿ ಕಂಡುಬರುವ ವೈವಿಧ್ಯಗಳನ್ನು ಯೋಜಿಸಬಲ್ಲೆವು. ಸ್ಥೂಲಜಗತ್ತಿನಲ್ಲಿ ಕಾಣುವ ಈ ವೈಚಿತ್ರ್ಯದ ಹಿಂದೆ ಜೀವರ ಸ್ವರೂಪದಲ್ಲಿಯೇ ಅಡಕವಾದ ಸ್ವಾಭಾವಿಕವಾದ ವ್ಯತ್ಯಾಸವಿದೆಯೆಂಬುದನ್ನೂ ಅನಿವಾರ್ಯವಾಗಿ ಸ್ವೀಕರಿಸಬೇಕಾಗುತ್ತದೆ. ಜೀವರ ಈ ಸಹಜ ವ್ಯಕ್ತಿತ್ವವನ್ನೇ ನಾವು ಯೋಗ್ಯತೆಯೆಂದು ಕರೆಯುತ್ತೇವೆ. ಈ ಅನಾದಿ ಯೋಗ್ಯತೆಯೇ ಜೀವರ ಎಲ್ಲಾ ವ್ಯವಹಾರಗಳನ್ನು ನಿಯಂತ್ರಿಸುತ್ತದೆ. ಪ್ರತಿಯೊಬ್ಬರೂ ತಮ್ಮ ಸಹಜ ವ್ಯಕ್ತಿತ್ವಕ್ಕೆ ಅನುಗುಣವಾಗಿ, ಪ್ರಪಂಚದಲ್ಲಿ ವಿವಿಧ ರೀತಿಯಲ್ಲಿ ತಮ್ಮನ್ನೂ ತೊಡಗಿಸಿಕೊಂಡು, ಈ ಪ್ರತ್ಯಕ್ಷ ಜೀವನದಲ್ಲಿ ಏರುಪೇರುಗಳನ್ನು ಅನುಭವಿಸುತ್ತಿದ್ದಾರೆ. ಕೊನೆಗೆ ತಮ್ಮ ಜೀವನ ಸಾಧನೆಯ ಅಂತಿಮಘಟ್ಟದಲ್ಲಿ ತಮ್ಮ ಸಹಜ ವ್ಯಕ್ತಿತ್ವವನ್ನು ಪಡೆಯುತ್ತಾರೆ. ಜೀವರ ಅನಾದಿಯಾದ ಸಹಜವಾದ ವಿಭಿನ್ನ ವ್ಯಕ್ತಿತ್ವಗಳು, ಅದರ ಪ್ರತಿಧ್ವನಿಯಾಗಿ ಸ್ಥೂಲಜಗತ್ತಿನ ಏರುಪೇರುಗಳು ಇದರ ಅಂತಿಮ ಪರಿಣಾಮವಾಗಿ ಮುಕ್ತಿಯ ಫಲದಲ್ಲಿ ಅಂತರಗಳು ಇವು ಮೂರು ಪರಸ್ಪರವಾಗಿ ಸಂಬಂಧಿಸಿದ ಜೀವನದ ಸತ್ಯಗಳು.

### ರಾಮಕೃಷ್ಣಾದಿರೂಪಗಳಲ್ಲೂ ದೋಷವಿಲ್ಲ

ಭಗವಂತನ ನಿರ್ದೋಷರೂಪ ದರ್ಶನದಿಂದ ಮುಕ್ತಿಯಿಂದಾರಂಭಿಸಿ ಸಕಲಪುರುಷಾರ್ಥಗಳೂ ದೊರೆಯುತ್ತವೆಯೆಂದು ಈಗಾಗಲೇ ಹೇಳಿದೆ. ಆದರೆ, ಭಗವಂತನನ್ನು ನಿರ್ದೋಷನೆಂದು ಹೇಗೆ ಹೇಳುವುದು? ರಾಮಕೃಷ್ಣಾದಿರೂಪಗಳಲ್ಲಿ ಅನೇಕರೀತಿಯ ಮಾನವೀಯ ದೋಷ

ದೌರ್ಬಲ್ಯಗಳನ್ನು ಪ್ರತ್ಯಕ್ಷವಾಗಿ ಜನರು ನೋಡಿರುವಾಗ ಭಗವಂತನು ನಿರ್ದೋಷನೆಂಬ ಮಾತಿನಲ್ಲಿ ನಮಗೆ ವಿಶ್ವಾಸ ಹುಟ್ಟುವುದು ಹೇಗೆ? ಎಂದು ಪ್ರತ್ಯಕ್ಷದ ಆಧಾರದಿಂದ ಭಗವಂತನ ನಿರ್ದೋಷತ್ವಕ್ಕೆ ಕೆಲವರು ಸವಾಲು ಎಸೆಯುತ್ತಾರೆ. ಆದರೆ ಪ್ರತ್ಯಕ್ಷವೆಲ್ಲವೂ ಪ್ರಮಾಣವೆನಿಸದು. ವಿಮರ್ಶೆಯ ಹಿನ್ನೆಲೆಯಿದ್ದಾಗ ಮಾತ್ರ ಈ ಪ್ರತ್ಯಕ್ಷವು ಪ್ರಮಾಣವೆನಿಸುತ್ತದೆ. ಬ್ರಹ್ಮಾದಿ ದೇವತೆಗಳು, ಋಷಿಗಳು, ಸಿದ್ಧಪುರುಷರೂ ಭಗವಂತನಲ್ಲಿ ದೋಷವಿಲ್ಲವೆಂದು ತಮ್ಮ ದಿವ್ಯದೃಷ್ಟಿಯಿಂದ ನೋಡಿ ನಿರ್ಧರಿಸಿರುವಾಗ, ಯಾವ ವಿಮರ್ಶೆಯ ಹಿನ್ನೆಲೆಯೂ ಇಲ್ಲದ, ದುರ್ಬಲವಾದ, ಸಾಮಾನ್ಯಪ್ರತ್ಯಕ್ಷದಿಂದ ಭಗವಂತನಲ್ಲಿ ನಮ್ಮಂತೆಯೇ ದೋಷಗಳಿವೆಯೆಂದು ತೀರ್ಮಾನಿಸಲಾರೆವು. ರಾಮಕೃಷ್ಣರು ಭಗವಂತರೆಂದು ಗುರುತಿಸಿ ಅವರಲ್ಲಿ ಅಜ್ಞಾನ, ದುಃಖ, ನೋವು ಮುಂತಾದ ದೋಷಗಳಿವೆಯೆಂದು ಪ್ರತ್ಯಕ್ಷದಿಂದ ಸಾಧಿಸಬೇಕು. ರಾಮಕೃಷ್ಣರು ಪರಮಾತ್ಮನೆಂದು ನಾವು ಹೇಗೆ ತಿಳಿಯಬೇಕು? ಅದನ್ನು ತಿಳಿಯದಿದ್ದರೆ ರಾಮ, ಕೃಷ್ಣರು ಬರೇ ಸಾಮಾನ್ಯ ವ್ಯಕ್ತಿಗಳೆನಿಸುತ್ತಾರೆ. ಅವರಿಗೆ ದೋಷ ಗಳಿದ್ದರೆ ಪರಮಾತ್ಮನ ಮಹತ್ವಕ್ಕೆ ಭಂಗವೇನು? ಆದುದರಿಂದ ಭಗವಂತನಲ್ಲಿ ದೋಷವನ್ನು ಸ್ಥಾಪಿಸಬೇಕಾದರೆ ರಾಮ, ಕೃಷ್ಣರು ಭಗವಂತನ ಅವತಾರವೆಂಬುದನ್ನು ನಾವು ತಿಳಿದುಕೊಳ್ಳಬೇಕು. ವೇದ ಪುರಾಣಗಳಿಂದಲೇ ನಾವಿದನ್ನು ತಿಳಿಯಬೇಕಾಗುತ್ತದೆ. ಯಾವ ವೇದ ಪುರಾಣಗಳನ್ನು ಅವಲಂಬಿಸಿ ರಾಮ, ಕೃಷ್ಣ ಮುಂತಾದ ರೂಪಗಳನ್ನು ಭಗವಂತನೆಂದು ಗುರುತಿಸಿ ಅದರ ಆಧಾರದಿಂದ ಪ್ರತ್ಯಕ್ಷದಿಂದ ದೇವರಲ್ಲಿ ದೋಷವಿದೆಯೆಂದೂ ನಾವು ತಿಳಿಯಬೇಕಾಗಿದೆಯೋ ಆ ಮೂಲ ಆಧಾರಗಳಾದ ವೇದಪುರಾಣಗಳೇ ಭಗವಂತನಲ್ಲಿ ದೋಷಗಳಿಲ್ಲವೆಂದು ಸಾರಿಸಾರಿ ಹೇಳುತ್ತಿರುವಾಗ ಅದಕ್ಕೆ ವಿರುದ್ಧವಾಗಿ ಪ್ರತ್ಯಕ್ಷದಿಂದ ದೋಷಗಳನ್ನು ಸಾಧಿಸುವುದು ಹೇಗೆ? ಈ ಸಾಮಾನ್ಯಪ್ರತ್ಯಕ್ಷಕ್ಕೆ ಒಂದು ಕಡೆ ಜ್ಞಾನಿಗಳ ಪ್ರತ್ಯಕ್ಷದ ವಿರೋಧವಿದ್ದರೆ ಇನ್ನೊಂದು ಕಡೆ ಈ ಪ್ರತ್ಯಕ್ಷಕ್ಕೆ ಅವಲಂಬನವಾದ ವೇದ, ಪುರಾಣಗಳ ವಿರೋಧವಿದೆ. ಈ ಎರಡೂ ವಿರೋಧಗಳನ್ನು ಎದುರಿಸಿ ಭಗವಂತನಲ್ಲಿ ದೋಷವಿದೆಯೆಂದು ವಿಮರ್ಶೆಯ ಹಿನ್ನೆಲೆ ಇಲ್ಲದ ಈ ದುರ್ಬಲ ಪ್ರತ್ಯಕ್ಷವು ಹೇಗೆ ಸಾಧಿಸಬಲ್ಲದು?

## ದ್ವೇಷದಿಂದ ಮುಕ್ತಿ ಇಲ್ಲ

ಜ್ಞಾನವು ಮುಕ್ತಿಗೆ ಸಾಧನವೆಂದು ಈ ಹಿಂದೆ ಹೇಳಿದ್ದೇವೆ. ಇಲ್ಲಿ ಜ್ಞಾನದ ಜೊತೆಗೆ ಭಗವತ್‌ಪ್ರೇಮವನ್ನು ಸೇರಿಸಿಕೊಳ್ಳಬೇಕು. ಈ ಪ್ರೇಮ-ಜ್ಞಾನಗಳು ಜೊತೆಗೂಡಿದಾಗ ಭಕ್ತಿಯೆನಿಸುತ್ತದೆ. ಭಗವಂತನ ಮಹಿಮೆಯಜ್ಞಾನ ಮತ್ತು ಅವನಲ್ಲಿ ಸುದೃಢವಾದ ಪ್ರೇಮ, ಇವೇ ಭಕ್ತಿಯ ಎರಡು ದಲಗಳು. ಧ್ಯಾನಕ್ಕೆ ಬೇಕಾದ ಏಕಾಗ್ರತೆಯು ದ್ವೇಷದಿಂದ ಬರಬಹುದಾದರೂ ಮೋಕ್ಷಕ್ಕೆ ಭಕ್ತಿಯೇ ಕಾರಣ. ದ್ವೇಷದಿಂದ ಮಾಡುವ ಧ್ಯಾನದಿಂದ ಭಗವಂತನು ಪ್ರಸನ್ನನೂ ಆಗಲಾರನು. ಭಗವಂತನ ಗುಣಗಳನ್ನು ವರ್ಣಿಸಿ ಜೀವರಲ್ಲಿ ಭಕ್ತಿಭಾವವನ್ನು ಪ್ರಚೋದಿಸಿ ಭಗವಂತನ ಅನುಗ್ರಹದಿಂದ ಜೀವರನ್ನು ಸಂಸಾರದಿಂದ ದಾಟಿಸುವುದೇ ವೇದದ ಗುರಿ. ದ್ವೇಷದಿಂದಲೂ ಮುಕ್ತಿಯು ದೊರೆಯುವುದಾದರೆ ವೇದವು ಭಗವಂತನ ಗುಣಗಳನ್ನು ವರ್ಣಿಸಿ ಭಕ್ತಿಯನ್ನು ಪ್ರಚೋದಿಸುವ ಬದಲು ಭಗವಂತನ ದೋಷಗಳನ್ನೇ ನಿರೂಪಿಸಿ ಅವನನ್ನು ತೆಗಳಿ ದ್ವೇಷದ ಪ್ರಚೋದನೆಯನ್ನೇ ಮಾಡಬಹುದಲ್ಲವೇ? ಆದರೆ ವೇದವೆಲ್ಲವೂ ಭಗವಂತನ ಸ್ತುತಿಯಾಗಿದೆ. ಅವನನ್ನು ಹೊಗಳುವುದೇ ವೇದದ ಗುರಿ. ಭಕ್ತಿಪ್ರಚೋದನೆಗಾಗಿಯೇ ವೇದವು ಹೊರಟಿದೆ. 'ಭಕ್ತಿಯಿಂದಲೇ ಮುಕ್ತಿ' ಎಂಬುದು ಇದರಿಂದಲೇ ಸ್ಪಷ್ಟವಾಗುವುದು. ತನ್ನನ್ನು ದ್ವೇಷಿಸಿದ ಶಿಶುಪಾಲ ಮುಂತಾದವರಿಗೆ ಭಗವಂತನು ದಿವ್ಯಗತಿಯನ್ನು ನೀಡಿದ ಉಲ್ಲೇಖವು ಪುರಾಣಗಳಲ್ಲಿ ಇದೆ. ಶಿಶುಪಾಲನಂತಹ ದುಷ್ಟರಲ್ಲಿಯೂ ಒಳ್ಳೆಯ ವ್ಯಕ್ತಿತ್ವವು ಅಡಗಿದೆ. ದುಷ್ಟಸಂಪರ್ಕದಿಂದ ಅಸುರಶಕ್ತಿಯ ಒತ್ತಡದಿಂದ ತನ್ನನ್ನು ದ್ವೇಷಮಾಡಿದರೂ ಅವನ ಅಂತರಂಗದಲ್ಲಿರುವ ಸಹಜ ಭಕ್ತಿಯನ್ನು ಗುರುತಿಸಿ ಅವನನ್ನು ಅನುಗ್ರಹಿಸಿದ ಪರಮಾತ್ಮನ ಔದಾರ್ಯ ಮತ್ತು ಕಾರುಣ್ಯವನ್ನು ಇಲ್ಲಿ ವರ್ಣಿಸಲಾಗಿದೆ. ಬೆಂಕಿಯ ಸಂಪರ್ಕದಿಂದ ನೀರು ಬಿಸಿಯಾಗಿದ್ದರೂ ಸಹಜವಾಗಿ ಅದು ಶೀತಲವಾಗಿರುವಂತೆ ಕೆಟ್ಟ ವ್ಯಕ್ತಿತ್ವದ ಒತ್ತಡದಿಂದ ಶಿಶುಪಾಲನು ದುಷ್ಟನಾಗಿದ್ದರೂ ಸಹಜವಾಗಿ ಭಕ್ತನೂ, ಸಜ್ಜನನೂ ಆಗಿರುವನು. ಆದುದರಿಂದ ಭಗವಂತನು ಅವನನ್ನು ಅನುಗ್ರಹಿಸಿದ್ದಾನೆ.

ಅಂತಃಕರಣವನ್ನು ಕಲುಷಿತಗೊಳಿಸುವ, ಭಗವಂತನಿಂದ ನಮ್ಮನ್ನು ದೂರಗೊಳಿಸುವ ದ್ವೇಷವು ಎಂದಿಗೂ ಮುಕ್ತಿಸಾಧನವಲ್ಲ.

ಭಗವಂತನ ಜೊತೆಗೆ ಅವನ ಭಕ್ತರಾದ ಬ್ರಹ್ಮಾದಿದೇವತೆಗಳಲ್ಲಿಯೂ ಭಕ್ತಿಯನ್ನು ಮಾಡಿದಾಗ ಮಾತ್ರ ಆ ಭಕ್ತಿಯು ಪರಿಪೂರ್ಣವಾಗುತ್ತದೆ. ಭಗವಂತನ ಭಕ್ತರನ್ನು ದ್ವೇಷಿಸಿಕೊಂಡು ಅವನನ್ನು ಎಷ್ಟು ಪೂಜಿಸಿದರೂ ಅದರಿಂದ ಸ್ವಾಮಿಯು ಪ್ರಸನ್ನನಾಗುವುದಿಲ್ಲ. ಇಂದ್ರಾದಿದೇವತೆಗಳನ್ನು ದ್ವೇಷಿಸಿಕೊಂಡು ಬ್ರಹ್ಮರುದ್ರಾದಿಗಳಲ್ಲಿ ದೈತ್ಯರು ಭಕ್ತಿಯನ್ನು ಮಾಡಿದರೂ ಅದರಿಂದ ಸರಿಯಾದ ಫಲವನ್ನು ಪಡೆದಿಲ್ಲ. ಈ ದೇವತೆಗಳು ನಮ್ಮ ದೇಹದಲ್ಲಿ ನಮ್ಮ ಶುಭ, ಅಶುಭ ಪ್ರವರ್ತಕರಾಗಿದ್ದಾರೆ. ಅವರು ನೀಡಿದ ಶಕ್ತಿಯಿಂದಲೇ ನಾವು ಒಳ್ಳೆಯ ಕಾರ್ಯವನ್ನು ಮಾಡುವುದರಿಂದ ನಮ್ಮ ಪುಣ್ಯ ಫಲದ ಸಿಂಹಪಾಲು ಅವರಿಗೇ ಸೇರುತ್ತದೆ. ನಮ್ಮ ಇಂದ್ರಿಯ ದೇಹಗಳ ಮೇಲೆ ನಮಗಿಂತ ಹೆಚ್ಚು ಪ್ರಭುತ್ವ ದೇವತೆಗಳಿಗೆ ಇರುವುದರಿಂದ ಈ ದೇಹದಿಂದ ಆದ ಸತ್‌ಕಾರ್ಯಗಳ ಹೆಚ್ಚಿನ ಶುಭಫಲವು ದೇವತೆಗಳಿಗೆ ಸಲ್ಲುತ್ತದೆ. ಹಾಗಾದರೆ ನಮ್ಮ ದುಷ್ಕರ್ಮದ ಅನಿಷ್ಟಫಲಗಳ ಹೆಚ್ಚಿನ ಭಾಗವೂ ದೇವತೆಗಳಿಗೇ ಸೇರುತ್ತದೋ? ಎಂದು ಪ್ರಶ್ನಿಸಬಹುದು. ಭಗವಂತನ ಆದೇಶಕ್ಕನುಗುಣವಾಗಿ ನಮ್ಮ ದುಷ್ಕರ್ಮಗಳನ್ನು ಗಮನಿಸಿ ಅದಕ್ಕನುಸಾರವಾಗಿ ಯಾವ ರಾಗ ದ್ವೇಷಗಳೂ ಇಲ್ಲದೆ ನಿರ್ವಿಕಾರ ಮನಸ್ಸಿನಿಂದ ನಮ್ಮನ್ನು ಅಶುಭ ಕರ್ಮಗಳಲ್ಲಿ ತೊಡಗಿಸುವ ದೇವತೆಗಳಿಗೆ ಯಾವ ಅಶುಭಫಲವೂ ಅಂಟುವುದಿಲ್ಲ. ನಾವು ಮಾಡುವ ದುಷ್ಟಕಾರ್ಯಗಳ ಹಿನ್ನೆಲೆಯಲ್ಲಿರುವ ದುಷ್ಟಭಾವನೆಯ ಮೂಲಸ್ರೋತಸ್ಸು ಅಸುರರಲ್ಲಿದೆ. ಬಹಳ ಖುಷಿಯಿಂದ ನಮ್ಮಲ್ಲಿ ದುಷ್ಟತನವನ್ನು ಪ್ರಚೋದಿಸುವ ಅಸುರರಿಗೆ ನಮ್ಮ ಪಾಪಫಲದ ಬಹುಭಾಗವು ಸೇರುತ್ತದೆ. ನಮ್ಮ ಸತ್‌ಕಾರ್ಯ, ದುಷ್ಟಕಾರ್ಯಗಳೆರಡಕ್ಕೂ ಅಗತ್ಯವಾದ ಶಕ್ತಿಯ ಮೂಲವು ದೇವತೆಗಳಲ್ಲಿದ್ದರೂ ದೌಷ್ಟ್ಯದ ಮೂಲವು ದೈತ್ಯರಲ್ಲಿದೆ. ಆದುದರಿಂದ ಅವರೇ ದುಷ್ಕರ್ಮಗಳ ಹೆಚ್ಚಿನ ಅನಿಷ್ಟಭಾಗಿಗಳು. ನಮ್ಮ ಶಕ್ತಿಯ ಮೂಲಕೇಂದ್ರವೆನಿಸಿದ ದೇವತೆಗಳು ನಮ್ಮ ಸತ್‌ಕರ್ಮದ ಮೂಲ ಸೆಲೆಯೂ ಆಗಿದ್ದಾರೆ. ನಮ್ಮ ಸತ್‌ಕರ್ಮದ ಹಿಂದೆ ಅವರ ಉತ್ಸಾಹ, ಅನುಗ್ರಹಗಳಿವೆ. ಆದುದರಿಂದ ಸತ್‌ಕರ್ಮದ ಫಲಕ್ಕೆ ಅವರೇ ಹೆಚ್ಚಿನ ಭಾಗಿಗಳಗಿದ್ದಾರೆ. ಅಂತಹ

ದೇವತೆಗಳ ಜೊತೆಗೆ ಪರಮಾತ್ಮನಲ್ಲಿ ವಿಶೇಷ ಭಕ್ತಿಯನ್ನು ಮಾಡಿದಾಗ ಭಕ್ತಿಯ ಪೂರ್ಣತೆಯನ್ನೂ, ಸಫಲತೆಯನ್ನೂ ನಾವು ಪಡೆಯಬಲ್ಲೆವು. ಹೀಗೆ ಈ ಪಾದದಲ್ಲಿ ನಮ್ಮ ಸಾಧನೆಯ ಎಲ್ಲಾ ಪ್ರಕಾರಗಳನ್ನೂ ತೋರಿಸಲಾಗಿದೆ.

ಇಲ್ಲಿಗೆ ತೃತೀಯಾಧ್ಯಾಯ ಮುಗಿಯಿತು.

# ಚತುರ್ಥಾಧ್ಯಾಯ

ಬ್ರಹ್ಮಸೂತ್ರಗಳು ಮೊದಲನೇ ಅಧ್ಯಾಯದಲ್ಲಿ ಸಕಲವೇದಗಳು ಅನಂತ ಗುಣಪೂರ್ಣನಾದ ಪರಮಾತ್ಮನನ್ನು ಪ್ರತಿಪಾದಿಸುತ್ತವೆಯೆಂಬುದನ್ನು ಸೋದಾಹರಣವಾಗಿ ಸಮರ್ಥಿಸಿ ಅದಕ್ಕೆ ಸವಾಲಾಗಿ ನಿಲ್ಲಬಹುದಾದ ಯುಕ್ತಿ ಮತ್ತು ವಿವಿಧಮತಗಳ ವಿರೋಧವನ್ನು ಎರಡನೇ ಅಧ್ಯಾಯದಲ್ಲಿ ಪರಿಹರಿಸಿ ನಿರ್ದೋಷನೂ ಗುಣಪೂರ್ಣನೂ ಆದ ಭಗವಂತನ ಸ್ವರೂಪವನ್ನು ನಮಗೆ ಸಾಧಿಸಿ ತೋರಿಸಿವೆ. ಇಂತಹ ಭಗವಂತನನ್ನು ಪಡೆಯಲು ಅವಶ್ಯವಾದ ವೈರಾಗ್ಯ, ದೃಢಭಕ್ತಿ, ಉಪಾಸನೆ, ಸಾಕ್ಷಾತ್ಕಾರಗಳೆಂಬ ನಾಲ್ಕು ಸಾಧನೆಗಳ ನಿರೂಪಣೆಯನ್ನು ಮೂರನೇ ಅಧ್ಯಾಯದಲ್ಲಿ ಮಾಡಿವೆ. ಈಗ ಈ ಸಾಧನೆಗಳ ಫಲವನ್ನು ತಿಳಿಯಲು ನಮಗೆ ಕುತೂಹಲ ಉಂಟಾಗುವುದು ಸಹಜ. ಆದುದರಿಂದ ನಾಲ್ಕನೇ ಅಧ್ಯಾಯವು ಈ ಸಾಧನೆಗಳ ಫಲವಾದ ಮುಕ್ತಿಯ ನಾಲ್ಕು ಹಂತಗಳನ್ನು ಪ್ರತಿಪಾದಿಸಲು ಹೊರಟಿದೆ. ಎಲ್ಲಾ ಅನಿಷ್ಟ ಕರ್ಮಗಳಿಂದ ಬಿಡುಗಡೆ, ಶರೀರದಿಂದ ಸುಷುಮ್ನಾನಾಡಿಯ ಮುಖಾಂತರ ಉತ್ಕ್ರಮಣ, ಬೇರೆ ಬೇರೆ ದೇವತೆಗಳಿಂದ ಅಧಿಷ್ಠಿತಗಳಾದ ಲೋಕಗಳನ್ನು ದಾಟಿಕೊಂಡು ಭಗವಂತನ ಲೋಕದ ಕಡೆಗೆ ಸಾಗುವ ದಾರಿ, ದಿವ್ಯ ಸ್ವರೂಪಾನಂದವನ್ನು ಅನುಭವಿಸುವುದು ಇವೇ ಮುಕ್ತಿಯ ನಾಲ್ಕು ಹಂತಗಳು. ಇವುಗಳನ್ನೇ ಕರ್ಮಕ್ಷಯ, ಉತ್ಕ್ರಾಂತಿ, ಮಾರ್ಗ, ಭೋಗ ಎಂದು ಸಂಕ್ಷಿಪ್ತವಾಗಿ ಕರೆಯಲಾಗಿದೆ. ಕ್ರಮವಾಗಿ ಸಂಭವಿಸುವ ಮೋಕ್ಷದ ಈ ನಾಲ್ಕು ಪ್ರಕಾರಗಳನ್ನು ಅದೇ ಕ್ರಮದಲ್ಲಿ ನಾಲ್ಕು ಪಾದಗಳಲ್ಲಿ ನಿರೂಪಿಸಲಾಗಿದೆ. ಈ ಅಧ್ಯಾಯವು ಮೋಕ್ಷಫಲವನ್ನು ಹೇಳಲು ಪ್ರವೃತ್ತವಾಗಿದ್ದರೂ ಆರಂಭದಲ್ಲಿ ಮೋಕ್ಷದ ಕೆಲವೊಂದು ಸಾಧನೆಗಳನ್ನು ನಿರೂಪಿಸುತ್ತದೆ. ಮೂರನೇ

ಅಧ್ಯಾಯದಲ್ಲಿಯೇ ಎಲ್ಲಾ ಸಾಧನೆಗಳನ್ನು ಹೇಳಿದ್ದರೂ ಕೆಲವೊಂದು ಸಾಧನೆಗಳು ಅತ್ಯಾವಶ್ಯಕ. ಅವುಗಳನ್ನು ನಿರಂತರ ನಡೆಸಬೇಕೆಂದು ಒತ್ತಿ ಹೇಳಲು ಪುನಃ ಅವುಗಳ ನಿರೂಪಣೆಯನ್ನು ಈ ಅಧ್ಯಾಯದ ಆರಂಭದಲ್ಲಿ ಮಾಡಲಾಗಿದೆ.

## ''ಓಂ ಆವೃತ್ತಿರಸಕೃದುಪದೇಶಾತ್ ಓಂ''

ನಿರಂತರವಾಗಿ ನಾವು ಮಾಡಬೇಕಾದ ಸಾಧನೆಗಳಲ್ಲಿ ಶ್ರವಣ, ಮನನ, ನಿದಿಧ್ಯಾಸನಗಳನ್ನು ವಿಶೇಷವಾಗಿ ಉಲ್ಲೇಖಿಸಲಾಗಿದೆ. ಒಮ್ಮೆ ಒಂದು ಮಹಾಯಾಗವನ್ನು ಮಾಡಿದರೆ ನಾವು ಸ್ವರ್ಗ ಪಡೆಯಬಹುದು. ಆದರೆ ಔಷಧವನ್ನು ಒಂದು ಬಾರಿ ಸೇವಿಸಿದರೆ ಕಾಯಿಲೆಯು ನಿವೃತ್ತಿಯಾಗುವುದಿಲ್ಲ. ಔಷಧವನ್ನು ಅನೇಕ ಬಾರಿ ಕುಡಿದಾಗ ಮಾತ್ರ ರೋಗವು ನಿವೃತ್ತಿಹೊಂದುವುದು. ಅದರಂತೆ ಶ್ರವಣ, ಮನನಾದಿಗಳನ್ನು ಒಂದು ಸಲ ಮಾತ್ರ ಮಾಡಿ ಮುಗಿಸಬಾರದು. ಪುನಃ ಪುನಃ ಅವುಗಳಲ್ಲಿ ತೊಡಗಬೇಕು. ರುದ್ರ, ಗರುಡ, ಇಂದ್ರ ಮುಂತಾದ ಪದವಿಗಳಲ್ಲಿ ವಿರಾಜಮಾನರಾಗಿರುವ ದೇವತೆಗಳೂ ಯುಗ ಯುಗಗಳವರೆಗೆ, ಕಲ್ಪ, ಕಲ್ಪಗಳವರೆಗೆ ಭಗವತ್ ಸ್ವರೂಪದ ಪರಿಜ್ಞಾನ, ಚಿಂತನೆ, ಉಪಾಸನೆಗಳಲ್ಲಿ ತಮ್ಮನ್ನು ತೊಡಗಿಸಿ ಕೊಂಡಿರುವ ಅನೇಕ ನಿದರ್ಶನಗಳನ್ನು ಪ್ರಾಚೀನ ಗ್ರಂಥಗಳಲ್ಲಿ ನಾವು ಕಾಣುತ್ತೇವೆ. ಆದುದರಿಂದ ಅಧ್ಯಯನ, ಚಿಂತನಗಳನ್ನು ಸಾಧಕನು ನಿರಂತರವೂ ನಡೆಸಬೇಕು.

## ''ಓಂ ಆತ್ಮೇತಿ ತೂಪಗಚ್ಛಂತಿ ಗ್ರಾಹಯಂತಿ ಚ ಓಂ''

ಭಗವಂತ ನಮ್ಮ ಸ್ವಾಮೀ. ನಮ್ಮ ಎಲ್ಲ ಪ್ರವೃತ್ತಿಗಳಿಗೂ ಅವನೇ ಒಡೆಯ. ನಮ್ಮ ಎಲ್ಲಾ ಪ್ರವೃತ್ತಿಗಳಿಗೂ ಅವನೇ ನಿಯಾಮಕನೆಂದು ಅವನ ಸ್ವಾಮಿತ್ವದ ಉಪಾಸನೆಯು ನಿರಂತರ ನಡೆಯಬೇಕೆಂಬುದನ್ನೂ ಈ ಸೂತ್ರವು ಹೇಳುತ್ತದೆ. ಈ ಸೂತ್ರದಲ್ಲಿ ಭಗವಂತನನ್ನು ಆತ್ಮನೆಂದು ತಿಳಿಯಬೇಕೆಂದು ಹೇಳಿದೆ. ತನ್ನನ್ನೇ ಭಗವಂತನೆಂದು ತಿಳಿಯಬೇಕೆಂದು ಕೆಲವರು ಇದಕ್ಕೆ ಅರ್ಥ ಮಾಡಿದ್ದಾರೆ. ಆದರೆ ''ಆತ್ಮ'' ಪದವು ವಿಷ್ಣು, ನಾರಾಯಣ, ಮುಂತಾದ

ಶಬ್ದಗಳಂತೆ ಶ್ರೀಹರಿಯ ಒಂದು ಹೆಸರು. ಭಾಗವತದಲ್ಲಿ ತ್ರಿಮೂರ್ತಿಗಳನ್ನು ಹೆಸರಿಸುವ ಒಂದು ಸಂದರ್ಭದಲ್ಲಿ ಶಿವನನ್ನು ಈಶ್ವರನೆಂದೂ, ಚತುರ್ಮುಖ ನನ್ನು ಬ್ರಹ್ಮನೆಂದೂ ಹೆಸರಿಸಿ ವಿಷ್ಣು ಎಂದು ಹೇಳುವ ಬದಲು ''ಆತ್ಮ'' ಪದವನ್ನು ಬಳಸಿದ್ದಾರೆ. ಇದರಿಂದ ವಿಷ್ಣು ಮತ್ತು ಆತ್ಮ ಈ ಎರಡು ಪದಗಳೂ ಒಂದೇ ವಸ್ತುವನ್ನು ಹೇಳುವ ಪರ್ಯಾಯದ ಪದಗಳೆಂದು ಸ್ಪಷ್ಟವಾಗುತ್ತದೆ. ವಿಷ್ಣುವಿನ ಅನೇಕನಾಮಗಳಲ್ಲಿ ಆತ್ಮ ಶಬ್ದವೂ ಒಂದು ಎಂಬುದಾಗಿ ಅನೇಕ ಪ್ರಮಾಣವಾಕ್ಯಗಳೂ ಇವೆ. ಬ್ರಹ್ಮಸೂತ್ರದಲ್ಲಿ ಒಂದೆಡೆ, ಈ ಲೋಕಗಳ ಆಧಾರನು ಯಾರು? ಎಂಬುದನ್ನು ಚರ್ಚಿಸುತ್ತಾ ಪರಬ್ರಹ್ಮನೇ ಎಂಬುದಾಗಿ ಸಿದ್ಧಾಂತಿಸಲಾಗಿದೆ. ಜೀವನೇ ಲೋಕಾಧಾರನು ಯಾಕೆ ಆಗಬಾರದು? ಎಂದು ಪ್ರಶ್ನಿಸಿಕೊಂಡು ಬ್ರಹ್ಮಸೂತ್ರವು ಹೀಗೆ ಉತ್ತರಿಸಿದೆ. ಉಪನಿಷತ್ತಿನಲ್ಲಿ ಲೋಕಾಧಾರನನ್ನು ಆತ್ಮನೆಂದು ಕರೆದಿದೆ. ಆತ್ಮಶಬ್ದವು ಪರಬ್ರಹ್ಮನದ್ದೇ ಹೆಸರು. ಇಂತಹ ಆತ್ಮಶಬ್ದದ ಉಲ್ಲೇಖವಿರುವುದರಿಂದ ಜೀವಾತ್ಮನು ಲೋಕಾಧಾರ ನಾಗಲಾರನು ಎಂಬುದಾಗಿ ಆತ್ಮ ಶಬ್ದದ ಆಧಾರದಿಂದ ಜೀವನನ್ನು ಅಲ್ಲಗಳೆದು ಪರಮಾತ್ಮನೇ ಲೋಕಾಧಾರನೆಂದು **''ದ್ಯುಭ್ವಾದ್ಯಾಯತನಂ ಸ್ವಶಬ್ದಾತ್''** ಎಂಬ ಸೂತ್ರದಲ್ಲಿ ತೀರ್ಮಾನಿಸಿದ್ದಾರೆ. ಒಂದು ವ್ಯಕ್ತಿಯಲ್ಲಿ ಸರ್ವಥಾ ಇಲ್ಲದಿರುವ ಶಬ್ದವನ್ನು ತೋರಿಸಿಯೇ ಆ ವಾಕ್ಯ ಆ ವ್ಯಕ್ತಿಯನ್ನು ಪ್ರತಿಪಾದಿಸುವುದಿಲ್ಲವೆಂದು ಸಾಧಿಸಬೇಕು. ಅವನಲ್ಲಿ ಪ್ರಸಿದ್ಧವಾದ ಶಬ್ದದ ಬಲದಿಂದಲೇ ಅವನು ಆ ವಾಕ್ಯದಿಂದ ಪ್ರತಿಪಾದ್ಯನಲ್ಲವೆಂದು ಹೇಳುವ ಪದ್ಧತಿಯೇ ಇಲ್ಲ. ಆತ್ಮ ಶಬ್ದವನ್ನು ತೋರಿಸಿ ಲೋಕಾಧಾರನು ಜೀವನಲ್ಲ ವೆಂದು ಸೂತ್ರವು ಸಾಧಿಸಬೇಕಾದರೆ ಆತ್ಮ ಶಬ್ದವು ಜೀವನ ಹೆಸರಲ್ಲವೆಂದು ಸ್ಪಷ್ಟವಾಗುವುದು. ಇದರಿಂದ ಆತ್ಮಶಬ್ದವು ಭಗವಂತನ ಒಂದು ಹೆಸರೆಂದೂ ಜೀವನು ಭಗವಂತನಲ್ಲವೆಂದೂ ಸ್ಪಷ್ಟವಾಗಿ ಸಿದ್ಧವಾಗುವುದು. ಹೀಗಿರುವಾಗ ಪರಮಾತ್ಮನೇ ಜೀವನೆಂದು ಈ ಸೂತ್ರವನ್ನು ವ್ಯಾಖ್ಯಾನಿಸುವುದು ಸರಿಯಾಗಲಾರದು. ಶರೀರಕ್ಕೆ ಜೀವನು ನಿಯಾಮಕನಾಗಿ ಆತ್ಮನಾಗಿರುವಂತೆ ಇಡೀ ವಿಶ್ವಕ್ಕೆ ನಿಯಾಮಕನಾಗಿ ಭಗವಂತನು ಆತ್ಮನೆನಿಸಿದ್ದಾನೆ. ಅಂತಹ ಭಗವಂತನನ್ನು ಸ್ವಾಮಿಯೆಂದು ನಿರಂತರವಾಗಿ ರೋಗ, ಸಂತಾಪ ಪೀಡಿತನಾಗಿರುವಾಗಲೂ ಮರೆಯದೆ ನೆನೆಯಬೇಕೆಂಬುದೇ ಈ ಸೂತ್ರದ ಅರ್ಥವಾಗಿದೆ.

## "ಓಂ ನ ಪ್ರತೀಕೇ ನಹಿ ಸಃ ಓಂ"

ಉಪನಿಷತ್ತಿನಲ್ಲಿ **'ಮನೋ ಬ್ರಹ್ಮೇತ್ಯುಪಾಸೀತ'** ಎಂಬ ವಾಕ್ಯವಿದೆ. ಮನಸ್ಸನ್ನೇ ಬ್ರಹ್ಮನೆಂದು ಉಪಾಸಿಸಬೇಕೆಂದು ಇದಕ್ಕೆ ಅರ್ಥವು ಭಾಸವಾಗುತ್ತದೆ. ಅದನ್ನು ಈ ಸೂತ್ರವು ಬಲವಾಗಿ ನಿಷೇಧಿಸುತ್ತದೆ. ಜಡವಾದ ಅಂತಃಕರಣವಾಗಲೀ, ಬಾಹ್ಯವಾದ ಕಲ್ಲಿನ ಮೂರ್ತಿಯಾಗಲೀ ಪರಮಾತ್ಮನಲ್ಲ. ಇವೆಲ್ಲವೂ ಭಗವಂತನ ಪ್ರತೀಕಗಳು. ಅಲ್ಲಿ ಭಗವಂತನ ಸನ್ನಿಧಾನವನ್ನು ಗುರುತಿಸಿ ಅವನನ್ನು ಉಪಾಸಿಸಬೇಕಲ್ಲದೆ ಜಡವಾದ ಅಂತರ ಬಾಹ್ಯ ಪ್ರತೀಕಗಳನ್ನೇ ದೇವರೆಂದು ತಿಳಿಯಬಾರದು. ಅಂತೆಯೇ ಧ್ಯಾನವನ್ನೂ ಮಾಡಬಾರದು.

ವಸ್ತುವು ಹೇಗೇ ಇರಲಿ ಅದರಂತೆಯೇ ಉಪಾಸನೆ ಮಾಡಬೇಕಿಲ್ಲ. ಉಪಾಸನೆಗೂ ವಸ್ತುಸ್ಥಿತಿಗೂ ಸಂಬಂಧವಿಲ್ಲ. ಮನಸ್ಸಿನ ಅಂತರ್ಮುಖತೆಗಾಗಿ ಯಾವ ರೀತಿಯಲ್ಲಾದರೂ ಉಪಾಸನೆ ಮಾಡಬಹುದೆಂದು ಕೆಲವರು ಪ್ರತಿಪಾದಿಸುತ್ತಾರೆ. ಇದು ಸರ್ವಥಾ ಸರಿಯಲ್ಲವೆಂದು ಸೂತ್ರಕಾರರ ಅಭಿಪ್ರಾಯವಾಗಿದೆ. ಅನೇಕ ಪ್ರಮಾಣವಚನಗಳಿಂದ ಶ್ರೀಮದಾಚಾರ್ಯರು ಇದನ್ನು ಸಮರ್ಥಿಸಿದ್ದಾರೆ. ಭಗವಂತನ ವಾಸ್ತವಸ್ವರೂಪಕ್ಕಿಂತ ವಿಪರೀತವಾಗಿ ಜ್ಞಾನ ಮತ್ತು ಉಪಾಸನೆಗಳನ್ನು ಮಾಡುವುದರಿಂದ ಮಹಾ ಅನರ್ಥವು ಪ್ರಾಪ್ತವಾಗುತ್ತದೆ. ಇದು ಒಂದು ರೀತಿಯಿಂದ ಭಗವಂತನ ಅಪಲಾಪವೆನಿಸುತ್ತದೆ. ಭಗವಂತನ ವ್ಯಕ್ತಿತ್ವವನ್ನೇ ಅಪಹರಿಸುವ ಭಾರೀ ಕಳ್ಳತನವಿದು. ಯಾವ ಜಡಪ್ರತಿಮೆಯನ್ನಾಗಲೀ ದೇವತೆಗಳನ್ನಾಗಲೀ, ಪರಮಾತ್ಮನೆಂದು ತಿಳಿಯದೆ, ಇವರೆಲ್ಲರೂ ಭಗವಂತನ ಪ್ರತಿಮೆಗಳು, ಇವರಲ್ಲಿ ಭಗವಂತನ ಸನ್ನಿಧಾನವಿದೆಯೆಂದು ತಿಳಿಯಬೇಕು. ಪ್ರತಿಮೆಯೇ ದೇವರಲ್ಲ, ಪ್ರತಿಮೆಯಲ್ಲಿ ದೇವರು ಎನ್ನುವ ಸೂಕ್ಷ್ಮ ಅಂತರವನ್ನು ನಾವು ಬಾಲ್ಯದಿಂದಲೂ ತಿಳಿಯಲು ಪ್ರಯತ್ನಿಸಬೇಕು. ಸಾಧನೆಯ ಯಾವ ಹಂತದಲ್ಲೂ ಅಸತ್ಯದ ಸ್ಪರ್ಶಕ್ಕೆ ಅವಕಾಶವಿರಬಾರದು. ಹೀಗಿರುವಾಗ ಉಪಾಸನೆಯಂತಹ ಮೇಲ್ಮಟ್ಟದ ಸಾಧನೆಯ ಸಂದರ್ಭದಲ್ಲಿ ಅಸತ್ಯೋಪಾಸನೆಗೆ ಅವಕಾಶ ನೀಡುವುದು ಸರ್ವಥಾ ಸರಿಯಲ್ಲ.

## ಪ್ರತಿಮೆಯೇ ದೇವರಲ್ಲ

ಪ್ರತಿಮೆಯನ್ನು ಪರಮಾತ್ಮನೆಂದು ಭಾವಿಸುವುದರಿಂದ ನಮಗೆ ಅನುಕೂಲವೇ ಹೊರತು ತೊಂದರೆಯಿಲ್ಲವೆಂದು ಕೆಲವರು ವಾದಿಸುತ್ತಾರೆ. ಒಬ್ಬ ಸಾಮಾನ್ಯ ಸೇವಕನನ್ನು ರಾಜನೆಂದು ಹೊಗಳಿ ಉಬ್ಬಿಸಿ, ಅವನಿಂದ ಕೆಲಸ ಮಾಡಿಸುತ್ತೇವೆ. ಅವನು ರಾಜನಲ್ಲವೆಂದು ಗೊತ್ತಿದ್ದರೂ ರಾಜನೆಂದು ಹೊಗಳಿ ಕೆಲಸ ಸಾಧಿಸುವಂತೆ ಪ್ರತಿಮೆಯನ್ನು ಬ್ರಹ್ಮನೆಂದು ಹೊಗಳಿ ಅದನ್ನು ವೈಭವೀಕರಿಸುವುದರಿಂದ ನಮಗೆ ವಿಶೇಷ ಪ್ರಯೋಜನವಾಗುತ್ತದೆಯೆಂದು ಅವರ ಸಮರ್ಥನೆಯಾಗಿದೆ. ಒಬ್ಬ ಸೇವಕನನ್ನು ರಾಜನೆಂದು ಪ್ರಶಂಸಿಸಿದಾಗ ಅವನಿಗೆ ಖುಷಿಯಾಗಿ ಮೈ ಮರೆತು ನಮ್ಮ ಕೆಲಸವನ್ನು ಆತನು ಮಾಡಬಹುದು. ಆದರೆ ಜಡವಾದ ಪ್ರತಿಮೆಯನ್ನು ಯಾವ ರೀತಿಯಲ್ಲಿ ಹೊಗಳಿದರೂ ನಮಗೆ ಆಗುವ ಲಾಭವೇನು? ನಮ್ಮ ಯಾವ ಹೊಗಳಿಕೆ ಯಿಂದಲೂ ಆ ಜಡವಸ್ತುವು ಹಿಗ್ಗುವ ಸಂಭವವೇ ಇಲ್ಲ. ತನ್ನ ಸೇವಕನನ್ನೇ ರಾಜನೆಂದು ತಿಳಿದು ಅದೇ ರೀತಿಯ ಉಪಚಾರ ಗೌರವಗಳನ್ನು ಸಲ್ಲಿಸಿದ್ದು ರಾಜನಿಗೆ ಗೊತ್ತಾದಲ್ಲಿ ಅವನು ಇದನ್ನು ತನ್ನ ಅವಮಾನವೆಂದು ಭಾವಿಸಲಾರನೇ? ಜಡವಸ್ತುವನ್ನು ಭಗವಂತನೆಂದು ನಾವು ಉಪಾಸನೆ ಮಾಡಿದರೂ ಅದಕ್ಕೆ ಫಲ ಕೊಡುವವನು ಭಗವಂತನೇ ಹೊರತು ಜಡವಸ್ತುವಲ್ಲ. ತನ್ನನ್ನು ಜಡವಸ್ತುವಿನ ಮಟ್ಟಕ್ಕೆ ಇಳಿಸಿ ನಾವು ಉಪಾಸನೆ ಮಾಡಿದಾಗ ಅದರಿಂದ ದೇವರು ಪ್ರಸನ್ನನಾಗುವ ಬದಲು ಲೋಕದೃಷ್ಟಿ ಯಿಂದ ಅಸಮಾಧಾನಗೊಳ್ಳುವುದೇ ಸಹಜ. ತನ್ನ ಮಹಿಮೆಯನ್ನು ಕುಗ್ಗಿಸಿ, ಕೇವಲ ಜಡವಸ್ತುವೆಂಬ ದೃಷ್ಟಿಯಿಂದ ಅನ್ಯಥೋಪಾಸನೆಯನ್ನು ಮಾಡಿದವನಿಗೆ ಭಗವಂತನು ಪ್ರಸನ್ನನಾಗಿ ಅನುಗ್ರಹಿಸುವುದು ಹೇಗೆ? ಹೀಗೆ ಇತ್ತ ಭಗವಂತನ ವರದಾನವೂ ಇಲ್ಲ; ಅತ್ತ ಇವನ ಉಪಾಸನೆ ಮಾಡಿದ ಜಡವಸ್ತುವೂ ಏನೂ ನೀಡಲಾರದು. ಕೇವಲ ಭಗವಂತನ ಆಗ್ರಹಕ್ಕೆ ಮಾತ್ರ ಪಾತ್ರನಾಗುವಂತಹ ಈ ಅನ್ಯಥೋಪಾಸನೆಯ ಹವ್ಯಾಸವೇಕೆ?

ವಾಸ್ತವಸ್ಥಿತಿಗೆ ವಿರುದ್ಧವಾಗಿ ಉಪಾಸನೆಯ ದೃಷ್ಟಿಯಿಂದ ಜಡವಾದ ಪ್ರತಿಮೆಗಳನ್ನು ಪರಮಾತ್ಮನೆಂದು ಭಾವಿಸಬಹುದೆಂದು ಹೇಳುವವರೂ ಆ ಪ್ರತಿಮೆಯನ್ನು ಜೀವರೆಂದು ಉಪಾಸನೆ ಮಾಡಬಾರದೆಂದು ಪ್ರತಿಪಾದಿಸು

ತ್ತಾರೆ. **''ನ ಪ್ರತೀಕೇ ನಹಿ ಸಃ''** ಎಂಬ ಸೂತ್ರಕ್ಕೆ ಪ್ರತಿಮೆಗಳಲ್ಲಿ ಜೀವೋಪಾಸನೆಯನ್ನು ಮಾಡಬಾರದೆಂದು ಅರ್ಥವಿವರಣೆಯನ್ನು ಮಾಡುತ್ತಾರೆ. ಪ್ರತಿಮೆಯು ಜೀವನಲ್ಲವಾದುದರಿಂದ ಈ ಅನ್ಯಥೋಪಾಸನೆಯು ಸಲ್ಲದೆಂದು ಕಾರಣವನ್ನು **''ನಹಿ ಸಃ''** ಎಂಬುದಾಗಿ ಸೂತ್ರವು ಪ್ರತಿಪಾದಿಸುತ್ತದೆಯೆಂದೂ ಹೇಳುವರು. ಪ್ರತಿಮೆಯಲ್ಲಿ ಜೀವೋಪಾಸನೆಯು ಅನ್ಯಥೋಪಾಸನೆಯಾಗುವುದರಿಂದ ಮಾಡಬಾರದಾದರೆ ಅದೇ ಕಾರಣದಿಂದ ಪ್ರತಿಮೆಯಲ್ಲಿ ಬ್ರಹ್ಮೋಪಾಸನೆಯೂ ವರ್ಜ್ಯವಾಗುವುದಿಲ್ಲವೇ? ಪ್ರತಿಮೆಯು ಹೇಗೆ ಜೀವನಲ್ಲವೋ ಅದೇ ರೀತಿಯಾಗಿ ಅದು ಬ್ರಹ್ಮನೂ ಅಲ್ಲ. ವಿಪರೀತೋಪಾಸನೆಯನ್ನು ಮಾಡಬಾರದಾದರೆ ಈ ಎರಡನ್ನೂ ಬಿಡಬೇಕು. ಜಡದಲ್ಲಿ ಬ್ರಹ್ಮೋಪಾಸನೆಯನ್ನು ಸ್ವೀಕರಿಸಿ, ಜೀವೋಪಾಸನೆಯು ಬೇಡವೆಂದು ಹೇಳುವುದು ಅರ್ಥಹೀನವಾಗುವುದು. ಪ್ರತಿಮೆಯನ್ನು ಬ್ರಹ್ಮನೆಂದು ಭಾವಿಸುವುದರಿಂದ ಅದಕ್ಕೆ ರಾಜನೆಂದು ಹೊಗಳಲ್ಪಟ್ಟ ಸೇವಕನಂತೆ ಶ್ರೇಷ್ಠತೆಯು ಪ್ರಾಪ್ತವಾಗಿ ಫಲವು ದೊರಕುವುದಾದರೆ ಜಡದಿಂದ ಜೀವನೂ ಉತ್ತಮನಾಗಿರುವುದರಿಂದ ಜಡವಾದ ಪ್ರತಿಮೆಯನ್ನು ಜೀವನೆಂದು ಭಾವಿಸುವುದರಿಂದ ಅದಕ್ಕೂ ಶ್ರೇಷ್ಠತೆಯು ದೊರಕಿ ನಮಗೆ ಅದರಿಂದ ಫಲವು ದೊರೆಯಲಾರದೇ? ಆದುದರಿಂದ ಪ್ರತಿಮೆಯಲ್ಲಿ ಬ್ರಹ್ಮೋಪಾಸನೆಯನ್ನು ಒಪ್ಪಿ ಜೀವೋಪಾಸನೆಯನ್ನು ಮಾತ್ರ ನಿರಾಕರಿಸಲು ಹೇಳುವ ಕಾರಣವು ಅತ್ಯಂತ ಅಸಮರ್ಥನೀಯವಾಗಿದೆ.

ಆದುದರಿಂದ **''ಬ್ರಹ್ಮದೃಷ್ಟಿರುತ್ಕರ್ಷಾತ್''** ಎಂಬ ಸೂತ್ರವು ಪ್ರತಿಮೆಯನ್ನು ಬ್ರಹ್ಮನೆಂದು ಭಾವಿಸಬೇಕೆಂದು ಪ್ರತಿಪಾದಿಸುವುದಿಲ್ಲ. ಭಗವಂತನನ್ನು ಪರಿಪೂರ್ಣನೆಂದೇ ನಾವು ನಿರಂತರವಾಗಿ ಉಪಾಸಿಸಬೇಕೆಂದೇ ಈ ಸೂತ್ರದ ಅಭಿಪ್ರಾಯ ವಾಗಿದೆ. ಹೀಗೆ ಭಗವಂತನನ್ನು ಸ್ವಾಮಿಯೆಂದೂ ಪರಿಪೂರ್ಣನೆಂದೂ ನಾವು ಧ್ಯಾನಮಾಡಲು ಬ್ರಹ್ಮಸೂತ್ರವು ಈ ಅಧ್ಯಾಯದಲ್ಲಿ ಹೆಚ್ಚು ಒತ್ತು ನೀಡಿದೆ.

**ಪ್ರಾರಬ್ಧಕರ್ಮನಾಶ**

ಹೀಗೆ ಭಗವಂತನು, ಸ್ವಾಮೀ, ಪರಿಪೂರ್ಣ ಎಂದು ಮುಂತಾಗಿ ಉಪಾಸನೆಯನ್ನು ಮಾಡಿ ಅವನ ಸಾಕ್ಷಾತ್ಕಾರವನ್ನು ಪಡೆದರೆ ಪ್ರಾರಬ್ಧ

ಕರ್ಮವನ್ನು ಹೊರತು ಉಳಿದ ಸಕಲ ಪಾಪಗಳೂ ನಾಶವಾಗುತ್ತವೆ. ಪುಣ್ಯಗಳಲ್ಲಿಯೂ ಸಂಸಾರಭೋಗಕ್ಕೆ ಕಾರಣಗಳಾಗಿ ಮೋಕ್ಷಕ್ಕೆ ವಿರೋಧಿ ಗಳಾದ ಪುಣ್ಯಗಳೂ ನಾಶವಾಗುತ್ತವೆ. ಆದರೆ ನಿಷ್ಕಾಮಕರ್ಮ ಮತ್ತು ಉಪಾಸನೆಗಳಿಂದ ಉಂಟಾದ ಮೋಕ್ಷಕ್ಕೆ ಅನುಕೂಲಗಳಾದ ಪುಣ್ಯಗಳು ನಾಶವಾಗುವುದಿಲ್ಲ. ಮುಕ್ತಿಯಲ್ಲಿ ಆನಂದವೃದ್ಧಿಗೆ ಅವು ಕಾರಣವಾಗುತ್ತವೆ. ನಮ್ಮ ಬಂಧಕಗಳಾದ ಪಾಪಪುಣ್ಯಗಳ ನಾಶಕ್ಕೆ ಕೇವಲ ಸಾಕ್ಷಾತ್ಕಾರದ ಶಕ್ತಿಯು ಕಾರಣವಲ್ಲ. ಪ್ರಸನ್ನನಾದ ಭಗವಂತನ ಅನುಗ್ರಹಶಕ್ತಿಯಿಂದಲೇ ಈ ಅನಿಷ್ಟನಾಶವು ಸಂಭವಿಸುತ್ತದೆ.

ಅದರಂತೆ ಭಗವದ್ವಿರೋಧಿಗಳಾದ ದುಷ್ಟಚೇತನರ ಕೆಟ್ಟ ಸಾಧನೆಗಳು ತುತ್ತತುದಿಗೆ ಮುಟ್ಟಿದಾಗ ಅವರ ಪುಣ್ಯಗಳೂ ನಾಶವಾಗುತ್ತವೆ. ಮುಂದೆ ಅವರು ಮಾಡುವ ಪುಣ್ಯಗಳೂ ಅವರಿಗೆ ಅನುಪಯುಕ್ತಗಳಾಗುತ್ತವೆ.

ಹೀಗೆ ಭಗವದ್‌ಜ್ಞಾನಿಗಳೂ ಭಗವದ್‌ದ್ವೇಷಿಗಳೂ ಈ ಕೊನೆಯ ಘಟ್ಟದಲ್ಲಿ ತಮ್ಮ ಮುಕ್ತಿವಿರೋಧಿಗಳಾದ ಕರ್ಮಗಳನ್ನು ಕಳೆದುಕೊಂಡರೂ ಪ್ರಾರಬ್ಧಕರ್ಮಗಳು ಮಾತ್ರ ಉಳಿಯುತ್ತವೆ. ಅವುಗಳನ್ನು ಅವರು ಅನುಭವಿಸಲೇಬೇಕಾಗುತ್ತದೆ. ಭಗವತ್‌ಸಾಕ್ಷಾತ್ಕಾರಿಗಳು ತಮ್ಮ ಪ್ರಾರಬ್ಧ ಕರ್ಮವು ತೀರುವವರೆಗೆ ತಮ್ಮ ಸಾಧನೆಯನ್ನು ಮುಂದುವರೆಸಿಕೊಂಡು ಸಂಸಾರದಲ್ಲಿ ಜೀವನ್ಮುಕ್ತರಾಗಿ ಉಳಿಯುತ್ತಾರೆ. ಅನಂತರದಲ್ಲಿಯೇ ಅವರು ಮುಕ್ತಿಯನ್ನು ಪಡೆಯುವರು. ಬ್ರಹ್ಮಸಾಕ್ಷಾತ್ಕಾರವನ್ನು ಪಡೆದಿರುವ ಈ ಜೀವನ್ಮುಕ್ತರು ತಾವು ಸತ್ಕರ್ಮಗಳಿಂದ ಪಡೆಯುವ ಸ್ವರ್ಗ ಮುಂತಾದ ಸುಖಗಳಲ್ಲಿ ಹೆಚ್ಚಿನ ಅತಿಶಯವನ್ನು ಜ್ಞಾನದ ಶಕ್ತಿಯಿಂದ ಪಡೆಯುತ್ತಾರೆ. ಅದರಂತೆ ಈ ಸಾಕ್ಷಾತ್ಕಾರದ ನಂತರ ತಾವು ಮಾಡುವ ನಿಷ್ಕಾಮಕರ್ಮಗಳಿಂದ ಮುಕ್ತಿಯಲ್ಲಿಯೂ ಆನಂದಾತಿಶಯವನ್ನು ಹೊಂದುವರು.

ಈ ಪ್ರಾರಬ್ಧಕರ್ಮಗಳ ಮುಕ್ತಾಯ ಎಂದು? ದೇವತೆಗಳು ಅನೇಕ ಕಲ್ಪಗಳವರೆಗೆ ಈ ಪ್ರಾರಬ್ಧಕರ್ಮಗಳನ್ನು ಅನುಭವಿಸಿಕೊಂಡು ಜೊತೆಗೆ ಸಾಧನೆಗಳನ್ನೂ ನಡೆಸುತ್ತಾರೆ. ಬ್ರಹ್ಮದೇವರು ನೂರು ಕಲ್ಪಗಳ ಒಳಗೆ ಈ ಪ್ರಾರಬ್ಧ ಕರ್ಮಗಳನ್ನು ಕಳೆದುಕೊಳ್ಳುವುದಾದರೆ ಉಳಿದ ದೇವತೆಗಳು ಐವತ್ತು ಇಪ್ಪತ್ತು ಹತ್ತು ಕಲ್ಪಗಳ ಒಳಗೆ ಇವುಗಳನ್ನು ಕಳೆದುಕೊಳ್ಳುತ್ತಾರೆ.

ಉಳಿದವರಂತೂ ಒಂದು ಬ್ರಹ್ಮ ಕಲ್ಪದೊಳಗೆ ಈ ಪ್ರಾರಬ್ಧ ಕರ್ಮಗಳನ್ನು ಅನುಭವಿಸಿ ಮುಕ್ತಿಯನ್ನು ಹೊಂದುವರು. ಹೀಗೆ ಮೋಕ್ಷವಿರೋಧಿಗಳಾದ ಕರ್ಮಗಳಿಂದ ಬಿಡುಗಡೆಯ ಪ್ರಕಾರವನ್ನು ವಿವರಿಸುವುದರೊಂದಿಗೆ ಮುಕ್ತಿಯ ಮೊದಲ ಹಂತವನ್ನು ಈ ಪಾದವು ಪ್ರತಿಪಾದಿಸಿದೆ.

**ಮೋಕ್ಷಮಾರ್ಗ**

ಭಗವತ್‌ಸಾಕ್ಷಾತ್ಕಾರವನ್ನು ಪಡೆದು ಎಲ್ಲಾ ಕರ್ಮಗಳಿಂದ ಬಿಡುಗಡೆ ಹೊಂದಿದ ಜೀವರು ಸುಷುಮ್ನಾನಾಡಿಯ ಮುಖಾಂತರ ದೇಹದಿಂದ ಉತ್ಕ್ರಾಂತಿಯನ್ನು ಹೊಂದಿ ಬೇರೆಬೇರೆ ದೇವತೆಗಳಿಂದ ಅಧಿಷ್ಠಿತಗಳಾದ ಅರ್ಚಿರ್ಲೋಕ ಮುಂತಾದ ಲೋಕಗಳನ್ನು ದಾಟಿಕೊಂಡು ಭಗವಂತನ ಬಳಿಗೆ ಸೇರುವರು. ಇವೇ ಉತ್ಕ್ರಾಂತಿ ಮತ್ತು ಅರ್ಚಿರಾದಿಮಾರ್ಗ ಎಂಬುದಾಗಿ ಮುಕ್ತಿಯ ಎರಡನೆಯ ಮತ್ತು ಮೂರನೆಯ ಹಂತಗಳು. ಆದರೆ ದೇವತೆಗಳಿಗೆ ಈ ಉತ್ಕ್ರಾಂತಿಯಾಗಲೀ, ಅರ್ಚಿರ್ಲೋಕ ಮುಂತಾದ ದಾರಿಯಾಗಲೀ ಇಲ್ಲ. ಈ ಲೋಕದಲ್ಲಿ ಬೇರೆ ಬೇರೆ ಜಡವಸ್ತುಗಳಲ್ಲಿ ಅಭಿಮಾನಿಗಳಾಗಿ ನೆಲೆಸಿ ಅವುಗಳನ್ನು ನಿಯಂತ್ರಿಸುವ ಜವಾಬ್ದಾರಿಯುಳ್ಳ ದೇವತೆಗಳು ಪ್ರಳಯಕ್ಕಿಂತ ಮುಂಚೆಯೇ ಈ ದೇಹವನ್ನು ವಿಸರ್ಜಿಸಿ ವೈಕುಂಠಲೋಕಕ್ಕೆ ತೆರಳಲಾರರು. ಪ್ರಳಯದ ನಂತರವಂತೂ ಅರ್ಚಿರ್ ಮುಂತಾದ ಲೋಕಗಳೇ ಇಲ್ಲ. ಹೀಗಾಗಿ ದೇವತೆಗಳಿಗೆ ಆ ಲೋಕಗಳ ಮುಖಾಂತರವಾಗಿ ಪರಮಾತ್ಮನ ಲೋಕಕ್ಕೆ ಸೇರುವ ಪ್ರಶ್ನೆಯೇ ಇಲ್ಲ. ಪ್ರಳಯಕಾಲದಲ್ಲಿ ಜಡಪದಾರ್ಥಗಳು ತಮ್ಮ ತಮ್ಮ ಕಾರಣಗಳಲ್ಲಿ ಲೀನವಾಗುತ್ತವೆ. ಆಗ ಆವಾವಾ ಕಾರ್ಯಪದಾರ್ಥಗಳಲ್ಲಿರುವ ಅಭಿಮಾನಿದೇವತೆಗಳು ಅವುಗಳ ಕಾರಣವಸ್ತುಗಳಲ್ಲಿ ಇರುವ ಅಭಿಮಾನಿ ದೇವತೆಗಳಲ್ಲಿ ಪ್ರವೇಶ ಪಡೆಯುತ್ತಾರೆ. ಅವರ ದೇಹಗಳೂ ಆ ಕಾರಣ ಪದಾರ್ಥಗಳ ಅಭಿಮಾನಿದೇವತೆಗಳ ದೇಹದಲ್ಲಿ ಲಯವನ್ನು ಹೊಂದುತ್ತವೆ. ಬಾಹ್ಯ ವಸ್ತುಗಳಲ್ಲಿ ಪರಿವರ್ತನವು ನಡೆಯುವಾಗ ಅವುಗಳ ಒಳಗಿರುವ ದೈವೀಶಕ್ತಿಗಳಲ್ಲಿಯೂ ಇಂತಹ ಅಗೋಚರ ಘಟನೆಗಳು ನಡೆಯುತ್ತವೆ. ಜಡಗಳಲ್ಲಿ ನಡೆಯುವ ಪ್ರತಿಯೊಂದು ಕಾರ್ಯಗಳ ಹಿಂದೆ ಅವುಗಳ ಒಳಗಿರುವ ದೈವೀಶಕ್ತಿಗಳ ಕೈವಾಡ ಇದ್ದೇ ಇರುತ್ತದೆ. ಈ ದೈವೀಶಕ್ತಿಗಳನ್ನೇ ಅಭಿಮಾನಿ ದೇವತೆಗಳೆಂದು ಕರೆಯುತ್ತೇವೆ. ಇವರೇ ಬ್ರಹ್ಮ, ರುದ್ರ,

ಸೂರ್ಯ, ಚಂದ್ರ, ಇಂದ್ರ, ಅಗ್ನಿ, ವರುಣ ಮುಂತಾದ ವಿಭಿನ್ನ ದೇವತೆಗಳು. ಈ ದೈವೀಶಕ್ತಿಗಳು ತಮ್ಮ ದಿವ್ಯ ದೇಹ ಮತ್ತು ತಾವು ನಿಯಂತ್ರಿಸುತ್ತಿರುವ ಜಡವಸ್ತುಗಳ ಜೊತೆಗೆ ಉತ್ತಮರಲ್ಲಿ ಪ್ರವೇಶ ಮಾಡುವಂತಹ ಅದ್ಭುತ ಘಟನೆಗಳು ಪ್ರಳಯಕಾಲದಲ್ಲಿ ನಡೆಯುವುದರಿಂದ ಅವರಿಗೆ ದೇಹದಿಂದ ಉತ್ಕ್ರಮಣ ಹೊಂದಿ ಬೇರೆಬೇರೆ ಲೋಕಗಳ ಹಾದಿಯಲ್ಲಿ ಮುಕ್ತಿಲೋಕಕ್ಕೆ ಹೋಗುವ ಸಂಭವವೇ ಇಲ್ಲ. ಆದುದರಿಂದ ದೇವತೆಗಳಿಗೆ ಕರ್ಮನಾಶ ಉತ್ತಮರಲ್ಲಿ ಲಯ, ಸ್ವರೂಪಾನಂದದ (ಆವಿರ್ಭಾವ) ಅನುಭವ ಎಂಬುದಾಗಿ ಮುಕ್ತಿಯಲ್ಲಿ ಮೂರು ಪ್ರಕಾರಗಳು ಮಾತ್ರ ಇವೆ. ಉಳಿದವರಿಗೆ ಇರುವಂತೆ ನಾಲ್ಕು ಹಂತಗಳು ಇಲ್ಲ. ಆದರೆ ದೇವತೆಗಳೇ ಮಾನವ ಲೋಕದಲ್ಲಿ ಅವತಾರ ಮಾಡಿದ ಸಂದರ್ಭದಲ್ಲಿ ಮಾತ್ರ ಅವರು ದೇಹದಿಂದ ಉತ್ಕ್ರಾಂತಿ ಹೊಂದಿ ಬೇರೆ ಬೇರೆ ಲೋಕಗಳ ಮುಖಾಂತರ ತಮ್ಮ ಸ್ವಸ್ಥಾನವನ್ನು ಸೇರುತ್ತಾರೆ. ಅಂತೂ ಮುಕ್ತಿಯ ಸಂದರ್ಭದಲ್ಲಿ ದೇವತೆಗಳಿಗೆ ಉತ್ಕ್ರಾಂತಿ ಮತ್ತು ಮಾರ್ಗಗಳೂ ಇಲ್ಲ.

ಉಳಿದ ಸಜ್ಜೀವರು ಪ್ರಳಯಕಾಲದ ಮೊದಲೇ ಉತ್ಕ್ರಾಂತಿಯನ್ನು ಹೊಂದಿ ಭಗವಂತನ ಒಳಗೆ ಬಂದರೂ ಸೂಕ್ಷ್ಮವಾದ ಲಿಂಗದೇಹದ ನಾಶವಾಗಿ ಸ್ವರೂಪಾನಂದವನ್ನು ಅನುಭವಿಸುವ ಮುಕ್ತಿಯ ಕೊನೆಯ ಹಂತವು ಅವರಿಗೆ ಪ್ರಳಯಕಾಲದ ನಂತರ ಬ್ರಹ್ಮದೇವರ ಜೊತೆಗೆಯೇ ಸಂಭವಿಸುತ್ತದೆ. ಭಗವದ್ದರ್ಶನವನ್ನು ಪಡೆದು ಅವರು ಅಲ್ಲಿಯವರೆಗೆ ಬ್ರಹ್ಮದೇವರ ಲೋಕದಲ್ಲಿ ಮುಕ್ತಿಯ ನಿರೀಕ್ಷೆಯಲ್ಲಿ ಇರುತ್ತಾರೆ. ಅಂತೂ ಸಂಗ್ರಹವಾಗಿ ಮುಕ್ತಿಯ ಸ್ವರೂಪವನ್ನು ಈ ರೀತಿಯಲ್ಲಿ ನಿರೂಪಿಸಬಹುದು. ಬ್ರಹ್ಮ ಸಾಕ್ಷಾತ್ಕಾರದಿಂದ ಎಲ್ಲಾ ಅನಿಷ್ಟಗಳನ್ನು ಕಳೆದುಕೊಂಡು ಉಳಿದವುಗಳನ್ನು ಅನುಭವಿಸಿ ತೀರಿಸಿಕೊಂಡು ಎಲ್ಲಾ ಅನಿಷ್ಟಕರ್ಮಗಳಿಂದ ಮುಕ್ತರಾಗಿ, ಕೆಲವರು ಉತ್ತಮರಲ್ಲಿ ಲಯ ಹೊಂದಿ ನೇರವಾಗಿಯೂ, ಕೆಲವರು ಬ್ರಹ್ಮನಾಡಿಯಲ್ಲಿ ಉತ್ಕ್ರಮಣದಿಂದ, ದೇಹವನ್ನು ಪರಿತ್ಯಜಿಸಿ, ಅರ್ಚಿರ್ ಮುಂತಾದ ಲೋಕಗಳ ದಾರಿಯಿಂದಲೂ ಬ್ರಹ್ಮದೇವರ ಜೊತೆಗೆ ವೈಕುಂಠದಲ್ಲಿ ನೆಲೆಸಿದ ಭಗವಂತನನ್ನು ಹೊಂದಿ ಲಿಂಗಶರೀರವನ್ನು ಕಳೆದುಕೊಂಡು ಜಡಪ್ರಕೃತಿಯಿಂದ ಪೂರ್ಣ ವಿಮುಕ್ತರಾಗಿ ಯಾವ ದುಃಖಲೇಶವೂ ಇಲ್ಲದ,

ಚೈತನ್ಯಸ್ವರೂಪದಿವ್ಯಾನಂದಭೋಗವನ್ನು ತಮ್ಮ ಸ್ವಾಭಾವಿಕಯೋಗ್ಯತೆಗೆ ಅನುಗುಣವಾಗಿ ನಿರಂತರವಾಗಿ ಅನುಭವಿಸಿಕೊಂಡು ಭಗವಂತನ ಮಹಾ ಸಾನ್ನಿಧ್ಯದಲ್ಲಿ ಅವನ ದಿವ್ಯದರ್ಶನವನ್ನು ಪಡೆಯುತ್ತಾ, ಅನಂತ ಕಾಲದವರೆಗೆ ಇರುವುದೇ ಮುಕ್ತಿಯ ನಿಜವಾದ ಸ್ವರೂಪವಾಗಿದೆ.

## ಮುಕ್ತಿಸ್ವರೂಪದಲ್ಲಿ ಮತಭೇದ

ಆದರೆ ಮುಕ್ತಿಯ ಈ ಸ್ವರೂಪದ ಬಗ್ಗೆ ಮತ ಮತಗಳಲ್ಲಿ ಅತ್ಯಂತ ವಿರುದ್ಧವಾದ ಅಭಿಪ್ರಾಯಗಳಿವೆ. ಪ್ರಪಂಚದಲ್ಲಿರುವ ಬೇರೆ ಬೇರೆ ಮತಗಳು ಮುಕ್ತಿಯ ಸ್ವರೂಪವನ್ನು ಬೇರೆ ಬೇರೆ ರೀತಿಯಿಂದ ವಿವರಿಸುತ್ತವೆ. ಈ ವಿಭಿನ್ನ ವಿಚಾರಗಳು ಉಂಟಾಗಲು ಕಾರಣಗಳೇನು? ಮುಕ್ತಿಯ ವಿಚಾರದಲ್ಲಿ ಪ್ರಮಾಣಗಳಿದ್ದರೆ, ಎಲ್ಲರಿಗೂ ಆ ಪ್ರಮಾಣಗಳಿಗೆ ಅನುಸಾರವಾಗಿ ಒಂದೇ ರೀತಿಯ ಸರಿಯಾದ ಜ್ಞಾನ ಏಕೆ ಉಂಟಾಗಲಿಲ್ಲ? ಕೆಲವೊಂದು ಕುತರ್ಕಗಳು ಹಾಗೂ ಅಪ್ರಮಾಣಗಳಾದ ವಾಕ್ಯಗಳಿಂದ ಅನೇಕರಿಗೆ ಮುಕ್ತಿಯ ವಿಷಯದಲ್ಲಿ ಭ್ರಮೆ ಹಾಗೂ ಗೊಂದಲವುಂಟಾಗಿ ಇಂತಹ ಅನೇಕ ಮತಗಳು ಹೊರಟಿವೆಯಾದರೆ ಉಳಿದವರಿಗೆ ಈ ಭ್ರಮೆ ಯಾಕೆ ಉಂಟಾಗಲಿಲ್ಲ? ಆ ಕೆಟ್ಟ ಪ್ರಮಾಣಗಳಲ್ಲಿರುವ ದೋಷಗಳನ್ನು ಕೆಲವರು ಕಂಡು ಸರಿಯಾದ ತಿಳುವಳಿಕೆಯನ್ನು ಪಡೆದುಕೊಂಡಿದ್ದರೆ, ಉಳಿದವರಿಗೆ ಆ ದೋಷದ ಅರಿವು ಯಾಕೆ ಉಂಟಾಗಲಿಲ್ಲ? ಮುಂತಾದ ಪ್ರಶ್ನೆಗಳು ಉದ್ಭವಿಸಬಹುದು. ಚೇತನದಲ್ಲಿರುವ ಗುಣದೋಷಗಳೇ ವಿಭಿನ್ನವಾದ ಈ ತಾತ್ವಿಕ ಆಧ್ಯಾತ್ಮಿಕ ವಿಚಾರಧಾರೆಗಳು ಹೊರಡಲು ಮೂಲ ಕಾರಣಗಳಾಗಿವೆ. ಸತ್ವ ರಜಸ್ಸು, ತಮಸ್ಸು ಮುಂತಾದ ಪ್ರಾಕೃತಿಕ ಗುಣಗಳ ಏರುಪೇರಿನಿಂದ ಜ್ಞಾನದ ವೈಚಿತ್ರ್ಯ ಉಂಟಾಗುತ್ತದೆ. ಆದರೆ ಭಗವಂತ ಲಕ್ಷ್ಮೀದೇವಿ ಹಾಗೂ ಮುಕ್ತರಲ್ಲಿ ಈ ಪ್ರಾಕೃತಿಕಗುಣಗಳ ಯಾವುದೇ ಪ್ರಭಾವವಿರುವುದಿಲ್ಲ. ಇವರೆಲ್ಲರೂ ತ್ರಿಗುಣಗಳನ್ನು ಮೀರಿ ನಿಂತವರು. ಇವರ ಜ್ಞಾನವು ಪರಿಶುದ್ಧ ಚೈತನ್ಯಾತ್ಮಕವು. ದೋಷದೂರವಾದ ಇವರ ಜ್ಞಾನವು ಎಂದಿಗೂ ಅಯಥಾರ್ಥವಾಗಲಾರದು. ಆದರೂ ಇವರೆಲ್ಲರ ಜ್ಞಾನಗಳಲ್ಲಿ ಸ್ವಭಾವ, ಯೋಗ್ಯತೆಗಳಿಗನುಗುಣವಾಗಿ ವ್ಯತ್ಯಾಸ ಮತ್ತು ಅಂತರಗಳೂ ಇವೆ. ಭಗವಂತನ ಜ್ಞಾನವು ಅತ್ಯಂತ ಸ್ಪಷ್ಟವಾಗಿ ಜಗತ್ತಿನ ಸಕಲವಿಷಯಗಳನ್ನೂ ಸೂರ್ಯಪ್ರಭೆಯಂತೆ ವಿಷಯೀಕರಿಸುತ್ತಿದ್ದರೆ,

ಲಕ್ಷ್ಮೀಮಾತೆ, ಬ್ರಹ್ಮದೇವರು ಹಾಗೂ ಉಳಿದವರ ಜ್ಞಾನಗಳ ಸರ್ವಸಂಗ್ರಾಹಕತೆ ಮತ್ತು ಸ್ಪಷ್ಟತೆಗಳಲ್ಲಿ ವ್ಯತ್ಯಾಸ ಮತ್ತು ತಾರತಮ್ಯಗಳಿವೆ. ಅಂತೆಯೇ ಮುಕ್ತರ ಚೈತನ್ಯರೂಪವಾದ ಸಹಜವಾದ ಜ್ಞಾನವು ಸೂರ್ಯಪ್ರಕಾಶದಂತೆ ಮಿಂಚುತ್ತಿದ್ದರೆ ಸಂಸಾರಿಗಳಿಗೆ ಮನಃಪಟಲದಲ್ಲಿ ಅಗ್ನಿಯ ಕಿಡಿಗಳಂತೆ ಜ್ಞಾನವು ಉದ್ಭವಿಸುತ್ತದೆ. ಇವು ಸಹಜವಲ್ಲ. ತ್ರಿಗುಣಗಳ ಪ್ರಭಾವದಿಂದ ಚಿತ್ರ ವಿಚಿತ್ರರೀತಿಯಿಂದ ಹುಟ್ಟುತ್ತವೆ. ಆದುದರಿಂದ ವಿಭಿನ್ನ ರೀತಿಯ ಅನೇಕ ವಾದಗಳು ಜಗತ್ತಿನಲ್ಲಿ ಹುಟ್ಟಲು ಅವಕಾಶವಾಗಿದೆ.

ಜೀವರು ಜ್ಞಾನ, ದರ್ಶನ, ವೀರ್ಯ, ಸುಖ ಸ್ವರೂಪಿಗಳು, ಮುಕ್ತಿಯಲ್ಲಿ ಈ ಸ್ವರೂಪದ ಆವಿರ್ಭಾವವಾಗುವುದೆಂದು ಜೈನರು ಪ್ರತಿಪಾದಿಸುತ್ತಾರೆ. ಈ ವಿಷಯದಲ್ಲಿ ದ್ವೈತಸಿದ್ಧಾಂತಕ್ಕೂ, ಜೈನಸಿದ್ಧಾಂತಕ್ಕೂ ಭಿನ್ನಾಭಿಪ್ರಾಯವಿಲ್ಲ. ಆದರೆ ಮುಕ್ತಿಯನ್ನು ಪಡೆದ ಜೀವರು ನಾವೆಲ್ಲ ಜೀವಿಸುತ್ತಿರುವ ಈ ಲೋಕಾಕಾಶವನ್ನು ದಾಟಿ ಅಲೋಕಾಕಾಶದಲ್ಲಿ ಪಂಜರದಿಂದ ಹೊರಬಂದ ಹಕ್ಕಿಗಳಂತೆ ಮೇಲೆಮೇಲೆ ಹಾರಿಕೊಂಡು ಮುನ್ನಡೆಯುತ್ತಾರೆಂದು **''ಸಂತತಊರ್ಧ್ವಗಮನ''**ವನ್ನು ಮುಕ್ತಿಯಲ್ಲಿ ಅಂಗೀಕರಿಸುತ್ತಾರೆ. ಆದರೆ ಮುಕ್ತಿಯ ಈ ಬಗೆಗೆ ಆಧಾರವೇನು? ಜೀವನು ಮುಕ್ತಿಯಲ್ಲಿ ನಿರಂತರವಾಗಿ ಮೇಲ್ಮುಖವಾಗಿ ಹೋಗುತ್ತಾನೆಂಬ ಹೊಸಕಲ್ಪನೆಯು ಯಾವುದೇ ಅನುಭವದ ಆಧಾರದಿಂದ ಮೂಡಿ ಬಂದುದಲ್ಲ. ಕೇವಲ ಕಲ್ಪನೆಯ ಬಲದಿಂದ ಇದನ್ನು ರೂಪಿಸಿದ್ದಾಗಿದೆ. ಇಂತಹ ತರ್ಕ ಅಥವಾ ಕಲ್ಪನೆಗಳಿಗೆ ಯಾವುದೇ ಇತಿಮಿತಿಗಳಿಲ್ಲ. ಲೋಕದಲ್ಲಿ ನಾವು ಓಡುವಾಗ ಮತ್ತು ಹಾರುವಾಗ ನಮಗೆ ದುಃಖ ಆಯಾಸಗಳು ಉಂಟಾಗುತ್ತವೆ. ಇದೇ ಉದಾಹರಣೆಯಿಂದ ಮುಕ್ತಿಯ ಈ ನಿರಂತರಗಮನದಲ್ಲಿಯೂ ನಮಗೆ ಶ್ರಮಕ್ಲೇಶಗಳುಂಟಾಗುತ್ತವೆಯೆಂದು ಕಲ್ಪಿಸಿ ಇದು ಕೇವಲ ಆನಂದ ಸ್ವರೂಪವಲ್ಲವೆಂದು ತರ್ಕದಿಂದ ನಾವು ಸಾಧಿಸ ಬಹುದಲ್ಲವೇ? ಮೇಲೆ ಹಾರುವಾಗ ಹಕ್ಕಿಗಳಿಗೂ ಆಯಾಸವಾಗುವುದನ್ನು ನಾವು ನೋಡುತ್ತಿದ್ದೇವೆ. ಅದರಂತೆ ಮೋಕ್ಷದಲ್ಲಿ ಜೀವನು ನಿರಂತರವಾಗಿ ಮೇಲೆ ಹಾರುತ್ತಿರುವಾಗಲೂ ದುಃಖವೇಕೆ ಆಗಬಾರದು?

ಸಂಸಾರದಲ್ಲಿ ನಮಗೆ ದುಃಖವು ಸಂಭವಿಸಲು ನಮ್ಮ ಕ್ರಿಯೆಯು

ಕಾರಣವಲ್ಲ. ನಮಗಿರುವ ಈ ಶರೀರಸಂಬಂಧ ಮತ್ತು ಈ ಲೌಕಿಕಾಕಾಶದ ಸಂಪರ್ಕವೇ ದುಃಖದ ಮೂಲ. ಮುಕ್ತಿಯಲ್ಲಿ ಜೀವನು ಶರೀರ ಸಂಬಂಧವಿಲ್ಲದೆ ಅಲೌಕಿಕಾಕಾಶದಲ್ಲಿ ವಿಹರಿಸುವುದರಿಂದ ಮೇಲೆಮೇಲೆ ಹಾರುತ್ತಿದ್ದರೂ ಅವನಿಗೆ ದುಃಖವಾಗಲಾರದೆಂಬ ಸಮರ್ಥನೆಯೂ ಸರಿಯಲ್ಲ. ಜಗತ್ತಿನಲ್ಲಿ ಎಲ್ಲಾ ಕ್ರಿಯೆಗಳೂ ಲೌಕಿಕಾಕಾಶದಲ್ಲಿ ಶರೀರದ ಸಹಾಯದಿಂದಲೇ ಘಟಿಸುತ್ತಿರುವಾಗ ಅಲೌಕಿಕಾಕಾಶದಲ್ಲಿ ಶರೀರವಿಲ್ಲದೆಯೇ ಮುಕ್ತರಲ್ಲಿ ಕ್ರಿಯೆಯು ಸಂಭವಿಸುತ್ತದೆಯೆಂಬುದು ಊಹೆಗೂ ನಿಲುಕದ ವಿಷಯವಾಗಿದೆ. ಯಾವ ಪ್ರಮಾಣಾಧಾರವೂ ಇಲ್ಲದೆ ಇದನ್ನು ಸಾಧಿಸುವುದು ಹೇಗೆ? ಪ್ರಮಾಣದ ಕಡಿವಾಣವಿಲ್ಲದ ಕಲ್ಪನೆಯ ಕುದುರೆಗಳು ನಮ್ಮನ್ನು ಎಲ್ಲೆಲ್ಲಿಯೋ ಕೊಂಡೊಯ್ಯಬಲ್ಲವು. ಆದುದರಿಂದ ಮೋಕ್ಷವನ್ನು ಕೇವಲ ಯುಕ್ತಿಯ ಬಲದಿಂದ ನಮಗೆ ತೋರಿದಂತೆ ಕಲ್ಪಿಸುವುದು ಸರಿಯಲ್ಲ.

ಇನ್ನು ಬೌದ್ಧ ದರ್ಶನದ ಮೋಕ್ಷ ಸ್ವರೂಪವನ್ನು ವಿಮರ್ಶಿಸೋಣ. ಬೌದ್ಧ ದರ್ಶನದಲ್ಲಿ ಶೂನ್ಯವಾದ, ವಿಜ್ಞಾನವಾದ, ಸೌತ್ರಾಂತಿಕ, ವೈಭಾಷಿಕವೆಂದು ನಾಲ್ಕು ಪ್ರಭೇದಗಳಿವೆಯೆಂದು ಹಿಂದೆಯೇ ಹೇಳಿದೆ. ಶೂನ್ಯವಾದದ ಪ್ರಕಾರ ಮುಕ್ತಿಯಲ್ಲಿ ಜೀವಾತ್ಮನ ಅಸ್ತಿತ್ವವೇ ಇರುವುದಿಲ್ಲ. ಯಾವ ಗುಣಧರ್ಮ ಗಳಿಲ್ಲದ ಶೂನ್ಯತತ್ತ್ವವೊಂದೇ ಮುಕ್ತಿಯಲ್ಲಿ ಉಳಿಯುತ್ತದೆ. ಒಬ್ಬ ಜೀವಾತ್ಮನ ಕಲ್ಪನೆಯೇ ಈ ಜಗತ್ತು. ಆದುದರಿಂದ ಶೂನ್ಯಾನುಭವದಿಂದ ಒಬ್ಬನು ಮುಕ್ತಿಯನ್ನು ಪಡೆದರೆ ಈ ಜಗತ್ತಿನಲ್ಲಿ ಏನೂ ಉಳಿಯುವುದಿಲ್ಲ. ದೀಪವು ನಂದುವಂತೆ ಜೀವನು ತನ್ನನ್ನು ಕಳೆದುಕೊಂಡು ಶೂನ್ಯಾವಸ್ಥೆಯನ್ನು ತಲುಪುವುದೇ ಮುಕ್ತಿ. ಈ ಮುಕ್ತಿಯಲ್ಲಿ ಶೂನ್ಯ ಮತ್ತು ಮುಕ್ತಿಯೆಂಬ ಎರಡೂ ವಾಸ್ತವವಾಗಿ ಇರುವಾಗ ಶೂನ್ಯ ಒಂದೇ ತತ್ತ್ವವಾಗಿರುವುದು ಹೇಗೆ? ಎಂಬುದಕ್ಕೆ ಅವರ ಸಮಾಧಾನ ಹೀಗಿದೆ: ಒಂದೇ ಶೂನ್ಯತತ್ತ್ವವನ್ನು ಬೇರೆ ಬೇರೆ ಅವಸ್ಥೆಗಳಲ್ಲಿ ಸಂಸಾರವೆಂದೂ ಮೋಕ್ಷವೆಂದೂ ಕರೆಯುತ್ತೇವೆ. ಅಜ್ಞಾನದ ಬಂಧನಕ್ಕೆ ಒಳಪಟ್ಟ ಶೂನ್ಯವೇ ಸಂಸಾರವಾದರೆ, ಅಜ್ಞಾನವನ್ನು ಕಳಚಿಕೊಂಡ ಶೂನ್ಯವೇ ಮೋಕ್ಷ. ಆದುದರಿಂದ ಮೋಕ್ಷದಲ್ಲಿಯೂ ಶೂನ್ಯದ ಹೊರತು ಬೇರಾವ ವಸ್ತುವೂ ಇಲ್ಲ. ಈ ಬೌದ್ಧದರ್ಶನದಲ್ಲಿಯೂ ಅನೇಕ ಜೀವರ ಕಲ್ಪನೆಯನ್ನು ಒಪ್ಪುವವರೂ ಇದ್ದಾರೆ. ಶೂನ್ಯಸಾಕ್ಷಾತ್ಕಾರದಿಂದ ಒಬ್ಬ ಸಾಧಕನು

ಸಂವೃತಿಯಿಂದ ವಿಮೋಚನೆಗೊಂಡು ಮಹಾಶೂನ್ಯದಲ್ಲಿ ಲೀನನಾದರೂ ಸಂವೃತಿಯಲ್ಲಿ ಬಂಧಿತರಾದ ಉಳಿದ ಜೀವರು ದುಃಖವನ್ನು ಅನುಭವಿಸುತ್ತಾ ಸಂಸಾರದಲ್ಲಿ ತೊಳಲಿಕೊಂಡಿರುವರು. ಶೂನ್ಯಾನುಸಂಧಾನದಿಂದ ಅವರೂ ಕ್ರಮೇಣ ತನ್ನತನವನ್ನು ಕಳೆದುಕೊಂಡು ಶೂನ್ಯಭಾವವನ್ನು ಪಡೆಯುವರು. ಅದ್ವೈತವಾದವು ನಿರೂಪಿಸುವ ಮಾಯೆಯೇ ಬೌದ್ಧರ ಪರಿಭಾಷೆಯಲ್ಲಿ ಸಂವೃತಿಯಾಗಿದೆ.

ಶಂಕರಾಚಾರ್ಯರ ಅದ್ವೈತವಾದಕ್ಕೂ ಬೌದ್ಧರ ಶೂನ್ಯವಾದಕ್ಕೂ ಶಾಬ್ದಿಕವಾಗಿ ಭಿನ್ನತೆಯಿದ್ದರೂ ವೈಚಾರಿಕವಾಗಿ ಪೂರ್ಣಸಮಾನತೆಯಿದೆ ಯೆಂದು ಆಚಾರ್ಯರು ಪ್ರತಿಪಾದಿಸುತ್ತಾರೆ. ಬ್ರಹ್ಮ, ಶೂನ್ಯ ಇವೆರಡನ್ನೂ ನಿರ್ಗುಣ, ನಿರ್ವಿಶೇಷಗಳೆಂದು ಇಬ್ಬರೂ ದಾರ್ಶನಿಕರು ಅಂಗೀಕರಿಸಿದ್ದಾರೆ. ವಸ್ತುಗಳನ್ನು ಬೇರ್ಪಡಿಸಲು ಅವುಗಳಲ್ಲಿರುವ ವಿಭಿನ್ನಧರ್ಮಗಳೇ ಕಾರಣ. ಬೆಂಕಿ ಮತ್ತು ನೀರುಗಳಲ್ಲಿರುವ ಉಷ್ಣತೆ ಮತ್ತು ಶೈತ್ಯಗಳೆಂಬ ವಿರುದ್ಧ ಧರ್ಮಗಳಿಂದಲೇ ಅವುಗಳ ಭಿನ್ನತೆಯನ್ನು ನಾವು ಗುರುತಿಸುತ್ತೇವೆ. ಶೂನ್ಯ ಮತ್ತು ಬ್ರಹ್ಮತತ್ವಗಳಲ್ಲಿ ಯಾವುದೇ ಗುಣ, ಧರ್ಮಗಳು ಇಲ್ಲದಿರುವಾಗ ಅವುಗಳನ್ನು ನಾವು ಬೇರ್ಪಡಿಸುವುದು ಹೇಗೆ? ಆದುದರಿಂದ ಶೂನ್ಯ ಮತ್ತು ಬ್ರಹ್ಮವೆಂಬ ಬೇರೆಬೇರೆ ಶಬ್ದಗಳಿಂದ ಕರೆಯಲ್ಪಡುವ ಅಖಂಡತತ್ವ ಒಂದೇ ಎಂದು ನಾವು ಹೇಳಬೇಕಾಗುತ್ತದೆ. ಬೌದ್ಧರು ಶೂನ್ಯವನ್ನು ವರ್ಣಿಸಿದ ರೀತಿಯಲ್ಲಿಯೇ ಅದ್ವೈತಗ್ರಂಥಗಳಲ್ಲಿ ಬ್ರಹ್ಮನ ವರ್ಣನೆಯೂ ಇದೆ. ಬ್ರಹ್ಮನನ್ನು ಸತ್ಯ, ಜ್ಞಾನ, ಅನಂತ ಎಂದು ಮುಂತಾಗಿ ಅದ್ವೈತ ದರ್ಶನದಲ್ಲಿ ವರ್ಣಿಸಿದ್ದರೂ ಅಲ್ಲಿ ಅಸ್ತಿತ್ವ ಚೈತನ್ಯ, ಪರಿಪೂರ್ಣತೆ ಮುಂತಾದ ಧರ್ಮಗಳನ್ನು ಅದ್ವೈತವಾದಿಗಳು ಒಪ್ಪುವುದಿಲ್ಲ. ಬ್ರಹ್ಮನು ಮಿಥ್ಯೆಯಲ್ಲ. ಜಡವಲ್ಲ. ಅವನಲ್ಲಿ ಪರಿಮಿತಿಯಿಲ್ಲ. ಆದುದರಿಂದಲೇ ಅವನು ಸತ್ಯನೂ, ಚೇತನನೂ, ಪೂರ್ಣನೂ ಆಗಿರುವನು. ಯಾವುದೇ ಧರ್ಮಗಳ ನೆಲೆಯಿಂದ ಶಬ್ದವು ಬ್ರಹ್ಮನನ್ನು ಪ್ರತಿಪಾದಿಸುವುದಿಲ್ಲ. ಸಲ್ಲದ ಧರ್ಮಗಳು ಅಲ್ಲದಿರುವುದರಿಂದಲೇ ಆವಾವ ಶಬ್ದಗಳನ್ನು ಅವನಲ್ಲಿ ಪ್ರಯೋಗಿಸ ಲಾಗುವುದು. ವಸ್ತುತಃ ಬ್ರಹ್ಮನನ್ನು **'ನೇತಿ ನೇತಿ'** ಎಂದೇ ಕರೆಯಬೇಕೆಂದು ಅದ್ವೈತವಾದದ ಸಿದ್ಧಾಂತವಾಗಿದ್ದರೆ **''ಅಪೋಹ''** ವಾದಿಗಳೆಂದು

ಪ್ರಸಿದ್ಧರಾದ ಶೂನ್ಯವಾದಿಗಳೂ ಇದನ್ನೇ ಹೇಳಿದ್ದಾರೆ. ಶೂನ್ಯದಲ್ಲಿ ಸಕಲ ಧರ್ಮಗಳನ್ನೂ ಅವರು ನಿಷೇಧಿಸಿದ್ದಾರೆ. ಹೀಗೆ ಪರತತ್ವದ ಸ್ವರೂಪ ನಿರೂಪಣೆಯಲ್ಲಿ ಇಬ್ಬರಲ್ಲಿಯೂ ಯಾವ ಅಂತರವನ್ನೂ ನಾವು ಕಾಣಲಾರೆವು.

ಅದ್ವೈತ ದರ್ಶನವು ವೇದದ ಪ್ರಾಮಾಣ್ಯವನ್ನು ಒಪ್ಪಿದೆ. ಶೂನ್ಯವಾದವು ಇದನ್ನು ಅಂಗೀಕರಿಸಲಿಲ್ಲವೆಂಬ ವ್ಯತ್ಯಾಸವು ನಮಗೆ ಗೋಚರವಾದರೂ ಇದನ್ನೂ ಸೂಕ್ಷ್ಮವಾಗಿ ವಿಶ್ಲೇಷಿಸಿದಾಗ ಇಲ್ಲಿಯೂ ಸಮಾನತೆಯನ್ನು ನಾವು ಗುರುತಿಸಬಹುದು. ವೇದೋಪನಿಷತ್ತಿನಲ್ಲಿ ನಿರ್ಗುಣತತ್ವವನ್ನು ಹೇಳುವ ಭಾಗವು ಮಾತ್ರ ಸತ್ಯವನ್ನು ಹೇಳುತ್ತದೆ. ಬ್ರಹ್ಮನ ಗುಣಮಹಿಮೆಗಳನ್ನು ಹೇಳುವ, ಕರ್ಮಕಾಂಡವನ್ನು ನಿರೂಪಿಸುವ ಉಳಿದ ವೇದಭಾಗಗಳೆಲ್ಲ ಅತತ್ವಾವೇದಕ, ಬರೇ ಕಾಲ್ಪನಿಕ ಪ್ರಮೇಯಗಳ ನಿರೂಪಣೆಯೆಂದು ಅದ್ವೈತ ದರ್ಶನದ ನಿರೂಪಣೆಯಾಗಿದೆ. ವೇದಗಳನ್ನು ನೇರವಾಗಿ ಅಪ್ರಮಾಣಗಳೆಂದು ಹೇಳದಿದ್ದರೂ ಪರ್ಯಾಯವಾಗಿ ಅಪ್ರಮಾಣವೆಂದು ಇದರಿಂದ ಹೇಳಿದಂತಾಗುವುದು. ಅಪ್ರಮಾಣವೆಂದರೂ ಅತತ್ವಾವೇದಕ=ಅಸತ್ಯವನ್ನು ಹೇಳುತ್ತದೆಯೆಂದರೂ ಒಂದೇ ಅರ್ಥವಲ್ಲವೇ?

ವೇದವು ಕಾಲ್ಪನಿಕವಸ್ತುಗಳನ್ನು ಹೇಳಿದರೂ ವಸ್ತುಗಳು ವ್ಯಾವಹಾರಿಕ ವಾಗಿದ್ದು ಬ್ರಹ್ಮಜ್ಞಾನವುಂಟಾಗುವವರೆಗೂ ಬಹುದೀರ್ಘಕಾಲ ಉಳಿಯುವುದ ರಿಂದ ಅವುಗಳು ಪ್ರಮಾಣಗಳಾಗಿವೆ. ಲೋಕದಲ್ಲಿ ಉಂಟಾಗಿರುವ ಭ್ರಮೆಗಳು ಬ್ರಹ್ಮಜ್ಞಾನಕ್ಕಿಂತ ಮೊದಲೇ ಸಂಸಾರದಲ್ಲಿಯೇ ಸರಿಯಾದ ತಿಳುವಳಿಕೆಯಿಂದ ಮಾಯವಾಗುತ್ತವೆ. ಹಗ್ಗವನ್ನು ನೋಡಿ ಹಾವೆಂದು ನಾವು ಭ್ರಮಿಸಿದರೂ ವಿಮರ್ಶೆಮಾಡಿ ಕೆಲವೇ ಕ್ಷಣಗಳಲ್ಲಿ ಇದು ಹಾವಲ್ಲವೆಂದು ತಿಳಿದು ಕೊಳ್ಳುತ್ತೇವೆ. ಇದು ಭ್ರಮೆಯೆಂದು ನಿರ್ಣಯಿಸಲು ಬ್ರಹ್ಮ ಜ್ಞಾನದವರೆಗೆ ನಾವು ಕಾಯಬೇಕಿಲ್ಲ. ಆದರೆ ಈ ಜಗತ್ತು, ಪುಣ್ಯ, ಪಾಪ, ಸ್ವರ್ಗ, ಸಗುಣ ಬ್ರಹ್ಮ ಮುಂತಾದವುಗಳ ಕಲ್ಪನೆಯು ನಮಗೆ ಬ್ರಹ್ಮಜ್ಞಾನದವರೆಗೂ ಉಳಿಯುವುದರಿಂದ ಇವುಗಳನ್ನು ತಿಳಿಸುವ ವೇದ ಮುಂತಾದವುಗಳು ಅಸತ್ಯವನ್ನು ನಿರೂಪಿಸುವುದರಿಂದ ಅತತ್ವಾವೇದಕಗಳೆನಿಸಿದರೂ ಪ್ರಮಾಣ ಗಳೇ ಆಗಿವೆ ಎಂದು ವಾದಿಸಲಾಗುತ್ತದೆ. ಇದನ್ನೂ ಸ್ವಲ್ಪ ವಿವೇಚಿಸೋಣ. ಭ್ರಮೆಯು ಸ್ವಲ್ಪ ಕಾಲವಿದ್ದರೂ, ದೀರ್ಘಕಾಲವಿದ್ದರೂ ಅದರ ಸ್ವರೂಪದಲ್ಲಿ

ಏನೂ ವ್ಯತ್ಯಾಸವಾಗುವುದಿಲ್ಲ. ದೂರದ ಚಂದ್ರಮಂಡಲವು ಜೀವಮಾನವಿಡೀ ನಮಗೆ ಚಿಕ್ಕದಾಗಿಯೇ ಕಾಣಿಸುತ್ತದೆ. ದೀರ್ಘಕಾಲದವರೆಗೆ ಈ ಭ್ರಮೆಯು ಇರುವುದಿಂದ ಇದು ಪ್ರಮಾಣವಾಗುವುದೇ? ಸ್ವಲ್ಪ ಹೊತ್ತಿನವರೆಗಿದ್ದರೂ, ದೀರ್ಘಕಾಲದವರೆಗಿದ್ದರೂ ಭ್ರಮೆಯು ಭ್ರಮೆಯೇ. ಅದು ಪ್ರಮಾಣ ವೆನಿಸದು. ವೇದವು ಅತಾತ್ವಿಕವಿಷಯಗಳನ್ನು ತಿಳಿಸುವುದಾದಲ್ಲಿ ಆ ಜ್ಞಾನವು ಬ್ರಹ್ಮಜ್ಞಾನದವರೆಗೆ ದೀರ್ಘಕಾಲವಿದೆಯೆಂಬ ಕಾರಣದಿಂದ ಪ್ರಮಾಣವಾಗುವುದಿಲ್ಲ. ಮಾತ್ರವಲ್ಲದೆ ಇಂತಹ ದೀರ್ಘಭ್ರಮೆಯನ್ನು ಉಂಟುಮಾಡುವುದರಿಂದ ಕೆಲವೇ ಸಮಯವಿರುವ ಲೌಕಿಕ ಭ್ರಮೆಗಿಂತಲೂ ಹೆಚ್ಚಿನ ಅನರ್ಥವು ವೇದದಿಂದ ನಮಗೆ ಒದಗಿದಂತಾಗುವುದು. ಹೀಗೆ ಹೆಚ್ಚಿನ ಅನರ್ಥಕಾರಿಯಾದ ವೇದವು ಪ್ರಮಾಣವಾಗುವುದು ಹೇಗೆ? ಅಂತೂ ವೇದವು ಅಸತ್ಯವನ್ನು ಬೋಧಿಸುವುದರಿಂದ ಪರ್ಯಾಯವಾಗಿ ಅದನ್ನು ಅಪ್ರಮಾಣವೆಂದೇ ಹೇಳಿದಂತಾಗುತ್ತದೆ. ವಿಮರ್ಶೆ ಮಾಡಿದಂತೆ ಈ ಎರಡೂ ಮತಗಳಿಗೂ ವೈಚಾರಿಕಸಾಮ್ಯವು ಖಚಿತವಾಗಿ ಗೋಚರವಾಗುತ್ತದೆಯೆಂದು ಆಚಾರ್ಯರು ಪ್ರತಿಪಾದಿಸಿದ್ದಾರೆ. ಇದನ್ನು ಕೇವಲ ಸಂಶೋಧನದೃಷ್ಟಿ ಯಿಂದ ಹೇಳಲಾಗಿದೆಯಲ್ಲದೆ ದ್ವೇಷ, ಆಗ್ರಹಗಳಿಂದಲ್ಲ. ಸಂಶೋಧನಾತ್ಮಕ ವಿಚಾರ ವಿಮರ್ಶೆಗಳ ಬಗ್ಗೆ ಯಾವುದೇ ಅಪಾರ್ಥವನ್ನು ಮಾಡುವುದು ಉಚಿತವಲ್ಲ.

ಇನ್ನು ಬೌದ್ಧರು ನಿರೂಪಿಸಿದ ಮೋಕ್ಷದ ಯುಕ್ತಾಯುಕ್ತತೆಯನ್ನು ವಿಮರ್ಶಿಸೋಣ. ದೀಪವು ನಂದಿಹೋಗುವಂತೆ ಮೋಕ್ಷದಲ್ಲಿ ತನ್ನನ್ನೇ ಕಳೆದುಕೊಂಡು ಆತ್ಮನು ಶೂನ್ಯದಲ್ಲಿ ಲಯವನ್ನು ಪಡೆಯುವುದೇ ಮೋಕ್ಷವೆನ್ನುವ ಬೌದ್ಧರ ನಿರೂಪಣೆಯು ನಿಜವಾಗಿ ನಿರಾಶಾದಾಯಕವಾಗಿದೆ. ಇಂತಹ ಮುಕ್ತಿಯನ್ನು ಯಾರೂ ಬಯಸಲಾರರು. ನಾವು ಎಲ್ಲರಿಗಿಂತಲೂ ನಮ್ಮನ್ನು ಅತಿಯಾಗಿ ಪ್ರೀತಿಸುತ್ತೇವೆ. ಉಳಿದ ಇಷ್ಟವಸ್ತುಗಳನ್ನೆಲ್ಲಾ ನಮಗಾಗಿಯೇ ಪ್ರೀತಿಸುತ್ತೇವೆ. ನಮ್ಮ ಪ್ರೀತಿಯ ಅಂತಿಮ ಅವಧಿಯೇ ಆತ್ಮ. ಈ ಆತ್ಮನೇ ನಾಶವಾಗುವುದಾದರೆ ಅಂತಹ ಮುಕ್ತಿಯು ಯಾರಿಗೆ? ತನ್ನನ್ನೇ ಕಳೆದುಕೊಳ್ಳುವ ಇಂತಹ ಮುಕ್ತಿಯನ್ನು ಯಾರು ಬಯಸುತ್ತಾರೆ? ತನಗೆ ಇಷ್ಟವಾದ ವಸ್ತುಗಳನ್ನು ಕಳೆದುಕೊಳ್ಳುವುದು ನಮಗೆ ಬೇಕಾಗಿಲ್ಲ.

ಹೀಗಿರುವಾಗ ನಮ್ಮ ಪ್ರೀತಿಯ ಮೂಲ ಸ್ರೋತಸ್ಸಾದ ನಮ್ಮನ್ನು ಕಳೆದು ಕೊಳ್ಳಲು ನಾವು ಸಿದ್ಧರಾಗುತ್ತೇವೆಯೇ? ಇಂತಹ ಮೋಕ್ಷವು ಪರಮ ಪುರುಷಾರ್ಥವೆನಿಸಿ ಜೀವನದ ಅಂತಿಮಸಿದ್ಧಿಯಾಗಲು ಹೇಗೆ ಸಾಧ್ಯ?

ಅದ್ವೈತವಾದದಲ್ಲಿ ಆತ್ಮನಾಶದ ಉಲ್ಲೇಖವಿಲ್ಲ. ಆದರೆ ''ಅಹಂ'' ನಾನು ಎಂದು ಅನುಭವಿಸುತ್ತಿರುವ ಸಾಕಾರ ವಸ್ತುವೇ ನಮಗೆ ಪ್ರೀತ್ಯಾಸ್ಪದವಾಗಿದೆ. ಇದಕ್ಕಿಂತ ಬೇರೆಯಾದ ನಿರಾಕಾರವಸ್ತುವು ಅನುಭವಗೋಚರವಲ್ಲ. ನಾವು ಅತ್ಯಂತವಾಗಿ ಪ್ರೀತಿಸುವ ಈ ಸಾಕಾರವಸ್ತುವೇ ಜೀವ. ಈ ಜೀವಭಾವವು ನಷ್ಟವಾಗಿ ಬ್ರಹ್ಮಭಾವವನ್ನು ಪಡೆಯುವಾಗ ನಮ್ಮ ಅತ್ಯಂತ ಇಷ್ಟವಸ್ತುವನ್ನು ನಾವು ಕಳೆದು ಕೊಂಡಂತಾಗುವುದಿಲ್ಲವೇ? ಇದೂ ಒಂದು ರೀತಿಯಿಂದ ಆತ್ಮನಾಶವೇ ಆಗುತ್ತದೆ.

ಬ್ರಹ್ಮನು ಆನಂದಸ್ವರೂಪನಾದುದರಿಂದ ನಾವು ಬ್ರಹ್ಮಭಾವವನ್ನು ಪಡೆದಾಗ ಆನಂದರೂಪಿಗಳಾಗುವುದರಿಂದ ಇದು ಪುರುಷಾರ್ಥವೆಂದು ಸಾಧಿಸಬಹುದು. ಆದರೆ ಬರೇ ಆನಂದಸ್ವರೂಪವನ್ನು ಪಡೆಯುವುದು ಪುರುಷಾರ್ಥವೆನಿಸಲಾರದು. ಆನಂದವನ್ನೇ ಅನುಭವಿಸಬೇಕೆಂದು ನಾವು ಬಯಸುತ್ತೇವೆ. ಸಕ್ಕರೆಯನ್ನು ಆಸ್ವಾದಿಸಲು ಬಯಸುತ್ತಾರಲ್ಲದೆ ಸಕ್ಕರೆ ಯಾಗಲು ಯಾರೂ ಬಯಸುವುದಿಲ್ಲ. ಮೋಕ್ಷದಲ್ಲಿ ಆನಂದದ ಅನುಭವ ವಂತೂ ಇಲ್ಲ. ಇಂತಹ ಆನಂದ ಸ್ವರೂಪವನ್ನು ಯಾರು ಅಪೇಕ್ಷಿಸುತ್ತಾರೆ?

ಮೋಕ್ಷದಲ್ಲಿ ನಾನೇ ಬ್ರಹ್ಮನಾಗುತ್ತೇನೆಂದು ನಾವೇನೋ ಖುಷಿ ಪಡಬಹುದು. ಆದರೆ ಆ ಬ್ರಹ್ಮನಲ್ಲಿ ಜ್ಞಾನ, ಆನಂದ ಮುಂತಾದ ಯಾವ ಗುಣಗಳೂ ಇಲ್ಲವೆಂಬ ಅರಿವಾದಾಗ ಈ ನಿರ್ಗುಣ ಸ್ಥಿತಿಯನ್ನು ಪಡೆಯುವುದಕ್ಕಿಂತ ಈಗಿನಂತೆ ನಾವು ನಾವಾಗಿರುವುದೇ ಲೇಸು ಎಂಬ ಭಾವನೆಯೇ ನಮಗೆ ಉಂಟಾಗುವುದಿಲ್ಲವೇ? ಹೀಗೆ ಬ್ರಹ್ಮಭಾವವಾಗಲೀ, ಶೂನ್ಯಭಾವವಾಗಲೀ, ನಮಗೆ ಯಾವುದೇ ರೀತಿಯಿಂದ ಆಕರ್ಷಕವೆನಿಸ ಲಾರದು.

ಶೂನ್ಯವಾದಿಗಳು ಹೇಳುವ ಈ ಮುಕ್ತಿಯ ಬಗ್ಗೆ ಆಧಾರವೇನು? ವೇದವನ್ನಂತೂ ಅವರು ಒಪ್ಪುವುದಿಲ್ಲ. ಅವರ ದರ್ಶನಗ್ರಂಥಗಳು ಉಭಯ

ಸಮ್ಮತಪ್ರಮಾಣವಾಗಲಾರವು. ಕೇವಲ ಯುಕ್ತಿಯೊಂದರಿಂದಲೇ ಆತ್ಮನಾಶವನ್ನು ಇಷ್ಟಾರ್ಥವೆಂದು ಅವರು ಸಾಧಿಸಬೇಕಾಗುತ್ತದೆ. ದುಃಖಕ್ಕೆ ನಿಧಾನವಾದ ಈ ಭೌತಿಕ ಶರೀರವಂತೂ ಮುಕ್ತಿಯಲ್ಲಿ ಇರುವುದಿಲ್ಲ. ಅದರಂತೆ ದುಃಖಕಾರಣವಾದ ಆತ್ಮವೂ ಮುಕ್ತಿಯಲ್ಲಿ ನಾಶವಾಗುವುದೆಂದು ಅವರು ಸಾಧಿಸುತ್ತಾರೆ. ಆದರೆ ತರ್ಕವು ನಮಗೆ ಸತ್ಯವನ್ನು ತಿಳಿಸಿಕೊಡಲಾರದು. ಒಂದು ಉದಾಹರಣೆಯನ್ನು ತೋರಿಸಿ ತರ್ಕದ ಬಲದಿಂದ ಏನು ಬೇಕಾದರೂ ಸಾಧಿಸಬಹುದೆಂದು ನಾವು ಈಗಾಗಲೇ ತಿಳಿಸಿದ್ದೇವೆ. ಈ ಭೌತಿಕ ಶರೀರವು ನಾಶವಾಗುವುದನ್ನು ಸಂಸಾರದಲ್ಲಿ ಯಾರೂ ಬಯಸುವುದಿಲ್ಲ. ಆದುದರಿಂದ ಮುಕ್ತಿಯಲ್ಲಿಯೂ ಭೌತಿಕ ಶರೀರವಿಲ್ಲದಿದ್ದರೆ ಆ ಮೋಕ್ಷವು ಪುರುಷಾರ್ಥವೇ ಆಗಲಾರದೆಂಬ ತರ್ಕದ ಬಲದಿಂದ ಮೋಕ್ಷದಲ್ಲಿ ಭೌತಿಕ ಶರೀರವನ್ನೂ ಸಾಧಿಸಬಹುದಾಗಿದೆ. ಆದುದರಿಂದ ಕೇವಲ ಯುಕ್ತಿಯ ಬಲದಿಂದ ಮೋಕ್ಷದ ಸ್ವರೂಪವನ್ನೂ ನಾವು ನಿರ್ಧರಿಸಲಾರೆವು. ಧರ್ಮ, ಅಧರ್ಮ ಮುಂತಾದ ಅಲೌಕಿಕವಿಷಯಗಳನ್ನು ತಿಳಿಯಲು ಎಲ್ಲರೂ ಅಂಗೀಕರಿಸಬೇಕಾದ ಏಕಮಾತ್ರ ಪ್ರಮಾಣವಾದ ಅಪೌರುಷೇಯವೇದವನ್ನು ಪರಿಶೀಲಿಸಿದಾಗ ಜ್ಞಾನ, ಆನಂದ ಮುಂತಾದವುಗಳಿಲ್ಲದ ನಿರ್ವಿಶೇಷಸ್ಥಿತಿಯೇ ಮುಕ್ತಿ ಎನ್ನುವುದಕ್ಕೆ ಯಾವ ಆಧಾರವೂ ದೊರೆಯಲಾರದು. **''ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣ ಅಭಿನಿಷ್ಪದ್ಯತೇ, ಸ ತತ್ರ ಜಕ್ಷನ್, ಕ್ರೀಡನ್, ರಮಮಾಣಃ'' ''ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ''** ಮುಂತಾದ ವೇದ ವಾಕ್ಯಗಳು ಸಾಧಕನು ಪರಬ್ರಹ್ಮನನ್ನು ಹೊಂದಿ ತನ್ನ ನಿಜರೂಪವನ್ನು ಅಭಿವ್ಯಕ್ತಗೊಳಿಸಿಕೊಂಡು ಬ್ರಹ್ಮನ ಜೊತೆಗೆ ದಿವ್ಯ ಭೋಗಗಳನ್ನು ಅನುಭವಿಸುತ್ತಾನೆಂದು ಜೀವನು ತನ್ನ ಅಸ್ತಿತ್ವವನ್ನು ಉಳಿಸಿಕೊಂಡು ಬ್ರಹ್ಮನಿಂದ ಬೇರೆಯಾಗಿದ್ದುಕೊಂಡು ಅಪ್ರಾಕೃತದಿವ್ಯಶರೀರದಿಂದ ವೈವಿಧ್ಯಪೂರ್ಣವಾದ ತನ್ನ ಸ್ವರೂಪಾನಂದವನ್ನು ಅನುಭವಿಸುತ್ತಾನೆಂದು ಪ್ರತಿಪಾದಿಸುತ್ತವೆ.

ದುಃಖದ ನಿವಾರಣೆಗಾಗಿ ಭೌತಿಕಶರೀರದ ನಾಶವು ಮಾತ್ರ ಸಾಲದೇ? ಶರೀರದ ಜೊತೆಗೆ ಆತ್ಮದ ನಾಶವೂ ಯಾಕೆ ಬೇಕು? ಶರೀರಆತ್ಮ ಸಂಬಂಧವೇ ದುಃಖದ ಮೂಲ. ಈ ಸಂಬಂಧವನ್ನು ಕಳಚಿಕೊಳ್ಳಲು ಇವೆರಡರಲ್ಲಿ ಒಂದು ನಾಶವಾದರೂ ಸಾಕು. ಆತ್ಮನನ್ನು ಉಳಿಸಿಕೊಂಡು ಶರೀರವನ್ನು ಮಾತ್ರ

ನಿವೃತ್ತಿಪಡಿಸಿದರೂ ದುಃಖದ ನಿವಾರಣೆಯಾಗುವಾಗ ಎರಡರ ನಿವೃತ್ತಿಯೇ ಮುಕ್ತಿಯೆಂದು ಏಕೆ ಹಠ ಹಿಡಿಯಬೇಕು?

ವಿಜ್ಞಾನವಾದಿಗಳು ಜೀವನು ತನ್ನತನವನ್ನು ಕಳೆದುಕೊಂಡು ಕೇವಲ ವಿಜ್ಞಾನಸ್ವರೂಪವನ್ನು ಪಡೆಯುವುದೇ ಮುಕ್ತಿಯೆಂದು ಹೇಳುತ್ತಾರೆ. ಇವರಿಗೂ ಶೂನ್ಯವಾದಕ್ಕೂ ತಾತ್ವಿಕವಾಗಿ ಏನೂ ಭಿನ್ನತೆಯಿಲ್ಲ. ವಿಜ್ಞಾನ, ಶೂನ್ಯ ಎಂಬುದಾಗಿ ಹೆಸರು ಮಾತ್ರ ಬೇರೆಯಲ್ಲದೆ ತಾತ್ವಿಕ ವಿಷಯದಲ್ಲಿ ಏನೂ ಅಂತರವಿಲ್ಲ. ವಿಜ್ಞಾನವೂ ಶೂನ್ಯದಂತೆ ನಿರ್ವಿಶೇಷವಸ್ತುವೆಂದೂ ಅಲ್ಲಿ ತೋರುವ ಧರ್ಮಗಳೆಲ್ಲ ಬರೇ ಕಾಲ್ಪನಿಕಗಳೆಂದೂ ಅವರು ಹೇಳುವುದರಿಂದ ಶೂನ್ಯಮತದ ಮೇಲೆ ಬರುವ ಎಲ್ಲಾ ಆಕ್ಷೇಪಗಳೂ ಇವರಿಗೂ ಅನ್ವಯಿಸುತ್ತದೆ.

ಈ ವಿಜ್ಞಾನಭಾವ ಮತ್ತು ಶೂನ್ಯಭಾವವೇ ಮೋಕ್ಷವೆನ್ನುವವರು ಈ ಮುಕ್ತಿಯ ಅವಸ್ಥೆಯಲ್ಲಿ ಕಾಲವನ್ನಂತೂ ಒಪ್ಪಲೇಬೇಕು. ಮುಕ್ತಿಯು ಎಂದು? ಎಂಬ ಪ್ರಶ್ನೆಗೆ ತತ್ವಸಾಕ್ಷಾತ್ಕಾರದ ನಂತರವೆಂದು ಉತ್ತರಿಸುವಾಗ ಸಾಕ್ಷಾತ್ಕಾರದ ಅನಂತರಕಾಲವನ್ನು ಮುಕ್ತಿಯಲ್ಲಿ ಒಪ್ಪಿದಂತಾಗುವುದು. ಹೀಗಿರುವಾಗ ಮುಕ್ತಿಯಲ್ಲಿ ಶೂನ್ಯ ಅಥವಾ ವಿಜ್ಞಾನದ ಹೊರತು ಬೇರೆ ವಸ್ತುವೇ ಇಲ್ಲವೆಂದು ಹೇಳುವುದು ಅತ್ಯಂತ ವಿರುದ್ಧವಾಗಿದೆ.

ಕೇವಲ ನಿರ್ವಿಶೇಷಾವಸ್ಥೆಯೇ ಮುಕ್ತಿಯೆಂದು ಬರೇ ಯುಕ್ತಿಯಿಂದ ಸಾಧಿಸುವಾಗ ಅದೇ ಯುಕ್ತಿಯ ಬಲದಿಂದ ಮುಕ್ತಿಯಲ್ಲೂ ಸಂಸಾರಾವಸ್ಥೆಯಂತೆ ಇತರ ವಸ್ತುಗಳೂ ಇವೆಯೆಂದು ಸಾಧಿಸಬಹುದು. ಪ್ರತಿಯೊಂದು ಕಾಲದಲ್ಲಿಯೂ ಅನೇಕವಸ್ತುಗಳು ಇರುವುದನ್ನು ನಾವು ನೋಡುತ್ತಿದ್ದೇವೆ. ಹೀಗಿರುವಾಗ ಮುಕ್ತಿಯಲ್ಲಿ ಒಂದು ವಸ್ತುವಿರುವುದು ಹೇಗೆ? ಎಂದು ಯುಕ್ತಿಯ ಆಧಾರದಿಂದ ನಾವು ಪ್ರಶ್ನಿಸಬಹುದು. ಅಂತೂ ಈ ವಿಜ್ಞಾನವಾದ, ಶೂನ್ಯವಾದ ಮಾಯಾವಾದಗಳು ಪ್ರತಿಪಾದಿಸುವ ಮುಕ್ತಿಯ ಸ್ವರೂಪವು ಪ್ರಮಾಣಸಿದ್ಧವೂ ಅಲ್ಲ, ಪುರುಷಾರ್ಥವೂ ಆಗಲಾರದು.

ಬೌದ್ಧರ ಪ್ರಭೇದವೆನಿಸಿದ ಸೌತ್ರಾಂತಿಕರೂ ವೈಭಾಷಿಕರೂ ಆತ್ಮನನ್ನು ಜ್ಞಾನಸ್ವರೂಪನೆಂದು ಅಂಗೀಕರಿಸುತ್ತಾರೆ. ಆದರೆ ಈ ಜ್ಞಾನವು ಕ್ಷಣಿಕ, ಪ್ರತಿಕ್ಷಣವೂ ಈ ಜ್ಞಾನವು ನಾಶಹೊಂದಿ, ಹೊಸಜ್ಞಾನವು ಹುಟ್ಟುತ್ತಾ ಇರುತ್ತದೆ.

ಈ ಕ್ಷಣಿಕ ಜ್ಞಾನಗಳ ನಿರಂತರ ಸಂತತಿಯೇ ಆತ್ಮನೆಂದು ಅವರು ಕರೆಯುವರು. ಈ ಜ್ಞಾನಪರಂಪರೆಯು ಈ ವಿಷಯಪದಾರ್ಥಗಳ ಸಂಬಂಧ ಪಡೆದಾಗ ಸಂಸಾರವೆನಿಸುತ್ತದೆ. ಮನಸ್ಸಿನ ವಾಸನೆಯು ನಷ್ಟಗೊಂಡು, ವಿಷಯ ಸಂಪರ್ಕ ವಿಲ್ಲದ ಶುದ್ಧಜ್ಞಾನ ಸಂತತಿಯೇ ಮೋಕ್ಷವೆಂದು ಅವರು ಅಂಗೀಕರಿಸುತ್ತಾರೆ. ಏನೂ ಆಧಾರವಿಲ್ಲದೆ ಮುಕ್ತಿಯ ಬಗೆಗೆ ಮಾಡಿದ ಇಂತಹ ಊಹಾಪೋಹಗಳು ವಿಮರ್ಶೆಯ ಮುಂದೆ ಕುಸಿದುಹೋಗುತ್ತವೆ. ಯಾವುದನ್ನಾದರೂ ವಿಷಯ ವನ್ನು ಗೋಚರಿಸಿಕೊಂಡೇ ಜ್ಞಾನವು ಹುಟ್ಟುವುದನ್ನು ನಾವು ಈ ಜಗತ್ತಿನಲ್ಲಿ ನೋಡುತ್ತೇವೆ. ಏನನ್ನೂ ವಿಷಯೀಕರಿಸದ ಜ್ಞಾನಪರಂಪರೆಯು ಮುಕ್ತಿಯಲ್ಲಿ ಇದೆಯೆಂಬುದು ವಿಮರ್ಶೆಯ ಒರೆಗಲ್ಲಿನಲ್ಲಿ ನಿಲ್ಲಲಾರದು. ಯಾವುದನ್ನೂ ಅನುಭವಿಸದ ಈ ನಿರ್ವಿಷಯಸ್ಥಿತಿಯೂ ಯಾರಿಗೂ ಪುರಾಷಾರ್ಥವೆನಿಸದು.

ಸಾಂಖ್ಯದರ್ಶನ ಮತ್ತು ನೈಯಾಯಿಕದರ್ಶನಗಳು ನಿರೂಪಿಸುವ ಮೋಕ್ಷದ ಸ್ವರೂಪವನ್ನು ಪರಿಶೀಲಿಸೋಣ. ಈ ಎರಡು ದರ್ಶನಗಳೂ ಜೀವನು ತನ್ನತನವನ್ನು ಕಳೆದುಕೊಂಡು ಇನ್ನೊಂದರಲ್ಲಿ ಲೀನನಾಗುವನೆಂದು ಹೇಳುವು ದಿಲ್ಲ. ಆದರೂ ಈ ದರ್ಶನಗಳಂತೆ ಮುಕ್ತಿಯಲ್ಲಿ ಜೀವರಿಗೆ ಜ್ಞಾನವಾಗಲೀ, ಸುಖವಾಗಲೀ, ಇರುವುದಿಲ್ಲ. ನಮಗೆ ಮನಸ್ಸು, ಕಣ್ಣು, ಮೂಗು, ಕಿವಿ, ನಾಲಿಗೆ ಮತ್ತು ಸ್ಪರ್ಶೇಂದ್ರಿಯಗಳೆಂಬ ಆರು ಇಂದ್ರಿಯಗಳಿಗೂ, ವಿಷಯ ಪದಾರ್ಥಗಳಿಗೂ ಸಂಪರ್ಕವಾಗಿ ಅದರಿಂದ ಜ್ಞಾನ, ಸುಖ, ದುಃಖಗಳು ಸಂಭವಿಸುತ್ತಿವೆ. ಇವೆಲ್ಲವುಗಳನ್ನೂ ಈ ದರ್ಶನಗಳು ದುಃಖಗಳೆಂದೇ ಪರಿಗಣಿಸುತ್ತವೆ. ಆರು ಇಂದ್ರಿಯಗಳು, ಈ ಆರು ಇಂದ್ರಿಯಗಳ ವಿಷಯಗಳು, ಇವುಗಳ ಪರಸ್ಪರ ಸಂಪರ್ಕದಿಂದ ಸಂಭವಿಸುವ ಆರು ರೀತಿಯ ಜ್ಞಾನಗಳು, ಸುಖ, ದುಃಖ ಮತ್ತು ಇವೆಲ್ಲವುಗಳಿಗೂ ನೆಲೆಯಾಗಿರುವ ಶರೀರವೆಂಬುದಾಗಿ ದುಃಖವನ್ನು ಇಪ್ಪತ್ತೊಂದುವಿಧವಾಗಿ ಈ ದರ್ಶನಗಳು ಪರಿಗಣಿಸಿವೆ. ಈ ಎಲ್ಲಾ ದುಃಖಗಳೂ ಮುಕ್ತಿಯಲ್ಲಿ ಪೂರ್ತಿಯಾಗಿ ನಾಶಗೊಳ್ಳುತ್ತವೆ. ಮುಂದೆ ಎಂದೆಂದಿಗೂ ಜೀವರಿಗೆ ಇವುಗಳ ಸಂಬಂಧವು ಒದಗುವುದಿಲ್ಲ. ಎಲ್ಲಾ ವಿಧದ ದುಃಖಗಳ ಆತ್ಯಂತಿಕನಿವೃತ್ತಿಯೇ ಮುಕ್ತಿಯೆಂದು ಈ ದರ್ಶನಗಳು ಪ್ರತಿಪಾದಿಸುತ್ತವೆ. ದುಃಖವನ್ನು ಕಳೆದುಕೊಳ್ಳುವುದು ನಮಗೆ ಅಪೇಕ್ಷಿತವಾದರೂ ನಮಗೆ ಇಷ್ಟವಾದ ಜ್ಞಾನ,

ಸುಖಗಳನ್ನೂ ಮೋಕ್ಷದಲ್ಲಿ ಅವರು ಯಾಕೆ ಅಲ್ಲಗಳೆಯುತ್ತಾರೆಂದು ನಮಗೆ ಜಿಜ್ಞಾಸೆಯುಂಟಾಗಬಹುದು. ಶರೀರ, ಇಂದ್ರಿಯ, ವಿಷಯಗಳೇ ಜ್ಞಾನ ಮತ್ತು ಸುಖಕ್ಕೆ ಕಾರಣ. ದುಃಖ ಮುಂತಾದ ನಮ್ಮ ಅನರ್ಥಕ್ಕೆ ಕಾರಣಗಳಾದ ಶರೀರ, ಇಂದ್ರಿಯ, ವಿಷಯಗಳನ್ನಂತೂ ಮುಕ್ತಿಯಲ್ಲಿ ಒಪ್ಪಲು ಸಾಧ್ಯವಿಲ್ಲ. ಅವುಗಳನ್ನು ಒಪ್ಪಿದರೆ ದುಃಖಪರಂಪರೆಗೆ ಹಸಿರು ನಿಶಾನೆ ನೀಡಿದಂತಾಗು ವುದು. ಅದಕ್ಕಾಗಿ ಈ ಅನರ್ಥಕಾರಣಗಳಾದ ಶರೀರ, ಇಂದ್ರಿಯ, ವಿಷಯಗಳಿಗೆ ಮುಕ್ತಿಯಲ್ಲಿ ಅವಕಾಶವಿರಬಾರದು. ಆಗ ಅವುಗಳಿಂದ ಸಂಭವಿಸುವ ಜ್ಞಾನವಾಗಲೀ, ಸುಖವಾಗಲೀ, ಹೇಗೆ ಇರಬಲ್ಲುದು? ಶರೀರ, ಇಂದ್ರಿಯಗಳ ಆವಶ್ಯಕತೆಯಿಲ್ಲದೆ ನಾವು ಹೊಂದಬಹುದಾದ ನಿತ್ಯವಾದ ಜ್ಞಾನವನ್ನಾಗಲೀ, ನಿತ್ಯವಾದ ಆನಂದವನ್ನಾಗಲೀ ಅವರು ಒಪ್ಪುವುದಿಲ್ಲ. ಅಂತಹ ಜ್ಞಾನ ಸುಖಗಳಿದ್ದರೆ ಶರೀರ, ಇಂದ್ರಿಯ ಮುಂತಾದ ಎಲ್ಲಾ ಸಾಧನೆ, ಸಲಕರಣೆಗಳಿರುವ ಸಂಸಾರದಲ್ಲಿ ಅವುಗಳು ಅನುಭವಗೋಚರವಾಗದೇ ಯಾವ ಸಾಮಗ್ರಿಗಳೂ ಇಲ್ಲದ ಮುಕ್ತಿಯಲ್ಲಿ ಮಾತ್ರ ಹೇಗೆ ತೋರಬಲ್ಲವು? ಆದುದರಿಂದ ಮುಕ್ತಿಯಲ್ಲಿ ಯಾವ ವಿಧದ ಜ್ಞಾನಸುಖಗಳೂ ಇರಲು ಸಾಧ್ಯವಿಲ್ಲ. ಜ್ಞಾನ ಸುಖಗಳನ್ನು ಮುಕ್ತಿಯಲ್ಲಿ ಒಪ್ಪಿಕೊಂಡಲ್ಲಿ ಅವುಗಳಿಗೆ ಕಾರಣವಾದ ಶರೀರ, ಇಂದ್ರಿಯಗಳನ್ನೂ ಸ್ವೀಕರಿಸಬೇಕಾಗುತ್ತದೆ. ಆಗ ದುಃಖಕ್ಕೆ ಅವಕಾಶವಾಗುತ್ತದೆ. ಅಂತೂ ಈ ದುಃಖವನ್ನು ಪೂರ್ತಿಯಾಗಿ ಕಳೆದು ಕೊಳ್ಳುವುದಕ್ಕಾಗಿ ಜ್ಞಾನಸುಖಗಳಿಗೂ ನಾವು ಎರವಾಗಬೇಕೆಂದು ಅವರ ಅಭಿಮತವಾಗಿದೆ. ಮುಕ್ತಿಯಲ್ಲಿ ಸುಖವಿಲ್ಲದಿದ್ದರೂ ದುಃಖನಿವೃತ್ತಿಯಿರುವುದ ರಿಂದ ಅದು ಪುರುಷಾರ್ಥವೆನಿಸಲು ಯಾವ ಆತಂಕವೂ ಇಲ್ಲವೆಂದು ಅವರ ಅಭಿಪ್ರಾಯವಾಗಿದೆ.

ಮುಕ್ತಿಯ ಈ ನಿರೂಪಣೆಯೂ ಸರಿಯಲ್ಲ. ಇಂತಹ ಮೋಕ್ಷವನ್ನು ಯಾರೂ ಬಯಸಲಾರರು. ಮುಕ್ತಿಯಲ್ಲಿ ದುಃಖವು ಪೂರ್ತಿ ನಾಶಗೊಳ್ಳುವು ದಾದರೂ ಅದರ ಜೊತೆಗೆ ಸುಖವೂ, ಜ್ಞಾನವೂ ನಾಶಗೊಳ್ಳುವುದರಿಂದ ಇದನ್ನು ಯಾರೂ ಅಪೇಕ್ಷಿಸಲಾರರು. ಯಾವ ಜ್ಞಾನವೂ ಇಲ್ಲದೆ ಏನೂ ಆನಂದಾನುಭೂತಿಯಿಲ್ಲದೆ ಬಂಡೆಕಲ್ಲಿನ ಅಜ್ಞಾನದ ಸ್ಥಿತಿಯಲ್ಲಿ ಇರುವುದನ್ನು ಯಾರು ಅಪೇಕ್ಷಿಸುತ್ತಾರೆ? ಅದಕ್ಕಿಂತ ದುಃಖವಿದ್ದರೂ ಸ್ವಲ್ಪವಾದರೂ ಸುಖವಿರುವ ಸಾಂಸಾರಿಕಜ್ಞಾನಾವಸ್ಥೆಯಲ್ಲಿರುವುದೇ ಲೇಸೆಂದು ಯಾರೂ

ಭಾವಿಸಬಹುದು. ನಿಜವಾಗಿಯೂ ಸುಖವು ಜನರಿಗೆ ಅತ್ಯಂತ ಆಕರ್ಷಕ. ಅಲ್ಪಸುಖಕ್ಕಾಗಿ ಬಹುಕಷ್ಟಗಳನ್ನು ಅನುಭವಿಸಲು ಜನರು ಸಿದ್ಧರಾಗಿರುವುದನ್ನು ನಾವು ನೋಡುತ್ತಿದ್ದೇವೆ. ಕ್ರಿಕೆಟ್ ಮುಂತಾದ ಆಟದ ಸುಖವನ್ನು ಅನುಭವಿಸಲು ಗಂಟೆಗಟ್ಟಲೆ ಜನರು ಉರಿಬಿಸಿಲಿನಲ್ಲಿ ಕಷ್ಟಪಡುವುದನ್ನು ನಾವು ಕಾಣುತ್ತೇವೆ. ನಾರದ ಮುಂತಾದ ಋಷಿಗಳೂ ಹಿಂದಿನ ಕಾಲದಲ್ಲಿ ಯುದ್ಧದ ಕೌಶಲ ಚಮತ್ಕಾರದ ಸ್ವಾರಸ್ಯವನ್ನು ಅನುಭವಿಸುವುದಕ್ಕಾಗಿ ಬ್ರಹ್ಮಾಸ್ತ್ರಗಳಿಂದಾಗುವ ಭಾರೀಸಂತಾಪವನ್ನು ಸಹಿಸಿಕೊಂಡು ಯುದ್ಧರಂಗದಲ್ಲಿ ಪ್ರೇಕ್ಷಕರಾಗಿ ಭಾಗವಹಿಸುತ್ತಿದ್ದರು. ಅದರಂತೆ ಸಂಸಾರದಲ್ಲಿ ದುಃಖವಿದ್ದರೂ ಇಲ್ಲಿಯ ಸುಖವನ್ನು ತ್ಯಜಿಸಲು ಜನರು ಸಿದ್ಧರಾಗಲಾರರು. ಸ್ವಲ್ಪ ಸುಖಕ್ಕಾಗಿ ಹೆಚ್ಚಿನ ದುಃಖವನ್ನು ಸ್ವೀಕರಿಸಲು ತಯಾರಾಗಿರುವ ನಾವೆಲ್ಲರೂ ಈ ಪ್ರಪಂಚದ ದುಃಖಕ್ಕೆ ಹೆದರಿ ಅದಕ್ಕೆ ಸಮವಾಗಿರುವ ಅಥವಾ ಅದಕ್ಕಿಂತ ಹೆಚ್ಚಾಗಿರುವ ಸಂಸಾರದ ಸುಖವನ್ನು ಹೇಗೆ ತ್ಯಜಿಸಬಲ್ಲೆವು? ಆದುದರಿಂದ ಮುಕ್ತಿಯ ಈ ಕಲ್ಪನೆಯು ಮನೋವಿಜ್ಞಾನಕ್ಕೆ ತೀರ ವಿರುದ್ಧವಾಗಿದೆ.

ಮುಕ್ತಿಯಲ್ಲಿ ಜ್ಞಾನವಾಗಲೀ, ಸುಖವಾಗಲೀ ಇಲ್ಲವೆಂದು ವಾದಿಸುವವರು ವೇದವಾಕ್ಯಗಳ ಆಧಾರದಿಂದಲೂ ಇದನ್ನು ಸಮರ್ಥಿಸಲು ಪ್ರಯತ್ನಿಸುತ್ತಾರೆ. **''ಅಶರೀರಂ ವಾವ ಸಂತಂ ಪ್ರಿಯಾಪ್ರಿಯೇ ನ ಸ್ಪೃಶತಃ''** ಮುಕ್ತಿಯಲ್ಲಿ ಜೀವನಿಗೆ ಶರೀರವೇ ಇಲ್ಲದುದರಿಂದ ಅವನಿಗೆ ಪ್ರಿಯ ಅಥವಾ ಅಪ್ರಿಯಗಳ ಅಂದರೆ ಸುಖ ದುಃಖಗಳ ಸಂಪರ್ಕವಿಲ್ಲವೆಂದು ಹೇಳುವ ವಾಕ್ಯವನ್ನು ಉದಾಹರಿಸುತ್ತಾರೆ. ಆದರೆ ಈ ವಾಕ್ಯಕ್ಕೆ ಮೇಲ್ಮೈಗೆ ತೋರುವ ಈ ಅರ್ಥವನ್ನು ಸ್ವೀಕರಿಸಬಾರದು. ಮುಕ್ತಿಯಲ್ಲಿ ಜೀವನಿಗೆ ಆನಂದವನ್ನು ಹೇಳುವ ಅನೇಕಾನೇಕವಾಕ್ಯಗಳು ವೇದದಲ್ಲಿವೆ. ಅವೆಲ್ಲವನ್ನೂ ಬದಿಗಿರಿಸಿ ಬರೇ ಈ ಒಂದು ವಾಕ್ಯವನ್ನು ಮಾತ್ರ ಇಟ್ಟುಕೊಂಡು ಮೋಕ್ಷದಲ್ಲಿ ಸುಖವೇ ಇಲ್ಲವೆಂದು ನಿರ್ಧರಿಸುವುದು ಸರಿಯಲ್ಲ. ಅದರಂತೆ ಈ ಹಿಂದೆ ತಿಳಿಸಿದಂತೆ ಸುಖವೇ ಇಲ್ಲದ ಮೋಕ್ಷವು ಸಂಸಾರಕ್ಕಿಂತಲೂ ನಿಕೃಷ್ಟವಾಗುವುದರಿಂದ ಅದು ಪರಮಪುರುಷಾರ್ಥವೂ ಆಗಲಾರದು. ಆದುದರಿಂದ ಇವೆಲ್ಲವುಗಳಿಗೂ ವಿರೋಧವಾಗದಂತೆ ಮೋಕ್ಷದಲ್ಲಿ ಸುಖವಿಲ್ಲವೆನ್ನುವ ವಾಕ್ಯಕ್ಕೆ ಅರ್ಥ ಮಾಡಬೇಕು. ಮೋಕ್ಷದಲ್ಲಿ ಅನಿತ್ಯವಾದ ಭೌತಿಕ ಸುಖವಿಲ್ಲವೆಂದೇ ಅದರ

ಅಭಿಪ್ರಾಯ. ಅಪ್ರಾಕೃತವಾದ, ಚೈತನ್ಯಾತ್ಮಕವಾದ ಸ್ವರೂಪಸುಖವು ಅಲ್ಲಿರಬಹುದು. ಹಾಗಾದರೆ ಮುಕ್ತಿಯಲ್ಲಿ ದುಃಖವಿಲ್ಲವೆನ್ನುವ ವಾಕ್ಯಕ್ಕೂ ಪ್ರಾಕೃತವಾದ ದುಃಖವಿಲ್ಲವೆಂದು ಅರ್ಥ ಮಾಡಿ, ಅಪ್ರಾಕೃತವಾದ ದುಃಖವನ್ನು ಅಲ್ಲಿ ಒಪ್ಪುವುದೇ? ಎಂಬ ಪ್ರಶ್ನೆಯುಂಟಾಗಬಹುದು. ದುಃಖವು ಸರ್ವಾತ್ಮನಾ ನಮಗೆ ಅನಪೇಕ್ಷಿತ. ಪ್ರಾಕೃತವಾಗಲೀ, ಅಪ್ರಾಕೃತವಾಗಲೀ, ಯಾವುದೇ ರೀತಿಯ ದುಃಖವನ್ನೂ ನಾವು ಬಯಸುವುದಿಲ್ಲ. ನಮಗೆ ಅತ್ಯಂತ ಅಪೇಕ್ಷಿತವಾದ ಮುಕ್ತಿಯಲ್ಲಿ ಯಾವ ರೀತಿಯ ದುಃಖವೂ ಇರಲು ಸಾಧ್ಯವಿಲ್ಲ. ಆದುದರಿಂದ ಮೋಕ್ಷದಲ್ಲಿ ದುಃಖವಿಲ್ಲವೆನ್ನುವ ವಾಕ್ಯಕ್ಕೆ ಸಂಕೋಚಮಾಡಿ ಕೆಲವೊಂದು ದುಃಖಕ್ಕೆ ಅವಕಾಶವಾಗುವಂತೆ ಅರ್ಥಮಾಡುವ ಅಗತ್ಯವಿಲ್ಲ. ಆದರೆ ಸುಖವಿಲ್ಲವೆನ್ನುವ ವಾಕ್ಯವನ್ನು ಪೂರ್ತಿಯಾಗಿ ಅದೇ ಅರ್ಥದಲ್ಲಿ ಸ್ವೀಕರಿಸಲು ಸಾಧ್ಯವಿಲ್ಲ. ಕ್ಷಣಿಕವಾದ ದುಃಖಮಿಶ್ರವಾದ ಬಾಹ್ಯಸುಖವನ್ನು ವಿಷಮಿಶ್ರಿತವಾದ ಹಾಲಿನಂತೆ ನಾವು ತ್ಯಜಿಸಿದರೂ ಯಾವ ಸುಖವೂ ಇಲ್ಲದ ಸ್ಥಿತಿಯನ್ನು ನಾವು ಸರ್ವಥಾ ಸ್ವೀಕರಿಸಲಾರೆವು. ಆದುದರಿಂದ ಮೋಕ್ಷದಲ್ಲಿ ಸುಖವಿಲ್ಲವೆನ್ನುವ ವಾಕ್ಯಕ್ಕೆ ಅರ್ಥಸಂಕೋಚವನ್ನು ಮಾಡುವುದು ಅನಿವಾರ್ಯ. ಆದುದರಿಂದ ಉಳಿದೆಲ್ಲ ವೇದವಾಕ್ಯಗಳ ಹಿನ್ನೆಲೆಯಲ್ಲಿ ಮೇಲೆ ಹೇಳಿದ ರೀತಿಯಲ್ಲಿ ಅರ್ಥ ಸಂಕೋಚವನ್ನು ಮಾಡಿಯೇ ಈ ವಾಕ್ಯವನ್ನು ಕೂಡಿಸಬೇಕು.

## 'ನ ಪ್ರೇತ್ಯ ಸಂಜ್ಞಾಽಸ್ತಿ' ಶ್ರುತ್ಯರ್ಥ

ಬೃಹದಾರಣ್ಯಕದಲ್ಲಿ ಮೈತ್ರೇಯಿಗೆ ಯಾಜ್ಞವಲ್ಕ್ಯರು ಉಪದೇಶಿಸುವಾಗ **"ನ ಪ್ರೇತ್ಯ ಸಂಜ್ಞಾಽಸ್ತಿ"** ಮೋಕ್ಷದಲ್ಲಿ ಜ್ಞಾನವೇ ಇಲ್ಲವೆಂದು ಹೇಳಿದ್ದಾರೆ. ಈ ವಾಕ್ಯದ ಆಧಾರದಿಂದ ಮೋಕ್ಷದಲ್ಲಿ ಜ್ಞಾನವೇ ಇಲ್ಲವೆಂದು ನಾವು ಯಾಕೆ ನಿರ್ಣಯಿಸಬಾರದೆಂದು ನಮಗೆ ಸಂಶಯವುಂಟಾಗಬಹುದು. ಅದಕ್ಕಾಗಿ ಈ ವಾಕ್ಯದ ಪೂರ್ವಾಪರಗಳನ್ನು ನಾವು ಪರಿಶೀಲಿಸೋಣ.

ವಿಜ್ಞಾನಘನವಾದ ಜೀವನು ನಿತ್ಯನಾಗಿದ್ದರೂ ಪಂಚಭೂತಾತ್ಮಕಶರೀರವನ್ನು ಪಡೆಯುವುದರಿಂದ ಹುಟ್ಟಿದನೆಂದು ನಾವವನನ್ನು ಕರೆಯುತ್ತೇವೆ. ನಿಜವಾಗಿ ಅವನಿಗೆ ಹುಟ್ಟು ಇಲ್ಲ. ಭೌತಿಕಶರೀರವು ನಾಶವಾದಾಗ ಅವನು

ಸತ್ತನೆಂದೂ ನಾವು ಕರೆಯುತ್ತೇವೆ. ಈ ಎಲ್ಲಾ ಸೂಕ್ಷ್ಮಸ್ಥೂಲಶರೀರವನ್ನು ಅವನು ಕಳೆದುಕೊಂಡು ಮುಕ್ತಿಯನ್ನು ಪಡೆಯುತ್ತಾನೆ. ಆಗ ಜ್ಞಾನವಿರುವುದಿಲ್ಲವೆಂದು ಈ ವಾಕ್ಯದಲ್ಲಿ ಹೇಳಲಾಗಿದೆ. ಈ ವಾಕ್ಯಕ್ಕೆ ನಾವು ಎರಡು ರೀತಿಯಿಂದ ಅರ್ಥ ಮಾಡಬಹುದು. ಜೀವನು ಮುಕ್ತಿಯನ್ನು ಪಡೆದಾಗ ನಮಗೆ ಅವನ ಜ್ಞಾನವಿರುವುದಿಲ್ಲ. ಸಮುದ್ರದಲ್ಲಿ ಕರಗಿದ ಉಪ್ಪು ನಮಗೆ ಹೇಗೆ ಗೋಚರವಾಗುವುದಿಲ್ಲವೋ ಅದರಂತೆ ಮುಕ್ತನು ಸಂಸಾರಿಗಳಿಗೆ ಗೋಚರವಾಗುವುದಿಲ್ಲವೆಂಬುದು ಒಂದು ಅರ್ಥವಾದರೆ ಮುಕ್ತನಿಗೆ ಜ್ಞಾನವೇ ಇಲ್ಲ ಎಂಬುದೂ ವಾಕ್ಯದ ಇನ್ನೊಂದು ಅರ್ಥವಾಗಬಹುದು. ಈ ಎರಡರಲ್ಲಿ ಯಾವ ಅರ್ಥವು ಸೂಕ್ತವೆಂಬುದನ್ನು ನಾವು ವಿಮರ್ಶಿಸೋಣ. ಇಲ್ಲಿ ಮುಕ್ತರಿಗೆ ಜ್ಞಾನವೇ ಇಲ್ಲವೆಂಬ ಅರ್ಥವು ಸಮಂಜಸವಲ್ಲ. ಆರಂಭದಲ್ಲಿ ಜೀವನನ್ನು ವಿಜ್ಞಾನಘನನು, ಜ್ಞಾನಸ್ವರೂಪನೆಂದು ಯಾಜ್ಞವಲ್ಕ್ಯರು ಹೇಳಿದ್ದಾರೆ. ಮೋಕ್ಷದ ನಂತರ ಜ್ಞಾನವೇ ಇಲ್ಲವೆಂದು ಸಾಮಾನ್ಯವಾಗಿ ಹೇಳಿದಾಗ ''ತಮ್ಮ ವಾಕ್ಯವು ನಮಗೆ ಭ್ರಾಮಕವಾಗಿದೆ. ತಪ್ಪುಕಲ್ಪನೆಯನ್ನು ಉಂಟುಮಾಡುತ್ತಿದೆ'' ಎಂದು ಮೈತ್ರೇಯಿಯು ಆಕ್ಷೇಪಿಸುತ್ತಾಳೆ. ಆತ್ಮನು ವಿಜ್ಞಾನಸ್ವರೂಪಿಯೆಂದು ಹೇಳಿ, ಈಗ ಮುಕ್ತಿಯಲ್ಲಿ ಜ್ಞಾನವೇ ಇಲ್ಲವೆಂದು ಹೇಳಿದರೆ ಈ ಪರಸ್ಪರ ವಿರೋಧಿಯಾದ ವಾಕ್ಯಗಳನ್ನು ನಾವು ಹೇಗೆ ಅರ್ಥಮಾಡಿಕೊಳ್ಳುವುದು? ಮುಕ್ತಿಯಲ್ಲಿ ಯಾವ ಸಂವೇದನೆಯೂ ಇಲ್ಲದೆ ಕಲ್ಲು ಬಂಡೆಯಂತೆ ಇರುವುದು ಇಷ್ಟಾರ್ಥವೆನಿಸಬಹುದೇ? ಇದು ಮೈತ್ರೇಯಿಯ ಆಕ್ಷೇಪದ ಅಂತರಂಗ. ಇದಕ್ಕೆ ಉತ್ತರವಾಗಿ ಯಾಜ್ಞವಲ್ಕ್ಯರು **''ನ ವಾ ಅರೇ ಮೋಹಂ ಬ್ರವೀಮಿ, ಅವಿನಾಶೀ ವಾ ಅರೇಽಯಮಾತ್ಮಾ ಅನುಚ್ಛಿತ್ತಿಧರ್ಮಾ''** ನಾನೇನೂ ನಿನಗೆ ಭ್ರಾಂತಿಯುಂಟಾಗುವಂತೆ ತಪ್ಪಾಗಿ ಹೇಳುತ್ತಿಲ್ಲ. ಆತ್ಮಸ್ವರೂಪಕ್ಕೂ ನಾಶವಿಲ್ಲ. ಆತ್ಮನಲ್ಲಿರುವ ಧರ್ಮಗಳಿಗೂ ಚ್ಯುತಿಯಿಲ್ಲವೆಂದು ಉತ್ತರಿಸುತ್ತಾರೆ. ಇದರ ಆಶಯವೇನು? ಜ್ಞಾನಸ್ವರೂಪಿಯಾದ ಆತ್ಮನು ಅವಿನಾಶಿಯಾದರೆ ಅವನ ಸ್ವರೂಪಭೂತವಾದ ಜ್ಞಾನವು ನಾಶಹೊಂದುವುದು ಹೇಗೆ? ಬೌದ್ಧರು ಮುಕ್ತಿಯಲ್ಲಿ ಜೀವನು ನಷ್ಟಗೊಳ್ಳುವನೆಂದು ಹೇಳಿದ್ದರೆ ತಾರ್ಕಿಕರು ಜೀವನಿಗೆ ಮುಕ್ತಿಯಲ್ಲಿ ನಾಶವಿಲ್ಲ, ಅವನು ನಿತ್ಯನು. ಆದರೆ ಅವನ ಜ್ಞಾನ, ಸುಖ ಮುಂತಾದ ಎಲ್ಲಾ ಗುಣಧರ್ಮಗಳೂ ಕಳಚಿಕೊಳ್ಳುವವೆಂದು ಹೇಳುತ್ತಾರೆ. ಯಾಜ್ಞವಲ್ಕ್ಯರು ಬೌದ್ಧ ಮತ್ತು ತಾರ್ಕಿಕರ ಈ ಎರಡು ಪ್ರಕ್ರಿಯೆಗಳನ್ನೂ

ಅಲ್ಲಗಳೆದಿದ್ದಾರೆ. ಆತ್ಮನಿಗಾಗಲೀ, ಅವನ ಧರ್ಮಗಳಿಗಾಗಲೀ ನಾಶವೇ ಇಲ್ಲ. ಇವೆರಡೂ ಸನಾತನ. ಮುಕ್ತಿಯಲ್ಲಿ ಆತ್ಮಸ್ವರೂಪವೇ ಇರುವುದಿಲ್ಲ. ಅಥವಾ ಜ್ಞಾನ, ಆನಂದಗಳಿಂದ ರಹಿತವಾದ ಸ್ಥಿತಿಯನ್ನು ಆತನು ಪಡೆಯುತ್ತಾನೆಂಬ ಎರಡು ವಾದಗಳೂ ಸಲ್ಲದು ಎನ್ನುವುದು ಯಾಜ್ಞವಲ್ಕ್ಯರ ಆಶಯವಾಗಿದೆ. ಮುಕ್ತಿಯಲ್ಲಿ ಜ್ಞಾನಸುಖಗಳು ಇಲ್ಲವೆನ್ನುವವರು ಯಾಜ್ಞವಲ್ಕ್ಯರ ಈ ವಾಕ್ಯವನ್ನು ಹೇಗೆ ವ್ಯಾಖ್ಯಾನಿಸಬಲ್ಲರು? ಯಾಜ್ಞವಲ್ಕ್ಯರ ಈ ಉಪದೇಶದಲ್ಲಿ ಮೈತ್ರೇಯಿಯ ಆಕ್ಷೇಪಕ್ಕೆ ಹೇಗೆ ಉತ್ತರವನ್ನು ಹುಡುಕಬಲ್ಲರು? ಆದುದರಿಂದ ಮೈತ್ರೇಯಿಯ ಪ್ರಶ್ನೆ ಮತ್ತು ಯಾಜ್ಞವಲ್ಕ್ಯರ ಉತ್ತರ ಇವೆರಡನ್ನೂ ಪರಿಶೀಲಿಸಿದಾಗ **''ನ ಪ್ರೇತ್ಯ ಸಂಜ್ಞಾಽಸ್ತಿ''** ಎನ್ನುವ ಸಂಮುಗ್ಧವಾದ ವಾಕ್ಯಕ್ಕೆ ಮುಕ್ತಿಯಲ್ಲಿ ಜೀವರಿಗೆ ಜ್ಞಾನವಿಲ್ಲವೆನ್ನುವ ಅರ್ಥದ ಬದಲು ಮುಕ್ತಿ ಪಡೆದ ಜೀವರು ಸಂಸಾರಿಗಳಿಗೆ ಗೋಚರವಾಗುವುದಿಲ್ಲ. ನಮಗೆ ಅವರ ಜ್ಞಾನವಿಲ್ಲವೆಂದೇ ಅರ್ಥ ಮಾಡಬೇಕಾಗುತ್ತದೆ. ಅಥವಾ ಮುಕ್ತರಿಗೆ ಅಪ್ರಾಕೃತವಾದ ಸ್ವರೂಪಜ್ಞಾನವಿದ್ದರೂ ನಮ್ಮ ಮನಸ್ಸಿನಲ್ಲಿ ಪ್ರಕೃತಿಯ ಪರಿಣಾಮದಿಂದ ಉಂಟಾಗುವ ಜ್ಞಾನವು ಅವರಿಗೆ ಆಗುವುದಿಲ್ಲ ವೆಂದೇ ಅರ್ಥಮಾಡಬೇಕು.

ಈ ವಾಕ್ಯದ ಮುಂದಿರುವ ಇನ್ನೊಂದು ವಾಕ್ಯವನ್ನು ಗಮನಿಸಿದಾಗಲೂ ಈ ವಾಕ್ಯವು ಮುಕ್ತಿಯಲ್ಲಿ ಆತ್ಮನಿಗೆ ಜ್ಞಾನವೇ ಇಲ್ಲವೆಂಬ ವಿಚಾರವನ್ನು ಹೇಳುವುದಿಲ್ಲವೆಂದು ನಿರ್ಧರಿಸಬೇಕಾಗುತ್ತದೆ. **''ಯತ್ರ ಹಿ ದ್ವೈತಮಿವ ಭವತಿ''** ಮುಂತಾದ ಮುಂದಿನ ವಾಕ್ಯಗಳಲ್ಲಿ ಮೋಕ್ಷದಲ್ಲಿ ಆತ್ಮನೊಬ್ಬನೇ ಇದ್ದು, ಯಾವ ದ್ವೈತಪ್ರಪಂಚವೇ ಇಲ್ಲದೆ ಕೇವಲ ಆತ್ಮಮಾತ್ರದ ಅಸ್ತಿತ್ವವಿರುವ ಪಕ್ಷದಲ್ಲಿ ಆ ಮೋಕ್ಷದಲ್ಲಿ ಯಾವ ಜ್ಞಾನಕ್ಕೂ ಅವಕಾಶ ವಿಲ್ಲದಂತಾದೀತು ಎಂದು ಆಪಾದನೆ ಮಾಡಿದೆ. ಮುಕ್ತಿಯಲ್ಲಿ ಜ್ಞಾನ ವಿದೆಯೆಂದೇ ಇದರ ಪರ್ಯವಸಾನವಾಗುವುದು. ಯಾವುದೇ ವಿಷಯವನ್ನು ತರ್ಕದ ರೀತಿಯಲ್ಲಿ ಆಪಾದನೆ ಮಾಡಿದಾಗ ಅದು ಇಲ್ಲವೆಂಬುದೇ ಅದರ ಪರ್ಯವಸಾನ ವಾಗುವುದೆಂದು ಪ್ರಮಾಣಗಳ ಪ್ರಕ್ರಿಯೆಯನ್ನು ಬಲ್ಲವ ರೆಲ್ಲರೂ ತಿಳಿದ ಸಂಗತಿಯಾಗಿದೆ. ಈ ಬೆಟ್ಟದಲ್ಲಿ ಬೆಂಕಿಯೇ ಇಲ್ಲದಿದ್ದಲ್ಲಿ ಹೊಗೆ ಇರಲಾರದು ಎಂಬ ಆಪಾದನೆಯ ಪರ್ಯವಸಾನವು ಎಲ್ಲರಿಗೂ ಗೊತ್ತಿದೆ. ಹೊಗೆಯು

ಕಾಣಿಸುತ್ತಿರುವುದರಿಂದ ಬೆಟ್ಟದಲ್ಲಿ ಬೆಂಕಿಯಿದೆಯೆಂಬ ತೀರ್ಮಾನಕ್ಕೆ ನಾವು ಬರುತ್ತೇವೆ. ದೇವರು ಇಲ್ಲದಿದ್ದಲ್ಲಿ ಈ ಜಗತ್ತೇ ಹುಟ್ಟಲಾರದು. ಕರ್ತನೇ ಇಲ್ಲದಿದ್ದರೇ ಕಾರ್ಯ ಉಂಟಾಗುವುದು ಹೇಗೆ? ಇದು ಆಪಾದನೆಯ ಮುಖಾಂತರ ವಸ್ತುವನ್ನು ಪ್ರತಿಪಾದಿಸುವ ತರ್ಕಕ್ಕೆ ಇನ್ನೊಂದು ಉದಾಹರಣೆ. ಕಾರ್ಯಪ್ರಪಂಚವು ಎದುರಿಗೆ ಕಾಣುತ್ತಿರುವುದರಿಂದ ಜಗತ್ತಿನ ಕರ್ತನೂ ಇದ್ದಾನೆ ಎಂಬುದೇ ಇದರ ಪರ್ಯವಸಾನ. ಅದರಂತೆ ಮುಕ್ತಿಯಲ್ಲಿ ಆತ್ಮನ ಹೊರತು ಬೇರೆ ಯಾವ ವಸ್ತುವೂ ಇಲ್ಲದಿದ್ದಲ್ಲಿ ಜ್ಞಾನವೂ ಇರಲಾರದು. ಲೋಕದಲ್ಲಿ ಜ್ಞಾನವುಂಟಾಗಲು ಅನೇಕ ವಸ್ತುಗಳ ಅವಶ್ಯಕತೆ ಇದೆ. ಅಂತಹ ಯಾವ ಭೇದಪ್ರಪಂಚವೂ ಮುಕ್ತಿಯಲ್ಲಿ ಇಲ್ಲವಾದರೆ ಅಲ್ಲಿ ಜ್ಞಾನವೇ ಇರಲಾರದು. ಎಂಬ ಆಪಾದನೆಗೂ ಮುಕ್ತಿಯಲ್ಲಿ ಜ್ಞಾನವಿದೆ ಎಂಬುದರಲ್ಲಿಯೇ ಪರ್ಯವಸಾನವಾಗುವುದಿಲ್ಲವೇ? ಹೀಗೆ ಮುಂದಿನ ಪ್ರಕರಣದಲ್ಲಿರುವ ಆಪಾದನೆಯನ್ನು ಪರಿಶೀಲಿಸಿದರೆ ಮುಕ್ತಿಯಲ್ಲಿ ಜ್ಞಾನವನ್ನು ಒಪ್ಪಲೇಬೇಕೆಂದು ಸಮರ್ಥಿಸುವುದೇ ಯಾಜ್ಞವಲ್ಕ್ಯರ ಉದ್ದೇಶ ವೆಂಬುದು ಸ್ಪಷ್ಟವಾಗುತ್ತದೆ.

ಈ ಪ್ರಕರಣವು ಯಾವುದೇ ಆಪಾದನೆಯನ್ನು ಮಾಡಲು ಹೊರಟಿಲ್ಲ. ಮುಕ್ತಿಯಲ್ಲಿ ಆತ್ಮನೊಬ್ಬನೇ ಇರುವುದರಿಂದ ಅಲ್ಲಿ ಜ್ಞಾನವೇ ಇರುವುದಿಲ್ಲ ವೆಂದು ವಸ್ತುಸ್ಥಿತಿಯ ನಿರೂಪಣೆಯನ್ನೇ ಮಾಡುತ್ತಿದೆಯೆಂದು ಯಾಕೆ ಹೇಳಬಾರದೆಂದು ಪ್ರಶ್ನೆ ಬರಬಹುದು. ಆದರೆ ಇಲ್ಲಿ ಮೂರು ವಿಷಯಗಳನ್ನು ಹೇಳಿದೆ (1) ''ಆತ್ಮನ ಹೊರತು ಬೇರೆ ಯಾವ ಭೇದಪ್ರಪಂಚವೂ ಇಲ್ಲದ ಮುಕ್ತಿಯಲ್ಲಿ ಯಾವ ವಸ್ತುವಿನ ಜ್ಞಾನವೂ ಇರಲಾರದು. (2) ತನ್ನ ಜ್ಞಾನವೂ ಇರಲಾರದು. (3) ಎಲ್ಲವನ್ನೂ ನಮಗೆ ತಿಳಿಸಿಕೊಡಬಲ್ಲ ಭಗವಂತನ ಜ್ಞಾನವೂ ಇರಲಾರದು.'' ಮುಕ್ತಿಯಲ್ಲಿ ತನ್ನ ಜ್ಞಾನವೂ ಇಲ್ಲ ಮತ್ತು ಭಗವಂತನ ಜ್ಞಾನವೂ ಇಲ್ಲವೆಂಬುದು ವಸ್ತುಸ್ಥಿತಿಯಾಗಲು ಸಾಧ್ಯವಿಲ್ಲ. ಗಾಢ ನಿದ್ರೆಯಲ್ಲಿ ತನ್ನ ಪೂರ್ಣಜ್ಞಾನವಾಗಲೀ ಪರರ ಜ್ಞಾನವಾಗಲೀ ನಮಗಿರುವುದಿಲ್ಲ. ಆದರೆ **''ತುರ್ಯಂ ತತ್ ಸರ್ವದೃಕ್ ಸದಾ''** ತುರ್ಯಾವಸ್ಥೆಯಾದ ಮುಕ್ತಿಯಲ್ಲಿ ತನ್ನನ್ನೂ ಉಳಿದವರನ್ನೂ ಭಗವಂತನನ್ನೂ ತಿಳಿಯುತ್ತೇವೆಂದು ಮುಕ್ತಿಯಲ್ಲಿ ತನ್ನ, ಭಗವಂತನ ಮತ್ತು ಇತರ ವಸ್ತುಗಳ ಜ್ಞಾನವಿದೆ ಮತ್ತು ಆನಂದ

ಭೋಗವೂ ಇದೆಯೆಂದು ನೂರಾರು ವೇದವಾಕ್ಯಗಳು ಹೇಳುತ್ತಿರುವಾಗ ಮುಕ್ತಿಯಲ್ಲಿ ಇಂತಹ ಜ್ಞಾನವೂ ಇಲ್ಲವೆನ್ನುವುದು ವಸ್ತುಸ್ಥಿತಿನಿರೂಪಣೆಯಾಗಲು ಸಾಧ್ಯವಿಲ್ಲ. ನಮಗೆ ಸರ್ವಥಾ ಅನಪೇಕ್ಷಿತವಾದ ಪ್ರಮಾಣ ವಿರುದ್ಧವಾದ ಜ್ಞಾನಾಭಾವವನ್ನು ಆಪಾದಿಸಿ ಅದರ ಪರ್ಯವಸಾನವಾಗಿ ಮುಕ್ತಿಯಲ್ಲಿ ಜ್ಞಾನವಿದೆ ಮತ್ತು ಅದನ್ನು ಅವಶ್ಯಕವಾದ ಜೀವ, ಪರಮಾತ್ಮ, ಅಪ್ರಾಕೃತ ಶರೀರ ಮುಂತಾದ ಬೇರೆ ಪ್ರಪಂಚವೂ ಮುಕ್ತಿಯಲ್ಲಿದೆ ಎಂಬುದನ್ನು ಸಮರ್ಥಿಸವುದೇ ಈ ಪ್ರಕರಣದ ಉದ್ದೇಶವಾಗಿದೆ.

**''ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣ ಅಭಿನಿಷ್ಪದ್ಯತೇ'' ''ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ''** ಈ ವಾಕ್ಯಗಳನ್ನು ಉದಾಹರಿಸಿ ಪರಬ್ರಹ್ಮನನ್ನು ಹೊಂದಿದ ಮುಕ್ತಜೀವನು ಅತಿಶಯ ಆನಂದ ಭೋಗವನ್ನು ಪಡೆಯುತ್ತಾನೆಂಬುದಕ್ಕೆ ಪ್ರಮಾಣಗಳ ಆಧಾರವನ್ನು ತೋರಿಸಿದ್ದೇವೆ. **''ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ''** ಮುಕ್ತಿಯಲ್ಲಿ ಜೀವನು ಎಲ್ಲಾ ಸುಖಗಳನ್ನು ಬ್ರಹ್ಮನ ಜೊತೆಗೆ ಅನುಭವಿಸುತ್ತಾನೆ. ಇಲ್ಲಿ ಬ್ರಹ್ಮನ ಜೊತೆಗೆ ಎಂಬ ಮಾತು ಅತ್ಯಂತ ಮಹತ್ವದ್ದಾಗಿದೆ. ಜೀವ ಬ್ರಹ್ಮರ ಭೇದವೇ ಇಲ್ಲದಿದ್ದರೆ ಬ್ರಹ್ಮನ ಜೊತೆಗೆ ಎಂಬ ಮಾತು ಅರ್ಥಶೂನ್ಯವಾಗುತ್ತದೆ. ಇಂತಹ ಅನೇಕ ವೇದ ಪುರಾಣವಾಕ್ಯಗಳನ್ನು ಈ ಸಂದರ್ಭದಲ್ಲಿ ಆಚಾರ್ಯರು ಉದಾಹರಿಸಿದ್ದಾರೆ.

ಶರೀರವಿಲ್ಲದೆ ಮುಕ್ತಿಯಲ್ಲಿ ಆನಂದಾನುಭವವು ಹೇಗೆಂದು ಸಾಂಖ್ಯರೂ ತಾರ್ಕಿಕರೂ ಆಕ್ಷೇಪಿಸಿದ್ದಾರೆ. ಭಗವಂತನಿಗಿರುವಂತೆ ಜೀವರಿಗೂ ಮುಕ್ತಿಯಲ್ಲಿ ಅಪ್ರಾಕೃತದಿವ್ಯಸುಂದರವಿಗ್ರಹವಿದೆಯೆಂದೂ ಸ್ಪಷ್ಟ ಪ್ರಮಾಣಗಳಿವೆ. ಎಲ್ಲಿ ಸತ್ವ, ರಜಸ್ಸು, ತಮಸ್ಸು ಮುಂತಾದ ಪ್ರಕೃತಿಯ ಗುಣಗಳಿಗೆ ಅವಕಾಶವಿಲ್ಲವೋ, ಮಾಯೆಯನ್ನೂ ದಾಟಿದ ಅಂತಹ ಭಗವಂತನ ಲೋಕದಲ್ಲಿ ದಿವ್ಯ ದೇಹಧಾರಿಗಳಾಗಿ ಮುಕ್ತರು ವಿಹರಿಸುವುದನ್ನು ಭಗವಂತನು ಬ್ರಹ್ಮದೇವರಿಗೆ ಪ್ರತ್ಯಕ್ಷವಾಗಿ ದಿವ್ಯದೃಷ್ಟಿಗೆ ತೋರಿಸಿದನೆಂದು ಭಾಗವತದಲ್ಲಿ ಸ್ಪಷ್ಟ ಉಲ್ಲೇಖವಿದೆ. ಇಂತಹ ಅನೇಕ ವಾಕ್ಯಗಳ ಬಲದಿಂದ ಜಡಸಂಬಂಧವೇ ಇಲ್ಲದ ಜ್ಞಾನಾನಂದಮಯವಾದ ದೇಹವು ಮುಕ್ತರಿಗೆ ಇದೆಯೆಂದು ಸಿದ್ಧವಾಗುತ್ತದೆ. ಆದುದರಿಂದ ಸಾಂಖ್ಯ ನೈಯಾಯಿಕರು ಹೇಳುವ ಮುಕ್ತಿಯ ಸ್ವರೂಪವು

ಅನುಭವ ಮತ್ತು ಪ್ರಮಾಣಗಳ ಹಿನ್ನೆಲೆಯಲ್ಲಿ ಪರಿಶೀಲಿಸಿದಾಗ ಸಮಂಜಸವಲ್ಲವೆಂದು ಸ್ಪಷ್ಟವಾಗುತ್ತದೆ.

ಈಗ ಸಂಸಾರದಲ್ಲಿ ಜೀವ ಪರಮಾತ್ಮರಿಗೆ ಭಿನ್ನತೆಯಿದ್ದರೂ ಮುಕ್ತಿಯಲ್ಲಿ ಜೀವರು ಪರಮಾತ್ಮನ ಜೊತೆಗೆ ಪೂರ್ಣ ಐಕ್ಯವನ್ನು ಪಡೆಯುತ್ತಾರೆ. ಇದೇ ಮುಕ್ತಿಯೆಂದು ಕೆಲವರು ಪ್ರತಿಪಾದಿಸುತ್ತಾರೆ. ಇದು ಅತ್ಯಂತ ಅವೈಜ್ಞಾನಿಕವಾದ ವಿಚಾರವಾಗಿದೆ. ಭಿನ್ನವಾಗಿರುವ ಎರಡು ವಸ್ತುಗಳಿದ್ದರೆ ಕೊನೆಯವರೆಗೂ ಅವು ಭಿನ್ನವಾಗಿಯೇ ಇರುತ್ತವೆ. ಆ ಭೇದವು ನಷ್ಟವಾಗಿ ಆ ಎರಡು ವಸ್ತು ತನ್ನ ಪ್ರತ್ಯೇಕ ಅಸ್ತಿತ್ವವನ್ನು ಕಳೆದುಕೊಂಡು ಒಂದಾಗಲು ಸಾಧ್ಯವೇ ಇಲ್ಲ, ಎರಡು ಪದಾರ್ಥಗಳು ಮಿಲನಗೊಂಡು ಒಟ್ಟಾಗಿ ಅವಿಭಕ್ತವಾಗಿ ಇರಬಹುದು. ಆದರೆ ಮಿಲನಗೊಂಡರೂ ತಮ್ಮ ಪ್ರತ್ಯೇಕ ವ್ಯಕ್ತಿತ್ವವನ್ನೇ ಕೊನೆಯವರೆಗೂ ಉಳಿಸಿಕೊಳ್ಳುತ್ತವೆ. ಅದರಂತೆ ಜೀವರು ಮುಕ್ತಿಯಲ್ಲಿ ಪರಮಾತ್ಮನನ್ನು ಹೊಂದಿದರೂ ಕೊನೆಯವರೆಗೂ ತಮ್ಮ ವ್ಯಕ್ತಿತ್ವವನ್ನು ಕಳೆದುಕೊಳ್ಳಲಾರರು. ಜಗತ್ತಿನಲ್ಲಿ ಎಲ್ಲಿಯೂ ಕಂಡರಿಯದ ಇಂತಹ ಅವೈಜ್ಞಾನಿಕ ಕಲ್ಪನೆಯನ್ನು ಮುಕ್ತಿಯಲ್ಲಿ ಮಾಡುವುದು ಸರಿಯಲ್ಲ.

ಕೆಲವರಂತೂ ಜೀವ, ಪರಬ್ರಹ್ಮರಿಗೆ ಭೇದ, ಅಭೇದಗಳೆರಡೂ ಮುಕ್ತಿಯಲ್ಲಿಯೂ ಸಂಸಾರದಲ್ಲಿಯೂ ಸ್ವಾಭಾವಿಕವಾಗಿ ಇದೆ. ಈಗ ಅಭೇದವು ಅವ್ಯಕ್ತವಾಗಿದ್ದರೆ ಮುಕ್ತಿಯಲ್ಲಿ ಅದು ವ್ಯಕ್ತವಾಗುವುದೆಂದು ಹೇಳುತ್ತಾರೆ. ಜಡವಸ್ತುಗಳಲ್ಲಿ ಭೇದ ಅಭೇದಗಳೆರಡೂ ಇರುವುದನ್ನು ನೋಡುತ್ತೇವೆ. ನೂಲು ಮತ್ತು ಬಟ್ಟೆಗಳು ಒಂದೇ. ಆದರೆ ಬಟ್ಟೆಯಿಲ್ಲದಿದ್ದರೂ ನೂಲು ಇರುವುದರಿಂದ ಅಲ್ಲಿ ಭೇದ, ಅಭೇದಗಳೆರಡೂ ಇವೆ. ಅದರಂತೆಯೇ ಜಡವಸ್ತುಗಳಿಗೆ ಅವುಗಳಲ್ಲಿ ಬದಲಾಗುತ್ತಿರುವ ಗುಣಧರ್ಮಗಳ ಜೊತೆಗೂ ಭೇದ ಅಭೇದಗಳಿರುತ್ತವೆ. ಆದರೆ ಒಂದು ಚೇತನಕ್ಕೆ ಇನ್ನೊಂದು ಚೇತನದ ಜೊತೆಗೆ, ಭೇದ, ಅಭೇದಗಳೆರಡೂ ಇರುವುದನ್ನು ನಾವೆಲ್ಲಿಯೂ ಕಂಡಿಲ್ಲ. ಆದ್ದರಿಂದ ಜೀವ ಬ್ರಹ್ಮರಿಗೆ ಭೇದ, ಅಭೇದಗಳೆರಡನ್ನೂ ಅಂಗೀಕರಿಸುವುದು ಅಸಂಬದ್ಧವಾಗುತ್ತದೆ.

ಆದುದರಿಂದ ಮುಕ್ತಿಯಲ್ಲಿಯೂ ಜೀವರು ಪರಬ್ರಹ್ಮನಿಂದ ಭಿನ್ನರಾಗಿದ್ದು ಕೊಂಡು ತಮ್ಮ ಜ್ಞಾನ, ಶಕ್ತಿ ಮುಂತಾದ ಸ್ವಾಭಾವಿಕ

ಸದ್ಗುಣಗಳನ್ನು ಕಳೆದುಕೊಳ್ಳದೇ ತಮ್ಮ ಚೈತನ್ಯಸ್ವರೂಪವಾದ ಆನಂದವನ್ನು ಅನುಭವಿಸುತ್ತಾರೆ ಎಂಬುದೇ ಮುಕ್ತಿಯ ನಿಜವಾದ ಸ್ವರೂಪವಾಗಿದೆ. ಇಂತಹ ಮುಕ್ತಿಯನ್ನು ನಾವೆಲ್ಲರೂ ಬಯಸುತ್ತೇವೆ. ಇದು ಪ್ರಮಾಣಸಮ್ಮತವೂ ಆಗಿದೆ.

## ''ನೈಕಸ್ಮಿನ್ ದರ್ಶಯತೋ ಹಿ''

ಕೆಲವು ದೇವತೆಗಳಿಗೆ ಪಂಚಭೂತಾಭಿಮಾನಿದೇವತೆಗಳಲ್ಲಿ ಲಯವನ್ನು ಹೇಳುವಾಗ ಋಭುದೇವತೆಗಳಿಗೆ ಪೃಥಿವೀದೇವತೆಯಲ್ಲಿ. ಅಶ್ವಿನೀ ದೇವತೆಗಳಿಗೆ ವರುಣನಲ್ಲಿ, ಅಗ್ನಿದೇವತಾಗಣವು ಪ್ರಧಾನಅಗ್ನಿದೇವತೆಯಲ್ಲಿ, ಇಂದ್ರ, ಚಂದ್ರ, ಸೂರ್ಯ, ಬೃಹಸ್ಪತಿಗಳು ವಾಯುದೇವತೆಯಲ್ಲಿ, ಸಾಧ್ಯದೇವತೆಗಳು, ಆಕಾಶದೇವತೆಯಲ್ಲಿ ಲಯವನ್ನು ಹೊಂದುತ್ತಾರೆಂದು ಹೇಳಿದೆ. ಇಲ್ಲಿ ಇಂದ್ರ, ಚಂದ್ರ ಮುಂತಾದ ನಾಲ್ಕು ದೇವತೆಗಳಿಗೆ ಲಯವನ್ನು ವಾಯುದೇವತೆಯಲ್ಲಿ ಹೇಳಿದೆ. ಈ ವಾಯುದೇವತೆ ಯಾರು? ಪಂಚಭೂತಗಳಲ್ಲಿ ಸೇರಿದ ವಾಯುವಿಗೆ ಅಭಿಮಾನಿಯೂ ಅಷ್ಟ ದಿಕ್ಪಾಲಕರಲ್ಲಿ ಒಬ್ಬನೂ ಆದ ಅಪ್ರಧಾನವಾಯುವೋ? ಜೀವೋತ್ತಮನಾದ ಪ್ರಧಾನವಾಯುವೋ? ಎನ್ನುವ ಸಂದೇಹ. ಪಂಚಭೂತಗಳ ಜೊತೆಗೆ ಈ ವಾಯುಶಬ್ದವನ್ನು ಹೇಳಿರುವುದರಿಂದ ವಾಯುತತ್ವಕ್ಕೆ ಅಭಿಮಾನಿಯಾದ ಭೂತವಾಯುವನ್ನೇ ಹೇಳಿರಬಹುದೆಂದು ಭಾವಿಸಲು ಅವಕಾಶವಿದೆ. ಆದರೆ ತಾರತಮ್ಯದಲ್ಲಿ ಇಂದ್ರ ದೇವತೆಯು ಭೂತವಾಯುವಿಗಿಂತಲೂ ಶ್ರೇಷ್ಠನು. ಹೀಗಿರುವಾಗ ಉತ್ತಮರಲ್ಲಿ ಅಧಮರಿಗೆ ಲಯವೆಂಬ ನಿಯಮಕ್ಕೆ ವಿರುದ್ಧವಾಗಿ ಭೂತವಾಯುವಿನಲ್ಲಿ ಇಂದ್ರನಿಗೆ ಲಯವಾಗಲು ಸಾಧ್ಯವಿಲ್ಲ. ಜೀವೋತ್ತಮನಾದ ಮುಖ್ಯಪ್ರಾಣನು ಇಂದ್ರಾದಿದೇವತೆಗಳಿಂದ ಶ್ರೇಷ್ಠನಾಗಿರುವನು. ಸರ್ವವಸ್ತುಗಳಿಗೂ ಅಭಿಮಾನಿಯಾಗಿರುವ ಮುಖ್ಯಪ್ರಾಣನು ಪಂಚಭೂತಗಳಲ್ಲಿ ಸೇರಿದ ವಾಯುತತ್ತ್ವಕ್ಕೂ ಅಭಿಮಾನಿಯೇ ಆಗಿರುವನು. ಅಂತಹ ಪ್ರಧಾನವಾಯುವಿನಲ್ಲಿಯೇ ಇಂದ್ರಾದಿಗಳಿಗೆ ಲಯವನ್ನು ಈ ವಾಕ್ಯವು ಹೇಳುತ್ತದೆ.

## ಶೇಷಮಾರ್ಗ - ಗರುಡ ಮಾರ್ಗ

ಎಲ್ಲಾ ದೇವತೆಗಳಿಗೂ ಮುಕ್ತಿಕಾಲದಲ್ಲಿ ಬ್ರಹ್ಮದೇವರ ಮುಖಾಂತರವಾಗಿ ಪರಮಾತ್ಮನಲ್ಲಿ ಲಯವನ್ನು ಹೊಂದುವರು. ಬ್ರಹ್ಮದೇವರಲ್ಲಿ ಸೇರಲೂ ಎರಡು ಮಾರ್ಗಗಳಿವೆ. ಶೇಷನಲ್ಲಿ ಸೇರಿ ಬ್ರಹ್ಮದೇವರನ್ನು ತಲುಪುವುದು ಒಂದು ಮಾರ್ಗ. ಇದನ್ನು ಶೇಷಮಾರ್ಗವೆಂದು ಕರೆಯುತ್ತಾರೆ. ಗರುಡನನ್ನು ಸೇರಿ ಬ್ರಹ್ಮದೇವರನ್ನು ಪ್ರವೇಶಿಸುವುದು ಇನ್ನೊಂದು ಮಾರ್ಗ. ಇದೇ ಗರುಡ ಮಾರ್ಗವಾಗಿದೆ. ದೇವತೆಗಳು ಬ್ರಹ್ಮದೇವರ ಮುಖಾಂತರ ಪರಮಾತ್ಮನನ್ನು ಸೇರುವ ಈ ಶೇಷ ಮಾರ್ಗ, ಗರುಡ ಮಾರ್ಗಗಳ ಪ್ರಕಾರವು ಈ ಕೆಳಗಿನಂತಿದೆ.

### ಶೇಷಮಾರ್ಗ



## ಗರುಡಮಾರ್ಗ


ಪರಮಾತ್ಮ
ಬ್ರಹ್ಮದೇವರು
ಸರಸ್ವತಿ
ಗರುಡ
ಸೌಪರ್ಣಿ
ಇಂದ್ರ
ಬೃಹಸ್ಪತಿ + ಮರುದ್ಗಣ + ದಕ್ಷ + ಸ್ವಾಯಂಭುವಮನು
ಸೂರ್ಯ + ಆಕಾಶ + ಪೃಥಿವೀ ದೇವತೆಗಳು
ಭೃಗು ಮೊದಲಾದವರು
ಯಮ+ ವೈವಸ್ವತ ಮನು ಮೊದಲಾದವರು + ಪ್ರಿಯವ್ರತಾದಿಚಕ್ರವರ್ತಿಗಳು
ನಿರ್ಋತಿ + ಪಿತೃ ದೇವತೆಗಳು
ಅಗ್ನಿ
ಇತರ ದೇವತೆಗಳು

ಎಲ್ಲಾ ಗಂಧರ್ವರು ಕುಬೇರನಲ್ಲಿ ಪ್ರವೇಶವನ್ನು ಪಡೆಯುತ್ತಾರೆ. ಕುಬೇರ ಮತ್ತು ವರುಣರು ಚಂದ್ರನಲ್ಲಿಯೂ, ಚಂದ್ರ, ಸೇನಾಧಿಪತಿಯಾದ ವಿಷ್ವಕ್ಸೇನ ಮುಂತಾದವರು ಅನಿರುದ್ಧನಲ್ಲಿಯೂ, ಅನಿರುದ್ಧ, ಸನಕ, ಸನಂದನ, ಸನಾತನರು ಪ್ರದ್ಯುಮ್ನನಲ್ಲಿಯೂ, ಪ್ರದ್ಯುಮ್ನನು ವಾರುಣಿಯಲ್ಲಿಯೂ, (ಶೇಷ ಪತ್ನೀ). ಅವಳು ಶೇಷನಲ್ಲಿ ಲಯವನ್ನು ಹೊಂದುವಳು. ಶೇಷದೇವರು ಬ್ರಹ್ಮದೇವರಲ್ಲಿ, ಲಯವನ್ನು ಹೊಂದುವರು.

ಅಗ್ನಿದೇವತೆಗೆ ಸೂರ್ಯನಲ್ಲಿ ಲಯ, ಸೂರ್ಯನಿಗೂ, ಆಕಾಶ, ಪೃಥಿವೀ ದೇವತೆಗಳಿಗೂ ಬೃಹಸ್ಪತಿಯಲ್ಲಿ ಪ್ರವೇಶ, ಭೃಗು ಮುಂತಾದ ಮುನಿಗಳು ದಕ್ಷನನ್ನು ಸೇರುತ್ತಾರೆ. ನಿರ್ಋತಿಯು, ಯಮದೇವರನ್ನೂ, ಯಮದೇವರು, ವೈವಸ್ವತಮನು ಮುಂತಾದವರೂ, ಪ್ರಿಯವ್ರತ ಮೊದಲಾದ ಚಕ್ರವರ್ತಿಗಳೂ ಸ್ವಾಯಂಭುವಮನುವನ್ನು ಪ್ರವೇಶಿಸುತ್ತಾರೆ. ಸ್ವಾಯಂಭುವಮನು ಬೃಹಸ್ಪತಿ, ದಕ್ಷರು ಹಾಗೂ ಮರುದ್ಗಣಗಳು ಇಂದ್ರದೇವರನ್ನೂ, ಇಂದ್ರದೇವರು ಸೌಪರ್ಣೀ (ಗರುಡಪತ್ನೀ) ಯನ್ನೂ, ಅವಳು ಗರುಡನನ್ನೂ ಸೇರುತ್ತಾರೆ. ಗರುಡನಿಗೆ ಬ್ರಹ್ಮದೇವರಲ್ಲಿ ಲಯ ವಾಗುತ್ತದೆ. ಆ ಬ್ರಹ್ಮದೇವರು ಈ ಎಲ್ಲಾ ದೇವತೆಗಳ ಜೊತೆಗೆ ಪರಮಾತ್ಮನನ್ನು ಸೇರುತ್ತಾರೆ. ಈ ಸಂದರ್ಭದಲ್ಲಿ ಅಪೂರ್ವವಾದ ಸ್ವರೂಪಾನಂದವನ್ನು ಅನುಭವಿಸುತ್ತಾರೆ. ತನ್ನ ವ್ಯಕ್ತಿತ್ವವನ್ನುಳಿಸಿಕೊಂಡು ಭಗವಂತನ ಜೊತೆಗೂ ತಮಗಿಂತ ಶ್ರೇಷ್ಠ ದೇವತೆಗಳ ಜೊತೆಗೂ ಸಮ್ಮಿಲಿತರಾಗಿ ದಿವ್ಯಾನಂದವನ್ನು ಅನುಭವಿಸುವ ದೇವತೆಗಳ ಈ ಕ್ರೀಡೆಯನ್ನೇ ಸಾಯುಜ್ಯ ಮುಕ್ತಿ ಎಂದು ಕರೆಯಲಾಗಿದೆ.

ವಾಯುದೇವರಲ್ಲಿ ಸಾಕ್ಷಾತ್ ಅಥವಾ ಪರಂಪರೆಯಿಂದ ಎಲ್ಲಾ ದೇವತೆಗಳ ಲಯವೆಂದು ವಾಯುದೇವರು ಸಾಕ್ಷಾತ್ ಪರಮಾತ್ಮನಲ್ಲಿ ಪ್ರವೇಶಿಸುವರೆಂದೂ ಈವರೆಗೆ ಹೇಳಿದೆ. ಆದರೆ ''ಪ್ರಾಣಃ ತೇಜಸಿ, ತೇಜಃ ಪರಸ್ಯಾಂ ದೇವತಾಯಾಂ'' ಮುಖ್ಯಪ್ರಾಣನು ತೇಜಸ್ಸಿನಲ್ಲಿ, ತೇಜಸ್ಸು ಪರಮಾತ್ಮನಲ್ಲಿ ಲಯಹೊಂದುವುದಾಗಿ ಹೇಳುವ ಒಂದು ವೇದವಾಕ್ಯವಿದೆ. ಇಲ್ಲಿ ತೇಜಸ್ಸೆಂದರೆ ಪ್ರಕೃತಿಯ ಅಭಿಮಾನಿಯಾದ ಲಕ್ಷ್ಮೀದೇವಿಯನ್ನು ಪರಿಗ್ರಹಿಸಬೇಕು. ಮುಖ್ಯಪ್ರಾಣದೇವರಿಗೆ ಲಕ್ಷ್ಮೀದೇವಿಯಲ್ಲಿ ಪ್ರವೇಶವನ್ನು

ಈ ವಾಕ್ಯ ಹೇಳುತ್ತದೆ. ಪ್ರಕೃತಿಯಲ್ಲಿ ವಿಲೀನನಾದವನು ಸಂಸಾರಿಯಾಗಿಯೇ ಇರುವನು. ಅವನು ಮುಕ್ತನಾಗುವುದಿಲ್ಲ. **''ವಿಲೀನೋ ಹಿ ಪ್ರಕೃತೌ ಸಂಸಾರಮೇತಿ''** ಹೀಗಾಗಿ ವಾಯುದೇವರಿಗೆ ಮೋಕ್ಷವೇ ಇಲ್ಲವೇ? ಎನ್ನುವ ಪ್ರಶ್ನೆ ಉಂಟಾಗುತ್ತದೆ. ಹೌದು. ವಾಯುದೇವರು ನೇರವಾಗಿ ಮುಕ್ತಿಯನ್ನು ಹೊಂದುವುದಿಲ್ಲ. ಲಕ್ಷ್ಮೀದೇವಿಯನ್ನು ಪ್ರವೇಶಿಸಿದ ವಾಯುದೇವರು ಆ ಜಗನ್ಮಾತೆಯ ಪುತ್ರರಾಗಿ, ಬ್ರಹ್ಮದೇವರಾಗಿ ಜನಿಸುವರು. ಆಮೇಲೆ ತನ್ನಲ್ಲಿ ಪ್ರವೇಶಿಸಿದ ಎಲ್ಲಾ ದೇವತೆಗಳ ಜೊತೆಗೆ ಪರಮಾತ್ಮನಲ್ಲಿ ಪ್ರವೇಶಿಸಿ ಎಲ್ಲರೂ ಅಮಂದಾನಂದವನ್ನು ಅನುಭವಿಸುವರು. ಬ್ರಹ್ಮದೇವರು ಪರಮಾತ್ಮನನ್ನು ಪ್ರವೇಶಿಸುವಾಗಲೂ ಲಕ್ಷ್ಮೀದೇವಿಯ ಮುಖಾಂತರವಾಗಿ ಆದರೂ ಅಲ್ಲಿ ಲೀನರಾಗದೇ ಭಗವಂತನನ್ನು ಸೇರುವರು.

ಮನಸ್ಸು ಮುಂತಾದ ಪ್ರತೀಕಗಳಲ್ಲಿ ಭಗವಂತನನ್ನು ಉಪಾಸಿಸುವ ಸಾಧಕರು ಬ್ರಹ್ಮದೇವರನ್ನು ಹೊಂದಿ ಅವರಿಂದ ಪ್ರಳಯಕಾಲದವರೆಗೆ ವಿಶೇಷ ಜ್ಞಾನವನ್ನು ಪಡೆದು ಪ್ರಳಯಕಾಲದಲ್ಲಿ ಭಗವಂತನನ್ನು ಹೊಂದುವರು. ಪ್ರತೀಕಮಾಧ್ಯಮವಿಲ್ಲದೆ ಭಗವಂತನ ವ್ಯಾಪ್ತರೂಪವನ್ನು ಉಪಾಸಿಸುವ ಶ್ರೇಷ್ಠಸಾಧಕರು ನೇರವಾಗಿ ಮೊದಲು ಭಗವಂತನ ಬಳಿಗೆ ಆಗಮಿಸುವರು. ಆಮೇಲೆ ಪುನಃ ಬ್ರಹ್ಮದೇವರ ಬಳಿಗೆ ಬಂದು ಪ್ರಳಯಕಾಲದಲ್ಲಿ ಬ್ರಹ್ಮ ದೇವರ ಜೊತೆಗೆ ಮುಕ್ತಿ ಪಡೆಯುವರು.

### ''ಮುಕ್ತಿಯಲ್ಲಿ ತಾರತಮ್ಯ''

ಮುಕ್ತಿಯಲ್ಲಿಯೂ ಜೀವರಿಗೆ ಭಗವಂತನು ಮತ್ತು ತಮಗಿಂತ ಉತ್ತಮರು ನಿಯಾಮಕರಾಗಿರುವರು. ಪುರುಷಸೂಕ್ತದಲ್ಲಿ ಭಗವಂತನನ್ನು **''ಅಮೃತತ್ವಸ್ಯ ಈಶಾನಃ''** ಮುಕ್ತರಿಗೆ ನಿಯಾಮಕನೆಂದು ವರ್ಣಿಸಿದೆ. ಆದುದರಿಂದ ಮುಕ್ತಿಯಲ್ಲಿ ಪರಮಾತ್ಮನ ಜೊತೆಗೆ ನಾವು ಪೂರ್ತಿಯಾಗಿ ಸರಿಸಮಾನರಾಗಿ ಉಳಿಯದೆ ಅವನ ಪ್ರಭುತ್ವದಲ್ಲಿಯೇ ಇರುತ್ತೇವೆ. ಪರಮಾತ್ಮನ ಜೊತೆಗೆ ನಮಗಿರುವ ಸ್ವಾಮಿ ಭಕ್ತಸಂಬಂಧವು ಸಂಚಾರಕ್ಕೆ ಮಾತ್ರ ಸೀಮಿತವಲ್ಲ. ಮುಕ್ತಿಯಲ್ಲಿಯೂ ಉಳಿಯುವ ಶಾಶ್ವತಸಂಬಂಧವಾಗಿದೆ. ಎಂದೆಂದಿಗೂ ನಾವು ಭಗವಂತನ ಭಕ್ತರಾಗಿ ಸೇವಕರಾಗಿಯೇ ಇರುವೆವು.

ಇದರಲ್ಲಿಯೇ ಹೆಚ್ಚಿನ ತೃಪ್ತಿ ಗೌರವಗಳನ್ನು ನಾವು ಅನುಭವಿಸುತ್ತೇವೆ. ನಾವು ಪರಮಾತ್ಮನೇ ಆಗುವೆವು ಅಥವಾ ಮುಕ್ತಿಯಲ್ಲಿ ಪೂರ್ತಿಯಾಗಿ ಅವನಿಗೆ ಸಮಾನರಾಗುವೆವೆಂಬ ಅವಾಸ್ತವ ಕಲ್ಪನೆಗೆ ಅವಕಾಶವನ್ನು ನೀಡಬಾರದು.

ವೇದದಲ್ಲಿ ಒಂದೆಡೆ ಮುಕ್ತನನ್ನು ಅನನ್ಯಾಧಿಪತಿ ಎಂದು ವರ್ಣಿಸಿದೆ. ಭಗವಂತನಂತೆ ಜೀವನಿಗೂ ಇನ್ನೊಬ್ಬ ಅಧಿಪತಿ ಇಲ್ಲವೆಂದು ಇದರ ಅರ್ಥವಲ್ಲ. ಈ ವಾಕ್ಯದಲ್ಲಿ ಮುಕ್ತನಿಗೆ ಅಧಿಪತಿಯೇ ಇಲ್ಲ. ಅವನು ಅನಧಿಪತಿ ಎಂಬುದಾಗಿ ಹೇಳದೆ **''ಅನನ್ಯಾಧಿಪತಿ''** ಎಂದು ಕರೆದಿರುವುದರ ಸ್ವಾರಸ್ಯವನ್ನು ನಾವು ಅರ್ಥ ಮಾಡಿಕೊಳ್ಳಬೇಕು. ಅವನಿಗೆ ಅಧಿಪತಿಗಳಿದ್ದರೂ ಅನ್ಯರು ಅಧಿಪತಿಗಳು ಇಲ್ಲ. ತಮಗಿಂತ ಶ್ರೇಷ್ಠರಾದ ಮುಕ್ತಜೀವರು ಮತ್ತು ಪರಮಾತ್ಮನ ಹೊರತಾಗಿ ಅನ್ಯರು ಅಧಿಪತಿಗಳಿಲ್ಲವೆಂದೇ ಈ ಪದದ ಸಹಜ ಅರ್ಥವಾಗುವುದು. ಸಂಸಾರದಲ್ಲಿ ನಮಗಿಂತಲೂ ನಿಕೃಷ್ಟರಾದ ಅನೇಕ ವ್ಯಕ್ತಿಗಳ ಅಧೀನರಾಗಿರುವ ದುರವಸ್ಥೆ ಎಲ್ಲರಿಗೂ ದೊರೆಯುತ್ತಿದೆ. ಮುಕ್ತಿಯಲ್ಲಿ ಮಾತ್ರ ಇಂತಹ ಹೀನಸ್ಥಿತಿಗೆ ಅವಕಾಶವಿಲ್ಲ. ಪರಮಾತ್ಮ ಮತ್ತು ನಮಗಿಂತ ಶ್ರೇಷ್ಠ ದೇವತೆಗಳು ಮಾತ್ರ ನಮಗಲ್ಲಿ ಯಜಮಾನರಾಗಿರುತ್ತಾರೆ. ಯಾವ ದೈನ್ಯಕ್ಕೂ ಅಲ್ಲಿ ಅವಕಾಶವಿಲ್ಲ. ತಮ್ಮ ಸ್ವರೂಪ ಯೋಗ್ಯತೆ ಮತ್ತು ಸಾಧನೆಗಳಿಗೆ ಅನುಗುಣವಾಗಿ ಹಿರಿಯರು ಕಿರಿಯರ ಅಧೀನರಾಗಿ ಪರಸ್ಪರ ಪ್ರೀತಿ, ಭಕ್ತಿ, ಗೌರವಗಳೊಂದಿಗೆ ಯಾವುದೇ ಕೀಳರಿಮೆ ಇಲ್ಲದೆ ಎಲ್ಲರೂ ಭಗವಂತನ ಸಾರ್ವಭೌಮತ್ವದ ಅಡಿಯಲ್ಲಿ ಆನಂದಸಾಗರದಲ್ಲಿ ವಿಹರಿಸು ತ್ತಾರೆ.

ತಮಗಿಂತ ಉತ್ತಮರಾದ ಮುಕ್ತರು ಮುಕ್ತಿಯಲ್ಲಿ ನಮಗೆ ನಿಯಾಮಕ ರಾಗಿರುತ್ತಾರೆಂಬುದಕ್ಕೆ ಸ್ಪಷ್ಟವಾದ ವೇದವಾಕ್ಯವನ್ನು ಉದಾಹರಿಸಬಹುದು. **''ಅಥ ಯ ಏವಂ ವಿದ್ವಾನ್ ಸೋಽಮುನೈವ ಯೇ ಚಾಮುಷ್ಮಾತ್ ಪರಾಂಚೋ ಲೋಕಾಃ''** ಮುಂತಾದ ವಾಕ್ಯಗಳಲ್ಲಿ ಜ್ಞಾನಿಯಾದವನು ಪರಮಾತ್ಮನಿಂದಾಗಿ ಸರ್ವಲೋಕಾಧಿಪತ್ಯವನ್ನು ಪಡೆಯುವನೆಂದು ಹೇಳಿದೆ. **''ಉದೇತಿ ಹ ವಾ ಸರ್ವೇಭ್ಯಃ ಪಾಪೇಭ್ಯಃ''** ಎಂದು ಯಾವ ಅಶುಭಲೇಪವೂ ಅವನಿಗಿಲ್ಲವೆಂದೂ ಹೇಳಿದೆ. ಇದರಿಂದ ಪ್ರಕೃತಿಯ ಸಂಬಂಧಕ್ಕೊಳಪಟ್ಟಿರುವುದರಿಂದ ಬ್ರಹ್ಮದೇವರನ್ನಾರಂಭಿಸಿ, ಸಂಸಾರಿಗಳಾದ ಯಾವ ಜ್ಞಾನಿಗಳನ್ನೂ ಇಲ್ಲಿ

ಸರ್ವಲೋಕಾಧಿಪತಿಗಳೆಂದು ವರ್ಣಿಸಿದ್ದಲ್ಲ ಹೊರತು, ಪ್ರಕೃತಿಸಂಬಂಧವಿಲ್ಲದ ಮುಕ್ತಬ್ರಹ್ಮಾದಿಗಳನ್ನೇ ಸರ್ವಲೋಕಾಧಿಪತಿಗಳೆಂದು ಹೇಳಿದ್ದು ಎಂದು ತಿಳಿಯಬಹುದು. ಜ್ಞಾನಿಗಳು ಪರಮಾತ್ಮನಿಂದ ಐಕ್ಯವನ್ನು ಪಡೆದಿರುವುದರಿಂದ ಅವರನ್ನು ಸರ್ವಲೋಕಾಧಿಪತಿಗಳೆಂದು ಹೇಳಿದೆಯೆಂದು ಅರ್ಥ ಮಾಡುವುದೂ ಸರಿಯಲ್ಲ. ಈ ವಾಕ್ಯದಲ್ಲಿರುವ ಪದಗಳನ್ನು ಪರಿಶೀಲಿಸಿದರೆ ಅಭೇದವನ್ನು ಪ್ರತಿಪಾದಿಸುವ ಯಾವ ಶಬ್ದವೂ ಇಲ್ಲಿಲ್ಲ. ನಿರ್ಗುಣವಾದ ಬ್ರಹ್ಮನ ಜೊತೆ ಅಭೇದವನ್ನು ಪಡೆದವನು ಸಗುಣನಾಗಿ ಸರ್ವಲೋಕಾಧಿಪತಿಯಾಗುವುದು ಹೇಗೆ? ಆದ್ದರಿಂದ ಪರಮಾತ್ಮನ ಅನುಗ್ರಹದಿಂದ ಮುಕ್ತನು ಸರ್ವಲೋಕಾಧಿಪತಿಯಾಗುವನು ಎಂದೇ ಈ ವಾಕ್ಯದ ಅರ್ಥವಾಗಿದೆ. ಆದರೆ ಮುಕ್ತಿಯನ್ನು ಪಡೆದ ಮೇಲೆ ಅವನಿಗೆ ಸಂಸಾರದ ಯಾವ ಸಂಬಂಧವೂ ಇರುವುದಿಲ್ಲ. ಈ ಲೋಕದ ಮೇಲೆ ಯಾವ ಅಧಿಕಾರವನ್ನೂ ಚಲಾಯಿಸುವುದಿಲ್ಲ. ಹೀಗಾಗಿ ಮುಕ್ತನು ಸರ್ವಲೋಕಾಧಿಪತಿಯಾಗುವುದು ಹೇಗೆ? ಮುಕ್ತರಾದ ಬ್ರಹ್ಮದೇವರು ತಮ್ಮ ಜೊತೆಗೆ ಮುಕ್ತಿ ಹೊಂದಿದ ಎಲ್ಲರ ಅಧಿಪತಿಗಳಾಗುವರು. ಉಳಿದವರೂ ಯಥಾಯೋಗ್ಯವಾಗಿ ತಮ್ಮ ಕೆಳಗಿನ ಮುಕ್ತಜೀವರ ಅಧಿಪತಿಗಳಾಗುವರು ಎಂದೆ ಈ ವಾಕ್ಯದ ಅರ್ಥವನ್ನು ನಾವು ಗ್ರಹಿಸಬೇಕು. ಮುಕ್ತಿಯಲ್ಲಿ ಈ ಸಾಂಸಾರಿಕಲೋಕಗಳ ಆಧಿಪತ್ಯವಿಲ್ಲದ್ದಿದರೂ ಹಿಂದೆ ಈ ಸಾಂಸಾರಿಕ ಲೋಕವಾಸಿಗಳಾಗಿದ್ದು ಈಗ ಮುಕ್ತರಾಗಿರುವ ಜನರನ್ನೇ ಈ ಮಂತ್ರದಲ್ಲಿರುವ ''ಲೋಕ'' ಶಬ್ದವು ಪ್ರತಿಪಾದಿಸುತ್ತದೆ. ಲೋಕವಾಸಿಗಳಾದ ಜನರನ್ನು ಲೋಕ ಎಂಬುದಾಗಿ ಕರೆಯುವುದು ಸಂಸ್ಕೃತದಲ್ಲಿಯೂ, ಲೌಕಿಕ ಭಾಷೆಯಲ್ಲಿಯೂ ಪ್ರಸಿದ್ಧವಾಗಿದೆ. ಲೋಕಶಬ್ದವು ಸಂಸ್ಕೃತದಲ್ಲಿ ದೀಪ ಅಥವಾ ಪ್ರಕಾಶವನ್ನು ಹೇಳುತ್ತದೆ. ಪ್ರಕಾಶರೂಪಿಗಳಾದ ಮುಕ್ತಜೀವರನ್ನೇ ''ಲೋಕ'' ಶಬ್ದವು ತಿಳಿಸುತ್ತದೆ. ಅವರ ಆಧಿಪತ್ಯವು ಮುಕ್ತಿಯಲ್ಲಿಯೂ ಉತ್ತಮಚೇತನರಿಗೆ ಇರುವುದರಿಂದ ಅವರನ್ನು ಮುಕ್ತಿಯಲ್ಲಿ ಲೋಕಾಧಿಪತಿಗಳೆಂದು ಹೇಳಿದ್ದಾರೆ ಎಂದೂ ಈ ವಾಕ್ಯದ ಅರ್ಥವನ್ನು ಗ್ರಹಿಸಬಹುದು. ಸಂಸ್ಕೃತ ವ್ಯಾಕರಣದಂತೆ **''ಪರಾಂಚೋ ಲೋಕಾಃ''** ಎಂಬಲ್ಲಿ **''ಅಲೋಕಾಃ''** ಎಂದೂ ಪದಚ್ಛೇದವನ್ನು ಮಾಡಬಹುದಾಗಿದೆ. ಅಲೋಕರೆಂದರೆ ಲೋಕಾತೀತರಾದ ಮುಕ್ತರು. ಅವರ ಆಧಿಪತ್ಯವನ್ನು ಉತ್ತಮಮುಕ್ತರು ಹೊಂದಿರುತ್ತಾರೆ ಎಂಬುದಾಗಿಯೂ ಈ

ವಾಕ್ಯದ ಅರ್ಥವಿವರಣೆ ಮಾಡಬಹುದು. ಅಂತೂ ಯಾವ ನಿಟ್ಟಿನಲ್ಲಿ ನೋಡಿದರೂ ಈ ವೇದಮಂತ್ರವು ಮುಕ್ತಜೀವರಲ್ಲಿ ಪರಸ್ಪರ ತಾರತಮ್ಯವನ್ನೂ, ಸರ್ವಮುಕ್ತರಲ್ಲಿ ಬ್ರಹ್ಮದೇವರ ಶ್ರೇಷ್ಠತೆಯನ್ನೂ, ಅಲ್ಲಿಯೂ ಭಗವಂತನ ಸಾರ್ವಭೌಮತೆಯನ್ನೂ ಪ್ರತಿಪಾದಿಸುತ್ತದೆ.

ಆದ್ದರಿಂದ ಮುಕ್ತಿಯಲ್ಲಿ ನಾವೆಲ್ಲರೂ ಭಗವಂತನಿಗೆ ಪೂರ್ಣ ಸಮಾನರಾಗುವೆವೆಂದಾಗಲೀ, ಅಥವಾ ಅವನೊಂದಿಗೆ ತಾದಾತ್ಮ್ಯ ಹೊಂದುವೆವೆಂದಾಗಲೀ ಸರ್ವಥಾ ಭಾವಿಸಬಾರದು. ಅಮಂದಗುಣಸಾಂದ್ರನಾದ ಮುಕುಂದನನ್ನು ಹೊಂದಿ ತಮ್ಮದೇ ಆದ ದಿವ್ಯಾನಂದವನ್ನು ಜೀವರು ಮುಕ್ತಿಯಲ್ಲಿ ಅನುಭವಿಸುತ್ತಾರೆ. ಇದು ನಮ್ಮ ಭೌತಿಕೇಂದ್ರಿಯಗಳಿಂದ ಅನುಭವಿಸುವ ಲೌಕಿಕಆನಂದವಲ್ಲ. ಭೌತಿಕ ಸಲಕರಣೆಗಳಿಂದ ಹುಟ್ಟುವುದೂ ಅಲ್ಲ. ತನ್ನ ಸ್ವರೂಪದಲ್ಲಿಯೇ ಹುದುಗಿದ ಸ್ವಾಭಾವಿಕವಾದ ನಿತ್ಯ ಚೈತನ್ಯಮಯ ಆನಂದವನ್ನೇ ನಿರಂತರವಾಗಿ ಮುಕ್ತರು ಅನುಭವಿಸುತ್ತಾರೆ. ಪ್ರಕೃತಿಯ ಬಂಧನದಿಂದ ತನ್ನತನವನ್ನೇ ಕಳೆದುಕೊಂಡು ಅಂತಃಕರಣದ ವಿಕೃತಿಗಳಾದ ವಿವಿಧಸುಖದುಃಖಗಳ ಗೊಂದಲದಲ್ಲಿ ಸಿಲುಕಿದ ಜೀವರು ವೈರಾಗ್ಯ, ಭಕ್ತಿಉಪಾಸನೆಗಳಿಂದ ಭಗವಂತನನ್ನು ಸಾಕ್ಷಾತ್ಕರಿಸಿ ಅವನ ಅನುಗ್ರಹದಿಂದ ತಮ್ಮ ಔಪಾಧಿಕವಿಕೃತರೂಪವನ್ನು ಕಳಚಿಕೊಂಡು ತಮ್ಮತನವನ್ನು ಪಡೆಯುವುದೇ ಮುಕ್ತಿ. ಆಗ ಜ್ಞಾನಾನಂದಸ್ವರೂಪವಾದ ತಮ್ಮ ನೈಜಮಹೋನ್ನತವ್ಯಕ್ತಿತ್ವವನ್ನು ಹೊಂದುತ್ತಾರೆ. ಈ ಸಂದರ್ಭದಲ್ಲಿಯೂ ತಮ್ಮ ವಿಮೋಚಕನೂ, ತಮ್ಮ ಉಚ್ಛ್ರಾಯಸ್ಥಿತಿಗೆ ಕಾರಣನೂ ಆದ ಭಗವಂತನನ್ನೂ, ತಮ್ಮ ಅನುಗ್ರಾಹಕರಾದ ಇತರ ಮುಕ್ತ ಮಹಾಪುರುಷರನ್ನೂ ಮರೆಯದೆ ಭಕ್ತಿ ಕೃತಜ್ಞತೆಗಳಿಂದ ಅವರ ಜೊತೆಗೆ ವರ್ತಿಸಿಕೊಂಡು ತಮ್ಮ ವ್ಯಕ್ತಿತ್ವವನ್ನು ಮೆರೆಯುತ್ತಾರೆ. ಜ್ಞಾನಾನಂದಗಳಂತೆ ಭಕ್ತಿ ಮುಂತಾದ ಸದ್ಗುಣಗಳೂ ಅವನ ವ್ಯಕ್ತಿತ್ವದಲ್ಲಿ ಅಂತರ್ಗತವಾಗಿವೆ. ಸಂಸಾರದಲ್ಲಿ ಭಕ್ತಿಯು ಅವನ ಸಾಧನೆಗಳಲ್ಲಿ ಒಂದಾಗಿದ್ದರೆ, ಮುಕ್ತಿಯಲ್ಲಿ ಜೀವನು ಭಕ್ತಿರೂಪಿಯೇ ಆಗಿರುತ್ತಾನೆ. ಇದೇ ಮುಕ್ತಿಯ ಸುಂದರ ಚಿತ್ರ. ಇದೇ ನಮ್ಮ ಜೀವನಸಾಧನೆಯ ಅಂತಿಮ ಘಟ್ಟ.



ಶ್ರೀಮದ್ಧನುಮದ್ಭೀಮ ಮಧ್ವಾಂತರ್ಗತ ರಾಮಕೃಷ್ಣ ವೇದವ್ಯಾಸಾತ್ಮಕ
ಲಕ್ಷ್ಮೀಹಯಗ್ರೀವಾಯ ನಮಃ ॥

॥ ಹರಿಃ ಓಂ ॥

ಶ್ರೀಮದಾನಂದತೀರ್ಥಭಗವತ್‌ಪಾದರು ರಚಿಸಿದ

# ಶ್ರೀಮದನುವ್ಯಾಖ್ಯಾನ

## ಮೂರನೆಯ ಅಧ್ಯಾಯದ ಮೊದಲನೇ ಪಾದ

## ವೈರಾಗ್ಯಪಾದ

ಸ್ವಾಭಾವಿಕಾನ್ಯಥಾನಾಮಸಹಾಭಾವಾನ್ಯಥೋಕ್ತಯಃ ।
ಅವಿಶೇಷ(ಷೋ)ವಿಶೇಷೌ ಚ ಸಹಭಾವೋ ವಿಮಿಶ್ರತಾ ॥ ೧ ॥

ವಿರುದ್ಧೋಕ್ತಿಃ ಸಹಸ್ಥಾನಂ ವೈಯರ್ಥ್ಯಂ ಚಾನ್ಯಥಾಗತಿಃ ।
ಯುಕ್ತಯಃ ಪೂರ್ವಪಕ್ಷಸ್ಯ, ಗುಣಾಧಿಕ್ಯಾರ್ಥತೋಭವೌ ॥ ೨ ॥

ಉಪಪತ್ತಿರ್ದ್ವಿರೂಪತ್ವಮಾಧಿಕ್ಯಮನುರೂಪತಾ ।
ಯೋಗ್ಯತಾ ಬಲವತ್ವಂ(ಪ್ರಬಲತ್ವಂ)ಚ ವಿಭಾಗಃ ಕಾರಣಾಭಾವಃ ।
ಕ್ಲೃಪ್ತಿರನ್ಯಾಗತಿಶ್ಚೈವ ಸಿದ್ಧಾಂತಸ್ಯೈವ ಸಾಧಕಾಃ ॥ ೩ ॥

'ಓಂ ಯೋನೇಃ ಶರೀರಂ ಓಂ'

ಬೀಜಪೂರುಷಯೋನೀನಾಂ ಸಂಗಾತಿನಿಯಮೋಜ್ಝಿತಿಮ್ ।
ಅಥಶಬ್ದೇನ ಭಗವಾನಾಹ ಕಾರಣತಶ್ಚ ತಾಮ್ ॥ ೪ ॥

ಇಲ್ಲಿಗೆ ಮೂರನೆಯ ಅಧ್ಯಾಯದ ಮೊದಲನೆಯ ಪಾದ ಮುಗಿಯಿತು.

॥ ಶ್ರೀವೇದವ್ಯಾಸೋ ವಿಜಯತೇ ॥

ಶ್ರೀಮದಾನಂದತೀರ್ಥಭಗವತ್ಪಾದರು ರಚಿಸಿದ

# ಶ್ರೀಮದನುವ್ಯಾಖ್ಯಾನ

## ಮೂರನೆಯ ಅಧ್ಯಾಯದ ಎರಡನೇ ಪಾದ

## ಭಕ್ತಿಪಾದ

ಪಶ್ಚಾದದೃಷ್ಟ್ಯವಿಜ್ಞಾನ ಕಾಲದುಃಖ ಪೃಥಗ್ಭವಾಃ ।
ಸ್ಥಾನಭೇದೋ ವಿರುದ್ಧತ್ವಂ ನ್ಯಾಯಸಾಮ್ಯಂ ಸ್ವತೋಭವಃ ॥ ೧ ॥

ಗುಣಸಾಮ್ಯಮಯೋಗಶ್ಚ ತರ್ಕಬಾಧೋ ವಿಲೋಮತಾ ।
ನಾನಾಭಾವಃ ಪ್ರಲೋಭಶ್ಚ ಯುಕ್ತಯಃ ಪೂರ್ವಪಕ್ಷಗಾಃ ॥ ೨ ॥

ಅಶಕ್ಯಕರ್ತೃತಾಶಕ್ತಿಃ ಸ್ವತೋಽಬೋಧಸ್ತಥೈ (ದೇ)ವ ಚ ।
ಅಮಾನಕ್ಲೃಪ್ತಿ ಸನ್ಮಾನ ವ್ಯವಸ್ಥಾತ್ಯಲ್ಪತಾಭವಾಃ ॥ ೩ ॥

ವಿಶೇಷದೃಷ್ಟಿವಾಕ್ಯೇ ಚ ಪುಂಶಕ್ತಿಃ ಸುನಿದರ್ಶನಮ್ ।
ಅಲೌಕಿಕತ್ವಮಾಧಿಕ್ಯಂ ಸ್ವಾತಂತ್ರ್ಯಂ ನಿರ್ಣಯಪ್ರಮಾಃ ॥ ೪ ॥

## ಸಂಧ್ಯಾಧಿಕರಣ

### ಓಂ ಸಂಧ್ಯೇ ಸೃಷ್ಟಿರಾಹ ಹಿ ಓಂ

ವಾಸನಾಃ ಸರ್ವವಸ್ತೂನಾಮನಾದ್ಯನುಭವಾಗತಾಃ ।
ಸಂತ್ಯೇವಾಶೇಷಜೀವಾನಾಮನಾದಿಮನಸಿ ಸ್ಥಿತಾಃ ॥ ೫ ॥

ತ್ರಿಗುಣಾತ್ಮಕಂ ಮನೋಽಸ್ಯೈವ ಯಾವನ್ಮುಕ್ತಿ ಸದಾತನಮ್ ।
ತತ್ರೈವಾಶೇಷಸಂಸ್ಕಾರಾಃ ಸಂಚೀಯಂತೇ ಸದೈವ ಚ ॥ ೬ ॥

ಸೂಕ್ಷ್ಮತ್ವೇನ ಲಯೋ ಸಚ್ಚ ಪ್ರಾಕೃತ್ಯೈರುಪಚೀಯತೇ ।
ಸೃಷ್ಟಿಕಾಲೇ ಯದಾ ತನ್ನ ಕುತಃ ಸಂಸಾರಸಂಸ್ಥಿತಿಃ ॥ ೭ ॥

ಸಂಸ್ಕಾರೈರ್ಭಗವಾನೇವ ಸೃಷ್ಟ್ವಾ ನಾನಾವಿಧಂ ಜಗತ್ ।
ಸ್ವಪ್ನಕಾಲೇ ದರ್ಶಯತಿ ಭ್ರಾಂತಿರ್ಜಾಗ್ರತ್ತ್ವಮೇವ ಹಿ ॥ ೮ ॥

'ಅದೃಷ್ಟೇ ಚಾಶ್ರುತೇ ಭಾವೇ ನ ಭಾವ ಉಪಜಾಯತೇ ।
ಅದೃಷ್ಟಾದಶ್ರುತಾದ್ ಭಾವಾನ್ನ ಭಾವ ಉಪಜಾಯತೇ ।'
ಇತಿ ಶ್ರುತಿಪುರಾಣೋಕ್ತಿರನಾದಿತ್ವಾತ್ತು ಯುಜ್ಯತೇ ॥ ೯ ॥

ಕದಾಚಿದ್ ದರ್ಶನಾಯೋಗ್ಯಂ ಯತ್ ತತ್ರಾಪಿ ವಿಭಾಗತಃ ।
ದೃಷ್ಟಂ ಸಮಾಧಿಕರಣಂ ದೃಶ್ಯತೇಽತ್ರ (ಚ) ಸ ಚ ಭ್ರಮಃ ॥ ೧೦ ॥

ವಾಸನಾಮಾತ್ರಮೂಲತ್ವಾಜ್ಜಾಗ್ರದ್ವತ್ ಸ್ಪಷ್ಟತಾ ನಚ ॥ ೧೧ ॥

ಭೇದೋಽಭೇದೋಽಥವಾ ದ್ವಂದ್ವಮಿತಿ ಪ್ರಶ್ನೋ ನ ಯುಜ್ಯತೇ ।
ದ್ರಷ್ಟುಃ ಸ್ವಪ್ನಸ್ಯ ದೃಷ್ಟತ್ವಾದ್ ಭೇದಸ್ಯೈವಾಖಿಲೈರ್ಜನೈಃ ॥ ೧೨ ॥

ಪ್ರಶ್ನದೋಷಾ ಹಿ ಚತ್ವಾರಃ ಸ್ವವ್ಯಾಹತಿರಸಂಗತಿಃ ।
ಸಿದ್ಧಾರ್ಥತಾ ಚ ವೈಫಲ್ಯಂ ನ ತೈಃ ಸ್ಯಾತ್ ತತ್ತ್ವನಿರ್ಣಯಃ ॥ ೧೩ ॥

ತತ್ತ್ವನಿರ್ಣಯವೈಲೋಮ್ಯಂ ಸ್ಯಾದ್ ವಾದೇಽಪಿ ಹಿ ನಿಗ್ರಹಃ ।
ಉದ್ಭಾವನೀಯಮೇವ ಸ್ಯಾನ್ನ ಕಥಾವಸಿತಿರ್ಭವೇತ್ ।
ವಿಜಗೀಷುಕಥಾಯಾಂ ತು ಕಥಾವಸಿತಿಕಾರಣಮ್ ॥ ೧೪ ॥

ಪರಿಹಾರೇಽಪಿ ಸಿದ್ಧತ್ವಂ ದೂಷಣಂ ಪ್ರತಿವಾದಿನಃ ।
ಪ್ರತಿಜ್ಞಾಯಾಂ ತದನ್ಯಸ್ಯ ಸಿದ್ಧತೈವ ಹಿ ಸಾಧಿ(ಧ)ಕಾ ॥ ೧೫ ॥

ಆಶ್ರಯವ್ಯಾಶ್ರಯಾಸಿದ್ಧೀ ಸಾಧ್ಯಾಸಿದ್ಧಿಶ್ಚ ದೂಷಣಮ್ ।
ಕೇಷಾಂಚಿನ್ನ ಚ ತೇ ದೋಷಾ ವ್ಯಾಪ್ತೌ ಸತ್ಯಾಂ ಕಥಂಚನ ॥ ೧೬ ॥

ದೋಷೋ ವ್ಯಾಹತಿರೇವಾಸ್ತಿ ನೃಶೃಂಗಾಸ್ತಿತ್ವಸಾಧನೇ ।
ಯತ್ರ ವ್ಯಾಹತತಾ ನಾಸ್ತಿ ಕೋಽತಿಸಂಗೋಽಸ್ಯ ಸಾಧನೇ ॥ ೧೭ ॥

ಪ್ರತ್ಯಕ್ಷಾಗಮಮೂಲಾಸ್ತು ನ್ಯಾಯಾಸ್ಸರ್ವೇ ಭವಂತಿ ಹಿ ।
ನ್ಯಾಯಾಭಾಸಾ ಅಮೂಲಾಃ ಸ್ಯುರ್ನ್ಯಾಯಸ್ಯಾನ್ಯಸ್ಯ ತೌ ಪುನಃ ॥೧೮॥

ಅದೃಷ್ಟೇ ವ್ಯಭಿಚಾರೇ ತು ಸಾಧಕಂ ತದಿತಿ ಸ್ಫುಟಮ್ ।
ಜ್ಞಾಯತೇ ಸಾಕ್ಷಿಣೈವಾದ್ಧಾ ಮಾನಬಾಧೇ ನ ತದ್ ಭವೇತ್ ॥ ೧೯ ॥

ಯತ್ ಸಾಕ್ಷಿಣೈವ ಮಾನತ್ವಂ ಮಾನಾನಾಮವಸೀಯತೇ ।
ಅಮಾನಸ್ಯ ತು ಮಾನತ್ವಂ ಮಾನಸತ್ವಾಚ್ಚಲಂ ಭವೇತ್ ॥ ೨೦ ॥

ಉತ್ಸರ್ಗತೋಽಪಿ ಯತ್ ಪ್ರಾಪ್ತಮಪವಾದವಿವರ್ಜಿತಮ್ ।
ವ್ಯಭಿಚಾರ್ಯಪವಾದೇನ ಮಾನಮೇವ ಭವಿಷ್ಯತಿ ॥ ೨೧ ॥

ಅತೋ ಹಿ ಭೋಜನಾದೀನಾಮಿಷ್ಟಸಾಧನತಾಽನುಮಾ ।
ಮಾನಂ ವ್ಯವಹೃತೌ ನಿತ್ಯಂ ವ್ಯಭಿಚಾರೋ ಹಿ ತತ್ರ ಚ ॥ ೨೨ ॥

ವ್ಯಾಪ್ತತ್ವೇ ವ್ಯಾಶ್ರಯತ್ವಂ ತು ಕಥಮೇವ ಹಿ ದೂಷಣಮ್ ।
ರೋಹಿಣ್ಯುದಯ ಆಸನ್ನಃ ಕೃತ್ತಿಕಾಽಭ್ಯುದಿತಾ ಯತಃ ।
ಇತ್ಯುಕ್ತೇ ಸಾಧನಂ ನೋ ಕಿಂ ನ ಹ್ಯಾಜ್ಞ್ಯೈವಾತ್ರ ಸಾಧಿ (ಧ)ಕಾ ॥೨೩॥

ಅನ್ಯತ್ ಸದಸತೋರ್ವಿಶ್ವಮಿತಿ ಚ ವ್ಯಾಹತೇರಮಾ ।
ಅಸಿದ್ಧಸಾಧನೇ ದೋಷಃ ಕೋ ವ್ಯಾಪ್ತಿರ್ಯದಿ ವಿದ್ಯತೇ ॥
ವ್ಯಾಪ್ತಿಶ್ಚ ವ್ಯತಿರೇಕೇಣ ತತ್ರ ತೈಶ್ಚಾ (ಶ್ಚೈ)ವಗಮ್ಯತೇ ॥ ೨೪ ॥

ಅಪ್ರಸಿದ್ಧಸ್ಯ ಸಾಧ್ಯಸ್ಯ ಸಾಧಕತ್ವಂ ಯದೇಷ್ಯತೇ ।
ಲಿಂಗಸ್ಯೋಕ್ತೌ ವಿಶೇಷೋಽಯಂ ಕೇನ ಮಾನೇನ ಗಮ್ಯತೇ ॥ ೨೫ ॥

ಸಾಧನಂ ಪರಮಾಣ್ವಾದೇರ್ಯದ್ಯ (ದಾ) ಸಿದ್ಧಸ್ಯ ಚೇಷ್ಯತೇ ।
ಯಥಾನುಭವಮೇವೈತನ್ನಾಂಗೀಕಾರ್ಯಂ ಕುತಸ್ತದಾ ॥ ೨೬ ॥

ಯತ್ರ ನಾತಿಪ್ರಸಂಗೋಽಸ್ತಿ ಮಾನಂ ನಚ ವಿಪರ್ಯಯೇ ।
ಕ್ಲಿಷ್ಟಕಲ್ಪನಯೈವಾತ್ರ ಸಾಧ್ಯಮಿತ್ಯತಿದುರ್ವಚಃ ॥ ೨೭ ॥

ಪರಿಶೇಷೋ ಮಿಥಸ್ಸಿದ್ಧಿಶ್ಚಕ್ರಕಸ್ವಾಶ್ರಯಾದಯಃ ।
ಅಸಿದ್ಧಸಾಧಕತ್ವೇನ ಪಂಚಾವಯವತಾಂ ವಿನಾ ।
ಅಂಗೀಕಾರ್ಯಾಃ ಸಮಸ್ತೈಸ್ತನ್ನಿಯಮಃ ಕಿಂನಿಬಂಧನಃ ॥ ೨೮ ॥

ಸಿದ್ಧಸಾಧನತಾಯಾಂ ಚ ನ ಕಥಾವಸಿತಿರ್ಭವೇತ್ ।
ವ್ಯಭಿಚಾರೋ ಹೇತ್ವಸಿದ್ಧಿರೇಕಪಕ್ಷೇಽಪಿ ದೂಷಣಮ್ ॥ ೨೯ ॥

ಸಾಧ್ಯಸಾಧನವೈಕಲ್ಯಂ ದೃಷ್ಟಾಂತಸ್ಯ ವಿಶೇಷಣೇ ।
ವೈಯರ್ಥ್ಯಮೇಕಾಸಿದ್ಧೌ ಚ ವಿಶಿಷ್ಟಾಸಿದ್ಧಿರೇವ ಹಿ ॥ ೩೦ ॥

ಅಪ್ರಯೋಜ(ಕ)ನತಾ ತತ್ರ ಪ್ರಥಮಪ್ರಶ್ನದೂಷಣಮ್ ।
ಸಿದ್ಧಪ್ರಶ್ನಾದಿಕಂ ಯತ್ ತದಾಧಿಕ್ಯಾಂತರ್ಗತಂ ಭವೇತ್ ॥ ೩೧ ॥

ಅರ್ಥಾಪತ್ತ್ಯುಪಮಾಭಾವಾ ಅನುಮಾಂತರ್ಗತಾಃ ಕ್ವಚಿತ್ ।
ಪ್ರತ್ಯಕ್ಷಾಂತರ್ಗತೋಽಭಾವಃ ಸುಖಾದೇರ್ನಿಯಮೇನ ಚ ॥ ೩೨॥

ಅನ್ಯತ್ರ ಝಟಿತಿ ಪ್ರಾಪ್ತಃ, ಪ್ರಾರಂಭಾದ್ಯಾಶ್ಚ ಯುಕ್ತಯಃ ।
ಆಗಮಾರ್ಥಾವಸಿತ್ಯರ್ಥಾ ನಿಯತವ್ಯಾಪ್ತಯೋಽಖಿಲಾಃ ॥ ೩೩ ॥

ವಾಕ್ಯಂ ಪ್ರಕರಣಂ ಸ್ಥಾನಂ ಸಮಾಖ್ಯಾ ಚ ತಥಾವಿಧಾಃ ।
ಕುರುಪಾಂಡವವತ್ ತೇಷಾಮುಪಪತ್ತೇಃ ಪೃಥಗ್ ವಚಃ ॥ ೩೪ ॥

ಸ್ವನ್ಯಾಯೈಃ ಸಾಧನಂ ಕಾರ್ಯಂ ಪರನ್ಯಾಯೈಸ್ತು ದೂಷಣಮ್ ।
ಸ್ವನ್ಯಾಯೈರ್ದೂಷಣಂ ಚ ಸ್ಯಾತ್ ಸಾಧಿತೈಃ ಪ್ರತಿವಾದಿನಃ ॥ ೩೫ ॥

ಪ್ರಸಂಗಾರ್ಥತಯಾ ಪ್ರೋಕ್ತಾ ನ ಸಿದ್ಧಾಂತಸ್ಯ ದೂಷಕಾಃ ।
ಛಲಂ ಜಾತಿರಿತಿ ದ್ವೇಧಾ ವ್ಯಾಹತ್ಯಂತರಮಿಷ್ಯತೇ ॥ ೩೬ ॥

ಜಾತಿಃ ಸ್ವವ್ಯಾಹತಿರ್ಜ್ಞೇಯಾ ಛಲಮರ್ಥಾಂತರೋತ್ತರಮ್ ॥ ೩೭ ॥

ಏವಂ ಸಂಶೋಧಿತನ್ಯಾಯಸದಾಗಮವಿರೋಧತಃ ।
ನಾನಿರ್ವಾಚ್ಯಮಿಹ ಪ್ರೋಕ್ತಂ ಮಾಯಾಮಾತ್ರಪದೇನ ಹಿ ॥ ೩೮ ॥

ವಿಲಕ್ಷಣಂ ಸದಸತೋರಿತಿ ಹಿ ವ್ಯಾಹತಂ ಸ್ವತಃ ॥ ೩೯ ॥

ಪ್ರತಿಯೋಗಿತ್ವಮಪ್ಯಸ್ಯ ಬ್ರಹ್ಮಣೋಽಂಗೀಕೃತಂ ಭವೇತ್ ।
ಮಿಥ್ಯಾ ಚೇತ್ ಪ್ರತಿಯೋಗಿತ್ವಂ ವೈಲಕ್ಷಣ್ಯಂ ತತೋ ನಹಿ ॥ ೪೦ ॥

ಅವಿಲಕ್ಷಣತ್ವಂ ಸತ್ಯಂ ಸ್ಯಾನ್ಮಿಥ್ಯಾತ್ವಂ ಬ್ರಹ್ಮಣಸ್ತತಃ ।
ಅನಿರ್ವಾಚ್ಯಸ್ಯ ಸತ್ವಂ ವಾ ಯದಿ ಧರ್ಮಾ ನ ಕೇಚನ ॥ ೪೧ ॥

ಬ್ರಹ್ಮಣೋ, ನೈವ ಜಿಜ್ಞಾಸ್ಯಂ, ಜಿಜ್ಞಾಸಾ ಧರ್ಮನಿರ್ಣಯಃ ।
ಇದಮಿತ್ಥಮಿತಿ ಜ್ಞಾನಂ ಜಿಜ್ಞಾಸಾಯಾಃ ಪ್ರಯೋಜನಮ್ ।
ಇತ್ಥಂಭಾವೋ ಹಿ ಧರ್ಮೋಽಸ್ಯ ನ ಚೇನ್ನ ಪ್ರತಿಯೋಗಿತಾ ॥ ೪೨ ॥

ಇತ್ಥಂಭಾವಾತ್ಮಕಾನ್ ಧರ್ಮಾನಾಹುಶ್ಚ ಶ್ರುತಯೋಽಖಿಲಾಃ ।
ಅದೃಶ್ಯತ್ವಾದಯೋಽಪ್ಯಸ್ಯ ಗುಣಾ ಹಿ ಪ್ರಭುಣೋದಿತಾಃ ।
ಯದಿ ಸ್ಯುಸ್ತಾದೃಶಾ ಧರ್ಮಾಃ ಸರ್ವಜ್ಞತ್ವಾದಯೋ ನ ಕಿಮ್ ॥ ೪೩ ॥

ಅನ್ಯಾಪೇಕ್ಷಾ ಯದಿ ಸ್ಯೃಷ್ಟೇ ಸತ್ತೈವಂ ದೇಶಕಾಲಗಾ ।
ದೇಶಕಾಲಾನಪೇಕ್ಷಾ ಹಿ ನ ಸತ್ತಾ ಕ್ವಾಪಿ ದೃಶ್ಯತೇ ॥ ೪೪ ॥

ಸರ್ವಧರ್ಮೋಜ್ಝಿತಸ್ಯಾಸ್ಯ ಕಿಂ ಶಾಸ್ತ್ರೇಣಾಧಿಗಮ್ಯತೇ ।
ಮಿಥ್ಯಾಧರ್ಮವಿಧಾತುಶ್ಚ ವೇದಸ್ಯೈವಾಪ್ರಮಾಣತಾ ॥ ೪೫ ॥

ಅಪ್ರಾಪ್ತಾಂ ಭ್ರಾಂತಿಮಾಪಾದ್ಯ ಕಿಂ ವೇದೋ ಮಾನತಾಂ ವ್ರಜೇತ್ ।
ನಹಿ ವೇದಂ ವಿನಾ ಬ್ರಹ್ಮ ವೇದ್ಯಂ ಧರ್ಮಾಶ್ಚ ತದ್ಗತಾಃ ॥ ೪೬ ॥

ವೇದವೇದ್ಯಸ್ಯ ಮಿಥ್ಯಾತ್ವಂ ಯದಿ ನೈಕ್ಯಸ್ಯ ತತ್ ಕಥಮ್ ॥ ೪೭ ॥

ಧರ್ಮಾರೋಪೋಽಪಿ ಸಾಮಾನ್ಯಧರ್ಮಾದೀನಾಂ ಹಿ ದರ್ಶನೇ ।
ಇದಂತದಾದಿಧರ್ಮಿತ್ವೇ ಧರ್ಮೋಽನ್ಯಃ ಕಲ್ಪ್ಯತೇಽತ್ರ ಹಿ ॥ ೪೮ ॥

ಸರ್ವಧರ್ಮವಿಹೀನಸ್ಯ ಧರ್ಮಾರೋಪಃ ಕ್ವ ದೃಶ್ಯತೇ ॥
ತದರ್ಥಂ ಯದಿ ಧರ್ಮಾಣಾಮಾರೋಪಃ ಸಾಽನವಸ್ಥಿತಿಃ ॥ ೪೯ ॥

ಈಶತಜ್ಜ್ಞಾನವೇದಾಕ್ಷಜಾನುಮಾಮಾತೃಪೂರ್ವಿಣಃ ।
ಭ್ರಾಂತಿರ್ವಿಶ್ವಸ್ಯ ಯೇನೈವ ಮಾನಾಭಾಸೇನ ಕಲ್ಪ್ಯತೇ ।
ತನ್ಮಾತ್ರಸ್ಯಾನ್ಯಥಾಭಾವೇ(ವಾತ್) ಕಿಂ ನ ಸ್ಯಾದ್ ವಿಶ್ವಸತ್ಯತಾ ॥ ೫೦ ॥

ಯೇನೇದಂ ಕಲ್ಪ್ಯತೇ ಭ್ರಾಂತಂ ಭ್ರಾಂತಿಸ್ತಸ್ಯೈವ ಕಿಂ ನ ಸಾ ।
ಭ್ರಾಂತತ್ವೇ ತಸ್ಯ ವಿಶ್ವಾದೇರೀಶಾದ್ಯಭ್ರಾಂತಮೇವ ಹಿ ।
ಭವೇಯುರ್ಭ್ರಾಂತಯೋ ನೄಣಾಂ ನೈವೇಶಾದೇಃ ಕಥಂಚನ ॥ ೫೧ ॥

ಸತ್ಯತ್ವಮಕ್ಷಜಪ್ರಾಪ್ತಂ ಯದಿ ಭ್ರಾಂತಮಿತೀಷ್ಯತೇ ।
ಪ್ರಾಮಾಣ್ಯಮಾಗಮಸ್ಯಾಪಿ ಪ್ರತ್ಯಕ್ಷಾದನ್ಯತಃ ಕುತಃ ॥ ೫೨ ॥

ಸಾಕ್ಷಿಪ್ರತ್ಯಕ್ಷತೋ ಹ್ಯೇವ ಮಾನಾನಾಂ ಮಾನತೇಯತೇ ।
ಸಾಕ್ಷಿಣಃ ಸ್ವಪ್ರಕಾಶತ್ವಮನವಸ್ಥಾ ತತೋ ನಹಿ ॥ ೫೩ ॥

ತಾತ್ಕಾಲಿಕಂ ಪ್ರಮಾಣತ್ವಮಕ್ಷಜಸ್ಯ ಯದಾ ಭವೇತ್ ।
ಐಕ್ಯಾಗಮಸ್ಯ ಕಿಂ ನ ಸ್ಯಾತ್ ತಸ್ಯಾಪ್ಯೇತಾದೃಶಂ ಯದಿ ।
ಐಕ್ಯಪ್ರಮಾಣ (ಪ್ರಾಮಾಣ್ಯ) ಮಿಥ್ಯಾತ್ವಂ ಯದಾ
ವಿಶ್ವಸ್ಯ ಸತ್ಯತಾ ॥ ೫೪ ॥

ಐಕ್ಯವಾಕ್ಯಸ್ಯ ಮಾನತ್ವಂ ಯದ್ಯಬಾಧ್ಯಮಿತೀಷ್ಯತೇ ।
ಅಕ್ಷಜಸ್ಯಾಪಿ ಮಾನತ್ವಂ ನಾಬಾಧ್ಯಂ ಕಿಮಿತೀಷ್ಯತೇ ॥ ೫೫ ॥

ಅದ್ವೈತಹಾನಿಸಾಮಾನ್ಯಾನ್ನ ವಿಶೇಷಶ್ಚ ಕಶ್ಚನ ।
ಯದಿ ಸ್ವತಸ್ತ್ವಂ ಪ್ರಾಮಾಣ್ಯೇ ವಿಶ್ವಸತ್ತಾ ಕಥಂ ನ ತೇ ॥ ೫೬ ॥

ಪ್ರಾಮಾಣ್ಯಸ್ಯ ಚ ಮರ್ಯಾದಾ ಕಾಲತೋ ವ್ಯಾಹತಾ ಭವೇತ್ ।
ಕಾಲಾಂತರೇಽಪ್ಯಮಾನಂ ಚೇದಿದಾನೀಂ ಮಾನತಾ ಕುತಃ ॥ ೫೭ ॥

ಮಿಥ್ಯಾತ್ವಮಾನಂ ಮೋಕ್ಷೇಽಪಿ ಮಾನಂ ಕಿಂ ನೇತಿ ಭಣ್ಯತಾಮ್ ।
ಮಾನತ್ವೇಽದ್ವೈತಹಾನಿಃ ಸ್ಯಾದಮಾನತ್ವೇಽಪ್ಯಮೋಕ್ಷತಾ ।
ವಿಶ್ವಸ್ಯ ಪುನರಾಪತ್ತಿರ್ಮಿಥ್ಯಾಮಾನಂ ಯದಾ ನ ಮಾ ॥ ೫೮ ॥

ಅಸ್ತಿ ಚೇನ್ಮುಕ್ತ್ಯವಸ್ಥಾ ಚ ದ್ವೈತಾಪತ್ತಿರತೋಽನ್ಯಥಾ ।
ಅಮುಕ್ತತ್ವಂ ತಥಾ ಕಾಲೇ ಕಾಲಾಧೀನಾ ಹಿ ಮುಕ್ತತಾ ॥ ೫೯ ॥

ಕಾಲ ಏವಾಗಮೋಽಪ್ಯಾಹ ಮುಕ್ತಿಂ ಕಾಲನಿವರ್ತನೇ ।
ಮುಕ್ತೇರಪಿ ನಿವೃತ್ತಿಃ ಸ್ಯಾತ್ ಸಂಸಾರಿತ್ವಮತೋ ಭವೇತ್ ॥ ೬೦ ॥

ಕ್ವಚ ಪ್ರತ್ಯಕ್ಷತಃ ಪ್ರಾಪ್ತಮನುಮಾಗಮಬಾಧಿತಮ್ ।
ದೇಹಾತ್ಮತ್ವಂ ಯದಿ, ನ ತತ್ ಪ್ರಾಪ್ತಂ ಪ್ರತ್ಯಕ್ಷತಃ ಕ್ವಚಿತ್ ॥ ೬೧ ॥

ಮಮ ದೇಹ ಇತಿ ಹ್ಯೇವ ನ ದೇಹೋಽಹಮಿತಿ ಪ್ರಮಾ ।
ಉಪಚಾರಶ್ಚ ಕೃಷ್ಣೋಽಹಮಿತಿ ಕರ್ದಮಲೇಪನೇ ॥ ೬೨ ॥

ವಸ್ತ್ರಸ್ಯ ಯದ್ವದೇವಂ ಸ್ಯಾದ್, ಯದ್ಯುಪಾಧಿಕೃತಂ ತದಾ ।
ಸ್ವತಃ ಶುಕ್ಲತ್ವವತ್ ಕಾರ್ಷ್ಣ್ಯಂ ನ ಮಮೇತಿ ಪ್ರತೀಯತೇ ॥ ೬೩ ॥

ಕಥಂ ಚ ಭೇದೋ ದೇಹಾದೇರಾತ್ಮನೋ ನ ಪ್ರಮೀಯತೇ ।
ಜಾತಮಾತ್ರಾ ಮೃಗಾ ಗಾವೋ ಹಸ್ತಿನಃ ಪಕ್ಷಿಣೋ ಝಷಾಃ ।
ಭಯಾಭಯಸ್ವಭೋಗಾದೌ ಕಾರಣಾನಿ ವಿಜಾನತೇ ॥ ೬೪ ॥

ಅಸ್ಮೃತೌ ಪೂರ್ವದೇಹಸ್ಯ ವಿಜ್ಞಾನಂ ತತ್ ಕಥಂ ಭವೇತ್ ।
ಅನ್ವಯವ್ಯತಿರೇಕಾದೇರನುಸಂಧಾನವಿಸ್ಮೃತೌ ॥ ೬೫ ॥

ಯದಾ ದೇಹಾಂತರಜ್ಞಾನಂ ದೇಹೈಕ್ಯಾವಸಿತಿಃ ಕುತಃ ।
ವ್ಯಾಪ್ತತ್ವಾದಾತ್ಮನೋ ದೇಹೇ ವ್ಯವಹಾರೇಷ್ವಪಾಟವಾತ್ ॥ ೬೬ ॥

ಭೇದಜ್ಞಾನೇಽಪಿ ಚಾಂಗಾರವಹ್ನಿವತ್ ಸ್ವಾವಿವಿಕ್ತವತ್ ।
ಭವಂತಿ ವ್ಯವಹಾರಾಶ್ಚ, ನಹಿ ಪ್ರತ್ಯಕ್ಷಗಾನಪಿ ॥ ೬೭ ॥

ಅರ್ಥಾನ್ ಯಥಾನುಭವತಃ ಪ್ರತಿಪಾದಯಿತುಂ ಕ್ಷಮಾಃ ।
ಲೋಕಾಸ್ತತೋ ಹಿ ಪ್ರತ್ಯಕ್ಷಸಿದ್ಧಂ ನಾನ್ಯೇನ ಕೇನಚಿತ್ ॥ ೬೮ ॥

ಶಕ್ಯಂ ವಾರಯಿತುಂ ಕ್ವಾಪಿ ತಚ್ಚೇನ್ನೋತ್ತರಗೋಚರಮ್ ।
ಕಥಮೇವೋತ್ತರಃ ಕಾಲಸ್ತದ್ಗೋ ಮೋಕ್ಷಶ್ಚ ಗಮ್ಯತೇ ॥ ೬೯ ॥

ಆಗಮೋಽಪಿ ಹಿ ಸಾಮಾನ್ಯೇ ಸಿದ್ಧೇ ಪ್ರತ್ಯಕ್ಷತಃ ಪುನಃ ।
ವಿಶೇಷಂ ಗಮಯೇದೇವ ಕಥಂ ಶಕ್ತಿಗ್ರಹೋಽನ್ಯಥಾ ॥ ೭೦ ॥

ಅತೀತಾನಾಗತಾರ್ಥೇಷು ಜಾತೇ ಶಕ್ತಿಗ್ರಹೇಽಖಿಲಮ್ ।
ವಿಶೇಷಂ ಜ್ಞಾಪಯೇದ್ ವಾಕ್ಯಂ ನ ತದಜ್ಞಾತಶಕ್ತಿಕೇ ॥ ೭೧ ॥

ಶಕ್ತಿಶ್ಚೇದ್ ವರ್ತಮಾನೇ ಸ್ಯಾನ್ನಾತೀತಾನಾಗತಂ ವದೇತ್ ।
ಯದಿ ಶಕ್ತಿಗ್ರಹೋಽನ್ಯತ್ರ ಕಥಂ ಸ ಸ್ಯಾತ್ ತದಗ್ರಹೇ ॥ ೭೨ ॥

ಸಾಮಾನ್ಯಂ ದೃಷ್ಟಮೇವಾಸಾವನ್ಯತ್ರ ಗಮಯೇದ್ ಯದಿ ।
ಸಾಮಾನ್ಯವರ್ಜಿತಂ ವಸ್ತುಸ್ವರೂಪಂ ಗಮಯೇತ್ ಕಥಮ್ ॥ ೭೩ ॥

ನ ಸ್ವರೂಪತ್ವಸಾಮಾನ್ಯಂ ಕೇನಾಪ್ಯಂಗೀಕೃತಂ ಕ್ವಚಿತ್ ।
ಸ್ವರೂಪಂ ಚೇದನುಗತಂ ವ್ಯಾವೃತ್ತಂ ತತ್ರ ಕಿಂ ಭವೇತ್ ॥ ೭೪ ॥

ಸರ್ವಾನುಗತಧರ್ಮಾಣಾಮಂತೇ ಹಿ ಸ್ವತ್ವಮಿಷ್ಯತೇ ।
ಕಿಂ ವ್ಯಾವೃತ್ತಮಿತಿ ಪ್ರಶ್ನೇ ಸ್ವರೂಪಮಿತಿ ಕೇವಲಮ್ ।
ಸ್ಯಾದುತ್ತರಂ ತತೋಽನ್ಯಚ್ಚೇತ್ ತದೇವ ಸ್ವಯಮೇವ ನಃ ॥ ೭೫ ॥

ಏವಂ ವ್ಯಾವೃತ್ತರೂಪೇಽಪಿ ಯದಾ ಶಕ್ತಿಗ್ರಹೋ ಭವೇತ್ ।
ತಸ್ಯ ಸಾಮಾನ್ಯತೋ ಜ್ಞಾನಂ ವಿನಾ ಸ ಚ ಭವೇತ್ ಕುತಃ ।
ಅತೋ ವಿಶೇಷಸಾಮಾನ್ಯರೂಪಂ ಸರ್ವಮಪೀಷ್ಯತೇ ॥ ೭೬ ॥

ವ್ಯಾವೃತ್ತಂ ಯಚ್ಚ ಸಾಮಾನ್ಯಂ ತದೇವ ಸ್ಯಾದ್ ವಿಶೇಷತಃ ।
ನಚೈಕಧರ್ಮತಾ ತೇನ ಪದಾರ್ಥಾನಾಂ ಪರಸ್ಪರಮ್ ।
ಧರ್ಮಾಣಾಂ ಭೇದದೃಷ್ಟ್ಯೈವ ತತ್ಸಾದೃಶ್ಯಸ್ಯ ದರ್ಶನಾತ್ ॥ ೭೭ ॥

ಅತಃ ಸರ್ವೇ (ರ್ವ) ಪದಾರ್ಥಾಶ್ಚ ಸಾಮಾನ್ಯಾತ್ ಸಾಕ್ಷಿಗೋಚರಾಃ ।
ಸರ್ವಮಿತ್ಯೇವ ವಿಜ್ಞಾನಂ ಸರ್ವೇಷಾಂ ಕಥಮನ್ಯಥಾ ॥ ೭೮ ॥

ಕಿಂಚಿತ್ಸಾದೃಶ್ಯವಿಜ್ಞಾನಾದಖಿಲಸ್ಯಾಪಿ ವಸ್ತುನಃ ।
ಶಬ್ದಶಕ್ತಿಗ್ರಹಶ್ಚ ಸ್ಯಾತ್ ತತ್ತತ್ಸಾದೃಶ್ಯಮಾನತಃ ॥ ೭೯ ॥

ಪ್ರತ್ಯಕ್ಷಂ ಮಾನಸಂ ಚೈವ ಯದಾಽತೀತಾರ್ಥಗೋಚರಮ್ ।
ತದಾ ಸ್ಮೃತಿಪ್ರಮಾಣತ್ವಮತೀತತತ್ವವಿಶೇಷಿತಮ್ ।
ಆಧಿಕ್ಯಮನುಭೂತಾತ್ತು ಯದಾತೀತತತ್ವಮಿಷ್ಯತೇ ॥ ೮೦ ॥

ಮಾನತಾ ಚ ಕಥಂ ನ ಸ್ಯಾತ್ ಸ್ಮೃತೇರ್ಬಾಧಶ್ಚ ನಾತ್ರ ಹಿ ।
ಮಾನತ್ವಂ ಪ್ರತ್ಯಭಿಜ್ಞಾಯಾ ಅಪಿ ಸರ್ವಾನುಭೂತಿಗಮ್ ॥ ೮೧ ॥

ಅತೀತವರ್ತಮಾನತ್ವಧರ್ಮಿಣೀ ಸಾ ಚ ದೃಶ್ಯತೇ ।
ನಚ ಸಾ ಸ್ಮೃತಿಮಾತ್ರಾರ್ಥಾ ತದಿದಂತ್ವಗ್ರಹೈಕತಃ ।
ಅತೋ ನ ವರ್ತಮಾನ್ಯೈಕನಿಯಮಃ ಸ್ಯಾದ್ ಗ್ರಹೇಽಕ್ಷಜೇ ॥ ೮೨ ॥

ನಚ ಪ್ರಮಾಣತೋಽನ್ಯಾ ಸ್ಯಾತ್ ಪ್ರಮಿತಿರ್ನಾಮ ಕುತ್ರಚಿತ್ ।
ಮಾನಾಭಾವಾದ್ ಗೌರವಾಚ್ಚ ಕಲ್ಪನಾಯಾಃ ಕಿಮೇತಯಾ ॥ ೮೩ ॥

ಮಯ್ಯೈತಜ್ಜ್ಞಾತಮಿತಿ ತು ಸಾಕ್ಷಿಗಂ ಜ್ಞಾನಗೋಚರಮ್ ।
ಜ್ಞಾನಮೇವ ತತೋಽನ್ಯಾ ನ ಪ್ರಮಿತಿರ್ನಾಮ ದೃಶ್ಯತೇ ॥ ೮೪ ॥

ಮಾನಮಾತೃಪ್ರಮೇಯಾಣಾಂ ತದುಚ್ಛಿತ್ತಿರ್ನಹಿ ಕ್ವಚಿತ್ ।
ಸ್ವಾಪ್ನಾನಾಮಪಿ ಚೈತೇಷಾಂ ನ ಬಾಧೋ ದೃಶ್ಯತೇ ಕ್ವಚಿತ್ ॥ ೮೫ ॥

ಜಾಗ್ರತ್ವಮಾತ್ರಮತ್ರೈಕಮನ್ಯಥಾ ದೃಶ್ಯತೇ ಸ್ಫುಟಮ್ ।
ಅತೋ ಮಿಥ್ಯಾ ನಚ ಸ್ವಪ್ನೋ ಜಾಗ್ರದ್ವಜ್ಜಾಗ್ರದೇವ ಚ ॥ ೮೬ ॥

ಆತ್ಮವತ್, ಕ್ವಚಿದಾತ್ಮಾ ಚ ಸ್ಯಾದೇವ ಭ್ರಮಗೋಚರಃ ।
ಏತಾವತಾ ನ ಮಿಥ್ಯಾಽಸೌ ಸ್ವಪ್ನೇ ಜಾಗರಿತೇ ತಥಾ ॥ ೮೭ ॥

ಯದ್ಯಾತ್ಮನ್ಯನ್ಯಥಾ ದೃಶ್ಯಂ ಭ್ರಾಂತಮತ್ರಾಪಿ ತದ್ ಭವೇತ್ ।
ಅಬಾಧಿತಾನುವೃತ್ತೇಸ್ತು ಸ್ವಪ್ನಾದೇರ್ಭ್ರಾಂತತಾ ಕುತಃ ॥ ೮೮ ॥

ನಚ ಕಾಚಿತ್ ಪ್ರಮಾ ವಿಶ್ವಭ್ರಾಂತತ್ವೇ ಸರ್ವಮೇವ ಚ ।
ಅಭ್ರಾಂತತ್ವೇ ಪ್ರಮಾಣಂ ತು ಕಥಂ ತದ್‌ಭ್ರಾಂ(ತಿ)ತತಾ
ಭವೇತ್ ॥ ೮೯ ॥

ಕಿಂಚ ಭ್ರಾಂತತತ್ವವಾದೀ ಸ ಭ್ರಾಂತತತ್ವಂ ಸ್ವಮತಸ್ಯ ಚ ।
ಅಂಗೀಕರೋತಿ ನಿಯತಂ ತತ್ರ ಸಂಪ್ರತಿಪನ್ನತಾ ॥ ೯೦ ॥

ವಾದಿನೋಽಸ್ತೇನ ಚಾಭ್ರಾಂತಂ ವಿಶ್ವಮೇವ ಭವಿಷ್ಯತಿ ।
ಭ್ರಾಂ(ತಿ)ತತ್ವಭ್ರಾಂತತಾ ಚೇತ್ ಸ್ಯಾತ್ ಕಥಂ ನಾಭ್ರಾಂತಿಸತ್ಯತಾ ।
ಅಶೇಷದೋಷದುಷ್ಟಂ ತನ್ಮತಂ ಹೇಯಂ ಬುಭೂಷುಭಿಃ ॥ ೯೦ ॥

ಯೇನ ಸ್ವಮತಹೇಯತ್ವಂ ಸ್ವಯಮಂಗೀಕೃತಂ ಸದಾ ।
ಭ್ರಾಂತಿತ್ವಾದ್ ದುರ್ಘಟತ್ವಸ್ಯ ಭೂಷಣತ್ವಾಚ್ಚ ಕೇವಲಮ್ ॥ ೯೨ ॥

ಉನ್ಮತ್ತೋಽಪಿ ಕಥಂ ತಸ್ಯ ಮತಂ ಸ್ವೀಕರ್ತುಮಿಚ್ಛತಿ ।
ಈಶಶಕ್ತೇರಚಿಂತ್ಯತ್ವಾನ್ಮಹೋನ್ಮತ್ತೈಃ ಪ್ರವರ್ತಿತಮ್ ॥ ೯೩ ॥

ಅತಃ ಪ್ರಜ್ಞಾಽತ್ರ ಮಾಯೋಕ್ತಾ ಜೈವ್ಯುಪಾದಾನಮೇವ ಸಾ ।
ನಿಮಿತ್ತಮೈಶ್ವರೀ ಮುಖ್ಯಾ(ಖ್ಯಂ) ನಿರ್ಮಿತಂ ತ್ರಾತಮೇವ ಚ ॥ ೯೪ ॥

ತಾಭ್ಯಾಂ ಸಹ ಪೃಥಕ್ ಚೈವ ಮಾಯಾಮಾತ್ರಮಿತೀರ್ಯತೇ ॥
ಉಭಾಭ್ಯಾಂ ಮಾತಮೈಶ್ವರ್ಯಾತ್ ತ್ರಾತಂ ಸಹ ಪೃಥಕ್ ತತಃ ॥೯೫॥

ಪ್ರಜ್ಞಾತ್ಮಕಂ ಮನೋ ಯೇನ ಮನೋರೂಪಾಶ್ಚ ವಾಸನಾಃ ।
ಧೀರ್ಭೀರಿತಿ ಮನಸ್ತ್ವೇವೇತ್ಯಾಹ ಚ ಶ್ರುತಿರಂಜಸಾ ॥ ೯೬ ॥

ಚಿದಚಿನ್ಮಿಶ್ರಮೇವೈತನ್ಮನೋ ಯಾವಚ್ಚ ಸಂಸೃತಿಃ ।
ತೇನಾವಸ್ಥಾ ಇಮಾಃ ಸರ್ವಾ ಜೀವಃ ಪಶ್ಯತಿ ಸರ್ವದಾ ॥ ೯೭ ॥

ಮನೋವಿಕಾರಾ ವಿಷಯಾಃ ಸ್ವಾಪ್ನಾ ಯದ್ ಬಾಹ್ಯವನ್ನ ತೇ ।
ಸ್ಥೂಲಾ ಭವಂತ್ಯತಸ್ತೇಷಾಂ ಸ್ಪಷ್ಟತಾ ನ ತಥಾ ಕ್ವಚಿತ್ ।
ಕ್ವಚಿತ್ ಸ್ವಪ್ನಾ ಅಪಿ ಸ್ಪೃಷ್ಟೇ ವಾಸನಾ ಮಾನಸೀ ಚ ಸಾ ॥ ೯೮ ॥

## ಪರಾಭಿಧ್ಯಾನಾಧಿಕರಣ

**‘ಓಂ ಪರಾಭಿಧ್ಯಾನಾತ್ತು ತಿರೋಹಿತಂ ತತೋ ಹ್ಯಸ್ಯ ಬಂಧ ವಿಪರ್ಯಯೌ ಓಂ’**

ಈಶೇಚ್ಛಯಾಽಂತರ್ದಧಾತಿ ವ್ಯಜ್ಯತೇ ಚ ಪುನಸ್ತಯಾ ।
ಸೃಷ್ಟ್ವೈವ ವಾಸನಾಭಿಶ್ಚ ಪ್ರಪಂಚಂ ಸ್ವಾಪ್ನಮೀಶ್ವರಃ ।
ವಾಸನಾಮಾತ್ರತಾಂ ತಸ್ಯ ನೀತ್ವಾಽಂತರ್ಧಾಪಯತ್ಯಜಃ ॥ ೯೯ ॥

## ಸುಷುಪ್ತಿ–ಬೋಧ–ಮೋಹಾಧಿಕರಣಗಳು

**‘ ಓಂ ತದಭಾವೋ ನಾಡೀಷು ತಚ್ಛ್ರುತೇರಾತ್ಮನಿ ಹ ಓಂ’**

ಸುಷುಪ್ತಿಬೋಧಮೋಹಾಂಶ್ಚ(ಮೋಹಬೋಧಾಂಶ್ಚ) ಸ್ವವಶಸ್ತದ್ವಶಂ ಸದಾ।
ಜೀವಂ ನಯತಿ(ದೇ)ಜೀವೇಶೋ.... ॥ ೧೦೦ ॥

## ಕರ್ಮಾನುಸ್ಮೃತ್ಯಧಿಕರಣ

**‘ಓಂ ಸ ಏವ ಚ ಕರ್ಮಾನುಸ್ಮೃತಿಶಬ್ದವಿಧಿಭ್ಯಃ ಓಂ’’**

(ಜೀವಂ ನಯತಿ(ದೇ)ಜೀವೇಶೋ) ನಾನ್ಯಃ ಕರ್ತಾಽಸ್ಯ ಕಶ್ಚನ ॥೧೦೧॥

## ಸ್ಥಾನಭೇದಾಧಿಕರಣ

**‘‘ಓಂ ನ ಸ್ಥಾನತೋಽಪಿ ಪರಸ್ಯೋಭಯಲಿಂಗಂ ಸರ್ವತ್ರ ಹಿ ಓಂ’’**

ನ ಸ್ಥಾನಭೇದತೋಽಪ್ಯಸ್ಯ ಭೇದಃ ಕಶ್ಚಿತ್ ಪರೇಶಿತುಃ ।
ಸರ್ವತ್ರಾಶೇಷದೋಷೋಜ್ಝ ಪೂರ್ಣಕಲ್ಯಾಣಚಿದ್ಗುಣಃ ॥ ೧೦೨ ॥

ತದ್ವಿರುದ್ಧಂ ತು ಯತ್ ತತ್ರ ಮಾನಂ ನೈವ ಕ್ವಚಿದ್ ಭವೇತ್
(ಭವೇತ್ ಕ್ವಚಿತ್) ॥
ಮಹಾತಾತ್ಪರ್ಯರೋಧೇನ ಕಥಂ ತನ್ಮಾನಮತ್ರ ತು ॥ ೧೦೩ ॥

ದುಃಖಾಪ್ಯಯಸುಖಾವಾಪ್ತಿಹೇತುತ್ವೇನೈವ ವೇದವಾಕ್ ।
ಭವೇನ್ಮಾನಂ ತದೀಶಾನಾತ್ ಪ್ರಸನ್ನಾದೇವ ನಾನ್ಯಥಾ ॥ ೧೦೪ ॥

ಪ್ರಸನ್ನತಾ ಗುಣೋತ್ಕರ್ಷಜ್ಞಾನಾದೇವ ಹಿ ಕೇವಲಮ್ ।
ನಿರ್ದೋಷತಾಪರಿಜ್ಞಾನಾದಪಿ ನಾನ್ಯೇನ ಕೇನಚಿತ್ ॥ ೧೦೫ ॥

'ಯೋ ಮಾಮಶೇಷದೋಷೋಜ್ಝಂ ಗುಣಸರ್ವಸ್ವಬೃಂಹಿತಮ್ ।
ಜಾನಾತ್ಯಸ್ಮೈ ಪ್ರಸನ್ನೋಽಹಂ ದದ್ಯಾಂ ಮುಕ್ತಿಂ ನಚಾನ್ಯಥಾ' ॥೧೦೬॥

'ಯೋ ಮಾಮಶೇಷಾಭ್ಯಧಿಕಂ ವಿಜಾನಾತಿ ಸ ಏವ ಮಾಮ್ ।
ವಿಜಾನಾತ್ಯಖಿಲಾಂಸ್ತಸ್ಯ ದದ್ಯಾಂ ಕಾಮಾನ್ ಪರಂ ಪದಮ್' ॥೧೦೭॥

'ಯೋ ಮಾಮೇವಮಸಂಮೂಢಃ' 'ಕಿಂ ಮಾಂ(ಮಾ)ನಿಂದಂತಿ
ಶತ್ರವಃ' ॥ ೧೦೮ ॥

ಇತ್ಯಾದಿವೇದಸ್ಮೃತಿಗವಾಕ್ಯೈರೇವಾವಸೀಯತೇ ।
ಲೋಕತಶ್ಚ ಪ್ರಸಾದೇನ ಮುಕ್ತಿಃ ಸ ಗುಣವೇದನಾತ್ ॥ ೧೦೯ ॥

ಮಹಾತಾತ್ಪರ್ಯಮುಖ್ಯಸ್ಯ ವಿರೋಧಾದತ ಏವ ಹಿ ।
ದೋಷಿತ್ವನಿರ್ಗುಣತ್ವಾಲ್ಪಗುಣತ್ವಾದಿ ಕಥಂಚನ ॥೧೧೦ ॥

ನಾರ್ಥಃ ಶ್ರುತಿಪುರಾಣಾದೇಸ್ತದ್ವಿರುದ್ಧೋಽಖಿಲಸ್ಯ ಚ ।
ಅರ್ಥಃ ಸ್ವಯಂ ವಿನಿರ್ಣೀತೋ ವಾಸುದೇವೇನ ಸಾದರಮ್ ॥ ೧೧೧ ॥

ಇತಿ ಗುಹ್ಯತಮಂ ಶಾಸ್ತ್ರಮಿದಮುಕ್ತಂ ಮಯಾಽನಘ ।
ಏತದ್ ಬುದ್ಧ್ವಾ ಬುದ್ಧಿಮಾನ್ ಸ್ಯಾತ್ ಕೃತಕೃತ್ಯಶ್ಚ ಭಾರತ ॥ ೧೧೨ ॥

ಇತ್ಯತೋಽಖಿಲಸಚ್ಛಾಸ್ತ್ರವಿರುದ್ಧತ್ವೇನ ನಾನುಮಾ ।
ವರ್ತತೇ ತತ್ರ ತೇನೇಶೋ ನಿರ್ಣೀತೋಽಖಿಲಸದ್ಗುಣಃ ॥ ೧೧೩ ॥

# ಉಪಮಾಧಿಕರಣ

## ''ಓಂ ಅತ ಏವ ಚೋಪಮಾ ಸೂರ್ಯಕಾದಿವತ್ ಓಂ''

ನಚ ಚಿತ್ತ್ವಾದಭಿನ್ನತ್ವಂ ಜೀವಸ್ಯೇಶವದಾಪ್ಯತೇ ।
ಯತ ಆಭಾಸತಾಮೇವ ಶ್ರುತಿರಸ್ಯ ವದತ್ಯಲಮ್ ॥ ೧೧೪ ॥

''ಯಥೈಷಾ ಪುರುಷೇ ಛಾಯಾ ಏತಸ್ಮಿನ್ನೇತದಾತತಮ್ ।''
''ಛಾಯಾ ಯಥಾ ಪುಂಸದೃಶೀ(ಶಾ) ಪುಮಧೀನಾ ಚ ದೃಶ್ಯತೇ ।
ಏವಮೇವಾತ್ಮಕಾಃ ಸರ್ವೇ ಬ್ರಹ್ಮಾದ್ಯಾಃ ಪರಮಾತ್ಮನಃ'' ॥ ೧೧೫ ॥

'ಸತ್ತಾಪ್ರತೀತಿಕಾರ್ಯೇಷು ಪುಮಧೀನಾ(ನೋ) ಯಥೇಯತೇ ।
ಆಭಾಸಾ(ಸ) ಏವ(ಂ) ಪುರುಷಾ ಮುಕ್ತಾಶ್ಚ ಪರಮಾತ್ಮನಃ' ॥ ೧೧೬ ॥

ಛಾಯಾ ವಿಷ್ಣೋ ರಮಾ ತಸ್ಯಾಶ್ಛಾಯಾ ಧಾತಾ ವಿಶೇಷಕೌ ।
ತಸ್ಯೇಂದ್ರಕಾಮೌ ಚ ತಯೋಸ್ತಯೋರನ್ಯೇಽಖಿಲಾ ಅಪಿ ॥ ೧೧೭ ॥

ಹರೇರ್ಬ್ರಹ್ಮಾಸ್ಯ ಗೀಸ್ತಸ್ಯಾ ವಿಶೇಷಾವಿಂದ್ರ ಏತಯೋಃ ।
ಮಾರಶ್ಚಾಭಾಸಕಾಃ ಸರ್ವ ಏತಯೋಸ್ತದಧೀನತಃ ॥ ೧೧೮ ॥

ಸರ್ವೇಽಲ್ಪಶಕ್ತಯಶ್ಚೈವ ಪೂರ್ಣಶಕ್ತಿಃ ಪರೋ ಹರಿಃ ।
ಚೇತನತ್ವೇಽಪಿ ಭಿನ್ನಾಸ್ತೇ ತಸ್ಮಾದೇತೇನ ಸರ್ವದಾ ॥ ೧೧೯ ॥

ಇತ್ಯಾದಿಶ್ರುತಿವಾಕ್ಯೇಭ್ಯೋ ಜ್ಞಾಯತೇ ಭೇದ ಏವ ಹಿ ॥ ೧೨೦ ॥

ಆಭಾಸತ್ವಂ ಹಿ ನಿರ್ಣೀತಂ ಜೀವಸ್ಯ ಪರಮಾತ್ಮನಃ ।
ತನ್ನ ಯುಕ್ತಂ ಯದಾಭಾಸ ಉಪಾಧ್ಯಾಯತ್ತ ಈಯತೇ ॥ ೧೨೧ ॥

ಉಪಾಧ್ಯಾಯತ್ತತಾಭಾವಾದಾಭಾಸತ್ವವಿರೋಧತಃ ।
ಚೇತನತ್ವೇನ ಚಾಂಶತ್ವಾತ್ ಸಮುದಾಯ್ಯೈಕ್ಯಮಾಪತೇತ್ ॥ ೧೨೨ ॥

ಅತಃ ಪೃಥಕ್ತ್ವಮುದಿತಂ ಸಮುದಾಯಾಂಶಯೋರ್ಭವೇತ್ ।
ಈಶಾಖ್ಯಾ ಸಮುದಾಯೇ ಸ್ಯಾದೀಶರೂಪೇಷ್ವಿವೋದಿತಾ ॥ ೧೨೩ ॥

ಅತೋ ದೇಹಾದ್ಯುಪಾಧೀನಾಮಪಾಯೇ ಸಮತಾ ಭವೇತ್ ।
ಈಶರೂಪೈರಥಾಭಾಸಾ ಮುಖ್ಯತಃ ಸೂರ್ಯಕಾದಿವತ್ ।
ಯದಾ ತದೋಪಾಧ್ಯಾಯತ್ತರೂಪಾಣಾಂ ನಾಶಿತಾ ಭವೇತ್ ॥ ೧೨೪ ॥

ಇತ್ಯಾಶಂಕಾನಿವೃತ್ತ್ಯರ್ಥಮಾಹ ವೇದಾಧಿಪಃ ಪ್ರಭುಃ ।
ಅತ ಏವೋಪಮೇತ್ಯೇವ ಚಾನ್ಯಾಭಾಸವಿಶೇಷಿತಾಮ್ ॥ ೧೨೫ ॥

ಯದುಕ್ತಂ ತದಧೀನತ್ವಂ ಸರ್ವಾವಸ್ಥಾಸ್ವಶೇಷತಃ ।
ಜೀವಸ್ಯ ಸದೃಶತ್ವಂ ಚ ಚಿತ್ತ್ವಮಾತ್ರಂ ನಚಾಪರಮ್ ॥ ೧೨೬ ॥

ತಾವನ್ಮಾತ್ರೇಣ ಚಾಭಾಸೋ ರೂಪಮೇಷಾಂ ಚಿದಾತ್ಮನಾಮ್ ।
ನೋಪಾಧ್ಯಧೀನತಾದ್ಯೈಶ್ಚ ನಾತಿಸಾಮ್ಯಂ ನಿದರ್ಶನೇ ॥ ೧೨೭ ॥

ಕಿಂಚಿತ್ಸುಖಾದಿಸಾದೃಶ್ಯಮಪೀಶೇನಾಸುರಾನ್ಯತೇ ।
ತತ ಆಭಾಸತೇ ನಿತ್ಯಂ ತದ್ವದಾಭಾಸತೇಽಪಿ ಚ ॥ ೧೨೮ ॥

ಭಾನಮಸ್ತಿತ್ವಮಪಿ ಚೈವಾಸಮಂತಾದ್ ಯತಸ್ತತಃ ।
ಜೀವ ಆಭಾಸ ಉದ್ದಿಷ್ಟಃ ಸದೈವ ಪರಮಾತ್ಮನಃ ॥
ನ ಜಲಾಯತ್ತಸೂರ್ಯಾದಿಪ್ರತಿಬಿಂಬೋಪಮತ್ವತಃ ॥ ೧೨೯ ॥

ತದಧೀನತ್ವಮೇವೇತಿ ಕಿಂಚಿತ್ಸಾದೃಶ್ಯಮೇವ ಚ ।
ಸಂಪ್ರಕಾಶಯತಃ ಸೂತ್ರಗತಾವಖಿಲಮಾನತಃ ।
ಜೀವೇಶಭೇದದೃಷ್ಟ್ಯೈವ ಸಮುದಾಯ್ಯೈಕತಾ ಕುತಃ ॥ ೧೩೦ ॥

ಅಶೇಷದೋಷರಾಹಿತ್ಯಂ ಸರ್ವಶಕ್ತಿತ್ವತೋ ಹರೇಃ ।
ಸರ್ವೋಪೇತೇತಿ ಕಥಿತಮತ ಐಕ್ಯಂ ಕ್ವ ದೋಷಿಣಾ ।
ಅಶೇಷಶಕ್ತಿಯುಕ್ತಶ್ಚೇತ್ ಸ್ವಾತಂತ್ರ್ಯಾದ್ ದೋಷವಾನ್ಕಥಮ್ ॥ ೧೩೧

ಜಾಗ್ರದವಸ್ಥೆ ಕಾಲಾಧೀನ. ಕಾಲವಿಶೇಷದಿಂದಾಗಿಯೇ ಎಚ್ಚರವಾಗುತ್ತದೆ ಎಂದು ಪೂರ್ವಪಕ್ಷ. ಕಾಲವು ಜಡವಾದುದರಿಂದ ಪರಾಧೀನ. ಅದೇ ಎಚ್ಚರಾವಸ್ಥೆಗೆ ಕಾರಣವಲ್ಲ. ಈಶ್ವರನೇ ಕಾರಣ, ಎಂದು ಸಿದ್ಧಾಂತ. ತಥೈವ ಎಂದರೆ ಕಾಲ–ಜೀವರು ಅಸ್ವತಂತ್ರರಾದ ಕಾರಣದಿಂದಾಗಿಯೇ ಎಂದರ್ಥ.

(4) ನಾಲ್ಕನೆಯ ತದಭಾವಾಧಿಕರಣದ ಪೂರ್ವಪಕ್ಷಯುಕ್ತಿ– **ದುಃಖಮ್**. ಸಿದ್ಧಾಂತಯುಕ್ತಿ–**ಅಮಾನ ಕ್ಲೃಪ್ತಿಃ** ।

ತದಭಾವ ಎಂದರೆ ಎಚ್ಚರ ಮತ್ತು ಸ್ವಪ್ನಗಳ ಅಭಾವ ಅರ್ಥಾತ್ ನಿದ್ರಾವಸ್ಥೆ. ಅದು ದೇಹಗತನಾಡಿಯಲ್ಲಾದರೆ ಎಚ್ಚರ ಮತ್ತು ಸ್ವಪ್ನಗಳಂತೆ ಆಗಲೂ ದುಃಖದ ಅನುಭವ ಬರಬೇಕಾದೀತು. ಆದ್ದರಿಂದ ನಿದ್ರಾವಸ್ಥೆ ಪರಮಾತ್ಮನಲ್ಲೇ ಹೊರತು ನಾಡಿಯಲ್ಲಿ ಅಲ್ಲ, ಎಂದು ಪೂರ್ವಪಕ್ಷ.

'ಸತಾ ಸೋಮ್ಯ ತದಾ ಸಂಪನ್ನೋ ಭವತಿ' ಎಂದು ಶ್ರುತಿಯು ನಿದ್ರಾವಸ್ಥೆಯಲ್ಲಿ ಜೀವನು ಪರಮಾತ್ಮನೊಂದಿಗೆ ಇರುತ್ತಾನೆ ಎನ್ನುತ್ತದೆ. 'ನಾಡೀಷು ಸುಪ್ತೋ ಭವತಿ' ಎಂಬ ಶ್ರುತಿ ನಾಡಿಯಲ್ಲಿ ಸುಪ್ತಿ ಎನ್ನುತ್ತದೆ. ಇವೆರಡೂ ಪ್ರಮಾಣಗಳಿಗೆ ಅನುಗುಣವಾಗಿ ನಾಡೀಗತಪರಮಾತ್ಮನಲ್ಲಿ ಸುಪ್ತಿ ಎಂದು ಸಿದ್ಧಾಂತ. ನಾಡೀಸ್ಥಪರಮಾತ್ಮನಲ್ಲಿ ಸುಪ್ತಿಯು 'ಮಾನ'ದಿಂದ ಸಿದ್ಧವಾಗಿದೆ. ಅದನ್ನು ಅಂಗೀಕರಿಸದೆ ಕೇವಲ ಪರಮಾತ್ಮನಲ್ಲಿ ಸುಪ್ತಿ ಎಂದು ಹೇಳುವುದು ಅಮಾನಕ್ಲೃಪ್ತಿ. (ಮಾನಸ್ಯ ಕ್ಲೃಪ್ತ್ಯಕರಣಮ್–ನ್ಯಾ.ವಿ.)

(5) ಐದನೆಯ ಪ್ರಬೋಧಾಧಿಕರಣದಲ್ಲಿ **ಪೃಥಗ್‌ಭವಃ**, ಎನ್ನುವುದು ಪೂರ್ವಪಕ್ಷನ್ಯಾಯ, **ಸನ್ಮಾನಂ**, ಇದು ಸಿದ್ಧಾಂತಯುಕ್ತಿ.

ಜೀವನಿಗೆ ಸುಪ್ತಿಯಿಂದ ಎಚ್ಚರವು ಈಶಾಧೀನವಲ್ಲ. ಏಕೆಂದರೆ, ಪೃಥಗ್ ಭವಃ–ಪ್ರಬೋಧಕ್ಕೆ ಭೇರೀತಾಡನಾದಿ ಪ್ರತ್ಯೇಕವಾದ ಕಾರಣಗಳು ಪ್ರಸಿದ್ಧವಾಗಿವೆ, ಎಂದು ಪೂರ್ವಪಕ್ಷ. ''ನ ಋತೇ ತ್ವತ್ ಕ್ರಿಯತೇ'' ಎನ್ನುವ ಸನ್ಮಾನಂ=ಪ್ರಮಾಣವು ಯಾವ ಕಾರ್ಯಗಳೂ ಭಗವಂತನಿಲ್ಲದೆ ನಡೆಯುವುದಿಲ್ಲ, ಎನ್ನುತ್ತದೆ. ಆದ್ದರಿಂದ ನಿದ್ದೆಯಿಂದ ಎಚ್ಚರವೂ ಭಗವದಧೀನ, ಎಂದೇ ತಿಳಿಯಬೇಕು.

(6) ಆರನೆಯದು ಕರ್ಮಾನುಸ್ಮೃತ್ಯಧಿಕರಣ. ಇಲ್ಲಿಯೂ **ಪೃಥಗ್ ಭವಃ** ಪೂರ್ವಪಕ್ಷಯುಕ್ತಿ, **ಸನ್ಮಾನಂ** ಸಿದ್ಧಾಂತಯುಕ್ತಿ.

ಎಲ್ಲ ಜೀವರಲ್ಲಿರುವ ಜಾಗ್ರದಾದಿಸರ್ವಾವಸ್ಥೆಗಳಿಗೆ ಸರ್ವಕಾಲಗಳಲ್ಲೂ ಒಬ್ಬ ಈಶನೇ ಪ್ರೇರಕನಲ್ಲ. ಲೋಕದಲ್ಲಿ ಶಾಸಕರಾದ ರಾಜಾದಿಗಳು ಸೀಮಿತಪ್ರದೇಶಕ್ಕೆ ನಿರ್ದಿಷ್ಟಕಾಲದಲ್ಲಿ ಮಾತ್ರ ಅಧಿಪತಿಗಳಾಗಿರುವುದು ಕಂಡಿದೆ. ಅದರಂತೆ ಈಶ್ವರನೂ ಕೆಲವು ಕಾಲದಲ್ಲಿ ಕೆಲವು ಜೀವರ ಅವಸ್ಥೆಗಳಿಗೆ ಪ್ರೇರಕ ಎಂದು ಪೂರ್ವಪಕ್ಷ.

ದೇಶ–ಕಾಲ ವಿಶೇಷೇಽಪಿ ಸ್ವಪ್ನಾದೀನಾಂ ಸ ಏವ ಹಿ ।
ತಿರಸ್ಕರ್ತಾ ಚ ಕರ್ತಾ ಚ ನ ಖಂಡೇಶಃ ನ ರಾಜವತ್ ॥

ಈ ಸದ್ವಚನದಲ್ಲಿ 'ಈಶನು ರಾಜರಂತೆ ಅಲ್ಲ. ಸರ್ವದಾ ಸರ್ವಾವಸ್ಥಾ ಪ್ರೇರಕ' ಎಂದು ಹೇಳಿರುವುದರಿಂದ ಅವನು ಎಲ್ಲರಿಗೂ ಎಲ್ಲ ಕಾಲದಲ್ಲೂ ಪ್ರೇರಕ ಎಂದು ಸಿದ್ಧಾಂತ.

**(7)** ಏಳನೆಯದು ಸಂಪತ್ತ್ಯಧಿಕರಣ. ಇಲ್ಲೂ ಹಿಂದಿನವೇ ಪೂರ್ವಪಕ್ಷ–ಸಿದ್ಧಾಂತಯುಕ್ತಿಗಳು. ಮೂರ್ಛಾವಸ್ಥೆಗೆ ಈಶನು ಪ್ರೇರಕನಲ್ಲ, ಎಂದು ಇಲ್ಲಿ ಪೂರ್ವಪಕ್ಷ. ಈ ಅವಸ್ಥೆಯಲ್ಲಿ ಜೀವನು ಸಂಪೂರ್ಣವಾಗಿ ಈಶನಲ್ಲಿ ಪ್ರವೇಶಮಾಡಿದರೆ ಸುಪ್ತಿಯೇ ಆದಂತಾಯಿತು. ಆಗ ದುಃಖಸಂವೇದನೆ ಬರಲು ಸಾಧ್ಯವಿಲ್ಲ. ಇದು ಎಚ್ಚರವೂ ಅಲ್ಲ, ಏಕೆಂದರೆ ಹೊರ ಪ್ರಪಂಚದ ಜ್ಞಾನವಿಲ್ಲ. ಸ್ವಪ್ನದಲ್ಲಿ ಸ್ವಾಪ್ನವಸ್ತುಗಳ ಜ್ಞಾನವಿದ್ದಂತೆ ಈ ಅವಸ್ಥೆಯಲ್ಲಿ ಅವುಗಳ ಜ್ಞಾನವೂ ಇಲ್ಲ. ಕೇವಲ ದುಃಖದ ಸಂವೇದನೆ ಮಾತ್ರ ಇರುತ್ತದೆ. ಆದ್ದರಿಂದ ಈ ಪೃಥಗವಸ್ಥೆ ಭಗವದಧೀನವಲ್ಲ, ಎಂದು ಪೂರ್ವಪಕ್ಷ.

ಮೂರ್ಛಾವಸ್ಥೆಯಲ್ಲಿ ಸ್ವಪ್ನ–ಜಾಗರಗಳಂತೆ ಪರಮಾತ್ಮನಿಂದ ಜೀವನು ಪೂರ್ಣ ಬಾಹ್ಯನೂ ಅಲ್ಲ, ಸುಪ್ತಿಯಂತೆ ಪೂರ್ಣವಾಗಿ ಈಶಪ್ರವಿಷ್ಟನೂ ಅಲ್ಲ. ಈಶನಲ್ಲಿ ಅರ್ಧಪ್ರವಿಷ್ಟನಾಗಿರುತ್ತಾನೆ. ಹೀಗೆ ಪರಿಶೇಷಾತ್ ಮೋಹಾವಸ್ಥೆಯು ಪ್ರತ್ಯೇಕವೆಂದು ಪರಿಶೇಷಪ್ರಮಾಣದಿಂದ ಸಿದ್ಧವಾಗುವುದರಿಂದ ಅದಕ್ಕೂ ಪರಮಾತ್ಮನೇ ಪ್ರೇರಕ.

**(8)** ಎಂಟನೆಯದು 'ನ ಸ್ಥಾನತೋಽಪ್ಯಧಿಕರಣ'. ಇಲ್ಲಿ ಸ್ಥಾನಭೇದಃ ಎನ್ನುವುದು ಪೂರ್ವಪಕ್ಷಯುಕ್ತಿ. ವ್ಯವಸ್ಥಾ ಎನ್ನುವುದು ಸಿದ್ಧಾಂತನ್ಯಾಯ. ನಮ್ಮ ಜಾಗ್ರದಾದಿ ಅವಸ್ಥೆಗಳಲ್ಲಿ ಪರಮಾತ್ಮನು ಚಕ್ಷುರಾದಿವಿಭಿನ್ನಸ್ಥಾನಗಳಲ್ಲಿ

ಇರುವುದರಿಂದ ಅವನ ರೂಪಗಳಿಗೆ ಭೇದವಿದೆ, ಎಂದು ಪೂರ್ವಪಕ್ಷ. ಸ್ಥಾನಭೇದದಿಂದಲೂ ಭಗವದ್ರೂಪಗಳಿಗೆ ಭೇದವಿಲ್ಲ, ಎಂದು ಸಿದ್ಧಾಂತ. 'ನೇಹ ನಾನಾಸ್ತಿ ಕಿಂಚನ' ಎನ್ನುವ ಶ್ರುತಿಯು ಪರಮಾತ್ಮನಲ್ಲಿ ರೂಪಭೇದ ವಿಲ್ಲ ಎಂದು ಹೇಳುತ್ತದೆ. ಇದು ನಿರವಕಾಶಶ್ರುತಿ. ಇದನ್ನು ಆಧರಿಸಿ ಸ್ಥಾನಭೇದ ಶ್ರುತಿಗೆ ಸ್ಥಾನಭೇದಮಾತ್ರದಲ್ಲಿ ತಾತ್ಪರ್ಯ. 'ನೇಹ ನಾನಾ' ಶ್ರುತಿಗೆ ಭವದ್ರೂಪಾಭೇದದಲ್ಲಿ ತಾತ್ಪರ್ಯ ಎಂದು ವ್ಯವಸ್ಥಯಾ ಎರಡಕ್ಕೂ ಪ್ರಾಮಾಣ್ಯವನ್ನು ಹೇಳಬೇಕು.

**(9)** ಒಂಭತ್ತನೆಯದು ಅರೂಪಾಧಿಕರಣ. **ವಿರುದ್ಧತ್ವಂ** ಎಂದು ಪೂರ್ವಪಕ್ಷಯುಕ್ತಿ. **ವ್ಯವಸ್ಥಾ**, ಎನ್ನುವುದು ಸಿದ್ಧಾಂತಯುಕ್ತಿ. ಬ್ರಹ್ಮನಿಗೆ ಶುಕ್ಲಾದಿರೂಪಗಳಿವೆ ಎಂದರೆ 'ತದರೂಪಮ್ ಅನಾಮಯಮ್' ಎಂಬ ಶ್ರುತಿವಿರೋಧ. ರೂಪವಿಲ್ಲದಿದ್ದರೆ 'ರುಗ್ಮವರ್ಣಂ ಕರ್ತಾರಮೀಶಮ್' ಎಂಬ ಶ್ರುತಿವಿರೋಧ. ರೂಪವಿದೆ, ಎನ್ನುವ ಶ್ರುತಿಯು ಅಪ್ರಾಕೃತರೂಪವಿದೆ, ಎನ್ನುತ್ತದೆ. ರೂಪವಿಲ್ಲ, ಎನ್ನುವ ಶ್ರುತಿಯು ಪ್ರಾಕೃತರೂಪವಿಲ್ಲ ಎಂದು ಹೇಳುತ್ತದೆ. ಹೀಗೆ ವ್ಯವಸ್ಥಯಾ ಎರಡೂ ಶ್ರುತಿಗಳಿಗೆ ಪ್ರಾಮಾಣ್ಯವಿದೆ, ಎಂದು ಸಿದ್ಧಾಂತ.

**(10)** ಇದು ಉಪಮಾಧಿಕರಣ. **ನ್ಯಾಯಸಾಮ್ಯಂ** ಎಂದು ಪೂರ್ವಪಕ್ಷ ನ್ಯಾಯ, **ಅಲ್ಪತಾ**, ಎನ್ನುವುದು ಸಿದ್ಧಾಂತನ್ಯಾಯ. ಪರಮಾತ್ಮನಂತೆ ಜೀವನೂ ಚೇತನ. ಮತ್ಸ್ಯಾದಿ ಅವತಾರಗಳಂತೆ ಜೀವನೂ ಪರಮಾತ್ಮನ ಅಂಶ ನಾಗಿದ್ದಾನೆ. ಹೀಗೆ, ನ್ಯಾಯ ಸಾಮ್ಯವಿರುವುದರಿಂದ ಜೀವನು ಪರಮಾತ್ಮ ನಿಂದ ಅಭಿನ್ನನಾಗಿದ್ದಾನೆ. ಆದ್ದರಿಂದ ಪರಮಾತ್ಮನಲ್ಲಿ ಭಕ್ತಿಯು ಮೋಕ್ಷಕ್ಕೆ ಸಾಧನವಲ್ಲ, ಎಂದು ಪೂರ್ವಪಕ್ಷ.

ಜೀವನು ಅಲ್ಪಗುಣವುಳ್ಳವನು ಹಾಗೂ ಪರಮಾತ್ಮನ ಪ್ರತಿಬಿಂಬನೂ ಆಗಿದ್ದಾನೆ. ಪರಮಾತ್ಮ ಅನಂತಗುಣಗಳುಳ್ಳವನೂ ಬಿಂಬನೂ ಆಗಿದ್ದಾನೆ. ಆದ್ದರಿಂದ ಜೀವ ಪರಮಾತ್ಮನಿಂದ ಅಭಿನ್ನನಲ್ಲ, ಎಂದು ಸಿದ್ಧಾಂತ.

**(11)** ಹನ್ನೊಂದನೆಯದು ಅಂಬುವದಧಿಕರಣ. ಈ ಅಧಿಕರಣದಲ್ಲಿ **ಸ್ವತೋ ಭವಃ** ಎಂದು ಪೂರ್ವಪಕ್ಷಯುಕ್ತಿ. **ಭವಃ** ಎಂದು ಸಿದ್ಧಾಂತಯುಕ್ತಿ.

ಜೀವನಲ್ಲಿ ಈಶ್ವರಸಾದೃಶ್ಯ ಸ್ವಾಭಾವಿಕವಾದುದು. ಸ್ವಾಭಾವಿಕವಾದ ಜ್ಞಾನಾನಂದಾದಿಸಾದೃಶ್ಯವು ಒಂದಲ್ಲ ಒಂದುದಿನ ತಾನಾಗಿಯೇ ಅಭಿವ್ಯಕ್ತಿಗೊಳ್ಳಬೇಕು. ಅದಕ್ಕೆ ಭಕ್ತಿ–ವೈರಾಗ್ಯಾದಿಸಾಧನೆಗಳ ಅಗತ್ಯವಿಲ್ಲ, ಎಂದು ಪೂರ್ವಪಕ್ಷ.

ಈ ಸಾದೃಶ್ಯವು ಅನಾದಿಕಾಲದಿಂದ ಇದೆ. ಆದರೂ ಅದು ವ್ಯಕ್ತವಾಗಿಲ್ಲ. ಅಂದಮೇಲೆ ಅದು ವ್ಯಕ್ತವಾಗಲು ಕಾರಣವಿಶೇಷವೇ ಇರಬೇಕು. ಅದೇ ಈಶಾನುಗ್ರಹ. ಅದಕ್ಕಾಗಿ ಜ್ಞಾನ–ಭಕ್ತ್ಯಾದಿಸಾಧನಗಳು ಬೇಕು, ಎಂದು ಸಿದ್ಧಾಂತ.

**(12)** ಹನ್ನೆರಡನೆಯದು ವೃದ್ಧಿಹ್ರಾಸಾಧಿಕರಣ. ಇಲ್ಲಿ ಪೂರ್ವಪಕ್ಷ ಯುಕ್ತಿ **ಗುಣಸಾಮ್ಯ**, ಸಿದ್ಧಾಂತನ್ಯಾಯ **ವಿಶೇಷದೃಷ್ಟಿಃ**. ಮುಕ್ತಿಯೋಗ್ಯರಾದ ಜೀವರಲ್ಲಿ ಆನಂದಾದಿಗುಣಗಳು ಸಮಾನವಾಗಿವೆ. ಈ ಗುಣಗಳ ಅಭಿವ್ಯಕ್ತಿಯೇ ಮೋಕ್ಷ. ಈ ಮೋಕ್ಷರೂಪವಾದ ಫಲವು ಏಕರೂಪವಾದುದರಿಂದ ಅದಕ್ಕೆ ಕಾರಣವಾದ ಭಕ್ತ್ಯಾದಿಸಾಧನಗಳೂ ಏಕರೂಪವಾಗಿವೆ, ಎಂದು ಪೂರ್ವಪಕ್ಷ.

ಮುಕ್ತಿಯಲ್ಲಿ ಆನಂದತಾರತಮ್ಯವಿದೆ. ಅದು ಎಲ್ಲರಿಗೂ ಏಕರೂಪವಲ್ಲ. ಆದ್ದರಿಂದ ಅದಕ್ಕೆ ಕಾರಣವಾದ ಭಕ್ತ್ಯಾದಿಸಾಧನಗಳಲ್ಲೂ ತಾರತಮ್ಯವಿದೆ. ಹೀಗೆ ಸಾಧನ–ಫಲಗಳಲ್ಲಿ ವಿಶೇಷವು ದೃಷ್ಟವಾದುದರಿಂದ (ಶ್ರುತ್ಯುಕ್ತವಾದುದರಿಂದ) ಭಕ್ತ್ಯಾದಿಸಾಧನಗಳು ಏಕರೂಪಗಳಲ್ಲ.

**(13)** ಹದಿಮೂರನೆಯ ಪ್ರಕೃತೈತಾವತ್ತ್ವಾಧಿಕರಣದ ಪೂರ್ವಪಕ್ಷ ಯುಕ್ತಿ **ಅಯೋಗಃ**, ಸಿದ್ಧಾಂತನ್ಯಾಯ–**ವಿಶೇಷವಾಕ್ಯಮ್**.

ವಿಷ್ಣು ಪಾಲಕನಲ್ಲ, ಎಂದು ಪೂರ್ವಪಕ್ಷ. ಸೃಷ್ಟಿ ಮತ್ತು ಸಂಹಾರಗಳನ್ನು ಅವನೇ ಮಾಡುತ್ತಾನೆ. ಬೇರೆಯವರು ಸಂಹಾರಕರಾಗಿದ್ದಲ್ಲಿ ಅವರನ್ನು ತಡೆದು ಅವನು ಪಾಲನೆ ಮಾಡಬೇಕು. ಅವನೇ ಸಂಹಾರಕನೆಂದಮೇಲೆ ಸಂಹಾರ ಮಾಡದಿರುವುದೇ ಪಾಲನೆ. (ಅಸಂಹಾರಾದನ್ಯ–ರಕ್ಷಯಾಃ ಅಯೋಗಃ –ನ್ಯಾ.ವಿ.) ಇದು ಪೂರ್ವಪಕ್ಷ.

'ಸ ಸೃಜತಿ, ಸ ಪಾಲಯತಿ, ಸ ವಿನಾಶಯತಿ' ಎಂಬ ವಿಶೇಷವಾಕ್ಯದಲ್ಲಿ ಸೃಷ್ಟಿಸಂಹಾರಗಳ ಜೊತೆಯಲ್ಲಿ ಪಾಲಕತ್ವವನ್ನೂ ಹೇಳಿರುವುದರಿಂದ ವಿಷ್ಣುವು ಪಾಲಕನೂ ಆಗಿದ್ದಾನೆ, ಎಂದು ಸಿದ್ಧಾಂತ.

**(14)** ಹದಿನಾಲ್ಕನೆಯದು ತದವ್ಯಕ್ತಾಧಿಕರಣ. ಇದರಲ್ಲಿ **ತರ್ಕಬಾಧಃ** ಎಂದು ಪೂರ್ವಪಕ್ಷನ್ಯಾಯ, **ಪುಂಶಕ್ತಿಃ** ಎಂದು ಸಿದ್ಧಾಂತನ್ಯಾಯ.

ಮೋಕ್ಷಕ್ಕೆ ಪರಮಭಕ್ತಿಯು ಕಾರಣ. ಈ ಭಕ್ತಿ ಬರಬೇಕಾದರೆ ಅವನ ಅಪರೋಕ್ಷಜ್ಞಾನವಾಗಬೇಕು. ಆದರೆ ಅವನು ಪುಣ್ಯ-ಪಾಪಗಳಂತೆ ಅವ್ಯಕ್ತೈಕ ಸ್ವಭಾವ. ಅಂತಹವನನ್ನು ಎಂದೂ ನೋಡಲಾಗದು. ಹೀಗೆ ಈ ಯುಕ್ತಿಗೆ ವಿರುದ್ಧವಾದುದರಿಂದ ಈಶನ ಪ್ರತ್ಯಕ್ಷಸಾಧ್ಯವಿಲ್ಲ. ಪ್ರತ್ಯಕ್ಷಕ್ಕಾಗಿ ಜ್ಞಾನಭಕ್ತಿ-ವೈರಾಗ್ಯಗಳ ಅಗತ್ಯವಿಲ್ಲ, ಎಂದು ಪೂರ್ವಪಕ್ಷ.

ಅವನು ಅವ್ಯಕ್ತೈಕಸ್ವಭಾವದವನಾದರೂ ತನ್ನ ಅಚಿಂತ್ಯಶಕ್ತಿಯಿಂದ ಭಕ್ತನಮೇಲೆ ಕೃಪೆತೋರಿ ಪ್ರತ್ಯಕ್ಷನಾಗುತ್ತಾನೆ, ಎಂದು ಸಿದ್ಧಾಂತ.

**(15)** ಹದಿನೈದನೆಯ ಅಧಿಕರಣದಲ್ಲಿ **ವಿಲೋಮತಾ,** ಎಂದು ಪೂರ್ವಪಕ್ಷನ್ಯಾಯ. **ಸುನಿದರ್ಶನಂ,** ಎಂದು ಸಿದ್ಧಾಂತನ್ಯಾಯ. ಇದು ಅಹಿಕುಂಡಲಾಧಿಕರಣ.

''ಆನಂದಂ ಬ್ರಹ್ಮಣಃ'' ಇತ್ಯಾದಿಶ್ರುತಿಗಳಲ್ಲಿ ಬ್ರಹ್ಮನು ಜ್ಞಾನಾನಂದಾದಿ ಗುಣರೂಪ, ಎಂದು ಹೇಳಲಾಗಿದೆ. ಗುಣವು ಗುಣಿಯಾಗದು. ಅದು ವಿರುದ್ಧ. ಆದ್ದರಿಂದ ಬ್ರಹ್ಮನು ಗುಣಿಯಲ್ಲ, ಅವನಲ್ಲಿ ಭಕ್ತಿ ಉಂಟಾಗದು ಎಂದು ಪೂರ್ವಪಕ್ಷ. ಎರಡಕ್ಕೆ ಅಭೇದವಿದ್ದರೂ ತದ್ವದ್‌ಭಾವಕ್ಕೆ ನಿದರ್ಶನ ವಿದೆ. ''ಪೂರ್ವಃ ಕಾಲಃ'' ಎಂದಾಗ ಪೂರ್ವತ್ವವೂ ಕಾಲರೂಪವೇ ಆದರೂ ಅವೆರಡಕ್ಕೆ ವಿಶೇಷ್ಯವಿಶೇಷಣಭಾವವಿದೆ. ಸರ್ಪವೂ ಅದರ ಕುಂಡಲಾ ಕಾರವೂ ಒಂದೇ ಆದರೂ ಸರ್ಪವನ್ನು 'ಕುಂಡಲೀ' ಎನ್ನಲಾಗುತ್ತದೆ. ಅದರಂತೆ, ಆನಂದವೂ ಬ್ರಹ್ಮನೂ ಅಭಿನ್ನವಾದರೂ ''ಬ್ರಹ್ಮಣಃ ಆನಂದಃ'' ಎಂದು ಹೇಳಬಹುದು. ಹೀಗೆ ಬ್ರಹ್ಮನು ವಿಶೇಷಬಲಾತ್ ಜ್ಞಾನಾನಂದಾದಿ ಗುಣವುಳ್ಳವನಾದುದರಿಂದ ಅವನಲ್ಲಿ ಭಕ್ತಿಯು ಯುಕ್ತವಾಗಿದೆ.

**(16)** ಹದಿನಾರನೆಯ ಪರಮತಃ ಎಂಬ ಈ ಅಧಿಕರಣದ ಪೂರ್ವಪಕ್ಷ ಯುಕ್ತಿ–**ವಿಲೋಮತಾ.** ಸಿದ್ಧಾಂತನ್ಯಾಯ–**ಅಲೌಕಿಕತ್ವ.**

ಬ್ರಹ್ಮನ ಆನಂದಾದಿಗುಣಗಳು ಅಲೌಕಿಕಗಳಾದರೆ ಅವುಗಳನ್ನು ಜ್ಞಾನ, ಆನಂದ ಮುಂತಾದ ಶಬ್ದಗಳಿಂದ ಹೇಳಲಾರದು. ಆ ಶಬ್ದಗಳು ಲೌಕಿಕಾನಂದದ ಹೆಸರುಗಳು. ಆನಂದಶಬ್ದವಾಚ್ಯತ್ವ ಮತ್ತು ಅಲೌಕಿಕತ್ವ ಇವೆರಡೂ ವಿಲೋಮಗಳು–ಒಂದೆಡೆ ಇರಲಾರದ ಧರ್ಮಗಳು ಎಂದು ಪೂರ್ವಪಕ್ಷ.

ಬ್ರಹ್ಮನ ಆನಂದಾದಿಗುಣಗಳು ಅಲೌಕಿಕಗಳು. ಆದರೂ ಲೌಕಿಕಾನಂದಾದಿ ಗುಣಗಳಿಗೆ ವಾಚಕವಾದ ಆನಂದ ಮುಂತಾದ ಪದಗಳಿಂದಲೇ ಅವುಗಳು ವಾಚ್ಯಗಳು, ಎಂದು ಶ್ರುತಿ ಇರುವುದರಿಂದ ಅವೆರಡಕ್ಕೆ ವಿರೋಧವಿಲ್ಲ, ಎಂದು ಸಿದ್ಧಾಂತ.

**(17)** ಹದಿನೇಳನೆಯ ಸ್ಥಾನವಿಶೇಷಾಧಿಕರಣದಲ್ಲಿ ನಾನಾಭಾವವು ಪೂರ್ವಪಕ್ಷಯುಕ್ತಿ, **ಆಧಿಕ್ಯವು** ಸಿದ್ಧಾಂತಯುಕ್ತಿ.

ಬ್ರಹ್ಮಾದಿಗಳ ಆನಂದವು ಒಬ್ಬೊಬ್ಬರದು ಒಂದೊಂದು ರೀತಿಯಾದುದು. ಅದು ಪರಬ್ರಹ್ಮನ ಆನಂದದ ಪ್ರತಿಬಿಂಬವಾಗಿದ್ದಲ್ಲಿ ಬಿಂಬವು ಒಂದೇ ಆದುದರಿಂದ ಪ್ರತಿಬಿಂಬವಾದ ಆನಂದವೂ ಒಂದೇ ರೀತಿಯಾಗಿರಬೇಕಾಗಿತ್ತು. ಅದರಲ್ಲಿ ನಾನಾಭಾವ ಇರುವುದರಿಂದ ಅದು ಬ್ರಹ್ಮಾನಂದದ ಪ್ರತಿಬಿಂಬವಲ್ಲ, ಎಂದು ಪೂರ್ವಪಕ್ಷ.

ಸೂರ್ಯಕಿರಣವು ಒಂದೇವಿಧವಾದರೂ ಅದು ಸೂರ್ಯಕಾಂತ ಮಣಿಯಲ್ಲಿ ಬಿದ್ದರೆ ಬೆಂಕಿ ಉಗುಳುತ್ತದೆ. ಜಲದಲ್ಲಿ ಬಿದ್ದರೆ ಬೆಂಕಿ ಉಗುಳುವುದಿಲ್ಲ. ಅದರಂತೆ ಬ್ರಹ್ಮಾದಿದೇವತೆಗಳ ಜ್ಞಾನ–ಭಕ್ತ್ಯಾದಿಗುಣಗಳ ವಿಶೇಷದಿಂದಾಗಿ (ಸ್ಥಾನವಿಶೇಷಾತ್) ಬ್ರಹ್ಮಾನಂದವು ವೈವಿಧ್ಯಮಯವಾಗಿ ಪ್ರತಿಬಿಂಬಿತವಾಗುತ್ತದೆ. ಇದಕ್ಕೆ ಬ್ರಹ್ಮಾದಿಗಳಲ್ಲಿರುವ ವೈಚಿತ್ರ್ಯದಂತೆ ಪರಮಾತ್ಮನ ಆಧಿಕ್ಯವೂ ಕಾರಣ. ಇದು ಸಿದ್ಧಾಂತ.

**(18)** ಹದಿನೆಂಟನೆಯದು ತಥಾನ್ಯತ್ವಾಧಿಕರಣ. ಇಲ್ಲಿ **ನಾನಾಭಾವಃ** ಎಂದು ಪೂರ್ವಪಕ್ಷನ್ಯಾಯ. **ಆಧಿಕ್ಯಂ,** ಎಂದು ಸಿದ್ಧಾಂತನ್ಯಾಯ.

ಬ್ರಹ್ಮನು ವ್ಯಕ್ತರೂಪನೋ, ಅವ್ಯಕ್ತನೋ ಎಂದು ಸಂದೇಹ. ಧ್ಯಾನ ಕಾಲದಲ್ಲಿ ಕಾಣುವ ಮಾನಸವಾಸನಾಮಯರೂಪವೇ ಬ್ರಹ್ಮ. ಅದು ಅವನ ವ್ಯಕ್ತರೂಪ. ಬ್ರಹ್ಮನು ಒಬ್ಬನೇ ಆದರೂ ಧ್ಯಾನಮಾಡುವ ಭಕ್ತರು ಅನೇಕರಾದ ಕಾರಣ ಆ ರೂಪಗಳಲ್ಲಿ ಅನೇಕತ್ವವು ಇದೆ. ಆದ್ದರಿಂದ ಅದರ ವ್ಯಕ್ತಿಗಾಗಿ ಭಕ್ತ್ಯಾದಿಸಾಧನಗಳ ಅಪೇಕ್ಷೆ ಇಲ್ಲ, ಎಂದು ಪೂರ್ವಪಕ್ಷ.

ಜೀವಾನಂದ ಅಲ್ಪ, ಬ್ರಹ್ಮಾನಂದ ಅಪರಿಮಿತ. ಅವುಗಳಲ್ಲಿ ಭೇದ ವಿರುವಂತೆ ಧ್ಯೇಯರೂಪ ವಾಸನಾಮಯವಾದುದರಿಂದ ಅಶುದ್ಧ ವಾದುದು. ಬ್ರಹ್ಮನು ನಿರ್ದೋಷ. ಹೀಗೆ ಧ್ಯೇಯವಾದ ವಾಸನಾಮಯ ರೂಪಕ್ಕಿಂತ ವಿಷ್ಣುವಿಗೆ ಆಧಿಕ್ಯವಿರುವುದರಿಂದ ಅವನು ಧ್ಯೇಯರೂಪಕ್ಕಿಂತ ಭಿನ್ನನಾಗಿದ್ದಾನೆ.

**(19)** ಹತ್ತೊಂಬತ್ತನೆಯದು ''(ಅನೇನ)ಸರ್ವಗತತ್ವಾಧಿಕರಣ''. ಬ್ರಹ್ಮನು ಸಕಲ ದೇಶಕಾಲಗಳಲ್ಲೂ ಸೃಷ್ಟಿಕರ್ತನಲ್ಲ. ಕೆಲವು ಕಾಲದಲ್ಲಿ, ಕೆಲವು ಪ್ರದೇಶಗಳಲ್ಲಿ ಬೇರೆಯವರಿಗೆ ಸ್ವಾತಂತ್ರ್ಯವನ್ನು ಕೊಟ್ಟು ಅವರಿಂದಲೂ ಸೃಷ್ಟ್ಯಾದಿಗಳು ನಡೆಯುತ್ತವೆ ಎಂದು ಪೂರ್ವಪಕ್ಷ. ಇಲ್ಲಿ ನಾನಾಭಾವಃ ಎಂದು ಪೂರ್ವಪಕ್ಷಯುಕ್ತಿ. ಬ್ರಹ್ಮನು ತನ್ನ ನಾನಾವತಾರಗಳಲ್ಲಿ ನಾನಾವಿಧ ಲೀಲೆಗಳನ್ನು ತೋರಿಸುವಂತೆ ತನ್ನ ಸ್ವಾತಂತ್ರ್ಯವನ್ನೂ ಲೀಲೆಗಾಗಿ ಅನ್ಯರಿಗೆ ಕೊಡುತ್ತಾನೆ, ಎಂದರ್ಥ.

**ಸ್ವಾತಂತ್ರ್ಯಂ,** ಎಂದು ಸಿದ್ಧಾಂತನ್ಯಾಯ. ವಿಷ್ಣುವೇ ಸ್ವತಂತ್ರ. ಅವನು ತನ್ನ ಸ್ವಾತಂತ್ರ್ಯವನ್ನು ಇತರರಿಗೆ ಕೊಡುವುದಿಲ್ಲ.

ಸ್ವಾತಂತ್ರ್ಯಾತ್ ಕ್ರೀಡತೇ ವಿಷ್ಣುರ್ನ ಚ ಸ್ವಾತಂತ್ರ್ಯಮನ್ಯಗಮ್ ।
ಕರೋತಿ ಕ್ವಾಪಿ ನಿಯತಾ ಕ್ರೀಡಾ ಸೃಷ್ಟ್ಯಾದಿಗಾಸ್ಯ ಚ ॥

ಎಂಬ ಪ್ರಮಾಣವಿದೆ. ಆದ್ದರಿಂದ ಸರ್ವದೇಶಕಾಲಗಳಲ್ಲೂ ವಿಷ್ಣುವೇ ಕರ್ತೃ.

(20) ಇಪ್ಪತ್ತನೇ ಫಲಾಧಿಕರಣದ ಪೂರ್ವಪಕ್ಷನ್ಯಾಯ–**ಪ್ರಲೋಭಃ.** ಸಿದ್ಧಾಂತನ್ಯಾಯ **ಸ್ವಾತಂತ್ರ್ಯ.**

ಜೀವನು ಕರ್ಮ ಮಾಡಿದರೆ ಮಾತ್ರ ಫಲ ಸಿಗುತ್ತದೆ, ಮಾಡದಿದ್ದರೆ

ಸಿಗುವುದಿಲ್ಲ. ಆದ್ದರಿಂದ ಕರ್ಮವೇ ಫಲಪ್ರದ, ಈಶಫಲದಾತೃ ಎನ್ನುವುದು ಪ್ರಲೋಭಮಾತ್ರ(ವಂಚನಾಮಾತ್ರ) ಎಂದು ಪೂರ್ವಪಕ್ಷ.

ಫಲದಾನದಲ್ಲಿ ಈಶನೇ ಸ್ವತಂತ್ರ.

ಕರ್ಮಾಣ್ಯನಂತಾನಿ ಯಥೇಷ್ಟಮೀಶಃ
ಸಂಪಾದ್ಯ ತೇಷಾಂ ಫಲಮಿಚ್ಛಯೈವ ।
ಕ್ವಚಿದ್ ದದಾತಿ ಕ್ವಚ ನೋ ದದಾತಿ... ॥

ಎಂದು ಪ್ರಮಾಣ ಹೇಳುವಂತೆ ಈಶನೇ ಫಲದಾತೃ.

ಹೀಗೆ, ಇಲ್ಲಿ ಎರಡನೆಯ ಪಾದದ ಇಪ್ಪತ್ತು ಅಧಿಕರಣಗಳ ಪೂರ್ವಪಕ್ಷ-ಉತ್ತರಪಕ್ಷಗಳ ನ್ಯಾಯಗಳನ್ನು ನಿರೂಪಿಸಲಾಗಿದೆ.

## ಸಂಧ್ಯಾಧಿಕರಣ

### ಓಂ ಸಂಧ್ಯೇ ಸೃಷ್ಟಿರಾಹ ಹಿ ಓಂ

**ವಾಸನಾಃ ಸರ್ವವಸ್ತೂನಾಮನಾದ್ಯನುಭವಾಗತಾಃ ।**
**ಸಂತ್ಯೇವಾಶೇಷಜೀವಾನಾಮನಾದಿಮನಸಿ ಸ್ಥಿತಾಃ ॥ ೫ ॥**

ಸರ್ವವಸ್ತೂನಾಂ=ಎಲ್ಲಾ ವಸ್ತುಗಳ ಅನಾದ್ಯನುಭವಾಗತಾಃ= ಪ್ರವಾಹತಃ ಅನಾದಿಗಳಾದ ಅನೇಕ ಅನುಭವಗಳಿಂದ ಹುಟ್ಟಿದ, ಅನಾದಿ ಮನಸಿ ಸ್ಥಿತಾಃ=ಸ್ವರೂಪತಃ ಅನಾದಿಯಾದ ಮನಸ್ಸಿನಲ್ಲಿ ಇರುವ, ವಾಸನಾಃ= ಭಾವನಾಖ್ಯಸಂಸ್ಕಾರಗಳು ಅಶೇಷಜೀವಾನಾಂ=ಎಲ್ಲಾ ಜೀವರಿಗೂ ಸಂತ್ಯೇವ=ಇದ್ದೇ ಇರುತ್ತವೆ.

**ಭಾವಾರ್ಥ**—ಜೀವರು ಅನಾದಿ-ಅನಂತರಾದಂತೆ ಅವರ ಮನಸ್ಸುಗಳೂ ಅನಾದಿ ಅನಂತವಾಗಿವೆ. ಅವರು ಅನಾದಿಕಾಲದಲ್ಲಿ ಪಡೆದ ಎಲ್ಲಾ ವಸ್ತುಗಳ ಅನುಭವದಿಂದ ಹುಟ್ಟಿದ ಸಂಸ್ಕಾರಗಳ ಸಂಗ್ರಹ ಮನಸ್ಸಿನಲ್ಲಿದೆ. ಆ ಸಂಸ್ಕಾರಗಳಿಂದ ಭಗವಂತ ಕರಿ-ತುರಗಾದಿ ವಿಚಿತ್ರವಸ್ತುಗಳ ಚಿತ್ರವನ್ನು ನಿರ್ಮಿಸಿ ಸ್ವಪ್ನಕಾಲದಲ್ಲಿ ತೋರಿಸುತ್ತಾನೆ. ಆ ವಸ್ತುಗಳ ಅನುಭವ ಈ ಜನ್ಮದಲ್ಲೇ ಬಂದಿರಬೇಕೆಂಬ ನಿರ್ಬಂಧವಿಲ್ಲ.

**ತ್ರಿಗುಣಾತ್ಮಕಂ ಮನೋಽಸ್ತ್ಯೇವ ಯಾವನ್ಮುಕ್ತಿ ಸದಾತನಮ್ ।**
**ತತ್ರೈವಾಶೇಷಸಂಸ್ಕಾರಾಃ ಸಂಚೀಯಂತೇ ಸದೈವ ಚ ॥ ೬ ॥**

ತ್ರಿಗುಣಾತ್ಮಕಂ=ಸತ್ವ-ರಜಸ್ಸು-ತಮಸ್ಸು ಈ ಗುಣತ್ರಯಾತ್ಮಕನಾದ, ಸದಾತನಂ=ಸಾರ್ವಕಾಲಿಕವಾದ ಅಂದರೆ ಅನಾದಿಕಾಲೀನವಾದ ಮನಃ= ಮನಸ್ಸು ಯಾವನ್ಮುಕ್ತಿ=ಮೋಕ್ಷವಾಗುವವರೆಗೂ ಅಸ್ತ್ಯೇವ=ಇದ್ದೇ ಇದೆ. ತತ್ರೈವ=ಆ ಮನಸ್ಸಿನಲ್ಲೇ ಅಶೇಷಸಂಸ್ಕಾರಾಃ=ಎಲ್ಲಾ ಸಂಸ್ಕಾರಗಳೂ ಸದೈವ= ಯಾವಾಗಲೂ ಸಂಚೀಯಂತೇ=ಸಂಚಯವಾಗುತ್ತವೆ.

ಭಾವಾರ್ಥ— ತಾರ್ಕಿಕರು, ಸಂಸ್ಕಾರವು ಆತ್ಮನ ಧರ್ಮ ಎನ್ನುತ್ತಾರೆ. ಆದರೆ ಅದು ಮನೋಧರ್ಮ. ಏಕೆಂದರೆ, ಸಂಸ್ಕಾರವು ಸತ್ವಾದಿಪ್ರಾಕೃತ ಗುಣಗಳಲ್ಲಿ ಇರುವ ಧರ್ಮ. ಆತ್ಮ ಪ್ರಾಕೃತಗುಣಾತ್ಮಕನಲ್ಲ. ಮನಸ್ಸು ತ್ರಿಗುಣಾತ್ಮಕ. ಆದ್ದರಿಂದ ಸಂಸ್ಕಾರ ಮನಸ್ಸಿನ ಧರ್ಮ, ಆತ್ಮಧರ್ಮವಲ್ಲ. ಜನ್ಮಾಂತರದ ಅನೇಕ ಸಂಸ್ಕಾರಗಳು ಮನಸ್ಸಿನಲ್ಲಿವೆ.

**ಸೂಕ್ಷ್ಮತ್ವೇನ ಲಯೇ ಸಚ್ಚ ಪ್ರಾಕೃತೈರುಪಚೀಯತೇ ।**
**ಸೃಷ್ಟಿಕಾಲೇ ಯದಾ ತನ್ನ ಕುತಃ ಸಂಸಾರಸಂಸ್ಥಿತಿಃ ॥ ೭ ॥**

ಆ ಮನಸ್ಸು ಲಯೇ=ಪ್ರಳಯಕಾಲದಲ್ಲಿ ಸಚ್ಚ=ಇದ್ದೇ ಇದೆ. ಆದರೆ ಸೃಷ್ಟಿಕಾಲೇ=ಸೃಷ್ಟಿಯ ಸಮಯದಲ್ಲಿ ಪ್ರಾಕೃತೈಃ=ಪ್ರಕೃತಿಯ ಅಂಶಗಳಿಂದ ಉಪಚೀಯತೇ=ಉಪಚಯಿಸಲ್ಪಡುತ್ತದೆ.

ಯದಾ=ಒಂದುವೇಳೆ ಪ್ರಳಯಕಾಲದಲ್ಲಿ ತನ್ನ=ಅದು ಸೂಕ್ಷ್ಮ ರೂಪದಲ್ಲೂ ಇರದಿದ್ದಲ್ಲಿ ಸಂಸಾರಸಂಸ್ಥಿತಿಃ=ಆತ್ಮನಿಗೆ ಸಂಸಾರವು ಇರುವುದು ಕುತಃ=ಹೇಗೆ ಸಾಧ್ಯ?

ಭಾವಾರ್ಥ— ಪ್ರಳಯಕಾಲದಲ್ಲಿ ಮನಸ್ಸು ಸೂಕ್ಷ್ಮರೂಪದಿಂದ ಇದೆ. ಮನಸ್ಸಿನ ಸಂಬಂಧವೇ ಇಲ್ಲದಿರುವುದು ಮೋಕ್ಷದಲ್ಲಿ ಮಾತ್ರ. ಆ ಸೂಕ್ಷ್ಮ ಮನಸ್ಸಿಗೆ 'ವೈಕಾರಿಕಾನ್ಮನೋ ಜಜ್ಞೇ' ಎಂದು ಭಾಗವತದಲ್ಲಿ ಹೇಳಿದಂತೆ ವೈಕಾರಿಕ ಅಹಂಕಾರದ ಸಂಬಂಧವಾಗಿ, 'ತೇಷಾಂ ಭೂತೈರುಪಚಯಃ'

ಎಂದಂತೆ ಪಂಚಭೂತಾಂಶಗಳಿಂದ ಉಪಚಯವಾಗುತ್ತದೆ. ಆಗ ಮನಸ್ಸಿನಲ್ಲಿ ಇದ್ದ ಸುಪ್ತಸಂಸ್ಕಾರಗಳು ಸ್ಮೃತಿಯನ್ನು ಉಂಟುಮಾಡುವ ಶಕ್ತಿಯನ್ನು ಪಡೆದುಕೊಳ್ಳುತ್ತವೆ.

**ಸಂಸ್ಕಾರೈರ್ಭಗವಾನೇವ ಸೃಷ್ಟ್ವಾ ನಾನಾವಿಧಂ ಜಗತ್ ।**
**ಸ್ವಪ್ನಕಾಲೇ ದರ್ಶಯತಿ ಭ್ರಾಂತಿರ್ಜಾಗ್ರತ್ವಮೇವ ಹಿ ॥ ೮ ॥**

ಭಗವಾನೇವ=ಪರಮಾತ್ಮನೇ ಸ್ವಪ್ನಕಾಲೇ=ಜೀವನ ಸ್ವಪ್ನಕಾಲದಲ್ಲಿ ಸಂಸ್ಕಾರೈಃ=ಜೀವಾತ್ಮನ ಮನಸ್ಸಿನಲ್ಲಿರುವ ಸಂಸ್ಕಾರಗಳಿಂದ ನಾನಾವಿಧಂ= ವಿಚಿತ್ರಾನೇಕವಿಧವಾದ ಜಗತ್=ಪ್ರಪಂಚವನ್ನು ಸೃಷ್ಟ್ವಾ=ಸೃಷ್ಟಿಮಾಡಿ ದರ್ಶಯತಿ=ಜೀವನಿಗೆ ತೋರಿಸುತ್ತಾನೆ.

ಸ್ವಪ್ನದಲ್ಲಿ ಜಾಗ್ರತ್ವಮೇವ=ಎಚ್ಚರಾವಸ್ಥೆಯಲ್ಲಿ ಅನುಭವಿಸಿರುವ ಪದಾರ್ಥಗಳ ಅಭೇದಜ್ಞಾನಮಾತ್ರವೇ ಭ್ರಾಂತಿಃ=ಭ್ರಾಂತಿ, ಪದಾರ್ಥಗಳ ಜ್ಞಾನ ಭ್ರಾಂತಿಯಲ್ಲ.

ಅಥವಾ ಜಾಗ್ರತ್ವಂ=ಬಾಹ್ಯಪ್ರಪಂಚದಲ್ಲಿ ಕಂಡ ಆನೆಯಂತೆ ಸ್ವಪ್ನದಲ್ಲಿ ಕಂಡ ಆನೆಯೂ ಎಲುಬು–ಚರ್ಮ–ಮಾಂಸಮಯವಾದುದು ಎಂಬ ತಿಳುವಳಿಕೆ ಭ್ರಾಂತಿಃ=ಭ್ರಾಂತಿಯು.

**ಭಾವಾರ್ಥ**— ಹೀಗೆ ಅನಾದಿಕಾಲದಲ್ಲಿ ಮನಸ್ಸಿನಲ್ಲಿ ಹುದುಗಿರುವ ಸಂಸ್ಕಾರಗಳಿಂದ ಜೀವರ ಪುಣ್ಯಪಾಪಗಳಿಗೆ ಅನುಗುಣವಾಗಿ ಅವನ ಸುಖಕ್ಕೋ ದುಃಖಕ್ಕೋ ಕಾರಣವಾದ ಸ್ವಾಪ್ನಪ್ರಪಂಚವನ್ನು ಭಗವಂತನೇ ಸೃಷ್ಟಿಮಾಡಿ ಜೀವನಿಗೆ ತೋರಿಸುತ್ತಾನೆ. ಆ ಪ್ರಪಂಚದ ವಸ್ತುಗಳೆಲ್ಲವೂ, ಆನೆ ಕುದುರೆಗಳ ಚಿತ್ರಗಳಂತೆ, ಸತ್ಯವೇ ಆಗಿವೆ. ಸುಳ್ಳಲ್ಲ. ಆದರೆ ಹೊರಪ್ರಪಂಚ ದಲ್ಲಿ ನೋಡಿದ ಆನೆಯೇ ಇದು ಅಥವಾ ಆ ಆನೆಯಂತೆ ಇದೂ ಚರ್ಮಮಾಂಸ ಮಯವಾಗಿದೆ, ಎಂದು ತಿಳಿಯುವುದು ಮಾತ್ರ ಭ್ರಾಂತಿ. ಸ್ವಪ್ನದಲ್ಲಿ ಕಂಡಮಾತ್ರಕ್ಕೆ ಎಲ್ಲವೂ ಭ್ರಾಂತಿ ಎಂದಾಗಲೀ ಸತ್ಯವೆಂದಾಗಲೀ ನಿರ್ಧರಿಸಬಾರದು. ಯಾವುದಕ್ಕೆ ಬಾಧವಿದೆಯೋ ಅದು ಮಾತ್ರ ಅಸತ್ಯ. ಬಾಹ್ಯತ್ವಕ್ಕೆ ಬಾಧ ಇದೆ. ಅದು ಅಸತ್ಯ. ವಾಸನಾಮಯವಸ್ತುಗಳಿಗೆ

ಬಾಧವಿಲ್ಲ. ಅವುಗಳು ಸತ್ಯ. ಇದು ಅನುವ್ಯಾಖ್ಯಾನದ ಹಿಶಬ್ದದಿಂದ ಸೂಚಿತ ವಾದ ವಿಷಯ.

**'ಅದೃಷ್ಟೇ ಚಾಶ್ರುತೇ ಭಾವೇ ನ ಭಾವ ಉಪಜಾಯತೇ ।**
**ಅದೃಷ್ಟಾದಶ್ರುತಾದ್ ಭಾವಾನ್ನ ಭಾವ ಉಪಜಾಯತೇ ।'**
**ಇತಿ ಶ್ರುತಿಪುರಾಣೋಕ್ತಿರನಾದಿತ್ವಾತ್ತು ಯುಜ್ಯತೇ ॥ ೯ ॥**

ಅದೃಷ್ಟೇ=ಪ್ರತ್ಯಕ್ಷವೂ ಆಗದ ಅಶ್ರುತೇ=ಕೇಳಿಯೂ ತಿಳಿಯದ ಭಾವೇ=ವಸ್ತುವಿನಲ್ಲಿ ಭಾವಃ=ಸಂಸ್ಕಾರವು ನ ಉಪಜಾಯತೇ= ಹುಟ್ಟುವುದಿಲ್ಲ.

''ಅದೃಷ್ಟಾತ್=ಕಾಣದ ಅಶ್ರುತಾತ್=ಕೇಳದ ಭಾವಾತ್=ವಸ್ತುವಿನಲ್ಲಿ ಭಾವಃ=ಸಂಸ್ಕಾರವು ನ ಉಪಜಾಯತೇ=ಹುಟ್ಟುವುದಿಲ್ಲ.'' ಇತಿ=ಹೀಗೆಂದು ಹೇಳುವ ಶ್ರುತಿ–ಪುರಾಣೋಕ್ತಿಸ್ತು=ಶ್ರುತಿ ಮತ್ತು ಪುರಾಣಗಳ ಉಕ್ತಿಯಾದರೂ ಅನಾದಿತ್ವಾತ್=ಸಂಸಾರವು ಅನಾದಿಯಾದುದರಿಂದ ಯುಜ್ಯತೇ=ಯುಕ್ತ ವಾಗುತ್ತದೆ.

**ಭಾವಾರ್ಥ**— ಸ್ವಪ್ನದಲ್ಲಿ ತೋರುವ ವಸ್ತುಗಳೆಲ್ಲವೂ ವಾಸನಾಮಯ ಗಳು ಎನ್ನುವುದಕ್ಕೆ ಬಾಧಕವನ್ನು ಹೇಳಿ ಇಲ್ಲಿ ಪರಿಹರಿಸಲಾಗಿದೆ. ನಮ್ಮ ಅನುಭವಕ್ಕೆ ಅಗೋಚರವಾದ ಸ್ವಶಿರಃಚ್ಛೇದಾದಿಗಳು ಸ್ವಪ್ನದಲ್ಲಿ ಕಾಣುತ್ತವೆ. ಅದರ ಅನುಭವ ಈ ಜನ್ಮದಲ್ಲಿ ಬರಲು ಸಾಧ್ಯವಿಲ್ಲ. ಅನುಭವ ಇಲ್ಲದೆ ಸಂಸ್ಕಾರ ಹುಟ್ಟುವುದಿಲ್ಲ. ಸಂಸ್ಕಾರವು ಇಲ್ಲದಿರುವುದರಿಂದ ಸಂಸ್ಕಾರಮಯ ವಾದ ಸ್ವಶಿರಃಚ್ಛೇದವು ಕಾಣುವುದು ಹೇಗೆ, ಎಂದು ಆಕ್ಷೇಪ. ಅದಕ್ಕೆ ಉತ್ತರ— ಜ್ಞಾನವೇ ಇಲ್ಲದೆ ಸಂಸ್ಕಾರವು ಹುಟ್ಟುವುದಿಲ್ಲ. ಕಂಡು–ಕೇಳಿ ಅರಿಯದ ವಸ್ತುಗಳ ಸಂಸ್ಕಾರವು ಹುಟ್ಟುವುದಿಲ್ಲ, ಎಂದು ಶ್ರುತಿ–ಪುರಾಣಗಳು ಹೇಳುತ್ತವೆ. ಆದ್ದರಿಂದ, ಜನ್ಮಾಂತರದಲ್ಲಿ ಅನುಭೂತವಾದ ಆ ಘಟನೆಗಳ ಸಂಸ್ಕಾರವು ಮನಸ್ಸಿನಲ್ಲಿದೆ. ಅದರ ಸಹಾಯದಿಂದ ಪರಮೇಶ್ವರನು ಅವುಗಳನ್ನು ನಿರ್ಮಿಸಿ ತೋರಿಸುತ್ತಾನೆ, ಎಂದೇ ಹೇಳಬೇಕಾಗುವುದು. ಅಥವಾ ಈ ಜನ್ಮದಲ್ಲಿ ಮತ್ತೊಬ್ಬರ ಮಾತಿನಿಂದ ಅದರ ಅನುಭವ ಬಂದು, ಸಂಸ್ಕಾರ ಮೂಡಿ ಅಂತಹ ಘಟನೆಗಳು ತೋರಬಹುದು.

ಆದರೂ, ಸ್ವಾಪ್ನವಸ್ತುಗಳೆಲ್ಲವೂ ಸಂಸ್ಕಾರಮಯ ಎಂದು ಹೇಳುವಂತಿಲ್ಲ. ಸ್ವಪ್ನದಲ್ಲಿ ಶಶವಿಷಾಣವೂ ತೋರುತ್ತದೆ. ಅದರ ಅನುಭವ ಯಾವ ಜನ್ಮದಲ್ಲಿಯೂ ಬರುವುದಿಲ್ಲ. ಈ ಜನ್ಮದಲ್ಲಿ ಅದರ ಭ್ರಾಂತಿಯೇ ಬರದವರಿಗೂ ಅದು ಸ್ವಪ್ನದಲ್ಲಿ ತೋರುತ್ತದೆ. ಅದು ಹೇಗೆ? ಅದಕ್ಕೆ ಸಮಾಧಾನ ಮುಂದಿನ ಅನುವ್ಯಾಖ್ಯಾನ.

**ಕದಾಚಿದ್ ದರ್ಶನಾಯೋಗ್ಯಂ ಯತ್ ತತ್ರಾಪಿ ವಿಭಾಗತಃ ।**
**ದೃಷ್ಟಂ ಸಮಾಧಿಕರಣಂ ದೃಶ್ಯತೇऽತ್ರ (ಚ) ಸ ಚ ಭ್ರಮಃ ॥ ೧೦ ॥**

ಕದಾಚಿತ್=ಕೆಲವೊಮ್ಮೆ ದರ್ಶನಾಯೋಗ್ಯಂ=ದರ್ಶನಕ್ಕೆ ಅಯೋಗ್ಯವಾದ ಶಶವಿಷಾಣಾದಿಗಳೂ (ಯತ್ ಸ್ವಪ್ನೇ ದೃಶ್ಯತೇ=ಏನು ಸ್ವಪ್ನದಲ್ಲಿ ಕಾಣುತ್ತವೋ) ತತ್ರಾಪಿ=ಅಲ್ಲೂ ವಿಭಾಗತಃ=ಪ್ರತ್ಯೇಕವಾಗಿ ದೃಷ್ಟಂ=ಶಶತ್ವ ಮತ್ತು ವಿಷಾಣಿತ್ವಗಳು ಕಾಣಲ್ಪಟ್ಟಿವೆ. ಅತ್ರ=ಸ್ವಪ್ನದಲ್ಲಿ ಯತ್=ಯಾವ ಸಮಾಧಿಕರಣತ್ವಂ=ಆ ಎರಡು ಧರ್ಮಗಳಿಗೆ ಸಾಮಾನಾಧಿಕರಣ್ಯವು ದೃಶ್ಯತೇ=ಕಾಣಲ್ಪಡುವುದೋ ಸಚ=ಅದೂ ಜಾಗ್ರತ್ವದಂತೆ ಭ್ರಮಃ=ಭ್ರಾಂತಿಯು.

**ಭಾವಾರ್ಥ—** ಕೆಲವೊಮ್ಮೆ ಯಾವ ಜನ್ಮಗಳಲ್ಲೂ ಅನುಭವಿಸಿದ ಶಶವಿಷಾಣಾದಿಗಳೂ ಸ್ವಪ್ನದಲ್ಲಿ ತೋರುತ್ತವೆ. ಅಂದರೆ, ಮೊಲದಲ್ಲಿ ಕೋಡು ತೋರುತ್ತದೆ. ಅಂದರೆ, ಶಶತ್ವಧರ್ಮ ಇರುವ ಮೊಲದಲ್ಲಿ ವಿಷಾಣಿತ್ವ ಧರ್ಮವು ತೋರುತ್ತದೆ. ಈ ಎರಡೂ ಧರ್ಮಗಳೂ ಪ್ರತ್ಯೇಕವಾಗಿ ದರ್ಶನ ಯೋಗ್ಯವಾಗಿವೆ. ಶಶತ್ವವನ್ನು ಶಶದಲ್ಲಿಯೂ ವಿಷಾಣಿತ್ವವನ್ನು ದನದಲ್ಲಿಯೂ ಕಾಣಬಹುದು. ಆದರೆ ಅವರೆಡೂ ಧರ್ಮಗಳು ಒಂದೇ ವಸ್ತುವಿನಲ್ಲಿ ಇರುವುದನ್ನು ನಾವು ನೋಡಿಲ್ಲ. ಸ್ವಪ್ನದಲ್ಲಿ ಅದು ಕಾಣುತ್ತದೆ. ಆದ್ದರಿಂದ ಅವೆರಡು ಧರ್ಮಗಳು ಒಂದೇ ಪ್ರಾಣಿಯಲ್ಲಿ (ಮೊಲದಲ್ಲಿ) ಇವೆ ಎಂಬ ಜ್ಞಾನ ಜಾಗ್ರತ್ವಜ್ಞಾನದಂತೆ ಭ್ರಮೆ ಎಂದೇ ಹೇಳಬೇಕಾಗುತ್ತದೆ.ಆ ಸಾಮಾನಾಧಿಕರಣ್ಯವು ವಾಸನಾಮಯವೂ ಅಲ್ಲ. ಆದ್ದರಿಂದ ಉಪಾದಾನವಿದ್ದು ಬಾಧವಿಲ್ಲದ ಸ್ವಾಪ್ನವಸ್ತುಗಳು ಮಾತ್ರ ಸತ್ಯವಾದವು. ಉಪಾದಾನವಿಲ್ಲದ ಸ್ವಾಪ್ನವಸ್ತುಗಳು ಅಸತ್ಯಗಳೇ ಆಗಿವೆ.

**ವಾಸನಾಮಾತ್ರಮೂಲತ್ವಾಜ್ಜಾಗ್ರದ್ವತ್ ಸ್ಪಷ್ಟತಾ ನಚ ॥ ೧೧ ॥**

ವಾಸನಾಮಾತ್ರಮೂಲತ್ವಾತ್=ಕೇವಲ ಸಂಸ್ಕಾರಮಾತ್ರವೇ ಉಪಾದಾನಕಾರಣವಾಗಿರುವುದರಿಂದಾಗಿ ಸ್ವಾಪ್ನವಸ್ತುಗಳಿಗೆ ಜಾಗ್ರದ್‌ವತ್= ಎಚ್ಚರದಲ್ಲಿ ಕಾಣುವ ವಸ್ತುಗಳಿಗೆ ಇರುವಂತೆ ಸ್ಪಷ್ಟತಾ=ಅರ್ಥಕ್ರಿಯಾಕಾರಿತ್ವವು ನ ಚ=ಇರುವುದಿಲ್ಲ.

**ಭಾವಾರ್ಥ**— ಸ್ವಾಪ್ನವಸ್ತುಗಳು ವಾಸನಾಮಯವಾಗಿವೆ, ಎನ್ನುವುದಕ್ಕೆ ಇಲ್ಲಿ ಸಮರ್ಥನೆಯನ್ನು ಕೊಡಲಾಗಿದೆ. ಸ್ವಾಪ್ನಕರಿತುರಗಾದಿಗಳು ಸರ್ವಥಾ ಅಸತ್ಯಗಳಲ್ಲ. ಏಕೆಂದರೆ ಅವುಗಳಿಗೆ ಬಾಧವಿಲ್ಲ. ಅವು ಅನಾದಿ–ನಿತ್ಯಗಳೂ ಅಲ್ಲ. ಹಾಗಿದ್ದಲ್ಲಿ ಸ್ವಪ್ನಕ್ಕಿಂತ ಮೊದಲೂ ಆಮೇಲೂ ಅವುಗಳು ತೋರಬೇಕಾಗುತ್ತವೆ. ಆದ್ದರಿಂದ ಮಿಂಚಿನಂತೆ ತತ್ಕಾಲದಲ್ಲಿ ಹುಟ್ಟಿ ನಾಶವಾಗುತ್ತವೆ. ಹುಟ್ಟಬೇಕಾದರೆ ಉಪಾದಾನವಿರಲೇಬೇಕು. ಬಾಹ್ಯವಾದ ಪಂಚಭೂತಗಳು ಅವುಗಳಿಗೆ ಉಪಾದಾನವಾಗಿದ್ದಲ್ಲಿ ರಾಜಬೀದಿಯ ಆನೆಯ ಮೇಲೆ ಸವಾರಿ ಮಾಡುವಂತೆ ಅದರಲ್ಲೂ ಸವಾರಿ ಮಾಡಬಹುದಾದ ಯೋಗ್ಯತೆಯು ಅದರಲ್ಲಿ ಇರಬೇಕಾದೀತು. ಅಂತಹ 'ಅರ್ಥಕ್ರಿಯಾ ಕಾರಿತ್ವವು' ಅದರಲ್ಲಿ ಇಲ್ಲ. ಆದ್ದರಿಂದ ಅದಕ್ಕೆ ಸಂಸ್ಕಾರವೇ ಉಪಾದಾನ. ಆನೆಯ ಚಿತ್ರವು ಬಣ್ಣದಿಂದ ತಯಾರಾಗಿರುವಂತೆ ಈ ಆನೆಯೂ ಸಂಸ್ಕಾರದಿಂದಾಗಿದೆ.

ಸ್ವಾಪ್ನವಸ್ತುಗಳನ್ನು ಪರಮಾತ್ಮನೇ ಸೃಷ್ಟಿಮಾಡುತ್ತಾನೆ, ಎನ್ನುವುದನ್ನು 'ಯ ಏಷ ಸುಪ್ತೇಷು ಜಾಗರ್ತಿ ಕಾಮಂಕಾಮಂ ಪುರುಷೋ ನಿರ್ಮಿ-ಮಾಣಃ ॥' ಎಂಬ ಕಾಠಕಶ್ರುತಿಯು ತಿಳಿಸುತ್ತದೆ.

ಈ ಅನುವ್ಯಾಖ್ಯಾನಶ್ಲೋಕಗಳು 'ಸಂಧ್ಯೇ ಸೃಷ್ಟಿರಾಹ ಹಿ' 'ನಿರ್ಮಾ-ತಾರಂ ಚೈಕೇ ಪುತ್ರಾದಯಶ್ಚ' 'ಮಾಯಾಮಾತ್ರಂ ತು ಕಾರ್ತ್ಸ್ನ್ಯೇನಾನಭಿವ್ಯಕ್ತ ಸ್ವರೂಪತ್ವಾತ್' ಈ ಮೂರು ಸೂತ್ರಗಳ ಅಭಿಪ್ರಾಯವನ್ನು ತಿಳಿಸುತ್ತವೆ.

**ಪರಮತ ವಿಮರ್ಶೆ**

ಅದ್ವೈತಭಾಷ್ಯದಂತೆ ಈ ಅಧಿಕರಣದ ಮೊದಲ ಎರಡು ಸೂತ್ರಗಳಲ್ಲಿ ಸ್ವಾಪ್ನವಸ್ತುಗಳು ಬ್ರಹ್ಮನಿಂದ ಸೃಷ್ಟಿಗೊಂಡಿವೆಯಾದ್ದರಿಂದ ಬಾಹ್ಯವಸ್ತು

ಗಳಂತೆಯೇ ಸತ್ಯವಾಗಿವೆ, ಎಂದು ಪೂರ್ವಪಕ್ಷವನ್ನು ಮಾಡಲಾಗಿದೆ. ಮಾಯಾಮಾತ್ರಂ ತು, ಎಂಬ ಮೂರನೆಯದು ಸಿದ್ಧಾಂತಸೂತ್ರ. ಆ ಸೂತ್ರದಲ್ಲಿ ಸ್ವಾಪ್ನವಸ್ತುಗಳು ಮಾಯಾಮಯ ಎನ್ನಲಾಗಿದೆ. ಅದಕ್ಕೆ ಸೂತ್ರದಲ್ಲಿ ಕೊಟ್ಟಿರುವ ಕಾರಣ 'ಕಾರ್ತ್ಸ್ನ್ಯೇನ–ಅನಭಿವ್ಯಕ್ತಸ್ವರೂಪತ್ವಾತ್' ಎಂದು. ದೇಶ–ಕಾಲ ನಿಮಿತ್ತಗಳಿದ್ದಲ್ಲಿ ಸ್ವಾಪ್ನವಸ್ತುಗಳು ಸತ್ಯವಾಗುತ್ತಿದ್ದವು. ಅವುಗಳಿಗೆ ಉಚಿತದೇಶಗಳಿಲ್ಲ. ರಥವನ್ನು ಸ್ವಪ್ನದಲ್ಲಿ ಕಂಡರೆ ಅದಕ್ಕೆ ಬೇಕಾದ ಪ್ರದೇಶ, ಮಾರ್ಗ, ಕುದುರೆಗಳು ಇಲ್ಲ. ಕಾಲಸಂಪತ್ತಿಯೂ ಇಲ್ಲ. ರಾತ್ರಿ ಮಲಗಿದವನು ಬೆಳಗಿನ ಕಾಲದ ಕನಸನ್ನು ಕಾಣುತ್ತಾನೆ. ಸ್ವಾಪ್ನವಸ್ತುಗಳ ಉತ್ಪತ್ತಿಗೆ ಬೇಕಾಗಿರುವ ಕಾರಣಗಳೂ ಇಲ್ಲ. ಆದ್ದರಿಂದ ಅವುಗಳು ಅಸತ್ಯಗಳು. ಅಸತ್ಯಗಳೆಂದರೆ ಶಶವಿಷಾಣದಂತಲ್ಲ. ಶುಭಾಶುಭಸೂಚಕಗಳಾಗುವುದರಿಂದ ಅನಿರ್ವಚನೀಯವಸ್ತುಗಳು. ಸ್ವಾಪ್ನವಸ್ತುಗಳು ಸ್ವಪ್ನಕಾಣುವ ವ್ಯಕ್ತಿಗಿಂತ ಭಿನ್ನವಾದರೆ ಇತರರಿಗೂ ಕಾಣಬೇಕಾಗುವುದು. ಅಭಿನ್ನಗಳಾದರೆ ಭೇದಾನುಭವವಿರೋಧ. ಭಿನ್ನಾಭಿನ್ನಗಳೆನ್ನುವುದು ವಿರುದ್ಧ. ಆದ್ದರಿಂದ ಆ ವಸ್ತುಗಳು ಅನಿರ್ವಚನೀಯಗಳು. ಇದನ್ನು ಮುಂದಿನ ಅನುವ್ಯಾಖ್ಯಾನದಲ್ಲಿ ನಿರಾಕರಿಸಲಾಗಿದೆ.

**ಭೇದೋಽಭೇದೋಽಥವಾ ದ್ವಂದ್ವಮಿತಿ ಪ್ರಶ್ನೋ ನ ಯುಜ್ಯತೇ ।**
**ದ್ರಷ್ಟುಃ ಸ್ವಪ್ನಸ್ಯ ದೃಷ್ಟತ್ವಾದ್ ಭೇದಸ್ಯೈವಾಖಿಲೈರ್ಜನೈಃ ॥ ೧೨ ॥**

ದ್ರಷ್ಟುಃ=ಸ್ವಪ್ನಕಾಣುವವನಿಗಿಂತ ಅಖಿಲೈಃ ಜನೈಃ=ಎಲ್ಲರಿಂದಲೂ ಭೇದೇನ=ಭಿನ್ನವಾಗಿಯೇ ಸ್ವಪ್ನಸ್ಯ=ಸ್ವಾಪ್ನವಸ್ತುವಿಗೆ ದೃಷ್ಟತ್ವಾತ್=ದರ್ಶನವಿರುವುದರಿಂದ ಸ್ವಪ್ನಸ್ಯ ದ್ರಷ್ಟುಃ=ಸ್ವಪ್ನ ಕಾಣುವವನಿಗಿಂತ ಸ್ವಪ್ನಸ್ಯ= ಸ್ವಾಪ್ನವಸ್ತುವಿಗೆ ಭೇದಃ=ಭೇದವೋ ಅಭೇದಃ=ಅಭೇದವೋ ಅಥವಾ= ಅಥವಾ ದ್ವಂದ್ವಂ=ಭೇದಾಭೇದವೋ ಇತಿ ಪ್ರಶ್ನಃ=ಈ ಪ್ರಶ್ನೆಯು ನ ಯುಜ್ಯತೇ=ಯುಕ್ತವಲ್ಲ.

**ಭಾವಾರ್ಥ**— ಸ್ವಾಪ್ನವಸ್ತುಗಳು ಕನಸು ಕಾಣುವವರಿಗೆಲ್ಲ ತಮಗಿಂತ ಭಿನ್ನಗಳಾಗಿಯೇ ಕಾಣುತ್ತವೆ. ಅದಕ್ಕೆ ಬಾಧವೂ ಇಲ್ಲ. ಆದ್ದರಿಂದ ಭೇದವು ನಿಶ್ಚಿತವಾಗಿದೆ. ಅದರಿಂದಾಗಿ ಸಂದೇಹವೇ ಇಲ್ಲ. ಪ್ರಶ್ನೆ ಮಾಡಬೇಕಾದರೆ

ಸಂದೇಹ ಇರಬೇಕು. ಪ್ರಕೃತ ಸಂದೇಹವೇ ಇಲ್ಲದಿರುವುದರಿಂದ ಪ್ರಶ್ನೆಯೇ ಸರಿಯಲ್ಲ.

**ಪ್ರಶ್ನದೋಷಗಳು**

**ಪ್ರಶ್ನದೋಷಾ ಹಿ ಚತ್ವಾರಃ ಸ್ವವ್ಯಾಹತಿರಸಂಗತಿಃ ।**
**ಸಿದ್ಧಾರ್ಥತಾ ಚ ವೈಫಲ್ಯಂ ನ ತೈಃ ಸ್ಯಾತ್ ತತ್ವನಿರ್ಣಯಃ ॥ ೧೩ ॥**

ಪ್ರಶ್ನದೋಷಾ ಹಿ=ಪ್ರಶ್ನೆಯ ದೋಷಗಳಾದರೋ ಚತ್ವಾರಃ=ನಾಲ್ಕು. ಸ್ವವ್ಯಾಹತಿಃ=ತನ್ನ ಮಾತಿನಲ್ಲೇ ವಿರೋಧ, ಅಸಂಗತಿಃ=ಸಂದರ್ಭಾ-ನನುಗುಣತ್ವ, ಸಿದ್ಧಾರ್ಥತಾ=ವಿಷಯವು ನಿರ್ಧಾರಿತವಾಗಿರುವುದು, ವೈಫಲ್ಯಂ=ನಿಷ್ಫಲತೆ ಇತಿ=ಹೀಗೆ. ತೈಃ=ಈ ದೋಷಗಳಿರುವ ಪ್ರಶ್ನೆಗಳಿಂದ ತತ್ವನಿರ್ಣಯಃ= ತತ್ವನಿರ್ಧಾರವು ನ ಸ್ಯಾತ್=ಆಗುವುದಿಲ್ಲ.

ತೈಃ=ಸ್ವವ್ಯಾಹತ್ಯಾದಿ ಪ್ರಶ್ನದೋಷಗಳಿಂದ ತತ್ವನಿರ್ಣಯಃ=ತತ್ವದ ನಿಶ್ಚಯವು ನ ಸ್ಯಾತ್=ಆಗುವುದಿಲ್ಲ. ಆದ್ದರಿಂದ ವಾದಕಥೆಯಲ್ಲೂ ಈ ನಿಗ್ರಹಸ್ಥಾನವು ದೋಷವಾಗುತ್ತದೆ.

**ಭಾವಾರ್ಥ**—ಪ್ರಶ್ನೆಗೆ ನಾಲ್ಕು ದೋಷಗಳು. 1.ಸ್ವವ್ಯಾಹತಿ—ಪ್ರಶ್ನೆ ಮಾಡಿರುವ ವಾಕ್ಯದಲ್ಲಿರುವ ಒಂದು ಪದದ ಅರ್ಥಕ್ಕೂ ಇನ್ನೊಂದು ಪದ ಅರ್ಥಕ್ಕೂ ಪರಸ್ಪರ ವಿರೋಧ. ಉದಾಹರಣೆಗೆ— ವಂಧ್ಯಾ ಪುತ್ರವತೀ ನ ವಾ? ಬಂಜೆಗೆ ಮಕ್ಕಳಿವೆಯೋ ಇಲ್ಲವೋ? ಎನ್ನುವ ಪ್ರಶ್ನೆ.

2. ಅಸಂಗತಿ—ಪ್ರಕೃತ ವಿಷಯಕ್ಕೆ ಸಂಬಂಧ ಪಡೆಯದಿರುವುದು. ಉದಾಹರಣೆಗೆ—ಈಶ್ವರನಿಗೆ ಸುಖವಿದೆ, ಎಂದು ಹೇಳಿದಾಗ 'ಜಗತ್ತು ಕ್ಷಣಿಕ ಎನ್ನಲು ಪ್ರತ್ಯಕ್ಷವು ಪ್ರಮಾಣವೋ, ಅನುಮಾನವೋ?' ಎಂದು ಪ್ರಶ್ನಿಸು ವುದು ಅಸಂಗತ.

ಸಿದ್ಧಾರ್ಥತಾ—ಕೋತಿಗೆ ಬಾಲವಿದೆ ಎನ್ನುವುದು ಗೊತ್ತಿದ್ದೂ 'ಕೋತಿಗೆ ಬಾಲ ಇದೆಯೋ, ಇಲ್ಲವೋ' ಎಂಬ ಪ್ರಶ್ನೆ.

ವೈಫಲ್ಯಂ–ವ್ಯರ್ಥತೆ. ಪ್ರಯೋಜನವಿಲ್ಲದ ಪ್ರಶ್ನೆ. ಉದಾಹರಣೆಗೆ—

ಕಾಗೆಗೆ ಎಂಟು ಹಲ್ಲುಗಳೋ ಹತ್ತೊ? ಎನ್ನುವ ಪ್ರಶ್ನೆ. ಎಷ್ಟು ಹಲ್ಲುಗಳಾದರೂ ಅದನ್ನು ತಿಳಿಯುವುದರಿಂದ ಯಾವ ಪ್ರಯೋಜನವೂ ಇಲ್ಲ.

ಭಾವಾರ್ಥ— ಸ್ವಾಪ್ನವಸ್ತುಗಳು ಸ್ವಪ್ನಕಾಣುವವರಿಗಿಂತ ಭಿನ್ನಗಳಾಗಿ ನಿಶ್ಚಿತವಾಗಿರುವುದರಿಂದ ಅವು ಭಿನ್ನಗಳೋ ಅಭಿನ್ನಗಳೋ ಎನ್ನುವ ಪ್ರಶ್ನೆ ಸರಿಯಲ್ಲ ಎನ್ನಲಾಗಿದೆ. ಸರಿಯಲ್ಲ ಎಂದರೇನು? ಹುಟ್ಟುವುದಿಲ್ಲ ಎಂದು ಅರ್ಥವೋ? ಅಂತಹ ಪ್ರಶ್ನೆಯನ್ನು ಪ್ರತಿವಾದಿಯು ಕೇಳುತ್ತಿರುವುದರಿಂದ ಹುಟ್ಟುವುದೇ ಇಲ್ಲ, ಎನ್ನುವುದು ಸರಿಯಲ್ಲ. ಕಾರಣವಿಲ್ಲದೆ ಹುಟ್ಟಿದೆ, ಎನ್ನುವುದೂ ಯುಕ್ತವಲ್ಲ. ಹುಟ್ಟಿದ ಮೇಲೆ ಕಾರಣವಿರಲೇಬೇಕು. ಆದ್ದರಿಂದ 'ಪ್ರಶ್ನೋ ನ ಯುಜ್ಯತೇ' ಎಂದರೆ ಏನರ್ಥ? ಈ ಆಕ್ಷೇಪಕ್ಕೆ ಸಮಾಧಾನ ಇಲ್ಲಿದೆ.

ಸ್ವವ್ಯಾಹತ್ಯಾದಿಗಳು ವಾದದಲ್ಲಿ ನಿಗ್ರಹಸ್ಥಾನಗಳೆಂದು ನಿರ್ಣಯಿಸಲ್ಪಟ್ಟಿವೆ. 'ಸಿದ್ಧಾರ್ಥತಾ' ಎನ್ನುವುದೂ ಪ್ರಶ್ನದೋಷದಲ್ಲಿ ಸೇರಿದೆ. ಅಂದ ಮೇಲೆ ಸರ್ವಾನುಭವ ಸಿದ್ಧವಾದ ವಿಷಯದಲ್ಲಿ ಪ್ರಶ್ನೆಯನ್ನು ಕೇಳುವುದು ಅನುಚಿತ. ಅನುಚಿತ ಎಂದರೆ ಸಹಜವಾಗಿ ಇರಬೇಕಾದ ಕಾರಣದಿಂದ ಈ ಪ್ರಶ್ನೆ ಹುಟ್ಟಿಲ್ಲ ಎಂದರ್ಥ. ಭಯಕ್ಕೆ ನಿಜವಾದ ಸರ್ಪದರ್ಶನವು ಕಾರಣ. ಆದರೆ, ಕೆಲವೊಮ್ಮೆ ಸರ್ಪದ ಭ್ರಮೆಯಿಂದಲೂ ಭಯವುಂಟಾಗುತ್ತದೆ. ಅದರಂತೆ ಸಂದೇಹವು ಪ್ರಶ್ನೆಗೆ ಕಾರಣ. ಕೆಲವೊಮ್ಮೆ ಭ್ರಾಂತಿರೂಪವಾದ ಸಮಾನ ಧರ್ಮದರ್ಶನದಿಂದ ಹಾಗೂ ಸಂದೇಹದ ಎರಡು ಕೋಟಿಗಳಲ್ಲಿ ಒಂದು ಕೋಟಿಯ ನಿರ್ಧಾರವಾಗಿದ್ದರೂ ನಿರ್ಧಾರವಾಗಿಲ್ಲ ಎಂಬ ಭ್ರಮೆಯಿಂದ ಪ್ರಶ್ನೆ ಬರಬಹುದು. ಅಂತಹ ಪ್ರಶ್ನೆಗೆ ಉತ್ತರವನ್ನು ಕೊಡುವುದು ವ್ಯರ್ಥ. ಗೊತ್ತಿದ್ದೂ ಪ್ರಶ್ನೆ ಮಾಡುವವನಿಗೆ ಉತ್ತರವನ್ನು ಕೊಟ್ಟರೂ ಅವನ ಸಂದೇಹವು ಪರಿಹಾರವಾಗುವುದಿಲ್ಲ, ಮತ್ತೆ ಅದೇ ಪ್ರಶ್ನೆಯನ್ನು ಮಾಡುತ್ತಾನೆ. ಆದ್ದರಿಂದ ಅವನು ವಾದಕ್ಕೆ ಅನರ್ಹನಾಗುತ್ತಾನೆ.

**ತತ್ವನಿರ್ಣಯವೈಲೋಮ್ಯಂ ಸ್ಯಾದ್ ವಾದೇಽಪಿ ಹಿ ನಿಗ್ರಹಃ ।**
**ಉದ್ಭಾವನೀಯಮೇವ ಸ್ಯಾನ್ನ ಕಥಾವಸಿತಿರ್ಭವೇತ್ ।**
**ವಿಜಗೀಷುಕಥಾಯಾಂ ತು ಕಥಾವಸಿತಿಕಾರಣಮ್ ॥ ೧೪ ॥**

ವಾದೇಽಪಿ=ವಾದಕಥೆಯಲ್ಲೂ ತತ್ವನಿರ್ಣಯ ವೈಲೊಮ್ಯಂ= ವಾದದ ಉದ್ದೇಶವಾದ ತತ್ವನಿರ್ಣಯಕ್ಕೆ ವಿರುದ್ಧವಾದುದು ನಿಗ್ರಹಃ=ನಿಗ್ರಹಸ್ಥಾನವು ಸ್ಯಾದೇವ=ಆಗಿಯೇ ತೀರುತ್ತದೆ.

ಭಾವಾರ್ಥ—ಗ್ರಂಥವು ಶಿಷ್ಯರ ಜ್ಞಾನೋದ್ದೇಶಕವಾದ ಕಾರಣ ವಾದಕಥಾರೂಪವಾದುದು. ವಾದದಲ್ಲಿ ನಿಗ್ರಹಸ್ಥಾನಗಳನ್ನು ಹೇಳಬಾರದು. ಹೀಗಿದ್ದಮೇಲೆ 'ಸಿದ್ಧಾರ್ಥತಾ' ಎಂಬ ಪ್ರಶ್ನದೋಷವನ್ನು ಹೇಳಿರುವುದು ಸರಿಯಲ್ಲ, ಎನ್ನುವ ಆಕ್ಷೇಪಕ್ಕೆ ಹೀಗೆ ಸಮಾಧಾನ–ವಾದದಲ್ಲಿ ಕೆಲವು ನಿಗ್ರಹಸ್ಥಾನಗಳನ್ನು ಹೇಳಲಾರದು. ವಿಕ್ಷೇಪ (ಕುಂಟು ನೆಪ ಹೇಳಿ ವಾದವನ್ನು ಮುಂದೂಡುವುದು, ವಿಕ್ಷೇಪ) ಅರ್ಥಾಂತರ–ಅಜ್ಞಾತಾರ್ಥ–ಪ್ರತಿಜ್ಞಾಹಾನಿ–ಪ್ರತಿಜ್ಞಾಸಂನ್ಯಾಸ–ನಿರರ್ಥಕ–ಅಪಾರ್ಥಕ– ಈ ಏಳು ನಿಗ್ರಹಸ್ಥಾನಗಳು ವಾದಿಯಲ್ಲಿರುವ ಅಜ್ಞಾನವನ್ನು ಮುಚ್ಚಲು ಬೇಕಾದ ದೋಷಗಳು. ಇವುಗಳನ್ನು ವಾದದಲ್ಲಿ ಹೇಳಬಾರದು. ವಿಜಯಕ್ಕಾಗಿ ಜಲ್ಪ–ವಿತಂಡಾಗಳಲ್ಲಿ ಮಾತ್ರ ಹೇಳಬೇಕು. ವಾದದ ಉದ್ದೇಶ ತತ್ವನಿರ್ಣಯವಾಗಿರುವುದರಿಂದ ಜಿಜ್ಞಾಸುವಿಗೆ ಅಜ್ಞಾನವನ್ನು ಮುಚ್ಚಿಡುವ ಪ್ರಸಂಗ ಅಲ್ಲಿ ಬರುವುದಿಲ್ಲ.

ಇನ್ನು ಕೆಲವು ನಿಗ್ರಹಸ್ಥಾನಗಳು ವಾದದಲ್ಲಿ ಬರುವ ಸಾಧ್ಯತೆಗಳಿದ್ದರೂ ಆ ನಿಗ್ರಹಗಳು ಪರಾಜಯಕ್ಕೆ ಕಾರಣವಾದುದರಿಂದ, ವಾದದಲ್ಲಿ ಜಯಪರಾಜಯಗಳು ಇಲ್ಲದಿರುವುದರಿಂದ ಅವುಗಳನ್ನು ಹೇಳಬಾರದು. ಉದಾಹರಣೆಗೆ, ಅನನುಭಾಷಣಾದಿಗಳು. ಶಿಷ್ಯನು ಏನೂ ಹೇಳದೆ ಬಾಯಿಮುಚ್ಚುವ ಸ್ಥಿತಿಗೆ ಬಂದರೂ ಮತ್ತೆ ಸ್ವಲ್ಪಹೊತ್ತಿನ ಬಳಿಕ ಉತ್ತರವನ್ನು ಕೊಟ್ಟು ವಾದವನ್ನು ಮುಂದುವರಿಸಬಹುದು.

ಇನ್ನು ಕೆಲವು ದೋಷಗಳನ್ನು ವಾದದಲ್ಲೂ ಹೇಳಬಹುದು. ಉದಾಹರಣೆಗೆ ,ಪ್ರಕೃತ ಪ್ರಶ್ನದೋಷ. ಈ ದೋಷವನ್ನು ಹೇಳುವುದರಿಂದ ವಾದಕಥೆಯು ಅಲ್ಲಿಗೇ ನಿಲ್ಲುವುದಿಲ್ಲ. ಆದರೂ, ಈ ದೋಷ ತತ್ತ್ವನಿರ್ಣಯಕ್ಕೆ ವಿರೋಧಿಯಾದುದರಿಂದ ಆ ದೋಷವನ್ನು ವಾದಿಯು ಪರಿಹರಿಸಿಕೊಳ್ಳಬೇಕು. ವಾದಪರ್ಯವಸಾನವಾಗುವುದು ವಾದಿ–ಪ್ರತಿವಾದಿಗಳಲ್ಲಿ ಒಬ್ಬರು ತಮ್ಮ ಪಕ್ಷಕ್ಕೆ ಬಂದ ದೋಷವನ್ನು ಪರಿಹರಿಸಿಕೊಳ್ಳದೆ

ಸಾಧಕವನ್ನೂ ಹೇಳದೆ ಹೋದರೆ ಮಾತ್ರ. ಆದ್ದರಿಂದ ಪ್ರಕೃತ ಪ್ರಶ್ನದೋಷ ವನ್ನು ಹೇಳಿರುವುದು ಉಚಿತವೇ ಆಗಿದೆ.

**ಪರಿಹಾರೇऽಪಿ ಸಿದ್ಧತ್ವಂ ದೂಷಣಂ ಪ್ರತಿವಾದಿನಃ ।**
**ಪ್ರತಿಜ್ಞಾಯಾಂ ತದನ್ಯಸ್ಯ ಸಿದ್ಧತ್ತೈವ ಹಿ ಸಾಧಿ(ಧ)ಕಾ ॥ ೧೫ ॥**

ಪರಿಹಾರೇऽಪಿ=ಪ್ರಶ್ನೆಯಂತೆ ಉತ್ತರದಲ್ಲೂ ಪ್ರತಿಜ್ಞಾಯಾಂ= ಪ್ರತಿಜ್ಞಾವಾಕ್ಯದಲ್ಲಿ ಪ್ರತಿವಾದಿನಃ=ಪ್ರತಿವಾದಿಗೆ ಸಿದ್ಧತ್ವಂ=ಗೊತ್ತಿರುವುದು ದೂಷಣಂ=ದೋಷವು.

ತದನ್ಯಸ್ಯ=ಪ್ರತಿಜ್ಞಾತಾರ್ಥಕ್ಕಿಂತ ಭಿನ್ನವಾದ ಹೇತ್ವಾದಿಗಳಿಗೆ ಸಿದ್ಧತ್ತೈವ= ಸಿದ್ಧವಾಗಿರುವಿಕೆಯೇ ಸಾಧಿಕಾ=ಅರ್ಥಸಾಧಕವಾಗುತ್ತದೆ.

ಭಾವಾರ್ಥ— ಸಿದ್ಧಾರ್ಥತಾ ಎನ್ನುವುದು ಪ್ರಶ್ನದೋಷವಾಗದಿದ್ದಲ್ಲಿ ಬಾಧಕವನ್ನು ಇಲ್ಲಿ ಹೇಳಲಾಗಿದೆ. ಪ್ರಶ್ನೆಗೆ ಸಿದ್ಧಾರ್ಥತಾದೋಷವಾಗದಿದ್ದರೆ ಉತ್ತರಕ್ಕೂ ಅದು ದೋಷವಾಗಬಾರದು. ಪ್ರತಿವಾದಿಯ ಪ್ರಶ್ನೆಗೆ ವಾದಿಯು ಉತ್ತರವನ್ನು ಹೇಳುತ್ತಾನೆ. ಆ ಉತ್ತರವು ಅನುಮಾನರೂಪ ವಾಗಿದ್ದು ಅದರ ಪ್ರತಿಜ್ಞಾವಾಕ್ಯದ ಅರ್ಥವು ಪ್ರತಿವಾದಿಗೆ ಸಿದ್ಧವಾಗಿದ್ದರೆ ಸಿದ್ಧಸಾಧನತಾ ದೋಷ. ಇದು ದೋಷವೆಂದು ಸರ್ವಸಮ್ಮತ. ಅಂದಮೇಲೆ ಸಿದ್ಧಾರ್ಥದಲ್ಲಿ ಪ್ರಶ್ನೆಯೂ ದೋಷವೆ. ಇಷ್ಟೇ ವ್ಯತ್ಯಾಸ–ಪ್ರಶ್ನೆ ಮಾಡುವವನಿಗೆ ಆ ವಿಷಯದಲ್ಲಿ ಸಂದೇಹವಿರಬೇಕು, ನಿರ್ಧಾರ ವಿರಬಾರದು. ನಿರ್ಧಾರವಿದ್ದರೆ ಸಿದ್ಧಾರ್ಥತಾದೋಷ. ಪ್ರಶ್ನೆಗೆ ಉತ್ತರವಾಗಿ ಪ್ರತಿಜ್ಞೆ ಮಾಡುವವನಿಗೆ ಪ್ರತಿಜ್ಞಾರ್ಥವು ಸಿದ್ಧವಾದರೆ ದೋಷವಲ್ಲ. ಆದರೆ, ಅದನ್ನು ಕೇಳುವವನಿಗೆ ಅದು ಸಿದ್ಧವಾಗಿರಬಾರದು. ಸಿದ್ಧವಾಗಿದ್ದರೆ ಸಿದ್ಧಸಾಧನತಾದೋಷ.

ಪ್ರತಿವಾದಿಗೆ ತಿಳಿಯದ ವಿಷಯವನ್ನು ತಿಳಿಸುವುದಕ್ಕಾಗಿ ವಾದಿಯು ಪ್ರತಿಜ್ಞೆಯನ್ನು ಮಾಡುತ್ತಾನೆ. ಅವನು ಪ್ರತಿಜ್ಞೆ ಮಾಡಿದ ವಿಷಯವನ್ನು ಪ್ರತಿವಾದಿಯೂ ಒಪ್ಪಿಕೊಂಡಿದ್ದರೆ ಸಿದ್ಧಸಾಧನತಾದೋಷ. ಅದರಂತೆ ಪ್ರಶ್ನೆಗೆ ಜಿಜ್ಞಾಸೆಯೇ ಮೂಲ. ಜಿಜ್ಞಾಸೆ ಎಂದರೆ ತಿಳಿಯುವ ಕುತೂಹಲ. ಮೊದಲೇ

ತಿಳಿದಿರುವ ವಿಷಯದಲ್ಲಿ ಜಿಜ್ಞಾಸೆಯೇ ಬರುವುದಿಲ್ಲ. ಅಂದಮೇಲೆ ಪ್ರಶ್ನೆಯೂ ಸರಿಯಲ್ಲ.

ಪ್ರತಿಜ್ಞೆಯಲ್ಲಿ ಮಾತ್ರ ಸಿದ್ಧಸಾಧನತಾದೋಷ. ಪ್ರತಿಜ್ಞೆಯಲ್ಲಿ ಹೇಳಿರುವ ವಿಷಯವನ್ನು ಸಾಧಿಸಲು ಹೇಳುವ ಹೇತ್ವಾದಿವಾಕ್ಯಗಳಿಗೆ ಸಿದ್ಧಾರ್ಥತಾ ದೋಷವಲ್ಲ. ಅದಕ್ಕಾಗಿ, ಅನುವ್ಯಾಖ್ಯಾನದಲ್ಲಿ 'ಪ್ರತಿಜ್ಞಾಯಾಂ' ಎನ್ನಲಾಗಿದೆ. ಉದಾಹರಣೆಗೆ—ಪರ್ವತದಲ್ಲಿ ವಹ್ನಿಯು ಸಿದ್ಧವಾಗದಿರುವಾಗ 'ಪರ್ವತೋ ವಹ್ನಿಮಾನ್' ಎಂದು ಪ್ರತಿಜ್ಞಾವಾಕ್ಯವನ್ನು ಪ್ರಯೋಗಿಸಲಾಗುತ್ತದೆ. ವಹ್ನಿಯನ್ನು ಸಾಧಿಸುವುದಕ್ಕಾಗಿ 'ಧೂಮಾತ್' ಎಂಬ ಹೇತುವಾಕ್ಯವನ್ನು ಹೇಳಬೇಕು. ಈ ಹೇತುವು ವಾದಿ-ಪ್ರತಿವಾದಿಗಳಿಗೆ ಸಿದ್ಧವಾಗಿರಬೇಕು. ಅದಕ್ಕೆ ಸಿದ್ಧಾರ್ಥತಾ ದೋಷವಲ್ಲ.

### ಆಶ್ರಯಾಸಿದ್ಧಿಯು ದೋಷವಲ್ಲ

**ಆಶ್ರಯವ್ಯಾಶ್ರಯಾಸಿದ್ಧೀ ಸಾಧ್ಯಾಸಿದ್ಧಿಶ್ಚ ದೂಷಣಮ್ ।**
**ಕೇಷಾಂಚಿನ್ನ ಚ ತೇ ದೋಷಾ ವ್ಯಾಪ್ತೌ ಸತ್ಯಾಂ ಕಥಂಚನ ॥ ೧೬ ॥**

ಕೇಷಾಂಚಿತ್=ಕೆಲವರಿಗೆ ಅಂದರೆ, ನೈಯಾಯಿಕರಿಗೆ ಆಶ್ರಯ-ವ್ಯಾಶ್ರಯಾಸಿದ್ಧೀ=ಆಶ್ರಯಾಸಿದ್ಧಿ ಮತ್ತು ವ್ಯಧಿಕರಣಾಸಿದ್ಧಿಯು ಸಾಧ್ಯಾ-ಸಿದ್ಧಿಶ್ಚ=ಸಾಧ್ಯಧರ್ಮದ ಅಸಿದ್ಧಿಯೂ ದೂಷಣಮ್=ದೋಷವು. ಆದರೆ, ವ್ಯಾಪ್ತೌ ಸತ್ಯಾಂ=ವ್ಯಾಪ್ತಿಯು ಇದ್ದಾಗ ತೇ=ಈ ಮೂರು ಕಥಂಚನ= ಯಾವುದೇ ರೀತಿಯಿಂದ ನ ದೋಷಾಃ=ದೋಷಗಳಲ್ಲ.

**ಭಾವಾರ್ಥ—** ನೈಯಾಯಿಕರು ಆಶ್ರಯಾಸಿದ್ಧಿ, ವ್ಯಧಿಕರಣಾಸಿದ್ಧಿ ಮತ್ತು ಸಾಧ್ಯಾಸಿದ್ಧಿ ಈ ಮೂರೂ ಅನುಮಾನಕ್ಕೆ ದೋಷಗಳು, ಎಂದು ಹೇಳುತ್ತಾರೆ. ಆಶ್ರಯ ಎಂದರೆ ಸಾಧ್ಯಕ್ಕೆ ಆಶ್ರಯವಾದ 'ಪಕ್ಷ'. ''ಗಗನಾರವಿಂದಂ ಸುರಭಿ' ಎಂದು ಪ್ರತಿಜ್ಞೆ ಮಾಡಿದಾಗ ಆಶ್ರಯ ಗಗನಾರವಿಂದ ಅಂದರೆ, ಆಕಾಶದಲ್ಲಿ ಬೆಳೆದ ಕಮಲ. ಅದು ಅಪ್ರಸಿದ್ಧ. ಆದುದರಿಂದ ಈ ಅನುಮಾನ ತಪ್ಪು.

ವ್ಯಧಿಕರಣಾಸಿದ್ಧಿ ಎಂದರೆ ಹೇತುವು ಪಕ್ಷಬಿಟ್ಟು ಬೇರೆ ಕಡೆ ಇರುವುದು. 'ಪರ್ವತೋ ವಹ್ನಿಮಾನ್, ಧೂಮಾತ್' ಎಂದು ಅನುಮಾನ ಮಾಡಿದಾಗ ವಹ್ನಿಸಾಧಕವಾದ ಧೂಮವು ಪಕ್ಷವಾದ ಪರ್ವತದಲ್ಲಿದೆ. 'ಶಬ್ದಃ ಅನಿತ್ಯಃ ಚಾಕ್ಷುಷತ್ವಾತ್' ಎಂದಾಗ ಚಾಕ್ಷುಷತ್ವವು ಪಕ್ಷವಾದ ಶಬ್ದದಲ್ಲಿ ಇಲ್ಲ, ರೂಪದಲ್ಲಿದೆ. ಆದ್ದರಿಂದ ಈ ಹೇತುವು ವ್ಯಧಿಕರಣವಾಗಿದೆ. ಅದರಂತೆ 'ಪರ್ವತಃ ಕಾಂಚನಮಯವಹ್ನಿಮಾನ್' ಎಂದಾಗ ಕಾಂಚನಮಯವಾದ ವಹ್ನಿ ಎಂಬ ಸಾಧ್ಯವು ಅಪ್ರಸಿದ್ಧವಾದುದರಿಂದ ಈ ಅನುಮಾನವು ದುಷ್ಟವೆನಿಸಿದೆ. ಹೀಗೆ ಈ ಮೂರನ್ನೂ ದೋಷವೆಂದು ನೈಯಾಯಿಕರು ಪರಿಗಣಿಸಿದ್ದಾರೆ.

ಆದರೆ, ಈ ಮೂರೂ ಎಲ್ಲೆಡೆಯೂ ದೋಷಗಳಲ್ಲ. ಅನುಮಾನ ಮಾಡಬೇಕಾದರೆ ಹೇತುವಿನಲ್ಲಿ ಸಾಧ್ಯದ ವ್ಯಾಪ್ತಿ ಇರುವುದು ಮುಖ್ಯ. ಆ ವ್ಯಾಪ್ತಿಯು ಇದ್ದರೆ ಇವೆಲ್ಲವೂ ದೋಷಗಳೆನಿಸುವುದಿಲ್ಲ. ವ್ಯಾಪ್ತಿ ಇಲ್ಲದಿರು ವಾಗ ಮಾತ್ರ ಇವುಗಳು ದೋಷಗಳಾಗುತ್ತವೆ, ಎಂದು ಆಚಾರ್ಯರು ಹೇಳಿದ್ದಾರೆ.

ಆಶ್ರಯಾಸಿದ್ಧಿ ಹೇಗೆ ದೋಷವಲ್ಲ ಎನ್ನುವುದನ್ನು ವೊದಲು ತೋರಿಸಲಾಗಿದೆ. ಆಶ್ರಯಾಸಿದ್ಧಿಯನ್ನು ಅನೇಕವಿಧವಾಗಿ ಪರಿಗಣಿಸಬಹುದು.

1. ಅಸದಾಶ್ರಯತ್ವಂ—ಆಶ್ರಯವಾದುದು ಶಶವಿಷಾಣದಂತಹ ಅಸತ್ಯವಸ್ತುಗಳಾಗಿರಬಹುದು.

2. ಅಭಾವಾಶ್ರಯತ್ವಂ—ಘಟಾಭಾವದಂತಹ ಅಭಾವವಸ್ತುಗಳು ಪಕ್ಷವಾದಾಗ ಅಭಾವವು 'ಸತ್'(ಭಾವ) ಅಲ್ಲವಾದುದರಿಂದ ಅದನ್ನು ಅಸತ್ ಎಂದು ಪರಿಗಣಿಸಿ ಆಶ್ರಯಾಸಿದ್ಧಿ ಎಂದು ಪರಿಗಣಿಸಬಹುದು.

3. ಅಪ್ರತೀತಾಶ್ರಯತ್ವಂ—ಪಕ್ಷದ ಜ್ಞಾನವು ಇಲ್ಲದಿರುವ ಕಾರಣ ದಿಂದಲೂ ಆಶ್ರಯ-ಅಸಿದ್ಧ ಎನ್ನಬಹುದು.

4. ಪಕ್ಷೀಕೃತಾಕಾರೇಣ ಅಸತ್ವಂ—ಯಾವ ವಿಶೇಷಣವನ್ನು ಕೊಟ್ಟು ಪಕ್ಷ ವೆಂದು ಪರಿಗಣಿಸಲಾಗಿದೆಯೋ ಅಂತಹ ವಿಶೇಷಣ ವಿಶಿಷ್ಟವಾದ ಧರ್ಮಿಯು ಇಲ್ಲದಿರುವುದು. ಉದಾಹರಣೆಗೆ-'ಕಾಂಚನಮಯಪರ್ವತಃ ವಹ್ನಿಮಾನ್'.

ಈ ನಾಲ್ಕರಲ್ಲಿ ಮೊದಲ ಎರಡು ರೀತಿಯ ಆಶ್ರಯಾಸಿದ್ಧಿಗಳು ದೋಷಗಳಲ್ಲ ಎಂದು ಈ ಅನುವ್ಯಾಖ್ಯಾನದಲ್ಲಿ ಹೇಳಲಾಗಿದೆ. ಈ ಎರಡರಲ್ಲೂ ಎರಡನೆಯ ಪಕ್ಷ-ಅಭಾವಾಶ್ರಯತ್ವ. ಇದು ದೋಷವೇ ಅಲ್ಲ. ಭಾವದಂತೆ ಅಭಾವವೂ ಪ್ರಾಮಾಣಿಕವಾದುದು. ಅದರಲ್ಲಿ ಸಾಧ್ಯ, ಹೇತು ಧರ್ಮಗಳೂ ಇರಬಹುದು. ಆದ್ದರಿಂದ ಅದನ್ನು ಪಕ್ಷವನ್ನಾಗಿ ಮಾಡಿದರೆ ದೋಷವಿಲ್ಲ.

ಇನ್ನು ಶಶವಿಷಾಣದಂತಹ ಅಸತ್ಯವಸ್ತುಗಳನ್ನೂ ಪಕ್ಷವನ್ನಾಗಿ ಮಾಡಬಹುದು. ವ್ಯಾಪ್ತಿ ಇದ್ದರೆ ತತ್‌ಪಕ್ಷಕಾನುಮಾನವೂ ದುಷ್ಟವಲ್ಲ.

**ದೋಷೋ ವ್ಯಾಹತಿರೇವಾಸ್ತಿ ನೃಶೃಂಗಾಸ್ತಿತ್ವಸಾಧನೇ ।**
**ಯತ್ರ ವ್ಯಾಹತತಾ ನಾಸ್ತಿ ಕೋऽತಿಸಂಗೋऽಸ್ಯ ಸಾಧನೇ ॥ ೧೭ ॥**

ನೃಶೃಂಗಾಸ್ತಿತ್ವಸಾಧನೇ='ನೃಶೃಂಗವು ಇದೆ' ಎಂದು ಅನುಮಾನದಿಂದ ಸಾಧಿಸಿದರೆ ವ್ಯಾಹತಿರೇವ=ಪ್ರಮಾಣವಿರೋಧ ಎಂಬುದೇ ದೋಷಃ= ದೋಷವು ಅಸ್ತಿ=ಇದೆ. ಯತ್ರ=ಎಲ್ಲಿ ವ್ಯಾಹತತಾ=ಪ್ರಮಾಣವಿರೋಧವು ನಾಸ್ತಿ=ಇಲ್ಲವೋ, ಅಸ್ಯ=ಅದರ ಸಾಧನೇ=ಸಾಧನೆ ಮಾಡುವಲ್ಲಿ ಕಃ ಅತಿಪ್ರಸಂಗಃ=ಯಾವ ದೋಷವಿದೆ?

**ಭಾವಾರ್ಥ—** ಅಸತ್ಯವಾದ ಪಕ್ಷವನ್ನು ಮಾಡಿರುವ ಅನುಮಾನವೂ ಸರಿಯಾಗುವುದಾದಲ್ಲಿ 'ನರವಿಷಾಣಂ ಸತ್' ಎಂದು ಸಾಧಿಸುವ ಅನುಮಾನವೂ ಸರಿಯಾಗಲಿ, ಎಂದು ಆಕ್ಷೇಪ ಮಾಡುವಂತಿಲ್ಲ. ಅಂತಹ ಅನುಮಾನವು ಪ್ರತ್ಯಕ್ಷಕ್ಕೆ ವಿರುದ್ಧವಾಗಿದೆ. ನರವಿಷಾಣ ಎಂದರೆ ಮನುಷ್ಯನ ತಲೆಯ ಕೊಂಬು. ಅದು ಇಲ್ಲ, ಎನ್ನುವುದು ಎಲ್ಲರೂ ಪ್ರತ್ಯಕ್ಷವಾಗಿ ಕಂಡಿದ್ದಾರೆ. ಅದಕ್ಕೆ ವಿರುದ್ಧವಾಗಿದೆ ಈ ಅನುಮಾನ. ಹೀಗೆ ಪ್ರಮಾಣ ವಿರೋಧ ಇರುವ ಕಾರಣದಿಂದಲೇ ಈ ಅನುಮಾನವು ದುಷ್ಟವಾಗಿದೆ.

ಈ ಅನುಮಾನವು ಪ್ರತ್ಯಕ್ಷವಿರುದ್ಧವು ಆಗಿದೆ, ಆಶ್ರಯಾಸಿದ್ಧಿದೋಷ ಗ್ರಸ್ತವೂ ಆಗಿದೆ. ಇವೆರಡೂ ದೋಷಗಳಿರುವಾಗ ಆಶ್ರಯಾಸಿದ್ಧಿಯಿಂದ ಇದು ದುಷ್ಟವಲ್ಲ, ಪ್ರಮಾಣಬಾಧಪ್ರಯುಕ್ತವಾಗಿಯೇ ದುಷ್ಟ, ಎಂದು

ನಿರ್ಧರಿಸುವುದು ಹೇಗೆ? ಹೀಗೆ ನಿರ್ಧರಿಸಬಹುದು– ದೋಷಾಂತರಗಳಿಲ್ಲದ, ಪ್ರಮಾಣಬಾಧವಿರುವ, ಅಗ್ನಿಗೆ ಶೈತ್ಯವನ್ನು ಸಾಧಿಸುವ ಅಸಂಕೀರ್ಣವಾದ ಉದಾಹರಣೆ ಬಾಧಕ್ಕೆ ಇದೆ. ಆದರೆ, ಇದರಂತೆ ಆಶ್ರಯಾಸಿದ್ಧಿದೋಷ ದಿಂದಾಗಿಯೇ ದುಷ್ಟವಾಗಿರುವ ಒಂದು ಉದಾಹರಣೆ ಇಲ್ಲ. ಆದ್ದರಿಂದ ಪ್ರಮಾಣಬಾಧವನ್ನು ದೋಷವೆಂದು ಅಂಗೀಕರಿಸಲೇಬೇಕಾಗುತ್ತದೆ. ಆಶ್ರಯಾಸಿದ್ಧಿಯು ದೋಷವಲ್ಲದಿದ್ದರೂ ಬಾಧಕವಿಲ್ಲ. ಅಂತಹ ಅನುಮಾನ ಅದುಷ್ಟವೂ ಆಗಿರುತ್ತದೆ. ಉದಾಹರಣೆಗೆ—'ವಂಧ್ಯಾಸುತಃ ನ ವಕ್ತಾ, ಅಚೇತನತ್ವಾತ್, ಪಾಷಾಣವತ್'. ಈ ಅನುಮಾನದಲ್ಲಿ ಆಶ್ರಯಾಸಿದ್ಧಿ ದೋಷವಿದ್ದರೂ ಇದು ಸದನುಮಾನವೇ ಆಗಿದೆ. ವಂಧ್ಯಾಸುತ ಅಸತ್ಯನಾದುದರಿಂದ ಅದರಲ್ಲಿ ಭಾವರೂಪವಾದ ಧರ್ಮಗಳು ಇರಲು ಸಾಧ್ಯವಿಲ್ಲವಾದರೂ ವಕ್ತೃತ್ವಾಭಾವರೂಪವಾದ ಧರ್ಮವು (ಸಾಧ್ಯವು) ಇರಬಹುದು. ಕಾಲ್ಪನಿಕವಸ್ತುವೂ ನಿಷೇಧಕ್ಕೆ ಆಶ್ರಯವಾಗುತ್ತದೆ. ವಾದದಲ್ಲಿ ಪ್ರತಿವಾದಿಯ ಸಿದ್ಧಾಂತವು ವಾದಿಗೆ ಕಾಲ್ಪನಿಕವಾದರೂ ಅದನ್ನು ವಾದಿಯು ನಿರಾಕರಿಸುತ್ತಾನೆ. ಇದರಿಂದ ಕಾಲ್ಪನಿಕವೂ ನಿಷೇಧಕ್ಕೆ ಆಶ್ರಯವಾಗುತ್ತದೆ, ಎನ್ನುವುದನ್ನು ಒಪ್ಪಲೇಬೇಕಾಗುವುದು.

**ಪ್ರತ್ಯಕ್ಷಾಗಮಮೂಲಾಸ್ತು ನ್ಯಾಯಾಸ್ಸರ್ವೇ ಭವಂತಿ ಹಿ ।**
**ನ್ಯಾಯಾಭಾಸಾ ಅಮೂಲಾಃ ಸ್ಯುರ್ನ್ಯಾಯಸ್ಯಾನ್ಯಸ್ಯ ತೌ ಪುನಃ ॥೧೮॥**

ಹಿ=ಯಾವ ಕಾರಣದಿಂದ ಸರ್ವೇ ನ್ಯಾಯಾಃ=ಎಲ್ಲಾ ಅನುಮಾನಗಳೂ ಪ್ರತ್ಯಕ್ಷಾಗಮಮೂಲಾಸ್ತು=ಪ್ರತ್ಯಕ್ಷ ಅಥವಾ ಆಗಮಗಳನ್ನು ಅವಲಂಬಿಸಿರು ವವೋ ಆದ್ದರಿಂದ ಅಮೂಲಾಃ=ಈ ಎರಡು ಪ್ರಮಾಣಗಳ ವಿರೋಧವಿರುವ ನ್ಯಾಯಗಳು ನ್ಯಾಯಾಭಾಸಾಃ ಸ್ಯುಃ=ದುಷ್ಟನ್ಯಾಯಗಳು ಆಗಿರುತ್ತವೆ.

**ಭಾವಾರ್ಥ—** ನೃಶೃಂಗಕ್ಕೆ ಅಸ್ತಿತ್ವವನ್ನು ಸಾಧನೆ ಮಾಡುವ ಅನುಮಾನವು ಪ್ರತ್ಯಕ್ಷಪ್ರಮಾಣಕ್ಕೆ ವಿರುದ್ಧವಾದುದರಿಂದ ದುಷ್ಟ, ಎಂದು ಹಿಂದೆ ಹೇಳಲಾಯಿತು. ಅದರ ಸಮರ್ಥನೆಯನ್ನು ಇಲ್ಲಿ ಮಾಡಲಾಗಿದೆ.

ಅನುಮಾನದ ಪಕ್ಷವು ಪ್ರತ್ಯಕ್ಷ ಅಥವಾ ಆಗಮದಿಂದ ಸಿದ್ಧವಾಗಿರ

ಬೇಕು. ಹೇತು ಮತ್ತು ಅದರಲ್ಲಿರುವ ವ್ಯಾಪ್ತಿಯೂ ಈ ಎರಡು ಪ್ರಮಾಣ ಗಳಿಂದ ನಿರ್ಧಾರಿತವಾಗಿರಬೇಕು. ಹೀಗೆ ಪ್ರತ್ಯಕ್ಷಾಗಮಗಳನ್ನು ಅವಲಂಬಿಸಿ ಅನುಮಾನವು ಇರುತ್ತದೆ. ಅವುಗಳಿಗೆ ವಿರುದ್ಧವಾದರೆ ಅನುಮಾನವು ದುಷ್ಟವಾಗುತ್ತದೆ.

ಕೆಲವೊಮ್ಮೆ ಅನುಮಾನದ ಪಕ್ಷವು ಅನುಮಾನಾಂತರದಿಂದ ಸಿದ್ಧವಾಗು ತ್ತದೆ. ಅಂತಹ ನ್ಯಾಯ ಅನುಮಾನಮೂಲವಾಗಿರುತ್ತದೆ. ಉದಾಹರಣೆಗೆ— ''ಚಕ್ಷುಃ ತೈಜಸಂ, ರೂಪಾದಿಷು ಪಂಚಸು ಮಧ್ಯೇ ರೂಪಸ್ಯೈವ ಗ್ರಾಹಕತ್ವಾತ್'' ಈ ಅನುಮಾನದ ಪಕ್ಷ ಚಕ್ಷುರಿಂದ್ರಿಯ. ಅದು ಅನುಮಾನ ದಿಂದಲೇ ಸಿದ್ಧವಾಗಬೇಕು. 'ರೂಪಾದಿಜ್ಞಾನಂ ಸಕರಣಕಂ ಜ್ಞಾನತ್ವಾತ್' ಎಂಬ ಅನುಮಾನದಿಂದ ಚಕ್ಷುರಿಂದ್ರಿಯ ಸಿದ್ಧವಾಗುತ್ತದೆ. ಹೀಗೆ 'ಚಕ್ಷುಃ ತೈಜಸಂ' ಎಂಬ ಮೊದಲ ಅನುಮಾನಕ್ಕೆ ಎರಡನೆಯ ಅನುಮಾನವು ಮೂಲ. ಆದರೂ ಈ ಎರಡನೆಯ ಅನುಮಾನಕ್ಕೆ ಪ್ರತ್ಯಕ್ಷವು ಮೂಲ. ಅದರಿಂದಾಗಿ ಮೊದಲ ಅನುಮಾನವೂ ಪರಂಪರಯಾ ಪ್ರತ್ಯಕ್ಷಮೂಲವೇ ಆಗಿದೆ. ಇದನ್ನು ಅನುವ್ಯಾಖ್ಯಾನದ ಕೊನೆಯ ಚರಣ ತಿಳಿಸುತ್ತದೆ—

ಅನ್ಯಸ್ಯ ನ್ಯಾಯಸ್ಯ=ಮೊದಲ ಅನುಮಾನಕ್ಕೆ ಮೂಲವಾದ ಎರಡನೆಯ ಅನುಮಾನಕ್ಕೆ ಪುನಃ=ಮತ್ತೆ ತೌ=ಪ್ರತ್ಯಕ್ಷಾಗಮಗಳು ಮೂಲಗಳು.

**ಅದೃಷ್ಟೇ ವ್ಯಭಿಚಾರೇ ತು ಸಾಧಕಂ ತದಿತಿ ಸ್ಫುಟಮ್ ।**
**ಜ್ಞಾಯತೇ ಸಾಕ್ಷಿಣೈವಾದ್ಧಾ ಮಾನಬಾಧೇ ನ ತದ್ ಭವೇತ್ ॥ ೧೯ ॥**

ತತ್=ಅನುಮಾನದ 'ಲಿಂಗ'ವು ವ್ಯಭಿಚಾರೇ ಅದೃಷ್ಟೇ ತು=ವ್ಯಭಿಚಾರ ದೋಷವು ಇಲ್ಲದಿದ್ದಾಗ ಮಾತ್ರ ಸಾಧಕಂ=ಸಾಧ್ಯಸಾಧಕವಾಗುತ್ತದೆ, ವ್ಯಭಿಚಾರ ದೋಷವಿದ್ದಲ್ಲಿ ಸಾಧ್ಯಸಾಧಕವಲ್ಲ, ಇತಿ=ಎಂದು ಸಾಕ್ಷಿಣೈವ= ಸಾಕ್ಷೀಂದ್ರಿಯದಿಂದಲೇ ಅದ್ಧಾ=ಚೆನ್ನಾಗಿ ಸ್ಫುಟಂ=ಸ್ಪಷ್ಟವಾಗಿ ಜ್ಞಾಯತೇ= ತಿಳಿಯಲ್ಪಡುತ್ತದೆ. ಮಾನಬಾಧೇ=ಪ್ರತ್ಯಕ್ಷಾದಿ ಪ್ರಬಲಪ್ರಮಾಣಗಳಿಂದ ಪಕ್ಷದಲ್ಲಿ ಸಾಧ್ಯವು ಬಾಧಿತವಾದಲ್ಲಿ ತತ್=ಅದೃಷ್ಟವ್ಯಭಿಚಾರಿತ್ವವು ನ ಭವೇತ್=ಇರಲಾರದು. ಪಕ್ಷದಲ್ಲಿ ಸಾಧ್ಯ ಬಾಧಿತವಾದರೆ ಅಲ್ಲಿ ಹೇತುವು

ಇರುವುದರಿಂದ ವ್ಯಭಿಚಾರದೋಷವು ಬರುತ್ತದೆ. ಹೀಗೆ, ಬಾಧವು ನೇರವಾಗಿ ದೋಷವಾಗುವುದರ ಜೊತೆಗೆ ವ್ಯಭಿಚಾರದೋಷಕ್ಕೆ ಕಾರಣವಾಗಿಯೂ ದೋಷವೆನಿಸುತ್ತದೆ.

**ಭಾವಾರ್ಥ—** ಹಿಂದೆ, ಪ್ರತ್ಯಕ್ಷಬಾಧವು 'ನೃಶೃಂಗಂ ಸತ್' ಎಂಬ ಅನುಮಾನಕ್ಕೆ ಇರುವುದರಿಂದ ಅದು ದುಷ್ಟ ಎಂದು ಹೇಳಲಾಗಿದೆ. ಇಲ್ಲಿ ಪ್ರತ್ಯಕ್ಷಬಾಧವು ವ್ಯಭಿಚಾರ ಎಂಬ ದೋಷಾಂತರಕ್ಕೆ ಕಾರಣವಾಗಿದೆ ಎಂದು ತಿಳಿಸಲಾಗಿದೆ. ಪ್ರತ್ಯಕ್ಷಬಾಧದಿಂದ ಪಕ್ಷದಲ್ಲಿ ಸಾಧ್ಯವು ಇಲ್ಲವೆಂದು ನಿರ್ಧಾರವಾದರೆ ಅಂತಹ ಪಕ್ಷದಲ್ಲಿರುವ ಹೇತು ವ್ಯಭಿಚಾರಿಯಾಗುತ್ತದೆ. ವ್ಯಭಿಚಾರವು ಇದ್ದರೆ ಹೇತುವು ಸಾಧ್ಯಸಾಧಕವಾಗುವುದಿಲ್ಲ. ಅವ್ಯಭಿಚರಿತ ಲಿಂಗವೇ ಸಾಧ್ಯಸಾಧಕ.

**ಯತ್ ಸಾಕ್ಷಿಣೈವ ಮಾನತ್ವಂ ಮಾನಾನಾಮವಸೀಯತೇ ।**
**ಅಮಾನಸ್ಯ ತು ಮಾನತ್ವಂ ಮಾನಸತ್ವಾಚ್ಚಲಂ ಭವೇತ್ ॥ ೨೦ ॥**

ಯತ್=ಯಾವ ಕಾರಣದಿಂದ ಸಾಕ್ಷಿಣೈವ=ಸಾಕ್ಷಿಯಿಂದಲೇ ಮಾನಾನಾಂ=ಎಲ್ಲಾ ಜ್ಞಾನಗಳ ಮಾನತ್ವಂ=ಪ್ರಾಮಾಣ್ಯವು ಅವಸೀಯತೇ= ನಿರ್ಧರಿಸಲ್ಪಡುವುದೋ ಆದ್ದರಿಂದ ಅನುಮಾನದ ಪ್ರಾಮಾಣ್ಯವೂ ಸಾಕ್ಷಿ ಯಿಂದಲೇ ನಿರ್ಧಾರಿತವಾಗುತ್ತದೆ.

ಅಮಾನಸ್ಯ=ಪ್ರಮಾಣವಲ್ಲದ ಜ್ಞಾನದ (ಭ್ರಮೆಯ) ಮಾನತ್ವಂ= ಪ್ರಾಮಾಣ್ಯಜ್ಞಾನವು ಮಾನಸತ್ವಾತ್=ಮನಸ್ಸಿನಿಂದ ಬರುವುದರಿಂದಾಗಿ ಚಲಂ ಭವೇತ್=ಬಾಧಿತವಾಗುತ್ತದೆ.

**ಭಾವಾರ್ಥ—** ಪ್ರಾಮಾಣ್ಯಂ ಸ್ವತಃ. ವೃತ್ತಿರೂಪವಾದ ಜ್ಞಾನವನ್ನು ಗ್ರಹಿಸುವ ಸಾಕ್ಷಿಯೇ ಆ ಜ್ಞಾನದಲ್ಲಿರುವ ಪ್ರಾಮಾಣ್ಯವನ್ನೂ ಗ್ರಹಿಸುತ್ತದೆ. ಸಾಕ್ಷಿಯು ಯಾವುದೇ ವಸ್ತುವಿನ ಜ್ಞಾನವನ್ನು ಮೊದಲು ಗ್ರಹಿಸುವಾಗ 'ಈ ಜ್ಞಾನಕ್ಕೆ ಮುಂದೆ ಬಾಧ ಬಂದರೆ ಅಪ್ರಮಾಣ, ಇಲ್ಲವಾದರೆ ಪ್ರಮಾಣ' ಎಂದು ಗ್ರಹಿಸುತ್ತದೆ. ಆಮೇಲೆ ಕಂಡಿರುವ ವಸ್ತುವು ಬೇಕೆನಿಸಿದಾಗ ಆ ಜ್ಞಾನದಲ್ಲಿ ಪ್ರಾಮಾಣ್ಯವನ್ನು ನಿರ್ಧರಿಸುವ ಅಗತ್ಯ ಬರುತ್ತದೆ. ಆಗ

ಪರಾಮರ್ಶೆಯಿಂದ ಆ ಜ್ಞಾನದಲ್ಲಿ ಪ್ರಾಮಾಣ್ಯ ಅಥವಾ ಅಪ್ರಾಮಾಣ್ಯ ವನ್ನು ನಿರ್ಧರಿಸುತ್ತದೆ. ಒಂದುವೇಳೆ ವಿಮರ್ಶೆಗೆ ಅವಕಾಶ ಸಿಗದಿದ್ದರೆ ಸಾಕ್ಷಿಯು ನಿರ್ಧರಿಸದೆ ಸುಮ್ಮನಿರುತ್ತದೆ. ಆಗ ಮನಸ್ಸು ವಿಷಯದ ಸೆಳೆತಕ್ಕೆ ಒಳಗಾಗಿ ಪರೀಕ್ಷಾಭಾಸಗಳ ಸಹಾಯದಿಂದ ಪ್ರಾಮಾಣ್ಯವನ್ನು ನಿರ್ಧರಿಸು ತ್ತದೆ. ಆ ಪ್ರಾಮಾಣ್ಯವು ಕೆಲವೊಮ್ಮೆ ಇರಬಹುದು ಅಥವಾ ಇಲ್ಲದಿರ ಬಹುದು. ಆದರೆ, ಸಾಕ್ಷಿಗೃಹೀತವಾದ ಪ್ರಾಮಾಣ್ಯವು ಇರಲೇಬೇಕು.

**ಉತ್ಸರ್ಗತೋಽಪಿ ಯತ್ ಪ್ರಾಪ್ತಮಪವಾದವಿವರ್ಜಿತಮ್ ।**
**ವ್ಯಭಿಚಾರ್ಯಪವಾದೇನ ಮಾನಮೇವ ಭವಿಷ್ಯತಿ ॥ ೨೧ ॥**

ಯತ್=ಯಾವ ಹೇತುವು ಉತ್ಸರ್ಗತಃ=ಸ್ವಾಭಾವಿಕವಾಗಿ ಅಪವಾದ ವಿವರ್ಜಿತಂ=ಸಾಧ್ಯವ್ಯಭಿಚಾರರಹಿತವಾಗಿ ಪ್ರಾಪ್ತಂ=ನಿಶ್ಚಿತವಾಗಿದ್ದರೂ ಅಪವಾದೇನ=ಕಾರಣವಿಶೇಷದಿಂದ ವ್ಯಭಿಚಾರಿ=ಸಾಧ್ಯವ್ಯಭಿಚಾರಿಯಾಗಿ ಇರುವುದೋ ಅಂತಹ ಹೇತುವು ಮಾನಮೇವ ಭವಿಷ್ಯತಿ=ಪ್ರಮಾಣವೇ ಆಗಿರುತ್ತದೆ.

**ಭಾವಾರ್ಥ**— 'ಅದೃಷ್ಟೇ ವ್ಯಭಿಚಾರೇ' ಎಂಬ ಅನುವ್ಯಾಖ್ಯಾನದಲ್ಲಿ ಸಾಧ್ಯವ್ಯಭಿಚಾರಿಯಾದ ಲಿಂಗವು ಅಪ್ರಮಾಣ, ಎಂದು ಹೇಳಲಾಗಿದೆ. ಆ ವ್ಯಭಿಚಾರವು ಸ್ವಾಭಾವಿಕವಾಗಿದ್ದರೆ ಮಾತ್ರ ಹೇತುವು ಅಪ್ರಮಾಣವಾಗುತ್ತದೆ. ಆಹಿತವ್ಯಭಿಚಾರವಾದರೆ ಪ್ರಮಾಣವೇ ಆಗುತ್ತದೆ, ಎಂದು ಇಲ್ಲಿ ಹೇಳ ಲಾಗಿದೆ.

ಹೇತುವು ಸ್ವಾಭಾವಿಕವಾಗಿ ಸಾಧ್ಯವ್ಯಾಪ್ಯವಾಗಿದ್ದರೂ ಉಪಾಧಿ ವಿಶೇಷದಿಂದ ವ್ಯಭಿಚಾರಿಯಾದರೂ ಅದು ಪ್ರಮಾಣವೇ ಆಗುತ್ತದೆ. ಔಪಾಧಿ ಕವಾಗಿ ಸಾಧ್ಯದ ಸಂಬಂಧ ಬಂದರೆ ಅದು ಸದ್ಧೇತುವಲ್ಲ. ಮೈತ್ರೀತನಯತ್ವ ಹೇತುವಿಗೆ ಶಾಕಪಾಕಜತ್ವರೂಪವಾದ ಉಪಾಧಿಯಿಂದಾಗಿ ಶ್ಯಾಮತ್ವವ್ಯಾಪ್ತಿ ಇದೆ. ಅಂದಮಾತ್ರಕ್ಕೆ ಅದು ಸಾಧ್ಯಸಾಧಕವಲ್ಲ.

ಇದರಂತೆ ವ್ಯಭಿಚಾರವೂ ಸ್ವಾಭಾವಿಕವಾಗಿಯೇ ಇರಬೇಕು. ಔಪಾಧಿಕ ವ್ಯಭಿಚಾರವು ದೋಷವಲ್ಲ. ಪ್ರಮೇಯತ್ವಕ್ಕೆ ನಿತ್ಯತ್ವವ್ಯಭಿಚಾರವು ಸ್ವಾಭಾವಿಕ

ವಾದುದು. ವಹ್ನಿಗೆ ಧೂಮದಿಂದ ವ್ಯಭಿಚಾರ ದೋಷವು ಸ್ವಾಭಾವಿಕ. ಇಂತಹ ವ್ಯಭಿಚಾರವು ದೋಷವಾಗುತ್ತದೆ. ಸೋಪಾಧಿಕವ್ಯಭಿಚಾರವು ದೋಷವಲ್ಲ.

**ಅತೋ ಹಿ ಭೋಜನಾದೀನಾಮಿಷ್ಟಸಾಧನತಾऽನುಮಾ ।**
**ಮಾನಂ ವ್ಯವಹೃತೌ ನಿತ್ಯಂ ವ್ಯಭಿಚಾರೋ ಹಿ ತತ್ರ ಚ ॥ ೨೨ ॥**

ಅತೋ ಹಿ=ಉಪಾಧಿನಿಮಿತ್ತವಾಗಿ ಬರುವ ವ್ಯಭಿಚಾರವು ದೋಷ ವಲ್ಲವಾದ ಕಾರಣ ಭೋಜನಾದೀನಾಂ=ಭೋಜನಾದಿಗಳಿಗೆ ಇಷ್ಟಸಾಧನ-ತಾನುಮಾ=ಇಷ್ಟಸಾಧನತಾನುಮಾನವು ನಿತ್ಯಂ=ನಿಃಶಂಕವಾದ ವ್ಯವಹೃತೌ=ಪ್ರವೃತ್ತಿಮಾಡುವಲ್ಲಿ ಮಾನಂ=ಪ್ರಮಾಣವಾಗುತ್ತದೆ. ಆದರೂ ತತ್ರ=ಆ ಭೋಜನತ್ವರೂಪ ಹೇತುವಿನಲ್ಲಿ ಅಪಥ್ಯ ಇದ್ದಾಗ ವ್ಯಭಿಚಾರೋ ಹಿ=ಇಷ್ಟಸಾಧನತ್ವ ವ್ಯಭಿಚಾರವು ಇದೆ.

**ಭಾವಾರ್ಥ—** ಸ್ವಾಭಾವಿಕವ್ಯಭಿಚಾರವೇ ದೋಷ, ಉಪಾಧಿ ನಿಮಿತ್ತವಾಗಿ ಬರುವ ವ್ಯಭಿಚಾರವು ದೋಷವಲ್ಲ. ''ಇದಂ ಇಷ್ಟಸಾಧನಂ ಭೋಜನತ್ವಾತ್'' ಎಂದು ಭೋಜನಕ್ಕೆ ಇಷ್ಟಸಾಧನತ್ವವನ್ನು ಅನುಮಾನದಿಂದ ನಿರ್ಧರಿಸಿ ನಿಃಸಂದಿಗ್ಧವಾದ ಪ್ರವೃತ್ತಿಯನ್ನು ಮಾಡುತ್ತೇವೆ. ಇದು ಸದನುಮಾನವೇ. ಆದರೂ ಅಜೀರ್ಣ ಇದ್ದಾಗ ಭೋಜನವು ಇಷ್ಟಸಾಧನ ವಾಗುವುದಿಲ್ಲ. ಅಂದರೆ, ಅಜೀರ್ಣತ್ವನಿಮಿತ್ತದಿಂದ ಕೆಲವೊಮ್ಮೆ ಭೋಜನವು ಇಷ್ಟಸಾಧನವಾಗುವುದಿಲ್ಲ. ಅದಕ್ಕೆ ಇಷ್ಟಸಾಧನತ್ವವ್ಯಭಿಚಾರವಿದೆ. ಆದರೂ ಆ ವ್ಯಭಿಚಾರವು, ಪ್ರಮೇಯತ್ವಕ್ಕೆ ನಿತ್ಯತ್ವದ ವ್ಯಭಿಚಾರದಂತೆ, ಸಹಜವಲ್ಲ, ಔಪಾಧಿಕ. ಆದ್ದರಿಂದ ಆ ವ್ಯಭಿಚಾರವು ದೋಷವಲ್ಲ.

### ವ್ಯಧಿಕರಣತ್ವವೂ ದೋಷವಲ್ಲ

**ವ್ಯಾಪ್ತತ್ವೇ ವ್ಯಾಶ್ರಯತ್ವಂ ತು ಕಥಮೇವ ಹಿ ದೂಷಣಮ್ ।**
**ರೋಹಿಣ್ಯುದಯ ಆಸನ್ನಃ ಕೃತ್ತಿಕಾऽಭ್ಯುದಿತಾ ಯತಃ ।**
**ಇತ್ಯುಕ್ತೇ ಸಾಧನಂ ನೋ ಕಿಂ ನ ಹ್ಯಾಜ್ಞೈವಾತ್ರ ಸಾಧಿ (ಧ)ಕಾ ॥೨೩॥**

ವ್ಯಾಪ್ತತ್ವೇ=ಸಾಧನಕ್ಕೆ ಸಾಧ್ಯದ ವ್ಯಾಪ್ತಿಯು ಇದ್ದಲ್ಲಿ ವ್ಯಾಶ್ರಯತ್ವಂ=

ಸಾಧ್ಯವಿದ್ದಲ್ಲಿ ಹೇತುವು ಇಲ್ಲದಿರುವುದು ಕಥಮೇವ=ಹೇಗೆ ತಾನೇ ದೂಷಣಂ=ದೋಷವಾದೀತು?

ಯತಃ=ಯಾವಕಾರಣದಿಂದ ಕೃತ್ತಿಕಾ=ಕೃತ್ತಿಕಾ ನಕ್ಷತ್ರವು ಅಭ್ಯುದಿತಾ= ಉದಿಸಿತೋ ಅತಃ=ಆದ್ದರಿಂದ ರೋಹಿಣ್ಯುದಯಃ=ರೋಹಿಣೀ ನಕ್ಷತ್ರದ ಉದಯವು ಆಸನ್ನಃ=ಸ್ವಲ್ಪ ಹೊತ್ತಿನಲ್ಲೇ ಆಗಲಿದೆ, (ಸಮೀಪದಲ್ಲಿದೆ.) ಇತ್ಯುಕ್ತೇ=ಹೀಗೆ ಹೇಳಿದಾಗ ಸಾಧನಂ ಕಿಂ ನೋ=ಅನುಮಾನ ಅಲ್ಲವೇನು? ಅತ್ರ=ಉಪಪತ್ತಿಸಿದ್ಧವಾದ ಈ ವಿಷಯದಲ್ಲಿ ಆಜ್ಞ್ಯೈವ=ನೈಯಾಯಿಕ ಸಿದ್ಧಾಂತವೇ ನ ಸಾಧಿಕಾ=ನಿಯಾಮಕವಲ್ಲ.

ಭಾವಾರ್ಥ— ಅನುಮಾನ ಮಾಡಬೇಕಾದರೆ ಹೇತು-ಸಾಧ್ಯಗಳಿಗೆ ಸಾಮಾನಾಧಿಕರಣ್ಯವಿರಬೇಕು. ಹೇತು ಒಂದೆಡೆ ಇದ್ದು ಅದರಿಂದ ಮತ್ತೊಂದೆಡೆ ಸಾಧ್ಯವು ಸಿದ್ಧವಾಗುವುದಿಲ್ಲ. ಮಹಾನಸದಲ್ಲಿ ಧೂಮವಿದ್ದರೆ ಪರ್ವತದಲ್ಲಿ ವಹ್ನಿಯು ಸಿದ್ಧವಾಗದು. ಇದು ನೈಯಾಯಿಕ ಸಿದ್ಧಾಂತ. ಆದರೆ ಕೆಲವೆಡೆ ಇದು ಅಗತ್ಯವಾದರೂ ಎಲ್ಲ ಅನುಮಾನಗಳಲ್ಲೂ ಈ ನಿರ್ಬಂಧವಿಲ್ಲ. ಸಾಧನದಲ್ಲಿ ಸಾಧ್ಯದ ವ್ಯಾಪ್ತಿ ಇದ್ದರೆ ಹೇತುವು ವ್ಯಧಿಕರಣವಾದರೂ ಸಾಧ್ಯವು ಸಿದ್ಧವಾಗುತ್ತದೆ. ಉದಾಹರಣೆಗೆ— ಕೃತ್ತಿಕಾನಕ್ಷತ್ರದ ಮುಂದಿನ ನಕ್ಷತ್ರ ರೋಹಿಣೀ. ಕೃತ್ತಿಕಾನಕ್ಷತ್ರವು ಉದಯವಾದ ಸ್ವಲ್ಪ ಹೊತ್ತಿನಲ್ಲೇ ರೋಹಿಣೀ ನಕ್ಷತ್ರವು ಉದಿಸುತ್ತದೆ. ಕೃತ್ತಿಕೋದಯಹೇತುವಿನಿಂದ ರೋಹಿಣಿಯು ಮುಂದೆ ಉದಯಿಸಲಿದೆ ಎಂದು ಅನುಮಾನ ಮಾಡಬಹುದು. ಇಲ್ಲಿ ರೋಹಿಣೀ ಉದಯವು ಪಕ್ಷ, ಆಸನ್ನತ್ವವು (ಸಮೀಪಕಾಲದಲ್ಲಿ ಆಗಲಿರು ವುದು) ಸಾಧ್ಯ. ಕೃತ್ತಿಕೋದಯವು ಹೇತು. ಈ ಹೇತು ಪಕ್ಷದಲ್ಲಿ ಇಲ್ಲ. ಆದರೂ ವ್ಯಾಪ್ತಿ ಇರುವುದರಿಂದ ಇದು ಸದ್ಧೇತು.

ಇದಕ್ಕೆ ತಾರ್ಕಿಕರು ಹೇಳುವ ಸಮಾಧಾನ— ಇಲ್ಲಿಯೂ ಕಾಲವೇ ಪಕ್ಷ. ಅಯಂ ಕಾಲಃ ರೋಹಿಣ್ಯುದಯ-ಆಸತ್ತಿಮಾನ್, ಕೃತ್ತಿಕೋದಯವತ್ತ್ವಾತ್. ''ಈ ಕಾಲದಲ್ಲಿ ಕೃತ್ತಿಕಾನಕ್ಷತ್ರವು ಉದಯವಾಗಿರುವುದರಿಂದ ರೋಹಿಣೀ ನಕ್ಷತ್ರದ ಉದಯಕ್ಕೆ ಸಮೀಪವಾಗಿದೆ''. ಹೀಗೆ ಹೇಳಿದಾಗ ಹೇತು ಸಾಧ್ಯಗಳಿಗೆ ಕಾಲವೆಂಬ ಒಂದು ಅಧಿಕರಣ ಸಿಗುತ್ತದೆ, ಎಂದು. ಆದರೆ, ಇದು ಸರಿಯಲ್ಲ.

ನಾವೇ ಒಂದು ನಿರ್ಧಾರಮಾಡಿ ಅದಕ್ಕೆ ಸರಿಯಾಗಿ ಎಲ್ಲರ ಅನುಭವವನ್ನು ತಿದ್ದಬಾರದು. ಹೀಗೆ ಬಲಾತ್ಕಾರದಿಂದ ಎಲ್ಲ ಕಡೆಯಲ್ಲೂ ಸಾಮಾನಾಧಿಕರಣ್ಯವನ್ನು ಸಾಧಿಸಬಹುದು. ಎಲ್ಲೂ ವ್ಯಧಿಕರಣತ್ವವು ದೋಷವೇ ಆಗಲಿಕ್ಕಿಲ್ಲ. ಆದ್ದರಿಂದ ಲೋಕಾನುಭವದಂತೆ ಇಲ್ಲಿ ಸಾಮಾನಾಧಿಕರಣ್ಯ ಇಲ್ಲದಿದ್ದರೂ ಅನುಮಾನವು ನಿರ್ದುಷ್ಟವಾಗಿದೆ, ಸಾಮಾನಾಧಿಕರಣ್ಯದ ಅಗತ್ಯ ಇಲ್ಲ.

ಹೇತುಸಾಧ್ಯಗಳಿಗೆ ವ್ಯಾಪ್ತಿ ಇರಬೇಕಾದರೆ ಅವುಗಳಿಗೆ ಸಾಮಾನಾಧಿಕರಣ್ಯ ಇರಬೇಕು, ಎನ್ನುವುದೂ ಸರಿಯಲ್ಲ. ಧೂಮದಲ್ಲಿ ವಹ್ನಿಯ ವ್ಯಾಪ್ತಿ ಇದೆ. ಆದರೆ ಧೂಮ ಪರ್ವತದ ಮೇಲ್ಭಾಗದಲ್ಲಿದೆ, ವಹ್ನಿ ಕೆಳಗಡೆ ಇದೆ.ಅವೆರಡಕ್ಕೆ ಸಾಮಾನಾಧಿಕರಣ್ಯ ಇಲ್ಲದೇ ಹೋದರೂ ವ್ಯಾಪ್ತಿ ಇದೆ. ಆದ್ದರಿಂದ ವ್ಯಾಪ್ತಿಗಾಗಿ ಸಾಮಾನಾಧಿಕರಣ್ಯದ ಅಗತ್ಯವಿಲ್ಲ.

ಹೇತುವು ಸಾಧ್ಯಸಾಧಕವಾಗಬೇಕಾದರೆ ವ್ಯಾಪ್ತಿ ಮತ್ತು ಪಕ್ಷಧರ್ಮತಾಗಳು ಇರಬೇಕು. ಪಕ್ಷಧರ್ಮತಾ ಎಂದರೆ ಪಕ್ಷದಲ್ಲಿ ಹೇತು ಇರುವುದು. ಹೀಗೆ ಪಕ್ಷದಲ್ಲಿ ಹೇತುವು ಇರಲೇಬೇಕಾದುದರಿಂದ ವೈಯ್ಯಧಿಕರಣ್ಯವು ದೋಷ, ಎನ್ನುವ ವಾದವೂ ಸರಿಯಲ್ಲ. ಹೇತುವಿನಲ್ಲಿ ವ್ಯಾಪ್ತಿ ಇದ್ದರೆ ಸಾಕು, ಅದು ಸಾಧ್ಯಸಾಧಕವಾಗುತ್ತದೆ. ಪಕ್ಷಧರ್ಮತಾ ಬೇಕಾಗಿಲ್ಲ, ಹಾಗಾದರೆ ಹೇತು ದರ್ಶನದಿಂದ ತಿಳಿಯಲ್ಪಡುವ ಸಾಧ್ಯವು ನಿರ್ದಿಷ್ಟ ಸ್ಥಳದಲ್ಲಿಯೇ ಇದೆ, ಎಂದು ನಿಶ್ಚಯಿಸುವುದು ಹೇಗೆ? ವ್ಯಾಪ್ತಿಗೆ ಅನುಗುಣವಾಗಿ ಅದನ್ನು ನಿರ್ಧರಿಸಬಹುದು. ಯತ್ರೇದಂ ತತ್ರೇದಂ, ಎಂದು ಕೆಲವೆಡೆ ವ್ಯಾಪ್ತಿ. ಎಲ್ಲಿ ಕೃತಕತ್ವ(ಜನ್ಯತ್ವ) ಇದೆಯೋ ಅಲ್ಲಿ ಅನಿತ್ಯತ್ವವು ಇರುತ್ತದೆ. ಇದು ದೈಶಿಕವ್ಯಾಪ್ತಿ. ಇದರಿಂದ ಕೃತಕತ್ವ ಇರುವ ವಸ್ತುವಿನಲ್ಲೇ ಅನಿತ್ಯತ್ವವು ಸಿದ್ಧವಾಗುತ್ತದೆ. ಯದಾ ಇದಂ, ತದಾ ಇದಂ ಎಂದು ಕೆಲವೆಡೆ ಕಾಲಿಕ ವ್ಯಾಪ್ತಿ. ವಿಶಿಷ್ಟವಾದ ಮೇಘವು ಆಕಾಶದಲ್ಲಿದ್ದರೆ ಮಳೆ ಬರುತ್ತದೆ. ಇಲ್ಲಿ ಮೋಡ ಇರುವ ಕಾಲದಲ್ಲಿ ಸಾಧ್ಯವು ಸಿದ್ಧವಾಗುತ್ತದೆ. ಯತ್ ಏವಂ ತತ್ ಏವಂ ಎಂದು ಮತ್ತೆ ಕೆಲವೆಡೆ ವ್ಯಾಪ್ತಿ. ಯಾವುದು ಹಸುವೋ ಅದು ಸಾಸ್ನಾದಿಮತ್, ಎಂದು. ಅದರಂತೆ ಯದಿ ಇದಂ, ತರ್ಹಿ ಇದಂ ಎಂದೂ ವ್ಯಾಪ್ತಿ ಇದೆ. ಕೃತ್ತಿಕೋದಯವಾದರೆ ರೋಹಿಣಿಯ ಉದಯ ಸನ್ನಿಹಿತ, ನದಿಯು ತುಂಬಿ ಹರಿದರೆ ಗುಡ್ಡದ ಮೇಲೆ

ಮಳೆಯಾಗಿದೆ. ಹೀಗೆ ವ್ಯಾಪ್ತಿಯ ಸ್ವಭಾವಕ್ಕೆ ಅನುಸಾರವಾಗಿ ಸಾಧ್ಯವು ಸಿದ್ಧವಾಗುತ್ತದೆ. ಆದ್ದರಿಂದ ಹೇತುವು ಸಾಧ್ಯವ್ಯಧಿಕರಣವಾದರೂ ಬಾಧಕವಿಲ್ಲ.

**ಅಪ್ರಸಿದ್ಧವಿಶೇಷಣತಾ ದೋಷವಲ್ಲ**

**ಅನ್ಯತ್ ಸದಸತೋರ್ವಿಶ್ವಮಿತಿ ಚ ವ್ಯಾಹತೇರಮಾ ।**
**ಅಸಿದ್ಧಸಾಧನೇ ದೋಷಃ ಕೋ ವ್ಯಾಪ್ತಿರ್ಯದಿ ವಿದ್ಯತೇ ॥**
**ವ್ಯಾಪ್ತಿಶ್ಚ ವ್ಯತಿರೇಕೇಣ ತತ್ರ ತೈಶ್ಚಾ (ಶ್ಚೈ)ವಗಮ್ಯತೇ ॥ ೨೪ ॥**

(1) ವಿಶ್ವಂ=ಜಗತ್ತು ಸದಸತೋಃ ಅನ್ಯತ್=ಸದಸದ್ವಿಲಕ್ಷಣ ಇತಿಚ= ಹೀಗೆ ಸಾಧನೆ ಮಾಡುವ ಅನುಮಾನವು ವ್ಯಾಹತೇಃ=ವ್ಯಾಹತಿ ದೋಷ ಇರುವುದರಿಂದಲೇ ಅಮಾ=ಅಪ್ರಮಾಣವಾಗುತ್ತದೆ.

(2) ಯದಿ=ಒಂದುವೇಳೆ ವ್ಯಾಪ್ತಿಃ ವಿದ್ಯತೇ=ಹೇತುವಿನಲ್ಲಿ ಸಾಧ್ಯದ ವ್ಯಾಪ್ತಿ ಇದ್ದಲ್ಲಿ ಅಸಿದ್ಧಸಾಧನೇ=ಅಸಿದ್ಧವಾದುದನ್ನೂ ಅನುಮಾನದಿಂದ ಸಾಧನೆ ಮಾಡಿದರೂ ಕೋ ದೋಷಃ=ಏನು ದೋಷ?

(3) ತತ್ರ=ಅಪ್ರಸಿದ್ಧ ಸಾಧ್ಯಕಾನುಮಾನಗಳಲ್ಲಿ ತೈಶ್ಚ=ಅಪ್ರಸಿದ್ಧವಾದ ಸಾಧ್ಯಗಳಿಂದ ವ್ಯಾಪ್ತಿಶ್ಚ=ವ್ಯಾಪ್ತಿಯೂ ವ್ಯತಿರೇಕೇಣ=ಅಭಾವಮುಖದಿಂದ ಅವಗಮ್ಯತೇ=ತಿಳಿಯಲ್ಪಡುತ್ತದೆ.

**ಭಾವಾರ್ಥ—** ಅನುಮಾನದ ಸಾಧ್ಯವು ಅಪ್ರಸಿದ್ಧವಾದರೆ ಅಪ್ರಸಿದ್ಧ ವಿಶೇಷಣತಾದೋಷ. ಪರ್ವತಃ ಕಾಂಚನಮಯವಹ್ನಿಮಾನ್, ಎಂದು ಅನುಮಾನ ಮಾಡಿದರೆ ಸಾಧ್ಯವು ಅಪ್ರಸಿದ್ಧವಾದುದರಿಂದ ಆ ಅನುಮಾನವು ದುಷ್ಟವಾಗುತ್ತದೆ. ಇದು ತಾರ್ಕಿಕರ ನಿಲುವು.

(1) ಆದರೆ, ಅಪ್ರಸಿದ್ಧ ವಿಶೇಷಣತಾ ಪ್ರತ್ಯೇಕದೋಷವಲ್ಲ. ಹಾಗಾದರೆ ಮಾಯಾವಾದದ ''ವಿಶ್ವಂ ಸದಸದ್ವಿಲಕ್ಷಣಂ'' ಎಂಬ ಅನುಮಾನವೂ ಸರಿಯೇ? ಅಲ್ಲ. ಈ ಅನುಮಾನದ ಸಾಧ್ಯ ವಸ್ತುತಃ ಅಪ್ರಸಿದ್ಧವಾಗಿದೆ. ಆದರೂ ಆ ದೋಷವನ್ನೇ ಹೇಳಬೇಕಾಗಿಲ್ಲ. ಇಲ್ಲಿ ವ್ಯಾಹತಿ ದೋಷವಿದೆ. ಸದ್ವಿಲಕ್ಷಣ ಎನ್ನುವುದರಿಂದ ಅಸತ್ ಎಂದಂತಾಗಿ ಅದನ್ನು ಮತ್ತೆ ಅಸದ್ವಿಲಕ್ಷಣ

ಎಂದು ನಿರಾಕರಿಸಿದರೆ ವ್ಯಾಹತಿ. ಪ್ರತಿವಾದಿ ಆಡಿದ ಮಾತಿನಲ್ಲೇ ವ್ಯಾಹತಿ ಇರುವಾಗ ಆ ಮಾತು ವಾದಿಗೆ ಯಾವ ಅಪಾಯವನ್ನು ತಾನೇ ತಂದೀತು? 'ನ ಹಿ ಸ್ವವಿಷವಿಮೂರ್ಚ್ಛಿತಾ ಭುಜಂಗೀ ಪರಂ ದಶತಿ–ತನ್ನ ವಿಷದಿಂದ ತಾನೇ ಮೂರ್ಛೆಗೊಂಡ ಹಾವು ಮತ್ತೊಬ್ಬರನ್ನು ಕಚ್ಚಲಾರದು''. (ಸುಧಾ) ಸ್ವವ್ಯಾಹತಿಯು ದೋಷವೆಂದು ಸಿದ್ಧವಾಗಿದೆ. ಅದನ್ನೇ ಇಲ್ಲೂ ಹೇಳಲು ಬರುವಾಗ ಅಪ್ರಸಿದ್ಧವಿಶೇಷಣತಾ, ಎಂಬ ಹೊಸ ದೋಷದ ಅಗತ್ಯವಿಲ್ಲ.

''ಭೂಃ ಶಶವಿಷಾಣವತೀ ಭೂತ್ವಾತ್'' ಎಂದು ಸಾಧನೆ ಮಾಡಿದಾಗ ಸ್ವವ್ಯಾಹತಿ ಇಲ್ಲ. ಆದರೂ ಪ್ರತ್ಯಕ್ಷಬಾಧ ಇದೆ. ಅದರಿಂದಾಗಿಯೇ ಈ ಅನುಮಾನವು ದುಷ್ಟವೆನ್ನಬಹುದು. ಅದಕ್ಕಾಗಿಯೂ ಅಪ್ರಸಿದ್ಧವಿಶೇಷಣತಾ ದೋಷದ ಅಗತ್ಯವಿಲ್ಲ.

(2) ಸಾಧ್ಯವು ಅಪ್ರಸಿದ್ಧವಾದರೆ ಪಕ್ಷದಲ್ಲಿ ಸಾಧ್ಯಸಂದೇಹರೂಪವಾದ ಪಕ್ಷತಾ ಇರುವುದಿಲ್ಲ. ಪಕ್ಷತಾ ಇಲ್ಲದೆ ಹೋದರೆ ಹೇತುವಿನಲ್ಲಿ ಪಕ್ಷಧರ್ಮತಾ ಇರುವುದಿಲ್ಲ. ಅದಕ್ಕಾಗಿ ಅಪ್ರಸಿದ್ಧವಿಶೇಷಣತಾವನ್ನು ದೋಷವೆಂದು ಪರಿಗಣಿಸಬೇಕು.

ತಾರ್ಕಿಕರ ಈ ವಾದವೂ ಸರಿಯಲ್ಲ. ಅನುಮಿತಿ ಬರಬೇಕಾದರೆ ಸಂದೇಹದ ಅಗತ್ಯವೇ ಇಲ್ಲ. ಸಂದೇಹವಿಲ್ಲದೆಯೂ ಅನುಮಿತಿ ಬರುತ್ತದೆ, ನಿಶ್ಚಿತವಾದರೂ ಅನುಮಿತಿ ಬರುತ್ತದೆ. ಧೂಮ ಇದ್ದಲ್ಲಿ ವಹ್ನಿಯು ಇರುತ್ತದೆ ಎಂದು ತಿಳಿದವನು ದಾರಿಯಲ್ಲಿ ನಡೆಯುವಾಗ ಆಕಸ್ಮಿಕವಾಗಿ ಕಾಡಿನಲ್ಲಿ ಧೂಮವನ್ನು ಕಂಡರೆ ಕೂಡಲೇ ಅವನಿಗೆ ಇಲ್ಲಿ ಬೆಂಕಿ ಇದೆ, ಎಂದು ತಿಳಿಯುತ್ತದೆ. ಇಂತಹ ಸಂದರ್ಭದಲ್ಲಿ ಸಂದೇಹ ಮೊದಲಿಲ್ಲ. ಅದರಂತೆ ಆಪ್ತಸ್ನೇಹಿತ ಅಲ್ಲಿ ಬೆಂಕಿ ಇದೆ, ಎಂದುದನ್ನು ಕೇಳಿಸಿಕೊಂಡು ಹೋಗಿ ಹೊಗೆಯನ್ನು ನೋಡಿದಾಗ ಅವನು ಹೇಳಿದಂತೆ ಇಲ್ಲಿ ಬೆಂಕಿ ಇದೆ ಎನ್ನುವ ಜ್ಞಾನ ಬರುತ್ತದೆ. 'ನಹಿ ಸಾಮಗ್ರೀ ಬುದ್ಧಿಮತೀ ಯೇನ ಯನ್ಮಯಾ ಕರ್ತವ್ಯಂ ತದನ್ಯೇನ ಕೃತಮಿತಿ ಪರ್ಯಾಲೋಚ್ಯ ಉದಾಸೀತ–ಅನುಮಿತಿ ಸಾಮಗ್ರಿಗೆ ಬುದ್ಧಿ ಇದ್ದಿದ್ದರೆ ತನ್ನಿಂದ ಬರಬೇಕಾದ ನಿಶ್ಚಯ ಅವನಿಗೆ ಈಗಾಗಲೇ ಇದೆ ಎಂದು ತಿಳಿದು ಅದು ಸಮ್ಮನಾಗುತ್ತಿತ್ತು. ಅದಕ್ಕೆ ಬುದ್ಧಿಯಿಲ್ಲವಾದುದ

ರಿಂದಲೇ ತಿಳಿದುದನ್ನೂ ಅದು ಮತ್ತೆ ತಿಳಿಸುತ್ತದೆ. ಹೀಗೆ ಈ ಕಾರಣಕ್ಕಾಗಿಯೂ ಅಪ್ರಸಿದ್ಧ ವಿಶೇಷಣತಾವನ್ನು ದೋಷವೆಂದು ಹೇಳುವ ಅಗತ್ಯವಿಲ್ಲ.

(3) ಸಾಧ್ಯವು ಅಪ್ರಸಿದ್ಧವಾದರೆ, ಹೇತು ಇದ್ದಲ್ಲಿ ಸಾಧ್ಯ ಇದೆ, ಎಂಬ ಜ್ಞಾನವು ಬರುವುದಿಲ್ಲ. ಆದ್ದರಿಂದ ಅದನ್ನು ದೋಷ ಎನ್ನಬೇಕು. ಈ ಅನಿವಾರ್ಯತೆಯೂ ಇಲ್ಲ. ಇದಕ್ಕೆ ಮೂರು ಉದಾಹರಣೆಗಳಿವೆ—

(ಅ) ಜೀವಚ್ಛರೀರಂ ಸಾತ್ಮಕಂ ಪ್ರಾಣಾದಿಮತ್ವಾತ್. ಈ ಶರೀರದಲ್ಲಿ ಪ್ರಾಣವಾಯು ಸಂಚಾರವಿರುವುದರಿಂದ ಆತ್ಮನಿದ್ದಾನೆ. ದೇಹಾತಿರಿಕ್ತನಾದ ಆತ್ಮನನ್ನು ಒಪ್ಪದ ನಾಸ್ತಿಕನಿಗೆ ಹೀಗೆ ಸಾಧಿಸಬೇಕು. ಅವನು ಆತ್ಮನನ್ನೇ ಅಂಗೀಕರಿಸಿಲ್ಲ. ಆದ್ದರಿಂದ ಸಾಧ್ಯವು ಅಪ್ರಸಿದ್ಧ.

(ಆ) ಗೌಃ ಇತರೇಭ್ಯೋ ಭಿದ್ಯತೇ ಸಾಸ್ನಾದಿಮತ್ತ್ವಾತ್–ಹಸು ಇತರೆಲ್ಲ ವಸ್ತುಗಳಿಂದ ಭಿನ್ನವಾಗಿದೆ. ಏಕೆಂದರೆ ಇನ್ನಾವುದರಲ್ಲೂ ಇರದ ಸಾಸ್ನಾದಿಮತ್ತ್ವವು ಅದರಲ್ಲಿ ಇದೆ. ಇಲ್ಲಿ ಗವೇತರಭೇದವು ಗೋವಿನಲ್ಲಿ ಮಾತ್ರ ಇದ್ದು; ಅದನ್ನು ಈ ಅನುಮಾನದಿಂದ ಸಾಧನೆ ಮಾಡಬೇಕಾಗಿರುವುದರಿಂದ ಅದು ಮೊದಲು ಅಪ್ರಸಿದ್ಧ.

(ಇ) ಈಶ್ವರಃ ಸರ್ವಜ್ಞಃ, ಸರ್ವಕರ್ತೃತ್ವಾತ್–ಸರ್ವಕರ್ತನಾದ ಕಾರಣ ಈಶ್ವರ ಸರ್ವಜ್ಞ. ಇಲ್ಲಿ ಸರ್ವಜ್ಞತ್ವವು ಲೋಕದ ಯಾರಲ್ಲೂ ಕಾಣದ ಧರ್ಮ. ಆದ್ದರಿಂದ ಅದು ಅಪ್ರಸಿದ್ಧ.

ಈ ಮೂರು ಅನುಮಾನಗಳಲ್ಲಿ ಸಾಧ್ಯವು ಅಪ್ರಸಿದ್ಧವಾದರೂ ಅನುಮಾನಗಳು ದುಷ್ಟಗಳಲ್ಲವೆಂದು ನೈಯಾಯಿಕರೂ ಅಂಗೀಕರಿಸಿರುತ್ತಾರೆ. ಇಂತಹ ಅನುಮಾನಗಳನ್ನು ಕೇವಲವ್ಯತಿರೇಕಿ, ಎಂಬ ಪ್ರಭೇದವನ್ನಾಗಿ ಅವರು ಪರಿಗಣಿಸಿದ್ದಾರೆ. ಇಲ್ಲಿ ಸಾಧ್ಯಹೇತುಗಳಿಗೆ ವ್ಯಾಪ್ತಿಯನ್ನು ಹೇಳಲಾಗದಿದ್ದರೂ ಸಾಧ್ಯಾಭಾವಹೇತ್ವಭಾವಗಳಿಗೆ ವ್ಯಾಪ್ತಿಯನ್ನು ತೋರಿಸಬಹುದು. ಯತ್ರ ಗವೇತರಭೇದಾಭಾವಃ ಅಶ್ವೇ, ತತ್ರ ಸಾಸ್ನಾದಿಮತ್ತ್ವಾಭಾವಃ, ಯಾವುದು ಗವೇತರಕ್ಕಿಂತ ಭಿನ್ನವಲ್ಲವೋ ಅಶ್ವ, ಅದರಲ್ಲಿ ಸಾಸ್ನಾದಿಗಳಿಲ್ಲ. ಹೀಗೆ ವ್ಯತಿರೇಕವ್ಯಾಪ್ತಿಯಿಂದ ಸಾಧ್ಯವನ್ನು ಸಾಧಿಸಬೇಕು, ಎಂದು ನೈಯಾಯಿಕರು ಹೇಳುತ್ತಾರೆ. ಈ ವ್ಯತಿರೇಕವ್ಯಾಪ್ತಿಯಿಂದ ಸಾಧ್ಯ–ಹೇತುಗಳಿಗೆ ವ್ಯಾಪ್ತಿಯನ್ನು

ನಿರ್ಧರಿಸಿ ಆ ಮೂಲಕ ಹೇತುವಿನಿಂದ ಸಾಧ್ಯವನ್ನು ಸಾಧಿಸಬೇಕು ಎಂದು ಮಾಧ್ವದರ್ಶನ.

ಈ ಅನುಮಾನಗಳಲ್ಲೂ ಹೇತುವು ಸಾಧ್ಯವ್ಯಭಿಚಾರಿಯಲ್ಲ. ಹೇತುವಿದ್ದಲ್ಲಿ ಸಾಧ್ಯವು ವಸ್ತುತಃ ಇದ್ದೇ ಇದೆ. ಆದರೆ ಆ ಹೇತುವು ಪಕ್ಷದಲ್ಲಿ ಮಾತ್ರವೇ ಇರುವುದರಿಂದ ಅಲ್ಲಿ ಸಾಧ್ಯವು ಸಂದಿಗ್ಧವಾದುದರಿಂದ ವ್ಯಾಪ್ತಿಯನ್ನು ನಿರ್ಧರಿಸಲಾಗುವುದಿಲ್ಲ. ಅದಕ್ಕಾಗಿ ಸಾಧ್ಯ ಇಲ್ಲದಿರುವಲ್ಲಿ ಹೇತುವೂ ಇಲ್ಲದಿರುವುದರಿಂದ ಹೇತು ಇದ್ದಲ್ಲಿ ಸಾಧ್ಯವೂ ಇರಬೇಕು ಎಂದು ವ್ಯಾಪ್ತಿಯನ್ನು ನಿರ್ಧರಿಸಬೇಕು. ಆದ್ದರಿಂದ ಇಂತಹ ಅನುಮಾನಗಳೂ ನಿರ್ದುಷ್ಟವಾಗಿವೆ.

ಇದರ ಮೇಲೆ ತಾರ್ಕಿಕರ ವಾದ ಹೀಗಿದೆ— ಹಿಂದೆ ಹೇಳಿದ ಮೂರು ಅನುಮಾನಗಳೂ ಕೇವಲ ವ್ಯತಿರೇಕಿಗಳು. ಇಲ್ಲಿ ಸಾಧ್ಯವು ಅಪ್ರಸಿದ್ಧವಾದರೂ ಅದನ್ನು ಸಾಧಿಸಲು ಬೇರೆ ವಿಧಾನವಿದೆ. ಮೊದಲನೆಯ ಅನುಮಾನ ಜೀವಚ್ಛರೀರಂ ಸಾತ್ಮಕಂ ಪ್ರಾಣಾದಿಮತ್ತ್ವಾತ್ ಎಂದು. ಇಲ್ಲಿ ಉಸಿರಾಟ ಎಂಬ ಹೇತು ಕಾರ್ಯರೂಪವಾದುದು. ಕಾರ್ಯಕ್ಕೆ ಒಂದು ಕಾರಣವು ಇರಲೇಬೇಕು. ಭೂಮಿಯಲ್ಲಿ ಮೊಳಕೆ ಕಂಡರೆ ಒಳಗೆ ಬೀಜ ಇರಲೇಬೇಕು. ಹೀಗೆ ಸಾಮಾನ್ಯವ್ಯಾಪ್ತಿಯ ಬಲದಿಂದ ಸಾಧ್ಯವನ್ನು ಸಾಧಿಸಬೇಕು.

ಎರಡನೆಯ ಅನುಮಾನ— ಗೌಃ ಇತರಭಿನ್ನಾ ಸಾಸ್ನಾದಿಮತ್ತ್ವಾತ್, ಎಂದು. ಇಲ್ಲೂ ಸಾಮಾನ್ಯವ್ಯಾಪ್ತಿಯನ್ನು ಹೇಳಬಹುದು. ಅಸಾಧಾರಣ ವಾದ ಗುಣವುಳ್ಳ ವಸ್ತುಗಳು ಆ ಗುಣಗಳಿಲ್ಲದ ವಸ್ತುಗಳಿಗಿಂತ ಬೇರೆಯಾಗಿರು ತ್ತದೆ. ಸಾಸ್ನಾದಿಧರ್ಮಗಳು ಗೋವಿನ ಅಸಾಧಾರಣ ಧರ್ಮಗಳು. ಅವು ಬೇರೆ ಪ್ರಾಣಿಗಳಲ್ಲಿ ಇಲ್ಲ. ಆದ್ದರಿಂದ ಹಸು ಇತರ ವಸ್ತುಗಳಿಗಿಂತ ಭಿನ್ನ ವಾಗಿದೆ. ಹೀಗೆ ಸಾಮಾನ್ಯವ್ಯಾಪ್ತಿಯಿಂದಲೇ ಅಲ್ಲಿ ಸಾಧ್ಯವನ್ನು ಸಾಧಿಸ ಬಹುದು.

ಮೂರನೆಯ ಅನುಮಾನ— ಈಶ್ವರಃ ಸರ್ವಜ್ಞಃ ಸರ್ವಕರ್ತೃತ್ವಾತ್, ಎಂದು. ಇಲ್ಲಿಯೂ 'ಯಃ ಯಸ್ಯ ಕರ್ತಾ ಸಃ ತತ್ಕಾರಣಂ ಪ್ರಯೋಜನಂ ಚ ಜಾನಾತಿ' ಎಂಬ ಸಾಮಾನ್ಯವ್ಯಾಪ್ತಿಯ ಆಧಾರದಿಂದ ಸರ್ವಕರ್ತನಾದ ಈಶ ಸರ್ವಜ್ಞ ಎಂದು ಸಾಧಿಸಬಹುದು. ಆದ್ದರಿಂದ ಕೇವಲವ್ಯತಿರೇಕಿಯನ್ನು

ನಿದರ್ಶನವನ್ನಾಗಿ ಕೊಟ್ಟು ಅಪ್ರಸಿದ್ಧವಿಶೇಷಣತಾವನ್ನು ದೋಷವಲ್ಲ, ಎಂದು ಹೇಳಬಾರದು. ಕೇವಲವ್ಯತಿರೇಕಿಯಲ್ಲಿ ಸಾಧ್ಯವನ್ನು ಸಾಮಾನ್ಯವ್ಯಾಪ್ತಿಯಿಂದ ಸಾಧಿಸಬಹುದು. ಅಪ್ರಸಿದ್ಧವಿಶೇಷಣಕವಾದ ಅನುಮಾನದಲ್ಲಿ ಹೀಗೆ ಸಾಧ್ಯವನ್ನು ಸಾಧಿಸಲಾಗದು.

**ಅಪ್ರಸಿದ್ಧಸ್ಯ ಸಾಧ್ಯಸ್ಯ ಸಾಧಕತ್ವಂ ಯದೇಷ್ಯತೇ ।**
**ಲಿಂಗಸ್ಯೋಕ್ತೌ ವಿಶೇಷೋಽಯಂ ಕೇನ ಮಾನೇನ ಗಮ್ಯತೇ ॥ ೨೫ ॥**

ಅಪ್ರಸಿದ್ಧಸ್ಯ=ಅಪ್ರಸಿದ್ಧವಾದ ಸಾಧ್ಯಸ್ಯ=ಸಾಧ್ಯದ ಸಾಧಕತ್ವಂ=ಸಾಧಿಸುವ ಸಾಮರ್ಥ್ಯವು ಲಿಂಗಸ್ಯ=ಹೇತುವಿಗೆ ಯದಾ ಇಷ್ಯತೇ= ಅಂಗೀಕರಿಸಲ್ಪಡುವುದಾದಲ್ಲಿ (ಹೇತುವು ಅಪ್ರಸಿದ್ಧವಾದ ಸಾಧ್ಯವನ್ನು ಸಾಧಿಸುವುದಾದಲ್ಲಿ) ಉಕ್ತೌ=ಹಿಂದೆ ಹೇಳಿರುವ, ಕೇವಲವ್ಯತಿರೇಕಿ–ಅನುಮಾನವು ಸಾಮಾನ್ಯವ್ಯಾಪ್ತಿ ಇರುವುದರಿಂದಾಗಿ ಸಾಧಕವಾಗುತ್ತದೆ ಎಂಬ ಮಾತಿನಲ್ಲಿ ಅಯಂ ವಿಶೇಷಃ=ಈ ಉಕ್ತಿವಿಶೇಷವು ಕೇನ ಮಾನೇನ=ಯಾವ ಪ್ರಮಾಣದಿಂದ ಗಮ್ಯತೇ=ಮಾಡಲ್ಪಡಬೇಕೆಂದು ತಿಳಿಯಲ್ಪಡುತ್ತದೆ?

**ಭಾವಾರ್ಥ—** ಹಿಂದೆ ಕೇವಲವ್ಯತಿರೇಕಿಯು ಸಾಧ್ಯಸಾಧಕ ಹೇಗಾಗುತ್ತದೆ, ಎಂದು ತೋರಿಸಲ್ಪಟ್ಟಿತು. ಬಂದಿರುವ ಸಮಸ್ಯೆ ಅದಲ್ಲ. ಸಾಧ್ಯವು ಅಪ್ರಸಿದ್ಧವಾದರೆ ಅನುಮಾನವು ಸಾಧಕವಾಗುವುದೋ ಇಲ್ಲವೋ? ಸಾಧಕವಾದರೆ ಅಪ್ರಸಿದ್ಧವಿಶೇಷಣತಾದೋಷವಲ್ಲ, ಅಲ್ಲವಾದರೆ ಅದು ದೋಷ. ಹಿಂದಿನ ಸಮರ್ಥನೆಯಿಂದ ಅಪ್ರಸಿದ್ಧವಾದ ಸಾಧ್ಯವೇನೂ ಪ್ರಸಿದ್ಧವಾಗಿಲ್ಲ. ಸಾಧ್ಯವು ಅಪ್ರಸಿದ್ಧವಾದರೂ ಹೇತುವಿಗೆ ಸಾಧಕತ್ವ ಬಂತು. ಇದರಿಂದ ಅಪ್ರಸಿದ್ಧವಿಶೇಷಣತಾವು ಅಸಾಧಕತ್ವಪ್ರಯೋಜಕವಲ್ಲ ಎನ್ನುವುದು ದೃಢವಾಯಿತು.

'ಅಯಂ ವಿಶೇಷಃ' ಎಂದರೆ ಹಿಂದೆ ಹೇಳಲಾದ, ಬುದ್ಧಿಸ್ಥವಾದ ಉಕ್ತಿವಿಶೇಷ–ಮಾತಿನ ಮೋಡಿ. ಅದನ್ನು ಮಾಡುವ ಅಗತ್ಯವೇನು? ಅದರಿಂದ ಕೇವಲವ್ಯತಿರೇಕಿಯು ಅನ್ವಯವ್ಯತಿರೇಕಿಯೇನೂ ಆಗುವುದಿಲ್ಲ. ಅರ್ಥಾತ್, ಸಾಧ್ಯವನ್ನು ಪ್ರಸಿದ್ಧಿ ಮಾಡಿದಂತೆ ಆಗುವುದಿಲ್ಲ.

**ಸಾಧನಂ ಪರಮಾಣ್ವಾದೇರ್ಯದ್ಯ (ದಾ) ಸಿದ್ಧಸ್ಯ ಚೇಷ್ಯತೇ ।**
**ಯಥಾನುಭವಮೇವೈತನ್ನಾಂಗೀಕಾರ್ಯಂ ಕುತಸ್ತದಾ ॥ ೨೬ ॥**

ಅಸಿದ್ಧಸ್ಯ=ಅದುವರೆಗೆ ತಿಳಿಯದ ಪರಮಾಣ್ವಾದೇಃ=ಪರಮಾಣುವೇ ಮೊದಲಾದ ವಸ್ತುಗಳ ಸಾಧನಂ='ಸಾಧನೆ'ಯು ಯದಿಚ ಇಷ್ಯತೇ= ಇಚ್ಛಿಸಲ್ಪಡುವುದಾದಲ್ಲಿ ತದಾ=ಆಗ ಯಥಾನುಭವಂ=ಅನುಭವಾನುಸಾರ ವಾಗಿ ಏತತ್=ವ್ಯತಿರೇಕಿಸಾಧ್ಯಸಾಧಕವಾದ ಅನುಮಾನವು ಕುತೋ ನಾಂಗೀಕಾರ್ಯಂ=ಯಾಕೆ ಅಂಗೀಕರಿಸಲ್ಪಡುವುದಿಲ್ಲ?

ತಾರ್ಕಿಕರು, ಇತರ ದಾರ್ಶನಿಕರು ಅಂಗೀಕರಿಸದ, ಪರಮಾಣು, ಸಮವಾಯ ಮುಂತಾದ ಅಪೂರ್ವಪ್ರಮೇಯಗಳನ್ನು ಅನುಮಾನದಿಂದ ಸಾಧಿಸುತ್ತಾರೆ. ಅವುಗಳನ್ನು ಒಪ್ಪದವರಿಗೆ ಅದನ್ನು ಸಾಧನೆ ಮಾಡಬೇಕು. ಆಗ ಅಪ್ರಸಿದ್ಧವಿಶೇಷಣತಾದೋಷವು ಬರುತ್ತದೆ. ಇದಕ್ಕೆ ಪರಿಹಾರ–ಕಣಾದಾದಿ ಋಷಿಗಳು ಇವುಗಳನ್ನು ದಿವ್ಯದೃಷ್ಟಿಯಿಂದ ನೋಡಿ ಶಿಷ್ಯರಿಗೆ ಉಪದೇಶಿಸು ತ್ತಾರೆ. ಆಪ್ತರಾದ ಅವರ ವಾಕ್ಯದಿಂದ ಇತರರು ತಿಳಿಯುತ್ತಾರೆ. ತಿಳಿದವರು ಪ್ರತಿವಾದಿಗಳಿಗೆ ಹೇಳಿದಾಗ ಪ್ರತಿಯೋಗಿಜ್ಞಾನ ಬಂದು ಅಭಾವಜ್ಞಾನವು ಬರುತ್ತದೆ. ಹೀಗೆ ಸಮಾಧಾನ ಹೇಳುವುದಾದರೆ ಅಪ್ರಸಿದ್ಧಸಾಧ್ಯಕವಾದ ಕೇವಲವ್ಯತಿರೇಕಿ ಅನುಮಾನದಲ್ಲೂ ಹೇಳಬಹುದು. ಜೀವಚ್ಛರೀರಂ ಸಾತ್ಮಕಂ ಪ್ರಾಣಾದಿಮತ್ತ್ವಾತ್, ಎಂಬ ಅನುಮಾನದಲ್ಲೂ ಪ್ರತ್ಯಕ್ಷ ಅಥವಾ ಆಪ್ತೋಪದೇಶದಿಂದ ಸಾತ್ಮಕತ್ವ ಮತ್ತು ಪ್ರಾಣಾದಿ ಮತ್ತ್ವಗಳಿಗೆ ಆಸ್ತಿಕನು ಸಾಮಾನಾಧಿಕರಣ್ಯವನ್ನು ತಿಳಿದು ನಾಸ್ತಿಕರಿಗೆ ಅನುಮಾನದಿಂದ ತಿಳಿಸುತ್ತಾನೆ. ಆಸ್ತಿಕನ ಅನುಮಾನದಿಂದ ಪ್ರತಿಯೋಗಿ ಜ್ಞಾನವನ್ನು ಪಡೆದ ನಾಸ್ತಿಕ ಜಡವಸ್ತುಗಳಲ್ಲಿ ವ್ಯತಿರೇಕವ್ಯಾಪ್ತಿಯನ್ನು ತಿಳಿದು ಆ ಮೂಲಕ ಅನ್ವಯವ್ಯಾಪ್ತಿ ಯನ್ನು ತಿಳಿದುಕೊಳ್ಳುತ್ತಾನೆ. ಹೀಗಿರುವಾಗ ಸಾಧ್ಯಾಪ್ರಸಿದ್ಧಿಗೆ ಅವಕಾಶವೇ ಇಲ್ಲ.

**ಯತ್ರ ನಾತಿಪ್ರಸಂಗೋಽಸ್ತಿ ಮಾನಂ ನಚ ವಿಪರ್ಯಯೇ ।**
**ಕ್ಲಿಷ್ಟಕಲ್ಪನಯೈವಾತ್ರ ಸಾಧ್ಯಮಿತ್ಯತಿದುರ್ವಚಃ ॥ ೨೭ ॥**

ಯತ್ರ=ಯಾವ ಕೇವಲವ್ಯತಿರೇಕಿಯಲ್ಲಿ ಮಾನಂ ನಾಸ್ತಿ= ಸಾಮಾನ್ಯ ಮುಖವಾದ ವ್ಯಾಪ್ತಿಯನ್ನು ತೋರಿಸಿ ಸಾಧ್ಯವನ್ನು ಸಾಧಿಸಬೇಕು ಎನ್ನುವುದಕ್ಕೆ ಪ್ರಮಾಣವು ಇಲ್ಲ, ಹಿಂದೆ ಹೇಳಿದಂತೆ ಸಾಧ್ಯಜ್ಞಾನ– ಸಾಧ್ಯಾಭಾವಜ್ಞಾನ– ವ್ಯತಿರೇಕವ್ಯಾಪ್ತಿಗಳನ್ನು ತೋರಿಸಿ ಅದರಿಂದ ಅನ್ವಯ ವ್ಯಾಪ್ತಿಯನ್ನು ಸಾಧಿಸಿ ಅಪ್ರಸಿದ್ಧವಾದ ಸಾಧ್ಯವನ್ನು ಸಾಧಿಸಬಹುದು. ವಿಪರ್ಯಯೇ=ಹಾಗೆ ಸಾಧಿಸುವುದು ಸಾಧ್ಯವಾಗದಿದ್ದಲ್ಲಿ ಅತಿಪ್ರಸಂಗಃ= 'ವಿಮತಂ ಸದಸದ್‌ವಿಲಕ್ಷಣಂ' ಎಂಬ ಅನುಮಾನವೂ ಸಾಧಕವಾಗಲಿ ಎಂಬ ಅತಿಪ್ರಸಂಗವೂ ನಾಸ್ತಿ=ಇಲ್ಲ. ಇಂತಹ ಅನುಮಾನವು ವ್ಯಾಹತಿ ಇರುವುದರಿಂದಲೇ ದುಷ್ಟವಾಗುತ್ತದೆ. ಹೀಗಿರುವಾಗ ಕ್ಲಿಷ್ಟಕಲ್ಪನಯೈವ=ಪರೋಕ್ತವಾದ ಕ್ಲಿಷ್ಟಕಲ್ಪನೆ ಮಾಡಿಯೇ ಅತ್ರ=ಕೇವಲವ್ಯತಿರೇಕಿಯಲ್ಲಿ ಸಾಧ್ಯಂ=ಸಾಧ್ಯದ ಸಾಧನೆಯನ್ನು ಮಾಡಬೇಕು ಎನ್ನುವುದು ಅತಿದುರ್ವಚಃ=ಅತ್ಯಂತ ದುಷ್ಟಮಾತು.

ಭಾವಾರ್ಥ— ಇಲ್ಲಿ ಸಾಧ್ಯಾಪ್ರಸಿದ್ಧಿ ದೋಷವಲ್ಲ ಎನ್ನುವುದರ ಉಪಸಂಹಾರ ಮಾಡಲಾಗಿದೆ. ಈ ಹಿಂದೆ ಎರಡು ರೀತಿಯ ಅಪ್ರಸಿದ್ಧ ಸಾಧ್ಯಕಾನುಮಾನಗಳನ್ನು ತೋರಿಸಲಾಗಿದೆ. ಕೇವಲವ್ಯತಿರೇಕ್ಯನುಮಾನ ಮತ್ತು 'ವಿಮತಂ ಸದಸದ್ವಿಲಕ್ಷಣಂ ಬಾಧ್ಯತ್ವಾತ್' ಎನ್ನುವ ಅನುಮಾನ. ಕೇವಲವ್ಯತಿರೇಕ್ಯನುಮಾನದಲ್ಲಿ ಸಾಧ್ಯಾಪ್ರಸಿದ್ಧಿ ಇದ್ದರೂ ಅನ್ವಯ ವ್ಯಾಪ್ತಿಯನ್ನು ಅನುಮಾನ ಮಾಡಿ ತಿಳಿಯಬಹುದು, ಎಂದು ತೋರಿಸಲಾಗಿದೆ. ಸದಸದ್ವಿಲಕ್ಷಣತ್ವವನ್ನು ಸಾಧಿಸುವುದು ವ್ಯಾಹತ, ಎಂದು ತೋರಿಸಲಾಗಿದೆ. ಆದ್ದರಿಂದ, ಕೇವಲವ್ಯತಿರೇಕಿಯಲ್ಲಿ ನೈಯಾಯಿಕರು ಹಿಂದೆ ಹೇಳಿರುವ ಕ್ಲಿಷ್ಟ ಕಲ್ಪನೆಯನ್ನು ಮಾಡುವುದು ಸರಿಯಲ್ಲ.

**ಪರಿಶೇಷೋ ಮಿಥಸ್ಸಿದ್ಧಿಶ್ಚಕ್ರಕಸ್ವಾಶ್ರಯಾದಯಃ ।**
**ಅಸಿದ್ಧಸಾಧಕತ್ವೇನ ಪಂಚಾವಯವತಾಂ ವಿನಾ ।**
**ಅಂಗೀಕಾರ್ಯಾಃ ಸಮಸ್ತೈಸ್ತನ್ನಿಯಮಃ ಕಿಂನಿಬಂಧನಃ ॥ ೨೮ ॥**

ಪರಿಶೇಷಃ=ಪರಿಶೇಷಾನುಮಾನ, ಮಿಥಃಸಿದ್ಧಿಃ=ಅನ್ಯೋನ್ಯಾಶ್ರಯಾಪಾದಕಾನುಮಾನ, ಚಕ್ರಕ=ಚಕ್ರಕದೋಷಾಪಾದಕಾನುಮಾನ, ಸ್ವಾಶ್ರಯಾ–

ದಯಃ=ಆತ್ಮಾಶ್ರಯಾಪಾದಕಾನುಮಾನ, ಅನವಸ್ಥಾದೋಷಾ ಪಾದಕಾನುಮಾನ ಇವೆಲ್ಲವೂ ಅಸಿದ್ಧಸಾಧಕತ್ವೇನ=ಅಪ್ರಸಿದ್ಧವಾದ ಸಾಧ್ಯ ಗಳನ್ನು ಸಾಧಿಸುವುದರಿಂದಾಗಿ ಪಂಚಾವಯವತಾಂ ವಿನಾ=ಪಂಚ ರೂಪೋಪಪನ್ನಗಳಾಗಿ ಇಲ್ಲದೆಯೂ ಸಮಸ್ತೈಃ=ಎಲ್ಲಾ ವಾದಿಗಳಿಂದಲೂ ಅಂಗೀಕಾರ್ಯಾಃ=ಸಾಧ್ಯಸಾಧಕಗಳೆಂದು ಅಂಗೀಕರಿಸಲ್ಪಡಲೇಬೇಕು. ತನ್ನಿಯಮಃ=ಹೇತುವಿನಲ್ಲಿ ಪಂಚರೂಪಗಳು ಇರಲೇಬೇಕೆಂಬ ನಿರ್ಬಂಧವು ಕಿಂ ನಿಬಂಧನಃ=ಯಾವ ಕಾರಣದಿಂದ?

**ಭಾವಾರ್ಥ—** ಹಿಂದೆ ಕೇವಲವ್ಯತಿರೇಕಿ ಅನುಮಾನದಲ್ಲಿ ಸಾಧ್ಯವು ಅಪ್ರಸಿದ್ಧವಾದರೂ ಅದು ಸಾಧ್ಯಸಾಧಕವೆಂದು ಸರ್ವಸಮ್ಮತವಾದ ಕಾರಣ ಸಾಧ್ಯಾಪ್ರಸಿದ್ಧಿಯು ದೋಷವಲ್ಲ, ಎಂದು ಹೇಳಲಾಗಿದೆ. ಆದರೆ ಕೇವಲ ವ್ಯತಿರೇಕ್ಯನುಮಾನ ಸಾಧ್ಯಸಾಧಕವೇ ಅಲ್ಲ, ಅದು ಅಪ್ರಮಾಣ ಎಂದು ಹೇಳಿದರೆ ಇಲ್ಲಿ ಬಾಧಕವನ್ನು ಹೇಳಲಾಗಿದೆ.

ಪರಿಶೇಷಾನುಮಾನವು ಪ್ರಮಾಣವೆಂದು ಸರ್ವಸಮ್ಮತವಾಗಿದೆ. ಶಬ್ದವು ಗುಣವಾದುದರಿಂದ ಅದಕ್ಕೆ ಆಶ್ರಯವಾದ ದ್ರವ್ಯವು ಒಂದಿರಬೇಕು. ಸಿದ್ಧವಾದ ಪೃಥಿವ್ಯಾದಿ ಎಂಟು ದ್ರವ್ಯಗಳು ಶಬ್ದಕ್ಕೆ ಆಶ್ರಯಗಳಲ್ಲ. ಆದ್ದರಿಂದ ಒಂಭತ್ತನೆಯ ದ್ರವ್ಯವೊಂದು (ಆಕಾಶ) ಅದಕ್ಕೆ ಆಶ್ರಯ. ಹೀಗೆ ಆಕಾಶವನ್ನು ಸಾಧಿಸುವ ಅನುಮಾನ ಪರಿಶೇಷಾನುಮಾನ. ಅದರ ಸ್ವರೂಪ ಹೀಗೆ— ''ಶಬ್ದಃ ಅಷ್ಟದ್ರವ್ಯಾತಿರಿಕ್ತದ್ರವ್ಯಾಶ್ರಿತಃ, ಅಷ್ಟದ್ರವ್ಯಾನಾಶ್ರಿತತ್ವೇ ಸತಿ ಕ್ವಚಿದಾಶ್ರಿತತ್ವಾತ್'' ಎಂದು. ಈ ಅನುಮಾನದಲ್ಲಿ ಸಾಧ್ಯ—ಅಷ್ಟದ್ರವ್ಯಾತಿರಿಕ್ತ ದ್ರವ್ಯಾಶ್ರಿತತ್ವಂ. ಇದು ಅನುಮಾನಾತ್ ಪೂರ್ವದಲ್ಲಿ ಅಸಿದ್ಧ. ಏಕೆಂದರೆ ಎಂಟೇ ದ್ರವ್ಯಗಳೆಂದು ಅಂಗೀಕರಿಸಿರುವ ಪೂರ್ವಪಕ್ಷಿಗೆ ಅಷ್ಟದ್ರವ್ಯಾತಿರಿಕ್ತ ವಾದ ಒಂದು ದ್ರವ್ಯವೇ ಅಪ್ರಸಿದ್ಧ. ಆದರೂ ಈ ಅನುಮಾನದಲ್ಲಿ ವ್ಯತಿರೇಕ ವ್ಯಾಪ್ತಿಯು ಇರುವುದರಿಂದ ದುಷ್ಟವಲ್ಲ, ಎಂದು ಅಂಗೀಕೃತವಾಗಿದೆ.

ಹೇತುವು ಸಾಧ್ಯಸಾಧಕವಾಗಬೇಕಾದರೆ ಪಕ್ಷೇ ಸತ್ವ, ಸಪಕ್ಷೇ ಸತ್ವ, ವಿಪಕ್ಷೇ ಅಸತ್ವ, ಅಬಾಧಿತತ್ವ, ಅಸತ್ಪ್ರತಿಪಕ್ಷಿತತ್ವ, ಈ ಪಂಚರೂಪಗಳು ಅದರಲ್ಲಿ ಇರಬೇಕು. ಸಾಧ್ಯವು ಅಪ್ರಸಿದ್ಧವಾದಲ್ಲಿ ಸಪಕ್ಷೇ ಸತ್ವವು ಇರಲಾರದು. ಹೀಗೆ

ಪಂಚರೂಪಸಂಪತ್ತಿಗೆ ವಿಘಾತಕವಾದ ಕಾರಣ ಸಾಧ್ಯಾಪ್ರಸಿದ್ಧಿಯು ದೋಷ ಎಂದು ಹೇಳಬೇಕು. ಆದರೆ ಕೇವಲ ವ್ಯತಿರೇಕ್ಯನುಮಾನದಲ್ಲಿ ಸಾಧ್ಯಾಪ್ರಸಿದ್ಧಿಯಿಂದಾಗಿ ಸಪಕ್ಷೇ ಸತ್ವವು ಇಲ್ಲದಿದ್ದರೂ ಅದು ಸಾಧಕವಾಗುತ್ತದೆ. ಆದ್ದರಿಂದ ಸಾಧ್ಯಾಪ್ರಸಿದ್ಧಿ ದೋಷವಲ್ಲ.

ಇದರಂತೆ ಅನ್ಯೋನ್ಯಾಶ್ರಯದೋಷವನ್ನು ಸಾಧಿಸುವ ಅನುಮಾನವೂ ಕೇವಲವ್ಯತಿರೇಕಿಯಾಗಿರುತ್ತದೆ. ಉದಾಹರಣೆಗೆ— ಜೀವ-ಬ್ರಹ್ಮಭೇದವು ಅಜ್ಞಾನಕಲ್ಪಿತ, ಎಂದು ಮಾಯಾವಾದಿಗಳು ಹೇಳಿದರೆ ಅನ್ಯೋನ್ಯಾಶ್ರಯ ದೋಷ ಬರುತ್ತದೆ. ಅಜ್ಞಾನವಿರಬೇಕಾದರೆ ಅದಕ್ಕೆ ಆಶ್ರಯನಾದ ಜೀವನಿರಲೇಬೇಕು. ಜೀವಭಾವ ಬರುವುದು ಅಜ್ಞಾನದಿಂದ. ಹೀಗೆ, ಅಜ್ಞಾನವಿದ್ದರೆ ಜೀವಬ್ರಹ್ಮಭೇದ, ಭೇದವಿದ್ದರೆ ಅಜ್ಞಾನ, ಎಂದು ಅನ್ಯೋನ್ಯಾಶ್ರಯ ದೋಷ ಬರುತ್ತದೆ. ಇದನ್ನು ಪರರಿಗೆ ತರ್ಕರೂಪವಾದ ಅನುಮಾನದಿಂದ ಆಪಾದಿಸಬೇಕು. ಯದಿ ಭೇದಃ ಅಜ್ಞಾನಕಲ್ಪಿತಃ ಸ್ಯಾತ್ ತರ್ಹಿ ಅನ್ಯೋನ್ಯಾಶ್ರಯಃ ಸ್ಯಾತ್, ಎಂದು. ಈ ತರ್ಕದ ಆಪಾದ್ಯಾಂಶವು ಅಪ್ರಸಿದ್ಧ. ಪರಸ್ಪರೋತ್ಪನ್ನವಾಗುವ ವಸ್ತುಗಳೆರಡು ಇರಲು ಸಾಧ್ಯವಿಲ್ಲ. ಆದರೂ ಈ ಅನುಮಾನವು ಸಾಧಕವಾಗಿದೆ. ಹೀಗೆಯೇ ಮೂರಕ್ಕೆ ಪರಸ್ಪರ ಸಾಪೇಕ್ಷತ್ವ ವಿದ್ದರೆ ಚಕ್ರಕದೋಷ, ತನಗೆ ತಾನೇ ಕಾರಣವಾದರೆ ಆತ್ಮಾಶ್ರಯ. ಹೀಗಿರುವ ವಸ್ತುಗಳು ಇಲ್ಲದಿರುವುದರಿಂದ ಇವೆಲ್ಲ ದೋಷಗಳನ್ನು ಆಪಾದಿಸುವಾಗ ಸಾಧ್ಯವು ಅಪ್ರಸಿದ್ಧವಾದರೂ ದೋಷವಲ್ಲ. ಈ ಅನುಮಾನಗಳಲ್ಲಿ ಸಾಧ್ಯವು ಅಪ್ರಸಿದ್ಧವಾದುದರಿಂದಲೇ ನಿಶ್ಚಿತಸಾಧ್ಯಕವಾದ ಸಪಕ್ಷವು ಇರುವುದಿಲ್ಲ. ಸಪಕ್ಷವೃತ್ತಿತ್ವವು ಹೇತುವಿನಲ್ಲಿ ಇರುವುದಿಲ್ಲವಾದ ಕಾರಣ ಹೇತುವು ಪಂಚರೂಪೋಪಪನ್ನವಾಗುವುದಿಲ್ಲ. ಆದ್ದರಿಂದ ಹೇತುವಿಗೆ ಪಂಚರೂಪೋಪಪನ್ನತ್ವವು ಎಲ್ಲ ಅನುಮಾನಗಳಲ್ಲೂ ಇರುವುದಿಲ್ಲ.

ಅಲ್ಲದೆ, ಹೇತುವಿನಲ್ಲಿ ಪಂಚರೂಪಗಳು ಇರಲೇಬೇಕೆಂಬ ನಿರ್ಬಂಧಕ್ಕೆ ಕಾರಣವೂ ಇಲ್ಲ. ಆ ನಿಯಮ ಅಪ್ರಯೋಜಕ. ಹಾಗಾದರೆ, ಭೂಃ ನಿತ್ಯಾ, ಗಂಧವತ್ತ್ವಾತ್ ಎಂಬ ಹೇತುವು ಅಸಾಧಾರಣದೋಷದಿಂದ ದುಷ್ಟವಾಗಲಿಕ್ಕಿಲ್ಲ. ಈ ಅನುಮಾನಲ್ಲಿ ಸಪಕ್ಷವೃತ್ತಿತ್ವವು ಹೇತುವಿಗೆ ಇಲ್ಲದಿರುವುದ

ರಿಂದ ದುಷ್ಟವಾಗಿದೆ, ಎಂದೇ ಹೇಳಬೇಕು. ಸಪಕ್ಷವೃತ್ತಿತ್ವವು ಅನಿವಾರ್ಯವಲ್ಲ ವೆಂದಾದಲ್ಲಿ ಈ ಅನುಮಾನ ದುಷ್ಟವಾಗುವುದು ಹೇಗೆ? ಎಂದರೆ, ಅಲ್ಲಿ ಸಪಕ್ಷವಾದ ಗಗನಾದಿಗಳು ಪ್ರಸಿದ್ಧಗಳಾಗಿದ್ದು ಅವುಗಳಲ್ಲಿ ಹೇತುವು ಇಲ್ಲದಿರುವುದರಿಂದ ಹೇತುವು ಸಾಧ್ಯಕ್ಕೆ ಅಪ್ರಯೋಜಕವೆಂದು ಸಿದ್ಧವಾಗು ತ್ತದೆ. ಹೀಗೆ ಆ ಅನುಮಾನವು ದುಷ್ಟವಾಗುತ್ತದೆ. ಆದರೆ, ಕೇವಲ ವ್ಯತಿರೇಕಿಯಲ್ಲಿ ಸಪಕ್ಷವೇ ಇಲ್ಲದಿರುವುದರಿಂದ ಅಪ್ರಯೋಜಕತ್ವಶಂಕೆಗೆ ಅವಕಾಶವಿಲ್ಲ. ಆದ್ದರಿಂದ ಅದು ಸದನುಮಾನ. ಅಲ್ಲಿ ಅಪ್ರಸಿದ್ಧವಿಶೇಷಣತಾ ದೋಷವಲ್ಲ.

**ವಾದದಲ್ಲಿ ಸಿದ್ಧಸಾಧನತಾ ದೋಷವಲ್ಲ**

**ಸಿದ್ಧಸಾಧನತಾಯಾಂ ಚ ನ ಕಥಾವಸಿತಿರ್ಭವೇತ್ ।**
**ವ್ಯಭಿಚಾರೋ ಹೇತ್ವಸಿದ್ಧಿರೇಕಪಕ್ಷೇಽಪಿ ದೂಷಣಮ್ ॥ ೨೯ ॥**

ಸಿದ್ಧಸಾಧನತಾಯಾಂ ಚ=ಸಿದ್ಧಪ್ರಶ್ನೆ ಮಾಡುವುದು ವಾದಕಥೆಯಲ್ಲಿ ಹೇಗೆ ದೋಷವಲ್ಲವೋ ಅದರಂತೆ ಸಿದ್ಧವಾದುದನ್ನು ಸಾಧನೆಮಾಡಿದಾಗಲೂ ಕಥಾವಸಿತಿಃ=ವಾದಕಥೆಯ ಅವಸಾನವು ನ ಭವೇತ್=ಆಗುವುದಿಲ್ಲ. ಸಿದ್ಧಪ್ರಶ್ನೆಯಂತೆ ಸಿದ್ಧಸಾಧನತಾವೂ ವಾದಕಥೆಯಲ್ಲಿ ದೋಷವಲ್ಲ. ಆದರೆ ವ್ಯಾಪ್ಯಸಿದ್ಧಿ, ಸ್ವರೂಪಾಸಿದ್ಧಿದೋಷಗಳು ವಾದದಲ್ಲೂ ಪರಿಗಣಿಸಲ್ಪಡುತ್ತವೆ.

ವ್ಯಭಿಚಾರಃ=ವ್ಯಭಿಚಾರದೋಷ ಹೇತ್ವಸಿದ್ಧಿಃ=ಪಕ್ಷದಲ್ಲಿ ಹೇತುವು ಅಸಿದ್ಧವಾಗಿರುವುದು ಏಕಪಕ್ಷೇಽಪಿ=ವಾದಿ–ಪ್ರತಿವಾದಿಗಳಲ್ಲಿ ಒಬ್ಬರಿಗೆ ಬಂದರೂ ದೂಷಣಮ್=ದೋಷವು.

**ಭಾವಾರ್ಥ**— ಇದುವರೆಗೆ ಆಶ್ರಯಾಸಿದ್ಧ್ಯಾದಿಗಳು ದೋಷವಲ್ಲ ಎಂದು ಹೇಳಲಾಯಿತು. ಹಿಂದೆ, ವಾದಿಯು ಸಿದ್ಧವಾದ ವಿಷಯದಲ್ಲಿ ಪ್ರಶ್ನೆ ಮಾಡಬಾರದು, ಪ್ರತಿವಾದಿಗೆ ಸಿದ್ಧವಾದುದನ್ನೇ ಸಾಧನೆಯನ್ನೂ ಮಾಡ ಬಾರದು, ಎಂದು ಹೇಳಲಾಗಿದೆ. (ಶ್ಲೋಕ.10) ಈ ಎರಡು ದೋಷಗಳು ಜಲ್ಪ ಮತ್ತು ವಿತಂಡಾ ಗಳಲ್ಲಿ ಕಥಾಪರ್ಯವಸಾನಕ್ಕೆ ಕಾರಣವಾದರೂ ವಾದದಲ್ಲಿ ಹಾಗಾಗುವುದಿಲ್ಲ. ಈ ದೋಷಗಳನ್ನು ತೋರಿಸಿ ಆ ದೋಷಗಳು

ಬರದಿರುವಂತೆ ವಾದಕಥೆಯನ್ನು ಮುಂದುವರಿಸಬಹುದು. ಆದರೆ, ವ್ಯಭಿಚಾರ ಮತ್ತು ಹೇತ್ವಸಿದ್ಧಿಗಳು ವಾದದಲ್ಲೂ ದೋಷವಾಗುತ್ತವೆ. ಈ ಎರಡು ದೋಷಗಳು ವಾದಿ ಅಥವಾ ಪ್ರತಿವಾದಿ ಈ ಇಬ್ಬರಲ್ಲಿ ಒಬ್ಬರಿಗೆ ಬಂದರೂ ಸರಿ ಅವುಗಳನ್ನು ದೋಷಗಳೆಂದೇ ಪರಿಗಣಿಸಲಾಗುವುದು. ಇಲ್ಲಿ ವ್ಯಭಿಚಾರವೆಂದರೆ ವ್ಯಾಪ್ತಿಗೆ ಪ್ರತಿಬಂಧಕವಾದ ಒಂದು ದೋಷ ಮಾತ್ರವಲ್ಲ. ವ್ಯಾಪ್ತ್ಯಭಾವವೂ ವಿವಕ್ಷಿತವಾಗಿದೆ. ಅದು ಏಕತರಪಕ್ಷದಲ್ಲಿ ಇದ್ದರೂ ದೋಷ. ಆದ್ದರಿಂದ ವ್ಯಾಪ್ತ್ಯಭಾವಕ್ಕೆ ಕಾರಣವಾದ ವಿರೋಧಾದಿಗಳೂ ಏಕಪಕ್ಷೇऽಪಿ ದೋಷ ವಾಗುತ್ತವೆ. ಉದಾಹರಣೆಗೆ— 'ಶಬ್ದಃ ಉತ್ಪತ್ತಿಮಾನ್ ವಿನಾಶಿತ್ವಾತ್' ಎಂದು ತಾರ್ಕಿಕರು ದ್ವೈತವಾದಿಗಳಿಗೆ ಸಾಧಿಸಿದರೆ ಈ ಅನುಮಾನಕ್ಕೆ ದ್ವೈತಸಿದ್ಧಾಂತ ದಂತೆ ವ್ಯಭಿಚಾರದೋಷವೂ ಇದೆ, ಅಸಿದ್ಧಿಯೂ ಇದೆ. ಭಾವರೂಪಾ ಜ್ಞಾನದಲ್ಲಿ ವಿನಾಶಿತ್ವ ಇದ್ದರೂ ಉತ್ಪತ್ತಿ ಇಲ್ಲವಾದುದರಿಂದ ವ್ಯಭಿಚಾರ. ಶಬ್ದವು ನಿತ್ಯವಾದುದರಿಂದ ಅದರಲ್ಲಿ ವಿನಾಶಿತ್ವಹೇತು ಇಲ್ಲ. ಆದ್ದರಿಂದ ಅಸಿದ್ಧಿ.

**ಸಾಧ್ಯಸಾಧನವೈಕಲ್ಯಂ ದೃಷ್ಟಾಂತಸ್ಯ ವಿಶೇಷಣೇ ।**
**ವೈಯರ್ಥ್ಯಮೇಕಾಸಿದ್ಧೌ ಚ ವಿಶಿಷ್ಟಾಸಿದ್ಧಿರೇವ ಹಿ ॥ ೩೦ ॥**

ಸಾಧ್ಯ-ಸಾಧನವೈಕಲ್ಯಂ=ಸಾಧ್ಯ ಅಥವಾ ಹೇತುವು ಇಲ್ಲದಿರುವುದು ದೃಷ್ಟಾಂತಸ್ಯ(ದೂಷಣಮ್)=ದೃಷ್ಟಾಂತಕ್ಕೆ ಇರುವ ಎರಡು ದೋಷಗಳು.

ವಿಶೇಷಣೇ=ಹೇತುವಿಗೆ ವಿಶೇಷಣವನ್ನು ಕೊಟ್ಟಾಗ ವೈಯ್ಯರ್ಥ್ಯಂ=ಆ ವಿಶೇಷಣಕ್ಕೆ ಅಥವಾ ವಿಶೇಷ್ಯಕ್ಕೆ ಪ್ರಯೋಜನ ಇಲ್ಲದಿರುವುದು ದೋಷ ವಾಗುತ್ತದೆ. ಅದರಂತೆ, ಏಕಾಸಿದ್ಧೌ ಚ=ಹೇತುವಿನ ವಿಶೇಷಣ ಅಥವಾ ವಿಶೇಷ್ಯ ಇವೆರಡರಲ್ಲಿ ಒಂದು ಅಸಿದ್ಧವಾದರೂ ವಿಶಿಷ್ಟಾಸಿದ್ಧಿಃ ಏವಹಿ= ವಿಶಿಷ್ಟವಾದ ಹೇತುವು ಅಸಿದ್ಧವಾಗುತ್ತದೆ ತಾನೆ.

**ಭಾವಾರ್ಥ**— ಅನುಮಾನದಿಂದ ಪಕ್ಷದಲ್ಲಿ ಸಾಧ್ಯವನ್ನು ಸಾಧನೆ ಮಾಡಲು ಕೊಟ್ಟಿರುವ ದೃಷ್ಟಾಂತದಲ್ಲಿ ಸಾಧ್ಯವು ಇಲ್ಲದಿದ್ದಲ್ಲಿ ಸಾಧ್ಯವೈಕಲ್ಯ, ಸಾಧನ ಇಲ್ಲದಿದ್ದಲ್ಲಿ ಸಾಧನವೈಕಲ್ಯ. ಉದಾಹರಣೆಗೆ— 'ಪರ್ವತಃ ವಹ್ನಿಮಾನ್ ಧೂಮಾತ್' ಎಂದು ಅನುಮಾನ ಮಾಡಿ 'ಯಥಾ ಹ್ರದಃ' ಎಂದು ದೃಷ್ಟಾಂತವನ್ನು ಕೊಟ್ಟರೆ ಸಾಧ್ಯವೈಕಲ್ಯ ಅಥವಾ ಸಾಧನವೈಕಲ್ಯ.

ಹೇತುವಿನಲ್ಲಿ ಅನಗತ್ಯವಾದ ಅಂದರೆ ವ್ಯಾಪ್ತಿಗೆ ಉಪಯೋಗವಾಗದ ವಿಶೇಷಣವನ್ನು ಕೊಟ್ಟರೆ ವ್ಯರ್ಥವಿಶೇಷಣತಾದೋಷ. ಉದಾಹರಣೆಗೆ— 'ಕ್ಷಿತ್ಯಾದಿಕಂ ಅಕರ್ತೃಕಂ ಶರೀರಾಜನ್ಯತ್ವಾತ್' ಈ ಅನುಮಾನದಲ್ಲಿ ಅಕರ್ತೃಕತ್ವಕ್ಕೆ ಸಾಧಕವಾದುದು ಅಜನ್ಯತ್ವ ಮಾತ್ರ. ಅಜನ್ಯವಾದ ವಸ್ತು ಅಕರ್ತೃಕವಾಗಿರುತ್ತದೆ. ಆ ಅಜನ್ಯತ್ವಕ್ಕೆ ಶರೀರ ಎಂಬ ವಿಶೇಷಣದ ಅಗತ್ಯವಿಲ್ಲ. ಆದ್ದರಿಂದ ವ್ಯರ್ಥವಿಶೇಷಣತಾದೋಷ ಬರುತ್ತದೆ. ಅದರಂತೆ ಹೇತುವಿಗೆ ಕೊಟ್ಟಿರುವ ವಿಶೇಷಣವು ಆ ಹೇತುವಿನಲ್ಲಿ ಇಲ್ಲದಿದ್ದರೆ ಅಸಿದ್ಧಿದೋಷ. ಉದಾಹರಣೆಗೆ— 'ಕಾಂಚನಮಯಧೂಮಾತ್' ಎಂದು ವಹ್ನಿಸಾಧಕ ಹೇತುವನ್ನು ಹೇಳಿದರೆ ಕಾಂಚನಮಯತ್ವ ಎಂಬ ವಿಶೇಷಣವು ಧೂಮದಲ್ಲಿ ಅಸಿದ್ಧವಾಗಿದೆ. ವಿಶೇಷಣವು ಅಸಿದ್ಧವಾದರೆ ಆ ವಿಶೇಷಣವಿಶಿಷ್ಟವಾದ ಹೇತುವು ಅಸಿದ್ಧವಾಗುತ್ತದೆ.

**ಅಪ್ರಯೋಜ(ಕ)ನತಾ ತತ್ರ ಪ್ರಥಮಪ್ರಶ್ನದೂಷಣಮ್ ।**
**ಸಿದ್ಧಪ್ರಶ್ನಾದಿಕಂ ಯತ್ ತದಾಧಿಕ್ಯಾಂತರ್ಗತಂ ಭವೇತ್ ॥ ೩೧ ॥**

ತತ್ರ=ಪ್ರಶ್ನದೋಷಗಳ ಮಧ್ಯದಲ್ಲಿ ಅಪ್ರಯೋಜನತಾ=ವೈಫಲ್ಯ ಮತ್ತು ಅಸಂಗತಿಗಳೆರಡು ಪ್ರಥಮಪ್ರಶ್ನದೂಷಣಮ್=ಮೊದಲು ಕೇಳಿರುವ ಪ್ರಶ್ನೆಗೆ ದೋಷಗಳು.

ಸಿದ್ಧಪ್ರಶ್ನಾದಿಕಂ=ಪ್ರಶ್ನದೋಷದಲ್ಲಿ ಸೇರಿರುವ ಸಿದ್ಧಾರ್ಥತಾ-ಅಸಂಗತಿ ಈ ಎರಡು ದೋಷಗಳು ಯತ್=ಏನಿವೆಯೋ ತತ್=ಆ ದೋಷಗಳು ಆಧಿಕ್ಯಾಂತರ್ಗತಂ='ನ್ಯೂನತಾ-ಆಧಿಕ್ಯ' ಎಂಬ ನಿಗ್ರಹಸ್ಥಾನಗಳಲ್ಲಿ ಒಂದಾದ ಆಧಿಕ್ಯದಲ್ಲಿ ಸೇರಿದ್ದಾಗಿ ಭವೇತ್=ಆಗುತ್ತದೆ.

**ಭಾವಾರ್ಥ—** ''ಪ್ರಶ್ನದೋಷಾ ಹಿ ಚತ್ವಾರಃ' (ಶ್ಲೋಕ.14) ಎಂದು ಹಿಂದೆ ಹೇಳಿರುವ ನಾಲ್ಕು ಪ್ರಶ್ನದೋಷಗಳಲ್ಲಿ ವೈಫಲ್ಯ ಮತ್ತು ಅಸಂಗತಿಗಳೂ ಸೇರಿವೆ. ಆದರೆ, ಈ ದೋಷಗಳನ್ನು ಪ್ರತಿವಾದಿಗೆ ಹೇಳುವುದು ಸಾಧ್ಯವಿಲ್ಲ. ಏಕೆಂದರೆ ನೈಯಾಯಿಕರು 'ಶಬ್ದಃ ಅನಿತ್ಯಃ ಅಸ್ಮದಾದಿಬಾಹ್ಯೇಂದ್ರಿಯ ಗ್ರಾಹ್ಯತ್ವಾತ್'' ಎಂದು ಶಬ್ದಕ್ಕೆ ಅನಿತ್ಯತ್ವವನ್ನು ಸಾಧಿಸಿದಾಗ ಪ್ರತಿವಾದಿ

''ಸಾಮಾನ್ಯವು ನಿತ್ಯವೋ, ಅನಿತ್ಯವೋ?'' ಎಂದು ಕೇಳುತ್ತಾನೆ. ಈ ಪ್ರಶ್ನೆ ವ್ಯರ್ಥವೆಂದು ತೋರಿದರೂ ವಿಚಾರಮಾಡಿದಾಗ ಅದು ವ್ಯರ್ಥವಲ್ಲ. ಸಾಮಾನ್ಯವು ನಿತ್ಯವೆಂದಾದಲ್ಲಿ ಅದು ಬಾಹ್ಯೇಂದ್ರಿಯಗ್ರಾಹ್ಯವಾದುದರಿಂದ ಹೇತು ಬರುತ್ತದೆ. ಆದರೆ, ಅನಿತ್ಯತ್ವ ಎಂಬ ಸಾಧ್ಯ ಇಲ್ಲ. ಹೀಗೆ ವ್ಯಭಿಚಾರ ದೋಷವನ್ನು ಹೇಳುವ ಉದ್ದೇಶದಿಂದ ಈ ಪ್ರಶ್ನೆಯನ್ನು ಕೇಳಲಾಗಿದೆ. ಆದ್ದರಿಂದ ಈ ಪ್ರಶ್ನೆ ವಿಫಲವಲ್ಲ.

ಅಥವಾ, ಸಾಮಾನ್ಯವು (ಜಾತಿಯು) ಅನುಗತವೋ ಅಲ್ಲವೋ? ಎನ್ನುವ ಪ್ರಶ್ನೆ ಅಸಂಗತವೆಂದು ತೋರುತ್ತದೆ. ಆದರೆ, ಸಾಮಾನ್ಯವು ಅನುಗತವಾದಲ್ಲಿ ಅದು ನಿತ್ಯವೇ ಆಗಬೇಕಾಗುತ್ತದೆ. ಆಗ ಅದರಲ್ಲಿ ವ್ಯಭಿಚಾರ ಎಂದು ಹೇಳಬಹುದಾದ್ದರಿಂದ ಆ ಪ್ರಶ್ನೆಯೂ ಅಸಂಗತವಲ್ಲ. ಹೀಗೆ, ಈ ಎರಡು ದೋಷಗಳನ್ನು ನಿರ್ಧರಿಸುವುದು ಹೇಗೆ?

ಇದಕ್ಕೆ ಸಮಾಧಾನ ಈ ಅನುವ್ಯಾಖ್ಯಾನ— ಅಪ್ರಯೋಜಕತ್ವ ದೋಷವು ಉತ್ತರೋತ್ತರಪ್ರಶ್ನೆಗಳಲ್ಲಿ ಇಲ್ಲದಿದ್ದರೂ ಪ್ರಥಮಪ್ರಶ್ನೆಯಲ್ಲಿ ಆ ದೋಷ ಇದ್ದೇ ಇದೆ. ಮೊದಲ ಪ್ರಶ್ನೆಯು ಅಪ್ರಯೋಜಕವೆಂದು ತೋರುವುದರಿಂದ ಅದನ್ನೂ ದೋಷವೆಂದು ಪರಿಗಣಿಸಬಹುದು. ಅದರಂತೆ, ಪ್ರಶ್ನೆಯು ಉಪೋದ್ಘಾತರೂಪದಿಂದಲೂ ಅಸಂಗತವಾದರೆ ಅಸಂಗತಿದೋಷ ವನ್ನು ಹೇಳಬೇಕು.

ಈ ಸಿದ್ಧಾರ್ಥತಾ–ವೈಫಲ್ಯಗಳೆಂಬ ಎರಡು ಪ್ರಶ್ನದೋಷಗಳು ಆರು ನಿಗ್ರಹಸ್ಥಾನಗಳಲ್ಲಿ ಒಂದಾದ ಆಧಿಕ್ಯ ಎಂಬ ನಿಗ್ರಹಸ್ಥಾನದಲ್ಲಿ ಸೇರುತ್ತವೆ.

### ಪ್ರಮಾಣಾಂತರಗಳ ಅಂತರ್ಭಾವ

**ಅರ್ಥಾಪತ್ತ್ಯುಪಮಾಭಾವಾ ಅನುಮಾಂತರ್ಗತಾಃ ಕ್ವಚಿತ್ ।**
**ಪ್ರತ್ಯಕ್ಷಾಂತರ್ಗತೋಽಭಾವಃ ಸುಖಾದೇರ್ನಿಯಮೇನ ಚ ॥ ೩೨॥**

**ಅನ್ಯತ್ರ ಝಟಿತಿ ಪ್ರಾಪ್ತಃ, ಪ್ರಾರಂಭಾದ್ಯಾಶ್ಚ ಯುಕ್ತಯಃ ।**
**ಆಗಮಾರ್ಥಾವಸಿತ್ಯರ್ಥಾ ನಿಯತವ್ಯಾಪ್ತಯೋಽಖಿಲಾಃ ॥ ೩೩ ॥**

ಅರ್ಥಾಪತ್ತಿ, ಉಪಮಾನ, ಅನುಪಲಬ್ಧಿ ಇವುಗಳು ಅನುಮಾಂತರ್ಗತಾಃ=ಅನುಮಾನಾದಿ ನಾಲ್ಕು ಪ್ರಮಾಣಗಳಲ್ಲೇ ಸೇರುತ್ತವೆ.

ಅಭಾವಃ=ಅನುಪಲಬ್ಧಿಯು ಕ್ವಚಿತ್=ಕೆಲವೊಮ್ಮೆ ಪ್ರತ್ಯಕ್ಷಾಂತರ್ಗತಃ= ಪ್ರತ್ಯಕ್ಷಪ್ರಮಾಣದಲ್ಲಿ ಸೇರುತ್ತದೆ. ಸುಖಾದೇಃ=ಸುಖ ಮುಂತಾದ ಸಾಕ್ಷಿವೇದ್ಯವಾದ ವಸ್ತುಗಳ ಅಭಾವವು ನಿಯಮೇನ=ನಿಯತವಾಗಿ ಸಾಕ್ಷಿಪ್ರತ್ಯಕ್ಷವೇದ್ಯ. ಘಟಾದಿಬಾಹ್ಯವಸ್ತುಗಳ ಅಭಾವವು ಕೆಲವೊಮ್ಮೆ ಇಂದ್ರಿಯಗಳಿಂದಲೂ ಮತ್ತೆ ಕೆಲವೊಮ್ಮೆ ಅನುಮಾನದಿಂದಲೂ ವೇದ್ಯವಾಗುತ್ತದೆ. ಅನ್ಯತ್ರ=ಸುಖಭಿನ್ನವಾದ ಘಟಾದಿವಸ್ತುಗಳು ಪ್ರತಿಯೋಗಿಯಾಗಿರುವ ಅಭಾವವು ಝುಟಿತಿ ಪ್ರಾಪ್ತಃ=ಕಣ್ಣು ತೆರೆದ ಕೂಡಲೇ ತಿಳಿಯಲ್ಪಟ್ಟಾಗ ಪ್ರತ್ಯಕ್ಷವೆನಿಸುತ್ತದೆ. ಕತ್ತಲಲ್ಲಿ ತಡಕಾಡಿ ವಿಲಂಬೇನ ಘಟಾಭಾವವು ತಿಳಿದರೆ ಅದು ಅನುಮಾನ.

ಪ್ರಾರಂಭಾದ್ಯಾಶ್ಚ=ಉಪಕ್ರಮಾದಿತಾತ್ಪರ್ಯಲಿಂಗಗಳು ಯುಕ್ತಯಃ= ಅನುಮಾನಗಳು. ಏಕೆಂದರೆ, ಅಖಿಲಾಃ=ಅವೆಲ್ಲವೂ ನಿಯತ ವ್ಯಾಪ್ತಯಃ= ವ್ಯಾಪ್ತಿಸಾಪೇಕ್ಷಗಳಾಗಿಯೇ ಆಗಮಾರ್ಥಾವಸಿತ್ಯರ್ಥಾಃ= ವೇದದ ಅರ್ಥ ನಿರ್ಣಯವೇ ಪ್ರಯೋಜನವಾಗಿ ಉಳ್ಳವುಗಳು.

**ಭಾವಾರ್ಥ**— ಪ್ರತ್ಯಕ್ಷ, ಅನುಮಾನ, ಆಗಮ ಇವು ಮೂರೇ ಪ್ರಮಾಣಗಳು. ಮೀಮಾಂಸಕರು ಉಪಮಾನ, ಅರ್ಥಾಪತ್ತಿ, ಅನುಪಲಬ್ಧಿ ಎಂಬ ಇತರ ಪ್ರಮಾಣಗಳನ್ನು ಅಂಗೀಕರಿಸಿದ್ದಾರೆ. ಅವೆಲ್ಲವೂ ಮೂರರಲ್ಲೇ ಸೇರುತ್ತವೆ.

ಅರ್ಥಾಪತ್ತಿಯು ಅನುಮಾನರೂಪವಾಗಿದೆ. ಬದುಕಿರುವ ವ್ಯಕ್ತಿಯ ಗೃಹೇ ಅಭಾವವು (ಮನೆಯಲ್ಲಿ ಇಲ್ಲದಿರುವುದು) ಅನುಪಪದ್ಯಮಾನವಾಗಿದೆ. ಅದು ಆ ವ್ಯಕ್ತಿಯಲ್ಲಿ ಇರಬೇಕಾದರೆ ಅವನು ಮನೆಯಿಂದ ಹೊರಗಿರಬೇಕು. ಹೀಗೆ ಅನುಪಪನ್ನವಾದ ಒಂದನ್ನು ತಿಳಿದು ಅದರ ಉಪಪಾದಕವನ್ನು ತಿಳಿದುಕೊಳ್ಳುವುದೇ ಅರ್ಥಾಪತ್ತಿ. ಇದು ವ್ಯಾಪ್ತಿಸಾಪೇಕ್ಷವಾಗಿ ಅರ್ಥಸಾಧಕವಾದ ಕಾರಣ ಅನುಮಾನರೂಪವಾಗುತ್ತದೆ. ಹೇಗೆಂದರೆ— ಗೃಹೇ ಅಭಾವವು ಅನುಪಪದ್ಯಮಾನ ಎಂದರೆ ದಹನ

ಶೈತ್ಯದಂತೆ ಸರ್ವಥಾ ಅನುಪಪನ್ನವೋ ಅಥವಾ ಬಹಿರ್ಭಾವದ ಹೊರತಾಗಿ ಅನುಪಪನ್ನವೋ? ದಹನಶೈತ್ಯ ಅಂದರೆ ಬೆಂಕಿ ತಣ್ಣಗಾಗಿರುವುದು. ಇದು ಸರ್ವಥಾ ಸಾಧ್ಯವಿಲ್ಲ. ಇದರಂತೆ ಗೃಹೇ ಅಭಾವವಾದರೆ ಅದು ಶಶವಿಷಾಣದಂತೆ ಯಾವುದಕ್ಕೂ ಸಾಧಕವಾಗಲಾರದು. ಬಹಿರ್ಭಾವದ ಹೊರತಾಗಿ ಅನುಪಪನ್ನವೆಂದಾದರೆ ಇಂತಹ ಅನುಪಪತ್ತಿ ವ್ಯಾಪ್ತಿರೂಪ ವಾದುದು. ಗಮ್ಯವಿಲ್ಲದೆ ಗಮಕದ ಅನವಸ್ಥಿತಿಯೇ ಅವಿನಾಭಾವ. ಉದಾಹರಣೆಗೆ, ಗಮ್ಯ ವಹ್ನಿ, ಗಮಕ ಧೂಮ. ವಹ್ನಿ ಇಲ್ಲದೆ ದೂಮವು ಅನುಪಪದ್ಯಮಾನ ಎಂದರೆ ಅದು ಅವಿನಾಭಾವಸಂಬಂಧರೂಪವಾದ ವ್ಯಾಪ್ತಿ. ಅನುಪಪತ್ತಿ ದರ್ಶನ ಎಂದರೆ ವ್ಯಾಪ್ತಿದರ್ಶನ. ವ್ಯಾಪ್ತಿದರ್ಶನದ ಸಹಾಯದಿಂದ ಅರ್ಥಸಾಧಕವಾದುದು ಅನುಮಾನ. ಆದ್ದರಿಂದ ಅರ್ಥಾಪತ್ತಿಯು ಅನುಮಾನರೂಪವಾಯಿತು.

ಅನುಪಪತ್ತಿ ಎಂದರೆ ವ್ಯಾಪ್ತಿಯಲ್ಲ, ಪ್ರಮಾಣದ್ವಯವಿರೋಧ. ಬದುಕಿದ್ದಾನೆ ಎಂದು ಸಾಧಿಸುವ ಪ್ರಮಾಣ ಮತ್ತು ಮನೆಯಲ್ಲಿ ಇಲ್ಲ ಎನ್ನುವ ಪ್ರಮಾಣ ಇವೆರಡು ವಿರುದ್ಧವಾಗಿವೆ. ಈ ವಿರೋಧವೇ ಅನುಪಪತ್ತಿ. ಇದರ ಪರಿಹಾರಕ್ಕಾಗಿ ಬಹಿರ್ಭಾವವನ್ನು ಕಲ್ಪಿಸಬೇಕಾಗುತ್ತದೆ, ಎಂದು ಹೇಳುವುದೂ ಸರಿಯಲ್ಲ. ಏಕೆಂದರೆ, ಇವೆರಡೂ ವಿರುದ್ಧಗಳೇ ಅಲ್ಲ. ನಮ್ಮಲ್ಲೇ ಇವೆರಡೂ ಜೊತೆಯಾಗಿ ಕಂಡಿವೆ. ನಾವು ಹೊರಗಡೆ ಇರುವಾಗ ಬದುಕಿದ್ದೂ ಮನೆಯಲ್ಲಿ ಇರುವುದಿಲ್ಲ. ಆದ್ದರಿಂದ ಅವೆರಡಕ್ಕೆ ವಿರೋಧವಿಲ್ಲ.

ಯಾವ ವ್ಯಕ್ತಿಯನ್ನು ತಂದೆ–ತಾಯಂದಿರು ಹೊರಗೆ ಕಳಿಸದೇ ಮನೆಯಲ್ಲೇ ಬೆಳೆಸಿದ್ದಾರೋ ಅಂತಹವನು ತನ್ನಂತೆ ಬದುಕಿರುವ ಎಲ್ಲರೂ ಮನೆಯಲ್ಲೇ ಇರುತ್ತಾರೆ, ಎಂದು ತಿಳಿಯುವ ಸಂಭವ ಇದೆ. ಅಂತಹವನಿಗೆ ಇವೆರಡು ವಿರುದ್ಧವಾಗಿ ಕಾಣಬಹುದು. ಆದರೆ, ಆ ವ್ಯಕ್ತಿಯು ದೇವದತ್ತ ಬದುಕಿದ್ದಾನೆ, ಮನೆಯಲ್ಲಿಲ್ಲ, ಎಂದು ಕೇಳಿಸಿಕೊಂಡಾಗ 'ದೇವದತ್ತ ಸತ್ತಿದ್ದಾನೋ ಬದುಕಿದ್ದಾನೋ' ಎಂಬ ಸಂದೇಹಕ್ಕೆ ಒಳಗಾಗುತ್ತಾನೆ. ಅವನಿಗೆ ಬಹಿರ್ಭಾವನಿಶ್ಚಯ ಬರುವುದಿಲ್ಲ. ಅಥವಾ ಸತ್ಪ್ರತಿಪಕ್ಷಸ್ಥಳದಂತೆ ವಿರುದ್ಧ ಪ್ರಮಾಣದ್ವಯವಿರೋಧವಿರುವುದರಿಂದ ಜ್ಞಾನವೇ ಹುಟ್ಟಲಾರದು.

ಹುಟ್ಟಿದರೂ ಸಂದೇಹಾತ್ಮಕವಾದ ಜ್ಞಾನ ಹುಟ್ಟಬಹುದು. ಹೀಗಾದರೆ ಅರ್ಥಾಪತ್ತಿಯು ಪ್ರಮಾಣವೇ ಅಲ್ಲ.

ಸಾದೃಶ್ಯ ಎನ್ನುವುದು ಇನ್ನೊಂದು ಪ್ರಮಾಣ. ಸಾದೃಶ್ಯವೆಂದರೆ ಉಪಮಾನಪ್ರಮಾಣ. ಗೋಸದೃಶವಾದ ಪ್ರಾಣಿ ಗವಯ, ಎಂದು ಕೇಳಿ ತಿಳಿದವನು ಕಾಡಿಗೆ ಹೋಗಿ ಗೋವಿನಂತಿರುವ ಪ್ರಾಣಿಯನ್ನು ನೋಡಿ 'ಅಯಂ ಗೋಸದೃಶಃ' ಎಂದು ತಿಳಿಯುತ್ತಾನೆ. ಇದು ಸಾದೃಶ್ಯಪ್ರತ್ಯಕ್ಷ. ಇದರಿಂದ ಹಟ್ಟಿಯಲ್ಲಿರುವ ಹಸು ಗವಯ ಸದೃಶವಾಗಿದೆ, ಎಂದು ತಿಳಿಯುತ್ತಾನೆ. ಇದೇ ಉಪಮಿತಿ. ಇದಕ್ಕೆ ಕಾರಣವಾದ ಸಾದೃಶ್ಯಪ್ರತ್ಯಕ್ಷವು ಉಪಮಾನ. ಇದು ಮೀಮಾಂಸಕರ ಸಿದ್ಧಾಂತ. ಆದರೆ, ಇದು ಅನುಮಾನ ಪ್ರಮಾಣ. ಒಂದು ಇನ್ನೊಂದಕ್ಕೆ ಸದೃಶವಾದರೆ ಇನ್ನೊಂದು ಇದಕ್ಕೆ ಸದೃಶವಾಗಿರುತ್ತದೆ, ಎಂದು ವ್ಯಾಪ್ತಿ ಇದೆ. ಇದರ ಆಧಾರದಿಂದ 'ಗೌಃ ಗವಯಸದೃಶಾ' ಎಂಬ ಅನುಮಿತಿ ಬರುತ್ತದೆ.

'ಇಲ್ಲಿ ನೀರು ಇಲ್ಲ' ಇತ್ಯಾದಿ ಅಭಾವಜ್ಞಾನಕ್ಕೆ ಕಾರಣವಾದುದು 'ಅಭಾವ' ಎಂಬ ಪ್ರಮಾಣಾಂತರ, ಎಂದು ಮೀಮಾಂಸಕರ ವಾದ. ಇದೂ ಸರಿಯಲ್ಲ. ಅಭಾವಜ್ಞಾನ ಕೆಲವೊಮ್ಮೆ ಇಂದ್ರಿಗಳಿಂದಲೇ ಬರುತ್ತದೆ. ಆಗ ಅದು ಪ್ರತ್ಯಕ್ಷದಲ್ಲಿ ಸೇರುತ್ತದೆ. ಸಾಕ್ಷಿವೇದ್ಯವಾದ ಸುಖ–ದುಃಖಾದಿಗಳ ಅಭಾವದ ಜ್ಞಾನವು 'ನನಗೆ ಸುಖವಿಲ್ಲ' ಎಂಬ ಸಾಕ್ಷಿಪ್ರತ್ಯಕ್ಷರೂಪವಾಗಿದೆ. ಈ ಜ್ಞಾನ ಎಂದೂ ಅನುಮಿತಿರೂಪವಾಗಿರುವುದಿಲ್ಲ. ಆದರೆ ಚಕ್ಷುರಾದಿ ಇಂದ್ರಿಯಗಳಿಂದ ತಿಳಿಯಲ್ಪಡುವ ಘಟಾದಿವಸ್ತುಗಳ ಅಭಾವಜ್ಞಾನವು ಕೆಲವೊಮ್ಮೆ ಕಣ್ಣಿನಿಂದ ಬರುವ ಪ್ರತ್ಯಕ್ಷರೂಪವಾಗಿರುತ್ತದೆ. ನಿದ್ದೆಯಿಂದ ಎದ್ದಕೂಡಲೇ ಇಲ್ಲಿ ಅಂಧಕಾರ ಇಲ್ಲ, ಎನ್ನುವ ಜ್ಞಾನ ಪ್ರತ್ಯಕ್ಷ. ಆದರೆ ಕತ್ತಲಲ್ಲಿ ತಡಕಾಡಿದರೂ ಸಿಗದಿದ್ದಾಗ 'ಇಲ್ಲಿ ಘಟ ಇಲ್ಲ' ಎನ್ನುವ ಜ್ಞಾನ ಬಂದರೆ ಅದು ಅನುಮಿತಿ. ಇಲ್ಲಿ ಘಟ ಇಲ್ಲ, ತಡಕಾಡಿದರೂ ಕೈಗೆ ತಗಲಲಿಲ್ಲ, ಎಂದು ಅನುಮಾನ ಮಾಡಿ ಬಂದಿರುವ ಜ್ಞಾನ ಅದು.

ಬೆಳಿಗ್ಗೆ ಅರಮನೆಯಲ್ಲಿ ಸುತ್ತಾಡುತ್ತಿದ್ದಾಗ ಅಲ್ಲಿ ಗಜಾಭಾವ ಇದ್ದರೂ ಗಜದ ಸ್ಮರಣೆ ಇಲ್ಲದಿರುವ ಕಾರಣದಿಂದಾಗಿ ಗಜಾಭಾವದ ಪ್ರತ್ಯಕ್ಷಬರಲಿಲ್ಲ.

ಮನೆಗೆ ಬಂದಮೇಲೆ 'ಅರಮನೆಯಲ್ಲಿ ಆನೆ ಇರಲಿಲ್ಲ' ಎಂದು ಗಜಾಭಾವದ ಜ್ಞಾನ ಬರುತ್ತದೆ. ಈ ಜ್ಞಾನ ಬರುವ ಕ್ರಮ ಹೀಗೆ– ಒಂದು ವೇಳೆ ಆನೆಯಂತಹ ದೊಡ್ಡ ಪ್ರಾಣಿ ಅಲ್ಲಿ ಇದ್ದಿದ್ದರೆ ನನ್ನ ಕಣ್ಣಿಗೆ ಬೀಳುತ್ತಿತ್ತು. ಅದು ಕಣ್ಣಿಗೆ ಬಿದ್ದಿದ್ದರೆ ಅದರ ಸ್ಮರಣೆ ಬರುತ್ತಿತ್ತು. ಸ್ಮರಣೆ ಬರುತ್ತಿಲ್ಲವಾದಕಾರಣ ಆನೆ ಇರಲಿಲ್ಲ. ಇದು ಅನುಮಿತಿ. ಇದಕ್ಕೆ ಸ್ಮರಣಾಭಾವವೇ ಲಿಂಗ.

ಉಪಕ್ರಮ, ಉಪಸಂಹಾರಾದಿಗಳು ವೇದದ ತಾತ್ಪರ್ಯಕ್ಕೆ ನಿರ್ಣಾಯಕಗಳು. 'ಅಗ್ನಿಮೀಳೇ' ಎಂದು ಅಗ್ನಿಯ ಉಪಕ್ರಮ ಇರುವುದ ರಿಂದ ಈ ಸೂಕ್ತವು ಅಗ್ನಿಯ ಕುರಿತಾಗಿದೆ, ಎಂದು ನಿರ್ಣಯಿಸಲಾಗುತ್ತದೆ. ಇದೂ ಅನುಮಾನವೇ. ಹೀಗೆ ಉಪಕ್ರಮಾದಿಗಳೆಲ್ಲವೂ ಯುಕ್ತಿರೂಪ ವಾಗಿಯೇ ಅರ್ಥನಿರ್ಣಾಯಕವಾಗುತ್ತವೆ. ಹೀಗೆ ಮೂರೇ ಪ್ರಮಾಣಗಳು.

**ವಾಕ್ಯಂ ಪ್ರಕರಣಂ ಸ್ಥಾನಂ ಸಮಾಖ್ಯಾ ಚ ತಥಾವಿಧಾಃ ।**
**ಕುರುಪಾಂಡವವತ್ ತೇಷಾಮುಪಪತ್ತೇಃ ಪೃಥಗ್ ವಚಃ ॥ ೩೪ ॥**

ವಾಕ್ಯಂ=ವಾಕ್ಯವು ಪ್ರಕರಣಂ=ಪ್ರಕರಣವು, ಸ್ಥಾನಂ=ಸ್ಥಾನವು, ಸಮಾಖ್ಯಾ=ಸಮಾನವಚನ ಇವೆಲ್ಲವೂ ತಥಾವಿಧಾಃ=ಯುಕ್ತಿಗಳೇ ಆಗಿವೆ. ಉಪಕ್ರಮಾದಿಗಳೆಲ್ಲವೂ ಉಪಪತ್ತಿರೂಪಗಳೇ ಆದರೂ ಕುರು ಪಾಂಡವವತ್=ಕುರುಗಳು–ಪಾಂಡವರು, ಎಂದಂತೆ ತೇಷಾಂ= ಉಪಕ್ರಮಾದಿಗಳ ಮಧ್ಯದಲ್ಲಿ ಉಪಪತ್ತೇಃ=ಉಪಪತ್ತಿಗೆ ಪೃಥಗ್‌ವಚಃ= ಪ್ರತ್ಯೇಕ ಪರಿಗಣನೆಯು ಯುಕ್ತವಾಗಿದೆ.

**ಭಾವಾರ್ಥ**— ಉಪಕ್ರಮಾದಿಗಳಂತೆ ಶ್ರುತಿ, ಲಿಂಗ, ಸಮಾಖ್ಯಾ, ವಾಕ್ಯ, ಪ್ರಕರಣ, ಸ್ಥಾನ ಇವುಗಳೂ ತಾತ್ಪರ್ಯಲಿಂಗಗಳು. ಶ್ರುತಿ ಎಂದರೆ ಅಸಾಧಾರಣನಾಮ. ಬ್ರಹ್ಮ ಎಂಬ ಶ್ರುತಿ ಇರುವುದರಿಂದ ಆನಂದಮಯ ವಿಷ್ಣು. ಪರೋವರೀಯಸ್ತ್ವಾದಿಲಿಂಗಗಳು (ಅಸಾಧಾರಣ ಧರ್ಮಗಳು) ಇರುವುದರಿಂದ 'ಅಸ್ಯಲೋಕಸ್ಯಕಾ ಗತಿಃ, ಆಕಾಶ ಇತಿ ಹೋವಾಚ' ಎನ್ನುವ ಶ್ರುತಿಯಲ್ಲಿರುವ ಆಕಾಶ ಶಬ್ದವು ವಿಷ್ಣುವಾಚಕ.

ಅನೇಕ ಪದಘಟಿತವಾದುದು ವಾಕ್ಯ. ಬೃಹದಾರಣ್ಯಕೋಪನಿಷತ್ತಿನ 'ಕಿಂ

ಜ್ಯೋತಿರಯಂ ಪುರುಷಃ?' ಎಂಬ ಜನಕರಾಜನ ಪ್ರಶ್ನೆಗೆ ಉತ್ತರವಾಗಿ ಬಂದಿರುವ 'ಹೃದ್ಯಂತರ್ಜ್ಯೋತಿಃ ಪುರುಷಃ' ಎಂಬ ಪ್ರಕರಣವು ಬ್ರಹ್ಮಪರ ಎನ್ನುವುದಕ್ಕೆ 'ಕತಮ ಆತ್ಮಾ' ಎಂಬ ಆತ್ಮಶಬ್ದಘಟಿತವಾದ ವಾಕ್ಯವೇ ಆಧಾರ.

ಅನೇಕವಾಕ್ಯಗಳ ಗುಂಪು ಪ್ರಕರಣ. ತೈತ್ತಿರೀಯಉಪನಿಷತ್ತಿನ ಅನ್ನಮಯ, ಪ್ರಾಣಮಯ ಮುಂತಾದ ಭಗವದ್ರೂಪವನ್ನು ಹೇಳುವ ವಾಕ್ಯ ಸಮೂಹಗಳು ಅನ್ನಮಯಪ್ರಕರಣ, ಪ್ರಾಣಮಯಪ್ರಕರಣ ಎನಿಸುತ್ತವೆ. ಇಂತಹ ಅನೇಕಪ್ರಕರಣಗಳಿರುವ ಒಂದು ಭಾಗ ಸ್ಥಾನ. ಬ್ರಹ್ಮವಲ್ಲೀ ಒಂದು ಸ್ಥಾನ. ಇವೆಲ್ಲವೂ ಉಪಕ್ರಮಾದಿಗಳಂತೆ ಲಿಂಗರೂಪವಾಗಿಯೇ ಪ್ರಮಾಣ ಗಳಾಗಿವೆ.

**ಆಕ್ಷೇಪ—** ಉಪಕ್ರಮಾದಿಗಳು ಯುಕ್ತಿರೂಪಗಳಾದರೆ ಅವುಗಳ ಜೊತೆಯಲ್ಲಿ 'ಉಪಪತ್ತಿ' ಎಂದು ಮತ್ತೆ ಯುಕ್ತಿಯನ್ನು ಪ್ರತ್ಯೇಕ ನಿರ್ಣಾಯಕ ವನ್ನಾಗಿ ಪರಿಗಣಿಸಿರುವುದು ಹೇಗೆ? ಅದರಂತೆ, ಶ್ರುತ್ಯಾದಿಗಳ ಜೊತೆಯಲ್ಲಿ 'ಶ್ರುತಿರ್ಲಿಂಗಂ ಸಮಾಖ್ಯಾ ಚ' ಎಂದು ಲಿಂಗವನ್ನು (ಯುಕ್ತಿಯನ್ನು) ಪ್ರತ್ಯೇಕ ನಿರ್ಣಾಯಕವನ್ನಾಗಿ ಪರಿಗಣಿಸಲಾಗಿದೆ. ಇದು ಹೇಗೆ? ಅದಕ್ಕುತ್ತರ— ಸಂತಾನಬೀಜಂ ಕುರುಪಾಂಡವಾನಾಂ, ಎಂದು ಭಾಗವತ ದಲ್ಲಿ ಪರೀಕ್ಷಿದ್ರಾಜನನ್ನು ಕುರು ಮತ್ತು ಪಾಂಡವರ ಸಂತಾನದ ಬೀಜ, ಎಂದು ಉಲ್ಲೇಖಿಸಲಾಗಿದೆ. ಪಾಂಡವರೂ ಕುರುಸಂತತಿಯಲ್ಲೇ ಸೇರಿದ್ದರೂ ಅವರಲ್ಲಿ ಪಾಂಡುಸುತರೆಂಬ ವಿಶೇಷಧರ್ಮವಿದೆ, ಎಂದು ತಿಳಿಸುವುದಕ್ಕಾಗಿ ಹೀಗೆ ಪ್ರಯೋಗ ಮಾಡಲಾಗಿದೆ. ಅಲ್ಲಿ ಪಾಂಡವ ಶಬ್ದವಿರುವುದರಿಂದ ಕುರುಶಬ್ದಕ್ಕೆ ಪಾಂಡವಾತಿರಿಕ್ತಕುರುಗಳು ಎಂದರ್ಥ. ಅದರಂತೆ ಉಪಕ್ರಮ ಶಬ್ದವನ್ನು ಪ್ರಯೋಗಿಸಿರುವುದರಿಂದ ಉಪಕ್ರಮಾದಿಗಳಿಗಿಂತ ಭಿನ್ನವಾದ ಯುಕ್ತಿ ಎಂದು ಉಪಪತ್ತಿಶಬ್ದದ ಅರ್ಥ. ಉದಾಹರಣೆಗೆ— 'ನೇಹ ನಾನಾಸ್ತಿ' ಎಂಬ ಶ್ರುತಿಯು ಬ್ರಹ್ಮಾತಿರಿಕ್ತವಾದ ಎಲ್ಲವೂ ಮಿಥ್ಯಾ ಎಂದು ಹೇಳಿದರೆ ತಾನೂ ಮಿಥ್ಯಾ ಎಂದಾಗುತ್ತದೆ. ತಾನೇ ಮಿಥ್ಯಾ ಆದರೆ ಸಾಧಕವೇ ಆಗಲಾರದು. ಈ ಯುಕ್ತಿಯ ವಿರೋಧ ಶ್ರುತಿಗೆ ಬರುತ್ತದೆ. ಈ ಯುಕ್ತಿ ಉಪಕ್ರಮಾದಿ ರೂಪವಲ್ಲ. ಹೀಗೆ ಯುಕ್ತಿಯನ್ನು ಪ್ರತ್ಯೇಕವಾಗಿ ಉಲ್ಲೇಖಿಸಿರುವ

ಮಾತ್ರದಿಂದ ಉಪಕ್ರಮಾದಿಗಳು ಯುಕ್ತಿಗಳಲ್ಲ, ಎಂದೇನೂ ಸಿದ್ಧವಾಗುವುದಿಲ್ಲ. ಆದ್ದರಿಂದ ಅವುಗಳು ಅನುಮಾನ ಪ್ರಮಾಣದಲ್ಲೇ ಸೇರುತ್ತವೆ.

**ತರ್ಕವೂ ಪ್ರಮಾಣ**

**ಸ್ವನ್ಯಾಯೈಃ ಸಾಧನಂ ಕಾರ್ಯಂ ಪರನ್ಯಾಯೈಸ್ತು ದೂಷಣಮ್ ।**
**ಸ್ವನ್ಯಾಯೈರ್ದೂಷಣಂ ಚ ಸ್ಯಾತ್ ಸಾಧಿತೈಃ ಪ್ರತಿವಾದಿನಃ ॥ ೩೫ ॥**

ಸ್ವನ್ಯಾಯೈಃ=ಪ್ರತಿವಾದಿಗೆ ಮಾತ್ರವಲ್ಲದೆ ವಾದಿಗೂ ಸಿದ್ಧವಾದ ಪಕ್ಷ, ಹೇತು, ದೃಷ್ಟಾಂತ, ವ್ಯಾಪ್ತಿಗಳಿಂದ ಸಾಧನಂ ಕಾರ್ಯಂ=ಸಾಧ್ಯವನ್ನು ಸಾಧಿಸಬೇಕು. ಪರನ್ಯಾಯೈಃ=ಪ್ರತಿವಾದಿಗೆ ಮಾತ್ರ ಸಿದ್ಧವಾಗಿರದೆ ತನಗೂ ಸಿದ್ಧವಾದ ವ್ಯಾಪ್ತ್ಯಾದಿಗಳಿಂದ ದೂಷಣಂ=ಪ್ರತಿವಾದಿಯ ದೂಷಣೆಯನ್ನು ಕಾರ್ಯಂ=ಮಾಡಬೇಕು. ಸಾಧಿತೈಃ=ಪರನಿಗೂ ಸಾಧಿಸಿಕೊಟ್ಟ ಸ್ವನ್ಯಾಯೈಃ= ಸ್ವಮಾತ್ರಸಿದ್ಧವ್ಯಾಪ್ತ್ಯಾದಿಗಳಿಂದ ದೂಷಣಂ ಚ=ದೂಷಣೆಯನ್ನೂ ಸಾಧನೆಯನ್ನೂ ಕಾರ್ಯಂ=ಮಾಡಬೇಕು. ಅದರಂತೆ, ಪರನ್ಯಾಯೈಃ= ಪರಮಾತ್ರ ಸಿದ್ಧವಾದ ಲಿಂಗಗಳಿಂದ ದೂಷಣಂ=ಅನಿಷ್ಟವನ್ನು ತೋರಿಸಿ ಪರದೂಷಣವನ್ನು ಮಾಡಬೇಕು.

ಭಾವಾರ್ಥ— ವಾದದಲ್ಲಿ ವಾದಿಯು ತನ್ನ ಪಕ್ಷದ ಸಮರ್ಥನೆಯ ಜೊತೆಗೆ ಪರಪಕ್ಷದ ನಿರಾಕರಣೆಯನ್ನು ಮಾಡಬೇಕು. ಬ್ರಹ್ಮನಿಗೆ ಸಗುಣತ್ವವನ್ನು ಸಾಧಿಸುವುದರೊಂದಿಗೆ ಪರರು ಹೇಳುವ ನಿರ್ಗುಣತ್ವದ ನಿರಾಕರಣೆಯನ್ನು ಮಾಡಬೇಕು. ಇವೆರಡರಲ್ಲಿ ಸ್ವಪಕ್ಷ ಸಾಧನೆಗಾಗಿ ಪ್ರಯೋಗಿಸುವ ಅನುಮಾನದ ಪಕ್ಷ, ಹೇತು, ವ್ಯಾಪ್ತಿಗಳನ್ನು ವಾದಿ–ಪ್ರತಿವಾದಿಗಳಿಬ್ಬರೂ ಅಂಗೀಕರಿಸಿರಬೇಕು. ಕೆಲವೊಮ್ಮೆ ಪ್ರತಿವಾದಿ ಅಂಗೀಕರಿಸದಿರುವ ಹೇತುವನ್ನು ಹೇಳಿದರೆ ಆ ಹೇತುವನ್ನು ಯುಕ್ತಿಯಿಂದ ಸಾಧಿಸಿ ತೋರಿಸಬೇಕು. ತಾರ್ಕಿಕರು ಮೀಮಾಂಸಕರ ಮುಂದೆ ಶಬ್ದದ ಅನಿತ್ಯತ್ವವನ್ನು ಹೀಗೆ ಸಾಧಿಸುತ್ತಾರೆ— ಶಬ್ದಃ ಅನಿತ್ಯಃ, ಕಾರ್ಯತ್ವಾತ್, ಎಂದು. ಆದರೆ ಶಬ್ದವು ನಿತ್ಯವೆಂದು ಹೇಳುವ ಮೀಮಾಂಸಕರು ಶಬ್ದವು ಕಾರ್ಯ(ಜನ್ಯ) ಎಂದು ಅಂಗೀಕರಿಸುವುದಿಲ್ಲ. ಅದಕ್ಕಾಗಿ ಅದನ್ನು ಸಾಧಿಸಿ ಒಪ್ಪಿಸಬೇಕು– ''ಶಬ್ದಃ ಕಾರ್ಯಃ, ವಕ್ತುಃ

ಪ್ರಯತ್ನಾನಂತರೋಪಲಬ್ಧೇಃ'' ಎಂದು. ಹೀಗೆ ಸ್ವಪಕ್ಷಸಾಧಕ ನ್ಯಾಯವು ಸರ್ವಥಾ ಉಭಯಸಮ್ಮತವಾಗಿರಬೇಕು.

ಪ್ರತಿವಾದಿದೂಷಣೆಯು ಎರಡು ವಿಧ— ನೀನು ಹೇಳಿದಂತೆ ಇದು ಅಲ್ಲ, ಎನ್ನುವುದು ಒಂದಾದರೆ, ನೀನು ಹೇಳಿದ್ದನ್ನು ಒಪ್ಪಿದರೆ ಹೀಗೆ ತೊಂದರೆ ಬಂದೀತು, ಎನ್ನುವುದು ಇನ್ನೊಂದು ವಿಧದ ದೂಷಣೆ. ಮೊದಲನೆಯ ನಿರಾಕರಣೆಯನ್ನು ಮಾಡುವಾಗ ಹೇತುಪಕ್ಷಾದಿಗಳು ಉಭಯಸಿದ್ಧ ವಾಗಿರಬೇಕು. ಉದಾಹರಣೆಗೆ- ನೈಯಾಯಿಕರು ಶಬ್ದವು ಗುಣ ಎಂದರೆ ಮೀಮಾಂಸಕರು ಅದು ದ್ರವ್ಯ ಎನ್ನುತ್ತಾರೆ. ನೈಯಾಯಿಕರು ಮೀಮಾಂಸಕ ರನ್ನು ನಿರಾಕರಿಸುವ ಅನುಮಾನ– ''ಶಬ್ದಃ ನ ದ್ರವ್ಯಂ, ಶ್ರೋತ್ರಗ್ರಾಹ್ಯತ್ವಾತ್'' ಎಂದು. ಈ ಅನುಮಾನದ ಪಕ್ಷ, ಹೇತು, ವ್ಯಾಪ್ತಿಗಳು ಉಭಯ ಸಮ್ಮತವಾಗಿವೆ. ಕೆಲವೊಮ್ಮೆ ಪರರು ಅಂಗೀಕರಿಸದ ಹೇತುವನ್ನು ಹೇಳಿದರೂ ಆ ಹೇತುವನ್ನು ಪರರಿಗೂ ಸಾಧಿಸಿಕೊಡಬೇಕು. ಹಿಂದೆ ಹೇಳಿದ ಅನುಮಾನ ದಲ್ಲಿ ಹೇತು–ಸಾಧ್ಯಗಳಿಗೆ ವ್ಯಾಪ್ತಿಯನ್ನು ಮೀಮಾಂಸಕರು ಒಪ್ಪುವುದಿಲ್ಲ. ಅವರ ಮತದಂತೆ ಕಾಲವು ಸರ್ವೇಂದ್ರಿಯ ಗ್ರಾಹ್ಯವಾದುದರಿಂದ ಅದರಲ್ಲಿ ಶ್ರೋತ್ರಗ್ರಾಹ್ಯತ್ವ ಇದೆ, ಆದರೆ ಅದು ದ್ರವ್ಯವೇ ಆಗಿದೆ, 'ನ ದ್ರವ್ಯಂ' ಎಂಬ ಸಾಧ್ಯ ಕಾಲದಲ್ಲಿ ಇಲ್ಲ. ಹೀಗೆ ವ್ಯಭಿಚಾರ ಇರುವುದರಿಂದ ವ್ಯಾಪ್ತಿಯು ಅಸಿದ್ಧವಾಗಿದೆ. ಅದಕ್ಕಾಗಿ ನೈಯಾಯಿಕರು ಕಾಲಕ್ಕೆ ಅತೀಂದ್ರಿಯತ್ವವನ್ನು ಸಾಧಿಸಿ, ಅಲ್ಲಿ ಶ್ರೋತ್ರಗ್ರಾಹ್ಯತ್ವವು ಇಲ್ಲವಾದುದರಿಂದ ಹೇತು–ಸಾಧ್ಯಗಳ ವ್ಯಾಪ್ತಿಗೆ ಬರುವ ಬಾಧಕವನ್ನು ಪರಿಹಾರ ಮಾಡಬೇಕು.

ಎರಡನೆಯ ವಿಧದ ದೂಷಣೆಯನ್ನು ಪರಮಾತ್ರಸಿದ್ಧನ್ಯಾಯದಿಂದ ಮಾಡಬೇಕು. ''ಪರ್ವತೋ ವಹ್ನಿಮಾನ್ ಧೂಮಾತ್'' ಎಂದು ವಾದಿಯು ಸಾಧನೆ ಮಾಡಿದಾಗ ಪ್ರತಿವಾದಿಯು 'ಪರ್ವತೋ ನಿರಗ್ನಿಕಃ ಕಿಂ ನ ಸ್ಯಾತ್'' ಎಂದು ಆಕ್ಷೇಪಿಸುತ್ತಾನೆ. ಆಗ ವಾದಿಯು ಅನಿಷ್ಟಪ್ರಸಂಜಕವಾದ ತರ್ಕವನ್ನು ಹೇಳಬೇಕು— ''ಯದಿ ನಿರಗ್ನಿಕಃ ಸ್ಯಾತ್, ತರ್ಹಿ ನಿರ್ಧೂಮಃ ಸ್ಯಾತ್'' ಎಂದು. ಇಲ್ಲಿ ನಿರಗ್ನಿಕತ್ವಹೇತುವಿನಿಂದ ನಿರ್ಧೂಮತ್ವವನ್ನು ಆಪಾದಿಸುವಾಗ ನಿರಗ್ನಿಕತ್ವವು ಪ್ರತಿವಾದಿಮಾತ್ರಸಿದ್ಧ ಹೊರತು ವಾದಿಯು ಅದನ್ನು

ಅಂಗೀಕರಿಸಿಲ್ಲ. ಇಂತಹ ಸಂದರ್ಭದಲ್ಲಿ ನ್ಯಾಯವು ಉಭಯಸಿದ್ಧವಾಗ ಬೇಕಿಲ್ಲ.

ಇದರಿಂದ, ತರ್ಕವೂ ಒಂದು ಪ್ರಮಾಣವೆಂದು ತಿಳಿಯಬಹುದು. ಅದು ವ್ಯಾಪ್ತಿಯ ಆಧಾರದಿಂದ ಅನಿಷ್ಟಾಪಾದಕವಾದುದರಿಂದ ಅನುಮಾನ ದಲ್ಲಿ ಸೇರುತ್ತದೆ. ''ವಹ್ನ್ಯಭಾವ ಇದ್ದಲ್ಲಿ ಧೂಮಾಭಾವವು ಇರುತ್ತದೆ'' ಎಂಬ ವ್ಯಾಪ್ತಿಯನ್ನು ಅವಲಂಬಿಸಿ 'ಪರ್ವತೇ ಯದಿ ವಹ್ನಿಃ ನ ಸ್ಯಾತ್ ತರ್ಹಿ ಧೂಮೋಽಪಿ ನ ಸ್ಯಾತ್' ಎಂದು ಆಪಾದಿಸಲಾಗುತ್ತದೆ. ವ್ಯಾಪಕವಾದ ವಹ್ನ್ಯಭಾವ ಇದ್ದರೆ ವ್ಯಾಪ್ಯವಾದ ಧೂಮಾಭಾವವೂ ಇರಬೇಕಾಗುತ್ತದೆ, ಎಂದು ತರ್ಕದ ಅಭಿಪ್ರಾಯ. ಹೀಗೆ ತರ್ಕವು ಅನುಮಾನಾತ್ಮಕ ಪ್ರಮಾಣ.

**ಪ್ರಸಂಗಾರ್ಥತಯಾ ಪ್ರೋಕ್ತಾ ನ ಸಿದ್ಧಾಂತಸ್ಯ ದೂಷಕಾಃ ।**
**ಛಲಂ ಜಾತಿರಿತಿ ದ್ವೇಧಾ ವ್ಯಾಹತ್ಯಂತರಮಿಷ್ಯತೇ ॥ ೩೬ ॥**

ಪ್ರಸಂಗಾರ್ಥತಯಾ=ಆಪಾದನಾವಿಷಯವಾಗಿ ಪ್ರೋಕ್ತಾಃ= ಹೇಳಲ್ಪಟ್ಟ ನಿರ್ಧೂಮತ್ವಾದಿಗಳು ಸಿದ್ಧಾಂತಸ್ಯ=ಸ್ವಾಭ್ಯುಪಗಮಕ್ಕೆ ನ ದೂಷಕಾಃ=ದೋಷಾಪಾದಕಗಳಾಗುವುದಿಲ್ಲ ಹಾಗೂ ಬಾಧದೋಷಕ್ಕೂ ಕಾರಣವಾಗುವುದಿಲ್ಲ.

ಛಲಂ=ಛಲ ಎಂಬ ನಿಗ್ರಹಸ್ಥಾನ ಮತ್ತು ಜಾತಿಃ=ಜಾತಿ ಎಂಬ ನಿಗ್ರಹಸ್ಥಾನ ಇತಿ=ಹೀಗೆ ದ್ವೇಧಾ=ಎರಡು ವಿಧವಾಗಿ ವ್ಯಾಹತ್ಯಂತರಂ= ವ್ಯಾಹತಿಯ ಪ್ರಭೇದಗಳು ಇಷ್ಯತೇ=ಪ್ರಾಮಾಣಿಕರಿಂದ ಅಂಗೀಕರಿಸಲ್ಪಟ್ಟಿದೆ.

**ಭಾವಾರ್ಥ—** ಯದಿ ವಹ್ನಿರ್ನ ಸ್ಯಾತ್ ತರ್ಹಿ ಧೂಮೋಽಪಿ ನ ಸ್ಯಾತ್, ಎಂದು ತರ್ಕದ ಸ್ವರೂಪ. ಇಲ್ಲಿ ವಹ್ನ್ಯಭಾವದಿಂದ ಧೂಮಾಭಾವವನ್ನು ಆಪಾದಿಸಲಾಗಿದೆ. ಆದರೆ, ಹೀಗೆ ಆಪಾದನೆ ಮಾಡುವವನು ತಾನು ಧೂಮಾ ಭಾವವನ್ನು ಅಂಗೀಕರಿಸಿಲ್ಲ, ಹೀಗಾಗಿ ಅದನ್ನು ಸಾಧಿಸಿದರೆ ಅಪಸಿದ್ಧಾಂತ– ಸಿದ್ಧಾಂತ ವಿರೋಧ. ಅಷ್ಟೇ ಅಲ್ಲ, ಪರ್ವತದಲ್ಲಿ ಧೂಮವು ಕಣ್ಣಿಗೆ ಕಾಣುತ್ತಿರುವುದರಿಂದ ಬಾಧದೋಷ. ಆದ್ದರಿಂದ ತರ್ಕವು ದೋಷಪೂರ್ಣ ವಾಗಿದ್ದು ಅನುಮಾನವಾಗುವುದು ಹೇಗೆ?

ಇದಕ್ಕೆ ಹೀಗೆ ಸಮಾಧಾನ— ಈ ತರ್ಕವು ಧೂಮಾಭಾವವನ್ನು ಸಾಧನೆ ಮಾಡುತ್ತಿಲ್ಲ. ಆಪಾದನೆ ಮಾಡುತ್ತಿದೆ. ಸಾಧನ ಮಾಡುವ ಉದ್ದೇಶವಿದ್ದರೆ 'ಧೂಮಾಭಾವಃ ಅಸ್ತಿ' ಎನ್ನಬೇಕಾಗುತ್ತದೆ. ಅಸ್ತಿ ಅನ್ನುವ ಬದಲು ಇಲ್ಲಿ ಸ್ಯಾತ್, ಎಂದಿದೆ. ಇದರ ಅಭಿಪ್ರಾಯ— ವಹ್ನ್ಯಭಾವವನ್ನು ಅಂಗೀಕರಿಸಿದಲ್ಲಿ ಧೂಮಾಭಾವವನ್ನೂ ಅಂಗೀಕರಿಸಬೇಕಾದೀತು, ಎಂದು. ಧೂಮಾಭಾವದಲ್ಲಿ ಅಂಗೀಕಾರಾರ್ಹತ್ವವು ಇದೆ, ಅದು ಅಬಾಧಿತ. ಆದ್ದರಿಂದ ಬಾಧ ದೋಷ ಇಲ್ಲ. ಹೀಗೆ ಆಪಾದನೆ ಮಾಡುವವನು ಧೂಮಾಭಾವವನ್ನು ಅಂಗೀಕರಿಸಿಲ್ಲವಾದುದರಿಂದ ಅಪಸಿದ್ಧಾಂತವೂ ಇಲ್ಲ. ವಿಷ ಕುಡಿದರೆ ಸಾಯಬೇಕಾಗುತ್ತದೆ, ಎಂದಂತೆ ಇದು. ಇದರ ಅರ್ಥ, ವಿಷ ಕುಡಿದು ಸಾಯಿ, ಎಂದಲ್ಲ.

ಇದರಂತೆ 'ಯದಿ ವಹ್ನಿರ್ನ ಸ್ಯಾತ್' ಎಂದರೆ ವಹ್ನಿ ಇಲ್ಲ ಎಂದು ಅರ್ಥವಲ್ಲ. ವಹ್ನ್ಯಭಾವವನ್ನು ಒಪ್ಪಿದಲ್ಲಿ, ಎಂದರ್ಥ. ಪ್ರತಿವಾದಿಯು ವಹ್ನ್ಯಭಾವವನ್ನು ಅಂಗೀಕರಿಸಿರುತ್ತಾನೆ. ಆದ್ದರಿಂದ ಅಸಿದ್ಧಿದೋಷಕ್ಕೂ ಅವಕಾಶವಿಲ್ಲ.

**ಆಕ್ಷೇಪ**—ತರ್ಕವು ಸಾಧನಾನುಮಾನ ಅಲ್ಲ. ಅದು ಆಪಾದನೆಯನ್ನಷ್ಟೇ ಮಾಡುತ್ತದೆ, ಸಾಧನೆಯನ್ನು ಮಾಡುತ್ತಿಲ್ಲ. ದೂಷಣಾನುಮಾನವೂ ಅಲ್ಲ. ಪರಸಿದ್ಧನ್ಯಾಯದಿಂದ ಪರಸಿದ್ಧಾಂತಕ್ಕೆ ದೋಷವನ್ನು ಹೇಳಬೇಕು. ಹೀಗಿದ್ದ ಮೇಲೆ ಅದು ಪ್ರಮಾಣವಾಗಲಾರದು. ಪ್ರಮಾಣವಾಗಬೇಕಾದರೆ ಒಬ್ಬರಿಗೆ ಮಾತ್ರ ಸಮ್ಮತವಾಗಿರಬಾರದು, ಸರ್ವಸಮ್ಮತವಾಗಿರಬೇಕು. ಪ್ರಮಾಣವಲ್ಲದ ಮೇಲೆ ಅದರಿಂದ ಸಾಧಿತವಾದ ದೂಷಣವೂ ಅಸಾಧು. ಹೀಗಿರುವಾಗ ತರ್ಕವು ಪ್ರಮಾಣವಾಗುವುದು ಹೇಗೆ?

ಇದಕ್ಕೆ, ಛಲ ಮತ್ತು ಜಾತಿ ಎಂಬ ಎರಡು ನಿಗ್ರಹಸ್ಥಾನಗಳನ್ನು ನಿರೂಪಿಸಿ, ಅವುಗಳಂತೆ ತರ್ಕವೂ ದುಷ್ಟಿಪ್ರಮಾಜನಕವಾಗಿದೆ, ಎಂದು ಅನುವ್ಯಾಖ್ಯಾನದಲ್ಲಿ ತೋರಿಸಲಾಗಿದೆ. ಅದನ್ನು ಮುಂದೆ ವಿವರಿಸಲಾಗಿದೆ.

ಹೀಗೆ ಸ್ವಯಂ ಪ್ರಮಾಣವಾದ ತರ್ಕವು ಪ್ರಮಾಣಾಂತರಗಳಿಗೆ ಅನುಗ್ರಹಾಕವಾಗಿದೆ. ತರ್ಕವು ಮಾಡುವ ಅನುಗ್ರಹವೆಂದರೆ, ಪ್ರಮಾಣಗಳು

ಯಾವುದನ್ನು ಸಾಧಿಸಬೇಕಾಗಿದೆಯೋ ಅವುಗಳ ಬಗ್ಗೆ ಅಸಂಭಾವನಾ ಸಂದೇಹವನ್ನು ಪರಿಹಾರಮಾಡುವುದು. ಆಕಾಶವು ಶುಭ್ರವಾಗಿದ್ದಾಗ ''ಈಗ ಮಳೆ ಬರುವುದಿಲ್ಲ'' ಎಂದು ಒಬ್ಬ ಹೇಳಿದಾಗ, ಈಗ ಯಾಕೆ ಮಳೆ ಬರಬಾರದು? ಎಂದು ಮತ್ತೊಬ್ಬ ಕೇಳುತ್ತಾನೆ. ಅವನ ಆಕ್ಷೇಪವನ್ನು ನಿರಾಕರಿಸದ ಹೊರತು ಮಳೆ ಬರುವುದಿಲ್ಲ, ಎನ್ನುವುದನ್ನು ನಿಶ್ಚಯಿಸಲಾಗದು. ಅವನ ಆಕ್ಷೇಪವನ್ನು ತರ್ಕದ ಮೂಲಕ ನಿರಾಕರಿಸಬೇಕು- ಮಳೆ ಬರುವುದಾದಲ್ಲಿ ಮೋಡವಿರಬೇಕಿತ್ತು. ಆದರೆ ಮೋಡಗಳು ಇಲ್ಲ, ಆದ್ದರಿಂದ ಮಳೆ ಬರುವುದಿಲ್ಲ. ಹೀಗೆ ತರ್ಕವು ಮತ್ತೊಬ್ಬರು ಮಾಡಿದ ಆಕ್ಷೇಪವನ್ನು ಪರಿಹರಿಸಿ ಪ್ರಮಾಣದ ದಾರಿಯನ್ನು ಸುಗಮಗೊಳಿಸುತ್ತದೆ. ಆಮೇಲೆ ಪ್ರಮಾಣವು ಅರ್ಥಸಾಧಕವಾಗುತ್ತದೆ. ತರ್ಕವು ದುರ್ಜನರಂತೆ ಆಕ್ಷೇಪಕನ ಬಾಯಿ ಮುಚ್ಚಿಸಿ ವಿಷಯಸಂಭಾವನೆಯನ್ನು ಉಂಟುಮಾಡುತ್ತದೆ. ಆಮೇಲೆ ಪ್ರಮಾಣವು ಸಜ್ಜನರಂತೆ ವಿಷಯವನ್ನು ನಿರ್ಧರಿಸುತ್ತದೆ.

**ಜಾತಿಃ ಸ್ವವ್ಯಾಹತಿರ್ಜ್ಞೇಯಾ ಛಲಮರ್ಥಾಂತರೋತ್ತರಮ್ ॥ ೩೭ ॥**

ಸ್ವವ್ಯಾಹತಿಃ=ಸ್ವವಚನವಿರೋಧ, ಸ್ವಕ್ರಿಯಾವಿರೋಧ, ಸ್ವನ್ಯಾಯ ವಿರೋಧ ಈ ಮೂರರಲ್ಲಿ ಒಂದು ವಿರೋಧವಿರುವ ಮಾತು (ಉತ್ತರ ಅಥವಾ ಪ್ರತಿಜ್ಞಾವಾಕ್ಯ) ಜಾತಿಃ ಜ್ಞೇಯಾ=ಜಾತಿ ಎನಿಸುತ್ತದೆ. ಅರ್ಥಾಂತರೋತ್ತರಂ= ಮತ್ತೊಬ್ಬರು ಹೇಳಿದ ಮಾತಿಗೆ ಬೇರೆ ಅರ್ಥವನ್ನು ಕಲ್ಪಿಸಿ ಕೊಡುವ ಉತ್ತರ ಛಲಂ=ಛಲ ದೋಷ.

**ಭಾವಾರ್ಥ**— ಛಲ ಎಂದರೆ ವಾದಿಯು ಒಂದು ಅರ್ಥವನ್ನು ಮನಸ್ಸಿನಲ್ಲಿಟ್ಟುಕೊಂಡು ವಾಕ್ಯಪ್ರಯೋಗ ಮಾಡಿದಾಗ ಪ್ರತಿವಾದಿ ಅದಕ್ಕೆ ಅರ್ಥಾಂತರವನ್ನು ಕಲ್ಪಿಸಿ ಆಕ್ಷೇಪಿಸುವುದು. ಉದಾಹರಣೆಗೆ— 'ನವಕಂಬಲವಾನ್ ದೇವದತ್ತಃ' ಎಂಬ ವಾಕ್ಯವನ್ನು ನವಶಬ್ದಕ್ಕೆ ಹೊಸದು ಎಂಬ ಅರ್ಥದಲ್ಲಿ ಪ್ರಯೋಗಮಾಡಿದಾಗ ಅದಕ್ಕೆ 'ಒಂಭತ್ತು' ಎಂಬ ಸಂಖ್ಯಾರ್ಥವನ್ನು ಕಲ್ಪಿಸಿ 'ಕುತೋಽಸ್ಯ ನವಕಂಬಲಾಃ' (ಇವನಲ್ಲಿ ಒಂಭತ್ತುಕಂಬಳಿ ಎಲ್ಲಿದೆ?) ಎಂದು ಆಕ್ಷೇಪಿಸಿದರೆ ಛಲ ಎಂಬ ನಿಗ್ರಹಸ್ಥಾನ. ಈ ಆಕ್ಷೇಪವನ್ನೇ ಪ್ರತಿವಾದಿಗೂ ತಿರುಗಿಸಿ ಹೇಳಬಹುದು—ಪ್ರತಿವಾದಿ

'ಕುತಃ' ಎಂಬ ಶಬ್ದವನ್ನು 'ಎಲ್ಲಿಂದ' ಎಂಬ ಅರ್ಥದಲ್ಲಿ ಪ್ರಯೋಗಿಸಿದರೆ, 'ಕು' ಎಂದರೆ ಪೃಥಿವೀ. 'ಕು–ತಃ' ಎಂದರೆ ಭೂಮಿಯಿಂದ ಎಂಬ ಅರ್ಥಾಂತರವನ್ನು ಕಲ್ಪಿಸಿ ''ಭೂಮಿಯಿಂದ ಕಂಬಳಿ ಹೇಗೆ'' ಎಂದು ತಿರುಮಂತ್ರವನ್ನು ಹಾಕಬಹುದು.

ಇಲ್ಲಿ ವಸ್ತುತಃ ಪ್ರತಿವಾದಿ 'ಒಂಭತ್ತು ಕಂಬಳಿ' ಎನ್ನುವ ಅರ್ಥವನ್ನು ಕಲ್ಪಿಸಿರುವುದು ತಪ್ಪು. ಅವನ ಆ ತಪ್ಪನ್ನು ಒಪ್ಪಿಕೊಂಡು ಅದೇ ತಪ್ಪನ್ನು ಮಾಡಿ ವಾದಿಯು ಪ್ರತಿವಾದಿಯ ಮೇಲೆ ದೋಷ ಹೇಳುತ್ತಾನೆ. ಅದರಂತೆ, ಪ್ರಕೃತ ತರ್ಕದಲ್ಲೂ ಪ್ರತಿವಾದಿ ಒಪ್ಪಿಕೊಂಡ ನಿರ್ವಹ್ನಿತ್ವವನ್ನು ಅಂಗೀಕರಿಸಿ ಪ್ರತಿವಾದಿಗೆ ದೋಷವನ್ನು ಹೇಳಲಾಗುತ್ತದೆ.

ಜಾತಿ ಎಂದರೆ ಸ್ವವ್ಯಾಹತಿ. ಅವುಗಳಲ್ಲಿ ಸ್ವನ್ಯಾಯವಿರೋಧವೂ ಒಂದು. 'ಅನುಮಾನಂ ಅಪ್ರಮಾಣಂ ಪದಾರ್ಥತ್ವಾತ್' ಎಂದು ಹೇಳುವುದು ಸ್ವನ್ಯಾಯವಿರುದ್ಧ. ಅನುಮಾನವು ಅಪ್ರಮಾಣ ಎನ್ನುವುದನ್ನು ಅನುಮಾನ ದಿಂದಲೇ ಇಲ್ಲಿ ಸಾಧಿಸಿರುವುದರಿಂದ ಅವನು ಒಪ್ಪಿದ ನ್ಯಾಯದಿಂದಲೇ ಈ ಅನುಮಾನವೂ ಅಪ್ರಮಾಣವಾಗುತ್ತದೆ. ಇಲ್ಲಿಯೂ ಪರೋಕ್ತವಾದ ಅನುಮಾನವನ್ನು ಅಂಗೀಕರಿಸಿ ಪರನಿಗೆ ಸ್ವವ್ಯಾಹತಿಯನ್ನು ಹೇಳಲಾಗಿದೆ.

**ಸ್ವಾಪ್ನವಸ್ತುಗಳಿಗೆ ಅನಿರ್ವಚನೀಯತ್ವನಿರಾಸ**

**ಏವಂ ಸಂಶೋಧಿತನ್ಯಾಯಸದಾಗಮವಿರೋಧತಃ ।**
**ನಾನಿರ್ವಾಚ್ಯಮಿಹ ಪ್ರೋಕ್ತಂ ಮಾಯಾಮಾತ್ರಪದೇನ ಹಿ ॥ ೩೮ ॥**

ಏವಂ=ಹೀಗೆ, ಸಂಶೋಧಿತನ್ಯಾಯಸದಾಗಮವಿರೋಧತಃ= ದುಷ್ಟಾನುಮಾನಗಳಿಂದ ಭಿನ್ನವಾಗಿ ತಿಳಿಯಲ್ಪಟ್ಟ ಅನುಮಾನ ಹಾಗೂ ಆಗಮ ಇವುಗಳ ವಿರೋಧ ಇರುವುದರಿಂದ ಇಹ=ಸೂತ್ರದಲ್ಲಿರುವ ಮಾಯಾಮಾತ್ರ ಪದೇನ=ಮಾಯಾಮಾತ್ರ ಎಂಬ ಪದದಿಂದ ಸ್ವಾಪ್ನವಸ್ತುವು ನ ಅನಿರ್ವಾಚ್ಯಂ=ಅನಿರ್ವಚನೀಯವೆಂದು ವಿವಕ್ಷಿತವಲ್ಲ.

**ಭಾವಾರ್ಥ—** ಸ್ವಾಪ್ನವಸ್ತುಗಳು ಅನಿರ್ವಚನೀಯವೆನ್ನಲು ಪ್ರಮಾಣ ವಿಲ್ಲ. ಅಷ್ಟೇ ಅಲ್ಲ, ಅನುಮಾನ ಮತ್ತು ಆಗಮಗಳ ವಿರೋಧವೂ ಇದೆ. 'ಅಥ

ರಥಾನ್ ರಥಯೋಗಾನ್ ಪಥಃ ಸೃಜತೇ' ಎನ್ನುವ ಶ್ರುತಿ ಸ್ವಾಪ್ನವಸ್ತುಗಳನ್ನು ಪರಮಾತ್ಮನೇ ಸೃಷ್ಟಿಮಾಡುತ್ತಾನೆ, ಎಂದು ಸ್ವಾಪ್ನವಸ್ತುಗಳ ಸೃಷ್ಟಿಯನ್ನು ಹೇಳುವ ಮೂಲಕ ಅವುಗಳು ಸತ್ಯ ಎನ್ನುತ್ತದೆ. ಇದಲ್ಲದೆ, ಮುಂದೆ 'ವಿಲಕ್ಷಣಂ ಸದಸತೋಃ' ಎಂಬ ಅನುವ್ಯಾಖ್ಯಾನದಲ್ಲಿ ಯುಕ್ತಿವಿರೋಧವನ್ನೂ ಹೇಳ ಲಾಗಿದೆ. ಹಿಂದೆ ಹೇಳಿರುವಂತೆ ದೋಷಗಳಿಲ್ಲದ ಯುಕ್ತಿಗಳು ಪ್ರಮಾಣ ವಾಗಿವೆ. ಹೀಗೆ ಅನುಮಾನ–ಆಗಮಗಳ ವಿರೋಧವಿರುವುದರಿಂದ ಸ್ವಾಪ್ನಪದಾರ್ಥಗಳು ಅನಿರ್ವಚನೀಯಗಳಲ್ಲ.

**ವಿಲಕ್ಷಣಂ ಸದಸತೋರಿತಿ ಹಿ ವ್ಯಾಹತಂ ಸ್ವತಃ ॥ ೩೯ ॥**

ಸದಸತೋಃ ವಿಲಕ್ಷಣಮಿತಿ=ಅನಿರ್ವಚನೀಯವೆಂದರೆ ಸದಸದ್ವಿಲಕ್ಷಣ ಎನ್ನುವುದು ಸ್ವತಃ ವ್ಯಾಹತಂ ಹಿ=ಸ್ವವ್ಯಾಹತವಾದ ಮಾತು.

ಭಾವಾರ್ಥ— ಸ್ವಾಪ್ನಗಳು ಅನಿರ್ವಾಚ್ಯ ಎಂದರೆ ಸದ್ವಿಲಕ್ಷಣ–ಅಸದ್ವಿಲಕ್ಷಣ ಎಂದು ಹೇಳಬೇಕು. ಹೀಗೆ ಹೇಳಿದರೆ ಸ್ವವ್ಯಾಹತಿ. ಸದ್ವಿಲಕ್ಷಣ ಎಂದಾಗ ಅಸತ್ಯ ಎಂದು ಅಂಗೀಕರಿಸಿದಂತಾಯಿತು. ಮತ್ತೆ ಅಸದ್ವಿಲಕ್ಷಣ ಎಂದು ಅದನ್ನು ನಿಷೇಧ ಮಾಡುವುದು ವ್ಯಾಹತ.

**ಪ್ರತಿಯೋಗಿತ್ವಮಪ್ಯಸ್ಯ ಬ್ರಹ್ಮಣೋಽಂಗೀಕೃತಂ ಭವೇತ್ ।**
**ಮಿಥ್ಯಾ ಚೇತ್ ಪ್ರತಿಯೋಗಿತ್ವಂ ವೈಲಕ್ಷಣ್ಯಂ ತತೋ ನಹಿ ॥ ೪೦ ॥**

ಅಸ್ಯ=ಸದ್ವಿಲಕ್ಷಣತ್ವಕ್ಕೆ ಪ್ರತಿಯೋಗಿತ್ವಮಪಿ= ಪ್ರತಿಯೋಗಿತ್ವವೂ ಕೂಡ ಬ್ರಹ್ಮಣಃ=ಬ್ರಹ್ಮನಿಗೆ ಅಂಗೀಕೃತಂ ಭವೇತ್= ಅಂಗೀಕರಿಸಿದಂತಾಗುತ್ತದೆ. ಪ್ರತಿಯೋಗಿತ್ವಂ=ಪ್ರತಿಯೋಗಿತ್ವವು ಮಿಥ್ಯಾ ಚೇತ್=ಮಿಥ್ಯಾ ಆದರೆ ತತಃ=ಸದ್‌ಬ್ರಹ್ಮನಿಗಿಂತ ವೈಲಕ್ಷಣ್ಯಂ=ಭೇದವು ನಹಿ=ಸ್ವಾಪ್ನಪ್ರಪಂಚಕ್ಕೆ ಇರಲಾರದು.

ಭಾವಾರ್ಥ— ಸ್ವಾಪ್ನವಸ್ತುಗಳು ಸದ್ವಿಲಕ್ಷಣವೆಂದರೆ ಸದ್‌ರೂಪನಾದ ಬ್ರಹ್ಮನಿಗಿಂತ ಭಿನ್ನವಾಗಿವೆ, ಎಂದು ಅರ್ಥ. ಆ ಭೇದಕ್ಕೆ ಪ್ರತಿಯೋಗಿ ಬ್ರಹ್ಮ. ಅವನಲ್ಲಿ ಪ್ರತಿಯೋಗಿತ್ವ ಎಂಬ ಧರ್ಮ ಬಂದಂತಾಯಿತು. ಇದು ಬ್ರಹ್ಮನು ನಿರ್ಧರ್ಮಕ ಎಂಬ ನಿಮ್ಮ ಸಿದ್ಧಾಂತಕ್ಕೆ ವಿರುದ್ಧ. ಅದಕ್ಕಾಗಿ, ಬ್ರಹ್ಮನಲ್ಲಿ

ಪ್ರತಿಯೋಗಿತ್ವಧರ್ಮವು ಮಿಥ್ಯಾ ಎಂದು ಅಂಗೀಕರಿಸಿದರೆ ಬ್ರಹ್ಮನು ಪ್ರತಿಯೋಗಿಯಲ್ಲ ಎಂದಂತಾಗುತ್ತದೆ. ಆಗ ತದ್ವೈಲಕ್ಷಣ್ಯವು ಸ್ವಾಪ್ನವಸ್ತುವಿನಲ್ಲಿ ಬರುವುದಿಲ್ಲ.

**ನಿರ್ಗುಣ ಬ್ರಹ್ಮ ಜಿಜ್ಞಾಸ್ಯನಲ್ಲ**

**ಅವಿಲಕ್ಷಣತ್ವಂ ಸತ್ಯಂ ಸ್ಯಾನ್ಮಿಥ್ಯಾತ್ವಂ ಬ್ರಹ್ಮಣಸ್ತತಃ ।**
**ಅನಿರ್ವಾಚ್ಯಸ್ಯ ಸತ್ವಂ ವಾ ಯದಿ ಧರ್ಮಾ ನ ಕೇಚನ ॥ ೪೧ ॥**

**ಬ್ರಹ್ಮಣೋ, ನೈವ ಜಿಜ್ಞಾಸ್ಯಂ, ಜಿಜ್ಞಾಸಾ ಧರ್ಮನಿರ್ಣಯಃ ।**
**ಇದಮಿತ್ಥಮಿತಿ ಜ್ಞಾನಂ ಜಿಜ್ಞಾಸಾಯಾಃ ಪ್ರಯೋಜನಮ್ ।**
**ಇತ್ಥಂಭಾವೋ ಹಿ ಧರ್ಮೋಽಸ್ಯ ನ ಚೇನ್ನ ಪ್ರತಿಯೋಗಿತಾ ॥ ೪೨ ॥**

ಸ್ವಾಪ್ನವಸ್ತುಗಳಲ್ಲಿ ಸದ್ವೈಲಕ್ಷಣ್ಯವೂ ಸತ್ಯವಲ್ಲವೆಂದಾದರೆ ಅವಿಲಕ್ಷಣತ್ವಂ ಸತ್ಯಂ ಸ್ಯಾತ್=ಸದವೈಲಕ್ಷಣ್ಯವು ಸತ್ಯವಾದೀತು. ತತಃ=ಇದರಿಂದಾಗಿ ಬ್ರಹ್ಮಣಃ=ಬ್ರಹ್ಮನಿಗೆ ಮಿಥ್ಯಾತ್ವಂ ಸ್ಯಾತ್=ಮಿಥ್ಯಾತ್ವವು ಬಂದೀತು, ವಾ= ಅಥವಾ ಅನಿರ್ವಾಚ್ಯಸ್ಯ=ಅನಿರ್ವಚನೀಯಸ್ವಾಪ್ನವಸ್ತುಗಳಿಗೆ ಸತ್ವಂ ಸ್ಯಾತ್= ಸತ್ಯತ್ವವು ಬಂದೀತು.

**ಭಾವಾರ್ಥ—** 'ಬ್ರಹ್ಮನು ಪ್ರತಿಯೋಗಿಯಾಗದಿದ್ದಲ್ಲಿ ಅವನಿಂದ ವೈಲಕ್ಷಣ್ಯವು ಸ್ವಾಪ್ನವಸ್ತುಗಳಿಗೆ ಬರಲಿಕ್ಕಿಲ್ಲ, ಎನ್ನುವುದು ನಮಗೇನೂ ಅನಿಷ್ಟವಲ್ಲ. ಸ್ವಾಪ್ನವಸ್ತುಗಳು ಮಿಥ್ಯಾವಾದುದರಿಂದ ಅದರಲ್ಲಿ ಯಾವ ಧರ್ಮಗಳೂ ಇಲ್ಲ' ಎಂದು ಮಾಯಾವಾದಿಗಳು ಉತ್ತರ ಹೇಳಿದರೆ ಆಗ ಸ್ವಾಪ್ನವಸ್ತುಗಳು ಸದ್ವಸ್ತುವಿಗಿಂತ ಅವಿಲಕ್ಷಣ ಎಂದಂತಾಗುತ್ತದೆ. ಸದ್ವಿಲಕ್ಷಣವಲ್ಲವೆಂದಾದರೆ ಸದವಿಲಕ್ಷಣವಾಗಬೇಕು. ಅಂದರೆ ಸತ್ತಾದ ಬ್ರಹ್ಮನೂ ಸ್ವಾಪ್ನಪದಾರ್ಥವೂ ಒಂದೇ ಎಂದಂತಾದೀತು. ಆಗ ಒಂದೋ ಬ್ರಹ್ಮ ಸ್ವಾಪ್ನವಸ್ತುಗಳಂತೆ ಮಿಥ್ಯಾ ಆಗಬೇಕು, ಇಲ್ಲವೇ ಸ್ವಾಪ್ನಪದಾರ್ಥ ಬ್ರಹ್ಮನಂತೆ ಸತ್ಯವಾಗಬೇಕು. ಒಂದು ಸತ್ಯ, ಇನ್ನೊಂದು ಮಿಥ್ಯಾ ಎಂಬ ವ್ಯತ್ಯಾಸ ಇರಬಾರದು.

**ಆಕ್ಷೇಪ—** ಬ್ರಹ್ಮನಲ್ಲಿ ಭೇದಪ್ರತಿಯೋಗಿತ್ವ ಇಲ್ಲವೆಂದಾದರೆ

ಅನುಯೋಗಿತ್ವವು ಬರಬೇಕು. ಇದರಿಂದ ಸ್ವಾಪ್ನವಸ್ತುವಿಗೆ ಬ್ರಹ್ಮನಿಂದ ಭೇದವು ಇಲ್ಲದಾದೀತು, ಎಂದು ಹಿಂದೆ ಆರೋಪಮಾಡಲಾಗಿದೆ. ಇದು ಸರಿಯಲ್ಲ. ವಿರುದ್ಧಧರ್ಮಗಳಲ್ಲಿ ಒಂದನ್ನು ನಿಷೇಧ ಮಾಡಿದರೆ ಇನ್ನೊಂದನ್ನು ಒಪ್ಪಿಕೊಳ್ಳಬೇಕು, ಎಂಬ ನಿಯಮವು ಸಾರ್ವತ್ರಿಕವಲ್ಲ. ಉದಾಹರಣೆಗೆ, ಒಬ್ಬ ವ್ಯಕ್ತಿಯು ಜೋರಾಗಿ ಮಾತನಾಡುವುದಿಲ್ಲ, ಎಂದಾದರೆ ಮೆತ್ತಗೆ ಮಾತನಾಡುತ್ತಾನೆ ಎಂದು ತಿಳಿಯಬಹುದು. ಆದರೆ ಇದನ್ನು ಬಂಡೆಕಲ್ಲಿಗೆ ಅನ್ವಯಿಸಲು ಬರುವುದಿಲ್ಲ. ಅದರಂತೆ, ಸಧರ್ಮಕವಾದ ವಸ್ತುವಿನಲ್ಲಿ ಪ್ರತಿಯೋಗಿತ್ವವು ಇಲ್ಲವೆಂದಾದರೆ ಅನುಯೋಗಿತ್ವವು ಇದೆ, ಎನ್ನಬಹುದು. ಬ್ರಹ್ಮ ನಿರ್ಧರ್ಮಕ. ಅವನಲ್ಲಿ ಹೀಗೆ ಹೇಳಲಾಗದು. ಅವನಲ್ಲಿ ಪ್ರತಿಯೋಗಿತ್ವವೂ ಇಲ್ಲ, ಅನುಯೋಗಿತ್ವವೂ ಇಲ್ಲ. ಈ ಆಕ್ಷೇಪದ ಪರಿಹಾರಕ್ಕಾಗಿ ನಿರ್ಗುಣಬ್ರಹ್ಮವಾದವನ್ನು ಮುಂದೆ ನಿರಾಕರಿಸಲಾಗಿದೆ—

ಯದಿ=ಒಂದುವೇಳೆ ಬ್ರಹ್ಮಣಃ=ಬ್ರಹ್ಮನಿಗೆ ಕೇಚನ ಧರ್ಮಾಃ ನ ಸ್ಯುಃ=ಯಾವ ಧರ್ಮಗಳೂ ಇಲ್ಲವೆಂದಾದರೆ ಅಂತಹ ಬ್ರಹ್ಮನು ನೈವ ಜಿಜ್ಞಾಸ್ಯಂ ಸ್ಯಾತ್=ಜಿಜ್ಞಾಸ್ಯನೇ ಆಗಲಿಕ್ಕಿಲ್ಲ. ಏಕೆಂದರೆ, ಜಿಜ್ಞಾಸಾ=ಜಿಜ್ಞಾಸಾ ಎಂದರೆ ಧರ್ಮನಿರ್ಣಯಃ=ವ್ಯಾಪ್ಯಧರ್ಮದ ನಿರ್ಧಾರ. ಅಲ್ಲದೆ ಇದಂ= ಈ ವಸ್ತುವು ಇತ್ಥಂ=ಇಂತಹ ವ್ಯಾಪಕ ಧರ್ಮವುಳ್ಳದ್ದು ಇತಿ=ಎಂಬುದಾಗಿ ಜ್ಞಾನಂ=ಜ್ಞಾನವು ಜಿಜ್ಞಾಸಾಯಾಃ=ವಿಚಾರದ ಪ್ರಯೋಜನಂ=ಫಲ. 'ಇತ್ಥಂಭಾವಃ=ಇತ್ಥಂಭಾವ ಅಂದರೆ, ಧರ್ಮಃ=ಯಾವುದೇ ಧರ್ಮವು ಅಸ್ಯ ನ ಚೇತ್=ಇಲ್ಲ' ಎಂದು ಅರ್ಥವಾದರೆ ಅಸ್ಯ=ಬ್ರಹ್ಮನಿಗೆ ಪ್ರತಿಯೋಗಿತಾ= ಪ್ರಪಂಚದಲ್ಲಿ ಇರುವ ಧರ್ಮಗಳ ಅಭಾವವೂ ನ=ಸಿದ್ಧವಾಗಲಿಕ್ಕಿಲ್ಲ.

**ಭಾವಾರ್ಥ**—ಬ್ರಹ್ಮನು ನಿರ್ಧರ್ಮಕನಾದರೆ ಅವನು ವಿಚಾರಕ್ಕೆ ವಿಷಯನೇ ಆಗಲಿಕ್ಕಿಲ್ಲ. ಬ್ರಹ್ಮಮೀಮಾಂಸಾಶಾಸ್ತ್ರ ವಿಚಾರಶಾಸ್ತ್ರ. ಈ ಶಾಸ್ತ್ರಕ್ಕೆ ವಿಷಯ ಬ್ರಹ್ಮ. ಬ್ರಹ್ಮನು ವಿಚಾರವಿಷಯನಾಗಬೇಕಾದರೆ ಅವನಲ್ಲಿ ಧರ್ಮಗಳು ಇರಲೇಬೇಕು. ಏಕೆಂದರೆ, ವಿಚಾರವೆಂದರೆ ಶ್ರುತ್ಯುಕ್ತವಾದ ವಿಷಯಗಳನ್ನು ಅನುಮಾನದಿಂದ ನಿರ್ಧರಿಸುವುದು. ಅನುಮಾನದಲ್ಲಿ ವ್ಯಾಪ್ಯವಾದ ಧರ್ಮವನ್ನು ನೋಡಿ ವ್ಯಾಪಕವಾದ ಧರ್ಮವನ್ನು ತಿಳಿದು

ಕೊಳ್ಳಲಾಗುತ್ತದೆ. ಪರ್ವತದಲ್ಲಿ ವ್ಯಾಪ್ಯವಾದ ಧೂಮವನ್ನು ನೋಡಿ ವ್ಯಾಪಕವಾದ ವಹ್ನಿಯನ್ನು ತಿಳಿಯುವುದು ಅನುಮಾನ. ಬ್ರಹ್ಮನಲ್ಲೂ ಜಗತ್ಕಾರಣತ್ವ ಎಂಬ ಧರ್ಮವನ್ನು ತಿಳಿದು ಅದರಿಂದ ಸರ್ವಜ್ಞತ್ವಾದಿ ಧರ್ಮಗಳನ್ನು ಅನುಮಾನ ಮಾಡಬೇಕಾದರೆ ಜಗತ್ಕಾರಣತ್ವ, ಸರ್ವಜ್ಞತ್ವ ಮೊದಲಾದ ಧರ್ಮಗಳು ಅವನಲ್ಲಿ ಇರಬೇಕು. ಅವನು ನಿರ್ಗುಣನಾದರೆ ಈ ರೀತಿಯ ವಿಚಾರವನ್ನು ಮಾಡುವುದು ಹೇಗೆ?

**ಆಕ್ಷೇಪ**—ಬ್ರಹ್ಮನು ನಿರ್ಧರ್ಮಕನಾದರೂ ಮೀಮಾಂಸಾವಿಷಯ ನಾಗಬಹುದು. ಬ್ರಹ್ಮವಿಚಾರ ಎಂದರೆ ಬ್ರಹ್ಮನಲ್ಲಿ ಒಂದು ಧರ್ಮದಿಂದ ಇನ್ನೊಂದು ಧರ್ಮವನ್ನು ನಿರ್ಣಯಿಸುವುದಲ್ಲ. ಒಂದು ಧರ್ಮವನ್ನು ನಿಷೇಧಮಾಡಿ ಅದರಿಂದ ಆರೋಪಿತಧರ್ಮಾಂತರವನ್ನು ನಿರಾಕರಿಸುವುದು. ಅವನು ಸರ್ವಜ್ಞನಲ್ಲವಾದುದರಿಂದ ಜಗತ್ಕರ್ತನಲ್ಲ. ಹೀಗೆ ಧರ್ಮಗಳನ್ನು ನಿಷೇಧಮಾಡುವ ಮೂಲಕ ನಿರ್ಗುಣ ಬ್ರಹ್ಮಸಿದ್ಧಿಯೇ ವಿಚಾರದ ಫಲ. ಈ ಫಲ ಬ್ರಹ್ಮ ನಿರ್ಗುಣನಾದರೆ ಮಾತ್ರ ಸಿದ್ಧವಾಗುತ್ತದೆ. ಶಾಂಕರಭಾಷ್ಯಟೀಕಾ 'ವಿವರಣ'ದಲ್ಲಿ ಹೀಗೆ ಹೇಳಲಾಗಿದೆ— ಸಿದ್ಧಂ ತು ನಿವರ್ತಕತ್ವಾತ್, ಎಂದು. ಬ್ರಹ್ಮನಲ್ಲಿ ಭ್ರಾಂತಿಪ್ರಸಕ್ತವಾದ ಧರ್ಮಗಳನ್ನು ನಿರಾಸಮಾಡುವುದರಿಂದಾಗಿ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಬ್ರಹ್ಮಪ್ರತಿಪಾದಕತ್ವವು ಸಿದ್ಧವಾಗುತ್ತದೆ—ಎಂದು ಅದರ ಅರ್ಥ. ಹೀಗೆ ನಿರ್ಗುಣನಾದರೂ ಬ್ರಹ್ಮನು ವಿಚಾರವಿಷಯನಾಗ ಬಹುದು.

**ಪರಿಹಾರ**—ಈ ಆಕ್ಷೇಪವನ್ನು ಅನುವ್ಯಾಖ್ಯಾನದ ಕೊನೆಯ ಸಾಲು ಪರಿಹರಿಸಿದೆ. 'ಇತ್ಥಂಭಾವ' ವಿಚಾರದ ಫಲ. ಇತ್ಥಂಭಾವಃ ಎಂದು ಅದನ್ನು ಅನುವಾದ ಮಾಡಿ 'ಧರ್ಮಃ' ಎಂದು ಅರ್ಥ ಹೇಳಲಾಗಿದೆ. ಬ್ರಹ್ಮನು ನಿರ್ಧರ್ಮಕನಾದರೆ ಅವನಲ್ಲಿ ನಿಷೇಧರೂಪವಾದ ಧರ್ಮಗಳೂ ಇರ ಬಾರದು. ಹೀಗಿದ್ದಮೇಲೆ ಒಂದು ಧರ್ಮದ ಅಭಾವವು ಅವನಲ್ಲಿ ಇರುವುದ ರಿಂದಾಗಿ ಧರ್ಮಾಂತರದ ಅಭಾವವನ್ನು ಅವನಲ್ಲಿ ಹೇಳುವುದಾದರೂ ಹೇಗೆ?

ಅನುವ್ಯಾಖ್ಯಾನದಲ್ಲಿ ಪ್ರತಿಯೋಗಿತಾ ಎಂಬ ಶಬ್ದಕ್ಕೆ ವಿರೋಧಿತಾ ಎಂಬ ಅರ್ಥವನ್ನು ಸುಧಾದಲ್ಲಿ ಹೇಳಿ 'ಪ್ರಪಂಚಧರ್ಮವ್ಯಾವೃತ್ತತಾ' ಎಂದು ತಾತ್ಪರ್ಯವನ್ನು ಹೇಳಲಾಗಿದೆ.

**ಇತ್ಥಂಭಾವಾತ್ಮಕಾನ್ ಧರ್ಮಾನಾಹುಶ್ಚ ಶ್ರುತಯೋऽಖಿಲಾಃ ।**
**ಅದೃಶ್ಯತ್ವಾದಯೋऽಪ್ಯಸ್ಯ ಗುಣಾ ಹಿ ಪ್ರಭುಣೋದಿತಾಃ ।**
**ಯದಿ ಸ್ಯುಸ್ತಾದೃಶಾ ಧರ್ಮಾಃ ಸರ್ವಜ್ಞತ್ವಾದಯೋ ನ ಕಿಮ್ ॥ ೪೩ ॥**

ಅಖಿಲಾಃ ಶ್ರುತಯಃ='ಸತ್ಯಕಾಮಃ ಸತ್ಯಸಂಕಲ್ಪಃ' 'ಯ ಆತ್ಮಾऽಪಹತ ಪಾಪ್ಮಾ' ಇತ್ಯಾದಿ ಎಲ್ಲ ಶ್ರುತಿಗಳೂ ಕೂಡಾ ಇತ್ಥಂಭಾವಾತ್ಮಕಾನ್ ಧರ್ಮಾನ್='ಈ ರೀತಿ ಇದ್ದಾನೆ' ಎನ್ನುವ ವಿಧಿ–ನಿಷೇಧಾತ್ಮಕವಾದ ಧರ್ಮಗಳನ್ನು ಆಹುಶ್ಚ=ಹೇಳುತ್ತಲೂ ಇವೆ. ಹೀಗೆ, ನಿರ್ಗುಣಬ್ರಹ್ಮವಾದವು ಆ ಶ್ರುತಿಗಳಿಗೂ ವಿರುದ್ಧವಾಗಿದೆ. ಪ್ರಭುಣಾಪಿ=ವೇದವ್ಯಾಸರಿಂದಲೂ ಅಸ್ಯ=ಬ್ರಹ್ಮನಿಗೆ ಅದೃಶ್ಯತ್ವಾದಯಃ=ದೃಶ್ಯತ್ವಾಭಾವವತ್ವರೂಪವಾದ ಗುಣಾಃ=ಧರ್ಮಗಳು ಉದಿತಾಃ=ಸೂತ್ರಗಳಲ್ಲಿ ಹೇಳಲ್ಪಟ್ಟಿವೆ. ಯದಿ=ಒಂದುವೇಳೆ ತಾದೃಶಾಃ ಧರ್ಮಾಃ=ನಿಷೇಧರೂಪವಾದ ಧರ್ಮಗಳು ಸ್ಯುಃ=ಇರಬಹುದಾದಲ್ಲಿ ಸರ್ವಜ್ಞತ್ವಾದಯಃ=ಸರ್ವಜ್ಞತ್ವಾದಿವಿಧಿರೂಪವಾದ ಧರ್ಮಗಳು ಕಿಂ ನ ಸ್ಯುಃ=ಯಾಕೆ ಇರಬಾರದು?

ಭಾವಾರ್ಥ—ಬ್ರಹ್ಮನು ನಿರ್ಗುಣ ಎಂದರೆ ಜಿಜ್ಞಾಸಾನುಪಪತ್ತಿ ಅಷ್ಟೇ ಅಲ್ಲ, ಶ್ರುತಿವಿರೋಧವೂ ಇದೆ. ಕೆಲವು ಶ್ರುತಿಗಳು ಬ್ರಹ್ಮನಿಗೆ ವಿಧಿರೂಪವಾದ ಸತ್ಯಸಂಕಲ್ಪತ್ವಾದಿಧರ್ಮಗಳನ್ನು ಹೇಳಿದರೆ ಮತ್ತೆ ಕೆಲವು ಶ್ರುತಿಗಳು ಪಾಪರಾಹಿತ್ಯಾದಿ ನಿಷೇಧಾತ್ಮಕಧರ್ಮಗಳನ್ನು ಹೇಳುತ್ತವೆ. ಅಂತಹ ಶ್ರುತಿಗಳಿಗೆ ನಿರ್ಗುಣಬ್ರಹ್ಮವಾದವು ವಿರುದ್ಧವಾಗಿದೆ.

ಅಷ್ಟೇ ಅಲ್ಲ, ಸೂತ್ರವಿರುದ್ಧವೂ ಆಗಿದೆ. 'ಅದೃಶ್ಯತ್ವಾದಿಗುಣಕೋ ಧರ್ಮೋಕ್ತೇಃ'(1.2.21) ಇತ್ಯಾದಿ ಸೂತ್ರಗಳಲ್ಲಿ ಭಗವಾನ್ ವೇದವ್ಯಾಸರು ಬ್ರಹ್ಮನಿಗೆ ದೃಶ್ಯಭೇದರೂಪವಾದ ಧರ್ಮಗಳನ್ನು ಹೇಳಿದ್ದಾರೆ. ಇಂತಹ ಅಭಾವಾತ್ಮಕವಾದ ಧರ್ಮಗಳು ಇರಬಹುದಾದರೆ ಭಾವರೂಪವಾದ ಧರ್ಮಗಳು ಏಕಿರಬಾರದು? ಅಲ್ಲದೆ, 'ನೇಹ ನಾನಾಸ್ತಿ ಕಿಂಚನ' ಎಂಬ ಶ್ರುತಿಗೆ ಯಥಾಶ್ರುತವಾದ ಅರ್ಥವನ್ನೇ ಅಂಗೀಕರಿಸುವುದಾದಲ್ಲಿ ಭಾವಾಭಾವ ರೂಪವಾದ ಯಾವ ಧರ್ಮಗಳೂ ಬ್ರಹ್ಮನಲ್ಲಿ ಇಲ್ಲ, ಎಂದೇ

ಹೇಳಬೇಕಾಗುತ್ತದೆ. ಭಾವರೂಪವಾದ ಧರ್ಮಗಳನ್ನು ನಿರಾಕರಿಸಿ ಅಭಾವ ರೂಪವಾದ ಧರ್ಮವನ್ನು ಅಂಗೀಕರಿಸಲು ಆ ಶ್ರುತಿಯು ಆಸ್ಪದವನ್ನು ನೀಡುವುದಿಲ್ಲ.

**ಅನ್ಯಾಪೇಕ್ಷಾ ಯದಿ ಸ್ಯುಷ್ಟೇ ಸತ್ತೈವಂ ದೇಶಕಾಲಗಾ ।**
**ದೇಶಕಾಲಾನಪೇಕ್ಷಾ ಹಿ ನ ಸತ್ತಾ ಕ್ವಾಪಿ ದೃಶ್ಯತೇ ॥ ೪೪ ॥**

ತೇ=ಸರ್ವಜ್ಞತ್ವಾದಿಧರ್ಮಗಳು ಅನ್ಯಾಪೇಕ್ಷಾಃ=ಬ್ರಹ್ಮಾತಿರಿಕ್ತವಾದ ಪದಾರ್ಥಸಾಪೇಕ್ಷಗಳಾದುದರಿಂದ ಯದಿ=ಒಂದುವೇಳೆ ನಾಂಗೀ ಕ್ರಿಯಂತೇ=ಅಂಗೀಕರಿಸಲ್ಪಡುವುದಿಲ್ಲವೆಂದಾದರೆ, ತೇ=ಅದೃಶ್ಯತ್ವಾದಿ ಧರ್ಮಗಳೂ ಅನ್ಯಾಪೇಕ್ಷಾಃ=ಬ್ರಹ್ಮಾತಿರಿಕ್ತವಾದ ದೃಶ್ಯವಸ್ತುಸಾಪೇಕ್ಷ ವಾಗಿವೆ, ಆದಕಾರಣ ಅವುಗಳೂ ನಾಂಗೀಕಾರ್ಯಾಃ ಸ್ಯುಃ=ಅಂಗೀಕರಿಸಲ್ಪಡ ಬಾರದು. ಸತ್ತಾ=ಅಸ್ತಿತ್ವ ಎಂಬ ಧರ್ಮವೂ ಯತಃ ದೇಶ–ಕಾಲಗಾ=ದೇಶ ಮತ್ತು ಕಾಲ ಸಂಬಂಧಿಯಾಗಿದೆಯಾಗಿರುವುದರಿಂದ ಏವಂ=ಅನ್ಯಸಾಪೇಕ್ಷ ವಾಗಿದೆ. ಆದ್ದರಿಂದ ಬ್ರಹ್ಮನಿಗೆ ಅಸ್ತಿತ್ವವನ್ನೂ ಅಂಗೀಕರಿಸಬಾರದು. ದೇಶ–ಕಾಲಾನಪೇಕ್ಷಾ=ದೇಶ ಮತ್ತು ಕಾಲಗಳ ಜ್ಞಾನವಿಲ್ಲದೆ ಕ್ವಾಪಿ=ಯಾವ ವಸ್ತುವಿನಲ್ಲೂ ಸತ್ತಾ=ಅಸ್ತಿತ್ವವು ನ ದೃಶ್ಯತೇ=ತಿಳಿಯಲ್ಪಡುವುದಿಲ್ಲ.

**ಭಾವಾರ್ಥ**—ಸರ್ವಜ್ಞತ್ವವು ಬ್ರಹ್ಮಧರ್ಮವಾಗಲು ಸಾಧ್ಯವಿಲ್ಲ. ಅದು ಸರ್ವಸಾಪೇಕ್ಷವಾದ ಧರ್ಮ. ಸರ್ವವೂ ಮಿಥ್ಯಾ ಆದುದರಿಂದ ಸರ್ವಸಾಪೇಕ್ಷವಾದ ಸರ್ವಜ್ಞತ್ವವೂ ಮಿಥ್ಯಾ. ಅದು ಪಾರಮಾರ್ಥಿಕವಾದ ಬ್ರಹ್ಮಧರ್ಮವಾಗಲು ಸಾಧ್ಯವಿಲ್ಲ, ಎನ್ನುವುದಾದರೆ ಅದೃಶ್ಯತ್ವಾದಿಗಳೂ ಬ್ರಹ್ಮಧರ್ಮಗಳಾಗಬಾರದು. ಅದೃಶ್ಯತ್ವ ಎಂದರೆ ದೃಶ್ಯಭೇದ. ಅದೂ ದೃಶ್ಯಸಾಪೇಕ್ಷವಾಗಿದೆ. ದೃಶ್ಯವಾದುದೆಲ್ಲ ಮಿಥ್ಯಾ. ತತ್ಸಾಪೇಕ್ಷವಾದ ಅದೃಶ್ಯತ್ವವೂ ಮಿಥ್ಯಾ, ಅದೂ ಬ್ರಹ್ಮಧರ್ಮವಲ್ಲ.

ಅಷ್ಟೇ ಅಲ್ಲ, ಹೀಗಾದರೆ ಬ್ರಹ್ಮನ ಅಸ್ತಿತ್ವವೇ ಇಲ್ಲದಾದೀತು. ಅಸ್ತಿತ್ವವು ದೇಶ–ಕಾಲ ಸಾಪೇಕ್ಷವಾದುದು. ಯಾವುದೇ ವಸ್ತು ನಿರ್ದಿಷ್ಟದೇಶದಲ್ಲಿ ನಿರ್ದಿಷ್ಟಕಾಲದಲ್ಲಿ ಇರಬೇಕು. ದೇಶಕಾಲಗಳ ಜ್ಞಾನವಿಲ್ಲದೆ ಇದೆ

ಎಂದಾಗಲೀ, ಇತ್ತು ಎಂದಾಗಲೀ ಇರುವುದು ಎಂದಾಗಲೀ ತಿಳಿಯಲಾಗದು. ದೇಶ–ಕಾಲಗಳು ಮಿಥ್ಯಾ. ತತ್‌ಸಾಪೇಕ್ಷವಾದ ಸತ್ತಾವೂ ಮಿಥ್ಯಾ, ಅದೂ ಬ್ರಹ್ಮಧರ್ಮವಾಗಬಾರದು.

**ಸರ್ವಧರ್ಮೋಜ್ಝಿತಸ್ಯಾಸ್ಯ ಕಿಂ ಶಾಸ್ತ್ರೇಣಾಧಿಗಮ್ಯತೇ ।**
**ಮಿಥ್ಯಾಧರ್ಮವಿಧಾತುಶ್ಚ ವೇದಸ್ಯೈವಾಪ್ರಮಾಣತಾ ॥ ೪೫ ॥**

ಸರ್ವಧರ್ಮೋಜ್ಝಿತಸ್ಯ=ಸರ್ವಧರ್ಮರಹಿತನಾದ ಅಸ್ಯ=ಬ್ರಹ್ಮನಿಗೆ ಸಂಬಂಧಿಸಿರುವ ಕಿಂ=ಏನು ತಾನೇ ಶಾಸ್ತ್ರೇಣ=ವೇದಾದಿ ಶಾಸ್ತ್ರಗಳಿಂದ ಅಧಿಗಮ್ಯತೇ=ತಿಳಿಯಲ್ಪಡುತ್ತದೆ?

ಮಿಥ್ಯಾಧರ್ಮವಿಧಾತುಃ=ಇಲ್ಲದ ಧರ್ಮಗಳನ್ನು ಬ್ರಹ್ಮನಲ್ಲಿ ಹೇಳುವ ವೇದಸ್ಯೈವ=ವೇದಕ್ಕೇನೇ ಅಪ್ರಮಾಣತಾ ಚ=ಅಪ್ರಾಮಾಣ್ಯವೇ ಬಂದೀತು.

**ಭಾವಾರ್ಥ—** ಬ್ರಹ್ಮನು ನಿರ್ಧರ್ಮಕನಾದರೆ ವೇದಪ್ರತಿಪಾದ್ಯನೇ ಆಗಲಿಕ್ಕಿಲ್ಲ. ಏಕೆಂದರೆ, ವೇದವು ಬ್ರಹ್ಮಸ್ವರೂಪವನ್ನೋ ಅವನ ಗುಣಗಳನ್ನೋ ಹೇಳಬೇಕು. ಜೀವನೇ ಬ್ರಹ್ಮ, ಅವನು ಸ್ವಪ್ರಕಾಶನಾದುದರಿಂದ ಬ್ರಹ್ಮಸ್ವರೂಪವು ನಿತ್ಯಸಿದ್ಧ. ಧರ್ಮಗಳೆಲ್ಲವೂ ಮಿಥ್ಯಾ. ಹೀಗಿದ್ದಮೇಲೆ ವೇದ ಏನು ಹೇಳಬೇಕು?

ಬ್ರಹ್ಮನಲ್ಲಿ ಪಾರಮಾರ್ಥಿಕವಾದ ಧರ್ಮಗಳು ಇಲ್ಲದಿದ್ದರೂ ಮಿಥ್ಯಾಧರ್ಮಗಳಿವೆ. ಅವುಗಳನ್ನು ವೇದಗಳು ಹೇಳಬಹುದೇ? ಅಂತಹ ಧರ್ಮಗಳನ್ನು ವೇದವು ಹೇಳಿದರೆ ಸುಳ್ಳುಹೇಳಿದಂತಾಗುತ್ತದೆ. ವೇದವು ಅಪ್ರಮಾಣವಾದೀತು.

ಮೊದಲ ಸಾಲಿನಲ್ಲಿ ವೇದವು ಅಬೋಧಕವಾದೀತು, ಎನ್ನಲಾಗಿದೆ. ಆದಾದರೂ ಸಹ್ಯ. ಎರಡನೇ ಸಾಲಿನಲ್ಲಿ ವೇದವು ವಿಪರೀತಬೋಧಕ, ಎನ್ನಲಾಗಿದೆ. ಇದು ಅದಕ್ಕಿಂತಲೂ ಪ್ರಬಲವಾದ ದೋಷ.

**ಅಪ್ರಾಪ್ತಾಂ ಭ್ರಾಂತಿಮಾಪಾದ್ಯ ಕಿಂ ವೇದೋ ಮಾನತಾಂ ವ್ರಜೇತ್ ।**
**ನಹಿ ವೇದಂ ವಿನಾ ಬ್ರಹ್ಮ ವೇದ್ಯಂ ಧರ್ಮಾಶ್ಚ ತದ್ಗತಾಃ ॥ ೪೬ ॥**

ವೇದಃ='ಯಃ ಸರ್ವಜ್ಞಃ' ಇತ್ಯಾದಿವೇದವಾಕ್ಯಗಳು ಅಪ್ರಾಪ್ತಾಂ=ಪ್ರಮಾಣಾಂತರಗಳಿಂದ ಬರದಿರುವ ಭ್ರಾಂತಿಂ=ಬ್ರಹ್ಮನಲ್ಲಿ ಸರ್ವಜ್ಞತ್ವಾದಿ ಗುಣಗಳಿವೆ ಎಂಬ ಭ್ರಾಂತಿಯನ್ನು ಆಪಾದ್ಯ=ಹುಟ್ಟಿಸಿ, ಅದನ್ನು 'ನೇಹ ನಾನಾಸ್ತಿ' ಎಂದು ನಿಷೇಧ ಮಾಡುತ್ತಿದ್ದರೆ ಮಾನತಾಂ ವ್ರಜೇತ್ ಕಿಂ=ಪ್ರಮಾಣವೆನಿಸೀತೇ? ವೇದಂ ವಿನಾ=ವೇದವನ್ನು ಬಿಟ್ಟು ಬ್ರಹ್ಮ=ಬ್ರಹ್ಮನು ನ ವೇದ್ಯಂ=ತಿಳಿಯಲ್ಪಡಲಾರ. ಆದ್ದರಿಂದಲೇ ತದ್ಗತಾಃ=ಧರ್ಮಾಶ್ಚ=ಅವನಲ್ಲಿರುವ ಧರ್ಮಗಳಾವುವೂ ಇತರ ಪ್ರಮಾಣಗಳಿಂದ ತಿಳಿಯಲ್ಪಡುವುದಿಲ್ಲ.

**ಭಾವಾರ್ಥ**—ವೇದವು ಬ್ರಹ್ಮನಲ್ಲಿ ಧರ್ಮಗಳನ್ನು ಹೇಳಿ ಮೌನವಾಗಿದ್ದಿದ್ದರೆ ಅಪ್ರಮಾಣವಾಗುತ್ತಿತ್ತು. ಧರ್ಮವನ್ನು ಹೇಳಿದ ವೇದವೇ 'ನೇಹ ನಾನಾಸ್ತಿ ಕಿಂಚನ' ಎಂದು ನಿಷೇಧ ಮಾಡುತ್ತದೆ. ಇದರಿಂದ ಬ್ರಹ್ಮನಲ್ಲಿ ಧರ್ಮಗಳು ಇಲ್ಲವೆನ್ನುವುದೇ ವೇದದ ತಾತ್ಪರ್ಯ. ಆದ್ದರಿಂದ ವೇದಕ್ಕೆ ಅಪ್ರಾಮಾಣ್ಯವಿಲ್ಲ, ಎಂದು ಆಕ್ಷೇಪ.

**ಇದಕ್ಕೆ ಸಮಾಧಾನ**— ಬ್ರಹ್ಮ ವೇದೈಕವೇದ್ಯ, ಎಂದು ಶಾಸ್ತ್ರಯೋನಿತ್ವಾಧಿಕರಣದಲ್ಲಿ ಸೂತ್ರಕಾರರೇ ಹೇಳಿದ್ದಾರೆ. ಅಂತಹ ಬ್ರಹ್ಮನ ಗುಣಗಳೂ ವೇದದಿಂದಲೇ ತಿಳಿಯಲ್ಪಡಬೇಕು. ವೇದೇತರಪ್ರಮಾಣಗಳಿಗೆ ಬ್ರಹ್ಮಧರ್ಮಗಳನ್ನು ತಿಳಿಸುವ ಅವಕಾಶವಿಲ್ಲ. ಅಂದಮೇಲೆ ವೇದವು ಬ್ರಹ್ಮನಲ್ಲಿ ಇಲ್ಲದ ಗುಣಗಳ ಭ್ರಾಂತಿಯನ್ನು ಉಂಟುಮಾಡಿ ಅದನ್ನು ನಿಷೇಧ ಏಕೆ ಮಾಡಬೇಕು? ಹೀಗೆ ಮಾಡುವುದಕ್ಕಿಂತ ತನಗೆ ಅನಭಿಪ್ರೇತವಾದ ಗುಣಗಳನ್ನೇ ಹೇಳದಿದ್ದರಾಯಿತು. ಕೆಸರು ಮುಟ್ಟಿ ಕೈತೊಳೆದುಕೊಳ್ಳುವುದಕ್ಕಿಂತ ಕೆಸರನ್ನು ಮುಟ್ಟದಿರುವುದೇ ಲೇಸಲ್ಲವೇ?

**ವೇದವೇದ್ಯಸ್ಯ ಮಿಥ್ಯಾತ್ವಂ ಯದಿ ನೈಕ್ಯಸ್ಯ ತತ್ ಕಥಮ್ ॥ ೪೭ ॥**

ವೇದವೇದ್ಯಸ್ಯ=ವೇದದಿಂದ ಪ್ರತಿಪಾದ್ಯವಾದುದಕ್ಕೆ ಯದಿ ಮಿಥ್ಯಾತ್ವಂ=ಮಿಥ್ಯಾತ್ವವಿದ್ದಲ್ಲಿ ಐಕ್ಯಸ್ಯ=ಜೀವಬ್ರಹ್ಮೈಕ್ಯಕ್ಕೆ ತತ್=ಅಂತಹ ಮಿಥ್ಯಾತ್ವವು ಕಥಂ ನ=ಏಕಿಲ್ಲ?

ಭಾವಾರ್ಥ—ವೇದವು ಬ್ರಹ್ಮನಿಗೆ ಅನೇಕ ಧರ್ಮಗಳನ್ನು ಹೇಳುತ್ತದೆ. ಆದರೆ, ಆ ಧರ್ಮಗಳೆಲ್ಲವೂ ಮಿಥ್ಯಾ. ಹಾಗಾದರೆ, ವೇದವು ಅಪ್ರಮಾಣವಾಗಲಿಲ್ಲವೇ? ಹೌದು, ಅಂತಹ ವೇದಭಾಗಗಳೆಲ್ಲವೂ ಅಪ್ರಮಾಣಗಳೇ. ವೇದದಲ್ಲಿ ತತ್ತ್ವಾವೇದಕ ಮತ್ತು ಅತತ್ತ್ವಾವೇದಕ ಎಂದು ಎರಡು ಭಾಗಗಳಿವೆ. ಪ್ರಪಂಚ, ಯಜ್ಞಯಾಗಾದಿಗಳು, ಬ್ರಹ್ಮನಿಗೆ ಸರ್ವಜ್ಞತ್ವಾದಿಧರ್ಮಗಳು ಇವುಗಳನ್ನು ಹೇಳುವ ವೇದಭಾಗಗಳು ಅತತ್ತ್ವಾವೇದಕಗಳು. ಬ್ರಹ್ಮಸ್ವರೂಪ, ಐಕ್ಯವನ್ನು ತಿಳಿಸುವ ಭಾಗಗಳು ತತ್ತ್ವಾವೇದಕಗಳು. ಆದ್ದರಿಂದ ಗುಣಬೋಧಕವಾಕ್ಯಗಳು ಅಪ್ರಮಾಣಗಳೆಂದು ನಮಗೆ ಸಮ್ಮತವೇ ಆಗಿವೆ.

ಮಾಯಾವಾದಿಗಳ ಈ ವಾದಕ್ಕೆ ಉತ್ತರ ಹೀಗೆ— ವೇದ ಹೇಳಿದ ಒಂದು ವಿಷಯ ಮಿಥ್ಯಾ ಎಂದಾದರೆ ಎಲ್ಲ ವಿಷಯಗಳೂ ಮಿಥ್ಯಾ ಏಕಾಗಬಾರದು? ಎನ್ನುವ ಸಂದೇಹ ಬರುತ್ತದೆ. ವೇದ ಹೇಳಿರುವ ಬ್ರಹ್ಮಗುಣಗಳು ಮಿಥ್ಯಾ ಆದರೆ ಜೀವಬ್ರಹ್ಮೈಕ್ಯವೂ ಮಿಥ್ಯಾ ಏಕಾಗಬಾರದು? ಹೀಗೆ, ವೇದದ ಬಗ್ಗೆ ಇರುವ ನಂಬಿಕೆಯೇ ಕುಸಿದೀತು.

ಆಕ್ಷೇಪ—ಬ್ರಹ್ಮನು ವೇದಮಾತ್ರವೇದ್ಯನಾದುದರಿಂದ ಅವನಲ್ಲಿ ಧರ್ಮಗಳೂ ವೇದದಿಂದಲೇ ತಿಳಿಯಲ್ಪಡಬೇಕು. ವೇದವೇ ಧರ್ಮವನ್ನು ಹೇಳಿ ನಿಷೇಧ ಮಾಡುವುದು ಉಚಿತವಲ್ಲ, ಎನ್ನುವ ಆಕ್ಷೇಪ ಸರಿಯಲ್ಲ. ಬ್ರಹ್ಮ ಶಾಸ್ತ್ರೈಕ್ಯವೇದ್ಯನಲ್ಲ. ಜೀವನೇ ಬ್ರಹ್ಮ. ಜೀವ ಸ್ವಪ್ರಕಾಶನಾದುದರಿಂದ ಬ್ರಹ್ಮನು ಜ್ಞಾತನಾಗಿದ್ದಾನೆ. ಆ ಬ್ರಹ್ಮನಲ್ಲಿ ಇಲ್ಲದ ಕರ್ತೃತ್ವಾದಿಧರ್ಮಗಳನ್ನು ಜೀವನು ಆರೋಪಿಸಿದ್ದಾನೆ. ಅವುಗಳನ್ನು ವೇದವು ಅನುವಾದ ಮಾಡಿ 'ನೇಹ ನಾನಾಸ್ತಿ ಕಿಂಚನ' ಎಂದು ನಿಷೇಧವನ್ನು ಮಾಡುತ್ತದೆ. ಅದು ಧರ್ಮಗಳಿವೆ ಎಂದು ವಿಧಾನ ಮಾಡುತ್ತಿಲ್ಲ. ಆದ್ದರಿಂದ ಅನೌಚಿತ್ಯವಿಲ್ಲ. ಈ ಆಕ್ಷೇಪವನ್ನು ಮುಂದೆ ಪರಿಹರಿಸಲಾಗಿದೆ—

**ಧರ್ಮಾರೋಪೋಽಪಿ ಸಾಮಾನ್ಯಧರ್ಮಾದೀನಾಂ ಹಿ ದರ್ಶನೇ ।**
**ಇದಂತದಾದಿಧರ್ಮಿತ್ವೇ ಧರ್ಮೋಽನ್ಯಃ ಕಲ್ಪ್ಯತೇಽತ್ರ ಹಿ ॥ ೪೮ ॥**

ಸಾಮಾನ್ಯಧರ್ಮಾದೀನಾಂ ದರ್ಶನೇ=ಅಧಿಷ್ಠಾನದಲ್ಲಿ ಇದಂತ್ವಾದಿ

ಸಾಮಾನ್ಯಧರ್ಮ ಮತ್ತು ಪ್ರಧಾನದ ಸಾದೃಶ್ಯ ಇವುಗಳ ಜ್ಞಾನವಿದ್ದಲ್ಲಿ ಧರ್ಮಾರೋಪೋಽಪಿ=ವಿಶೇಷಧರ್ಮದ ಆರೋಪವೂ ಕೂಡುತ್ತದೆ. ಇದಂತದಾದಿಧರ್ಮಿತ್ವೇ=ಇದಂತ್ವ ತತ್ತ್ವ ಸಾಧಾರಣಧರ್ಮ ಇವುಗಳ ಧರ್ಮಿತ್ವವು ಅಧಿಷ್ಠಾನದಲ್ಲಿ ದೃಷ್ಟವಾದಾಗ ಮಾತ್ರ ಲೋಕೇ=ಲೋಕದಲ್ಲಿ ಅನ್ಯಃ ಧರ್ಮಃ=ವಿಶೇಷಧರ್ಮವು ಕಲ್ಪ್ಯತೇ=ಆರೋಪಿಸಲ್ಪಡುತ್ತದೆ.

ಭಾವಾರ್ಥ—ಸ್ವಪ್ರಕಾಶತಯಾ ಸಿದ್ಧನಾದ ಬ್ರಹ್ಮನಲ್ಲಿ ಧರ್ಮಾರೋಪ ಎನ್ನುವುದು ಸರಿಯಲ್ಲ. ಯಾವುದೇ ಧರ್ಮಗಳಿಲ್ಲದ ವಸ್ತುವಿನಲ್ಲಿ ಧರ್ಮದ ಆರೋಪವನ್ನೂ ಮಾಡಲಾಗದು. ಧರ್ಮಾರೋಪ ಮಾಡಬೇಕಾದರೆ ಆ ಧರ್ಮಿಯದಲ್ಲಿ ಒಂದಾದರೂ ಸ್ವಾಭಾವಿಕಧರ್ಮವು ಇರಬೇಕು. ಹಗ್ಗದಲ್ಲಿ ಸರ್ಪತ್ವವನ್ನು ಆರೋಪಮಾಡಬೇಕಾದರೆ ''ಇದಂ'' ಎಂದು ಹಗ್ಗವು ಪುರೋವೃತ್ತಿತ್ವೇನ ಜ್ಞಾತವಾಗಬೇಕು. ಅದರಲ್ಲಿ ಹಾವಿನ ಸದೃಶಧರ್ಮಗಳು ತಿಳಿಯಲ್ಪಡಬೇಕು. ಆಗ ಅದರಲ್ಲಿ ಸರ್ಪತ್ವವನ್ನು ಆರೋಪ ಮಾಡಬಹುದು. ಬ್ರಹ್ಮನಲ್ಲಿ ಇಂತಹ ಯಾವ ವಾಸ್ತವ ಧರ್ಮಗಳೂ ಇಲ್ಲ. ಆದ್ದರಿಂದ ಅವನಲ್ಲಿ ಕರ್ತೃತ್ವಾದಿವಿಶೇಷಧರ್ಮಗಳ ಆರೋಪವನ್ನು ಮಾಡಲು ಸಾಧ್ಯವಿಲ್ಲ.

ಅನುವ್ಯಾಖ್ಯಾನದಲ್ಲಿ— 'ಇದಂತದಾದಿ' ಪದಗಳು ಭಾವಪ್ರಧಾನ ನಿರ್ದೇಶ. ಇದಂತ್ವ ತತ್ತ್ವ ಎಂದರ್ಥ. ಇದಂತ್ವ ಎಂದರೆ ಪುರೋದೇಶವೃತ್ತಿತ್ವ ವ್ಯವಹಿತದೇಶವೃತ್ತಿತ್ವ ತತ್ತ್ವ. ಆದಿಪದದಿಂದ ಪ್ರಧಾನ ಮತ್ತು ಅಧಿಷ್ಠಾನಗಳಲ್ಲಿರುವ ಸಾಧಾರಣಧರ್ಮವು ವಿವಕ್ಷಿತ.

**ಸರ್ವಧರ್ಮವಿಹೀನಸ್ಯ ಧರ್ಮಾರೋಪಃ ಕ್ವ ದೃಶ್ಯತೇ ||**
**ತದರ್ಥಂ ಯದಿ ಧರ್ಮಾಣಾಮಾರೋಪಃ ಸಾಽನವಸ್ಥಿತಿಃ || ೪೯ ||**

ಸರ್ವಧರ್ಮವಿಹೀನಸ್ಯ=ಸಕಲಧರ್ಮರಹಿತವಾದುದಕ್ಕೆ ಧರ್ಮಾ-ರೋಪಃ=ಧರ್ಮದ ಆರೋಪವು ಕ್ವ ದೃಶ್ಯತೇ=ಎಲ್ಲಿಕಂಡಿದೆ? ತದರ್ಥಂ= ಸರ್ವಜ್ಞತ್ವಾದಿ ಧರ್ಮಗಳ ಆರೋಪಕ್ಕಾಗಿ ಯದಿ=ಒಂದುವೇಳೆ ಧರ್ಮಾಣಾಂ=ಇದಂತ್ವ, ಸಾದೃಶ್ಯಾದಿಧರ್ಮಗಳ ಆರೋಪಃ=ಆರೋಪವು ಕಲ್ಪಿಸಲ್ಪಡುವುದಾದಲ್ಲಿ ಸಾ=ಆ ಕಲ್ಪನೆಯು ಅನವಸ್ಥಿತಿಃ=ಅನವಸ್ಥೆಕ್ಕೆ ಕಾರಣವಾಗುತ್ತದೆ.

ಭಾವಾರ್ಥ—ಇದಂತ್ವಾದಿಧರ್ಮಗಳಿದ್ದರೆ ಮಾತ್ರ ಧರ್ಮಾಂತ-ರೋಪವು ಕಂಡಿದೆ ಎನ್ನುವ ಕಾರಣದಿಂದ ವ್ಯಾಪ್ತಿಯು ಸಿದ್ಧವಾಗುವುದಿಲ್ಲ. ಕೆಲವೆಡೆ ಇದಂತ್ವಾದಿಧರ್ಮಗಳಿಲ್ಲದೆಯೂ ಆರೋಪವು ಇರಬಹುದು, ಎನ್ನುವ ಆಶಂಕೆ ಬೇಡ. ಯಾವ ಧರ್ಮಗಳೂ ಇಲ್ಲದ ಶಶವಿಷಾಣಾದಿಗಳಲ್ಲಿ ಧರ್ಮಾರೋಪವು ಎಂದೂ ಕಂಡಿಲ್ಲ.

ಧರ್ಮಾರೋಪ ಮಾಡಬೇಕಾದರೆ ಇದಂತ್ವಾದಿಸಾಮಾನ್ಯಧರ್ಮಗಳ ಜ್ಞಾನ ಮಾತ್ರ ಇದ್ದರೆ ಸಾಕು. ಆ ಧರ್ಮಗಳು ವಾಸ್ತವವಾಗಿ ಅಧಿಷ್ಠಾನದಲ್ಲಿ ಇರಬೇಕಾಗಿಲ್ಲ. ನಿರ್ಧರ್ಮಕ ಬ್ರಹ್ಮನಲ್ಲೂ ಇದಂತ್ವಾದಿಧರ್ಮಗಳು ವಾಸ್ತವವಾಗಿ ಇಲ್ಲದಿದ್ದರೂ ಅವುಗಳ ಭ್ರಾಂತಿ ಬಂದು ಸರ್ವಜ್ಞತ್ವಾದಿ ಧರ್ಮಗಳ ಆರೋಪವನ್ನು ಮಾಡಬಹುದು, ಎಂದು ಮತ್ತೆ ಆಕ್ಷೇಪ. ಅದಕ್ಕೆ ಸಮಾಧಾನ— ಇದಂತ್ವಧರ್ಮವನ್ನು ಆರೋಪ ಮಾಡಬೇಕಾದರೂ ಅಧಿ ಷ್ಠಾನದಲ್ಲಿ ಧರ್ಮಾಂತರದ ಆರೋಪ ಇರಬೇಕು. ಏಕೆಂದರೆ, ಯಾವುದೇ ಆರೋಪ ಮಾಡಬೇಕಾದರೂ ಸಾಮಾನ್ಯರೂಪೇಣ ಅಧಿಷ್ಠಾನದ ಜ್ಞಾನವು ಇರಬೇಕು, ಎನ್ನುವ ವ್ಯಾಪ್ತಿಯು ಸಿದ್ಧವಾಗಿದೆ. ಆದ್ದರಿಂದ, ಹೀಗೆ ಹೇಳಿದರೆ ಅನವಸ್ಥಾದೋಷ ಬರುತ್ತದೆ.

### ವಿಶ್ವವು ಭ್ರಾಂತಿ ಕಲ್ಪಿತವಲ್ಲ

**ಈಶತಜ್ಜ್ಞಾನವೇದಾಕ್ಷಜಾನುಮಾಮಾತೃಪೂರ್ವಿಣಃ ।**
**ಭ್ರಾಂತಿರ್ವಿಶ್ವಸ್ಯ ಯೇನೈವ ಮಾನಾಭಾಸೇನ ಕಲ್ಪ್ಯತೇ ।**
**ತನ್ಮಾತ್ರಸ್ಯಾನ್ಯಥಾಭಾವೇ(ವಾತ್) ಕಿಂ ನ ಸ್ಯಾದ್ ವಿಶ್ವಸತ್ಯತಾ ॥ ೫೦ ॥**

ಈಶ...ಪೂರ್ವಿಣಃ=ಈಶ್ವರ, ಅವನ ಜ್ಞಾನ, ವೇದಾದ್ಯಾಗಮಗಳು ಮತ್ತು ಅವುಗಳಿಂದ ಬಂದ ಜ್ಞಾನ ಅಕ್ಷ–ಜ=ಇಂದ್ರಿಯ ಸನ್ನಿಕರ್ಷ ಮತ್ತು ಅವುಗಳಿಂದ ಬಂದ ಜ್ಞಾನ ಅನುಮಾನ=ಅನುಮಾನ ಮತ್ತು ಅನುಮಿತಿ ಮಾತೃ=ಈ ಜ್ಞಾನಗಳಿಗೆ ಆಶ್ರಯವಾದ ಪ್ರಮಾತೃ ಇವೇ ಮೊದಲಾದ ಪ್ರಮಾಣಪ್ರಮೇಯರೂಪವಾದ ವಿಶ್ವಸ್ಯ=ಜಗತ್ತಿಗೆ ಭ್ರಾಂತಿಃ=ಭ್ರಾಂತಿ ಕಲ್ಪಿತತ್ವವನ್ನು ಯೇನ ಪ್ರಮಾಣಾಭಾಸೇನ=ಯಾವ ಅದ್ವಿತೀಯವಾದ

ದುಷ್ಟಪ್ರಮಾಣದಿಂದ ಕಲ್ಪ್ಯತೇ=ಕಲ್ಪಿಸಲ್ಪಡುವುದೋ ತನ್ಮಾತ್ರಸ್ಯ=ಆ ಒಂದು ಪ್ರಮಾಣಕ್ಕೆ ಮಾತ್ರ ಅನ್ಯಥಾಭಾವೇ=ಅಪ್ರಾಮಾಣ್ಯವನ್ನು ಕಲ್ಪಿಸಿದಲ್ಲಿ ವಿಶ್ವಸತ್ಯತಾ=ಸಕಲ ಜಗತ್ತಿಗೂ ಸತ್ಯತ್ವವು ಕಿಂ ನ ಸ್ಯಾತ್=ಬರುವುದಿಲ್ಲವೇನು?

ಭಾವಾರ್ಥ— ಬ್ರಹ್ಮನಲ್ಲಿ ಸರ್ವಜ್ಞತ್ವ ಎಂಬ ಧರ್ಮವು ಮಿಥ್ಯಾ ಎಂದು ಹೇಳುವುದಕ್ಕಾಗಿ ಸರ್ವವೂ ಮಿಥ್ಯಾ ಎಂದು ಕಲ್ಪಿಸಲಾಗುತ್ತದೆ. ಆದರೆ, ಅದು ಸರಿಯಲ್ಲ. ಈ ವಿಶ್ವದ ಜ್ಞಾನ ನಮ್ಮಂತಹವರಿಗೂ ಇದೆ, ಪರಬ್ರಹ್ಮನಿಗೂ ಇದೆ. ನಾವೆಲ್ಲ ಅಪರಪ್ರಮಾತೃಗಳಾದರೆ, ಬ್ರಹ್ಮನು ಪರಪ್ರಮಾತೃ. ಅದರಂತೆ ನಿತ್ಯವಾದ ಪರಮಾತ್ಮನ ಜ್ಞಾನವಿದೆ. ಆಗಮ, ಇಂದ್ರಿಯಾರ್ಥ ಸನ್ನಿಕರ್ಷ ರೂಪಪ್ರತ್ಯಕ್ಷ, ಅನುಮಾನ ಈ ಪ್ರಮಾಣತ್ರಯಗಳಿವೆ. ಈ ಮೂರರಿಂದ ಬಂದ ಜ್ಞಾನಗಳಿವೆ. ಇವಿಷ್ಟರ ಹಿನ್ನಲೆ ಈ ಪ್ರಪಂಚಕ್ಕಿದೆ. ಪ್ರಮಾತೃ, ಪ್ರಮಾಣ, ಪ್ರಮಾಸಿದ್ಧವಾದುದು ವಿಶ್ವ. ಇವೆಲ್ಲವನ್ನು ಮಿಥ್ಯಾ ಎನ್ನುವುದಕ್ಕಿಂತ ಇವುಗಳನ್ನು ಮಿಥ್ಯಾ ಎಂದು ಸಾಧಿಸುವ ಒಂದು ಪ್ರಮಾಣವು ಅಪ್ರಮಾಣ ಎಂದು ಹೇಳುವುದೇ ಉತ್ತಮ. ಆದ್ದರಿಂದ ಪ್ರಮಾಣಾ ಭಾಸದಿಂದ ಈ ಜಗತ್ತಿಗೆ ಮಿಥ್ಯಾತ್ವವನ್ನು ಹೇಳಬಾರದು. ಅಷ್ಟೇ ಅಲ್ಲ, ವಿಶ್ವಸತ್ಯತ್ವಸಾಧಕ ಪ್ರಮಾಣಗಳಿಗೆ ಬಹುತ್ವನಿಮಿತ್ತದಿಂದ ಪ್ರಾಬಲ್ಯವಿದೆ. ಮಿಥ್ಯಾತ್ವಸಾಧಕಪ್ರಮಾಣವು ಏಕತ್ವ ಇರುವುದರಿಂದ ದುರ್ಬಲವಾಗಿದೆ. ಆದ್ದರಿಂದಲೂ ಮಿಥ್ಯಾತ್ವಬೋಧಕಪ್ರಮಾಣವೇ ಅಸಾಧಕ.

**ಯೇನೇದಂ ಕಲ್ಪ್ಯತೇ ಭ್ರಾಂತಂ ಭ್ರಾಂತಿಸ್ತಸ್ಯೈವ ಕಿಂ ನ ಸಾ ।**
**ಭ್ರಾಂತತ್ವೇ ತಸ್ಯ ವಿಶ್ವಾರೇರೀಶಾದ್ಯಭ್ರಾಂತಮೇವ ಹಿ ।**
**ಭವೇಯುರ್ಭ್ರಾಂತಯೋ ನೄಣಾಂ ನೈವೇಶಾದೇಃ ಕಥಂಚನ ॥ ೫೧ ॥**

ಯೇನ=ಯಾವ ಗೌಡಪಾದಾದಿವ್ಯಕ್ತಿಗಳಿಂದ ಇದಂ ಭ್ರಾಂತಂ ಕಲ್ಪ್ಯತೇ=ಈ ಈಶಾದಿವಿಶ್ವಗಳು ಭ್ರಾಂತಿಸಿದ್ಧಗಳು ಎಂದು ಕಲ್ಪಿಸಲ್ಪಡುವವೋ ಸಾ=ಆ ಕಲ್ಪನೆಯೇ, ತಸ್ಯೈವ=ಗೌಡಪಾದಾದಿಗಳಿಗೇ ಭ್ರಾಂತಿಃ= ಭ್ರಾಂತಿಯು ಎಂದು ಕಿಂ ನ ಸ್ಯಾತ್=ಏಕಾಗಿರಬಾರದು? ವಿಶ್ವಾರೇಃ= ವಿಶ್ವಮಿಥ್ಯಾತ್ವವನ್ನು ಪ್ರತಿಪಾದಿಸುವ ಕಾರಣದಿಂದ ವಿಶ್ವಕ್ಕೆ ಶತ್ರುಗಳೆನಿಸಿರುವ

ತಸ್ಯ=ಗೌಡಪಾದಾದಿಗಳಿಗೆ ಭ್ರಾಂತತ್ವೆ=ಭ್ರಾಂತಿ ಇದೆ ಎಂದು ಸಿದ್ಧವಾದಲ್ಲಿ ಈಶಾದಿ=ಈಶಾದಿ ಈ ಜಗತ್ತು ಅಭ್ರಾಂತಮೇವ=ಸತ್ಯವೇ ಆಗುತ್ತದೆ. ನೃಣಾಂ=ಮನುಷ್ಯರಿಗೆ ಭ್ರಾಂತಯಃ=ಭ್ರಾಂತಿಗಳು ಭವೇಯುಃ=ಬರುವ ಸಂಭವ ಇದೆ. ಈಶಾದೇಃ=ಈಶ್ವರನೇ ಮುಂತಾದವರಿಗೆ ಕಥಂಚನ=ಬಾಹ್ಯ ಅಥವಾ ಆಂತರ ದೋಷಗಳಿಂದ ನೈವ ಭ್ರಾಂತಯಃ ಭವೇಯುಃ= ಭ್ರಮೆಯು ಹುಟ್ಟಲಾರದು.

ಭಾವಾರ್ಥ— ಗೌಡಪಾದರು ಶಂಕರಾಚಾರ್ಯರ ಪರಮಗುರುಗಳು. ಅವರು ಉಪನಿಷತ್ತಿಗೆ ಬರೆದ ಕಾರಿಕೆಗಳಲ್ಲಿ ವಿಶ್ವಮಿಥ್ಯಾವು ಹೇಳಲ್ಪಟ್ಟಿದೆ. ಆದಕ್ಕಿಂತಲೂ ಮೊದಲು ಈಶಾದಿಗಳ ಪ್ರತ್ಯಕ್ಷಗಳಿಂದ, ಅನುಮಾನಾಗಮ ಪ್ರಮಾಣಗಳಿಂದ ವಿಶ್ವಸತ್ಯತ್ವವು ಸಿದ್ಧವಾಗಿದೆ. ಇವೆರಡರಲ್ಲಿ ಒಂದು ಭ್ರಾಂತಿ ಯಾಗಿರಲೇಬೇಕು. ಆ ಭ್ರಾಂತಿಯನ್ನು ಈಶ್ವರನಿಗೆ ಕಲ್ಪಿಸುವ ಬದಲು ಗೌಡಪಾದಾದಿಗಳಿಗೆ ಕಲ್ಪಿಸುವುದೇ ಉಚಿತ.ಏಕೆಂದರೆ,ಭ್ರಾಂತಿಗೆ ಕಾರಣವಾದ ಅಜ್ಞಾನಾದಿದೋಷಗಳು, ಇಂದ್ರಿಯದೋಷಗಳು ಅವರಲ್ಲಿ ಸಂಭಾವಿತ ವಾಗಿವೆ. ಈಶ್ವರನಲ್ಲಿ ಅಂತಹ ದೋಷಗಳು ಅಸಂಭಾವಿತ. ಹೀಗೆ ಗುಣ ದೋಷಗಳನ್ನು ವಿಚಾರಮಾಡಿದಾಗ ವಿಶ್ವಸತ್ಯ ಎನ್ನುವುದೇ ಯುಕ್ತವಾದುದು.

**ಸತ್ಯತ್ವಮಕ್ಷಜಪ್ರಾಪ್ತಂ ಯದಿ ಭ್ರಾಂತಮಿತೀಷ್ಯತೇ ।**
**ಪ್ರಾಮಾಣ್ಯಮಾಗಮಸ್ಯಾಪಿ ಪ್ರತ್ಯಕ್ಷಾದನ್ಯತಃ ಕುತಃ ॥ ೫೨ ॥**

**ಸಾಕ್ಷಿಪ್ರತ್ಯಕ್ಷತೋ ಹ್ಯೇವ ಮಾನಾನಾಂ ಮಾನತೇಯತೇ ।**
**ಸಾಕ್ಷಿಣಃ ಸ್ವಪ್ರಕಾಶತ್ವಮನವಸ್ಥಾ ತತೋ ನಹಿ ॥ ೫೩ ॥**

ಅಕ್ಷಜಪ್ರಾಪ್ತಂ=ಪ್ರತ್ಯಕ್ಷಸಿದ್ಧವಾದ ಸತ್ಯತ್ವಂ=ವಿಶ್ವಸತ್ಯತ್ವವು ಯದಿ= ಒಂದುವೇಳೆ ಭ್ರಾಂತಂ=ಭ್ರಾಂತಿವಿಷಯ ಇತಿ ಇಷ್ಯತೇ=ಹೀಗೆ ಹೇಳುವು ದಾದಲ್ಲಿ ಆಗಮಸ್ಯಾಪಿ=ವೇದಾದ್ಯಾಮಗಕ್ಕಾದರೂ ಪ್ರಾಮಾಣ್ಯಂ= ಪ್ರಾಮಾಣ್ಯವು ಕೇನ ಸಿದ್ಧ್ಯತಿ=ಯಾವುದರಿಂದ ಸಿದ್ಧವಾಗುತ್ತದೆ? ಸಾಕ್ಷಿಪ್ರತ್ಯಕ್ಷತಃ ಏವ=ಸಾಕ್ಷಿಪ್ರತ್ಯಕ್ಷದಿಂದಲೇ ಮಾನಾನಾಂ=ಪ್ರಮಾಣಗಳಿಗೆ ಮಾನತಾ=ಪ್ರಾಮಾಣ್ಯವು ಈಯತೇ=ತಿಳಿಯಲ್ಪಡುತ್ತದೆ. ಸಾಕ್ಷಿಣಃ=

ಸಾಕ್ಷಿಗಾದರೋ ಸ್ವಪ್ರಕಾಶತ್ವಂ=ಸ್ವಯಂಪ್ರಕಾಶರೂಪತ್ವವು ಇದೆ. ತತಃ= ಆದ್ದರಿಂದ ಅನವಸ್ಥಾ=ಅನವಸ್ಥಾದೋಷವು ನಹಿ=ಇಲ್ಲ.

**ಭಾವಾರ್ಥ—** ವಿಶ್ವವು ಸತ್ಯ, ಎಂದು ಪ್ರತ್ಯಕ್ಷದಿಂದ ಸಿದ್ಧವಾಗಿದೆ. ಈ ಪ್ರತ್ಯಕ್ಷವು ಬಾಧಿತವಾದರೆ ವೇದಪ್ರಾಮಾಣ್ಯವೂ ಸಿದ್ಧವಾಗಲಿಕ್ಕಿಲ್ಲ. ಏಕೆಂದರೆ, ಎಲ್ಲಾ ಪ್ರಮಾಣಗಳ ಪ್ರಾಮಾಣ್ಯವು ಸಿದ್ಧವಾಗುವುದು ಸಾಕ್ಷಿಪ್ರತ್ಯಕ್ಷದಿಂದ. ಅಂತಹ ಪ್ರತ್ಯಕ್ಷವೇ ಅಪ್ರಮಾಣವಾದಲ್ಲಿ ಅದರಿಂದ ವೇದಪ್ರಾಮಾಣ್ಯ ಸಿದ್ಧವಾಗುವುದಿಲ್ಲ. ಸಾಕ್ಷಿಯು ಸ್ವಪ್ರಕಾಶಚೈತನ್ಯರೂಪ. ತನ್ನ ಪ್ರಾಮಾಣ್ಯ ವನ್ನು ತಾನೇ ಗ್ರಹಿಸುತ್ತದೆ. ಅದರ ಪ್ರಾಮಾಣ್ಯಗ್ರಹಣೆಗೆ ಇನ್ನೊಂದು ಪ್ರಮಾಣಬೇಕಾಗಿಲ್ಲ. ಆದ್ದರಿಂದ ಅನವಸ್ಥಾದೋಷಕ್ಕೂ ಅವಕಾಶ ಇಲ್ಲ. ಹೀಗೆ ಪ್ರತ್ಯಕ್ಷವು ಪ್ರಾಮಾಣ್ಯಗ್ರಹಣೆಯ ಮೂಲಕ ಉಪಜೀವ್ಯವಾದುದರಿಂದ ಪ್ರಬಲ. ಅದಕ್ಕೆ ವಿರುದ್ಧವಾಗಿ ವೇದವೂ ಮಿಥ್ಯಾತ್ವವನ್ನು ಪ್ರತಿಪಾದಿಸುವು ದಿಲ್ಲ. ಆದ್ದರಿಂದ ವೇದದಿಂದಲೂ ವಿಶ್ವಮಿಥ್ಯಾತ್ವವು ಸಿದ್ಧವಾಗುವುದಿಲ್ಲ.

**ತಾತ್ಕಾಲಿಕಂ ಪ್ರಮಾಣತ್ವಮಕ್ಷಜಸ್ಯ ಯದಾ ಭವೇತ್ ।**
**ಐಕ್ಯಾಗಮಸ್ಯ ಕಿಂ ನ ಸ್ಯಾತ್ ತಸ್ಯಾಪ್ಯೇತಾದೃಶಂ ಯದಿ ।**
**ಐಕ್ಯಪ್ರಮಾಣ (ಪ್ರಾಮಾಣ್ಯ) ಮಿಥ್ಯಾತ್ವಂ ಯದಾ**
**ವಿಶ್ವಸ್ಯ ಸತ್ಯತಾ ॥ ೫೪ ॥**

ಅಕ್ಷಜಸ್ಯ=ಪ್ರತ್ಯಕ್ಷಕ್ಕೆ ತಾತ್ಕಾಲಿಕಂ ಪ್ರಾಮಾಣ್ಯಂ=ವ್ಯವಹಾರಕಾಲದಲ್ಲಿ ಮಾತ್ರ ಪ್ರಾಮಾಣ್ಯವು ಯದಾ ಭವೇತ್=ಸಿದ್ಧವಾಗುವುದಾದಲ್ಲಿ ಐಕ್ಯಾಗಮಸ್ಯ=ಸಾಕ್ಷಿಗೃಹಿತವಾಗಿರುವ ಐಕ್ಯಾಗಮದ ಪ್ರಾಮಾಣ್ಯವೂ ತಾತ್ಕಾಲಿಕ ಎಂದು ಕಿಂ ನ ಸ್ಯಾತ್=ಏಕಾಗಬಾರದು? ತಸ್ಯಾಪಿ= ಐಕ್ಯಾಗಮನಕ್ಕೂ ಏತಾದೃಶಂ ಯದಿ=ತಾತ್ಕಾಲಿಕ ಪ್ರಾಮಾಣ್ಯವೇ ಇರುವು ದಾದಲ್ಲಿ ಐಕ್ಯಪ್ರಮಾಣಮಿಥ್ಯಾತ್ವಂ=ಐಕ್ಯವನ್ನು ಬೋಧಿಸುವ ಆಗಮಕ್ಕೆ ಮಿಥ್ಯಾತ್ವವು ಬಂದೀತು. ತದಾ=ಆಗ ವಿಶ್ವಸ್ಯ ಸತ್ಯತಾ=ಜಗತ್ತಿಗೆ ಸತ್ಯತ್ವವು ಸಿದ್ಧವಾಗುತ್ತದೆ.

**ಭಾವಾರ್ಥ—** ಸಾಕ್ಷಿಯೇ ಪ್ರತ್ಯಕ್ಷದ ಪ್ರಾಮಾಣ್ಯವನ್ನು ಗ್ರಹಿಸಿದರೂ

ಪ್ರತ್ಯಕ್ಷದಲ್ಲಿರುವ ಆ ಪ್ರಾಮಾಣ್ಯವು ತಾತ್ಕಾಲಿಕವಾದುದು, ವ್ಯವಹಾರ ಕಾಲದಲ್ಲಿ ಮಾತ್ರ ಅದಕ್ಕೆ ಪ್ರಾಮಾಣ್ಯವು ಇದೆ. ಆಗಮಪ್ರಾಮಾಣ್ಯ ಸಾರ್ವಕಾಲಿಕವಾದುದು. ಆದ್ದರಿಂದ ಆಗಮದಿಂದ ಪ್ರತ್ಯಕ್ಷವು ಬಾಧಿತ. ಹೀಗೆ ಹೇಳುವುದು ಸರಿಯಲ್ಲ. ಸಾಕ್ಷಿಗ್ರಹಿಸಿರುವ ಪ್ರಾಮಾಣ್ಯವು ಪ್ರತ್ಯಕ್ಷದಲ್ಲಿ ತಾತ್ಕಾಲಿಕವಾದರೆ ವೇದಪ್ರಾಮಾಣ್ಯವೂ ತಾತ್ಕಾಲಿಕವೇ ಆಗಬೇಕು. ಏಕೆಂದರೆ, ಅದೂ ಸಾಕ್ಷಿಯಿಂದಲೇ ಗೃಹೀತವಾದುದು.

ಅದೂ ತಾತ್ಕಾಲಿಕವೇ. ಐಕ್ಯಾಗಮವು ಪ್ರತ್ಯಕ್ಷವನ್ನು ಅಪ್ರಮಾಣವನ್ನಾಗಿ ಮಾಡಿ ತಾನೂ ನಿವೃತ್ತಿಹೊಂದುತ್ತದೆ. ಅದ್ವೈತ ಪ್ರಕ್ರಿಯೆಯೇ ಹೀಗೆ ಎಂದು ಭಾಗವತದಲ್ಲಿ ಇದೆ—

ವೇಣುಸಂಘರ್ಷಜೋ ವಹ್ನಿಃ ದಗ್ಧ್ವಾ ಶಾಮ್ಯತಿ ತದ್ವನಮ್ ।
ಏವಂ ಗುಣವ್ಯತ್ಯಯಜೋ ವೇದಃ ಶಾಮ್ಯತಿ ತದ್ ಯದಾ ॥

ಈ ಆಕ್ಷೇಪವೂ ಯುಕ್ತವಲ್ಲ- ಪ್ರಾಮಾಣ್ಯ ತಾತ್ಕಾಲಿಕ ಎಂದರೆ ಅನಿತ್ಯ ಎಂದು ಅರ್ಥವಲ್ಲ. ಅದು ಅನಿತ್ಯವಾದರೂ, ಪ್ರಮಾಣಗಳಲ್ಲಿ ಒಂದುಕ್ಷಣ ಮಾತ್ರ ಇದ್ದರೂ ಸಾಕು, ಆ ಪ್ರಮಾಣಪ್ರತಿಪಾದ್ಯವಾದ ವಿಷಯವು ಸತ್ಯವಾಗುತ್ತದೆ.

ತಾತ್ಕಾಲಿಕವೆಂದರೆ ಬಾಧ್ಯ ಎಂದರ್ಥವಾದರೆ ಆಗ ಐಕ್ಯಾಗಮ ಪ್ರಾಮಾಣ್ಯವು ಬಾಧ್ಯವೆಂದಾದಲ್ಲಿ ಅದಕ್ಕೆ ವಿರುದ್ಧವಾದ ಪ್ರತ್ಯಕ್ಷವು ಅಬಾಧ್ಯವಾಗುತ್ತದೆ. ಅದರಿಂದ ವಿಶ್ವವು ಸತ್ಯವೆಂದಾಗುತ್ತದೆ.

(ಐಕ್ಯಾಗಮಪ್ರಾಮಾಣ್ಯಕ್ಕೆ ಮಾತ್ರ ತಾತ್ಕಾಲಿಕತ್ವ ಅಂದರೆ ಮಿಥ್ಯಾತ್ವ ವಲ್ಲ. ವೇದಕ್ಕೂ ಮಿಥ್ಯಾತ್ವವು ಬರುತ್ತದೆ, ಎನ್ನುವುದು ಐಕ್ಯಪ್ರಮಾಣ ಮಿಥ್ಯಾತ್ವೇ ಎನ್ನುವ ಅನುವ್ಯಾಖ್ಯಾನದ ಪಾಠಾಂತರದ ಅಭಿಪ್ರಾಯ.)

**ಐಕ್ಯವಾಕ್ಯಸ್ಯ ಮಾನತ್ವಂ ಯದ್ಯಬಾಧ್ಯಮಿತೀಷ್ಯತೇ ।**
**ಅಕ್ಷಜಸ್ಯಾಪಿ ಮಾನತ್ವಂ ನಾಬಾಧ್ಯಂ ಕಿಮಿತೀಷ್ಯತೇ ॥ ೫೫ ॥**

ಪ್ರಾಮಾಣ್ಯವು ಸಾಕ್ಷಿಗೃಹೀತವಾದರೂ ಐಕ್ಯವಾಕ್ಯಸ್ಯ ಮಾನತ್ವಂ ಐಕ್ಯವಾಕ್ಯದ ಪ್ರಾಮಾಣ್ಯವು ಯದಿ=ಒಂದುವೇಳೆ ಅಬಾಧ್ಯಮಿತೀಷ್ಯತೇ=

ಅಬಾಧ್ಯ ಎಂದು ಹೇಳುವುದಾದರೆ ಅಕ್ಷಜಸ್ಯಾಪಿ ಮಾನತ್ವಂ=ಪ್ರತ್ಯಕ್ಷದ ಪ್ರಾಮಾಣ್ಯವೂ ಅಬಾಧ್ಯಂ ಇತಿ=ಅಬಾಧ್ಯ ಎಂದು ಕಿಮಿತಿ=ಏತಕ್ಕಾಗಿ ನ ಇಷ್ಯತೇ=ಅಂಗೀಕರಿಸಲ್ಪಡುವುದಿಲ್ಲ?

ಭಾವಾರ್ಥ— ಸಾಕ್ಷಿಯು ಅವ್ಯಭಿಚಾರಿಯಾದುದರಿಂದ ಅದರಿಂದ ಗೃಹೀತವಾದ ಐಕ್ಯಾಗಮದ ಪ್ರಾಮಾಣ್ಯವು ಎಂದೂ ಬಾಧ್ಯವಾಗುವುದಿಲ್ಲ. ಆದ್ದರಿಂದ, ಐಕ್ಯಾಗಮವು ಅಪ್ರಮಾಣವಲ್ಲ, ಎನ್ನುವುದಾದಲ್ಲಿ ವಿಶ್ವಸತ್ಯತ್ವ ವನ್ನು ಗ್ರಹಿಸುವ ಪ್ರತ್ಯಕ್ಷದ ಪ್ರಾಮಾಣ್ಯವೂ ಸಾಕ್ಷಿಸಿದ್ಧವಾದ ಕಾರಣ ಆಗಮದಂತೆ ಅದೂ ಸದಾ ಪ್ರಮಾಣವೇ ಆಗಬೇಕು. ಆಗ, ಅದರ ಬಾಧ ಐಕ್ಯಾಗಮಕ್ಕೆ ಬರುತ್ತದೆ.

**ಅದ್ವೈತಹಾನಿಸಾಮಾನ್ಯಾನ್ನ ವಿಶೇಷಶ್ಚ ಕಶ್ಚನ ।**
**ಯದಿ ಸ್ವತಸ್ತ್ವಂ ಪ್ರಾಮಾಣ್ಯೇ ವಿಶ್ವಸತ್ತಾ ಕಥಂ ನ ತೇ ॥ ೫೬ ॥**

ಅದ್ವೈತಹಾನಿಸಾಮಾನ್ಯಾತ್=ಸತ್ಯತ್ವಗ್ರಾಹಿಯಾದ ಪ್ರತ್ಯಕ್ಷವು ಪ್ರಮಾಣ ವಾದರೆ ಹೇಗೆ ಅದ್ವೈತಹಾನಿ ಇದೆಯೋ ಹಾಗೆ ಐಕ್ಯಾಗಮವು ಪ್ರಮಾಣ ವಾದರೂ ಅದ್ವೈತಹಾನಿ ಸಮಾನವಾದುದು. ಆದ್ದರಿಂದ ಒಂದು ಪ್ರಮಾಣ, ಇನ್ನೊಂದು ಪ್ರಮಾಣವಲ್ಲ, ಎಂದು ವ್ಯತ್ಯಾಸಮಾಡುವುದಕ್ಕೆ ಕಾರಣವೇನೂ ಇಲ್ಲ. ವಿಶೇಷಶ್ಚ ಕಶ್ಚನ ನ=ಐಕ್ಯಾಗಮ ಮಾತ್ರ ಪ್ರಮಾಣ, ಎನ್ನುವುದರಿಂದ ಯಾವ ವಿಶೇಷಲಾಭವೂ ಇಲ್ಲ.

ತೇ=ನಿನಗೆ ಯದಿ ಒಂದುವೇಳೆ ಪ್ರಾಮಾಣ್ಯೇ ಸ್ವತಸ್ತ್ವಂ=ಪ್ರಾಮಾಣ್ಯ ದಲ್ಲಿ ಸ್ವತಸ್ತ್ವವು ಅಭಿಮತ ಎಂದಾದಲ್ಲಿ ವಿಶ್ವಸತ್ಯತಾ ಕಥಂ ನ=ಜಗತ್ತಿಗೆ ಸತ್ಯತ್ವವು ಏಕಿಲ್ಲ?

ಭಾವಾರ್ಥ— ಪ್ರತ್ಯಕ್ಷವು ಪ್ರಮಾಣವಾದರೆ ಅದರಿಂದ ಸಿದ್ಧವಾದ ಈ ಜಗತ್ತೂ ಸತ್ಯವಾಗುತ್ತದೆ. ಇದು ಬ್ರಹ್ಮಾದ್ವೈತವಾದಕ್ಕೆ ವಿರುದ್ಧ. ಆದ್ದರಿಂದ ಪ್ರತ್ಯಕ್ಷವು ಅಪ್ರಮಾಣ, ಎನ್ನುವುದು ಸರಿಯಲ್ಲ. ಈ ಸಮಸ್ಯೆ ಐಕ್ಯವಾಕ್ಯವು ಪ್ರಮಾಣ ಎಂದಾಗಲೂ ಇದೆ. ಆಗಲೂ ಐಕ್ಯಾಗಮ, ಅದರ ಪ್ರಾಮಾಣ್ಯ, ಅದು ಹೇಳಿದ ಭೇದಾಭಾವ ಇವುಗಳೆಲ್ಲವೂ ಸತ್ಯವಾಗುತ್ತವೆ. ಇವಾವುವೂ

ಬ್ರಹ್ಮಸ್ವರೂಪಗಳಲ್ಲ. ಆದ್ದರಿಂದ ಅದ್ವೈತಹಾನಿ ಇದ್ದಿದ್ದೆ. ಪ್ರತ್ಯಕ್ಷವು ಅಬಾಧ್ಯವಾದರೆ ಈ ಪ್ರಪಂಚವೆಲ್ಲವೂ ಸತ್ಯವೆನ್ನಬೇಕಾಗುತ್ತದೆ. ಐಕ್ಯಾಗಮ ಅಬಾಧ್ಯವಾದರೆ ಕೆಲವೇ ಸತ್ಯಗಳನ್ನು ಒಪ್ಪಿದರೆ ಸಾಕು, ಎನ್ನುವ ವ್ಯತ್ಯಾಸಕ್ಕೆ ಅರ್ಥವಿಲ್ಲ. ಏಕೆಂದರೆ ಬ್ರಹ್ಮಾತಿರಿಕ್ತವಾದ ಒಂದು ಸತ್ಯವನ್ನು ಒಪ್ಪಿದರೂ ಅದ್ವೈತಹಾನಿ ಇದ್ದೇ ಇದೆ.

ಆಗಮಪ್ರಾಮಾಣ್ಯವು ಸ್ವತಃ ಎಂದಾದರೆ ಪ್ರತ್ಯಕ್ಷಪ್ರಾಮಾಣ್ಯವೂ ಸ್ವತಃ. ಆದ್ದರಿಂದ ಆಗಮಸಿದ್ಧವಾದ ಐಕ್ಯವು ಸತ್ಯವಾದರೆ ಪ್ರತ್ಯಕ್ಷಸಿದ್ಧವಾದ ವಿಶ್ವವೂ ಸತ್ಯವಾಗಬೇಕು.

ಎರಡು ಪ್ರಮಾಣಗಳ ಪ್ರಾಮಾಣ್ಯವೂ ಸ್ವತಃ ಆದರೂ, ಪ್ರತ್ಯಕ್ಷದ ಪ್ರಾಮಾಣ್ಯವು ತಾತ್ಕಾಲಿಕ, ಆಗಮಪ್ರಾಮಾಣ್ಯ ಸಾರ್ವಕಾಲಿಕ, ಎನ್ನುವುದು ಸರಿಯಲ್ಲ. ಇದನ್ನು ಮುಂದೆ ಹೇಳಲಾಗಿದೆ—

**ಪ್ರಾಮಾಣ್ಯಸ್ಯ ಚ ಮರ್ಯಾದಾ ಕಾಲತೋ ವ್ಯಾಹತಾ ಭವೇತ್ ।**
**ಕಾಲಾಂತರೇऽಪ್ಯಮಾನಂ ಚೇದಿದಾನೀಂ ಮಾನತಾ ಕುತಃ ॥ ೫೭ ॥**

ಪ್ರಾಮಾಣ್ಯಸ್ಯ=ಪ್ರಾಮಾಣ್ಯಕ್ಕೆ ಕಾಲತಃ ಮರ್ಯಾದಾ=ಕಾಲದ ಪರಿಮಿತಿಯು ವ್ಯಾಹತಾ ಭವೇತ್=ವ್ಯಾಹತವಾದುದು. ಕಾಲಾಂತರೇऽಪಿ ಅಮಾನಂ ಚೇತ್=ಪ್ರತ್ಯಕ್ಷವು ಬ್ರಹ್ಮಜ್ಞಾನ ಬಂದಾಗ ಕಾಲಾಂತರದಲ್ಲಿ ಬಾಧ್ಯವೆಂದಾದರೆ ಇದಾನೀಂ=ವರ್ತಮಾನಕಾಲದಲ್ಲಾದರೂ ಅದಕ್ಕೆ ಮಾನತಾ=ಪ್ರಾಮಾಣ್ಯವು ಕುತಃ=ಹೇಗೆ ಬರಬೇಕು?

**ಭಾವಾರ್ಥ—** ಪ್ರತ್ಯಕ್ಷ ಮತ್ತು ಐಕ್ಯಾಗಮ ಇವೆರಡೂ ಸ್ವತಃ ಪ್ರಮಾಣಗಳೇ ಆದರೂ ಪ್ರತ್ಯಕ್ಷಕ್ಕೆ ಬ್ರಹ್ಮಜ್ಞಾನ ಬರುವವರೆಗೆ ಮಾತ್ರ ಪ್ರಾಮಾಣ್ಯ. ಆದರೆ, ಐಕ್ಯಾಗಮವು ಸರ್ವದಾ ಪ್ರಮಾಣ. ಹೀಗೆ ಅವೆರಡರ ಪ್ರಾಮಾಣ್ಯದಲ್ಲೂ ವ್ಯತ್ಯಾಸವಿದೆ, ಎಂದು ಮಾಯಾವಾದವು ಹೇಳುತ್ತದೆ. ಆದರೆ, ಹೀಗೆ ಹೇಳುವುದು ವ್ಯಾಹತ. ಪ್ರಾಮಾಣ್ಯ ಎಂದರೆ ಸಾರ್ವಕಾಲಿಕ ಸತ್ಯ. ಅದನ್ನು ಕಾಲಕ್ಕೆ ಸೀಮಿತಗೊಳಿಸುವುದು ಸರಿಯಲ್ಲ. ನೀರನ್ನು ನೋಡಿ 'ಇದು ನೀರು' ಎಂದು ಬಂದ ಜ್ಞಾನವು ಸರ್ವಕಾಲದಲ್ಲೂ ಯಥಾರ್ಥವೇ.

ಮರೀಚಿಕೆಯನ್ನು ನೋಡಿ ಬಂದ 'ಇದು ನೀರು' ಎಂಬ ಜ್ಞಾನ ಸರ್ವಕಾಲದಲ್ಲೂ ಅಯಥಾರ್ಥವೆ. ಒಂದು ಜ್ಞಾನದಲ್ಲಿ ಪ್ರಾಮಾಣ್ಯವಿದ್ದರೆ ಅದು ಸಾರ್ವಕಾಲಿಕವಾಗಿರಬೇಕು, ತಾತ್ಕಾಲಿಕವಾಗಿರುವುದಿಲ್ಲ. ಆದ್ದರಿಂದ ಪ್ರಾಮಾಣ್ಯಕ್ಕೆ ಕಾಲದ ಮಿತಿಯನ್ನು ಹಾಕುವುದು ವ್ಯಾಹತ. ಏಕೆಂದರೆ, ಪ್ರತ್ಯಕ್ಷ ಪ್ರಾಮಾಣ್ಯವು ಬಾಧಿತ ಎಂದರೆ ಕಾಲತ್ರಯದಲ್ಲೂ ಇಲ್ಲ ಎಂದರ್ಥ. ವರ್ತಮಾನಕಾಲದಲ್ಲಿ ಪ್ರಾಮಾಣ್ಯವು ಇದ್ದರೆ ಅದು ಕಾಲತ್ರಯದಲ್ಲೂ ಇಲ್ಲದಾಗುವುದು ಹೇಗೆ? ಆದ್ದರಿಂದ, ಪ್ರತ್ಯಕ್ಷಪ್ರಾಮಾಣ್ಯವು ಈಗ ಇದೆ, ಕಾಲಾಂತರದಲ್ಲಿ ಅದು ಬಾಧ್ಯವಾಗಿದೆ, ಎನ್ನುವುದು ವ್ಯಾಹತ.

**ಮಿಥ್ಯಾತ್ವಮಾನಂ ಮೋಕ್ಷೇಽಪಿ ಮಾನಂ ಕಿಂ ನೇತಿ ಭಣ್ಯತಾಮ್ ।**
**ಮಾನತ್ವೇಽದ್ವೈತಹಾನಿಃ ಸ್ಯಾದಮಾನತ್ವೇಽಪ್ಯಮೋಕ್ಷತಾ ।**
**ವಿಶ್ವಸ್ಯ ಪುನರಾಪತ್ತಿರ್ಮಿಥ್ಯಾಮಾನಂ ಯದಾ ನ ಮಾ ॥ ೫೮ ॥**

ಮಿಥ್ಯಾತ್ವಮಾನಂ=ವಿಶ್ವಮಿಥ್ಯಾತ್ವವನ್ನು ಹೇಳುವ ಆಗಮ ಅಥವಾ ಅನುಮಾನವು ಮೋಕ್ಷೇಽಪಿ=ಮೋಕ್ಷಾವಸ್ಥೆಯಲ್ಲೂ ಕಿಂ ಮಾನಂ= ಪ್ರಮಾಣವೋ ಕಿಂ ನೇತಿ=ಅಥವಾ ಅಲ್ಲವೋ, ಇತಿ=ಹೀಗೆಂದು ಭಣ್ಯತಾಂ= ಹೇಳಲ್ಪಡಲಿ. ಮಾನತ್ವೇ=ಮೋಕ್ಷದಶಾದಲ್ಲೂ ಪ್ರಮಾಣವೆಂದಾದಲ್ಲಿ ಅದ್ವೈತ ಹಾನಿಃ ಸ್ಯಾತ್=ದ್ವಿತೀಯಸತ್ಯವಸ್ತು ಇದ್ದಂತಾಗಿ ಅದ್ವೈತಹಾನಿ ಬಂದೀತು. ಅಮಾನತ್ವೇ=ಅವುಗಳು ಆಗ ಅಪ್ರಮಾಣಗಳಾದರೆ ಅಮೋಕ್ಷತಾ= ದ್ವಿತೀಯಾಭಾವರೂಪವಾದ ಮೋಕ್ಷವೇ ಇಲ್ಲವೆಂದಾಗುತ್ತದೆ. ಏಕೆಂದರೆ, ಮಿಥ್ಯಾಮಾನಂ=ಜಗತ್ತಿಗೆ ಮಿಥ್ಯಾತ್ವವನ್ನು ಹೇಳುವ ಅನುಮಾನ ಮತ್ತು ಆಗಮಗಳು ಯದಾ ನ ಮಾ=ಯಾವಾಗ ಪ್ರಮಾಣವಲ್ಲವೋ ಆಗ ವಿಶ್ವಸ್ಯ=ಈ ಜಗತ್ತಿಗೆ ಪುನರಾಪತ್ತಿಃ=ಮತ್ತೆ ಸತ್ಯತ್ವವು ಬಂದೀತು.

ಭಾವಾರ್ಥ— ಆಗಮ ಮತ್ತು ಅನುಮಾನಗಳಿಂದ ವಿಶ್ವಕ್ಕೆ ಮಿಥ್ಯಾತ್ವ ವನ್ನು ಸಾಧಿಸಬೇಕು. ಆ ಪ್ರಮಾಣಗಳು ಮೋಕ್ಷದಲ್ಲೂ ಅಬಾಧಿತವಾದಲ್ಲಿ ಅಂತಹ ಪ್ರಮಾಣಗಳೆಂಬ ದ್ವಿತೀಯ ಸತ್ಯವಸ್ತುಗಳು ಇದ್ದಂತಾಗಿ ಅದ್ವಿತೀಯ ಬ್ರಹ್ಮಭಾವರೂಪವಾದ ಮೋಕ್ಷವು ಇಲ್ಲದಾಗುತ್ತದೆ. ಅವುಗಳು ಅಪ್ರಮಾಣ

ಗಳಾದರೆ ಈ ಜಗತ್ತು ಮತ್ತೆ ಸತ್ಯವಾಗಬೇಕಾಗುತ್ತದೆ. ಏಕೆಂದರೆ, ಪ್ರತ್ಯಕ್ಷವು ಮೊದಲು ಈ ಜಗತ್ತನ್ನು ಸತ್ಯವೆಂದು ತಿಳಿಸುತ್ತದೆ. ಆಮೇಲೆ ಆಗಮ ಮತ್ತು ಅನುಮಾನಗಳು ಜಗತ್ತನ್ನು ಮಿಥ್ಯಾ ಎಂದು ಸಾಧಿಸುತ್ತವೆ. ಮತ್ತೆ, ಬ್ರಹ್ಮಜ್ಞಾನ ಬಂದಾಗ ಈ ಅನುಮಾನಾಗಮಗಳು ಬಾಧಿತವಾಗುತ್ತವೆ. ಆಗ ಜಗತ್ತು ಮತ್ತೆ ಮೊದಲಿನಂತೆಯೇ ಸತ್ಯವಾಗುತ್ತದೆ.

**ಅಸ್ತಿ ಚೇನ್ಮುಕ್ತ್ಯವಸ್ಥಾ ಚ ದ್ವೈತಾಪತ್ತಿರತೋಽನ್ಯಥಾ ।**
**ಅಮುಕ್ತತ್ವಂ ತಥಾ ಕಾಲೇ ಕಾಲಾಧೀನಾ ಹಿ ಮುಕ್ತತಾ ॥ ೫೯ ॥**

**ಕಾಲ ಏವಾಗಮೋಽಪ್ಯಾಹ ಮುಕ್ತಿಂ ಕಾಲನಿವರ್ತನೇ ।**
**ಮುಕ್ತೇರಪಿ ನಿವೃತ್ತಿಃ ಸ್ಯಾತ್ ಸಂಸಾರಿತ್ವಮತೋ ಭವೇತ್ ॥ ೬೦ ॥**

ಮುಕ್ತ್ಯವಸ್ಥಾ ಚ=ಆತ್ಮನಲ್ಲಿರುವ ಮೋಕ್ಷಾವಸ್ಥೆಯೂ ಅಸ್ತಿಚೇತ್= ಇರುವುದಾದಲ್ಲಿ ದ್ವೈತಾಪತ್ತಿಃ=ಮೋಕ್ಷದಲ್ಲೂ ದ್ವೈತವಿರಬೇಕಾಗುತ್ತದೆ. ಅತೋಽನ್ಯಥಾ=ಇಲ್ಲವೆಂದಾದರೆ ಅಮುಕ್ತತ್ವಂ=ಆತ್ಮನಿಗೆ ಅಮುಕ್ತತ್ವವು ಬರಬೇಕಾದೀತು.

ತಥಾ=ಆದರಂತೆ, ಕಾಲೇ=ಕಾಲದ ವಿಷಯದಲ್ಲಿಯೂ ಕಾಲವು ಇದೆಯೋ ಇಲ್ಲವೋ, ಎಂದು ವಿಕಲ್ಪ ಮಾಡಿ ದೋಷವನ್ನು ಹೇಳಬೇಕು. ಮುಕ್ತತಾ=ಮೋಕ್ಷಾವಸ್ಥೆಯು ಕಾಲಾಧೀನಾ ಹಿ=ಕಾಲದ ಅಧೀನವಾದಕಾರಣ ಕಾಲವು ಇಲ್ಲದಿದ್ದಲ್ಲಿ ಮುಕ್ತಾವಸ್ಥೆಯೂ ಇರಲಾರದು. ಆಗಮೋಽಪಿ= 'ತದಾ ವಿದ್ವಾನ್' ಎಂಬ ಆಗಮವೂ ಕಾಲೇ ಏವ=ಕಾಲರೂಪಾಧಿಕರಣದಲ್ಲೇ ಮುಕ್ತಿಂ=ಮೋಕ್ಷವನ್ನು ಆಹ=ಹೇಳುತ್ತದೆ. ಆದ್ದರಿಂದ ಕಾಲನಿವರ್ತನೇ= ಕಾಲವು ಬಾಧ್ಯವಾದರೆ ಮುಕ್ತೇರಪಿ=ಮುಕ್ತಿಗೂ ನಿವೃತ್ತಿಃ ಸ್ಯಾತ್= ಬಾಧ್ಯತ್ವವು ಬಂದೀತು. ಇದರಿಂದ ಸತಃ=ಚೇತನನಾಗಿರುವ (ಚೈತನ್ಯಸ್ಯ ಸತಃ) ಮುಕ್ತನಿಗೂ ಬಂಧಾಭಾವರೂಪವಾದ ಮೋಕ್ಷವು ಬಾಧ್ಯವಾದುದರಿಂದ ಸಂಸಾರಿತ್ವಂ ಭವೇತ್=ಸಂಸಾರಿತ್ವವೇ ಬಂದೀತು.

ಭಾವಾರ್ಥ—ಇಲ್ಲಿ ಇನ್ನೊಂದು ರೀತಿಯಿಂದ ದ್ವಿತೀಯಾಭಾವವು ಯುಕ್ತವಲ್ಲ, ಎಂದು ಪ್ರತಿಪಾದಿಸಲಾಗಿದೆ. ಮಾಯಾವಾದದಲ್ಲಿ ಅಜ್ಞಾನ

ನಿವೃತ್ತಿಯೇ ಮೋಕ್ಷ. ಆ ಅಜ್ಞಾನನಿವೃತ್ತಿಯು ಆತ್ಮರೂಪವಾದುದು. ಆತ್ಮೈವ ಅಜ್ಞಾನಹಾನಿಃ ಎಂದು ಅವರ ಉಕ್ತಿ. ಆದರೆ, ಇದು ಜ್ಞಾನೋತ್ತರದಲ್ಲಿ ಜೀವನಿಗೆ ಬರುವ ಅವಸ್ಥಾವಿಶೇಷವಾದ ಕಾರಣ ಅದು ಸಿದ್ಧವಾದ ಜೀವ ಸ್ವರೂಪವಾಗಿರಲು ಸಾಧ್ಯವಿಲ್ಲ. ಆದ್ದರಿಂದ ಅದು ಆತ್ಮಾತಿರಿಕ್ತವಾದುದು. ಅದು ಸತ್ಯವಾದರೆ ಮೋಕ್ಷದಲ್ಲಿ ದ್ವೈತಾಪತ್ತಿ, ಅದ್ವಿತೀಯತ್ವ ಇರಲು ಸಾಧ್ಯವಿಲ್ಲ. ಮಿಥ್ಯಾ ಎಂದಾದರೆ ಅದು ಬಾಧ್ಯವಾದುದರಿಂದ ಜ್ಞಾನಿಗೆ ಅಜ್ಞಾನನಿವೃತ್ತಿರೂಪವಾದ ಮೋಕ್ಷವು ಇಲ್ಲವೆಂದಂತಾಗುತ್ತದೆ. ಅವನು ಅಮುಕ್ತನಾಗಬೇಕಾಗುತ್ತದೆ.

ಇನ್ನೊಂದು ಅನುಪಪತ್ತಿ— ಮೋಕ್ಷದಲ್ಲಿ ಕಾಲವು ಇದೆಯೋ, ಇಲ್ಲವೋ? ಇದೆಯಾದರೆ ದ್ವೈತಾಪತ್ತಿ, ಇಲ್ಲವೆನ್ನುವುದು ಸರಿಯಲ್ಲ. ವಸ್ತು ಎನ್ನಬೇಕಾದರೆ ಅದಕ್ಕೆ ಕಾಲದ ಸಂಬಂಧವು ಇರಲೇಬೇಕು. ಕಾಲಸಂಬಂಧವು ಇಲ್ಲದಿದ್ದರೆ ವಸ್ತುವೇ ಇಲ್ಲ. ಆದ್ದರಿಂದ ಮೋಕ್ಷದಲ್ಲಿ ಕಾಲವು ಇರಲೇಬೇಕು. ಅಷ್ಟೇ ಅಲ್ಲ, ಆಗ ಕಾಲ ಇದೆ, ಎಂದು ಶ್ರುತಿಯೂ ಹೇಳುತ್ತದೆ— ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ, ನಿರಂಜನಃ ಪರಮಂ ಸಾಮ್ಯಮುಪೈತಿ॥ 'ಜ್ಞಾನ ಬಂದಾಗ ಜ್ಞಾನಿಯು ಮುಕ್ತನಾಗುತ್ತಾನೆ'. ಈ ಶ್ರುತಿಯಲ್ಲಿ 'ಜ್ಞಾನ ಬಂದಾಗ' ಎಂದರೆ ಜ್ಞಾನ ಬಂದ ಸಮಯದಲ್ಲಿ ಎಂದು ಅರ್ಥ. 'ದೃಷ್ಟ್ವೈವ ತಂ ಮುಚ್ಯತೇ—ದರ್ಶನೋತ್ತರಕಾಲದಲ್ಲಿ ಮುಕ್ತನಾಗುತ್ತಾನೆ' ಈ ಶ್ರುತಿಯಲ್ಲೂ ಕಾಲವಿಶೇಷದಲ್ಲಿ ಮುಕ್ತಿ ಎನ್ನಲಾಗಿದೆ. ಹೀಗೆ ಮೋಕ್ಷದಲ್ಲೂ ಕಾಲವಿದೆ. ಕಾಲವು ಸರ್ವವಸ್ತುಗಳಿಗೂ ವ್ಯಾಪಕ. ವ್ಯಾಪಕವಾದ ಕಾಲವು ನಿವೃತ್ತವಾದರೆ ವ್ಯಾಪ್ಯವಾದ ವಸ್ತುತ್ವವೂ ಇರಬಾರದು. ಅಂದರೆ ಮುಕ್ತತ್ವಾವಸ್ಥೆಯೂ ನಿವೃತ್ತಿಯಾಗಬೇಕು. ಮುಕ್ತತ್ವವು ನಿವೃತ್ತಿಯಾದರೆ ಬದ್ಧತ್ವವು ಬರಬೇಕು. ಚೇತನನು ಒಂದೋ ಬದ್ಧನಾಗಿರಬೇಕು, ಇಲ್ಲವೇ ಮುಕ್ತನಾಗಿರಬೇಕು. ಮುಕ್ತನಲ್ಲವೆಂದಾದರೆ ಜ್ಞಾನಿಯು ಬದ್ಧನಾಗಬೇಕು.

ಹೀಗೆ ಸಾಕ್ಷಿಯು ಆಗಮಕ್ಕೆ ಪ್ರಾಮಾಣ್ಯಗ್ರಾಹಕವಾಗಿ ಉಪಜೀವ್ಯ ವಾದುದರಿಂದ ಪ್ರಬಲ. ಅದರ ವಿರೋಧವು ಆಗಮಕ್ಕೆ ಇರುವುದರಿಂದ ಅದು ಐಕ್ಯವನ್ನು ಪ್ರತಿಪಾದಿಸಲಾರದು.

## ದೇಹಾತ್ಮಾಭೇದವು ಪ್ರತ್ಯಕ್ಷವಲ್ಲ

**ಕ್ವಚ ಪ್ರತ್ಯಕ್ಷತಃ ಪ್ರಾಪ್ತಮನುಮಾಗಮಬಾಧಿತಮ್ ।**
**ದೇಹಾತ್ಮತ್ವಂ ಯದಿ, ನ ತತ್ ಪ್ರಾಪ್ತಂ ಪ್ರತ್ಯಕ್ಷತಃ ಕ್ವಚಿತ್ ॥ ೬೧ ॥**

ಪ್ರತ್ಯಕ್ಷತಃ ಪ್ರಾಪ್ತಂ=ಪ್ರತ್ಯಕ್ಷಸಿದ್ಧವಾದ ವಿಷಯವು ಅನುಮಾಗಮ ಬಾಧಿತಂ=ಅನುಮಾನ ಅಥವಾ ಶಬ್ದದಿಂದ ಬಾಧಿತವಾಗಿ ಕ್ವಚ ದೃಷ್ಟಂ=ಎಲ್ಲಿ ಕಂಡಿದೆ? ದೇಹಾತ್ಮತ್ವಂ=ದೇಹವೇ ಆತ್ಮ, ಎಂಬ ಪ್ರತ್ಯಕ್ಷಸಿದ್ಧವಾದ ವಿಷಯವು ಯದಿ=ಒಂದುವೇಳೆ ಅನುಮಾನ–ಆಗಮಗಳಿಂದ ಬಾಧಿತವಾಗಿ ದೃಷ್ಟ ವಾಗಿದೆ ಎನ್ನುವುದಾದಲ್ಲಿ ತತ್=ಆ ದೇಹಾತ್ಮಾಭೇದವು ಕ್ವಚಿತ್=ಯಾರಿಗೂ ಪ್ರತ್ಯಕ್ಷತಃ=ಪ್ರತ್ಯಕ್ಷದಿಂದ ನ ಪ್ರಾಪ್ತಂ=ಸಿದ್ಧವಾಗಿಲ್ಲ.

**ಭಾವಾರ್ಥ**— ದುಃಖಾದಿ ಪ್ರಪಂಚಸತ್ಯತ್ವವು ಪ್ರತ್ಯಕ್ಷಸಿದ್ಧವಾಗಿದೆ. ಅದು ಮಿಥ್ಯಾತ್ವಾನುಮಾನ, ನೇಹ ನಾನಾಸ್ತಿ ಕಿಂಚನ, ಇತ್ಯಾದಿ ಆಗಮಗಳಿಂದ ಬಾಧ್ಯವಾಗಲು ಸಾಧ್ಯವಿಲ್ಲ. ಏಕೆಂದರೆ, ಪ್ರತ್ಯಕ್ಷಸಿದ್ಧವಾದ ವಿಷಯವು ಎಂದೂ ಅನುಮಾನ ಅಥವಾ ಆಗಮದಿಂದ ಬಾಧ್ಯವಾಗದು. ಪ್ರತ್ಯಕ್ಷವು ಸ್ವಭಾವತಃ ಪ್ರಬಲ. 'ವಹ್ನಿಃ ಶೀತಃ, ಪದಾರ್ಥತ್ವಾತ್' ಈ ಅನುಮಾನವು 'ಬೆಂಕಿ ತಣ್ಣಗಿದೆ' ಎಂದು ಸಾಧಿಸುತ್ತದೆ. ಇದು ಅನುಭವಕ್ಕೆ ವಿರುದ್ಧ. ತ್ವಗಿಂದ್ರಿಯದಿಂದ ಬೆಂಕಿಯು ಬಿಸಿಯಾಗಿದೆ, ಎನ್ನುವ ಅನುಭವ ಬರುತ್ತದೆ. ಆ ತ್ವಗಿಂದ್ರಿಯವು ಧರ್ಮಿ ಅಥವಾ ಲಿಂಗಗ್ರಾಹಕವಲ್ಲವಾದ ಕಾರಣ ಉಪಜೀವ್ಯವಲ್ಲ, ಆದರೂ ಅದು ಪ್ರಬಲ. ಆದ್ದರಿಂದ ಪ್ರತ್ಯಕ್ಷಕ್ಕೆ ಸ್ವಭಾವತಃ ಪ್ರಾಬಲ್ಯವಿದೆ.

**ಆಕ್ಷೇಪ**—ಪ್ರತ್ಯಕ್ಷಸಿದ್ಧವಾದುದನ್ನು ಅನುಮಾನ ಮತ್ತು ಆಗಮಗಳು ಬಾಧಿಸುತ್ತವೆ. 'ಅಹಂ ಗೌರಃ' ಎಂಬ ಪ್ರತ್ಯಕ್ಷದಿಂದ ದೇಹಾತ್ಮರಿಗೆ ಅಭೇದವು ಸಿದ್ಧವಾಗುತ್ತದೆ. ದೇಹಃ ನಾತ್ಮಾ, ಪಂಚಭೂತಕಾರ್ಯತ್ವಾತ್, ಎಂಬ ಅನುಮಾನವು ಈ ಪ್ರತ್ಯಕ್ಷಕ್ಕೆ ಬಾಧಕವಾಗಿದೆ. ಆದ್ದರಿಂದ ಪ್ರತ್ಯಕ್ಷಸಿದ್ಧ ವಾದುದು, ಅನುಮಾನ ಆಗಮಗಳಿಂದ ಬಾಧ್ಯವಲ್ಲ, ಎನ್ನುವುದು ಹೇಗೆ?

**ಸಮಾಧಾನ**— ದೇಹವೇ ನಾನು, ಎಂಬ ಪ್ರತ್ಯಕ್ಷ ಯಾರಿಗೂ ಇಲ್ಲ,

ಅಂದಮೇಲೆ ಅದು ಬಾಧ್ಯವಾಗುವ ವಿಷಯ ದೂರತೋಪಾಸ್ತ. ಆದ್ದರಿಂದ ಪ್ರತ್ಯಕ್ಷವು ಬಾಧ್ಯ ಎನ್ನುವುದಕ್ಕೆ ಇದು ಉದಾಹರಣೆಯಲ್ಲ.

**ಮಮ ದೇಹ ಇತಿ ಹ್ಯೇವ ನ ದೇಹೋಽಹಮಿತಿ ಪ್ರಮಾ ।**
**ಉಪಚಾರಶ್ಚ ಕೃಷ್ಣೋಽಹಮಿತಿ ಕರ್ದಮಲೇಪನೇ ॥ ೬೨ ॥**

**ವಸ್ತ್ರಸ್ಯ ಯದ್ವದೇವಂ ಸ್ಯಾದ್, ಯದ್ಯುಪಾಧಿಕೃತಂ ತದಾ ।**
**ಸ್ವತಃ ಶುಕ್ಲತ್ವವತ್ ಕಾರ್ಷ್ಣ್ಯಂ ನ ಮಮೇತಿ ಪ್ರತೀಯತೇ ॥ ೬೩ ॥**

ಹಿ=ಯಾವ ಕಾರಣದಿಂದ ಮಮ ದೇಹಃ='ನನ್ನ ದೇಹ' ಇತ್ಯೇವ= ಹೀಗೆಂದೇ ಎಲ್ಲರಿಗೂ ಪ್ರಮಾ=ಪ್ರಮಾತ್ಮಕವಾದ ಜ್ಞಾನವು ಬರುತ್ತದೆ, ಅಹಂ ದೇಹಃ=ನಾನೇ ದೇಹ, ಇತಿ=ಎಂದು ನ ಪ್ರಮಾ=ಪ್ರಮಾತ್ಮಕಜ್ಞಾನ ಇಲ್ಲ.

ಯದ್ವತ್=ಹೇಗೆ ವಸ್ತ್ರಸ್ಯ=ಬಟ್ಟೆಗೆ ಕರ್ದಮಲೇಪನೇ=ಮಣ್ಣು ಮೆತ್ತಿದಾಗ ಬಟ್ಟೆ ಕಪ್ಪಾಗಿದೆ ಎನ್ನುವ ವ್ಯವಹಾರವು ಬರುವುದೋ ಏವಂ= ಅದರಂತೆ, ಅಹಂ ಕೃಷ್ಣಃ=ನಾನು ಕಪ್ಪು ಎನ್ನುವುದು ಉಪಚಾರಶ್ಚ=ಜ್ಞಾನ ವಿಲ್ಲದೇ ಮಾಡುವ ಗೌಣವ್ಯವಹಾರ. ಯದಿ ಉಪಾಧಿಕೃತಂ=ಬಟ್ಟೆಯಲ್ಲಿ ಬರುವಂತೆ ಆತ್ಮನಲ್ಲೂ ದೇಹರೂಪಉಪಾಧಿಯಿಂದಾಗಿ ಕಪ್ಪುಬಣ್ಣವು ಇದೆ, ಎನ್ನುವ ಜ್ಞಾನ ಬರುವುದಾದಲ್ಲಿ ತದಾ=ಆಗ ಪ್ರತ್ಯಕ್ಷಸಿದ್ಧವಾದುದು ಅನುಮಾನ ಮತ್ತು ಆಗಮಗಳಿಂದ ಬಾಧ್ಯ ಎನ್ನುವುದಕ್ಕೆ ಇದು ಉದಾಹರಣೆ ಯಾಗುವುದಿಲ್ಲ. ಏಕೆಂದರೆ, ಸ್ವತಃ ಶುಕ್ಲತ್ವವತ್=ಸ್ವಾಭಾವಿಕವಾಗಿ ಬಟ್ಟೆಯು ಬಿಳಿಯಾಗಿಯೇ ಇದೆ. ಕಾರ್ಷ್ಣ್ಯಂ=ಕಪ್ಪು ಬಣ್ಣವಾದರೋ ಮಣ್ಣು ಎಂಬ ಉಪಾಧಿಯಿಂದಾಗಿ ಕಾಣುತ್ತದೆ. ಅದರಂತೆ, ಸ್ವಾಭಾವಿಕವಾಗಿ ನನಗೆ (ಆತ್ಮನಿಗೆ) ರೂಪವಿಲ್ಲ. ಆದಕಾರಣ ಕಾರ್ಷ್ಣ್ಯಂ=ಕಪ್ಪು ಬಣ್ಣವು ನ ಮಮ=ನನ್ನ ಸ್ವಾಭಾವಿಕಧರ್ಮವಲ್ಲ. ಅದು ದೇಹವೆಂಬ ಉಪಾಧಿ ಯಿಂದಾಗಿ ಪ್ರತೀಯತೇ=ತೋರುತ್ತದೆ. ಈ ರೀತಿಯಾಗಿಯೇ ಜ್ಞಾನ ಬರುತ್ತದೆ. ಈ ಜ್ಞಾನವು ಪ್ರಮಾತ್ಮಕವಾದುದರಿಂದ ಬಾಧ್ಯವಲ್ಲ.

ಭಾವಾರ್ಥ—ದೇಹವೇ ನಾನು, (ಅಹಂ ದೇಹಃ) ಎಂಬ ಪ್ರತ್ಯಕ್ಷ

ಭ್ರಾಂತಿ ಯಾರಿಗೂ ಇಲ್ಲ. ಅದಕ್ಕೆ ವಿರುದ್ಧವಾಗಿ 'ಇದು ನನ್ನ ದೇಹ' (ಮಮ ದೇಹಃ) ಎಂದೇ ಎಲ್ಲರಿಗೂ ಬರುವ ಅನುಭವ. ನನ್ನ ಮನೆ, ಎಂದಾಗ ನಾನು ಬೇರೆ, ಮನೆ ಬೇರೆ ಎಂಬ ಭೇದಜ್ಞಾನ ಇರುವಂತೆ ನನ್ನ ದೇಹ, ಎಂದಾಗಲೂ ದೇಹ ಬೇರೆ, ನಾನು ಬೇರೆ, ಎನ್ನುವ ದೇಹಾತ್ಮಭೇದಜ್ಞಾನವೇ ಇದೆ. ಹಾಗಾದರೆ, ಅಹಂ ಗೌರಃ=ನಾನು ಬಿಳಿ, ಅಹಂ ಕೃಷ್ಣಃ=ನಾನು ಕಪ್ಪು, ಇಂತಹ ಪ್ರತ್ಯಕ್ಷ ಹೇಗೆ ಬರಬೇಕು? ಬಿಳಿಯಾದ ದೇಹವೇ 'ಅಹಂ' ಆತ್ಮಾ ಎಂದು ಈ ಪ್ರತ್ಯಕ್ಷದಲ್ಲಿ ತೋರುತ್ತದೆ. ದೇಹಾತ್ಮಭೇದಜ್ಞಾನವಿರುವುದಾದಲ್ಲಿ ಈ ಅಭೇದಜ್ಞಾನ ಬರುವುದು ಹೇಗೆ? ಎಂದರೆ– ಇಂತಹ ಅಭೇದಜ್ಞಾನವೇ ಇಲ್ಲ. ಆ ರೀತಿಯಾದ ವಾಕ್ಯಪ್ರಯೋಗವನ್ನಷ್ಟೇ ನಾವು ಮಾಡುತ್ತೇವೆ ಹೊರತು, ಆ ವಿಧದ ಜ್ಞಾನ ಇಲ್ಲ. ಜ್ಞಾನವಿಲ್ಲದೆ ಮಾಡುವ ವಾಕ್ಯಪ್ರಯೋಗ ಅದು.

ಶಬ್ದಪ್ರಯೋಗ ಮಾಡಬೇಕಾದರೆ ಜ್ಞಾನವಿರಲೇಬೇಕು. 'ಅರ್ಥಂ ಬುದ್ಧ್ವಾ ಶಬ್ದರಚನಾ'. ''ಅಹಂ ಕೃಷ್ಣಃ'' ಎಂಬ ಶಬ್ದವನ್ನು ಔಪಚಾರಿಕವಾಗಿ ಪ್ರಯೋಗಿಸಬೇಕಾದರೂ ಅದಕ್ಕೆ ಅನುಗುಣವಾದ ಅಭೇದಜ್ಞಾನವು ಇರಲೇ ಬೇಕಲ್ಲವೆ? ಇಲ್ಲ. ಬಟ್ಟೆಯ ಬಣ್ಣ ಬಿಳಿ ಎಂದು ನಮಗೆ ಗೊತ್ತಿದೆ. ಆದರೂ ಕೊಳೆ ಅಂಟಿದಾಗ ''ಬಟ್ಟೆ ಕಪ್ಪಾಗಿದೆ, ಒಗೆಯಬೇಕು'' ಎನ್ನುತ್ತೇವೆ. ಈ ವಾಕ್ಯವನ್ನು ಪ್ರಯೋಗಿಸುವವನಿಗೆ ಬಟ್ಟೆಯ ಸ್ವಾಭಾವಿಕ ಬಣ್ಣ ಬಿಳಿ ಎಂದು ಗೊತ್ತಿದೆ. ಕೊಳೆ ಅಂಟಿರುವಾಗಲೂ ಬಟ್ಟೆಯಲ್ಲಿ ಬಿಳಿಬಣ್ಣ ಇದ್ದೇ ಇದೆ, ಎಂದು ತಿಳಿಯದಿದ್ದಲ್ಲಿ ಒಗೆಯಲು ಹೋಗುವುದಿಲ್ಲ. ಹೀಗೆ 'ಬಟ್ಟೆಕಪ್ಪು' ಎಂಬ ಜ್ಞಾನವಿಲ್ಲದೆಯೂ 'ಕೃಷ್ಣಂ ವಸ್ತ್ರಂ' ಎಂದು ವಾಕ್ಯಪ್ರಯೋಗ ಮಾಡುವಂತೆ ಅಭೇದಜ್ಞಾನವಿಲ್ಲದೆಯೂ 'ಅಹಂ ಗೌರಃ' ಎಂಬ ವಾಕ್ಯವನ್ನು ಪ್ರಯೋಗಿಸ ಬಹುದು.

ಅಥವಾ, ಬಟ್ಟೆ ಬಿಳಿಯಾದರೂ ಮಣ್ಣಿನ ಸಂಪರ್ಕದಿಂದ ಅದರಲ್ಲಿ ಕಪ್ಪುಬಣ್ಣ ಬಂದಿದೆ, ಎಂದು ತಿಳಿದು ''ಕೃಷ್ಣಂ ವಸ್ತ್ರಂ'' ಎಂಬ ವಾಕ್ಯವನ್ನು ಪ್ರಯೋಗಮಾಡಲಾಗುತ್ತದೆ. ಅದರಂತೆ, ಆತ್ಮನಲ್ಲಿ ಯಾವ ರೂಪವೂ ಸ್ವಾಭಾವಿಕವಾಗಿ ಇಲ್ಲ. ದೇಹದಲ್ಲಿ ಕಪ್ಪು ಅಥವಾ ಬಿಳಿರೂಪವಿದೆ. ಆ ದೇಹದ ಎಲ್ಲೆಡೆ ಆತ್ಮನಿದ್ದಾನೆ. ಅದರಿಂದಾಗಿ ಅವನನ್ನೂ ಕಪ್ಪು ಅಥವಾ ಬಿಳಿ

ಎನ್ನಲಾಗುತ್ತದೆ. ಹೀಗೆ ''ನಾನು ಕಪ್ಪು'' ಎಂಬ ಶಬ್ದದ ಪ್ರಯೋಗಕ್ಕೂ ಕಾರಣವಾದ ಜ್ಞಾನ ಭ್ರಮೆಯಲ್ಲ. ''ನನ್ನಲ್ಲಿ ಶರೀರೋಪಾಧಿಯಿಂದಾಗಿ ಕಪ್ಪುಬಣ್ಣವಿದೆ. ಸ್ವತಃ ನಾನೇ ಕಪ್ಪಲ್ಲ'' ಎಂಬ ಜ್ಞಾನವೇ ಆ ಪ್ರಯೋಗಕ್ಕೆ ಕಾರಣ. ಆ ಜ್ಞಾನ ಯಥಾರ್ಥವಾಗಿದೆ.

**ಆಕ್ಷೇಪ—** ಈ ವಾದ ಸರಿಯಲ್ಲ. ''ಅಹಂ ಗೌರಃ'' ಎನ್ನುವ ವಾಕ್ಯದಿಂದ ಬಿಳಿಯಾದ ಶರೀರವೇ ನಾನು, ಎನ್ನುವ ಜ್ಞಾನ ಬರುತ್ತದೆ. ಅದಕ್ಕೆ ಅನುಗುಣವಾದ ಜ್ಞಾನವೇ ಆ ವಾಕ್ಯವನ್ನು ಪ್ರಯೋಗಮಾಡುವವನಿಗೂ ಇರಬೇಕು. ಆ ಜ್ಞಾನ ಭ್ರಾಂತಿ. 'ಮಮ ದೇಹಃ' ಎಂಬ ವಾಕ್ಯಪ್ರಯೋಗವೇ ಔಪಚಾರಿಕ. 'ಮಮ' ಎಂದರೆ ನನ್ನ. ನಾನು ಎಂದರೆ ದೇಹ–ಇಂದ್ರಿಯ–ಅಂತಃಕರಣಾದಿಸಂಘಾತ. (ಸಮೂಹ.) ಆ ಸಂಘಾತದಲ್ಲಿ ಘಟಕವಾದ ಒಂದಂಶ ಶರೀರ. ಮನೆಯ ಒಂದು ಭಾಗ ಗೋಡೆಯಾದ ಕಾರಣ 'ನಮ್ಮ ಮನೆಯ ಗೋಡೆ' ಎನ್ನುತ್ತೇವೆ. ಇದಕ್ಕೆ ಮನೆ ಬೇರೆ ಗೋಡೆ ಬೇರೆ, ಎಂದು ಅರ್ಥವಲ್ಲ. ಅದರಂತೆಯೇ 'ನನ್ನ ದೇಹ' ಎಂದಾಗಲೂ ನಾನು ಬೇರೆ, ದೇಹ ಬೇರೆ ಎನ್ನುವ ಅಭಿಪ್ರಾಯವಲ್ಲ. ಆದ್ದರಿಂದ ದೇಹಾತ್ಮಭೇದದ ಪ್ರತ್ಯಕ್ಷ ಯಾರಿಗೂ ಇಲ್ಲ.

ಈ ಆಕ್ಷೇಪದ ಪರಿಹಾರ ಮುಂದಿನ ಅನುವ್ಯಾಖ್ಯಾನದಲ್ಲಿದೆ—

**ಕಥಂ ಚ ಭೇದೋ ದೇಹಾದೇರಾತ್ಮನೋ ನ ಪ್ರಮೀಯತೇ ।**
**ಜಾತಮಾತ್ರಾ ಮೃಗಾ ಗಾವೋ ಹಸ್ತಿನಃ ಪಕ್ಷಿಣೋ ಝಷಾಃ ।**
**ಭಯಾಭಯಸ್ವಭೋಗಾದೌ ಕಾರಣಾನಿ ವಿಜಾನತೇ ॥ ೬೪ ॥**

**ಅಸ್ಮೃತೌ ಪೂರ್ವದೇಹಸ್ಯ ವಿಜ್ಞಾನಂ ತತ್ ಕಥಂ ಭವೇತ್ ।**
**ಅನ್ವಯವ್ಯತಿರೇಕಾದೇರನುಸಂಧಾನವಿಸ್ಮೃತೌ ॥ ೬೫ ॥**

ಜಾತಮಾತ್ರಾಃ=ಆಗ ತಾನೇ ಹುಟ್ಟಿದ ಮೃಗಾಃ=ಜಿಂಕೆಗಳು, ಗಾವಃ= ಕರುಗಳು ಹಸ್ತಿನಃ=ಆನೆಗಳು, ಪಕ್ಷಿಣಃ=ಹಕ್ಕಿಗಳು ಝಷಾಃ=ಜಲಚರಗಳು ಭಯಾಭಯಸ್ವಭೋಗಾದೌ–ಭಯ=ಹೆದರಿಕೆ, ಅಭಯ=ಹೆದರಿಕೆ

ಇಲ್ಲದಿರುವಿಕೆ ಸ್ವಭೋಗಾದೌ=ತಮ್ಮ ಸುಖ–ದುಃಖ ಇವುಗಳಲ್ಲಿ ಕಾರಣಾನಿ= ಕಾರಣಗಳನ್ನು ವಿಜಾನತೇ=ತಿಳಿಯುತ್ತವೆ. ಪೂರ್ವದೇಹಸ್ಯ=ಹಿಂದಿನ ಜನ್ಮದ ದೇಹದ ಅಸ್ಮೃತೌ=ಸ್ಮರಣೆ ಇಲ್ಲದೇ ಹೋದಲ್ಲಿ ತತ್‌ವಿಜ್ಞಾನಂ=ಇದು ಭಯಕ್ಕೆ ಕಾರಣ ಎಂಬ ಜ್ಞಾನವು ಕಥಂ ಭವೇತ್=ಹೇಗೆ ಬಂದೀತು? ಅನ್ವಯ ವ್ಯತಿರೇಕಾದೇಃ=ಸ್ತನ್ಯಪಾನಾದಿಕರಣೇ ಇಷ್ಟಪ್ರಾಪ್ತಿಃ, ತದಕರಣೇ ಇಷ್ಟಾಸಿದ್ಧಿಃ, ಎಂಬ ಅನ್ವಯ ಮತ್ತು ವ್ಯತಿರೇಕಾದಿಗಳ ವಿಸ್ಮೃತೌ=ಸ್ಮರಣೆಯು ಬರದಿದ್ದಲ್ಲಿ ಅಥವಾ ಅನುಸಂಧಾನವಿಸ್ಮೃತೌ=''ತಥಾಚಾಯಂ'' ಎಂಬ ಅನುಸಂಧಾನದ ಸ್ಮರಣೆ ಬರದಿದ್ದಲ್ಲಿ ವಿಜ್ಞಾನಂ ಕಥಂ ಭವೇತ್=ಇದು ಇಷ್ಟಸಾಧನ, ಇದು ಭಯಕಾರಣ ಎನ್ನುವ ಜ್ಞಾನ ಹೇಗೆ ಬಂದೀತು?

**ಭಾವಾರ್ಥ**— ಏನೂ ತಿಳಿಯದ, ಪಶು–ಪಕ್ಷಿಗಳ ಮರಿಗಳು ಹುಟ್ಟಿದ ಕೂಡಲೇ ಸ್ತನ್ಯಪಾನದಲ್ಲಿ ಪ್ರವೃತ್ತಿಮಾಡುತ್ತವೆ. ಪ್ರವೃತ್ತಿಗೆ ರಾಗವು ಕಾರಣ. ರಾಗ ಎಂದರೆ ಬೇಕು ಎನ್ನುವ ಇಚ್ಛೆ. ಈ ಇಚ್ಛೆ ಮಾತ್ರ ಸಾಲದು. ಸುಖದಲ್ಲಿ ಇಚ್ಛೆ ಇದ್ದು ಅದರ ಜೊತೆಯಲ್ಲಿ ಸ್ತನ್ಯಪಾನವು 'ಇಷ್ಟಸಾಧನ' ಎನ್ನುವ ಜ್ಞಾನವೂ ಇರಬೇಕು. ಈ ಜ್ಞಾನ ಮತ್ತೊಬ್ಬರು ಹೇಳಿದ್ದನ್ನು ಕೇಳಿಸಿಕೊಂಡು ಮಕ್ಕಳಿಗೆ ಬರುತ್ತವೆ, ಎನ್ನುವಂತಿಲ್ಲ. ಅದು ಪೂರ್ವಜನ್ಮದಲ್ಲಿ ಬಂದಿರುವ ಅನುಭವದ ಸ್ಮರಣೆ. ಅಥವಾ ಈಗ ಬಂದ ಅನುಮಿತ್ಯಾತ್ಮಕ ಅನುಭವ. ಈ ಅನುಮಿತಿ ಬರಬೇಕಾದರೆ 'ಯತ್ ಸ್ತನ್ಯಪಾನಂ ತತ್ ಇಷ್ಟಸಾಧನಂ'' ಎಂದು ವ್ಯಾಪ್ತಿಯ ಸ್ಮರಣೆ ಬರಬೇಕು. ಈ ವ್ಯಾಪ್ತಿಯ ಸ್ಮರಣೆ ಬರಬೇಕಾದರೆ ಜನ್ಮಾಂತರದ ಶರೀರದ ಸ್ಮರಣೆಯೂ ಬರಬೇಕು. ಏಕೆಂದರೆ, ಸ್ತನ್ಯಪಾನದ ಸ್ಮರಣೆ ಬರುವಾಗ ಶರೀರದ ಸ್ಮರಣೆಯು ಬರದಿರುವುದಕ್ಕೆ ಕಾರಣವಿಲ್ಲ. ಹೀಗೆ ಈ ಜನ್ಮದಲ್ಲಿ ಜನ್ಮಾಂತರೀಯಶರೀರದ ಸ್ಮರಣೆಯಂತೆ ಜನ್ಮಾಂತರದಲ್ಲೂ ಅದಕ್ಕಿಂತ ಮೊದಲಿನ ಶರೀರದ ಸ್ಮರಣೆ ಬರಬೇಕಾಗುತ್ತದೆ. ಇದರಿಂದ ಅನೇಕ ಶರೀರಗಳಲ್ಲಿ ಅನುಸ್ಯೂತವಾದ ದೇಹಾತಿರಿಕ್ತ ಆತ್ಮನ ಜ್ಞಾನ ಪಶುಪಕ್ಷಿಗಳಿಗೂ ಇದೆ.

ದೇಹದ ಸ್ಮರಣೆಯನ್ನು ಹೀಗೂ ಸಮರ್ಥಿಸಬಹುದು–ಸ್ತನ್ಯಪಾನ ಮಾಡಿದರೆ ದುಃಖನಿವೃತ್ತಿ ಅಥವಾ ಸುಖ, ಇಲ್ಲದಿದ್ದರೆ ಇಲ್ಲ, ಎನ್ನುವ ಅನ್ವಯ

ದೇಹಕ್ಕೆ ಹಿತವಾದ ವಸ್ತುವಿನಲ್ಲಿ ಆತ್ಮನಿಗೆ ರಾಗ(ಆಸೆ) ಹುಟ್ಟಬಾರದು. ದೇಹಕ್ಕೆ ಪ್ರತಿಕೂಲವಾದ ವಸ್ತುವಿನಲ್ಲಿ ಆತ್ಮನಿಗೆ ದ್ವೇಷವೂ ಹುಟ್ಟಬಾರದು. ಆದರೆ ಚಳಿಗಾಲದಲ್ಲಿ ತಣ್ಣನೆಯ ನೀರಿನಲ್ಲಿ ದ್ವೇಷ, ಬಿಸಿನೀರಿನಲ್ಲಿ ಆಸೆ ಆತ್ಮನಿಗಿದೆ. ಇದರಿಂದಾಗಿ ಸಾಮಾನ್ಯರಿಗೆ ದೇಹಾತ್ಮವಿವೇಕ ಇಲ್ಲ, ಎಂದು ತಿಳಿಯುತ್ತದೆ. ಆದ್ದರಿಂದ ಎಲ್ಲರಿಗೂ ದೇಹಾತ್ಮವಿವೇಕ ಇದೆ, ಎನ್ನುವುದು ಸರಿಯಲ್ಲ. ಈ ಆಕ್ಷೇಪಕ್ಕೆ ಅನುವ್ಯಾಖ್ಯಾನದಲ್ಲಿ ಕೊಟ್ಟಿರುವ ಸಮಾಧಾನ ಹೀಗೆ— ಕಬ್ಬಿಣದಲ್ಲಿ ಬೆಂಕಿಯು ವ್ಯಾಪಿಸಿಕೊಂಡಿರುವುದರಿಂದ ಬೆಂಕಿಗೂ ಕಬ್ಬಿಣಕ್ಕೂ ಎರಡು ಬೆರಳುಗಳಿಗೆ ತೋರುವಂತೆ ಸ್ಪಷ್ಟವಾಗಿ ಭೇದವು ತೋರುವುದಿಲ್ಲ. ಹಾಗಾಗಿ ''ಕಬ್ಬಿಣ ಸುಟ್ಟಿತು'' ಎಂದು ತಪ್ಪಾಗಿ ಹೇಳುತ್ತೇವೆ. ಸುಡುವುದು ಬೆಂಕಿಯ ಸ್ವಭಾವ, ಕಬ್ಬಿಣಕ್ಕೆ ಆ ಸ್ವಭಾವ ಇಲ್ಲ, ಎಂದು ತಿಳಿದವರೂ ಹೀಗೆ ಹೇಳುತ್ತಾರೆ. ಅದರಂತೆ, ದೇಹದಲ್ಲಿಯೂ ಆತ್ಮನು ಪ್ರಕಾಶತಃ ವ್ಯಾಪಿಸಿದ್ದಾನೆ. ಇದರಿಂದಾಗಿ, ದೇಹಾತ್ಮರಿಗೆ ಸ್ಪಷ್ಟವಾದ ಭೇದವು ತೋರುವುದಿಲ್ಲ. ಆ ಕಾರಣದಿಂದ, 'ಕೃಷ್ಣೋಽಹಂ' ಎಂದು ಮೊದಲಾದ ತಪ್ಪು ವ್ಯವಹಾರಗಳು ನಡೆಯುತ್ತವೆ. ಹೀಗೆ ಸಾಮಾನ್ಯಜನರಿಗೆ ದೇಹಾತ್ಮಭೇದಜ್ಞಾನವಿದ್ದರೂ ಸ್ಫುಟವಾಗಿ ಭೇದವು ತಿಳಿದಿರುವುದಿಲ್ಲ. ಅದು ಜ್ಞಾನಿಗಳಿಗೆ ಮಾತ್ರ ತಿಳಿದಿರುತ್ತದೆ. ಅದಕ್ಕಾಗಿ ಪುರಾಣಗಳಲ್ಲಿ ದೇಹಾತ್ಮಭೇದೋಪದೇಶಗಳನ್ನು ಮಾಡಲಾಗಿದೆ. ಅದು ವ್ಯರ್ಥವಲ್ಲ, ವಿಶದವಾದ ಭೇದಜ್ಞಾನವೇ ಪುರುಷಾರ್ಥಕ್ಕೆ ಕಾರಣ. ಅದರಂತೆ, ದೇಹವು ಭಿನ್ನ ಎಂದು ತಿಳಿದಿದ್ದರೂ ಅದರಲ್ಲಿ ಆತ್ಮನಿಗೆ ಮಿತಿಮೀರಿದ ಪ್ರೀತಿ ಇದೆ. ತನಗೆ ಪ್ರಿಯವಾದ ದೇಹಕ್ಕೆ ಬೇಕಾದ ವಸ್ತುಗಳಲ್ಲಿ ಆತ್ಮನಿಗೆ ರಾಗವೂ ದೇಹಕ್ಕೆ ಪ್ರತಿಕೂಲವಾದ ವಸ್ತುಗಳಲ್ಲಿ ದ್ವೇಷವೂ ಹುಟ್ಟುತ್ತವೆ. (ಆತ್ಮನೋ ದೇಹೇ ವ್ಯಾಪ್ತತ್ವಾತ್=ಅತ್ಯಂತ ಪ್ರೇಮಾಸ್ಪದತ್ವಾತ್ ರಾಗಾದಯೋ ಯುಜ್ಯಂತೇ ಏವ-ಸುಧಾ.)

ಭೇದಜ್ಞಾನವಿದ್ದಮೇಲೆ ಅದಕ್ಕೆ ಅನುಗುಣವಾಗಿಯೇ ವ್ಯವಹಾರ ಮಾಡಬೇಕು, ಅಭೇದ ವ್ಯವಹಾರ ಹೇಗೆ? ಎಂದು ಆಕ್ಷೇಪಿಸಬಾರದು. ಅವಳಿ ಮಕ್ಕಳ ಭೇದಜ್ಞಾನವು ತಾಯಿಗೆ ಇದೆ. ಆದರೂ ''ಇವರಿಬ್ಬರಲ್ಲಿ ಭೇದವನ್ನು ಹೇಗೆ ಗುರುತಿಸುವಿರಿ?'' ಎಂದು ತಾಯಿಯನ್ನು ಕೇಳಿದರೆ ಅದನ್ನು ಹೇಳಲು

ಬರುವುದಿಲ್ಲ, ಎನ್ನುತ್ತಾಳೆ. ಇದರಿಂದ ಪ್ರತ್ಯಕ್ಷಸಿದ್ಧವಾದ ವಿಷಯವನ್ನು ಕೆಲವೊಮ್ಮೆ ವ್ಯವಹಾರಮಾಡಲು ಬರುವುದಿಲ್ಲ, ಎಂದು ಒಪ್ಪಬೇಕಾಗುವುದು.

ಹೀಗೆ ದೇಹಾತ್ಮೈಕ್ಯದ ಅನುಭವವೇ ಇಲ್ಲದಿರುವುದರಿಂದ ಪ್ರತ್ಯಕ್ಷವು ಅನುಮಾನಾಗಮಬಾಧ್ಯ ಎನ್ನುವುದಕ್ಕೆ ಅದು ಉದಾಹರಣೆಯಾಗುವುದಿಲ್ಲ. ನಾಸ್ತಿಕಾದಿಗಳಿಗೆ ದೇಹಾತ್ಮಾಭೇದಜ್ಞಾನವಿದ್ದರೂ ಅದು ಅನುಮಾನ-ಆಗಮಾಭಾಸಗಳಿಂದ ಜನ್ಯವಾಗಿರುವುದರಿಂದ ಪ್ರತ್ಯಕ್ಷಜನ್ಯವೇ ಅಲ್ಲ. ಅದು ಬಾಧ್ಯವಾದರೂ ಪ್ರತ್ಯಕ್ಷವು ಬಾಧ್ಯವಲ್ಲ, ಎನ್ನುವ ನಿಯಮಕ್ಕೆ ಚ್ಯುತಿ ಇಲ್ಲ. ಆತ್ಮನಲ್ಲಿ ದೇಹೋಪಾಧಿನಿಮಿತ್ತಕವಾದ ಕಾರ್ಷ್ಣ್ಯವು ಇರುವುದರಿಂದ 'ಕೃಷ್ಣೋಽಹಂ' ಎಂಬ ಪ್ರತೀತಿಯಂತೂ ಯಥಾರ್ಥವೇ ಆಗಿದೆ, ಬಾಧ್ಯವಲ್ಲ. ಅದರಂತೆ, ''ಇದಂ ರಜತಂ'' ಎಂಬ ಪ್ರತ್ಯಕ್ಷವು ಬಾಧ್ಯವಾದರೂ ಪ್ರಬಲ ಪ್ರತ್ಯಕ್ಷಾಂತರದಿಂದಲೇ ಬಾಧ್ಯವಾಗಿದೆ. ಆದ್ದರಿಂದ ಪ್ರಬಲ ಪ್ರತ್ಯಕ್ಷ ಸಿದ್ಧ ವಾದುದು ಯಾವುದೇ ಪ್ರಮಾಣದಿಂದ ಬಾಧ್ಯವಾಗುವುದಿಲ್ಲ. ದುಃಖಾದಿಗಳು ಪ್ರಬಲಸಾಕ್ಷಿಪ್ರತ್ಯಕ್ಷದಿಂದ ಸಿದ್ಧವಾಗಿವೆ. ಆದ್ದರಿಂದ ಅದು ಅನುಮಾನಾಗಮಗಳಿಂದ ಬಾಧ್ಯವಲ್ಲ.

**ಆಕ್ಷೇಪ**— ಪ್ರತ್ಯಕ್ಷವು ಆಗಮಬಾಧ್ಯವಾಗುವುದೋ ಇಲ್ಲವೋ ಎನ್ನುವ ವಿಚಾರವು ಹೇಗೆಯೇ ಇರಲಿ. ಪ್ರಕೃತದಲ್ಲಿ ಪ್ರತ್ಯಕ್ಷಕ್ಕೂ ಆಗಮಕ್ಕೂ ವಿರೋಧವೇ ಇಲ್ಲ. ಪ್ರತ್ಯಕ್ಷವು, ದುಃಖಾದಿಗಳು ಈಗ ಬಾಧ್ಯಗಳಲ್ಲ, ಎನ್ನುತ್ತದೆ. ಆಗಮ ಮುಂದೆ ಬ್ರಹ್ಮಜ್ಞಾನ ಬಂದಾಗ ಬಾಧ ಇದೆ, ಎನ್ನುತ್ತದೆ. ಮುಂದೆಯೂ ಬಾಧ ಇಲ್ಲ ಎನ್ನುವುದು ಪ್ರತ್ಯಕ್ಷವೇದ್ಯವಲ್ಲ. ಏಕೆಂದರೆ, ಪ್ರತ್ಯಕ್ಷವು ವರ್ತಮಾನಕಾಲವನ್ನು ಮಾತ್ರ ಗ್ರಹಿಸುತ್ತದೆ, ಭವಿಷ್ಯತ್‌ಕಾಲವನ್ನು ಗ್ರಹಿಸುವ ಸಾಮರ್ಥ್ಯ ಅದಕ್ಕಿಲ್ಲ. ಹೀಗೆ, ಪ್ರತ್ಯಕ್ಷಾಗಮಗಳಿಗೆ ವಿರೋಧವೇ ಇಲ್ಲ. ಅಂದಮೇಲೆ ಆಗಮವು ಪ್ರತ್ಯಕ್ಷಬಾಧ್ಯವಾಗುವುದು ಹೇಗೆ?

ಈ ಆಕ್ಷೇಪ ಸರಿಯಲ್ಲ. ಪ್ರತ್ಯಕ್ಷವು ವರ್ತಮಾನ ಮಾತ್ರ ಗ್ರಾಹಕ ಎಂದು ಒಪ್ಪಿದರೂ ಅದು ವರ್ತಮಾನಕಾಲದಲ್ಲಿ ದುಃಖಾದಿಗಳಿಗೆ ಬಾಧವಿಲ್ಲ, ಎಂದು ಗ್ರಹಿಸುತ್ತದೆ. ಆದರೆ 'ನೇಹ ನಾನಾಸ್ತಿ ಕಿಂಚನ' ಇತ್ಯಾದಿಶ್ರುತಿಗಳು ವರ್ತಮಾನ ಕಾಲದಲ್ಲೂ ವಿಶ್ವವು ಬಾಧಿತವಾಗಿದೆ ಎಂದು 'ಅಸ್ತಿ' ಎಂಬ ಪದದಿಂದ

ಹೇಳುತ್ತವೆ. ಹೀಗೆ ಪ್ರತ್ಯಕ್ಷವಿರುದ್ಧಾರ್ಥಪ್ರತಿಪಾದಕವಾದುದರಿಂದ ಶ್ರುತಿಯು ಪ್ರತ್ಯಕ್ಷ ಬಾಧಿತವಾಗಲೇಬೇಕು.

ಅಥವಾ, ಶ್ರುತಿ ಈ ಪ್ರಪಂಚಕ್ಕೆ ಭವಿಷ್ಯತ್ ಕಾಲದಲ್ಲಿ ಬಾಧ ಇದೆ, ಎಂದು ಹೇಳಿದರೂ ಅದು ಪ್ರತ್ಯಕ್ಷಕ್ಕೆ ವಿರುದ್ಧವಾಗುತ್ತದೆ. ಬಾಧ ಎಂದರೆ ತ್ರೈಕಾಲಿಕಸತ್ತಾನಿಷೇಧ. ಪ್ರತ್ಯಕ್ಷವು ವಿಶ್ವಕ್ಕೆ ವರ್ತಮಾನ ಕಾಲದಲ್ಲಿ ಸತ್ವವನ್ನು ಗ್ರಹಿಸುತ್ತದೆ. ಶ್ರುತಿಯು ಅದನ್ನೂ ನಿಷೇಧಮಾಡುತ್ತದೆ. ಇದರಿಂದಲೂ ಶ್ರುತಿಯು ಪ್ರತ್ಯಕ್ಷವಿರುದ್ಧವಾಗುತ್ತದೆ.

## ಪ್ರತ್ಯಕ್ಷ–ವರ್ತಮಾನಮಾತ್ರಗ್ರಾಹಕ ಅಲ್ಲ

ವಸ್ತುತಸ್ತು ಪ್ರತ್ಯಕ್ಷವು ವರ್ತಮಾನ ಕಾಲವನ್ನು ಮಾತ್ರ ಗ್ರಹಿಸುವುದಿಲ್ಲ. ಅದು ಕಾಲತ್ರಯಾವಗಾಹಿ—

**ಶಕ್ಯಂ ವಾರಯಿತುಂ ಕ್ವಾಪಿ ತಚ್ಚೇನ್ನೋತ್ತರಗೋಚರಮ್ ।**
**ಕಥಮೇವೋತ್ತರಃ ಕಾಲಸ್ತದ್ಗೋ ಮೋಕ್ಷಶ್ಚ ಗಮ್ಯತೇ ॥ ೬೯ ॥**

ತತ್=ಸಾಕ್ಷಿಪ್ರತ್ಯಯವು ಯದಿ ನೋತ್ತರಗೋಚರಂ=ಉತ್ತರಕಾಲವನ್ನು ಗ್ರಹಿಸದೆ ವರ್ತಮಾನಕಾಲವನ್ನಷ್ಟೇ ಗ್ರಹಿಸಿದರೆ ತರ್ಹಿ=ಆಗ ಉತ್ತರಃ ಕಾಲಃ=ಭವಿಷ್ಯತ್‌ಕಾಲ ಹಾಗೂ ತದ್ಗಃ ಮೋಕ್ಷಶ್ಚ=ಮುಂದೆ ದೊರಕುವ ಮೋಕ್ಷ ಇವುಗಳು ಕಥಂ ಗಮ್ಯತೇ=ಹೇಗೆ ತಿಳಿಯಲ್ಪಡಬೇಕು?

**ಭಾವಾರ್ಥ**—ಪ್ರತ್ಯಕ್ಷವು ವರ್ತಮಾನಕಾಲವನ್ನು ಮಾತ್ರ ಗ್ರಹಿಸುತ್ತದೆ ಎನ್ನುವುದನ್ನು ಒಪ್ಪಿಕೊಂಡು ಪ್ರತ್ಯಕ್ಷಬಾಧವನ್ನು ಆಗಮಕ್ಕೆ ಹೇಳಲಾಗಿದೆ. ವಸ್ತುತಃ ಸಾಕ್ಷಿಪ್ರತ್ಯಕ್ಷವು ಕಾಲತ್ರಯಗಳನ್ನೂ ಗ್ರಹಿಸುತ್ತದೆ, ಎಂದು ಹಿಂದೆಯೇ ಆನುಮಾನಿಕಾಧಿಕರಣದಲ್ಲಿ ಹೇಳಲಾಗಿದೆ—

ಅತೀತಾನಾಗತೌ ಕಾಲೌ ಅಪಿ ನಃ ಸಾಕ್ಷಿಗೋಚರೌ ॥

ಕಾಲವು ಅನುಮಾನಾದಿಪ್ರಮಾಣಗಳಿಂದ ವೇದ್ಯವಾಗುವುದಿಲ್ಲ, ಎಂದು ಅಲ್ಲಿಯೇ ಹೇಳಲಾಗಿದೆ. ಅದು ಸಾಕ್ಷಿವೇದ್ಯವೂ ಆಗದಿದ್ದಲ್ಲಿ ಸರ್ವಥಾ ಅವೇದ್ಯವಾದೀತು. ಅಲ್ಲದೆ, ಭವಿಷ್ಯತ್‌ಕಾಲದ ಪ್ರತ್ಯಕ್ಷವಿಲ್ಲದಿದ್ದರೆ 'ನನಗೆ

ಮುಂದೆ ಮೋಕ್ಷವಾಗಲಿದೆ' ಎಂಬ ಜ್ಞಾನವು ಇಲ್ಲದಿರುವುದರಿಂದ ಸಾಧಕರು ಮೋಕ್ಷಕ್ಕಾಗಿ ಪ್ರವೃತ್ತಿಯನ್ನೇ ಮಾಡಲಾರರು. ಆದ್ದರಿಂದ ಕಾಲತ್ರಯವೂ ಸಾಕ್ಷಿಗೋಚರವಾಗುತ್ತದೆ.

**ಆಗಮೋಽಪಿ ಹಿ ಸಾಮಾನ್ಯೇ ಸಿದ್ಧೇ ಪ್ರತ್ಯಕ್ಷತಃ ಪುನಃ ।**
**ವಿಶೇಷಂ ಗಮಯೇದೇವ ಕಥಂ ಶಕ್ತಿಗ್ರಹೋಽನ್ಯಥಾ ॥ ೭೦ ॥**

ಆಗಮೋಽಪಿ=ವೇದಾದ್ಯಾಗಮಗಳೂ ಸಾಮಾನ್ಯೇ ಪ್ರತ್ಯಕ್ಷತಃ ಸಿದ್ಧೇ= ಸಾಮಾನ್ಯತಃ ಇತರಾನ್ವಿತಸ್ವಾರ್ಥವು ಪ್ರತ್ಯಕ್ಷದಿಂದ ಸಿದ್ಧವಾದರೆ ಮಾತ್ರ ಪುನಃ=ಮತ್ತೆ ವಿಶೇಷಂ ಗಮಯೇತ್ ಇತ್ಯೇವ=ವಿಶೇಷಾನ್ವಿತಸ್ವಾರ್ಥವನ್ನು ತಿಳಿಸಬಹುದಷ್ಟೆ. ಅನ್ಯಥಾ=ಇತರಾನ್ವಿತ ಸ್ವಾರ್ಥವೂ ಸಿದ್ಧವಾಗದಿದ್ದಲ್ಲಿ ಕಥಂ ಶಕ್ತಿಗ್ರಹಃ=ಶಾಬ್ದಬೋಧಕ್ಕೆ ಕಾರಣವಾದ ಶಕ್ತಿಗ್ರಹವಾದರೂ ಹೇಗಾಗಬೇಕು?

ಭಾವಾರ್ಥ— ಭವಿಷ್ಯತ್‌ಕಾಲವು ಪ್ರತ್ಯಕ್ಷವೇದ್ಯವಾಗದಿದ್ದರೂ, ಮುಂದೆ ನನಗೆ ಮೋಕ್ಷವಾಗಲಿದೆ, ಎಂದು ಆಗಮದಿಂದ ತಿಳಿಯಬಹುದು. ಆಗಮವು ಶುಕ–ವಾಮದೇವಾದಿಗಳಿಗೆ ಜ್ಞಾನದಿಂದ ಮೋಕ್ಷವಾಗಿರುವುದನ್ನು ಹೇಳುತ್ತದೆ. ಅದನ್ನು ತಿಳಿದು ಜ್ಞಾನಿಯಾದರೆ ನನಗೂ ಮೋಕ್ಷವಾಗಲಿದೆ, ಎನ್ನುವ ಜ್ಞಾನವು ಬರುತ್ತದೆ. ಈ ಆಕ್ಷೇಪಕ್ಕೆ ಹೀಗೆ ಸಮಾಧಾನ— ವಾಕ್ಯವು ಎರಡು ಪದಾರ್ಥಗಳಿಗೆ ಅನ್ವಯವನ್ನು ಮಾತ್ರ ತಿಳಿಸುತ್ತದೆ. ಹಾಗೆ ತಿಳಿಸಬೇಕಾದರೆ ವಾಕ್ಯದಲ್ಲಿರುವ ಶಬ್ದಗಳಿಗೆ ಅರ್ಥವು ಮೊದಲೇ ತಿಳಿದಿರಬೇಕು. ಭವಿಷ್ಯತ್ ಕಾಲ ಮತ್ತು ಮೋಕ್ಷ ಎಂಬ ಎರಡು ಶಬ್ದಗಳಿಗೆ ಅರ್ಥವು ಮೊದಲು ತಿಳಿದಿದ್ದರೆ ಅವೆರಡು ಪದಾರ್ಥಗಳ ಸಂಬಂಧವನ್ನು (ಅನ್ವಯವನ್ನು) 'ಮುಂದೆ ಮೋಕ್ಷವಾಗುವುದು' ಎಂಬ ವಾಕ್ಯವು ತಿಳಿಸಬಹುದು. ಹೀಗೆ ಆಗಮದಿಂದ ಜ್ಞಾನಬರಬೇಕಾದರೂ ಕಾಲಜ್ಞಾನವು ಮೊದಲೇ ಇರಬೇಕು. ಅದು ಸಾಕ್ಷಿಯಿಂದಲೇ ಬರಬೇಕು. ಸಾಕ್ಷಿಯಿಂದ ಕಾಲವು ಸಿದ್ಧವಾದಾಗ 'ಭವಿಷ್ಯತ್‌ಕಾಲ' ಮುಂತಾದ ಶಬ್ದಗಳಿಗೆ ಆ ಕಾಲಗಳಲ್ಲಿ ಶಕ್ತಿಯು ಗೃಹೀತವಾಗುತ್ತದೆ. ಅದರಿಂದಾಗಿ ವಾಕ್ಯದಿಂದ ಶಾಬ್ದಬೋಧ ಬರುತ್ತದೆ.

**ಅತೀತಾನಾಗತಾರ್ಥೇಷು ಜಾತೇ ಶಕ್ತಿಗ್ರಹೇಽಖಿಲಮ್ ।**
**ವಿಶೇಷಂ ಜ್ಞಾಪಯೇದ್ ವಾಕ್ಯಂ ನ ತದಜ್ಞಾತಶಕ್ತಿಕೇ ॥ ೭೦ ॥**

**ಶಕ್ತಿಶ್ಚೇದ್ ವರ್ತಮಾನೇ ಸ್ಯಾನ್ನಾತೀತಾನಾಗತಂ ವದೇತ್ ।**
**ಯದಿ ಶಕ್ತಿಗ್ರಹೋಽನ್ಯತ್ರ ಕಥಂ ಸ ಸ್ಯಾತ್ ತದಗ್ರಹೇ ॥ ೭೨ ॥**

ಅಖಿಲಂ ವಾಕ್ಯಂ=ಎಲ್ಲಾ ವಾಕ್ಯಗಳೂ, ಅತೀತಾನಾಗತಾರ್ಥೇಷು= ಅತೀತವಾದ ಅಥವಾ ಅನಾಗತವಾದ ಅರ್ಥಗಳಲ್ಲಿ ಶಕ್ತಿಗ್ರಹೇ ಜಾತೇ= ಪದಗಳಿಗೆ ಶಕ್ತಿಜ್ಞಾನವು ಆದರೆ ಮಾತ್ರ ವಿಶೇಷಂ ಗಮಯೇತ್= ಅನ್ವಯ ವಿಶೇಷವನ್ನು ತಿಳಿಸೀತು. ತತ್=ಆ ವಾಕ್ಯವು ಅಜ್ಞಾತಶಕ್ತಿಕೇ= ವಾಕ್ಯಘಟಕ ವಾದ ಪದಗಳಿಗೆ ಶಕ್ತಿಯು ತಿಳಿಯದಿದ್ದಲ್ಲಿ ನ ವಿಶೇಷಂ ಗಮಯೇತ್= ವಿಶೇಷಾನ್ವಯಬೋಧವನ್ನು ಉಂಟುಮಾಡುವುದಿಲ್ಲ.

ಒಂದುವೇಳೆ ಶಕ್ತಿಃ=ಪದಗಳಿಗೆ ಶಕ್ತಿಯು ವರ್ತಮಾನೇ ಚೇತ್ ಸ್ಯಾತ್=ವರ್ತಮಾನಪದಾರ್ಥಗಳಲ್ಲಿ ಮಾತ್ರವೇ ತಿಳಿಯಲ್ಪಟ್ಟರೆ ಅತೀತಾನಾಗತಂ=ಭೂತಪದಾರ್ಥಗಳ ಮತ್ತು ಭವಿಷ್ಯತ್‌ಪದಾರ್ಥಗಳ ಅನ್ವಯವನ್ನು ನ ವದೇತ್=ವಾಕ್ಯವಿಶೇಷಗಳು ತಿಳಿಸಲಿಕ್ಕಿಲ್ಲ. ಆದ್ದರಿಂದ ಅತೀತಾನಾಗತ ಕಾಲಗಳೂ ಸಾಕ್ಷಿಸಿದ್ಧವಾಗಿರಬೇಕು.

**ಭಾವಾರ್ಥ**— ಪದಗಳಿಗೆ ಶಕ್ತಿಗ್ರಹವಾಗಬೇಕಾದರೆ ಪದಾರ್ಥಜ್ಞಾನ ಬರಬೇಕು, ಎನ್ನುವುದು ಸರಿ. ಆದರೆ ವಾಕ್ಯದಿಂದ ಶಾಬ್ದಬೋಧ ಬರಬೇಕಾದರೆ ಶಕ್ತಿಗ್ರಹದ ಅಗತ್ಯವೇನು? ಅದಕ್ಕೆ ಸಮಾಧಾನವನ್ನು ಮೊದಲ ಶ್ಲೋಕದಲ್ಲಿ ಹೇಳಲಾಗಿದೆ— ಪದಗಳಿಗೆ ಶಕ್ತಿಜ್ಞಾನ ಇದ್ದರೆ ಮಾತ್ರ ವಾಕ್ಯದಿಂದ ಶಾಬ್ದಬೋಧ ಬರುತ್ತದೆ, ಶಕ್ತಿಜ್ಞಾನ ಇಲ್ಲದಿದ್ದರೆ ಶಾಬ್ದಬೋಧ ಬರುವುದಿಲ್ಲ. ಹೀಗೆ, ಅನ್ವಯ-ವ್ಯತಿರೇಕಗಳಿಂದ ಶಕ್ತಿಜ್ಞಾನವು ಶಾಬ್ದಬೋಧಕ್ಕೆ ಕಾರಣ ಎನ್ನುವುದು ಸಿದ್ಧವಾಗತ್ತದೆ.

ಕ್ರಿಯಾಪದಗಳು ವರ್ತಮಾನ, ಭೂತ, ಭವಿಷ್ಯತ್‌ಕ್ರಿಯೆಗಳನ್ನೂ ಹೇಳುತ್ತವೆ. ಅವುಗಳಿಗೆ ಶಕ್ತಿಗ್ರಹವಾಗಬೇಕಾದರೆ ಕಾಲತ್ರಯದ ಜ್ಞಾನವೂ ಇರಬೇಕಾಗುತ್ತದೆ. ಆದ್ದರಿಂದ ಎಲ್ಲ ಪದಗಳಿಗೆ ಶಕ್ತಿಜ್ಞಾನವಾಗಬೇಕಾದರೆ

ಕೇವಲ ವರ್ತಮಾನಕಾಲದ ಜ್ಞಾನವಿದ್ದರೆ ಸಾಲದು. ತ್ರಿಕಾಲಗಳ ಜ್ಞಾನವೂ ಇರಬೇಕು. ಹಾಗಿದ್ದರೆ ಮಾತ್ರ ಪದಗಳು ಕಾಲತ್ರಯಸಂಸ್ಪೃಷ್ಟವಾದ ಅರ್ಥಗಳನ್ನು ಹೇಳಬಹುದು. ಕಾಲತ್ರಯಗಳ ಜ್ಞಾನ ಸಾಕ್ಷಿಯಿಂದಲೇ ಬರಬೇಕು. ಶುಕ–ವಾಮದೇವಾದಿಗಳು ಮುಕ್ತರಾಗಿದ್ದಾರೆ, ಎಂಬುದನ್ನು ಆಗಮದಿಂದ ತಿಳಿಯಬೇಕಾದರೆ ಭೂತಕಾಲದ ಜ್ಞಾನ ನಮಗೆ ಮೊದಲೇ ಇರಬೇಕು. ಆಗ ಮಾತ್ರ ಭೂತಕಾಲವಾಚಕ–ಪದಘಟಿತವಾದ ಆಗಮದಿಂದ ಶಾಬ್ದಬೋಧವು ಬರುತ್ತದೆ. ಮೊದಲೇ ಭವಿಷ್ಯತ್‌ಕಾಲದ ಜ್ಞಾನವಿದ್ದರೆ 'ನಾನೂ ಮುಂದೆ ಮುಕ್ತನಾಗಬಹುದು' ಎಂಬ ಜ್ಞಾನವು ಬರುತ್ತದೆ. ಹೀಗೆ ಶಕ್ತಿಜ್ಞಾನ ಬರಬೇಕಾದರೆ ಕಾಲಜ್ಞಾನ ಬೇಕು. ಕಾಲದ ಜ್ಞಾನವೂ ಅದೇ ಆಗಮದಿಂದ ಬರಲಾರದು. ಅದು ಸಾಕ್ಷಿಯಿಂದಲೇ ಬರಬೇಕು.

**ಸಾಮಾನ್ಯಂ ದೃಷ್ಟಮೇವಾಸಾವನ್ಯತ್ರ ಗಮಯೇದ್ ಯದಿ ।**
**ಸಾಮಾನ್ಯವರ್ಜಿತಂ ವಸ್ತುಸ್ವರೂಪಂ ಗಮಯೇತ್ ಕಥಮ್ ॥ ೭೩ ॥**

ಸಾಮಾನ್ಯಂ=ಅನುಗತಸಾಮಾನ್ಯವು ದೃಷ್ಟಮೇವ=ಚಕ್ಷುರಾದಿ ಇಂದ್ರಿಯಗಳಿಂದ ಗೃಹೀತವಾದಾಗಲೇ ಶಬ್ದಶಕ್ತಿಗೆ ವಿಷಯವಾಗಿ ತಿಳಿಯಲ್ಪಟ್ಟಿದೆ. ಅದನ್ನೇ ಅಸೌ=ಶಬ್ದವು ಅನ್ಯತ್ರ=ಕಾಲಾಂತರದಲ್ಲೂ ಯದಿ ಗಮಯೇತ್=ತಿಳಿಸುತ್ತದೆ, ಎಂದು ಹೇಳುವುದಾದಲ್ಲಿ ಸಾಮಾನ್ಯ ವರ್ಜಿತಂ= ಸಾಮಾನ್ಯರಹಿತವಾದ ವಸ್ತುಸ್ವರೂಪಂ=ವಸ್ತುಸ್ವರೂಪವನ್ನು 'ಸ್ವರೂಪ' ಎಂಬ ಶಬ್ದವು ಕಥಂ ಗಮಯೇತ್=ಹೇಗೆ ತಿಳಿಸೀತು?

**ಭಾವಾರ್ಥ**— ಇದು ಮೀಮಾಂಸಕರು ಮಾಡುವ ಆಕ್ಷೇಪ— ಶಕ್ತಿಜ್ಞಾನಕ್ಕಾಗಿ ಕಾಲತ್ರಯದ ಜ್ಞಾನ ಇರಬೇಕಾಗಿಲ್ಲ. ಎಲ್ಲಾ ಶಬ್ದಗಳೂ ಜಾತಿ ವಾಚಕಗಳು. ಗೋಶಬ್ದಕ್ಕೆ ಗೋತ್ವಜಾತಿಯಲ್ಲಿ ಶಕ್ತಿ. ಜಾತಿಯು ಇಂದ್ರಿಯ ಗಳಿಂದ ಗೃಹೀತವಾಗಿವೆ. ಆದ್ದರಿಂದ ಅವುಗಳಲ್ಲಿ ಗವಾದಿಶಬ್ದಗಳಿಗೆ ಶಕ್ತಿಯು ಗೃಹೀತವಾಗಿದೆ. ಆ ಜಾತಿಗೆ ಆಶ್ರಯವಾದ ಭೂತ–ಭವಿಷ್ಯತ್ ಕಾಲೀನ ವ್ಯಕ್ತಿಗಳು ಗವಾದಿಶಬ್ದಗಳಿಂದ ಲಕ್ಷ್ಯಗಳು. ಅವುಗಳಲ್ಲಿ ಅನುಗತವಾದ ಗೋತ್ವಜಾತಿಯಲ್ಲಿ ಶಕ್ತಿಯು ಗೃಹೀತವಾಗಿರುವುದರಿಂದ ತದಾಶ್ರಯವಾದ

ವ್ಯಕ್ತಿವಿಶೇಷಗಳು ಲಕ್ಷಣಯಾ ತಿಳಿಯಲ್ಪಡುತ್ತವೆ. ಅದಕ್ಕಾಗಿ ಅತೀತಾನಾಗತ ಕಾಲಗಳ ಜ್ಞಾನವು ಬೇಕಾಗಿಲ್ಲ.

ಲಕಾರಗಳೂ ಅತೀತಾದಿಕಾಲಗಳಲ್ಲಿ ಇರುವ ಕಾಲತ್ವ ಎಂಬ ಜಾತಿ ವಾಚಕಗಳು. ಕಾಲತ್ವವು ವರ್ತಮಾನಕಾಲದಲ್ಲಿ ಗೃಹೀತವಾಗಿದೆ. ಆದ್ದರಿಂದ ಲಕಾರಗಳಿಗೆ ಕಾಲತ್ವದಲ್ಲಿ ಶಕ್ತಿಯು ಗೃಹೀತವಾಗುತ್ತದೆ. ಭೂತ–ಭವಿಷ್ಯದಾದಿ ಕಾಲವಿಶೇಷಗಳು ಲಕ್ಷ್ಯವಾಗಿವೆ. ಅವುಗಳು ವಾಚ್ಯವಾದ ಕಾಲತ್ವರೂಪ ಸಾಮಾನ್ಯಕ್ಕೆ ಆಶ್ರಯವಾಗಿ ಶಬ್ದಗಮ್ಯವಾಗುತ್ತವೆ. ಹೀಗೆ ಶಕ್ತಿಗ್ರಹಕ್ಕಾಗಿ ಕಾಲತ್ರಯದ ಜ್ಞಾನ ಬೇಕಾಗಿಲ್ಲ.

ಈ ವಾದ ಸರಿಯಲ್ಲ— ಜಾತಿ ಇಲ್ಲದ ವಸ್ತುಗಳೂ ಶಬ್ದವಾಚ್ಯವಾಗಿವೆ. ಉದಾಹರಣೆಗೆ, 'ಸ್ವರೂಪ' ಎಂಬ ಶಬ್ದವು ವ್ಯಕ್ತಿವಿಶೇಷವಾಚಕವಾಗಿದೆ. ಆ ವ್ಯಕ್ತಿಯು ಅದ್ವಿತೀಯವಾದುದರಿಂದ ಸ್ವರೂಪತ್ವವು ಜಾತಿಯಲ್ಲ. ಆದ್ದರಿಂದ ಸ್ವರೂಪಶಬ್ದವು ಜಾತಿ ವಾಚಕವಲ್ಲ. ವ್ಯಕ್ತಿವಾಚಕ. ಆ ಶಬ್ದಕ್ಕೆ ಭೂತ–ಭವಿಷ್ಯದ್ ವಸ್ತುಗಳಲ್ಲಿ ಶಕ್ತಿಗ್ರಹವಾಗಬೇಕಾದರೆ ಕಾಲತ್ರಯದ ಜ್ಞಾನ ಇರಬೇಕಾಗುತ್ತದೆ.

**ನ ಸ್ವರೂಪತ್ವಸಾಮಾನ್ಯಂ ಕೇನಾಪ್ಯಂಗೀಕೃತಂ ಕ್ವಚಿತ್ ।**
**ಸ್ವರೂಪಂ ಚೇದನುಗತಂ ವ್ಯಾವೃತ್ತಂ ತತ್ರ ಕಿಂ ಭವೇತ್ ॥ ೭೪ ॥**

ಕೇನಾಪಿ=ಯಾರಿಂದಲೂ ಸ್ವರೂಪತ್ವಸಾಮಾನ್ಯಂ=ಸ್ವರೂಪತ್ವ ಎಂಬ ಜಾತಿಯು ಕ್ವಚಿತ್=ಎಂದೂ ನಾಂಗೀಕೃತಂ=ಅಂಗೀಕರಿಸಲ್ಪಟ್ಟಿಲ್ಲ. ಬೇರಾರೂ ಅಂಗೀಕರಿಸದಿದ್ದರೂ ನಾನು ಅಂಗೀಕರಿಸುತ್ತೇನೆ, ಎನ್ನುವುದೂ ಸರಿಯಲ್ಲ. ಸ್ವರೂಪಂ=ಸ್ವರೂಪತ್ವಜಾತಿಯೂ ಅನುಗತಂ ಚೇತ್=ಅನುಗತವಾಗಿದ್ದಲ್ಲಿ ತತ್ರ=ವಸ್ತುವಿನಲ್ಲಿ ವ್ಯಾವೃತ್ತಂ ಕಿಂ ಭವೇತ್=ಇತರ ವ್ಯಾವೃತ್ತವಾದ ಧರ್ಮವು ಯಾವುದಿರಬೇಕು?

ಭಾವಾರ್ಥ— ಸ್ವರೂಪಶಬ್ದಕ್ಕೂ ಸ್ವರೂಪತ್ವ ಎಂಬ ಅನುಗತವಾದ ಜಾತಿಯೇ ಅರ್ಥ, ಎನ್ನಬಾರದು. ಸ್ವರೂಪತ್ವವು ಜಾತಿ ಎಂದು ಯಾರೂ ಒಪ್ಪಿಲ್ಲ. ಯಾರೂ ಒಪ್ಪದಿದ್ದರೂ ನಾನು ಒಪ್ಪುತ್ತೇನೆ, ಎನ್ನುವ ಆಗ್ರಹವೂ ಸರಿಯಲ್ಲ. ಸ್ವರೂಪತ್ವವೂ ಜಾತಿಯಾದರೆ ಯಾವುದೇ ವಸ್ತುವಿನಲ್ಲೂ ಇತರ

ವ್ಯಾವೃತ್ತವಾದ, ಆ ವಸ್ತುವಿನಲ್ಲಿ ಮಾತ್ರ ಇರುವ ಧರ್ಮವು ಇಲ್ಲವೆನ್ನ ಬೇಕಾಗುತ್ತದೆ. ಅದು ಅಪ್ರಾಮಾಣಿಕವಾದ ಕಲ್ಪನೆ. ಆದ್ದರಿಂದ ಸ್ವರೂಪತ್ವವು ತತ್ತದ್ವಸ್ತುವಿನಲ್ಲಿ ಮಾತ್ರ ಇರುವ, ಇತರ ವಸ್ತುಗಳಲ್ಲಿ ಇಲ್ಲದ ಧರ್ಮ, ಎಂದು ಅಂಗೀಕರಿಸಬೇಕಾಗುತ್ತದೆ.

**ಸರ್ವಾನುಗತಧರ್ಮಾಣಾಮಂತೇ ಹಿ ಸ್ವತ್ವಮಿಷ್ಯತೇ ।**
**ಕಿಂ ವ್ಯಾವೃತ್ತಮಿತಿ ಪ್ರಶ್ನೇ ಸ್ವರೂಪಮಿತಿ ಕೇವಲಮ್ ।**
**ಸ್ಯಾದುತ್ತರಂ ತತೋಽನ್ಯಚ್ಚೇತ್ ತದೇವ ಸ್ವಯಮೇವ ನಃ ॥ ೭೫ ॥**

ಸರ್ವಾನುಗತಧರ್ಮಾಣಾಂ ಅಂತೇ=ಅನುಗತವಾದ ಎಲ್ಲ ಧರ್ಮಗಳ ಕೊನೆಯಲ್ಲಿ ಸ್ವತ್ವಂ=ಸ್ವರೂಪತ್ವ ಎಂಬ ಧರ್ಮವು ಇಷ್ಯತೇ=ಮೀಮಾಂಸಕ ರಿಂದ ಅಂಗೀಕರಿಸಲ್ಪಟ್ಟಿದೆ. ಅನುಗತವಾದ ಎಲ್ಲ ಧರ್ಮಗಳಿರುವಾಗ ಕಿಂ ವ್ಯಾವೃತ್ತಂ=ವ್ಯಾವೃತ್ತವಾದ ಧರ್ಮವು ಯಾವುದು? ಇತಿ ಪ್ರಶ್ನೇ=ಹೀಗೆ ಪ್ರಶ್ನೆ ಮಾಡಿದಾಗ ಕೇವಲಂ ಸ್ವರೂಪಮಿತಿ=ಸ್ವರೂಪತ್ವಧರ್ಮ ಒಂದೇ ವ್ಯಾವೃತ್ತವಾದುದು ಎಂದೇ ಉತ್ತರಂ ಸ್ಯಾತ್=ಉತ್ತರವಾಗುತ್ತದೆ. ತತಃ= ಸ್ವರೂಪಕ್ಕಿಂತಲೂ ಅನ್ಯತ್‌ಚೇತ್=ಬೇರೆಯಾದ ಇತರವ್ಯಾವೃತ್ತಿಯೇ ಇತರ ವ್ಯಾವೃತ್ತಧರ್ಮ ಎನ್ನುವುದಾದರೆ ಏವ=ಹಾಗಿದ್ದಲ್ಲಿ ನಃ=ನಮಗೆ ತತ್= ಅದೇ ಸ್ವಯಮೇವ=ಸ್ವರೂಪತ್ವವೇ.

ಭಾವಾರ್ಥ—ವೈಶೇಷಿಕರು, ಅನುಗತವಲ್ಲದ, ವ್ಯಾವೃತ್ತವಾದ ತತ್ತ್ವವು 'ವಿಶೇಷ'. ಆ ವಿಶೇಷವು ದ್ರವ್ಯಗಳ ಪರಮಾಣುಗಳಲ್ಲಿ ಇವೆ. ಪರಮಾಣು ಗಳು ಅನಂತವಾದಂತೆ ಆ ವಿಶೇಷಗಳೂ ಅನಂತವಾಗಿವೆ. ಒಂದು ಪರಮಾಣುವಿನಲ್ಲಿರುವ ವಿಶೇಷವು ಇನ್ನೊಂದು ಪರಮಾಣುಗಳಲ್ಲಿ ಇಲ್ಲ. ಅಷ್ಟೇ ಅಲ್ಲ, ಆ ಅನಂತವಿಶೇಷಗಳಲ್ಲಿ ಅನುಗತವಾದ ವಿಶೇಷತ್ವ ಎಂಬ ಜಾತಿಯೂ ಇಲ್ಲ. ಇದು ರೂಪಾದಿಧರ್ಮಗಳಿಗೂ ವಿಶೇಷಕ್ಕೂ ಇರುವ ವ್ಯತ್ಯಾಸ, ಎನ್ನುತ್ತಾರೆ. ಇಂತಹ ವಿಶೇಷವನ್ನು ಮೀಮಾಂಸಕರು ನಿರಾಕರಿಸು ತ್ತಾರೆ. ವಿಶೇಷವು ವ್ಯಾವರ್ತಕಾಂತಕರವಿಲ್ಲದೆ ಸ್ವತ ಏವ ವ್ಯಾವೃತ್ತವಾಗುವಂತೆ ಆ ವಿಶೇಷಕ್ಕೆ ಆಶ್ರಯಗಳಾದ ಪರಮಾಣು ಸ್ವರೂಪಗಳೇ ಸ್ವತೋ

ವ್ಯಾವೃತ್ತವಾಗಿವೆ, ಎನ್ನುವುದೇ ಉಚಿತ, ಎಂದು ಮೀಮಾಂಸಕರ ವಾದ. ಹೀಗೆ ವಾದಮಾಡುವ ಮೀಮಾಂಸಕರಿಗೆ ಎಲ್ಲ ಧರ್ಮಗಳೂ ಅನುಗತವಾಗಿವೆ, ಅನನುಗತವಾದ, ತತ್ತದ್ವ್ಯಕ್ತಿಗಳಲ್ಲಿ ಮಾತ್ರ ವಿಶ್ರಾಂತವಾದ ಧರ್ಮ ಯಾವುದು? ಎಂದು ಕೇಳಿದರೆ, ವೈಶೇಷಿಕರಂತೆ 'ವಿಶೇಷ' ಎಂದು ಅವರು ಹೇಳುವಂತಿಲ್ಲ. ಸ್ವರೂಪತ್ವ, ಎಂದೇ ಹೇಳಬೇಕು. ಹೀಗೆ, ಅನಿವಾರ್ಯವಾಗಿ ಸ್ವರೂಪತ್ವ ಧರ್ಮವು ವ್ಯಾವೃತ್ತಧರ್ಮ ಎಂದು ಹೇಳಲೇಬೇಕಾಗುತ್ತದೆ. ಒಂದುವೇಳೆ ಸ್ವರೂಪತ್ವವನ್ನು ಬಿಟ್ಟು ಆಯಾಯವಸ್ತುಗಳಲ್ಲಿ ಇರುವ ಸ್ವೇತರವ್ಯಾವೃತ್ತಿಯೇ (ಭೇದ) ಅಂತಹ ವ್ಯಾವೃತ್ತಧರ್ಮ ಎನ್ನುವುದಾದಲ್ಲಿ ಅದನ್ನೇ ನಾವು 'ಸ್ವರೂಪತ್ವ' ಎಂದು ಹೇಳುತ್ತೇವೆ. ಒಟ್ಟಿನಲ್ಲಿ ಏಕಮಾತ್ರ ನಿಷ್ಠವಾದ ಒಂದು ಧರ್ಮ ಇದೆ, ಎನ್ನುವುದೇ ನಮ್ಮ ಅಭಿಪ್ರಾಯ. ಅದರ ಹೆಸರಿನಲ್ಲಿ ವಿವಾದವಿಲ್ಲ.

**ಏವಂ ವ್ಯಾವೃತ್ತರೂಪೇಽಪಿ ಯದಾ ಶಕ್ತಿಗ್ರಹೋ ಭವೇತ್ ।**
**ತಸ್ಯ ಸಾಮಾನ್ಯತೋ ಜ್ಞಾನಂ ವಿನಾ ಸ ಚ ಭವೇತ್ ಕುತಃ ।**
**ಅತೋ ವಿಶೇಷಸಾಮಾನ್ಯರೂಪಂ ಸರ್ವಮಪೀಷ್ಯತೇ ॥ ೭೬ ॥**

ಏವಂ=ಹಿಂದೆ ಹೇಳಿರುವಂತೆ, ವ್ಯಾವೃತ್ತರೂಪೇಽಪಿ=ಸಾಮಾನ್ಯ ಧರ್ಮರಹಿತವಾದ ಸ್ವರೂಪ ಅಥವಾ ಭೇದ ಇವುಗಳಲ್ಲಿ ಸ್ವರೂಪ ಮತ್ತು ಭೇದಶಬ್ದಗಳಿಗೆ ಯದಾ=ಯಾವಾಗ ಶಕ್ತಿಗ್ರಹಃ ಭವೇತ್=ಶಕ್ತಿಜ್ಞಾನ ಬರುವುದಾದಲ್ಲಿ ತಸ್ಯ=ಆ ಸ್ವರೂಪ-ಭೇದಗಳ ಸಾಮಾನ್ಯತಃ ಜ್ಞಾನಂ ವಿನಾ=ಸಾಮಾನ್ಯಜ್ಞಾನವಿಲ್ಲದೆ ಸಚ=ಆ ಶಕ್ತಿಗ್ರಹವು ಕುತಃ ಭವೇತ್= ಹೇಗಾದೀತು? ಅತಃ=ಪೂರ್ವೋಕ್ತಕ್ರಮದಿಂದ ಸರ್ವಮಪಿ=ಎಲ್ಲ ವಸ್ತುವೂ ವಿಶೇಷ-ಸಾಮಾನ್ಯರೂಪಂ=ವಿಶೇಷರೂಪವೂ ಸಾಮಾನ್ಯರೂಪವೂ ಆಗಿದೆ ಎಂದು ಇಷ್ಯತೇ=ಅಂಗೀಕರಿಸಲ್ಪಟ್ಟಿದೆ.

**ಭಾವಾರ್ಥ**— ಹೀಗೆ 'ಸ್ವರೂಪ' ಎಂಬ ಶಬ್ದವು ಸಾಮಾನ್ಯರಹಿತವಾದ, ಇತರವ್ಯಾವೃತ್ತವಾದ ಅಸಾಧಾರಣವಸ್ತುವಿಗೆ ವಾಚಕವಾಗಿದೆ. ಆ ಶಬ್ದಕ್ಕೆ ಜಾತಿಯಲ್ಲಿ ಶಕ್ತಿಯಿಲ್ಲ. ಇಂತಹ ಪದಕ್ಕೆ ಶಕ್ತಿಗ್ರಹವಾಗಬೇಕಾದರೆ ವಸ್ತುವಿನ

ಜ್ಞಾನವಿರಲೇಬೇಕು. ಆ ವಸ್ತುಗಳು ಅತೀತಾನಾಗತವಾಗಿದ್ದು ಅನಂತವಾಗಿವೆ. ಅಂದಮಾತ್ರಕ್ಕೆ ಅವೆಲ್ಲವನ್ನೂ ತಿಳಿದಾಗ ಸರ್ವಜ್ಞತ್ವ ಬರಬೇಕಾದ ಪ್ರಸಂಗವೂ ಇಲ್ಲ. ಅವುಗಳ ತತ್ತದ್ವ್ಯಕ್ತಿತ್ವೇನ ಜ್ಞಾನವಿಲ್ಲದಿದ್ದರೂ ಸಾಮಾನ್ಯತಃ ಜ್ಞಾನ ವಿದ್ದರೂ ಸಾಕು. ಅವುಗಳಲ್ಲಿ ಶಕ್ತಿಗ್ರಹವಾಗುತ್ತದೆ. ವಸ್ತುವು ಸಾಧಾರಣ ಧರ್ಮವಿಲ್ಲದೆ ವ್ಯಾವೃತ್ತರೂಪವೇ ಆದಲ್ಲಿ ಶಕ್ತಿಗ್ರಹಕ್ಕಾಗಿ ಆ ಎಲ್ಲ ವಸ್ತುಗಳ ವ್ಯಕ್ತಿಶಃ ಜ್ಞಾನವೂ ಬರಬೇಕಾದುದರಿಂದ ಎಲ್ಲರೂ ಸರ್ವಜ್ಞರಾಗಬೇಕು, ಇಲ್ಲವೇ ಶಕ್ತಿಗ್ರಹವಾಗಲಿಕ್ಕಿಲ್ಲ. ಅದರಂತೆ, ಎಲ್ಲವೂ ಸಾಮಾನ್ಯರೂಪವೇ ಆದರೂ ವ್ಯಾವೃತ್ತಿಬುದ್ಧಿ ಬರಲಾರದು. ಅದಕ್ಕಾಗಿ ಎಲ್ಲ ವಸ್ತುಗಳೂ ಸಾಮಾನ್ಯ ರೂಪಗಳೂ ವಿಶೇಷರೂಪಗಳೂ ಆಗಿವೆ, ಎಂದು ಹೇಳಬೇಕು.

**ವ್ಯಾವೃತ್ತಂ ಯಚ್ಚ ಸಾಮಾನ್ಯಂ ತದೇವ ಸ್ಯಾದ್ ವಿಶೇಷತಃ ।**
**ನಚೈಕಧರ್ಮತಾ ತೇನ ಪದಾರ್ಥಾನಾಂ ಪರಸ್ಪರಮ್ ।**
**ಧರ್ಮಾಣಾಂ ಭೇದದೃಷ್ಟ್ಯೈವ ತತ್ಸಾದೃಶ್ಯಸ್ಯ ದರ್ಶನಾತ್ ॥ ೭೭ ॥**

ವ್ಯಾವೃತ್ತಂ ಯತ್=ಯಾವುದು ಸ್ವೇತರ ಸಮಸ್ತವ್ಯಾವೃತ್ತವಾಗಿದ್ದು ವಿಶೇಷರೂಪವೋ ತದೇವ=ಅದೇ ವಿಶೇಷತಃ='ವಿಶೇಷ'ದಿಂದಾಗಿ ಸಾಮಾನ್ಯಂ ಚ ಸ್ಯಾತ್=ಸಾಮಾನ್ಯವೂ ಆಗುತ್ತದೆ. ತೇನ=ಈ ಕಾರಣದಿಂದಾಗಿ ಪದಾರ್ಥಾನಾಂ=ವಸ್ತುಗಳಿಗೆ ಪರಸ್ಪರಂ=ಒಂದಕ್ಕೊಂದು ಏಕಧರ್ಮತಾ ನ=ಅಭಿನ್ನವಾದ ಧರ್ಮ ಇರುವಿಕೆಯು ಇಲ್ಲ.

ಧರ್ಮಾಣಾಂ=ರೂಪ ಮೊದಲಾದ ಧರ್ಮಗಳಿಗೆ ಭೇದದೃಷ್ಟ್ಯೈವ= ಧರ್ಮಿಭೇದೇನ ಭೇದವು ಕಂಡಿರುವುದರಿಂದಾಗಿ (ಪದಾರ್ಥಾನಾಂ ಪರಸ್ಪರಂ ಏಕಧರ್ಮತಾ ನ= ಗವಾದಿಪದಾರ್ಥಗಳಿಗೆ ಗೋತ್ವಾದಿ ಏಕ-ಅನುಗತ ಧರ್ಮವತ್ವವು ಇಲ್ಲ.) ತತ್ಸಾದೃಶ್ಯಸ್ಯಚ ದರ್ಶನಾತ್=ಧರ್ಮಗಳು ಅನನುಗತವಾಗಿದ್ದರೂ ಒಂದರ ಸಾದೃಶ್ಯವು ಇನ್ನೊಂದರಲ್ಲಿ ಕಾಣುವುದರಿಂದ 'ಇದಂ ಶೌಕ್ಲ್ಯಂ, ಇದಂ ಶೌಕ್ಲ್ಯಂ' ಇತ್ಯಾದಿ ಅನುಗತಜ್ಞಾನವು ಹುಟ್ಟುತ್ತದೆ.

**ಭಾವಾರ್ಥ—** ಹಿಂದೆ, ಸ್ವರೂಪ ಎಂಬ ಶಬ್ದವು ಸಾಮಾನ್ಯರಹಿತವಾದ ತತ್ತದ್ವಸ್ತುವಾಚಕ ಎಂದು ಹೇಳಲಾಗಿದೆ. ಅಂತಹ ತತ್ತದ್ವ್ಯಕ್ತಿಗಳಲ್ಲಿ ಶಕ್ತಿಜ್ಞಾನ

ಬರಬೇಕಾದರೆ ಆ ವ್ಯಕ್ತಿಗಳ ವ್ಯಕ್ತಿಶಃ ಜ್ಞಾನ ಬರಬೇಕು. ಆಗ ಸರ್ವಜ್ಞತ್ವಾಪತ್ತಿ. ಅದರ ಪರಿಹಾರಕ್ಕಾಗಿ ಆ ವಿಶೇಷವ್ಯಕ್ತಿಗಳಲ್ಲಿ ಸಾಮಾನ್ಯಧರ್ಮವನ್ನು ಒಪ್ಪಿ ಅವೆಲ್ಲವೂ ಸಾಮಾನ್ಯತಃ ಜ್ಞಾತವಾಗಿರುವುದರಿಂದ ಶಕ್ತಿಗ್ರಹವಾಗುತ್ತದೆ ಎಂದು ಹೇಳಲಾಯಿತು. ಇದು ಆಪಾತತಃ ವಿರುದ್ಧವೆನಿಸುತ್ತದೆ. ಒಂದೇ ವಸ್ತು ಸಾಮಾನ್ಯರೂಪವೂ ಹೌದು, ವಿಶೇಷರೂಪವೂ ಹೌದು, ಎನ್ನುವುದು ವಿರುದ್ಧ. ಆದರೂ 'ವಿಶೇಷ'ವು ಈ ವಿರೋಧವನ್ನು ಪರಿಹರಿಸುತ್ತದೆ. ನೈಯಾಯಿಕರು ಹೇಳುವಂತೆ ಘಟಪಟಾದಿ ಅನೇಕ ವಸ್ತುಗಳಲ್ಲಿ ದ್ರವ್ಯತ್ವ ಎಂಬ ಅನುಗತವಾದ ಧರ್ಮ ಇಲ್ಲ. ಆ ಧರ್ಮಗಳೆಲ್ಲವೂ ಧರ್ಮಿಸ್ವರೂಪ ಗಳೇ ಆಗಿವೆ. ಆದರೂ ಒಂದರ ಸಾದೃಶ್ಯ ಇನ್ನೊಂದರಲ್ಲಿ ಇದೆ. ಆ ಸಾದೃಶ್ಯರೂಪದಿಂದ ಅವುಗಳು ಸಾಮಾನ್ಯರೂಪಗಳು. ಸಾದೃಶ್ಯವನ್ನು ವಿವಕ್ಷೆ ಮಾಡದಿದ್ದಾಗ ಅವುಗಳೇ ವಿಶೇಷರೂಪಗಳು.

ಇದುವರೆಗೆ ಗೋತ್ವಾದಿಧರ್ಮಗಳು ಅನುಗತವಾಗಿವೆ, ಆದರೆ ಸ್ವರೂಪತ್ವವು ಅನುಗತವಲ್ಲ. ಸ್ವರೂಪದಲ್ಲಿ ಶಕ್ತಿಗ್ರಹವಾಗಬೇಕಾದರೆ ಸ್ವರೂಪಜ್ಞಾನ ಬೇಕು, ಎಂದು ಅಂಗೀಕರಿಸಿ ಸಮಾಧಾನವನ್ನು ಹೇಳಲಾಗಿದೆ. ವಸ್ತುತಃ, ಗೋತ್ವಾದಿಜಾತಿಗಳೂ ಅನುಗತಗಳಾಗಿಲ್ಲ. ರೂಪಾದಿಗುಣಗಳಂತೆ ಗೋತ್ವಾದಿಗಳೂ ಪ್ರತ್ಯೇಕ ವಿಶ್ರಾಂತಧರ್ಮಗಳು. ಗೋವುಗಳಲ್ಲಿ ಒಂದರ ಸಾದೃಶ್ಯ ಇನ್ನೊಂದಕ್ಕೆ ಇರುವುದರಿಂದಾಗಿ 'ಇಯಂ ಗೌಃ' ಎಂಬ ಒಂದೇ ಹೆಸರನ್ನು (ಅನುಗತವ್ಯವಹಾರವನ್ನು) ಹೇಳಲಾಗುವುದು.

ಪ್ರಾಭಾಕರ ಮೀಮಾಂಸಕರು ಗೋತ್ವದಂತೆ ರೂಪಾದಿಧರ್ಮಗಳೂ ಅನುಗತ ಎನ್ನುತ್ತಾರೆ. ಅದೂ ಸರಿಯಲ್ಲ. ಹಿಮವೂ ಬಿಳಿ, ಹಿಮಾಂಶುವೂ (ಚಂದ್ರನೂ) ಬಿಳಿ. ಅಂದಮಾತ್ರಕ್ಕೆ ಅವೆರಡರಲ್ಲೂ ಇರುವ ಬಿಳಿಬಣ್ಣ ಒಂದಲ್ಲ. ಆದರೂ ಒಂದೇ ರೀತಿ. ಅವೆರಡು ಬಣ್ಣಗಳಿಗೆ ಸಾದೃಶ್ಯಮಾತ್ರ ಇದೆ, ಐಕ್ಯ ಇಲ್ಲ.

**ಅತಃ ಸರ್ವೇ (ರ್ವ) ಪದಾರ್ಥಾಶ್ಚ ಸಾಮಾನ್ಯಾತ್ ಸಾಕ್ಷಿಗೋಚರಾಃ ।**
**ಸರ್ವಮಿತ್ಯೇವ ವಿಜ್ಞಾನಂ ಸರ್ವೇಷಾಂ ಕಥಮನ್ಯಥಾ ॥ ೭೮ ॥**

ಅತಃ=ಗೋತ್ವಾದಿಜಾತಿಗಳು ಅಪ್ರಾಮಾಣಿಕಗಳಾದುದರಿಂದ, ಗವಾದಿ ವ್ಯಕ್ತಿಗಳೇ ಶಬ್ದವಾಚ್ಯಗಳಾಗಬೇಕಾದುದರಿಂದ, ಅತೀತಾನಾಗತಾದಿ ಸರ್ವ ಗೋವುಗಳಲ್ಲೂ ಗೋಶಬ್ದವಾಚ್ಯತ್ವಜ್ಞಾನವು ಬರಬೇಕಾದುದರಿಂದ ಸರ್ವೇ ಪದಾರ್ಥಾಃ=ಎಲ್ಲ ವಸ್ತುಗಳೂ ಸಾಮಾನ್ಯಾತ್=ವಿಶೇಷರೂಪದಿಂದ ಅಲ್ಲವಾದರೂ ಸಾಮಾನ್ಯತಃ ಸಾಕ್ಷಿಗೋಚರಾಃ=ಸಾಕ್ಷಿಗೆ ವಿಷಯವಾಗಿವೆ. ಅನ್ಯಥಾ=ಇಲ್ಲದಿದ್ದರೆ ಸರ್ವೇಷಾಂ=ಎಲ್ಲರಿಗೂ ಸರ್ವಮಿತ್ಯೇವ ವಿಜ್ಞಾನಂ= 'ಸರ್ವ' ಎಂಬ ಜ್ಞಾನವು ಕಥಂ=ಹೇಗೆ ಬರಬೇಕು?

ಭಾವಾರ್ಥ— ಗೋತ್ವಾದಿ ಅನುಗತಜಾತಿಗಳು ಇಲ್ಲ. ಆದ್ದರಿಂದ ಜಾತಿಯು ಶಬ್ದವಾಚ್ಯವಲ್ಲ. ವ್ಯಕ್ತಿಯೇ ಶಬ್ದವಾಚ್ಯ. ವ್ಯಕ್ತಿಯು ವಾಚ್ಯವೆಂದು ತಿಳಿಯಬೇಕಾದರೆ ವ್ಯಕ್ತಿಯ ತಿಳುವಳಿಕೆ ಬೇಕು. ಅತೀತನಾಗತ ಸರ್ವವ್ಯಕ್ತಿಗಳ ಜ್ಞಾನವು ಸಾಕ್ಷಿಯ ಹೊರತಾಗಿ ಬೇರೆ ಇಂದ್ರಿಯಗಳಿಂದ ಬರಲಾರದು. ಆದ್ದರಿಂದ ಕಾಲತ್ರಯಗಳೂ ಸಾಕ್ಷಿವೇದ್ಯವಾಗಿವೆ. ಅಷ್ಟೇ ಅಲ್ಲ, ''ಸರ್ವಂ= ಎಲ್ಲ'' ಎಂಬ ಜ್ಞಾನವು ಎಲ್ಲರಿಗೂ ಇದೆ. ಆದರೆ, ಎಲ್ಲವನ್ನೂ ವ್ಯಕ್ತಿಶಃ ಎಲ್ಲರೂ ತಿಳಿಯಲಾರರು. ಆದ್ದರಿಂದ ಎಲ್ಲದರ ಸಾಮಾನ್ಯಜ್ಞಾನ ಎಲ್ಲರಿಗೂ ಬರಬೇಕಾದರೆ ಸಾಕ್ಷಿಯಿಂದಲೇ ಬರಬೇಕು.

**ಕಿಂಚಿತ್ಸಾದೃಶ್ಯವಿಜ್ಞಾನಾದಖಿಲಸ್ಯಾಪಿ ವಸ್ತುನಃ ।**
**ಶಬ್ದಶಕ್ತಿಗ್ರಹಶ್ಚ ಸ್ಯಾತ್ ತತ್ತತ್ಸಾದೃಶ್ಯಮಾನತಃ ॥ ೭೯ ॥**

ಅಖಿಲಸ್ಯಾಪಿ ವಸ್ತುನಃ=ಎಲ್ಲ ವಸ್ತುಗಳಿಗೂ ಕಿಂಚಿತ್ ಸಾದೃಶ್ಯ ವಿಜ್ಞಾನಾತ್=ಅಲ್ಪಸಾದೃಶ್ಯದ ಜ್ಞಾನದಿಂದಾಗಿ ಶಬ್ದಶಕ್ತಿಗ್ರಹಶ್ಚ ಸ್ಯಾತ್= ಶಬ್ದಗಳ ಶಕ್ತಿಜ್ಞಾನವು ಬರುತ್ತದೆ. ತತ್ತತ್ಸಾದೃಶ್ಯಮಾನತಃ=ಗವಯಾದಿಗಳಲ್ಲಿ ಇಲ್ಲದ, ಗೋವುಗಳಲ್ಲಿ ಮಾತ್ರವೇ ಇರುವ ಸಾದೃಶ್ಯವಿಶೇಷದ ಜ್ಞಾನದಿಂದಲೇ ಶಕ್ತಿಗ್ರಹಶ್ಚಸ್ಯಾತ್=ಗೋಶಬ್ದದ ಶಕ್ತಿಯು ತಿಳಿಯುತ್ತದೆ.

ಭಾವಾರ್ಥ— ಅನುಗತವಾದ ಜಾತಿಯು ಇಲ್ಲದೇ ಹೋದರೆ ವ್ಯಕ್ತಿಗಳಲ್ಲೇ ಗವಾದಿಶಬ್ದಗಳಿಗೆ ಶಕ್ತಿ ಎಂದು ಹೇಳಬೇಕಾಗುತ್ತದೆ. ಗೋವ್ಯಕ್ತಿ ಗಳು ಅನಂತ ಇವೆ. ಅವೆಲ್ಲವುಗಳಲ್ಲಿ ಶಕ್ತಿಜ್ಞಾನ ಬರಲು ಸಾಧ್ಯವಿಲ್ಲ.

ಹೀಗಿದ್ದಮೇಲೆ ಶಕ್ತಿಗ್ರಹಾನ್ಯಥಾನುಪಪತ್ತ್ಯಾ ಸಾಕ್ಷಿಗೆ ಅತೀತಾದಿಕಾಲ ವಿಷಯತ್ವವು ಸಿದ್ಧವಾಗುವುದು ಹೇಗೆ?

ಈ ಆಕ್ಷೇಪಕ್ಕೆ ಇದು ಸಮಾಧಾನ— ಗೋತ್ವಜಾತಿ ಇಲ್ಲದಿದ್ದರೂ ಗೋವುಗಳಲ್ಲಿ ಸಾದೃಶ್ಯವಿದೆ. ಗವಯಾದಿಪ್ರಾಣಿಗಳಲ್ಲಿ ಇಲ್ಲದ ಅಂತಹ ಸಾದೃಶ್ಯವಿಶೇಷದ ಜ್ಞಾನದಿಂದ ಸಕಲಗೋವುಗಳಲ್ಲೂ ಗೋಶಬ್ದದ ಶಕ್ತಿಜ್ಞಾನ ಬರುತ್ತದೆ. ಮಕ್ಕಳಿಗೆ ಹಿರಿಯರು ಗೋವನ್ನು ತೋರಿಸಿ ''ಇದು ಹಸು'' ಎಂದು ಹೇಳಿದ ಮೇಲೆ ಮಕ್ಕಳು ಮುಂದೆ ತಾವು ನೋಡಿದ ಹಸುವಿನ ಸಾದೃಶ್ಯವನ್ನು ಇತರ ಹಸುಗಳಲ್ಲಿ ಕಂಡು 'ಹಸು' ಎಂಬ ಶಬ್ದವನ್ನು ತಾವೇ ಪ್ರಯೋಗ ಮಾಡುತ್ತವೆ. 'ಇದು ಹಸು' ಎಂದು ಹಿರಿಯರು ಹೇಳಿದಾಗ 'ಇದು ಮತ್ತು ಇದರಂತಿರುವ ಪ್ರಾಣಿಗಳು ಹಸುಗಳು' ಎಂದು ತಿಳಿಯುತ್ತವೆ. ಮೊದಮೊದಲು ಹಸುವಿನಂತಿರುವ ಗವಯವನ್ನೂ ಇದು ಹಸು ಎಂದು ಕರೆದರೆ 'ಅವು ಹಸುವಲ್ಲ, ಈ ಗುಣಧರ್ಮಗಳಿದ್ದರೆ ಮಾತ್ರ ಹಸು' ಎಂದು ಬಲ್ಲವರು ಹೇಳಿದಮೇಲೆ ಸಾದೃಶ್ಯವಿಶೇಷವನ್ನು ತಿಳಿದು ಹಸು ಎಂಬ ಹೆಸರನ್ನು ಉಪಯೋಗಿಸುತ್ತವೆ. ಆದ್ದರಿಂದ ಶಕ್ತಿಜ್ಞಾನಕ್ಕೆ ಜಾತಿಯ ಅಗತ್ಯವಿಲ್ಲ.

**ಪ್ರತ್ಯಕ್ಷಂ ಮಾನಸಂ ಚೈವ ಯದಾಽತೀತಾರ್ಥಗೋಚರಮ್ ।**
**ತದಾ ಸ್ಮೃತಿಪ್ರಮಾಣತ್ವಮತೀತತತ್ವವಿಶೇಷಿತಮ್ ।**
**ಆಧಿಕ್ಯಮನುಭೂತಾತ್ತು ಯದಾತೀತತ್ವಮಿಷ್ಯತೇ ॥ ೮೦ ॥**

**ಮಾನತಾ ಚ ಕಥಂ ನ ಸ್ಯಾತ್ ಸ್ಮೃತೇರ್ಬಾಧಶ್ಚ ನಾತ್ರ ಹಿ ।**
**ಮಾನತ್ವಂ ಪ್ರತ್ಯಭಿಜ್ಞಾಯಾ ಅಪಿ ಸರ್ವಾನುಭೂತಿಗಮ್ ॥ ೮೧ ॥**

**ಅತೀತವರ್ತಮಾನತ್ವಧರ್ಮಿಣೀ ಸಾ ಚ ದೃಶ್ಯತೇ ।**
**ನಚ ಸಾ ಸ್ಮೃತಿಮಾತ್ರಾರ್ಥಾ ತದಿದಂತ್ವಗ್ರಹೈಕತಃ ।**
**ಅತೋ ನ ವರ್ತಮಾನೈಕನಿಯಮಃ ಸ್ಯಾದ್ ಗ್ರಹೇಽಕ್ಷಜೇ ॥ ೮೨ ॥**

ಸಾಕ್ಷಿಪ್ರತ್ಯಕ್ಷಮಾತ್ರವಲ್ಲದೆ ಮಾನಸಂ ಪ್ರತ್ಯಕ್ಷಂ ಚ=ಮನೋರೂಪ ವಾದ ಪ್ರತ್ಯಕ್ಷವೂ ಅತೀತಾರ್ಥಗೋಚರಂ=ಭೂತಕಾಲಿಕಪದಾರ್ಥವನ್ನು

ವಿಷಯೀಕರಿಸುತ್ತದೆ. ಯದಾ=ಯಾವ ಕಾರಣದಿಂದ ಅತೀತತ್ವವಿಶೇಷಿತಂ= ಭೂತಕಾಲವಿಶಿಷ್ಟವಾದ ವಸ್ತುವನ್ನು ಸ್ಮರಣೆಯು ವಿಷಯೀಕರಿಸುವುದೋ ತದಾ=ಆ ಕಾರಣದಿಂದ ಸ್ಮೃತಿಪ್ರಮಾಣತ್ವಂ(ಸಿದ್ಧಂ)=ಸ್ಮೃತಿಗೂ ಪ್ರಾಮಾಣ್ಯವು ಸಿದ್ಧವಾಗುತ್ತದೆ. ಯದಾ=ಯಾವ ಕಾರಣದಿಂದ ಅನುಭೂತಾತ್=ಅನುಭವಕ್ಕೆ ವಿಷಯವಾದುದಕ್ಕಿಂತಲೂ ಅತೀತತ್ವಂ=ಭೂತ ಕಾಲೀನತ್ವವು ಆಧಿಕ್ಯಂ=ಅಧಿಕವಾದುದು ಇಷ್ಯತೇ=ಸ್ಮೃತಿವಿಷಯವಾಗಿ ಅಂಗೀಕರಿಸಲ್ಪಟ್ಟಿದೆಯೋ ಆದಕಾರಣ ಸ್ಮೃತೇಃ=ಸ್ಮೃತಿಗೂ ಮಾನತಾ= ಪ್ರಾಮಾಣ್ಯವು ಕಥಂ ನ=ಯಾಕಿಲ್ಲ? ಅತ್ರ=ಸ್ಮೃತಿಗೃಹೀತವಾದ ವಿಷಯದಲ್ಲಿ ಬಾಧಶ್ಚ ನ=ಪ್ರಮಾಣಾಂತರ ಬಾಧವೂ ಇಲ್ಲ.

ಪ್ರತ್ಯಭಿಜ್ಞಾಯಾ ಅಪಿ=ಪ್ರತ್ಯಭಿಜ್ಞಾಪ್ರತ್ಯಕ್ಷಕ್ಕೂ ಮಾನತ್ವಂ= ಪ್ರಾಮಾಣ್ಯವು ಸರ್ವಾನುಭೂತಿಗಂ=ಎಲ್ಲರ ಅನುಭವಸಿದ್ಧವಾಗಿದೆ. ಸಾಚ= ಆ ಪ್ರತ್ಯಭಿಜ್ಞೆಯಾದರೋ ಅತೀತ–ವರ್ತಮಾನತ್ವಧರ್ಮಿಣೀ=ಅತೀತಕಾಲ ಮತ್ತು ವರ್ತಮಾನಕಾಲವಿಶಿಷ್ಟವಾದ ಧರ್ಮಿವಿಷಯಕವಾಗಿ ದೃಶ್ಯತೇ= ಸಾಕ್ಷಿಪ್ರಮಿತವಾಗಿದೆ. ಸಾ=ಈ ಪ್ರತ್ಯಭಿಜ್ಞೆಯು ಸ್ಮೃತಿ ಮಾತ್ರಾರ್ಥಾ ನ= ಸ್ಮರಣೆ ಅನುಭವ ಎಂಬ ವಿಭಾಗ ಇಲ್ಲದ್ದು. ಏಕೆಂದರೆ ತದಿದಂತ್ವಗ್ರಾಹ್ಯೈಕತಃ= ಸೋಽಯಂ ಘಟಃ, ಎಂಬ ಪ್ರತ್ಯಭಿಜ್ಞೆಯ ತತ್ತಾಜ್ಞಾನ ಮತ್ತು ಇದಂತಾಜ್ಞಾನ ಎರಡೂ ಅಖಂಡವಾಗಿವೆ, ಎಂಬ ಅನುಭವ ಇದೆಯಾದುದರಿಂದ.

ಅತಃ=ಆದ್ದರಿಂದ ಅಕ್ಷಜೇ ಗ್ರಹೇ=ಪ್ರತ್ಯಕ್ಷದಲ್ಲೂ ವರ್ತಮಾನೈಕ ನಿಯಮಃ=ವರ್ತಮಾನವಾದ ಅರ್ಥವನ್ನು ಮಾತ್ರ ಗ್ರಹಿಸುತ್ತದೆ, ಎಂಬ ನಿಯಮವು ನ ಸ್ಯಾತ್=ಇಲ್ಲ.

**ಭಾವಾರ್ಥ—** ಈವರೆಗೆ ಸಾಕ್ಷಿಪ್ರತ್ಯಕ್ಷವು ವರ್ತಮಾನಮಾತ್ರ ವಿಷಯಕವಲ್ಲ ಎಂದು ಹೇಳಿ ಇಲ್ಲಿ ಮಾನಸಪ್ರತ್ಯಕ್ಷ ಮತ್ತು ಚಾಕ್ಷುಷ ಪ್ರತ್ಯಕ್ಷಗಳೂ ವರ್ತಮಾನ ಮಾತ್ರವಿಷಯಕಗಳಲ್ಲ ಎಂದು ಹೇಳಲಾಗಿದೆ.

ಮನಸ್ಸಿನಿಂದ 'ಸಃ ಘಟಃ' ಎಂದು ಸ್ಮರಣೆಬರುತ್ತದೆ. ಸಃ ಎಂದರೆ ಅದು, ಅಂದು ನೋಡಿದ, ಎಂದು ಅರ್ಥ. ಹೀಗೆ ಸ್ಮೃತಿಯು ಭೂತಕಾಲ ವಿಶಿಷ್ಟವಾದ ವಸ್ತುವನ್ನು ಗ್ರಹಿಸುತ್ತದೆ. ಆ ವಸ್ತು ತತ್ಕಾಲದಲ್ಲಿ ಇತ್ತು. ಇದ್ದವಸ್ತುವನ್ನೇ

ಗ್ರಹಿಸಿರುವುದರಿಂದ ಆ ಸ್ಮೃತಿಯು ಪ್ರಮಾಣವೂ ಆಗಿದೆ. ಅಷ್ಟೇ ಅಲ್ಲ, ಅನುಭವದಲ್ಲಿ ಕಾಣದ 'ಅತೀತತ್ವವನ್ನು' ಸ್ಮೃತಿಯು ತಾನೇ ಗ್ರಹಿಸಿದೆ. ಅನುಭವ 'ಅಯಂ ಘಟಃ' ಎಂದು ಕಾಲದಲ್ಲಿ ವರ್ತಮಾನತ್ವವನ್ನು ಗ್ರಹಿಸಿದರೆ ಸ್ಮೃತಿಯು ಅದೇ ಘಟವನ್ನು 'ಸಃ' ಎಂದು ಗ್ರಹಿಸುತ್ತದೆ. ಅನುಭವ ಗ್ರಹಿಸಿದ ಕಾಲ ಭೂತಕಾಲ ಎನ್ನುತ್ತದೆ ಸ್ಮೃತಿ. ಈ ಅಂಶ ಅನುಭವದಲ್ಲಿ ಕಂಡಿಲ್ಲ. ಹೀಗೆ ಅನಧಿಗತಾರ್ಥವಿಷಯಕತ್ವವೂ ಸ್ಮೃತಿಯಲ್ಲಿ ಇದೆ. ಸ್ಮೃತಿ ಗ್ರಹಿಸಿರುವ ಯಾವ ವಿಷಯಗಳಿಗೂ ಬಾಧ ಇಲ್ಲ. ಅಂದಮೇಲೆ ಸ್ಮೃತಿಯು ಪ್ರಮಾ ಎಂದೇ ಸಿದ್ಧವಾಗುತ್ತದೆ. ಆದ್ದರಿಂದ ಮಾನಸಪ್ರತ್ಯಕ್ಷವು ಅತೀತಕಾಲ ವಿಷಯಕವಾಗಿದೆ.

ಚಾಕ್ಷುಷಪ್ರತ್ಯಕ್ಷವೂ ಕೆಲವೊಮ್ಮೆ ಭೂತಕಾಲವನ್ನು ಗ್ರಹಿಸುತ್ತದೆ. ಉದಾಹರಣೆಗೆ ಪ್ರತ್ಯಭಿಜ್ಞಾ. ಸೋಽಯಂ ಘಟಃ–ನಿನ್ನೆಯ ಘಟವೇ ಇದು. ಈ ಜ್ಞಾನ ಕಣ್ಣಿನಿಂದ ಬರುತ್ತದೆ. ಇಲ್ಲಿ ಸಃ ಎನ್ನುವ ಮೂಲಕ ಘಟದಲ್ಲಿ ಭೂತಕಾಲದ ಸಂಬಂಧವು ಕಾಣುತ್ತದೆ. ಈ ಜ್ಞಾನವು ಸಃ ಎಂಬ ಅಂಶದಲ್ಲಿ ಸ್ಮರಣಾತ್ಮಕ, 'ಅಯಂ ಘಟಃ' ಎನ್ನುವ ಅಂಶದಲ್ಲಿ ಅನುಭವಾತ್ಮಕ, ಹೀಗೆ ಜ್ಞಾನದ್ವಯ ರೂಪವಾಗಿದೆ, ಎನ್ನಬಾರದು. ಅದು ಅಖಂಡವಾದ ಒಂದೇ ಜ್ಞಾನ. ಅತೀತಘಟಕ್ಕೂ ವರ್ತಮಾನಘಟಕ್ಕೂ ಅಭೇದವನ್ನು ಅದು ತಿಳಿಸಬೇಕಾದರೆ ಅದನ್ನು ಅಖಂಡಜ್ಞಾನವೆಂದು ಹೇಳಲೇಬೇಕಾಗುತ್ತದೆ. ಸಂಸ್ಕಾರಸಹಕೃತವಾದ ಚಕ್ಷುರಿಂದ್ರಿಯದಿಂದ ಇಂತಹ ಅಖಂಡ ಪ್ರತ್ಯಭಿಜ್ಞೆಯು ಹುಟ್ಟುತ್ತದೆ. ಆ ಪ್ರತ್ಯಭಿಜ್ಞೆಯಲ್ಲಿ ಭೂತಕಾಲವೂ ವಿಷಯ.

ಹೀಗೆ ಸಾಕ್ಷಿಪ್ರತ್ಯಕ್ಷ, ಮಾನಸಪ್ರತ್ಯಕ್ಷ ಹಾಗೂ ಚಾಕ್ಷುಷಪ್ರತ್ಯಕ್ಷಗಳು ಭೂತಾದಿಕಾಲಗಳನ್ನೂ ಗ್ರಹಿಸುತ್ತವೆ. ಆದ್ದರಿಂದ ಪ್ರತ್ಯಕ್ಷವು ವರ್ತಮಾನ ಮಾತ್ರಾವಗಾಹಿ ಎಂಬ ನಿಯಮ ಇಲ್ಲ.

### ಪ್ರಮಾವೂ ಪ್ರಮಾಣವೇ

**ನಚ ಪ್ರಮಾಣತೋಽನ್ಯಾ ಸ್ಯಾತ್ ಪ್ರಮಿತಿರ್ನಾಮ ಕುತ್ರಚಿತ್ ।**
**ಮಾನಾಭಾವಾದ್ ಗೌರವಾಚ್ಚ ಕಲ್ಪನಾಯಾಃ ಕಿಮೇತಯಾ ॥ ೮೩ ॥**

ಕುತ್ರಚಿತ್=ಅತೀತ, ಅನಾಗತ, ವರ್ತಮಾನ ಈ ಯಾವ ವಿಷಯ ಗಳಲ್ಲೂ ಪ್ರಮಾಣತಃ ಅನ್ಯಾ=ಪ್ರಮಾಣದ ಹೊರತಾಗಿ ಪ್ರಮಿತಿಃ ನಾಮ= ಪ್ರಮಿತಿ ಎಂಬ ಹೊಸ ತತ್ತ್ವವು ನ ಸ್ಯಾತ್=ಇರಲಾರದು. ಮಾನಾಭಾವಾತ್= ಪ್ರಮಾಣಾತಿರಿಕ್ತವಾದ ಪ್ರಮಿತಿಯು ಇದೆ ಎನ್ನುವುದಕ್ಕೆ ಪ್ರಮಾಣವಿಲ್ಲ ವಾದುದರಿಂದ ಕಲ್ಪನಾಯಾಃ ಗೌರವಾಚ್ಚ=ಕಲ್ಪನಾಗೌರವ ಇರುವುದ ರಿಂದಲೂ ಏತಯಾ ಕಿಂ=ಇಂತಹ ಪ್ರಮಿತಿಯ ಅಗತ್ಯವೇನು?

**ಭಾವಾರ್ಥ**— ಹಿಂದೆ (ಪು.77) ಈ ಪ್ರಪಂಚವನ್ನು ಪ್ರಮಾಣ–ಪ್ರಮೇಯ–ಪ್ರಮಾತೃ ಎಂದು ಮೂರು ವರ್ಗಗಳಲ್ಲಿ ವಿಂಗಡಿಸಲಾಗಿದೆ. ಈ ಮೂರರಲ್ಲಿ ಸೇರದ 'ಪ್ರಮಾ' ಎಂಬ ನಾಲ್ಕನೆಯ ವರ್ಗವಿದೆ, ಎನ್ನುವ ಆಕ್ಷೇಪಕ್ಕೆ ಇಲ್ಲಿ ಸಮಾಧಾನವನ್ನು ಹೇಳಲಾಗಿದೆ— ಪ್ರಮಾ ಪ್ರಮಾಣದಲ್ಲೇ ಸೇರುತ್ತದೆ. ಯಥಾರ್ಥಂ ಪ್ರಮಾಣಂ–ಯಥಾವಸ್ಥಿತವಾದ ಅರ್ಥವನ್ನು ವಿಷಯೀಕರಿಸುವಂತಹುದು ಪ್ರಮಾಣ. ಜ್ಞಾನ ಮತ್ತು ಇಂದ್ರಿಯ ಇವೆರಡೂ ಅಂತಹ ಅರ್ಥವನ್ನು ವಿಷಯೀಕರಿಸುತ್ತದೆ. ಆದ್ದರಿಂದ ಅವೆರಡು ಪ್ರಮಾಣದಲ್ಲೇ ಸೇರುತ್ತವೆ. ಪ್ರಮಾಣವಲ್ಲದ ಪ್ರಮಾ ಎಂಬ ಇನ್ನೊಂದು ವರ್ಗವೇ ಇಲ್ಲ.

ಮೀಮಾಂಸಕರು 'ಜ್ಞಾತತಾ' ಎಂಬ ವಿಷಯಗತವಾದ ಒಂದು ಅತಿಶಯವಿಶೇಷವನ್ನು ಅಂಗೀಕರಿಸುತ್ತಾರೆ. ಆದರೆ, ಈಗಾಗಲೇ ನಾಶ ಹೊಂದಿರುವ ವಸ್ತುಗಳ ಜ್ಞಾನಬಂದರೆ ಅದರಲ್ಲಿ ಜ್ಞಾತತಾ ಹುಟ್ಟುವುದಿಲ್ಲ. ಅಲ್ಲಿ ಜ್ಞಾತತಾ ಇಲ್ಲದೆಯೂ ಜ್ಞಾನಮಾತ್ರದಿಂದ ವ್ಯವಹಾರವು ನಡೆಯುವು ದಾದಲ್ಲಿ ವರ್ತಮಾನವಸ್ತುಗಳ ಜ್ಞಾನ ಬಂದಾಗಲೂ ಜ್ಞಾತತಾಧರ್ಮದ ಅಗತ್ಯವೇನು?

**ಮಯ್ಯೈತಜ್ಜ್ಞಾತಮಿತಿ ತು ಸಾಕ್ಷಿಗಂ ಜ್ಞಾನಗೋಚರಮ್ ।**
**ಜ್ಞಾನಮೇವ ತತೋಽನ್ಯಾ ನ ಪ್ರಮಿತಿರ್ನಾಮ ದೃಶ್ಯತೇ ॥ ೮೪ ॥**

ಮಯಾ ಏತತ್ ಜ್ಞಾತಮ್, ಇತಿ ತು=ನನ್ನಿಂದ ಇದು ತಿಳಿಯಲ್ಪಟ್ಟಿದೆ, ಎಂದು ಸಾಕ್ಷಿಗಂ=ಸಾಕ್ಷಿಯಿಂದ ಬರುವ ಜ್ಞಾನಗೋಚರಂ=ಘಟಾದಿಜ್ಞಾನ ವಿಷಯಕವಾದ ಜ್ಞಾನಮೇವ=ಜ್ಞಾನವೇ ಆಗಿದೆ. ತತಃ ಅನ್ಯಾ=ಜ್ಞಾನಕ್ಕಿಂತ

ಭಿನ್ನವಾದ ಪ್ರಮಿತಿಃ ನಾಮ=ಜ್ಞಾತತಾ ಎಂಬುದು ನ ದೃಶ್ಯತೇ= ಕಾಣಲ್ಪಡುವುದಿಲ್ಲ.

**ಭಾವಾರ್ಥ—** 'ಜ್ಞಾತಃ ಘಟಃ' ಎಂದು ನಮಗೆ ಅನುಭವ ಇದೆ. ಈ ಅನುಭವದಲ್ಲಿ ಘಟವು ಮಾತ್ರ ವಿಷಯವಲ್ಲ, ಜ್ಞಾತತಾವಿಶಿಷ್ಟವಾದ ಘಟವು ವಿಷಯ. ಹೀಗೆ ಈ ಅನುಭವದಿಂದ ಜ್ಞಾತತಾ, ಎಂಬ ಧರ್ಮವು ಸಿದ್ಧವಾಗುತ್ತದೆ, ಎಂದು ಮೀಮಾಂಸಕರ ವಾದ. ಈ ವಾದ ಸರಿಯಲ್ಲ. ಜ್ಞಾನವು ಒಂದು ಕ್ರಿಯೆ. ಅದು ಕೆಲವೊಮ್ಮೆ ಕರ್ತೃಪ್ರಧಾನವಾಗಿ ತಿಳಿಯಲ್ಪಡುತ್ತದೆ— ರಾಮಃ ಘಟಂ ಜಾನಾತಿ, ಎಂದು. ಕೆಲವೊಮ್ಮೆ ಕರ್ಮ ಪ್ರಧಾನವಾಗಿ ತಿಳಿಯಲ್ಪಡುತ್ತದೆ. 'ಘಟಃ ಜ್ಞಾತಃ'. ಕೆಲವೊಮ್ಮೆ ಅದೇ ಪ್ರಧಾನವಾಗಿ ತೋರುತ್ತದೆ. ಇದು ಘಟಜ್ಞಾನ, ಎಂದು. 'ಜ್ಞಾತಃ ಘಟಃ' ಎನ್ನುವುದು ಜ್ಞಾನದ ಜ್ಞಾನ. ಅದು ಸಾಕ್ಷಿಯಿಂದ ಬರುವ ಜ್ಞಾನ. ಆ ಜ್ಞಾನದಲ್ಲಿ ವೃತ್ತಿರೂಪವಾದ ಜ್ಞಾನವಿಶಿಷ್ಟವಾದ ಘಟವು ವಿಷಯ. ಜ್ಞಾತಃ ಎಂದರೆ ವಿಷಯತಾ ಸಂಬಂಧೇನ ಜ್ಞಾನವಿಶಿಷ್ಟ, ಎಂದರ್ಥ. ಹೀಗೆ ಆ ಜ್ಞಾನದಲ್ಲಿ ಜ್ಞಾನವೇ ತೋರುತ್ತದೆ, ಜ್ಞಾತತಾ ತೋರುವುದಿಲ್ಲ. ಆದ್ದರಿಂದ ಜ್ಞಾನಾತಿರಿಕ್ತವಾದ, ಜ್ಞಾತತಾವಿಷಯಕವಾದ ಒಂದು ಅನುಭವವೇ ಇಲ್ಲ. ಜ್ಞಾತತಾ ಅಪ್ರಾಮಾಣಿಕ.

**ಮಾನಮಾತೃಪ್ರಮೇಯಾಣಾಂ ತದುಚ್ಛಿತ್ತಿರ್ನಹಿ ಕ್ವಚಿತ್ ।**

ತತ್=ಆದ್ದರಿಂದ ಮಾನ–ಮಾತೃ–ಪ್ರಮೇಯಾಣಾಂ=ಪ್ರಮಾಣ, ಪ್ರಮಾತೃ–ಪ್ರಮೇಯಗಳಿಗೆ ಕ್ವಚಿತ್=ಎಂದೂ ಉಚ್ಛಿತ್ತಿಃ=ಬಾಧವು ನಹಿ= ಇಲ್ಲ.

**ಭಾವಾರ್ಥ—** ಪ್ರಮಾಣಾದಿ ತ್ರಯಗಳು ಈಶ ಜ್ಞಾನಕ್ಕೆ ವಿಷಯ ಗಳಾಗಿವೆ, ಅವುಗಳಿಗೆ ಬಾಧವೂ ಇಲ್ಲ. ಆದ್ದರಿಂದ ಅವೆಲ್ಲವೂ ಸತ್ಯವಾಗಿವೆ. ಮಿಥ್ಯಾಗಳಲ್ಲ.

**ಸ್ವಾಪ್ನಪದಾರ್ಥ ಸತ್ಯ**

**ಸ್ವಾಪ್ನಾನಾಮಪಿ ಚೈತೇಷಾಂ ನ ಬಾಧೋ ದೃಶ್ಯತೇ ಕ್ವಚಿತ್ ॥ ೮೫ ॥**

**ಜಾಗ್ರತ್ವಮಾತ್ರಮತ್ರೈಕಮನ್ಯಥಾ ದೃಶ್ಯತೇ ಸ್ಫುಟಮ್ ।**
**ಅತೋ ಮಿಥ್ಯಾ ನಚ ಸ್ವಪ್ನೋ ಜಾಗ್ರದ್ವಜ್ಜಾಗ್ರದೇವ ಚ ॥ ೮೬ ॥**

**ಆತ್ಮವತ್, ಕ್ವಚಿದಾತ್ಮಾ ಚ ಸ್ಯಾದೇವ ಭ್ರಮಗೋಚರಃ ।**
**ಏತಾವತಾ ನ ಮಿಥ್ಯಾಽಸೌ ಸ್ವಪ್ನೇ ಜಾಗರಿತೇ ತಥಾ ॥ ೮೭ ॥**

ಚ=ಯಾವ ಕಾರಣದಿಂದ ಸ್ವಾಪ್ನಾನಾಮಪಿ=ಸ್ವಪ್ನದೃಷ್ಟವಾದ ಏತೇಷಾಂ=ಪ್ರಮಾಣ – ಪ್ರಮೇಯ – ಪ್ರಮಾತೃಗಳಿಗೆ ಕ್ವಚಿತ್ = ಎಂದೂ ಬಾಧಃ=ಬಾಧವು ನ ದೃಶ್ಯತೇ=ಕಾಣಲ್ಪಡುವುದಿಲ್ಲ. (ಅತಃ ಸ್ವಾಪ್ನಃ ಮಿಥ್ಯಾ ನೈವ=ಆದ್ದರಿಂದ ಸ್ವಾಪ್ನವಸ್ತುಗಳೂ ಸುಳ್ಳಲ್ಲ.)

ಅತ್ರ=ಸ್ವಪ್ನದಲ್ಲಿ ಏಕಂ ಜಾಗ್ರತ್ವಮಾತ್ರಂ=ಜಾಗ್ರದ್ವಸ್ತುವಿನ ಅಭೇದಾದಿಗಳು ಮಾತ್ರ ಸ್ಫುಟಂ=ಸ್ಪಷ್ಟವಾಗಿ ಅನ್ಯಥಾ=ಅವಿದ್ಯಮಾನವಾಗಿ ದೃಶ್ಯತೇ=ಕಾಣಲ್ಪಡುತ್ತವೆ. ಆದ್ದರಿಂದ ಅದು ಮಾತ್ರ ಅಸತ್ಯ. ಅತಃ=ಆದ್ದರಿಂದ ಜಾಗ್ರದ್ವತ್=ಎಚ್ಚರದಲ್ಲಿ ಕಾಣುವ ವಸ್ತುಗಳು ಹೇಗೆ ಮಿಥ್ಯಾ ಅಲ್ಲವೋ ಅದರಂತೆಯೇ ಸ್ವಪ್ನಃ=ಸ್ವಪ್ನವೂ ನ ಮಿಥ್ಯಾ=ಸುಳ್ಳಲ್ಲ. ಜಾಗ್ರದೇವ ಚ=ಜಾಗ್ರತ್‌ಕಾಲೀನ ವಸ್ತು ಮತ್ತು ಸ್ವಪ್ನವು ಆತ್ಮವತ್=ಆತ್ಮನಂತೆ ನೈವ ಮಿಥ್ಯಾ=ಸುಳ್ಳಲ್ಲ. ಕ್ವಚಿತ್=ಕೆಲವೊಮ್ಮೆ ಆತ್ಮಾ=ಆತ್ಮನೂ ಭ್ರಮಗೋಚರಃ=ಕ್ಷಣಿಕತ್ವಭ್ರಮೆಗೆ ವಿಷಯನಾಗಿ ಸ್ಯಾದೇವ=ಆಗಿಯೇ ಆಗುತ್ತಾನೆ. ಏತಾವತಾ=ಇಷ್ಟುಮಾತ್ರದಿಂದ ಅಸೌ=ಆತ್ಮನು ಸ್ವಪ್ನೇ=ಸ್ವಪ್ನದಲ್ಲಾಗಲೀ ತಥಾ=ಹಾಗೆಯೇ ಜಾಗರಿತೇ=ಎಚ್ಚರದಲ್ಲಾಗಲೀ ನ ಮಿಥ್ಯಾ=ಸುಳ್ಳಲ್ಲ.

**ಭಾವಾರ್ಥ**— ಈಶಾದಿಪ್ರತ್ಯಕ್ಷಸಿದ್ಧವಾದ ಜಾಗ್ರತ್‌ಪ್ರಪಂಚವು ಹೇಗೆ ಸತ್ಯವೋ ಸ್ವಾಪ್ನವಸ್ತುಗಳಿಗೂ ಬಾಧವು ಇಲ್ಲದಿರುವುದರಿಂದ ಅವುಗಳೂ ಸತ್ಯಗಳು. ಸ್ವಾಪ್ನವಸ್ತುಗಳು ಹೊರಜಗತ್ತಿನಲ್ಲಿ ಇಲ್ಲ ಎನ್ನಬಹುದೇ ಹೊರತು ಸರ್ವಥಾ ಇಲ್ಲ, ಎನ್ನುವ ಬಾಧ ಇಲ್ಲ. ಚಿತ್ರದಲ್ಲಿ ಕಾಣುವ ಆನೆ ನಿಜವಾದ ಆನೆ ಅಲ್ಲದಿದ್ದರೂ ಅದು ಚಿತ್ರರೂಪವಾಗಿಯೂ ಇಲ್ಲ, ಎನ್ನಲಾಗದು. ಆನೆಯ ಚಿತ್ರದಂತೆ ಸ್ವಾಪ್ನವಸ್ತುಗಳು ಸಂಸ್ಕಾರಮಯವಾದ ವಸ್ತುಗಳು. ಅವುಗಳೂ ಸತ್ಯವಾಗಿವೆ. ಆದರೆ ಸ್ವಪ್ನದಲ್ಲಿ ಕಂಡ ಆನೆಯ ಪ್ರತಿಕೃತಿಯನ್ನು ಹೊರಜಗತ್ತಿನ

ಆನೆಯಂತೆ ಎಲುಬು–ಚರ್ಮ–ಮಾಂಸಮಯವೆಂದು ತಿಳಿದರೆ ಅದು ಭ್ರಾಂತಿ. ಇದನ್ನೇ 'ಜಾಗ್ರತ್ತ್ವಂ' ಎಂದು ಕರೆಯಲಾಗುತ್ತದೆ. ಅದು ಬಾಧಿತ ವಾಗಿದೆ. ನಾನು ನೋಡಿದ್ದು ನಿಜವಾದ ಆನೆಯನ್ನಲ್ಲ, ಎನ್ನುವ ಬಾಧ ಇರುವುದರಿಂದ ಆ ಜ್ಞಾನ ಸ್ವಪ್ನದಲ್ಲಿ ಭ್ರಾಂತಿ. ಅದಕ್ಕೆ ವಿಷಯವಾದ ಬಾಹ್ಯವಸ್ತುತಾದಾತ್ಮ್ಯ ಮಾತ್ರ ಮಿಥ್ಯಾ. ತಾದಾತ್ಮ್ಯಭಾನಕ್ಕೆ ಅಧಿಷ್ಠಾನ ವಾದುದು ವಾಸನಾಮಯವಾದ ಸ್ವಾಪ್ನವಸ್ತು. ಅದು ಸತ್ಯ. ರಜತಾರೋಪಕ್ಕೆ ಅಧಿಷ್ಠಾನವಾದ ಶುಕ್ತಿಯಂತೆ. ಜಾಗ್ರತ್‌ಪ್ರಪಂಚದ ಶುಕ್ತಿಯೂ ಸ್ವಾಪ್ನ ಪ್ರಪಂಚದ ವಾಸನಾಮಯವಾದ ವಸ್ತುವೂ ಆತ್ಮನಂತೆ ಸತ್ಯವಾಗಿದೆ. ಭ್ರಮೆ, ಬಾಧಗಳಿಗೆ ಯಥಾಕಥಂಚಿತ್ ವಿಷಯವಾದ ಮಾತ್ರಕ್ಕೆ ಮಿಥ್ಯಾ ಆಗುವುದಾದಲ್ಲಿ ಆತ್ಮನೂ ಸ್ವಪ್ನದಲ್ಲಿ, ಎಚ್ಚರದಲ್ಲಿ ಎಷ್ಟೋ ಸಂದರ್ಭಗಳಲ್ಲಿ ಭ್ರಮವಿಷಯನಾಗುತ್ತಾನೆ. ಉದಾಹರಣೆಗೆ, ಬೌದ್ಧರ ಉಪದೇಶ ಕೇಳಿ 'ಅಹಂ ಕ್ಷಣಿಕಃ' ಎಂಬ ಭ್ರಮೆ ಬರುತ್ತದೆ. ಆಮೇಲೆ ವೇದಾಂತ ಓದಿ 'ನಾಹಂ ಕ್ಷಣಿಕಃ' ಎಂದು ಬಾಧವೂ ಬರುತ್ತದೆ. ಹೀಗೆ ಭ್ರಮೆ–ಬಾಧಗಳಿಗೆ ಆತ್ಮನೂ ವಿಷಯವಾಗುವುದಿದೆ. ಅಷ್ಟು ಮಾತ್ರದಿಂದ ಅವನು ಮಿಥ್ಯಾನಾಗುವುದಿಲ್ಲ. ಆರೋಪ್ಯತಯಾ ಭ್ರಾಂತಿಗೆ ವಿಷಯನಾಗಿ, ನಿಷೇಧ್ಯತಯಾ ಬಾಧಕ್ಕೆ ವಿಷಯನಾದರೆ ಮಾತ್ರ ಮಿಥ್ಯಾ. ಆತ್ಮನಾಗಲೀ ಸ್ವಾಪ್ನವಸ್ತುಗಳಾಗಲೀ ಹೀಗೆ ಬಾಧ–ಭ್ರಮೆಗಳಿಗೆ ವಿಷಯಗಳಾಗಿಲ್ಲ. ಆದ್ದರಿಂದ ಅವುಗಳು ಮಿಥ್ಯಾ ಅಲ್ಲ.

**ಯದ್ಯಾತ್ಮನ್ಯನ್ಯಥಾ ದೃಶ್ಯಂ ಭ್ರಾಂತಮತ್ರಾಪಿ ತದ್ ಭವೇತ್ ।**
**ಅಬಾಧಿತಾನುವೃತ್ತೇಸ್ತು ಸ್ವಪ್ನಾದೇರ್ಭ್ರಾಂತತಾ ಕುತಃ ॥ ೮೮ ॥**

ಯದಿ=ಒಂದುವೇಳೆ ಆತ್ಮನಿ=ಆತ್ಮನಲ್ಲಿ ಅನ್ಯಥಾದೃಷ್ಟಂ=ತಪ್ಪಾಗಿ ತಿಳಿಯಲ್ಪಟ್ಟ ಕ್ಷಣಿಕತ್ವಾದಿಧರ್ಮಗಳು ಭ್ರಾಂತಂ=ಮಿಥ್ಯಾ ಎಂದಾದರೆ ಅತ್ರಾಪಿ=ಸ್ವಪ್ನದಲ್ಲೂ ತದ್ ಭವೇತ್=ಅನ್ಯಥಾದೃಷ್ಟವಾದ ಜಾಗ್ರತ್ತ್ವಮಾತ್ರ ಮಿಥ್ಯಾ ಆದೀತು. ಅಬಾಧಿತಾನುವೃತ್ತೇಸ್ತು=ಬಾಧ್ಯವಾಗದೇ, ಭ್ರಮಕಾಲ ದಿಂದ ಬಾಧಕಾಲದವರೆಗೂ ಅನುವೃತ್ತವಾಗುವ ಜಾಗ್ರತ್‌ಕಾಲೀನ ಶುಕ್ತಿ, ಸ್ವಪ್ನಕಾಲೀನವಾದ ವಾಸನಾಮಯವಸ್ತುಗಳಿಗೆ ಭ್ರಾಂತತಾ=ಮಿಥ್ಯಾತ್ವವು ಕುತಃ=ಏಕೆ?

ಭಾವಾರ್ಥ— ಆತ್ಮನು ಅಧಿಷ್ಠಾನತಯಾ ಭ್ರಮವಿಷಯನಾದುದ ರಿಂದ ಮಿಥ್ಯಾ ಅಲ್ಲ. ಆತ್ಮನಲ್ಲಿ ಆರೋಪಿತವಾದ ಕ್ಷಣಿಕತ್ವಾದಿಧರ್ಮಗಳು ಮಾತ್ರ ಮಿಥ್ಯಾ. ಅದರಂತೆ ಶುಕ್ತಿ ಮತ್ತು ಸ್ವಾಪ್ನವಾಸನಾಮಯವಸ್ತು ಇವೆರಡೂ ಆತ್ಮನಂತೆ ಅಧಿಷ್ಠಾನ ಮಾತ್ರ. ಶುಕ್ತಿಯಲ್ಲಿ ಕಾಣುವ ರಜತ, ಸ್ವಾಪ್ನಕರಿ–ತುರಗಾದಿಗಳಲ್ಲಿ ಕಾಣುವ ಬಾಹ್ಯತ್ವ ಇವು ಆರೋಪಿತಗಳು. ಅವುಗಳು ಮಾತ್ರ ಮಿಥ್ಯಾ. ಶುಕ್ತಿಯು ಭ್ರಾಂತಿಕಾಲದಲ್ಲಿಯೂ ಇದೆ, ಬಾಧಕಾಲದಲ್ಲೂ ಇದೆ. ಸ್ವಾಪ್ನವಸ್ತು ಬಾಧಕಾಲದಲ್ಲಿ ಇಲ್ಲದಿದ್ದರೂ ''ನಾನು ಕನಸಿನಲ್ಲಿ ಆನೆಯನ್ನು ನಿಜವಾಗಿಯೂ ನೋಡಿದೆ'' ಎನ್ನುವ ಜ್ಞಾನವಂತೂ ಇದೆ. 'ನೋಡೇ ಇಲ್ಲ' ಎನ್ನುವ ಬಾಧ ಇಲ್ಲ. ಆದ್ದರಿಂದ ಸ್ವಾಪ್ನವಸ್ತು ಮಿಥ್ಯಾ ಅಲ್ಲ. ಆದರೆ, ನಾನು ನೋಡಿದ ಆನೆ ಹೊರಗಿನ ಆನೆಯಂತೆ ನಿಜವಾದ ಆನೆ ಅಲ್ಲ, ಎನ್ನುವ ಬಾಧ ಇರುವುದರಿಂದ 'ಜಾಗ್ರತ್ವವು' ಮಿಥ್ಯಾ.

**ನಚ ಕಾಚಿತ್ ಪ್ರಮಾ ವಿಶ್ವಭ್ರಾಂತತ್ವೇ ಸರ್ವಮೇವ ಚ ।**
**ಅಭ್ರಾಂತತ್ವೇ ಪ್ರಮಾಣಂ ತು ಕಥಂ ತದ್‌ಭ್ರಾಂ(ತಿ)ತತಾ**
**ಭವೇತ್ ॥ ೮೯ ॥**

ವಿಶ್ವಭ್ರಾಂತತ್ವೇ=ಸ್ವಾಪ್ನ ಮತ್ತು ಜಾಗ್ರತ್‌ಪ್ರಪಂಚವು ಮಿಥ್ಯಾ ಎನ್ನುವ ವಿಷಯದಲ್ಲಿ ಕಾಚಿತ್ ಪ್ರಮಾ ನಚ=ಯಾವುದೇ ಪ್ರಮಾಣವು ಇಲ್ಲ. ಅಭ್ರಾಂತತ್ವೇ=ಅವೆರಡೂ ಮಿಥ್ಯಾ ಅಲ್ಲ ಎನ್ನುವ ಬಗ್ಗೆಯೇ ಸರ್ವಮೇವ ಪ್ರಮಾಣಂ=ಎಲ್ಲಾ ಪ್ರಮಾಣಗಳೂ ಇವೆ. ಹೀಗಿರುವಾಗ ತದ್‌ಭ್ರಾಂತತಾ= ಅವುಗಳಿಗೆ ಮಿಥ್ಯಾತ್ವವು ಕಥಂ ಭವೇತ್=ಹೇಗೆ ಬಂದೀತು?

**ಕಿಂಚ ಭ್ರಾಂತತ್ವವಾದೀ ಸ ಭ್ರಾಂತತ್ವಂ ಸ್ವಮತಸ್ಯ ಚ ।**
**ಅಂಗೀಕರೋತಿ ನಿಯತಂ ತತ್ರ ಸಂಪ್ರತಿಪನ್ನತಾ ॥ ೯೦ ॥**

**ವಾದಿನೋಽಸ್ತೇನ ಚಾಭ್ರಾಂತಂ ವಿಶ್ವಮೇವ ಭವಿಷ್ಯತಿ ।**
**ಭ್ರಾಂ(ತಿ)ತತ್ವಭ್ರಾಂತತಾ ಚೇತ್ ಸ್ಯಾತ್ ಕಥಂ ನಾಭ್ರಾಂತಿಸತ್ಯತಾ ।**
**ಅಶೇಷದೋಷದುಷ್ಟಂ ತನ್ಮತಂ ಹೇಯಂ ಬುಭೂಷುಭಿಃ ॥ ೯೧ ॥**

ಕಿಂಚ=ಮತ್ತು, ಭ್ರಾಂತತ್ವವಾದೀ ಸಃ=ಬ್ರಹ್ಮಾತಿರಿಕ್ತವಾದುದೆಲ್ಲವೂ ಭ್ರಾಂತಿಕಲ್ಪಿತ ಎನ್ನುವ ಮಾಯಾವಾದಿಯು ಸ್ವಮತಸ್ಯ ಚ='ಎಲ್ಲವೂ ಮಿಥ್ಯಾ' ಎನ್ನುವ ತನ್ನ ಸಿದ್ಧಾಂತಕ್ಕೂ ಭ್ರಾಂತತ್ವಂ=ಭ್ರಾಂತಿಕಲ್ಪಿತತ್ವವನ್ನು ನಿಯತಂ=ಸಂದೇಹವಿಲ್ಲದೆ ಅಂಗೀಕರೋತಿ=ಒಪ್ಪುತ್ತಾನೆ. ತತ್ರ=ಮಿಥ್ಯಾ ವಾದವೂ ಮಿಥ್ಯಾ ಎನ್ನುವ ವಿಷಯದಲ್ಲಿ ವಾದಿನೋಃ=ದ್ವೈತಿ–ಅದ್ವೈತಿಗಳಿಗೆ ಸಂಪ್ರತಿಪನ್ನತಾ=ಒಪ್ಪಿಗೆಯು ಇದೆ. ತೇನ=ವಿಶ್ವವು ಭ್ರಾಂತಿಕಲ್ಪಿತ, ಎನ್ನುವ ಸಿದ್ಧಾಂತವೂ ಭ್ರಾಂತಿಕಲ್ಪಿತವಾದುದರಿಂದಾಗಿ ವಿಶ್ವಂ=ಜಗತ್ತು ಅಭ್ರಾಂತ ಮೇವ=ಭ್ರಾಂತಿಕಲ್ಪಿತವಲ್ಲವೆಂದೇ ಭವಿಷ್ಯತಿ=ಆಗುವುದು. ಭ್ರಾಂತತ್ವ ಭ್ರಾಂತತಾ ಚೇತ್ ಸ್ಯಾತ್=ಭ್ರಾಂತಿಕಲ್ಪಿತತ್ವವೂ ಭ್ರಾಂತಿಕಲ್ಪಿತವೆಂದಾದರೆ ಅಭ್ರಾಂತಿಸತ್ಯತಾ ಕಥಂ ನ=ವಿಶ್ವವು 'ಅಭ್ರಾಂತ' ಎನ್ನುವುದಕ್ಕೆ ಸತ್ಯತಾ= ಸತ್ಯತ್ವವು ಕಥಂ ನ=ಏಕಿಲ್ಲ?

ತನ್ಮತಂ=ಸ್ವಾಪ್ನ–ಜಾಗರಪ್ರಪಂಚಕ್ಕೆ ಮಿಥ್ಯಾತ್ವವನ್ನು ಪ್ರತಿಪಾದಿಸುವ ಮಾಯಾವಾದವು ಅಶೇಷದೋಷದುಷ್ಟಂ=ಎಲ್ಲಾ ದೋಷಗಳಿಂದ ದುಷ್ಟ ವಾಗಿದ್ದು ಬುಭೂಷುಭಿಃ=ತತ್ತ್ವಜಿಜ್ಞಾಸುಗಳಿಂದ ಹೇಯಂ=ಪರಿತ್ಯಜಿಸಲು ಯೋಗ್ಯವಾದುದು.

**ಭಾವಾರ್ಥ—** ದೃಶ್ಯವಾದುದೆಲ್ಲವೂ ಮಿಥ್ಯಾ, ಎಂದು ಅದ್ವೈತ ಸಿದ್ಧಾಂತ. ಸ್ವಾಪ್ನ ಪ್ರಪಂಚ ಮತ್ತು ಬಾಹ್ಯಪ್ರಪಂಚ ಇವೆರಡೂ ದೃಶ್ಯವಾಗಿವೆ. ಆದ್ದರಿಂದ ಅದು ಮಿಥ್ಯಾ. ಹೀಗೆ ವಾದಿಸಿದರೆ ವಿಶ್ವಮಿಥ್ಯಾತ್ವವೂ ದೃಶ್ಯ ವಾದುದರಿಂದ ಅದೂ ಮಿಥ್ಯಾ ಎಂದು ಅದ್ವೈತವಾದವೇ ಒಪ್ಪಿದಂತಾಗು ತ್ತದೆ. ನಾವಂತೂ ವಿಶ್ವಮಿಥ್ಯಾತ್ವವು ಮಿಥ್ಯಾ, ಎಂದು ಒಪ್ಪಿರುತ್ತೇವೆ. ಹೀಗೆ ವಿಶ್ವಮಿಥ್ಯಾತ್ವವು ಮಿಥ್ಯಾ ಎನ್ನುವುದು ಉಭಯ ಸಂಪ್ರತಿಪನ್ನವಾಗಿರುವುದ ರಿಂದ ವಿಶ್ವವು ಸತ್ಯವಾಗುತ್ತದೆ. ಏಕೆಂದರೆ, ಭ್ರಾಂತತ್ವವು ಭ್ರಾಂತ ಎಂದಾದರೆ ಅಭ್ರಾಂತತ್ವವು ಸತ್ಯವಾಗಬೇಕು. ಹೀಗೆ ಮಾಯಾವಾದ ಸಕಲದೋಷಗಳಿಂದ ತುಂಬಿದೆ. ಅದನ್ನು ಜಿಜ್ಞಾಸುಗಳು ಪರಿಗ್ರಹಿಸಬಾರದು.

**ಯೇನ ಸ್ವಮತಹೇಯತ್ವಂ ಸ್ವಯಮಂಗೀಕೃತಂ ಸದಾ ।**
**ಭ್ರಾಂತಿತ್ವಾದ್ ದುರ್ಘಟತ್ವಸ್ಯ ಭೂಷಣತ್ವಾಚ್ಚ ಕೇವಲಮ್ ॥ ೯೨ ॥**

**ಉನ್ಮತ್ತೋಽಪಿ ಕಥಂ ತಸ್ಯ ಮತಂ ಸ್ವೀಕರ್ತುಮಿಚ್ಛತಿ ।**
**ಈಶಶಕ್ತೇರಚಿಂತ್ಯತ್ವಾನ್ಮಹೋನ್ಮತ್ತೈಃ ಪ್ರವರ್ತಿತಮ್ ॥ ೯೩ ॥**

ಯೇನ=ಯಾವ ಮಾಯಾವಾದಿಯಿಂದ ಸ್ವಮತಹೇಯತ್ವಂ=ತನ್ನ ಮತದ ತ್ಯಾಜ್ಯತ್ವವು ಸದಾ ಸ್ವಯಂ ಅಂಗೀಕೃತಂ=ತನ್ನಿಂದಲೇ ಅಂಗೀಕರಿಸ ಲ್ಪಟ್ಟಿದೆಯೋ, ಏಕೆಂದರೆ, ಭ್ರಾಂತತ್ವಾತ್= ಸ್ವಮತವೂ ಭ್ರಾಂತಿವಿಷಯ ಎಂದು ಒಪ್ಪಿರುವುದರಿಂದ. ದುರ್ಘಟತ್ವಸ್ಯ ಭೂಷಣತ್ವಾಚ್ಚ= ಯುಕ್ತಿವಿರೋಧವು ಅಲಂಕಾರ ಎಂದು ಒಪ್ಪಿರುವುದರಿಂದಲೂ. ಕೇವಲಂ ಉನ್ಮತ್ತೋಽಪಿ=ಸಾಕ್ಷಾತ್ ಹುಚ್ಚನೂ ತಸ್ಯ ಮತಂ=ಮಾಯಾವಾದಿಯ ಸಿದ್ಧಾಂತವನ್ನು ಸ್ವೀಕರ್ತುಂ ಕಥಮಿಚ್ಛತಿ=ಒಪ್ಪಿಕೊಳ್ಳಲು ಹೇಗೆ ತಾನೇ ಬಯಸಿಯಾನು? ಈಶಶಕ್ತೇಃ ಅಚಿಂತ್ಯತ್ವಾತ್=ಭಗವಂತನ ಶಕ್ತಿಯು ಅಚಿಂತ್ಯವಾದುದರಿಂದ ಇಂತಹ ಮತವು ಮಹೋನ್ಮತ್ತೈಃ ಪ್ರವರ್ತಿತಂ=ಅತಿ ಉನ್ಮತ್ತರಿಂದ ಪ್ರಾರಂಭಿಸಲ್ಪಟ್ಟಿದೆ.

**ಭಾವಾರ್ಥ—** ವಿಶ್ವವು ಮಿಥ್ಯಾ, ಎನ್ನುವುದೂ ಮಿಥ್ಯಾ ಎಂದು ಮಾಯಾವಾದಿಗಳೇ ಒಪ್ಪಿದ್ದಾರೆ. ತಮ್ಮ ಮತವು ಯುಕ್ತಿಗೆ ನಿಲುಕುವುದಿಲ್ಲ, ಯುಕ್ತಿವಿರೋಧವು ಸ್ವಮತಕ್ಕೆ ಅಲಂಕಾರ ಎನ್ನುತ್ತಾರೆ. ಇಂತಹ ಸಿದ್ಧಾಂತವನ್ನು ಯಾವ ವಿವೇಕಿ ತಾನೇ 'ಒಪ್ಪಿಯಾನು? ಆದರೂ ಇಂತಹ ಒಂದು ಮತವನ್ನು ಸ್ಥಾಪನೆ ಮಾಡುವವರಿದ್ದಾರೆ, ಅದನ್ನು ಒಪ್ಪುವವರಿದ್ದಾರೆ, ಎನ್ನುವುದು ಭಗವಂತನ ಅಚಿಂತ್ಯಶಕ್ತಿಗೆ ಒಂದು ಉದಾಹರಣೆ.

## ಮಾಯಾಮಾತ್ರ ಶಬ್ದದ ಅರ್ಥ

**ಅತಃ ಪ್ರಜ್ಞಾಽತ್ರ ಮಾಯೋಕ್ತಾ ಜೈವ್ಯುಪಾದಾನಮೇವ ಸಾ ।**
**ನಿಮಿತ್ತಮೈಶ್ವರೀ ಮುಖ್ಯಾ(ಖ್ಯಂ) ನಿರ್ಮಿತಂ ತ್ರಾತಮೇವ ಚ ॥ ೯೪ ॥**

**ತಾಭ್ಯಾಂ ಸಹ ಪೃಥಕ್ ಚೈವ ಮಾಯಾಮಾತ್ರಮಿತೀರ್ಯತೇ ॥**
**ಉಭಾಭ್ಯಾಂ ಮಾತಮೈಶ್ವರ್ಯಾತ್ ತ್ರಾತಂ ಸಹ ಪೃಥಕ್ ತತಃ ॥೯೫॥**

ಅತಃ=ಮಾಯಾಶಬ್ದಕ್ಕೆ ಜ್ಞಾನ ಎಂಬ ಅರ್ಥವು ಕೋಶಸಿದ್ಧವಾಗಿದ್ದು

ಅದಕ್ಕೆ ಅವಿದ್ಯೆ ಎಂದು ಅನ್ಯಥಾವ್ಯಾಖ್ಯಾನ ಮಾಡುವುದು ಸರಿಯಲ್ಲ ವಾದುದರಿಂದ ಅತ್ರ='ಮಾಯಾಮಾತ್ರಂ ತು' ಎಂಬ ಸೂತ್ರದಲ್ಲಿ ಜೈವೀ ಪ್ರಜ್ಞಾ=ಜೀವನಿಗಿರುವ ಜ್ಞಾನವೇ ಮಾಯಾಪದದಿಂದ ವಾಚ್ಯವಾಗಿದೆ. ಸಾ=ಜೀವನ ಜ್ಞಾನದಿಂದ ಉಂಟಾದ ಸಂಸ್ಕಾರವು ಉಪಾದಾನಮೇವ= ಸ್ವಾಪ್ನವಸ್ತುಗಳಿಗೆ ಉಪಾದಾನಕಾರಣ. ಮುಖ್ಯಾ=ಮಾಯಾಶಬ್ದದ ಮುಖ್ಯಾರ್ಥವಾದ ಐಶ್ವರೀ ಸಾ=ಭಗವಂತನ ಜ್ಞಾನವು ನಿಮಿತ್ತಂ= ಸ್ವಾಪ್ನವಸ್ತುಗಳಿಗೆ ನಿಮಿತ್ತಕಾರಣವು. ತಾಭ್ಯಾಂ ತು=ಮನೋಗತ ಸಂಸ್ಕಾರ ಹಾಗೂ ಈಶಜ್ಞಾನ ಇವೆರಡರಿಂದಲೇ ಸಹ=ಜೊತೆಗೂಡಿ ನಿರ್ಮಿತಂ= ಸ್ವಾಪ್ನವಸ್ತುಗಳು ಸೃಷ್ಟಿಸಲ್ಪಟ್ಟಿವೆ, ಪೃಥಕ್‌ಚೈವ=ಪ್ರತ್ಯೇಕವಾಗಿ ಈಶಜ್ಞಾನ ದಿಂದ ತ್ರಾತಮೇವ ಚ=ರಕ್ಷಿಸಲ್ಪಟ್ಟಿವೆ. ಈ ಕಾರಣದಿಂದ ಮಾಯಾಮಾತ್ರಂ ಇತಿ=ಸ್ವಪ್ನವು ಮಾಯಾಮಾತ್ರವೆಂದು ಈರ್ಯತೇ=ಹೇಳಲ್ಪಡುತ್ತದೆ. ಉಭಾಭ್ಯಾಂ=ಸಂಸ್ಕಾರ ಮತ್ತು ಈಶಜ್ಞಾನಗಳಿಂದ ಮಾತಂ= ನಿರ್ಮಿಸ ಲ್ಪಟ್ಟಿದೆ, ಐಶ್ವರ್ಯಾತ್=ಈಶ್ವರನ ಜ್ಞಾನದಿಂದ ತ್ರಾತಂ=ರಕ್ಷಿಸಲ್ಪಟ್ಟಿದೆ. ತತಃ=ಆ ಕಾರಣದಿಂದಾಗಿ ಸಹ, ಪೃಥಕ್=ಜೊತೆಯಲ್ಲಿ ಮತ್ತು ಪ್ರತ್ಯೇಕವಾಗಿ ಎಂದು ಹೇಳಲಾಗುತ್ತದೆ.

**ಭಾವಾರ್ಥ—** 'ಮಾಯಾಮಾತ್ರಂ' ಎಂದು ಸೂತ್ರದಲ್ಲಿದೆ. ಶಾಂಕರಭಾಷ್ಯದಲ್ಲಿ ಮಾಯಾಪದಕ್ಕೆ 'ಅವಿದ್ಯೆ' ಎಂಬ ಅರ್ಥವನ್ನು ಮಾಡಿ ಸ್ವಾಪ್ನ ಜಗತ್ತು ಅವಿದ್ಯೆಯ ಕಾರ್ಯ, ಎಂದು ಅಭಿಪ್ರಾಯವನ್ನು ಹೇಳಲಾಗಿದೆ. ಆದರೆ, ಮಾಯಾಪದಕ್ಕೆ ಅವಿದ್ಯೆ ಎಂದು ಅರ್ಥ ಇಲ್ಲ. ಮಾಯಾಶಬ್ದವನ್ನು 'ಮಾಯಾ ವಯುನಮ್ ಅಭಿಖ್ಯಾ' ಎಂದು ಜ್ಞಾನಾರ್ಥದಲ್ಲಿ ಪಾಠಮಾಡಲಾಗಿದೆ. ಆದ್ದರಿಂದ ಮಾಯಾಶಬ್ದಕ್ಕೆ ಜ್ಞಾನ ಎಂದು ಅರ್ಥ. ಪ್ರಕೃತದಲ್ಲಿ ಜೀವ ಮತ್ತು ಈಶನ ಜ್ಞಾನ. ಜೀವಜ್ಞಾನ ವಾಚಕವಾದ ಮಾಯಾಶಬ್ದಕ್ಕೆ ಜ್ಞಾನಜನ್ಯವಾದ ಸಂಸ್ಕಾರದಲ್ಲಿ ಲಕ್ಷಣಾ. ಇದರಿಂದ ಮಾಯಾಶಬ್ದದ ಲಾಕ್ಷಣಿಕಾರ್ಥ ಸಂಸ್ಕಾರ, ವಾಚ್ಯಾರ್ಥ ಈಶಜ್ಞಾನ. 'ಮಾತ್ರಂ' ಎಂಬ ಪದವು ಮಾ ಮತ್ತು ತ್ರೈಧಾತುಗಳಿಂದ ನಿಷ್ಪನ್ನವಾಗಿದೆ. ಮಾಧಾತುವಿಗೆ ನಿರ್ಮಾಣ ಎಂದು ಅರ್ಥ. ತ್ರೈ ಧಾತುವಿಗೆ ಪಾಲನ ಎಂದು ಅರ್ಥ. ಸ್ವಾಪ್ನವಸ್ತುವಿಗೆ ಜೀವನ ಸಂಸ್ಕಾರ ಉಪಾದಾನ

ಕಾರಣ ಮತ್ತು ಈಶಜ್ಞಾನ ನಿಮಿತ್ತಕಾರಣ. ಅಷ್ಟೇ ಅಲ್ಲ, ಅದು ಈಶಜ್ಞಾನ ದಿಂದ ರಕ್ಷಿಸಲ್ಪಟ್ಟಿದೆ. ಹೀಗೆ ಎರಡೂ ಸೇರಿ ಕಾರಣ, ಒಂದು ರಕ್ಷಕ. ಇದು ಅನುವ್ಯಾಖ್ಯಾನದಲ್ಲಿರುವ 'ಸಹಪೃಥಕ್‌ಚೈವ' ಎನ್ನುವುದರ ಅರ್ಥ. ಹೀಗೆ ಕಾರಣ, ರಕ್ಷಕ ಇವೆರಡೂ ಇರುವುದರಿಂದಾಗಿ ಸ್ವಾಪ್ನವಸ್ತು ಅಸತ್ಯವಲ್ಲ.

**ಪ್ರಜ್ಞಾತ್ಮಕಂ ಮನೋ ಯೇನ ಮನೋರೂಪಾಶ್ಚ ವಾಸನಾಃ ।**
**ಧೀರ್ಭೀರ್ಹ್ರೀರಿತಿ ಮನಸ್ತ್ವೇವೇತ್ಯಾಹ ಚ ಶ್ರುತಿರಂಜಸಾ ॥ ೯೬ ॥**

ಮನಃ=ಮನಸ್ಸು ಯೇನ=ಯಾವ ಕಾರಣದಿಂದ ಪ್ರಜ್ಞಾತ್ಮಕಂ=ಜ್ಞಾನಕ್ಕೆ ಉಪಾದಾನವಾಗಿರುವುದೋ ವಾಸನಾಶ್ಚ=ಸಂಸ್ಕಾರಗಳೂ ಮನೋರೂಪಾಃ= ಮನಸ್ಸೇ ಉಪಾದಾನವಾಗಿ ಉಳ್ಳವುಗಳೋ ಅದರಿಂದಾಗಿ ಮಾಯಾಶಬ್ದಕ್ಕೆ ಸಂಸ್ಕಾರದಲ್ಲಿ ಲಕ್ಷಣಾ ಮಾಡುವುದೂ ಯುಕ್ತವಾಗಿದೆ.

ಧೀರ್ಭೀರ್ಹ್ರೀರಿತಿ ಮನಸ್ತ್ವೇವ="ಶ್ರೀಃ ಭೀಃ ಧೀಃ ಇತ್ಯೇತತ್ ಸರ್ವಂ ಮನ ಏವ" ಇತಿ ತು ಶ್ರುತಿಶ್ಚ=ಈ ಮೊದಲಾದ ಶ್ರುತಿಗಳು ಅಂಜಸಾ=ಸ್ಪಷ್ಟವಾಗಿ ಆಹ=ಜ್ಞಾನಾದಿಗಳಿಗೆ ಮನಸ್ಸೇ ಉಪಾದಾನಕಾರಣವೆಂದು ಹೇಳುತ್ತವೆ.

**ಭಾವಾರ್ಥ—** ಮಾಯಾಶಬ್ದಕ್ಕೆ ಜ್ಞಾನವು ವಾಚ್ಯಾರ್ಥ. ಸಂಸ್ಕಾರವು ಲಕ್ಷ್ಯಾರ್ಥ. ಅವೆರಡಕ್ಕೆ ಏಕೋಪಾದಾನಕತ್ವವು ಸಂಬಂಧ. ಜ್ಞಾನಕ್ಕೂ ಉಪಾದಾನಕಾರಣ ಮನಸ್ಸು, ಸಂಸ್ಕಾರಕ್ಕೂ ಉಪಾದಾನಕಾರಣ ಮನಸ್ಸು. ಜ್ಞಾನ ಮತ್ತು ಸಂಸ್ಕಾರಗಳೆರಡೂ ಮನೋವಿಕಾರಗಳು. ಹೀಗೆ ವಾಚ್ಯಾರ್ಥ ಸಂಬಂಧವು ಇರುವುದರಿಂದ ಲಕ್ಷಣಾ ಯುಕ್ತವಾಗಿದೆ.

'ಕಾಮಃ ಸಂಕಲ್ಪಃ... ಶ್ರೀಃ ಭೀಃ ಧೀಃ ಇತ್ಯೇತತ್ ಸರ್ವಂ ಮನ ಏವ' ಎಂಬ ಈ ಬೃಹದಾರಣ್ಯಕ (1.5.3) ಶ್ರುತಿಯು ಜ್ಞಾನಕ್ಕೆ ಮನಸ್ಸೇ ಉಪಾದಾನಕಾರಣ ಎನ್ನುತ್ತದೆ. ಆ ಶ್ರುತಿಯಲ್ಲಿ ಇರುವ ಚಶಬ್ದಕ್ಕೆ ಇದೇ ಮೊದಲಾದವು ಎಂದರ್ಥ. ಆದ್ದರಿಂದ ಸಂಸ್ಕಾರವನ್ನೂ ತೆಗೆದುಕೊಳ್ಳಬೇಕು. ಇದರಿಂದ ಜ್ಞಾನ ಮತ್ತು ಸಂಸ್ಕಾರಗಳು ಮನೋವೃತ್ತಿಗಳೆಂದು ಸಿದ್ಧವಾಗುತ್ತದೆ. 'ಶ್ರುತಿಶ್ಚ' ಎಂಬ ಚಶಬ್ದದಿಂದ—

ಮನೋಗತಾಂಸ್ತು ಸಂಸ್ಕಾರಾನ್ ಸ್ವೇಚ್ಛಯಾ ಪರಮೇಶ್ವರಃ ।
ಪ್ರದರ್ಶಯತಿ ಜೀವಾಯ ಸ ಸ್ವಪ್ನ ಇತಿ ಗೀಯತೇ ॥
ಎಂಬ ಭಾಷ್ಯೋದಾಹೃತಪ್ರಮಾಣವು ವಿವಕ್ಷಿತವಾಗಿದೆ.

## ಸಂಸಾರದಲ್ಲಿ ಚಿದಚಿನ್ಮಿಶ್ರಮನಸ್ಸು

**ಚಿದಚಿನ್ಮಿಶ್ರಮೇವೈತನ್ಮನೋ ಯಾವಚ್ಚ ಸಂಸೃತಿಃ।**
**ತೇನಾವಸ್ಥಾ ಇಮಾಃ ಸರ್ವಾ ಜೀವಃ ಪಶ್ಯತಿ ಸರ್ವದಾ ॥ ೯೭ ॥**

ಯಾವಚ್ಚ=ಎದುವರೆಗೆ ಸಂಸೃತಿಃ=ಜೀವನಿಗೆ ಸಂಸಾರ ಇರುವುದೋ ತಾವತ್=ಅದುವರೆಗೂ ಏತತ್ ಮನಃ=ಈ ಮನಸ್ಸು ಚಿದಚಿನ್ಮಿಶ್ರಮೇವ=ಚಿದಂಶ ಮತ್ತು ಅಚಿದಂಶಗಳಿಂದ ಬೆರೆತೇ ಇರುತ್ತದೆ. ತೇನ ಅಂತಹ ಮನಸ್ಸಿನಿಂದ ಜೀವಃ=ಜೀವನು ಸರ್ವದಾ=ಮುಕ್ತಿಪರ್ಯಂತವೂ ಇಮಾಃ=ಈ ಸರ್ವಾಃ ಅವಸ್ಥಾಃ=ಸ್ವಪ್ನ–ಜಾಗರಾದಿ ಎಲ್ಲಾ ಅವಸ್ಥೆಗಳನ್ನು ಪಶ್ಯತಿ=ಅನುಭವಿಸುತ್ತಾನೆ.

**ಭಾವಾರ್ಥ**— ಜೀವಸ್ವರೂಪಭೂತವಾದ ಮನಸ್ಸು ಚಿದಾತ್ಮಕವಾಗಿದೆ. ಮೋಕ್ಷದಲ್ಲಿ ಅದು ಮಾತ್ರ ಇರುತ್ತದೆ. ಸಂಸಾರದಲ್ಲಿ ಜಡವಾದ ಮನಸ್ಸೂ ಇದೆ. ಅದರೊಂದಿಗೆ ಚಿದಾತ್ಮಕವಾದ ಮನಸ್ಸು ಮಿಶ್ರವಾಗಿರುತ್ತದೆ. ತಾರ್ಕಿಕರು ಹೇಳುವಂತೆ ದ್ವೈತದರ್ಶನದಲ್ಲಿ ಸಾಂಸಾರಿಕ ಮನಸ್ಸು ಕೇವಲ ಜಡವಲ್ಲ. ಅದ್ವೈತವಾದದಂತೆ ಚೇತನದ ತಾದಾತ್ಮ್ಯಾರೋಪವೂ ಮನಸ್ಸಿನಲ್ಲಿಲ್ಲ. ಜಡಮನಸ್ಸು ಚಿನ್ಮಿಶ್ರಿತವಾಗಿರುತ್ತದೆ. ಅದರಿಂದಾಗಿಯೇ ಆ ಮನಸ್ಸು ಜ್ಞಾನಾದಿರೂಪದಿಂದ ಪರಿಣಾಮಗೊಳ್ಳುತ್ತದೆ.

ಚಿನ್ಮಾತ್ರಾಣೀಂದ್ರಿಯಾಣ್ಯಾಹುಃ ಮುಕ್ತಾನಾಮ್, ಅನ್ಯದೈವ ತು ।
ತಾನ್ಯೇವ ಜಡಯುಕ್ತಾನಿ ಹ್ಯಭಿನ್ನಾನಿ ಸ್ವರೂಪತಃ ॥ (ಭಾ.ತಾ.2 ಸ್ಕಂ.)

ಈ ಪ್ರಮಾಣವೇ ಇದಕ್ಕೆ ಆಧಾರ. ಆ ಮನಸ್ಸು ಜ್ಞಾನಾದಿವೃತ್ತಿಗಳಿಗೆ ಉಪಾದಾನವೂ ಆಗಿದೆ, ಚಕ್ಷುರಾದಿಗಳಂತೆ ಒಂದು ಇಂದ್ರಿಯವೂ ಆಗಿದೆ. ಮನಸ್ಸೆಂಬ ಇಂದ್ರಿಯದಿಂದ ಬಾಹ್ಯಘಟಾದಿವಸ್ತುಗಳನ್ನೂ ಆಂತರ ಸ್ವಾಪ್ನ ವಸ್ತುಗಳನ್ನೂ ಜೀವನು ತಿಳಿಯುತ್ತಾನೆ. ಸುಷುಪ್ತಿ ಮತ್ತು ಪ್ರಳಯಕಾಲದಲ್ಲಿ ಮನೋವೃತ್ತಿರೂಪವಾದ ಜ್ಞಾನಗಳು ಇಲ್ಲ.

**ಮನೋವಿಕಾರಾ ವಿಷಯಾಃ ಸ್ವಾಪ್ನಾ ಯದ್ ಬಾಹ್ಯವನ್ನ ತೇ ।**
**ಸ್ಥೂಲಾ ಭವಂತ್ಯತಸ್ತೇಷಾಂ ಸ್ಪಷ್ಟತಾ ನ ತಥಾ ಕ್ವಚಿತ್ ।**
**ಕ್ವಚಿತ್ ಸ್ಪಷ್ಟಾ ಅಪಿ ಸ್ಯುಷ್ಟೇ ವಾಸನಾ ಮಾನಸೀ ಚ ಸಾ ॥ ೯೮ ॥**

ಯತ್=ಯಾವ ಕಾರಣದಿಂದ ಸ್ವಾಪ್ನಾ ವಿಷಯಾಃ=ಸ್ವಪ್ನದಲ್ಲಿ ಕಾಣುವ ವಿಷಯಗಳು ಮನೋವಿಕಾರಾಃ=ಮನೋಜನ್ಯವಾದ ಸಂಸ್ಕಾರದ ವಿಕೃತ ರೂಪಗಳಾಗಿವೆಯೋ ಆದ್ದರಿಂದಲೇ ತೇ=ಅವುಗಳು ಬಾಹ್ಯವತ್=ಬಾಹ್ಯ ಆನೆ–ಕುದುರೆಗಳಂತೆ ಸ್ಥೂಲಾಃ ನ ಭವಂತಿ=ದೊಡ್ಡದಾಗಿ, ಎಲುಬು-ಚರ್ಮ–ಮಾಂಸಮಯವಾಗಿ ಇರುವುದಿಲ್ಲ. ಅತಃ=ಅದರಿಂದಾಗಿಯೇ ತೇಷಾಂ= ಅವುಗಳಿಗೆ ತಥಾ=ಬಾಹ್ಯವಸ್ತುಗಳಂತೆ ಕ್ವಚಿತ್ ಸ್ಪಷ್ಟತಾ=ಅರ್ಥ ಕ್ರಿಯಾಕಾರಿತ್ವವು ನ=ಇರುವುದಿಲ್ಲ.

ಕ್ವಚಿತ್ ತೇ=ಕೆಲವೊಂದು ಅಂದರೆ ಸ್ವಾಪ್ನಕಾಮಿನೀಸಮಾಗಮಾದಿಗಳು ಸ್ಪಷ್ಟಾ ಅಪಿ=ಚರಮಧಾತುವಿಸರ್ಗರೂಪವಾದ ಅರ್ಥಕ್ರಿಯಾಕಾರಿ ಯಾಗಿಯೂ ಸ್ಯುಃ=ಆಗುತ್ತವೆ. ಸಾ ಚ=ಅದೂ ಮಾನಸೀ ವಾಸನಾ= ಮಾನಸವಾಸನಾಮಯವೇ ಆಗಿದೆ.

**ಭಾವಾರ್ಥ—** ಸ್ವಾಪ್ನವಸ್ತುಗಳು ವಾಸನಾಮಯವಾಗಿರುವುದ ರಿಂದಾಗಿಯೇ ಅವುಗಳು ಹೊರಗಿನ ಆನೆ ಕುದುರೆಗಳಂತೆ ದೊಡ್ಡದಾಗಿರುವು ದಿಲ್ಲ. ಆನೆಯ ಚಿತ್ರದಂತೆ ಸಣ್ಣದಾಗಿರುತ್ತವೆ. ಅದರಿಂದಾಗಿ ದೇಹದ ಒಳಗೆ ಅವುಗಳನ್ನು ಕಾಣಬಹುದು. ಹೊರಗಿನ ಆನೆ ಮಾಡುವ ಕೆಲಸವನ್ನೂ ಅದು ಮಾಡಲಾರದು. ಏಕೆಂದರೆ, ಅದು ಮನೋಮಯವಾದ ಆನೆಯ ಪ್ರತಿಕೃತಿ ಮಾತ್ರ.

ಸ್ವಪ್ನದಲ್ಲಿ ಕಂಡ ಕೆಲವೊಂದು ವಿಷಯಗಳು ಅರ್ಥಕ್ರಿಯಾಕಾರಿ ಗಳಾಗುತ್ತವೆ. ಸ್ವಪ್ನದಲ್ಲಿ ಕಾಮಿನೀ ಸಂಗವಾದಾಗ ಅದರಿಂದ ಧಾತೂತ್ಸರ್ಗ ವಾಗುತ್ತದೆ. ಆದರೂ ಅಲ್ಲಿ ಕಂಡ ಕಾಮಿನೀ, ಅವಳ ಸಂಗ ಇವೆಲ್ಲವೂ ವಾಸನಾಮಯಗಳೇ. ಅವುಗಳು ಅರ್ಥಕ್ರಿಯಾಕಾರಕಗಳಾದರೂ 'ಸ್ಥೂಲ'

ಗಳಾಗಿಲ್ಲ. ಹೀಗೆ ವಾಸನಾಮಯತ್ವ ಎಲ್ಲ ಸ್ವಾಪ್ನವಸ್ತುಗಳಲ್ಲೂ ಸಮಾನ. ಅರ್ಥಕ್ರಿಯಾಕಾರಿತ್ವವು ಕೆಲವು ಸ್ವಾಪ್ನಪದಾರ್ಥದಲ್ಲಿ ಮಾತ್ರ ಇರುತ್ತದೆ.

**ಇಲ್ಲಿಗೆ ಸಂಧ್ಯಾಧಿಕರಣ ಮುಗಿಯಿತು.**

## ಪರಾಭಿಧ್ಯಾನಾಧಿಕರಣ

### 'ಓಂ ಪರಾಭಿಧ್ಯಾನಾತ್ತು ತಿರೋಹಿತಂ ತತೋ ಹ್ಯಸ್ಯ ಬಂಧ ವಿಪರ್ಯಯೌ ಓಂ'

**ಈಶೇಚ್ಛಯಾಽಂತರ್ದಧಾತಿ ವ್ಯಜ್ಯತೇ ಚ ಪುನಸ್ತಯಾ ।**
**ಸೃಷ್ಟ್ವೈವ ವಾಸನಾಭಿಶ್ಚ ಪ್ರಪಂಚಂ ಸ್ವಾಪ್ನಮೀಶ್ವರಃ ।**
**ವಾಸನಾಮಾತ್ರತಾಂ ತಸ್ಯ ನೀತ್ವಾಽಂತರ್ಧಾಪಯತ್ಯಜಃ ॥ ೯೯ ॥**

ಸ್ವಪ್ನವು ಈಶೇಚ್ಛಯಾ=ಭಗವದಿಚ್ಛೆಯಿಂದ ಅಂತರ್ದಧಾತಿ= ತಿರೋಧಾನವಾಗುತ್ತದೆ. ತಯಾ=ಆ ಈಶ್ವರ ಇಚ್ಛೆಯಿಂದಲೇ ಪುನಃ ವ್ಯಜ್ಯತೇ ಚ=ಮತ್ತೆ ವ್ಯಕ್ತವಾಗಲ್ಪಡುತ್ತದೆ.

ಈಶ್ವರಃ ಏವ=ಪರಮಾತ್ಮನೇ ಸ್ವಾಪ್ನಂ ಪ್ರಪಂಚಂ=ಸ್ವಪ್ನ ಪ್ರಪಂಚವನ್ನು ವಾಸನಾಭಿಃ=ಸಂಸ್ಕಾರಗಳಿಂದ ಸೃಷ್ಟ್ವಾ=ಸೃಷ್ಟಿಮಾಡಿ, ಜೀವನಿಗೆ ತೋರಿಸಿ ತಸ್ಯ ಚ=ಅದಕ್ಕೆ ವಾಸನಾಮಾತ್ರತಾಂ=ಮತ್ತೆ ಸಂಸ್ಕಾರರೂಪತ್ವವನ್ನು ನೀತ್ವಾ= ಮಾಡಿ ಅಜಃ=ಹುಟ್ಟಿಲ್ಲದ ಪರಮಾತ್ಮನು ಅಂತರ್ಧಾಪಯತಿ=ಕಣ್ಣಿಗೆ ಕಾಣ ದಂತೆ ಮಾಡುತ್ತಾನೆ.

**ಭಾವಾರ್ಥ—** ಜೀವನು ಈಶ್ವರನ ಅಭಿನ್ನಾಂಶನಾದರೂ ಅವನಿಗೆ ಜ್ಞಾನ–ಐಶ್ವರ್ಯಾದಿಶಕ್ತಿಗಳು ತಿರೋಹಿತವಾಗಿವೆ. ಪರಮಾತ್ಮನ ಧ್ಯಾನದಿಂದ ಅದು ವ್ಯಕ್ತವಾಗಬೇಕು. ಆದ್ದರಿಂದ ಸ್ವಾಪ್ನವಸ್ತುಗಳನ್ನು ಸೃಷ್ಟಿಮಾಡುವ ಸಾಮರ್ಥ್ಯ ಜೀವನಿಗೆ ಇಲ್ಲ, ಎಂದು ಶಾಂಕರಭಾಷ್ಯದಲ್ಲಿ ಈ ಅಧಿಕರಣದ ಅಭಿಪ್ರಾಯವನ್ನು ಹೇಳಲಾಗಿದೆ. ಆದರೆ ಈ ಅಧಿಕರಣದಲ್ಲಿ ಸ್ವಾಪ್ನವಸ್ತುಗಳ ತಿರೋಧಾನವೂ ಈಶ್ವರನ ಇಚ್ಛೆಯಿಂದ ಆಗುತ್ತದೆ, ಎಂದು ಹೇಳಲಾಗಿದೆ. ಜೀವನ ಸಂಸ್ಕಾರಗಳನ್ನು ಬಳಸಿ, ಅವನ ಕರ್ಮಾನುಸಾರವಾಗಿ ವಿಚಿತ್ರವಾದ

ಸ್ವಾಪ್ನವಸ್ತುಗಳನ್ನು ಸೃಷ್ಟಿಮಾಡಿ, ಜೀವನಿಗೆ ' ತೋರಿಸಿ, ಅದರಿಂದ ಸುಖಾದಿಗಳನ್ನು ಉಂಟುಮಾಡಿ ಈಶ್ವರನೇ ಜೀವರ ಕರ್ಮಕ್ಷಯವನ್ನು ಮಾಡುತ್ತಾನೆ. ಆಮೇಲೆ ಆ ವಸ್ತುಗಳನ್ನು ಸಂಸ್ಕಾರದಲ್ಲಿ ಲೀನಗೊಳಿಸುತ್ತಾನೆ. ಇದೇ ಸೂತ್ರದ ಅರ್ಥ. ಪರಾಭಿಮತವಾದ ಅರ್ಥದಲ್ಲಿ ''ಪರಾಭಿಧ್ಯಾನಾತ್ತು ತಿರೋಹಿತಂ'' ಎಂದಿಷ್ಟೇ ಸೂತ್ರ ಸಾಕು, ಉಳಿದ ಅಂಶ ವ್ಯರ್ಥ. ನಮ್ಮ ಅರ್ಥ ದಲ್ಲಿ ಜಗತ್ತಿನ ಸೃಷ್ಟಿ ಮತ್ತು ಸಂಹಾರಗಳಿಗೆ ಈಶ್ವರನೇ ಕರ್ತೃವಾದುದರಿಂದ ಸ್ವಾಪ್ನಜಗತ್ತಿನ ಸೃಷ್ಟಿ-ಸಂಹಾರಗಳನ್ನೂ ಅವನೇ ಮಾಡುತ್ತಾನೆ, ಎಂದು ಅರ್ಥ. 'ತತೋ ಹ್ಯಸ್ಯ ಬಂಧವಿಪರ್ಯಯೌ' ಎನ್ನುವ ಅಂಶವು ಸ್ವಪ್ನಸೃಷ್ಟಿ-ಲಯಕರ್ತೃತ್ವವನ್ನು ಸಮರ್ಥನೆ ಮಾಡುತ್ತದೆಯಾದುದರಿಂದ ಅದು ಸಾರ್ಥಕ.

ಇಲ್ಲಿಗೆ ಪರಾಭಿಧ್ಯಾನಾಧಿಕರಣ ಮುಗಿಯಿತು.

## ಸುಷುಪ್ತಿ-ಬೋಧ-ಮೋಹಾಧಿಕರಣಗಳು

**' ಓಂ ತದಭಾವೋ ನಾಡೀಷು ತಚ್ಛ್ರುತೇರಾತ್ಮನಿ ಹ ಓಂ'**

**ಸುಷುಪ್ತಿಬೋಧಮೋಹಾಂಶ್ಚ (ಮೋಹಬೋಧಾಂಶ್ಚ)**
**ಸ್ವವಶಸ್ತದ್ವಶಂ ಸದಾ ।**
**ಜೀವಂ ನಯತಿ(ದೇ)ಜೀವೇಶೋ.... ॥ ೧೦೦ ॥**

ಜೀವೇಶಃ=ಜೀವಸ್ವಾಮಿಯಾದ ಭಗವಂತನು ಸ್ವವಶಃ=ಸ್ವತಂತ್ರನಾಗಿ ತದ್ವಶಂ ಜೀವಂ=ತನ್ನ ಅಧೀನನಾದ ಜೀವನನ್ನು ಸದಾ=ಪ್ರತಿದಿನವೂ ಸುಷುಪ್ತಿ-ಬೋಧ-ಮೋಹಾಂಶ್ಚ=ನಿದ್ರೆ, ಎಚ್ಚರ, ಮೂರ್ಛಾವಸ್ಥೆಗಳೆಡೆಗೆ ನಯತಿ=ಒಯ್ಯುತ್ತಾನೆ.

ಭಾವಾರ್ಥ—ಸ್ವಪ್ನದಂತೆ ನಿದ್ರೆ, ಎಚ್ಚರ, ಮೂರ್ಛಾವಸ್ಥೆಗಳಿಗೂ ಕಾರಣನಾದವನು ಭಗವಂತ. ಅವನು ಸ್ವತಂತ್ರನಾದರೂ ಆ ಅವಸ್ಥೆಗಳಿಗೆ ಕಾರಣವಾದ ಅನೇಕ ಸಾಮಗ್ರಿಗಳನ್ನು ಬಳಸಿ ಆ ಅವಸ್ಥೆಗಳನ್ನು ಬರುವಂತೆ ಮಾಡುತ್ತಾನೆ.

ಇಲ್ಲಿಗೆ ಸುಷುಪ್ತ್ಯಾದಿ-ಅಧಿಕರಣ ಮುಗಿಯಿತು.

## ಕರ್ಮಾನುಸ್ಮೃತ್ಯಧಿಕರಣ

**'ಓಂ ಸ ಏವ ಚ ಕರ್ಮಾನುಸ್ಮೃತಿಶಬ್ದವಿಧಿಭ್ಯಃ ಓಂ''**

**(ಜೀವಂ ನಯತಿ(ದೇ)ಜೀವೇಶೋ) ನಾನ್ಯಃ ಕರ್ತಾಽಸ್ಯ ಕಶ್ಚನ ॥೧೦೧॥**

ಅಸ್ಯ=ಜಾಗ್ರದಾದಿ ಅವಸ್ಥೆಗಳಿಗೆ ಅನ್ಯಃ=ಮತ್ತೊಬ್ಬ ಕಶ್ಚನ=ಯಾರೂ ಕರ್ತಾ ನ=ಕರ್ತೃವಲ್ಲ.

**ಭಾವಾರ್ಥ—** ಕೆಲವೆಡೆ ಅಥವಾ ಕೆಲವು ಸಮಯಗಳಲ್ಲಿ ಸ್ವಪ್ನಾದಿ ಅವಸ್ಥೆಗಳಿಗೆ ಇನ್ನೊಬ್ಬರೂ ಕರ್ತೃಗಳು ಇರಬಹುದು, ಎಂದು ಸಂದೇಹಪಡಬಾರದು. ಸರ್ವದಾ, ಸರ್ವತ್ರ ಪರಮಾತ್ಮನೇ ಈ ಅವಸ್ಥೆಗಳಿಗೆ ಕರ್ತೃ.

ಪರಮತದಲ್ಲಿ ಈ ಸೂತ್ರದ ಅರ್ಥ ಹೀಗೆ— ಮಲಗಿದವನು ಬ್ರಹ್ಮನಲ್ಲಿ ಐಕ್ಯ ಹೊಂದಿರುತ್ತಾನೆ. ಸಮುದ್ರದಲ್ಲಿ ಬಿದ್ದ ನೀರಿನ ಹನಿಯಂತೆ, ಅವನು ಮತ್ತೆ ಏಳುವುದು ಅಸಂಭವ, ಎಂಬ ಪೂರ್ವಪಕ್ಷಕ್ಕೆ ಸ ಏವ=ಮಲಗಿದವನೇ ಏಳುತ್ತಾನೆ, ಎಂದು ಇಲ್ಲಿ ಹೇಳಲಾಗಿದೆ. ಆದರೆ, ಮಲಗಿದವನೇ ಏಳುತ್ತಾನೋ, ಬೇರೆಯವನೋ ಎಂಬ ಸಂದೇಹವೇ ಬರುವುದಿಲ್ಲವಾದ ಕಾರಣ ಈ ರೀತಿಯ ವ್ಯಾಖ್ಯಾನ ಸರಿಯಲ್ಲ.

**ಇಲ್ಲಿಗೆ ಕರ್ಮಾನುಸ್ಮೃತ್ಯಧಿಕರಣ ಮುಗಿಯಿತು.**

## ಸ್ಥಾನಭೇದಾಧಿಕರಣ

**''ಓಂ ನ ಸ್ಥಾನತೋಽಪಿ ಪರಸ್ಯೋಭಯಲಿಂಗಂ ಸರ್ವತ್ರ ಹಿ ಓಂ''**

**ನ ಸ್ಥಾನಭೇದತೋಽಪ್ಯಸ್ಯ ಭೇದಃ ಕಶ್ಚಿತ್ ಪರೇಶಿತುಃ ।**
**ಸರ್ವತ್ರಾಶೇಷದೋಷೋಜ್ಝಪೂರ್ಣಕಲ್ಯಾಣಚಿದ್ಗುಣಃ ॥ ೧೦೨ ॥**

ಅಸ್ಯ ಪರೇಶಿತುಃ=ಸ್ವಪ್ನಾದಿ ಅವಸ್ಥಾನಿಯಾಮಕನಾದ ಪರಮಾತ್ಮನಿಗೆ ಸ್ಥಾನಭೇದತೋಽಪಿ=ದೇಹಾದಿಸ್ಥಾನಭೇದಪ್ರಯುಕ್ತವಾಗಿಯೂ ಕಶ್ಚಿತ್

ಭೇದಃ=ಯಾವುದೇ ರೀತಿಯ ಭೇದವೂ ನ=ಇಲ್ಲ. ಅವನು ಸರ್ವತ್ರ=ಎಲ್ಲ ಸ್ಥಾನಗಳಲ್ಲೂ ಅಶೇಷದೋಷೋಜ್ಝಪೂರ್ಣಕಲ್ಯಾಣಚಿದ್‌ಗುಣಃ=ಸಕಲ ದೋಷರಹಿತ ಹಾಗೂ ಪೂರ್ಣ ಮಂಗಳ ಜ್ಞಾನರೂಪನು.

**ಭಾವಾರ್ಥ—** ಪರಮಾತ್ಮ ಪ್ರತಿಯೊಬ್ಬ ಜೀವರಲ್ಲೂ ದಕ್ಷಿಣಾಕ್ಷ್ಯಾದಿ ಸ್ಥಾನಗಳಲ್ಲಿದ್ದು ಅವಸ್ಥಾತ್ರಯನಿಯಾಮಕನಾಗಿದ್ದಾನೆ, ಎಂದು ಈವರೆಗಿನ ಅಧಿಕರಣಗಳ ಅರ್ಥ. ಅವನು ಅನೇಕ ಜೀವರ ದೇಹದಲ್ಲಿ, ಅಲ್ಲೂ ಕಣ್ಣು ಮೊದಲಾದ ವಿಭಿನ್ನಸ್ಥಾನಗಳಲ್ಲಿ ಇರುವುದರಿಂದ ಅವನ ರೂಪಗಳಿಗೂ ಸ್ಥಾನಭೇದಪ್ರಯುಕ್ತವಾದ ಭೇದವು ಇದೆ, ಎಂಬ ಭ್ರಾಂತಿಯನ್ನು ಈ ಅಧಿಕರಣದಲ್ಲಿ ನಿರಾಕರಿಸಲಾಗಿದೆ. ಎಲ್ಲ ಸ್ಥಾನಗಳಲ್ಲಿ ಇರುವ ಪರಮಾತ್ಮನ ರೂಪಗಳೂ ದೋಷರಹಿತವಾಗಿ ಜ್ಞಾನರೂಪಗಳಾಗಿವೆ. ಅವುಗಳಲ್ಲಿ ಯಾವುದೇ ರೀತಿಯ ವ್ಯತ್ಯಾಸಗಳೂ ಇಲ್ಲ. ಅವುಗಳಲ್ಲಿ ಅನ್ಯೋನ್ಯಾಭಾವರೂಪವಾದ ಭೇದವೂ ಇಲ್ಲ, ಒಂದು ಹೀನ, ಇನ್ನೊಂದು ಉಚ್ಚ, ಒಂದು ಅನುಗ್ರಾಹ್ಯ ಇನ್ನೊಂದು ಅನುಗ್ರಾಹಕ ಎಂಬ ವ್ಯತ್ಯಾಸವೂ ಇಲ್ಲ. ಎಲ್ಲವೂ ಒಂದೇ ರೀತಿಯಾಗಿವೆ.

**ತದ್ವಿರುದ್ಧಂ ತು ಯತ್ ತತ್ರ ಮಾನಂ ನೈವ ಕ್ವಚಿದ್ ಭವೇತ್**
**(ಭವೇತ್ ಕ್ವಚಿತ್) ॥**

ಯತ್ತು=ಯಾವ ವಾಕ್ಯವು ತದ್ವಿರುದ್ಧಂ=ಹಿಂದೆ ಹೇಳಿರುವ ಭಗವತ್ ಸ್ವರೂಪಕ್ಕೆ ವಿರುದ್ಧವಾಗಿ ತೋರುವುದೋ ತತ್=ಅಂತಹ ವಾಕ್ಯವು ತತ್ರ=ಆ ವಿರುದ್ಧವಾದ ಕ್ವಚಿತ್=ವಿಷಯದಲ್ಲಿ ಮಾನಂ=ಪ್ರಮಾಣವು ನೈವ ಭವೇತ್= ಆಗದು.

**ಭಾವಾರ್ಥ—** ಪರಮಾತ್ಮ ಸುರ–ನರ–ತಿರ್ಯಗಾದಿ ನಾನಾ ಶರೀರಗಳಲ್ಲಿ ಇರುತ್ತಾನೆ. ಒಂದೇ ಶರೀರದಲ್ಲಿ ಅವಸ್ಥಾತ್ರಯನಿಯಾಮಕನಾಗಿ ಅಕ್ಷ್ಯಾದಿಭಿನ್ನಸ್ಥಾನಗಳಲ್ಲಿ ಇರುತ್ತಾನೆ. ಆದರೂ ಅವನ ರೂಪಗಳಿಗೆ ಭೇದವಿಲ್ಲ. ಉಚ್ಚತ್ವ–ನೀಚತ್ವ, ಅನುಗ್ರಾಹ್ಯತ್ವ–ಅನುಗ್ರಾಹಕತ್ವರೂಪವಾದ ವೈಷಮ್ಯಗಳೂ ಇಲ್ಲ. ಅವನು ಸರ್ವತ್ರ ದೋಷದೂರ, ಜ್ಞಾನಾನಂದಮಯ. ಯದ್ಯಪಿ ಅವಸ್ಥಾತ್ರಯನಿಯಾಮಕವಾದ ವಿಶ್ವಾದಿರೂಪಗಳಲ್ಲಿ—

ಕಾರ್ಯ–ಕಾರಣಬದ್ಧೌ ತೌ ಇಷ್ಯೇತೇ ವಿಶ್ವತೈಜಸೌ ।
ಪ್ರಾಜ್ಞಃ ಕಾರಣಬದ್ಧಸ್ತು ದ್ವೌ ತು ತುರ್ಯೇ ನ ವಿದ್ಯತಃ ॥

ಎಂದು ವಿರುದ್ಧಧರ್ಮಗಳನ್ನು ಉಪನಿಷತ್ತು ಹೇಳುತ್ತದೆ. ಆದರೂ, ಅಂತಹ ದೋಷವಚನಗಳು ನಿರ್ದೋಷತ್ವ ಶ್ರುತಿಗೆ ವಿರುದ್ಧಗಳಾದುದರಿಂದ ಆ ಅರ್ಥದಲ್ಲಿ ಅವುಗಳಿಗೆ ತಾತ್ಪರ್ಯ ಇಲ್ಲ. ಸಕಲ ಶ್ರುತಿ–ಸ್ಮೃತಿಪುರಾಣಗಳ ಮಹಾತಾತ್ಪರ್ಯ ಭಗವಂತ ದೋಷದೂರ, ಗುಣಪೂರ್ಣ, ಎಂದು. ಅದಕ್ಕೆ ವಿರುದ್ಧವಾದುದರಿಂದ ದೋಷಹೇಳುವಂತೆ ಕಾಣುವ ಈ ವಾಕ್ಯಗಳಿಗೆ ದೋಷವಚನದಲ್ಲಿ ತಾತ್ಪರ್ಯವಿಲ್ಲ. ನಿರ್ದೋಷತ್ವವನ್ನು ಹೇಳುವ ಮಹಾವಾಕ್ಯಗಳಿಗೆ ಅನುಗುಣವಾಗಿಯೇ ಈ ಅವಾಂತರವಾಕ್ಯಗಳಿಗೆ ತಾತ್ಪರ್ಯವನ್ನು ಹೇಳಬೇಕು.

**ಮಹಾತಾತ್ಪರ್ಯರೋಧೇನ ಕಥಂ ತನ್ಮಾನಮತ್ರ ತು ॥ ೧೦೩ ॥**

ಮಹಾತಾತ್ಪರ್ಯರೋಧೇನ=ಶಾಸ್ತ್ರದ ಮಹಾತಾತ್ಪರ್ಯಕ್ಕೆ ವಿರುದ್ಧ ವಾದುದರಿಂದ ತತ್='ಕಾರ್ಯಕಾರಣಬದ್ಧೌ ತೌ' ಎಂಬ ಅವಾಂತರವಾಕ್ಯವು ಅತ್ರ= ಭಗವಂತನ ದೋಷದ ವಿಷಯದಲ್ಲಿ ಕಥಂ ಮಾನಂ ಭವೇತ್=ಹೇಗೆ ತಾನೇ ಪ್ರಮಾಣವಾದೀತು?

**ದುಃಖಾಪ್ಯಯಸುಖಾವಾಪ್ತಿಹೇತುತ್ವೇನೈವ ವೇದವಾಕ್ ।**
**ಭವೇನ್ಮಾನಂ ತದೀಶಾನಾತ್ ಪ್ರಸನ್ನಾದೇವ ನಾನ್ಯಥಾ ॥ ೧೦೪ ॥**

**ಪ್ರಸನ್ನತಾ ಗುಣೋತ್ಕರ್ಷಜ್ಞಾನಾದೇವ ಹಿ ಕೇವಲಮ್ ।**
**ನಿರ್ದೋಷತಾಪರಿಜ್ಞಾನಾದಪಿ ನಾನ್ಯೇನ ಕೇನಚಿತ್ ॥ ೧೦೫ ॥**

ದುಃಖಾಪ್ಯಯ–ಸುಖಾವಾಪ್ತಿ ಹೇತುತ್ವೇನೈವ=ಆತ್ಯಂತಿಕ ದುಃಖನಾಶ, ನಿರತಿಶಯಸುಖಾಭಿವ್ಯಕ್ತಿ ಇದೇ ಮೋಕ್ಷ. ಇಂತಹ ಮೋಕ್ಷಕ್ಕೆ ಕಾರಣ ವಾಗುವುದರಿಂದಲೇ ವೇದವಾಕ್=ವೇದವಾಕ್ಯವು ಮಾನಂ ಭವೇತ್= ಪ್ರಮಾಣವಾಗುತ್ತದೆ. ತತ್=ಇಂತಹ ಕೈವಲ್ಯವು ಪ್ರಸನ್ನಾತ್ ಈಶಾನಾದೇವ= ಪ್ರಸನ್ನನಾದ ಭಗವಂತನಿಂದಲೇ ಆಗುತ್ತದೆ. ಅನ್ಯಥಾ ನ=ಬೇರೆ ರೀತಿಯಿಂದ

ಆಗದು. ಪ್ರಸನ್ನತಾ ಚ=ಪ್ರಸಾದವಾದರೋ ಗುಣೋತ್ಕರ್ಷಜ್ಞಾನಾದೇವ= ಕೇವಲ ಭಗವಂತನ ಗುಣಪೂರ್ಣತ್ವಜ್ಞಾನದಿಂದಲೇ, ನಿರ್ದೋಷತಾ ಪರಿಜ್ಞಾನಾದಪಿ=ನಿರ್ದೋಷತಾ ಜ್ಞಾನದಿಂದಲೂ ಆಗುವುದು. ನ ಅನ್ಯೇನ ಕೇನಚಿತ್=ಬೇರೆ ಯಾವುದೇ ಸಾಧನಗಳಿಂದ ಆಗುವುದಿಲ್ಲ.

ಭಾವಾರ್ಥ— ವಿಷ್ಣು ನಿರ್ದೋಷ-ಗುಣಪೂರ್ಣ ಎಂಬ ವಿಷಯ ದಲ್ಲೇ ವೇದಾದಿಶಾಸ್ತ್ರಗಳ ಮುಖ್ಯತಾತ್ಪರ್ಯ, ಎನ್ನುವುದನ್ನು ಇಲ್ಲಿ ಸಮರ್ಥಿಸಲಾಗಿದೆ.

ತೇಷಾಂ ದುಃಖಪ್ರಹಾಣಾಯ ಶ್ರುತಿರೇಷಾ ಪ್ರವರ್ತತೇ ॥

ಜೀವರ ದುಃಖನಿವೃತ್ತಿಗಾಗಿ ವೇದಾದಿಶಾಸ್ತ್ರಗಳಿವೆ. ಅಂದರೆ ದುಃಖ ನಿವೃತ್ತಿರೂಪವಾದ ಮೋಕ್ಷವೇ ವೇದದ ಮುಖ್ಯಪ್ರಯೋಜನ. ಮೋಕ್ಷ ವೆಂದರೆ ದುಃಖನಿವೃತ್ತಿ-ಸುಖಪ್ರಾಪ್ತಿ. ಇಂತಹ ಮೋಕ್ಷಪ್ರಾಪ್ತಿಗೆ ಬೇಕಾದು ದನ್ನೇ ವೇದವು ಹೇಳಬೇಕು. ಮೋಕ್ಷಕ್ಕೆ ಪ್ರಸನ್ನನಾದ ಭಗವಂತನೇ ಕಾರಣ. ಅವನು ತನ್ನ ಗುಣೋತ್ಕರ್ಷವನ್ನು ತಿಳಿದವರಲ್ಲಿ ಪ್ರಸನ್ನನಾಗುತ್ತಾನೆ. ಇದರ ಜೊತೆಯಲ್ಲಿ ನಿರ್ದೋಷತ್ವಜ್ಞಾನವೂ ಬೇಕು. ಆದ್ದರಿಂದ ವೇದವು ಈ ಎರಡನ್ನು ಹೇಳಬೇಕು—ಭಗವಂತನ ಗುಣಗಳನ್ನು ಮತ್ತು ಅವನ ದೋಷ ರಾಹಿತ್ಯವನ್ನು. ಹೀಗೆ ವೇದಗಳ ತಾತ್ಪರ್ಯ-ಭಗವಂತನ ನಿರ್ದೋಷತ್ವ ಹಾಗೂ ನಿಖಿಲಗುಣಪೂರ್ಣತ್ವ.

**'ಯೋ ಮಾಮಶೇಷದೋಷೋಜ್ಝಂ ಗುಣಸರ್ವಸ್ವಬೃಂಹಿತಮ್ ।**
**ಜಾನಾತ್ಯಸ್ಮೈ ಪ್ರಸನ್ನೋಽಹಂ ದದ್ಯಾಂ ಮುಕ್ತಿಂ ನಚಾನ್ಯಥಾ' ॥೧೦೬॥**

**'ಯೋ ಮಾಮಶೇಷಾಭ್ಯಧಿಕಂ ವಿಜಾನಾತಿ ಸ ಏವ ಮಾಮ್ ।**
**ವಿಜಾನಾತ್ಯಖಿಲಾಂಸ್ತಸ್ಯ ದದ್ಯಾಂ ಕಾಮಾನ್ ಪರಂ ಪದಮ್' ॥೧೦೭॥**

**'ಯೋ ಮಾಮೇವಮಸಂಮೂಢಃ' 'ಕಿಂ ಮಾಂ(ಮಾ)ನಿಂದಂತಿ**
**ಶತ್ರವಃ' ॥ ೧೦೮ ॥**

'ಯಃ=ಯಾರು ಮಾಂ=ನನ್ನನ್ನು ಅಶೇಷದೋಷೋಜ್ಝಂ=ಸಕಲ

ಕಾರ್ಯ–ಕಾರಣಬದ್ಧೌ ತೌ ಇಷ್ಯೇತೇ ವಿಶ್ವತೈಜಸೌ ।
ಪ್ರಾಜ್ಞಃ ಕಾರಣಬದ್ಧಸ್ತು ದ್ವೌ ತು ತುರ್ಯೇ ನ ವಿದ್ಯತಃ ॥

ಎಂದು ವಿರುದ್ಧಧರ್ಮಗಳನ್ನು ಉಪನಿಷತ್ತು ಹೇಳುತ್ತದೆ. ಆದರೂ, ಅಂತಹ ದೋಷವಚನಗಳು ನಿರ್ದೋಷತ್ವಶ್ರುತಿಗೆ ವಿರುದ್ಧಗಳಾದುದರಿಂದ ಆ ಅರ್ಥದಲ್ಲಿ ಅವುಗಳಿಗೆ ತಾತ್ಪರ್ಯ ಇಲ್ಲ. ಸಕಲ ಶ್ರುತಿ–ಸ್ಮೃತಿಪುರಾಣಗಳ ಮಹಾತಾತ್ಪರ್ಯ ಭಗವಂತ ದೋಷದೂರ, ಗುಣಪೂರ್ಣ, ಎಂದು. ಅದಕ್ಕೆ ವಿರುದ್ಧವಾದುದರಿಂದ ದೋಷಹೇಳುವಂತೆ ಕಾಣುವ ಈ ವಾಕ್ಯಗಳಿಗೆ ದೋಷವಚನದಲ್ಲಿ ತಾತ್ಪರ್ಯವಿಲ್ಲ. ನಿರ್ದೋಷತ್ವವನ್ನು ಹೇಳುವ ಮಹಾವಾಕ್ಯಗಳಿಗೆ ಅನುಗುಣವಾಗಿಯೇ ಈ ಅವಾಂತರವಾಕ್ಯಗಳಿಗೆ ತಾತ್ಪರ್ಯವನ್ನು ಹೇಳಬೇಕು.

**ಮಹಾತಾತ್ಪರ್ಯರೋಧೇನ ಕಥಂ ತನ್ಮಾನಮತ್ರ ತು ॥ ೧೦೩ ॥**

ಮಹಾತಾತ್ಪರ್ಯರೋಧೇನ=ಶಾಸ್ತ್ರದ ಮಹಾತಾತ್ಪರ್ಯಕ್ಕೆ ವಿರುದ್ಧವಾದುದರಿಂದ ತತ್='ಕಾರ್ಯಕಾರಣಬದ್ಧೌ ತೌ' ಎಂಬ ಅವಾಂತರವಾಕ್ಯವು ಅತ್ರ= ಭಗವಂತನ ದೋಷದ ವಿಷಯದಲ್ಲಿ ಕಥಂ ಮಾನಂ ಭವೇತ್=ಹೇಗೆ ತಾನೇ ಪ್ರಮಾಣವಾದೀತು?

**ದುಃಖಾಪ್ಯಯಸುಖಾವಾಪ್ತಿಹೇತುತ್ವೇನ್ಯೆವ ವೇದವಾಕ್ ।**
**ಭವೇನ್ಮಾನಂ ತದೀಶಾನಾತ್ ಪ್ರಸನ್ನಾದೇವ ನಾನ್ಯಥಾ ॥ ೧೦೪ ॥**

**ಪ್ರಸನ್ನತಾ ಗುಣೋತ್ಕರ್ಷಜ್ಞಾನಾದೇವ ಹಿ ಕೇವಲಮ್ ।**
**ನಿರ್ದೋಷತಾಪರಿಜ್ಞಾನಾದಪಿ ನಾನ್ಯೇನ ಕೇನಚಿತ್ ॥ ೧೦೫ ॥**

ದುಃಖಾಪ್ಯಯ–ಸುಖಾವಾಪ್ತಿ ಹೇತುತ್ವೇನ್ಯೆವ=ಆತ್ಯಂತಿಕ ದುಃಖನಾಶ, ನಿರತಿಶಯಸುಖಾಭಿವ್ಯಕ್ತಿ ಇದೇ ಮೋಕ್ಷ. ಇಂತಹ ಮೋಕ್ಷಕ್ಕೆ ಕಾರಣವಾಗುವುದರಿಂದಲೇ ವೇದವಾಕ್=ವೇದವಾಕ್ಯವು ಮಾನಂ ಭವೇತ್= ಪ್ರಮಾಣವಾಗುತ್ತದೆ. ತತ್=ಇಂತಹ ಕೈವಲ್ಯವು ಪ್ರಸನ್ನಾತ್ ಈಶಾನಾದೇವ= ಪ್ರಸನ್ನನಾದ ಭಗವಂತನಿಂದಲೇ ಆಗುತ್ತದೆ. ಅನ್ಯಥಾ ನ=ಬೇರೆ ರೀತಿಯಿಂದ

ಆಗದು. ಪ್ರಸನ್ನತಾ ಚ=ಪ್ರಸಾದವಾದರೋ ಗುಣೋತ್ಕರ್ಷಜ್ಞಾನಾದೇವ= ಕೇವಲ ಭಗವಂತನ ಗುಣಪೂರ್ಣತ್ವಜ್ಞಾನದಿಂದಲೇ, ನಿರ್ದೋಷತಾ ಪರಿಜ್ಞಾನಾದಪಿ=ನಿರ್ದೋಷತಾ ಜ್ಞಾನದಿಂದಲೂ ಆಗುವುದು. ನ ಅನ್ಯೇನ ಕೇನಚಿತ್=ಬೇರೆ ಯಾವುದೇ ಸಾಧನಗಳಿಂದ ಆಗುವುದಿಲ್ಲ.

**ಭಾವಾರ್ಥ—** ವಿಷ್ಣು ನಿರ್ದೋಷ-ಗುಣಪೂರ್ಣ ಎಂಬ ವಿಷಯ ದಲ್ಲೇ ವೇದಾದಿಶಾಸ್ತ್ರಗಳ ಮುಖ್ಯತಾತ್ಪರ್ಯ, ಎನ್ನುವುದನ್ನು ಇಲ್ಲಿ ಸಮರ್ಥಿಸಲಾಗಿದೆ.

ತೇಷಾಂ ದುಃಖಪ್ರಹಾಣಾಯ ಶ್ರುತಿರೇಷಾ ಪ್ರವರ್ತತೇ ॥

ಜೀವರ ದುಃಖನಿವೃತ್ತಿಗಾಗಿ ವೇದಾದಿಶಾಸ್ತ್ರಗಳಿವೆ. ಅಂದರೆ ದುಃಖ ನಿವೃತ್ತಿರೂಪವಾದ ಮೋಕ್ಷವೇ ವೇದದ ಮುಖ್ಯಪ್ರಯೋಜನ. ಮೋಕ್ಷ ವೆಂದರೆ ದುಃಖನಿವೃತ್ತಿ-ಸುಖಪ್ರಾಪ್ತಿ. ಇಂತಹ ಮೋಕ್ಷಪ್ರಾಪ್ತಿಗೆ ಬೇಕಾದು ದನ್ನೇ ವೇದವು ಹೇಳಬೇಕು. ಮೋಕ್ಷಕ್ಕೆ ಪ್ರಸನ್ನನಾದ ಭಗವಂತನೇ ಕಾರಣ. ಅವನು ತನ್ನ ಗುಣೋತ್ಕರ್ಷವನ್ನು ತಿಳಿದವರಲ್ಲಿ ಪ್ರಸನ್ನನಾಗುತ್ತಾನೆ. ಇದರ ಜೊತೆಯಲ್ಲಿ ನಿರ್ದೋಷತ್ವಜ್ಞಾನವೂ ಬೇಕು. ಆದ್ದರಿಂದ ವೇದವು ಈ ಎರಡನ್ನು ಹೇಳಬೇಕು—ಭಗವಂತನ ಗುಣಗಳನ್ನು ಮತ್ತು ಅವನ ದೋಷ ರಾಹಿತ್ಯವನ್ನು. ಹೀಗೆ ವೇದಗಳ ತಾತ್ಪರ್ಯ-ಭಗವಂತನ ನಿರ್ದೋಷತ್ವ ಹಾಗೂ ನಿಖಿಲಗುಣಪೂರ್ಣತ್ವ.

**'ಯೋ ಮಾಮಶೇಷದೋಷೋಜ್ಝಂ ಗುಣಸರ್ವಸ್ವಬೃಂಹಿತಮ್ ।**
**ಜಾನಾತ್ಯಸ್ಮೈ ಪ್ರಸನ್ನೋಽಹಂ ದದ್ಯಾಂ ಮುಕ್ತಿಂ ನಚಾನ್ಯಥಾ' ॥೧೦೬॥**

**'ಯೋ ಮಾಮಶೇಷಾಭ್ಯಧಿಕಂ ವಿಜಾನಾತಿ ಸ ಏವ ಮಾಮ್ ।**
**ವಿಜಾನಾತ್ಯಖಿಲಾಂಸ್ತಸ್ಯ ದದ್ಯಾಂ ಕಾಮಾನ್ ಪರಂ ಪದಮ್' ॥೧೦೭॥**

**'ಯೋ ಮಾಮೇವಮಸಂಮೂಢಃ' 'ಕಿಂ ಮಾಂ(ಮಾ)ನಿಂದಂತಿ**
**ಶತ್ರವಃ' ॥ ೧೦೮ ॥**

'ಯಃ=ಯಾರು ಮಾಂ=ನನ್ನನ್ನು ಅಶೇಷದೋಷೋಜ್ಝಂ=ಸಕಲ

ದೋಷರಹಿತನನ್ನಾಗಿ ಗುಣಸರ್ವಸ್ವಬೃಂಹಿತಂ=ಅನವಧಿಕವಾದ ಅನಂತ ಗುಣಗಳುಳ್ಳವನನ್ನಾಗಿ ಜಾನಾತಿ=ತಿಳಿಯುತ್ತಾನೋ ಅಸ್ಮೈ=ಅಂತಹವನಿಗೆ ಪ್ರಸನ್ನಃ=ಪ್ರಸನ್ನನಾದ ಅಹಂ=ನಾನು ಮುಕ್ತಿಂ ದದ್ಯಾಂ=ಮೋಕ್ಷವನ್ನು ಕೊಡುವೆನು. ಅನ್ಯಥಾ ನ ಚ=ಇನ್ನಾವ ರೀತಿಯಿಂದಲೂ ಕೊಡಲಾರೆನು'.

'ಯಃ=ಯಾರು ಮಾಂ=ನನ್ನನ್ನು ಅಶೇಷಾಭ್ಯಧಿಕಂ=ಗುಣ ಮತ್ತು ದೋಷಾಭಾವಗಳಿಂದ ಇತರರಿಗಿಂತ ಉತ್ತಮನನ್ನಾಗಿ ವಿಜಾನಾತಿ= ತಿಳಿಯುವನೋ ಸ ಏವ=ಅಂತಹವನೇ ಮಾಂ=ನನ್ನನ್ನು ವಿಜಾನಾತಿ= ತಿಳಿಯುತ್ತಾನೆ. ತಸ್ಯ=ಅವನಿಗೆ ಅಖಿಲಾನ್ ಕಾಮಾನ್=ಸಕಲ ಅಭೀಷ್ಟ ಗಳನ್ನೂ ಪರಂ ಪದಂ=ಮೋಕ್ಷರೂಪವಾದ ಉತ್ತಮಸ್ಥಾನವನ್ನೂ ದದ್ಯಾಂ= ಕೊಟ್ಟೇನು.'

ಇದನ್ನೇ 'ಯೋ ಮಾಮೇವಮಸಂಮೂಢಃ' 'ಕಿಂ ಮಾ ನಿಂದಂತಿ ಶತ್ರವಃ' ಇತ್ಯಾದಿ ಪ್ರಮಾಣಗಳು ತಿಳಿಸುತ್ತವೆ.

**ಭಾವಾರ್ಥ**— ಪರಮಾತ್ಮನ ಪ್ರಸಾದಕ್ಕೆ ಅವನ ಗುಣೋತ್ಕರ್ಷಜ್ಞಾನವೇ ಕಾರಣ ಎನ್ನುವುದನ್ನು ಇಲ್ಲಿ ಪ್ರಮಾಣದಿಂದ ಸಾಧಿಸಲಾಗಿದೆ. ಪರಮಾತ್ಮನ ಮಾತಿದು—'ನನ್ನನ್ನು ಯಾರು ಸಕಲದೋಷದೂರ, ಸಕಲಗುಣಗಳಿಂದಲೂ ಪೂರ್ಣ ಎಂದು ತಿಳಿಯುವರೋ ಅವರಲ್ಲಿ ಪ್ರಸನ್ನನಾಗಿ ನಾನು ಅವರಿಗೆ ಮೋಕ್ಷವನ್ನೇ ಕೊಡುತ್ತೇನೆ.'

2. ''ಯಾರು ನನ್ನನ್ನು ಗುಣಗಳಿಂದ ಸರ್ವೋತ್ತಮನೆಂದು ತಿಳಿಯುವನೋ ಅವನೇ ನನ್ನನ್ನು ತಿಳಿದವನು. ಅವನ ಎಲ್ಲಾ ಅಭೀಷ್ಟಗಳನ್ನು ನಾನು ಪೂರೈಸುತ್ತೇನೆ.''

3. 'ಯೋ ಮಾಮೇವಂ' ಎನ್ನುವುದು ಭಗವದ್ಗೀತೆಯ 15ನೇ ಅಧ್ಯಾಯದ ಶ್ಲೋಕದ ಒಂದು ಭಾಗ. ಈ ಶ್ಲೋಕವನ್ನು ಆರಂಭಿಸಿ ಅಧ್ಯಾಯದ ಕೊನೆಯಲ್ಲಿ ಬರುವ ''ಕೃತಕೃತ್ಯಶ್ಚ ಭಾರತ'' ಎಂಬಲ್ಲಿವರೆಗಿನ ಶ್ಲೋಕಗಳು, ಭಗವಂತನು ತನ್ನ ಗುಣೋತ್ಕರ್ಷವನ್ನು ತಿಳಿದವನಲ್ಲಿ ಅತಿಪ್ರಸನ್ನ ನಾಗುತ್ತಾನೆ, ಎನ್ನುವ ಪ್ರಕೃತವಿಷಯವನ್ನು ತಿಳಿಸುತ್ತವೆ. ಅವುಗಳಲ್ಲಿ ಸೇರಿರುವ—

'ಯೋ ಮಾಮೇವಮಸಮ್ಮೂಢೋ ಜಾನಾತಿ ಪುರುಷೋತ್ತಮಮ್' ಎಂಬ ಶ್ಲೋಕಾರ್ಧದಲ್ಲಿ ಶ್ರೀಕೃಷ್ಣ ಕೊಟ್ಟ ಸಂದೇಶ— 'ಯಾರು ನಾನೇ ಪುರುಷೋತ್ತಮನೆಂದು ಸಂದೇಹವಿಲ್ಲದೆ ತಿಳಿದುಕೊಳ್ಳುತ್ತಾನೋ ಅವನು ಎಲ್ಲವನ್ನೂ ತಿಳಿದಂತೆ' ಎಂದು. ಇಲ್ಲಿ ಶ್ರೀಕೃಷ್ಣ ಜ್ಞಾನಿಯನ್ನು ಪ್ರಶಂಸೆ ಮಾಡಿರುವನು.

4. ಅಭೀದಮೇಕಮೇಕೋ ಅಸ್ಮಿ ನಿಷ್ಷಾಳಭೀ ದ್ವಾ ಕಿಮು ತ್ರಯಃ ಕರಂತಿ । ಖಲೇ ನ ಪರ್ಷಾನ್ ಪ್ರತಿ ಹನ್ಮಿ ಭೂರಿ ಕಿಂ ಮಾ ನಿಂದಂತಿ ಶತ್ರವೋಽನಿಂದ್ರಾಃ ॥ (ಋ.10.48.7)

'ಇದಂ ಏಕಂ ಅಭಿ=ಈ ಒಂದು ಪ್ರಪಂಚಕ್ಕೆ ಅಹಂ ಏಕಃ=ನಾನೊಬ್ಬನೇ ನಿಷ್ಷಾಳಸ್ಮಿ (ನಿತರಾಂ ಸಹತೇ ಇತಿ ಇಷ್ಷಾಟ್)=ತಡೆಯಲು ಸಮರ್ಥನಾಗಿದ್ದೇನೆ. ದ್ವಾ ಅಭಿ=ಇಂತಹ ಎರಡು ಜಗತ್ತಿಗೂ ನಾನೊಬ್ಬನೇ ಸಾಕು. ತ್ರಯಃ=ಇಂತಹ ಮೂರು ಪ್ರಪಂಚಗಳು ಕಿಮು ಕರಂತಿ=ನನಗೇನು ಮಾಡಿಯಾವು? ಅಹಮೇಕ ಏವ=ನಾನೊಬ್ಬನೇ ಖಲೇ ನ=ಬೀಸುಕಲ್ಲಿನಲ್ಲಿ ಬಿದ್ದ ಧಾನ್ಯಗಳಂತೆ ಪರ್ಷಾನ್=ನನ್ನನ್ನು ನಿಂದಿಸುವ ನಿಷ್ಠುರ ಶತ್ರುಗಳನ್ನು ಭೂರಿ=ಅನೇಕ ಬಾರಿ ಪ್ರತಿಹನ್ಮಿ=ಕೊಲ್ಲುವೆನು. ಆದ್ದರಿಂದ ಶತ್ರವಃ=ಶತ್ರುಗಳು ಕಿಂ ಮಾ ಮಾಂ ನಿಂದಂತಿ–ಅನಿಂದ್ರಾಃ=ಅಶಕ್ತರಾಗಿ ಏಕೆ ನಿಂದಿಸಬೇಕು.'

ಏಕಂ ಜಗದಿದಂ ದ್ವೌ ವಾ ಪ್ರಪಂಚೌ ತ್ರಯ ಏವ ವಾ ।
ಮಾಂ ಪ್ರತ್ಯಾಯಾಂತು ಸಮರೇ ನಿತರಾಂ ಶಕ್ತಿಮತ್ತ್ವತಃ ॥

ನಿಷ್ಷಾಳಾಖ್ಯೋಽಭಿಗಂತಾಸ್ಮಿ ಸೋಽಹಮೇಕೋಽಪಿ ತಾನ್ ಪ್ರತಿ ।
ಅಶಕ್ತತ್ವಾದನಿಂದ್ರಾಖ್ಯಾಃ ಶತ್ರವಸ್ತೇ ತ್ರಯೋಽಪಿ ಮಾಮ್ ॥

ಕಿಂ ಕುರ್ವಂತಿ ಅಹಮೇವೈತಾನ್ ಸರ್ವಾನಪಿ ಚ ಲೀಲಯಾ ।
ಪರ್ಷಾನ್ ತಿಲಾದಿಧಾನ್ಯೈಷಾನ್ ಭೂರಿ ಭೂರೀಂಶ್ಚ ತೈಲಕೃತ್ ॥

ಯಥಾ ಖಲೇ ಚೂರ್ಣಯತಿ ತಥಾಽಹಂ ಪ್ರತಿಹನ್ಮಿ ಚ ।
ಅನಿಂದ್ರಾಃ ಶತ್ರವಸ್ತ್ವೇತೇ ಕಿಂ ಕುರ್ವಂತಿ ತ್ರಯೋಽಪಿ ಮಾಮ್ ॥

ಇತಿ ಹರಿಭಕ್ತಿಲತಾಯಾಮ್ ॥

ಇಲ್ಲಿ, ತನ್ನ ನಿಂದಕರಲ್ಲಿ (ದೋಷಜ್ಞರಲ್ಲಿ) ಭಗವಂತನ ಅಪ್ರೀತಿಯು ತಿಳಿಯುವುದರಿಂದ ಗುಣಜ್ಞರಲ್ಲಿ ಪ್ರಸಾದವು ಸೂಚಿತವಾಗುತ್ತದೆ.

ಹೀಗೆ, ಈ ಪ್ರಮಾಣಗಳಿಂದ ಗುಣೋತ್ಕರ್ಷಜ್ಞಾನವು ಭಗವಂತನ ಪ್ರಸಾದಕ್ಕೆ ಕಾರಣವೆಂದು ತಿಳಿಯುತ್ತದೆ.

**ಇತ್ಯಾದಿವೇದಸ್ಮೃತಿಗವಾಕ್ಯೈರೇವಾವಸೀಯತೇ ।**
**ಲೋಕತಶ್ಚ ಪ್ರಸಾದೇನ ಮುಕ್ತಿಃ ಸ ಗುಣವೇದನಾತ್ ॥ ೧೦೯ ॥**

ಇತ್ಯಾದಿವೇದ–ಸ್ಮೃತಿಗ ವಾಕ್ಯೈಃ ಏವ=ಈ ಮೊದಲಾದ ವೇದ–ಸ್ಮೃತಿಗಳಲ್ಲಿ ಇರುವ ವಚನಗಳಿಂದಲೇ ಗುಣವೇದನಾತ್ ಪ್ರಸಾದೇನ ಮುಕ್ತಿಃ= ಭಗವಂತನ ಗುಣೋತ್ಕರ್ಷಜ್ಞಾನದಿಂದ ಜನ್ಯವಾದ ಪ್ರಸಾದದಿಂದಲೇ ಮೋಕ್ಷವೆಂದು ಅವಸೀಯತೇ=ನಿರ್ಣಯಿಸಲ್ಪಟ್ಟಿದೆ. ಅಷ್ಟೇ ಅಲ್ಲ, ಲೋಕತಶ್ಚ= ಲೌಕಿಕದೃಷ್ಟಾಂತವಿರುವ ಅನುಮಾನದಿಂದಲೂ ಅವಸೀಯತೇ=ನಿರ್ಧರಿಸಲ್ಪಡುತ್ತದೆ.

**ಭಾವಾರ್ಥ—** ಮೋಕ್ಷಕ್ಕೆ ಭಗವಂತನ ಪ್ರಸಾದವು ಕಾರಣ, ಪ್ರಸಾದಕ್ಕೆ ಗುಣಪೂರ್ಣತ್ವಜ್ಞಾನವು ಕಾರಣ, ಎನ್ನುವುದು ಹಿಂದೆ ಹೇಳಿರುವ ಶ್ರುತಿ–ಸ್ಮೃತಿ ಪ್ರಮಾಣಗಳಿಂದ ಸಿದ್ಧವಾಗುತ್ತದೆ. ಅವುಗಳ ಜೊತೆಗೆ ಯುಕ್ತಿಯೂ ಸಹಾಯಕವಾಗಿದೆ— ಸಂಸಾರದಿಂದ ಬಿಡುಗಡೆಯು ಸಮರ್ಥನಾದ ಒಬ್ಬ ವ್ಯಕ್ತಿಯ ಪ್ರಸಾದದಿಂದಲೇ ಆಗುತ್ತದೆ, ಬಿಡುಗಡೆಯಾದುದರಿಂದ, ಸೆರೆಮನೆಯಿಂದ ಬಿಡುಗಡೆಯಾಗುವಂತೆ. ಇದು ಅನುಮಾನಪ್ರಮಾಣ. ಸೆರೆಮನೆಯಲ್ಲಿ ಬಂಧಿಯಾದ ಅಪರಾಧಿಯು ರಾಜನ ಗುಣಗಳನ್ನು ತಿಳಿದು ವಿಧೇಯನಾಗಿ ವರ್ತಿಸಿದರೆ ಪ್ರಸನ್ನನಾಗುವ ರಾಜನು ಅವನನ್ನು ಬಿಡುಗಡೆ ಮಾಡುತ್ತಾನೆ. ಅದರಂತೆ, ಸಮರ್ಥನಾದ ಭಗವಂತನೂ ಪ್ರಸನ್ನನಾದರೆ ಜೀವನನ್ನು ಸಂಸಾರಬಂಧನದಿಂದ ಬಿಡುಗಡೆ ಗೊಳಿಸುತ್ತಾನೆ.

**ಮಹಾತಾತ್ಪರ್ಯಮುಖ್ಯಸ್ಯ ವಿರೋಧಾದತ ಏವ ಹಿ ।**
**ದೋಷಿತ್ವನಿರ್ಗುಣತ್ವಾಲ್ಪಗುಣತ್ವಾದಿ ಕಥಂಚನ ॥೧೧೦ ॥**

**ನಾರ್ಥಃ ಶ್ರುತಿಪುರಾಣಾದೇಸ್ತದ್ವಿರುದ್ಧೋಽಖಿಲಸ್ಯ ಚ ।**
**ಅರ್ಥಃ ಸ್ವಯಂ ವಿನಿರ್ಣೀತೋ ವಾಸುದೇವೇನ ಸಾದರಮ್ ॥ ೧೧೧ ॥**

ಅತ ಏವ=ಆದ್ದರಿಂದಲೇ ಮಹಾತಾತ್ಪರ್ಯಮುಖ್ಯಸ್ಯ=ವೇದಾದಿ ಶಾಸ್ತ್ರಗಳ ಮುಖ್ಯವಾದ ಮಹಾತಾತ್ಪರ್ಯಕ್ಕೆ ವಿರೋಧಾತ್=ವಿರೋಧ ದಿಂದಾಗಿಯೇ ಶ್ರುತಿಪುರಾಣಾದೇಃ=ವೇದ ಮತ್ತು ಪುರಾಣಾದಿಗಳಿಗೆ ದೋಷಿತ್ವ–ನಿರ್ಗುಣತ್ವ–ಅಲ್ಪಗುಣತ್ವಾದಿ=ಭಗವಂತ ದೋಷಉಳ್ಳವನು, ಅವನಲ್ಲಿ ಗುಣಗಳೇ ಇಲ್ಲ, ಅಲ್ಪಗುಣಗಳಿವೆ ಈ ಮೊದಲಾದ ಅರ್ಥಃ= ಅರ್ಥವು ನ=ಅಲ್ಲ. ಅಖಿಲಸ್ಯ=ಎಲ್ಲ ಶಾಸ್ತ್ರಕ್ಕೂ ತದ್ವಿರುದ್ಧಃ=ದೋಷಿತ್ವಾದಿ ವಿರುದ್ಧವಾದ ಅರ್ಥಃ=ಅರ್ಥವು ಸ್ವಯಂ ವಾಸುದೇವೇನ=ಸಾಕ್ಷಾತ್ ಶ್ರೀಕೃಷ್ಣನಿಂದಲೇ ಸಾದರಂ=ತಾತ್ಪರ್ಯಪೂರ್ವಕವಾಗಿ ವಿನಿರ್ಣೀತಃ= ಭಗವದ್ಗೀತೆಯಲ್ಲಿ ನಿರ್ಧರಿಸಲ್ಪಟ್ಟಿದೆ.

ಭಾವಾರ್ಥ— ಹಿಂದೆ ಹೇಳಿದಂತೆ ವೇದದ ಮುಖ್ಯತಾತ್ಪರ್ಯ– ಭಗವಂತ ಗುಣಗಳಿಂದ ಪರಿಪೂರ್ಣನಾಗಿದ್ದಾನೆ, ಎಂದು. ಅವನಲ್ಲಿ ದೋಷಗಳಿವೆ, ಅಥವಾ ಅವನಲ್ಲಿ ಎಂಟೋ, ಆರೋ ಗುಣಗಳಿವೆ, ಅವನಲ್ಲಿ ಗುಣಗಳೇ ಇಲ್ಲ, ಇವೆಲ್ಲವೂ ವೇದದ ಮುಖ್ಯತಾತ್ಪರ್ಯಕ್ಕೆ ವಿರುದ್ಧವಾಗಿವೆ. ಆದ್ದರಿಂದ ಇಂತಹ ವಿಷಯಗಳಲ್ಲಿ ವೇದಾದಿಶಾಸ್ತ್ರಗಳಿಗೆ ತಾತ್ಪರ್ಯವಿಲ್ಲ. ಇದಕ್ಕೆ ವಿರುದ್ಧವಾಗಿ ಸಕಲಗುಣಪೂರ್ಣತ್ವದಲ್ಲೇ ತಾತ್ಪರ್ಯ ಎಂದು ಶ್ರೀಕೃಷ್ಣನೇ ಭಗವದ್ಗೀತೆಯಲ್ಲಿ ಹೇಳಿದ್ದಾನೆ—

**ಇತಿ ಗುಹ್ಯತಮಂ ಶಾಸ್ತ್ರಮಿದಮುಕ್ತಂ ಮಯಾಽನಘ ।**
**ಏತದ್ ಬುದ್ಧ್ವಾ ಬುದ್ಧಿಮಾನ್ ಸ್ಯಾತ್ ಕೃತಕೃತ್ಯಶ್ಚ ಭಾರತ ॥ ೧೧೨ ॥**

ಅನಘ=ಅರ್ಜುನ ಇತಿ=ಈ ಹಿಂದೆ ಮಯಾ ಉಕ್ತಂ=ನಾನು ಹೇಳಿರುವ ನನ್ನ ಪುರುಷೋತ್ತಮತ್ವಾದಿವಿಷಯವು ಇದಂ ಗುಹ್ಯತಮಂ ಶಾಸ್ತ್ರಂ= ತಾತ್ಪರ್ಯಪೂರ್ವಕವಾಗಿ ಸರ್ವಶಾಸ್ತ್ರಗಳಿಂದಲೂ ಪ್ರತಿಪಾದ್ಯವಾದುದು. ಏತತ್=ಈ ವಿಷಯವನ್ನು ಬುದ್ಧ್ವಾ=ಪರೋಕ್ಷತಃ ತಿಳಿದು ಬುದ್ಧಿಮಾನ್=

ಅಪರೋಕ್ಷಜ್ಞಾನಿಯಾಗಿ ಕೃತಕೃತ್ಯಶ್ಚ ಭವತಿ=ಮುಕ್ತನಾಗುತ್ತಾನೆ, ಭಾರತ= ಎಲೈ ಅರ್ಜುನನೇ! ಇತಿ=ಹೀಗೆ ಗೀತೆಯಲ್ಲಿದೆ.

ಭಾವಾರ್ಥ— ಭಗವದ್ಗೀತೆಯ ಹದಿನೈದನೆಯ ಅಧ್ಯಾಯದಲ್ಲಿ ಶ್ರೀಕೃಷ್ಣ ಅರ್ಜುನನಿಗೆ ಹೇಳುತ್ತಾನೆ— ''ಚೇತನರು ಕ್ಷರ ಮತ್ತು ಅಕ್ಷರ ಎಂದು ಎರಡು ವಿಧ. ಬ್ರಹ್ಮಾದಿ ಸಕಲಜೀವರಿಗೂ ಶರೀರನಾಶವಿರುವುದರಿಂದ ಅವರು ಕ್ಷರಜೀವರು. ಲಕ್ಷ್ಮೀದೇವಿಯ ದೇಹಕ್ಕೆ ನಾಶವಿಲ್ಲದಿರುವುದರಿಂದ ಅವಳು ಅಕ್ಷರಳು. ಈ ಕ್ಷರಾಕ್ಷರಜೀವರನ್ನು ಮೀರಿದವನು ಪುರುಷೋತ್ತಮ. ನಾನೇ ಆ ಪುರುಷೋತ್ತಮ.

ಈ ಪ್ರಮೇಯವೇ ಸರ್ವಶಾಸ್ತ್ರಗಳ ತಾತ್ಪರ್ಯ. ಇದನ್ನು ತಿಳಿದು ಭಗವಂತನ ಅಪರೋಕ್ಷವನ್ನು ಪಡೆದವನು ಮುಕ್ತನಾಗುತ್ತಾನೆ''.

ಕೃಷ್ಣ, ವಿಷ್ಣು ಸರ್ವೋತ್ತಮತ್ವವನ್ನು ತಿಳಿದರೆ ಮೋಕ್ಷರೂಪವಾದ ಫಲವು ದೊರಕುವುದು, ಎಂದು ಹೇಳಿರುವುದರಿಂದ ವಿಷ್ಣೂತ್ಕರ್ಷವೇ ಸಕಲಶಾಸ್ತ್ರಗಳ ತಾತ್ಪರ್ಯ ಎನ್ನುವ ವಿಷಯ ಕೇವಲ ಪ್ರಶಂಸೆ ಮಾತ್ರವಲ್ಲ, ಅದು ಅವನಿಗೆ ಅಭಿಪ್ರೇತವಾದ ಸತ್ಯ ಎಂದು ತಿಳಿಯುತ್ತದೆ.

**ಇತ್ಯತೋಽಖಿಲಸಚ್ಛಾಸ್ತ್ರವಿರುದ್ಧತ್ವೇನ ನಾನುಮಾ ।**
**ವರ್ತತೇ ತತ್ರ ತೇನೇಶೋ ನಿರ್ಣೀತೋಽಖಿಲಸದ್ಗುಣಃ ॥ ೧೧೩ ॥**

ಅತಃ=ಆದ್ದರಿಂದ ತತ್ರ=ಭಗವಂತನ ರೂಪಗಳಲ್ಲಿ ಭೇದವಿದೆ ಎನ್ನುವ ವಿಷಯದಲ್ಲಿ ಅಖಿಲ–ಸಚ್ಛಾಸ್ತ್ರವಿರುದ್ಧತ್ವೇನ=ಸಕಲ-ಸದಾಗಮಗಳಿಗೂ ವಿರುದ್ಧವಾದ ಕಾರಣ ನ ಅನುಮಾ ವರ್ತತೇ=ಅನುಮಾನವು ಪ್ರಮಾಣವಾಗಿ ಇಲ್ಲ, ತೇನ=ಅದರಿಂದಾಗಿ ಈಶಃ=ಪರಮಾತ್ಮನು ಅಖಿಲಸದ್ಗುಣಃ= ನಿರ್ದೋಷ–ಪೂರ್ಣ–ಗುಣವುಳ್ಳವನು.

ಭಾವಾರ್ಥ— ಸ್ಥಾನಭೇದದಿಂದಾಗಿ ಭಗವಂತನ ರೂಪಗಳಲ್ಲಿ ಭೇದ ಇದೆ, ಎಂದು ಈ ಅಧಿಕರಣದ ಪೂರ್ವಪಕ್ಷ. ಭಗವಂತನಿಗೆ ಅಚಿಂತ್ಯ–ಅದ್ಭುತ ಶಕ್ತಿ ಇರುವುದರಿಂದ ಸ್ಥಾನಭೇದವಿದ್ದರೂ ಅವನ ರೂಪಗಳಿಗೆ ಭೇದವಿರ ಬೇಕಾಗಿಲ್ಲ, ಸ್ಥಾನಭೇದವು ರೂಪಭೇದಕ್ಕೆ ಸಾಧಕವಲ್ಲ, ಇದು ಈವರೆಗೆ

ಹೇಳಿದ ವಿಷಯ. ಅಷ್ಟೇ ಅಲ್ಲ, ಸ್ಥಾನಭೇದದಿಂದ ರೂಪಭೇದವನ್ನು ಸಾಧನೆಮಾಡುವ ಅನುಮಾನಕ್ಕೆ ಬಾಧದೋಷವೂ ಇದೆ. ರೂಪಭೇದವು ಸಕಲ–ಸದಾಗಮಗಳಿಗೆ ವಿರುದ್ಧವಾಗಿದೆ. ಹೀಗೆ ಪರಮಾತ್ಮನಲ್ಲಿ ಯಾವ ದೋಷಗಳೂ ಇಲ್ಲ, ಸಕಲಗುಣಗಳೂ ಇವೆ. ಇದು ಈ ಅಧಿಕರಣದ ತಾತ್ಪರ್ಯ.

ಇಲ್ಲಿಗೆ ಸ್ಥಾನಭೇದಾಧಿಕರಣ ಮುಗಿಯಿತು.

# ಉಪಮಾಧಿಕರಣ

## "ಓಂ ಅತ ಏವ ಚೋಪಮಾ ಸೂರ್ಯಕಾದಿವತ್ ಓಂ"

**ನಚ ಚಿತ್ತ್ವಾದಭಿನ್ನತ್ವಂ ಜೀವಸ್ಯೇಶವದಾಪ್ಯತೇ ।**
**ಯತ ಆಭಾಸತಾಮೇವ ಶ್ರುತಿರಸ್ಯ ವದತ್ಯಲಮ್ ॥ ೧೧೪ ॥**

ಚಿತ್ತ್ವಾತ್=ಚೇತನನಾದುದರಿಂದ ಹಾಗೂ ಅಂಶನಾದುದರಿಂದ ಜೀವಸ್ಯ=ಜೀವನಿಗೆ ಈಶವತ್=ಪರಮಾತ್ಮನಂತೆ ಅಭಿನ್ನತ್ವಂ=ಪರಮಾತ್ಮನಿಂದ ಅಭೇದವು ನ ಆಪ್ಯತೇ=ಹೊಂದಲ್ಪಡುವುದಿಲ್ಲ. ಯತಃ=ಏಕೆಂದರೆ, ಶ್ರುತಿಃ= ವೇದವು ಅಸ್ಯ=ಜೀವನಿಗೆ ಅಸ್ಯ=ಬ್ರಹ್ಮನ ಆಭಾಸತಾಮೇವ=ಪ್ರತಿಬಿಂಬತ್ವ ವನ್ನೇ ಅಲಂ=ವಿರೋಧವಿಲ್ಲದೆ, ಸ್ಪಷ್ಟವಾಗಿ ವದತಿ=ಹೇಳುತ್ತದೆ.

**ಭಾವಾರ್ಥ**— ಇಲ್ಲಿ ಜೀವ–ಬ್ರಹ್ಮರಿಗೆ ಅತ್ಯಂತಭೇದವನ್ನು ಸಾಧಿಸ ಲಾಗಿದೆ. ಬ್ರಹ್ಮನಿಂದ ಭೇದಾಭೇದವಿದೆ ಎಂದು ಪೂರ್ವಪಕ್ಷ. ಭೇದವು ಸಿದ್ಧವಾದುದರಿಂದ ಅಭೇದವನ್ನು ಸಾಧಿಸಿದರೆ ಭೇದಾಭೇದವು ಸಿದ್ಧವಾಗುತ್ತದೆ. ಜೀವನು ಚೇತನನಾದುದರಿಂದ ಬ್ರಹ್ಮಾಭಿನ್ನನಾಗಿದ್ದಾನೆ, ಎಂದು ಅನುಮಾನ. ಇದಕ್ಕೆ ಬ್ರಹ್ಮನು ಉದಾಹರಣೆ. ಬ್ರಹ್ಮನು ಚೇತನನಾದ ಕಾರಣ ಅವನಿಂದ ಅವನಿಗೆ ಅಭೇದವಿದೆ. ಜೀವನೂ ಚೇತನನಾದುದರಿಂದ ಅವನಿಗೂ ಬ್ರಹ್ಮನಿಂದ ಅಭೇದವಿರಬೇಕು.

ಅಥವಾ, ಜೀವನು ಬ್ರಹ್ಮನ ಅಂಶ ಎಂದು– ಮಮೈವಾಂಶೋ ಜೀವಲೋಕೇ ಜೀವಭೂತಃ ಸನಾತನಃ— ಎಂಬ ಗೀತಾವಾಕ್ಯವು ಹೇಳುತ್ತದೆ.

ಪಟಾಂಶವಾದ ನೂಲು ಪಟದಿಂದ ಭಿನ್ನಾಭಿನ್ನವಾಗಿದೆ. ಅದರಂತೆ, ಬ್ರಹ್ಮಾಂಶನಾದ ಜೀವನು ಬ್ರಹ್ಮನಿಂದ ಭಿನ್ನಾಭಿನ್ನನಾಗಿದ್ದಾನೆ. ಇದು ಪೂರ್ವಪಕ್ಷ. ಇದರ ನಿರಾಕರಣೆಯನ್ನು ಅನುವ್ಯಾಖ್ಯಾನದಲ್ಲಿ ಮಾಡಲಾಗಿದೆ. ಶ್ಲೋಕದಲ್ಲಿ ಚೇತನತ್ವಹೇತುವನ್ನು ಮಾತ್ರ ಅಭೇದಸಾಧಕವನ್ನಾಗಿ ಹೇಳಲಾಗಿದೆ. ಅದರ ಜೊತೆಯಲ್ಲಿ ಅಂಶತ್ವಹೇತುವನ್ನೂ ಸೇರಿಸಿಕೊಳ್ಳಬೇಕು. ಅಂಶಾಂಶಿಗಳಿಗೆ ಭೇದಾಭೇದವಿದೆ. ನೂಲು ಬಟ್ಟೆಯ ಅಂಶ, ಬಟ್ಟೆ ಅಂಶಿ. ನೂಲಿಗೂ ಬಟ್ಟೆಗೂ ಭೇದಾಭೇದ. ಜೀವರೂ ಪರಮಾತ್ಮನ ಅಂಶರು. ಅವರೂ ಪರಮಾತ್ಮನಿಗಿಂತ ಭಿನ್ನಾಭಿನ್ನರು. ಇದು ಪೂರ್ವಪಕ್ಷ. ಇದು ಸರಿಯಲ್ಲ. ಜೀವನು ಪರಮಾತ್ಮನ ಪ್ರತಿಬಿಂಬ ಎನ್ನುತ್ತವೆ, ಶ್ರುತಿಗಳು. ಪ್ರತಿಬಿಂಬವು ಬಿಂಬಕ್ಕಿಂತ ಅತ್ಯಂತ ಭಿನ್ನವಾಗಿರುತ್ತದೆ. ಉದಾಹರಣೆಗೆ— ನೀರಿನಲ್ಲಿರುವ ಸೂರ್ಯನ ಪ್ರತಿಬಿಂಬವು ಸೂರ್ಯನಿಗಿಂತ ಭಿನ್ನವಾಗಿದೆ. ಜೀವರೂ ಈಶನ ಪ್ರತಿಬಿಂಬರಾಗಿರುವುದರಿಂದ ಅವರೂ ಪರಮಾತ್ಮನಿಗಿಂತ ಅತ್ಯಂತಭಿನ್ನರೇ ಆಗಿರಬೇಕು.

**''ಯಥೈಷಾ ಪುರುಷೇ ಚ್ಛಾಯಾ ಏತಸ್ಮಿನ್ನೇತದಾತತಮ್ ।''**
**''ಚ್ಛಾಯಾ ಯಥಾ ಪುಂಸದೃಶೀ(ಶಾ) ಪುಮಧೀನಾ ಚ ದೃಶ್ಯತೇ ।**
**ಏವಮೇವಾತ್ಮಕಾಃ ಸರ್ವೇ ಬ್ರಹ್ಮಾದ್ಯಾಃ ಪರಮಾತ್ಮನಃ'' ॥ ೧೧೫ ॥**

**'ಸತ್ತಾಪ್ರತೀತಿಕಾರ್ಯೇಷು ಪುಮಧೀನಾ(ನೋ) ಯಥೇಯತೇ ।**
**ಆಭಾಸಾ(ಸ) ಏವ(ಂ) ಪುರುಷಾ ಮುಕ್ತಾಶ್ಚ ಪರಮಾತ್ಮನಃ' ॥ ೧೧೬ ॥**

'ಛಾಯಾ=ನೆರಳು ಯಥಾ=ಹೇಗೆ ಪುರುಷೇ=ಪುರುಷನಲ್ಲಿ ಆತತಾ=ಅಧೀನವೋ ಅದರಂತೆ, ಏತಸ್ಮಿನ್=ಪರಮಾತ್ಮನಲ್ಲಿ ಏತತ್=ಜೀವ ಸಮೂಹವು ಆತತಂ=ಅಧೀನವಾಗಿದೆ' ಇದು ಶ್ರುತಿವಾಕ್ಯ.

ಛಾಯಾ=ನೆರಳು ಯಥಾ=ಹೇಗೆ ಪುಂಸದೃಶೀ=ಮನುಷ್ಯರಂತಿದ್ದು ಪುಮಧೀನಾ=ಮನುಷ್ಯರ ಅಧೀನವೂ ಆಗಿ ದೃಶ್ಯತೇ= ಕಾಣಲ್ಪಡುವುದೋ ಏವಮೇವ=ಅದರಂತೆಯೇ ಸರ್ವೇ ಬ್ರಹ್ಮಾದ್ಯಾಃ= ಬ್ರಹ್ಮಾದಿ ಎಲ್ಲ ಜೀವರೂ ಪರಮಾತ್ಮನಃ=ಭಗವಂತನ ಆತ್ಮಕಾಃ=ಅಲ್ಪ ಪ್ರತಿಬಿಂಬರು. ಛಾಯಾ=ನೆರಳು ಯಥಾ=ಹೇಗೆ ಸತ್ತಾಪ್ರತೀತಿಕಾರ್ಯೇಷು =ತಮ್ಮ ಇರುವಿಕೆ, ತಮ್ಮ ಜ್ಞಾನ,

ತಮ್ಮ ಕ್ರಿಯೆಗಳಲ್ಲಿ ಪುಮಧೀನಾ=ಮನುಷ್ಯರ ಅಧೀನವಾಗಿ ಈಯತೇ= ತಿಳಿಯಲ್ಪಡುವುದೋ ತಥಾ=ಹಾಗೆಯೇ ಪುರುಷಾಃ=ಅಮುಕ್ತ ಜೀವರು, ಮುಕ್ತಾಶ್ಚ=ಮುಕ್ತರೂ ಕೂಡಾ ಪರಮಾತ್ಮನಃ=ಭಗವಂತನ ಆಭಾಸಾ ಏವ=ಪ್ರತಿಬಿಂಬರೇ ಆಗಿರುತ್ತಾರೆ.

**ಭಾವಾರ್ಥ—** ''ಯಥೈಷಾ ಪುರುಷೇ ಛಾಯಾ'' ಇದು ಜೀವರು ಪರಮಾತ್ಮನ ಪ್ರತಿಬಿಂಬ ಎನ್ನುವುದಕ್ಕೆ ಪ್ರಮಾಣ. ನಮ್ಮ ನೆರಳು ನಮ್ಮಂತೆಯೇ ಇದ್ದು ನಮ್ಮ ಅಧೀನವಾಗಿದೆ. ನಮ್ಮಲ್ಲಿ ಚಲನೆಯಾದಂತೆ ನೆರಳಿನಲ್ಲಿಯೂ ಚಲನೆಯಾಗುತ್ತದೆ. ಅದರಂತೆ ಜೀವರು ಪರಮಾತ್ಮನಂತೆ ಜ್ಞಾನರೂಪರಾಗಿದ್ದು ಅವನ ಅಧೀನರಾಗಿದ್ದಾರೆ. ಆದ್ದರಿಂದ ಪರಮಾತ್ಮನಿಗಿಂತ ಅತ್ಯಂತ ಭಿನ್ನರು.

2. 'ಛಾಯಾ ಯಥಾ' ಎನ್ನುವುದು ಇನ್ನೊಂದು ಶ್ರುತಿ. ನೆರಳು ನಮ್ಮ ಸದೃಶ ಮತ್ತು ನಮ್ಮ ಅಧೀನವಾಗಿ ಹೇಗೆ ಕಾಣುವುದೋ ಅದರಂತೆ, ಬ್ರಹ್ಮಾದಿ ಸಕಲ ಜೀವರೂ ಪರಮಾತ್ಮನ ಅಧೀನರೂ ಸದೃಶರೂ ಆಗಿದ್ದಾರೆ.

3. 'ಸತ್ತಾಪ್ರತೀತಿಕಾರ್ಯೇಷು' ಇದು ಇನ್ನೊಂದು ಶ್ರುತಿ. ನೆರಳು ಬಿಂಬಾಧೀನವಾದಂತೆ ಎಲ್ಲ ಮುಕ್ತಾಮುಕ್ತಜೀವರ, ಸತ್ತಾ, ಜ್ಞಾನ, ಪ್ರಯತ್ನಗಳಲ್ಲಿ ಭಗವಂತನ ಅಧೀನರು. ಆದ್ದರಿಂದ ಈಶ ಪ್ರತಿಬಿಂಬರು.

**ಛಾಯಾ ವಿಷ್ಣೋ ರಮಾ ತಸ್ಯಾಶ್ಛಾಯಾ ಧಾತಾ ವಿಶೇಷಕೌ ।**
**ತಸ್ಯೇಂದ್ರಕಾಮೌ ಚ ತಯೋಸ್ತಯೋರನ್ಯೇಽಖಿಲಾ ಅಪಿ ॥ ೧೧೭ ॥**

**ಹರೇರ್ಬ್ರಹ್ಮಾಸ್ಯ ಗೀಸ್ತಸ್ಯಾ ವಿಶೇಷಾವಿಂದ್ರ ಏತಯೋಃ ।**
**ಮಾರಶ್ಚಾಭಾಸಕಾಃ ಸರ್ವ ಏತಯೋಸ್ತದಧೀನತಃ ॥ ೧೧೮ ॥**

**ಸರ್ವೇಽಲ್ಪಶಕ್ತಯಶ್ಚೈವ ಪೂರ್ಣಶಕ್ತಿಃ ಪರೋ ಹರಿಃ ।**
**ಚೇತನತ್ವೇಽಪಿ ಭಿನ್ನಾಸ್ತೇ ತಸ್ಮಾದೇತೇನ ಸರ್ವದಾ ॥ ೧೧೯ ॥**

ರಮಾ=ಲಕ್ಷ್ಮೀದೇವಿಯು ವಿಷ್ಣೋಃ ಛಾಯಾ=ವಿಷ್ಣುವಿನ ನೆರಳಿ ನಂತಿದ್ದಾಳೆ. ತಸ್ಯಾಃ=ಅವಳ ಛಾಯಾ=ನೆರಳಿನಂತಿರುವವನು ಧಾತಾ=

ಚತುರ್ಮುಖಬ್ರಹ್ಮದೇವ. ತಸ್ಯ=ಅವನ ನೆರಳು ವಿ–ಶೇಷಕೌ= ಗರುಡ ಶೇಷರು. ತಯೋಃ=ಅವರಿಬ್ಬರ ನೆರಳು ಇಂದ್ರ–ಕಾಮೌ=ಇಂದ್ರದೇವ ಮತ್ತು ಕಾಮದೇವ. ತಯೋಃ=ಅವರಿಬ್ಬರಿಗೆ ಅಖಿಲಾ ಅಪಿ=ಎಲ್ಲರೂ ಅಧೀನರು.

2. ಎರಡನೆಯ ಶ್ರುತ್ಯರ್ಥ— ಹರೇಃ=ಪರಮಾತ್ಮನ ಪ್ರತಿಬಿಂಬ ಬ್ರಹ್ಮಾ=ಬ್ರಹ್ಮದೇವ, ಅಸ್ಯ=ಬ್ರಹ್ಮದೇವನ ಪ್ರತಿಬಿಂಬ ಗೀಃ=ಸರಸ್ವತೀ ದೇವಿ. ತಸ್ಯಾಃ=ಅವಳ ಪ್ರತಿಬಿಂಬ ವಿ–ಶೇಷೌ=ಗರುಡಶೇಷರು. ಏತಯೋಃ= ಇವರಿಬ್ಬರ ಪ್ರತಿಬಿಂಬ ಇಂದ್ರಃ=ಇಂದ್ರ ಮತ್ತು ಮಾರಶ್ಚ=ಮನ್ಮಥನೂ ಏತಯೋಃ=ಇವರಿಬ್ಬರ ಆಭಾಸಕಾಃ=ಪ್ರತಿಬಿಂಬರು ಸರ್ವೇ=ಎಲ್ಲಾ ಜೀವರು. ತದಧೀನತಃ=ಅವರವರ ಅಧೀನರಾದುದರಿಂದ ಸರ್ವೇ=ಎಲ್ಲರೂ ಆಭಾಸಕಾಃ=ಆಭಾಸರೆನಿಸಿದ್ದಾರೆ, ಅಂದರೆ ಪ್ರತಿಬಿಂಬರೆನಿಸಿದ್ದಾರೆ. ಸರ್ವೇ= ಎಲ್ಲರೂ ಅಲ್ಪಶಕ್ತಯಃ=ಕಡಿಮೆ ಶಕ್ತಿಉಳ್ಳವರು. ಪೂರ್ಣಶಕ್ತಿಃ=ಪರಿಪೂರ್ಣ ಶಕ್ತಿವುಳ್ಳವನು ಪರೋ ಹರಿಃ=ಸರ್ವೋತ್ತಮನಾದ ಶ್ರೀಹರಿಯು. ತಸ್ಮಾತ್= ಆದ್ದರಿಂದಲೇ ತೇ=ಅವರೆಲ್ಲರೂ ಚೇತನತ್ವೇऽಪಿ=ಚೇತನರಾದರೂ ಏತೇನ= ಪರಮಾತ್ಮನಿಂದ ಸರ್ವದಾ=ಸರ್ವಕಾಲಗಳಲ್ಲೂ ಭಿನ್ನಾಃ=ಭಿನ್ನರು.

**ಭಾವಾರ್ಥ—** ಜೀವರು ಪರಮಾತ್ಮನ ಆಭಾಸರು ಅಂದರೆ ಪ್ರತಿಬಿಂಬರು. ಪ್ರತಿಬಿಂಬರೆಂದರೆ ಅವನಂತಿದ್ದು ಅವನಿಗೆ ಸದೃಶರು. ಎಲ್ಲ ಜೀವರೂ ಅವನ ಸಾಕ್ಷಾತ್ ಪ್ರತಿಬಿಂಬರಲ್ಲ. ಲಕ್ಷ್ಮೀದೇವಿ ಸಾಕ್ಷಾತ್ ಪ್ರತಿಬಿಂಬಳು. ಅವಳ ಪ್ರತಿಬಿಂಬ ಬ್ರಹ್ಮದೇವ. ಬ್ರಹ್ಮದೇವನ ಪ್ರತಿಬಿಂಬ ಸರಸ್ವತೀದೇವಿ. ಅವಳ ಪ್ರತಿಬಿಂಬ ಗರುಡಶೇಷರುದ್ರರು. ಅವರ ಪ್ರತಿಬಿಂಬ ಇಂದ್ರಕಾಮರು. ಅವರಿಗೆ ಎಲ್ಲ ಜೀವರು ಪ್ರತಿಬಿಂಬರು.

**ಇತ್ಯಾದಿಶ್ರುತಿವಾಕ್ಯೇಭ್ಯೋ ಜ್ಞಾಯತೇ ಭೇದ ಏವ ಹಿ ॥ ೧೨೦ ॥**

ಇತ್ಯಾದಿಶ್ರುತಿವಾಕ್ಯೇಭ್ಯಃ=ಈ ಮೊದಲಾದ ಶ್ರುತಿವಚನಗಳಿಂದ ಭೇದ ಏವ ಜ್ಞಾಯತೇ=ಪರಮಾತ್ಮನಿಗಿಂತ ಜೀವರಿಗೆ ಭೇದವೇ ತಿಳಿಯುತ್ತದೆ.

**ಭಾವಾರ್ಥ—** ಚೇತನತ್ವ ಹೇತುವಿನಿಂದ ಜೀವರು ಪರಮಾತ್ಮನಿಗಿಂತ

ಅಭಿನ್ನರು, ಎಂದು ಪೂರ್ವಪಕ್ಷಿಯು ಸಾಧನೆ ಮಾಡಿದರೆ ಸಿದ್ಧಾಂತಿ ಪ್ರತಿಬಿಂಬತ್ವಹೇತುವಿನಿಂದ ಭೇದವನ್ನು ಸಾಧನೆ ಮಾಡಬಹುದು. ಸಿದ್ಧಾಂತದ ಈ ಅನುಮಾನಕ್ಕೆ ಶ್ರುತಿಸಂವಾದ ಇರುವುದರಿಂದ ಪ್ರಬಲವಾಗಿದ್ದು ಇದರಿಂದ ಪೂರ್ವಪಕ್ಷಿಯ ಚೇತನತ್ವಾನುಮಾನವು ಬಾಧಿತವಾಗುತ್ತದೆ.

## ಭಾಸ್ಕರಾದ್ವೈತವಿಮರ್ಶೆ

**ಆಭಾಸತ್ವಂ ಹಿ ನಿರ್ಣೀತಂ ಜೀವಸ್ಯ ಪರಮಾತ್ಮನಃ ।**
**ತನ್ನ ಯುಕ್ತಂ ಯದಾಭಾಸ ಉಪಾಧ್ಯಾಯತ್ತ ಈಯತೇ ॥ ೧೨೧ ॥**

**ಉಪಾಧ್ಯಾಯತ್ತತಾಭಾವಾದಾಭಾಸತ್ವವಿರೋಧತಃ ।**
**ಚೇತನತ್ವೇನ ಚಾಂಶತ್ವಾತ್ ಸಮುದಾಯ್ಯೈಕ್ಯಮಾಪತೇತ್ ॥ ೧೨೨ ॥**

ಜೀವಸ್ಯ=ಜೀವನಿಗೆ ಪರಮಾತ್ಮನಃ=ಪರಮಾತ್ಮನ ಆಭಾಸತ್ವಂ= ಪ್ರತಿಬಿಂಬತ್ವವು ನಿರ್ಣೀತಂ=ಏನು ನಿರ್ಣಯಿಸಲ್ಪಟ್ಟಿದೆಯೋ ತನ್ನ ಯುಕ್ತಂ= ಅದು ಯುಕ್ತಿಗೆ ವಿರುದ್ಧವಾದುದು. ಹೇಗೆಂದರೆ, ಯತ್- ಆಭಾಸಃ= ಯಾವುದು ಪ್ರತಿಬಿಂಬವೋ ಅದೆಲ್ಲವೂ ಉಪಾಧ್ಯಾಯತ್ತಃ ಈಯತೇ= ಕನ್ನಡಿ, ನೀರು ಮುಂತಾದ ಯಾವುದಾದರೊಂದು ಉಪಾಧಿಯ ಅಧೀನ ವಾಗಿರುವುದಾಗಿ ಕಂಡಿದೆ. ಜೀವರಿಗಾದರೋ ಉಪಾಧ್ಯಾಯತ್ತತಾ- ಭಾವಾತ್=ಯಾವುದೇ ಉಪಾಧಿಯ ಅಧೀನತ್ವವಿಲ್ಲವಾದ ಕಾರಣ ಅವರು ಪ್ರತಿಬಿಂಬರೂ ಅಲ್ಲ. ಅಷ್ಟೇ ಅಲ್ಲ, ಆಭಾಸತ್ವವಿರೋಧತಃ=ಪ್ರತಿಬಿಂಬತ್ವಕ್ಕೆ ವಿರೋಧವಿರುವುದರಿಂದಾಗಿಯೇ ಜೀವೇಶರಲ್ಲಿ ಭೇದವೂ ಇಲ್ಲ. ಹೀಗೆ, ಅತ್ಯಂತಭೇದವು ಇಲ್ಲದಿರುವುದರಿಂದ ಚೇತನತ್ವೇನ=ಎಲ್ಲರೂ ಚೇತನರಾದುದ ರಿಂದ ಅಂಶತ್ವಾಚ್ಚ=ಜೀವರೆಲ್ಲರೂ ಬ್ರಹ್ಮನ ಅಂಶರೂ ಆಗಿರುವುದರಿಂದ ಸಮುದಾಯ್ಯೈಕ್ಯಂ=ಜೀವಸಮುದಾಯಕ್ಕೆ ಬ್ರಹ್ಮಾಭೇದವು ಬರಬೇಕಾದೀತು.

**ಭಾವಾರ್ಥ**— ಜೀವರು ಬ್ರಹ್ಮನಿಂದ ಅತ್ಯಂತ ಭಿನ್ನರು ಎಂದು ಸ್ವಮತ. ಭಾಸ್ಕರಸಿದ್ಧಾಂತದಲ್ಲಿ ಸಕಲಚೇತನಸಮುದಾಯವೇ ಬ್ರಹ್ಮ. ಚೇತನರು ಆ ಸಮುದಾಯದಲ್ಲಿ ಘಟಕರು. ಸಮುದಾಯ–ಸಮುದಾಯಿಗಳಿಗೆ

ಭೇದಾಭೇದ. ಆದ್ದರಿಂದ ಜೀವ–ಬ್ರಹ್ಮರಿಗೆ ಭೇದಾಭೇದವಿದೆ. ಅತ್ಯಂತ ಭೇದವಲ್ಲ. ಇದು ಭಾಸ್ಕರದರ್ಶನದ ವಾದ.

ಜೀವನು ಬ್ರಹ್ಮನ ಪ್ರತಿಬಿಂಬ ಎನ್ನುವುದು ಸರಿಯಲ್ಲ ಎಂದೂ ಅವರ ಆಕ್ಷೇಪ. ನಾವು ಕನ್ನಡಿಯ ಮುಂದೆ ನಿಂತಾಗ ನಮ್ಮ ಪ್ರತಿಬಿಂಬವು ಕನ್ನಡಿಯಲ್ಲಿ ಬೀಳುತ್ತದೆ. ನೀರಿನಲ್ಲಿ ಸೂರ್ಯನ ಪ್ರತಿಬಿಂಬವು ಬೀಳುತ್ತದೆ. ಹೀಗೆ ಪ್ರತಿಬಿಂಬ ಮೂಡಲು ಒಂದು ಉಪಾಧಿಯ ಅಗತ್ಯವಿದೆ. ಜೀವ–ಬ್ರಹ್ಮರ ಮಧ್ಯದಲ್ಲಿ ಇಂತಹ ಉಪಾಧಿ ಯಾವುದೂ ಇಲ್ಲ. ಆದ್ದರಿಂದ ಜೀವನು ಪ್ರತಿಬಿಂಬನಾಗಲು ಸಾಧ್ಯವಿಲ್ಲ.

ಅಥವಾ, ಜೀವನು ಪ್ರತಿಬಿಂಬನೆಂದು ಅಂಗೀಕರಿಸಿದರೂ ಬಿಂಬ ಪ್ರತಿಬಿಂಬಗಳಿಗೆ ಅಭೇದವಿರುವುದರಿಂದ ಜೀವೇಶರಿಗೆ ಅತ್ಯಂತಭೇದ ಇರಲು ಸಾಧ್ಯವಿಲ್ಲ. ಕನ್ನಡಿಯ ಮುಂದೆ ನಿಂತಾಗ ನಮ್ಮ ಕಣ್ಣಿನ ರಶ್ಮಿಗಳು ಕನ್ನಡಿಗೆ ತಾಗಿ ಹಿಂದಕ್ಕೆ ಬಂದು ನಮ್ಮ ಮುಖವೇ ಕಾಣುವಂತೆ ಮಾಡುತ್ತದೆ. ಹೀಗೆ ನಾವು ನೋಡುವ ಪ್ರತಿಬಿಂಬ ನಾವೇ, ನಮಗಿಂತ ಬೇರಲ್ಲ. ಹೀಗೆ, ಜೀವನು ಈಶನ ಪ್ರತಿಬಿಂಬನಾದಲ್ಲಿ ಜೀವೇಶರಿಗೆ ಅಭೇದವೇ ಬರಬೇಕು, ಅತ್ಯಂತ ಭೇದವಲ್ಲ.

ಆದ್ದರಿಂದ ಎಲ್ಲರೂ ಚೇತನರಾದುದರಿಂದ ಜೀವಸಮುದಾಯವೇ ಬ್ರಹ್ಮ. ಬ್ರಹ್ಮನಿಂದ ಜೀವರಿಗೆ ಮಾಯಾವಾದಿಗಳು ಹೇಳುವಂತೆ ಅತ್ಯಂತಾಭೇದವೂ ಅಲ್ಲ. ದ್ವೈತದರ್ಶನ ಹೇಳುವಂತೆ ಅತ್ಯಂತಭೇದವೂ ಅಲ್ಲ. ಕಿಂತು ಭೇದಾಭೇದ.

**ಅತಃ ಪೃಥಕ್ತ್ವಮುದಿತಂ ಸಮುದಾಯಾಂಶಯೋರ್ಭವೇತ್ ।**
**ಈಶಾಖ್ಯಾ ಸಮುದಾಯೇ ಸ್ಯಾದೀಶರೂಪೇಷ್ವಿವೋದಿತಾ ॥ ೧೨೩ ॥**

**ಅತೋ ದೇಹಾದ್ಯುಪಾಧೀನಾಮಪಾಯೇ ಸಮತಾ ಭವೇತ್ ।**
**ಈಶರೂಪೈರಥಾಭಾಸಾ ಮುಖ್ಯತಃ ಸೂರ್ಯಕಾದಿವತ್ ।**
**ಯದಾ ತದೋಪಾಧ್ಯಾಯತ್ತರೂಪಾಣಾಂ ನಾಶಿತಾ ಭವೇತ್ ॥ ೧೨೪ ॥**

ಅತಃ=ಆದ್ದರಿಂದ ದೇಹಾದ್ಯುಪಾಧೀನಾಮ್=ದೇಹ–ಅವಿದ್ಯಾ–

ಕಾಮ-ಕರ್ಮಾದಿಉಪಾಧಿಗಳ ಅಪಾಯೇ=ನಾಶವಾದಾಗ ಈಶರೂಪೈಃ= ಭಗವಂತನ ಮತ್ಸ್ಯಾದಿರೂಪಗಳಿಂದ ಜೀವನಿಗೆ ಸಮತಾ ಭವೇತ್= ಸಮಾನತೆಯು ಬರುತ್ತದೆ.

ಅಥ=ಒಂದುವೇಳೆ ಯದಾ=ಯಾವಾಗ ಜೀವರು ಸೂರ್ಯ ಕಾದಿವತ್=ಸೂರ್ಯಾದಿಪ್ರತಿಬಿಂಬಗಳಂತೆ ಮುಖ್ಯತಃ=ಉಪಾಧಿನಿಮಿತ್ತ ದಿಂದ ಮುಖ್ಯವಾಗಿ ಆಭಾಸಾಃ=ಪ್ರತಿಬಿಂಬರಾದರೆ ತದಾ=ಆಗ ಉಪಾಧ್ಯಾಯತ್ತರೂಪಾಣಾಂ=ಉಪಾಧಿನಿಮಿತ್ತಸ್ವರೂಪವುಳ್ಳ ಅಂತಹ ಜೀವರಿಗೆ ನಾಶಿತಾ ಭವೇತ್=ನಾಶವಾದೀತು.

ಭಾವಾರ್ಥ— ಜೀವರಿಗೆ ಬ್ರಹ್ಮನೊಂದಿಗೆ ಭೇದ-ಅಭೇದಗಳೆರಡೂ ಇದ್ದರೂ ಅವೆರಡೂ ಸ್ವಾಭಾವಿಕಗಳಲ್ಲ. ಅಭೇದವು ಸ್ವಾಭಾವಿಕ, ಭೇದವು ಔಪಾಧಿಕ. ಭಗವಂತನು ಮತ್ಸ್ಯ-ಕೂರ್ಮಾದಿ ಅನಂತರೂಪಗಳನ್ನು ತಾಳುತ್ತಾನೆ. ಆ ದೇಹಪ್ರಯುಕ್ತವಾಗಿ ಆ ರೂಪಗಳಿಗೆ ಮೂಲರೂಪದಿಂದ ಭೇದವಿದ್ದರೂ ದೇಹನಾಶವಾದಾಗ ಅವೆಲ್ಲವೂ ಭಗವಂತನಿಂದ ಅಭಿನ್ನ ವಾಗುತ್ತವೆ. ಅದರಂತೆ ಜೀವರೂ ಅನಾದಿಯಾದ ಅವಿದ್ಯಾ-ಕಾಮ-ಕರ್ಮಾ ದಿಗಳಿಂದಾಗಿ ಅನೇಕ ದೇಹಗಳ ಸಂಬಂಧವನ್ನು ಪಡೆಯುತ್ತಾರೆ. ಜ್ಞಾನ-ಕರ್ಮಗಳಿಂದ ದೇಹಾದಿ ಉಪಾಧಿಗಳು ನಿಃಶೇಷವಾಗಿ ನಾಶಹೊಂದಿದಾಗ ಈಶನ ರೂಪಗಳಂತೆ ಅವರೂ ಬ್ರಹ್ಮಾಭಿನ್ನರಾಗುತ್ತಾರೆ. ಈಶರೂಪಗಳಿಗೂ ಜೀವರಿಗೂ ಒಂದು ವ್ಯತ್ಯಾಸವಿದೆ— ಮತ್ಸ್ಯಾದಿರೂಪಗಳು ಉಪಾಧಿ ಯಿಂದ ಭಿನ್ನಗಳಾದರೂ ಈಶನ ಐಶ್ವರ್ಯ ಅವುಗಳಲ್ಲಿ ಮಾಸುವುದಿಲ್ಲ. ಮೂಲರೂಪದ ಜ್ಞಾನಶಕ್ತ್ಯಾದಿಗಳೇ ಇರುತ್ತವೆ. ಜೀವರಲ್ಲಿ ಮಾತ್ರ ಅದು ಮರೆಯಾಗಿರುತ್ತದೆ. ಹೀಗೆ, ಜೀವರು ಅಗ್ನಿಯ ಕಿಡಿಗಳಂತೆ ಬ್ರಹ್ಮನ ಅಂಶರು, ಪ್ರತಿಬಿಂಬರಲ್ಲ. ಒಂದುವೇಳೆ ಪ್ರತಿಬಿಂಬವಾದರೆ, ಪ್ರತಿಬಿಂಬನಾದ, ನೀರಲ್ಲಿ ಕಾಣುವ ಸೂರ್ಯನು ನೀರು ಬತ್ತಿದಾಗ ನಾಶವಾಗುವಂತೆ ದೇಹಾದಿಉಪಾಧಿ ಗಳು ನಾಶವಾದಾಗ ಪ್ರತಿಬಿಂಬನಾದ ಜೀವನೂ ನಾಶವಾಗಬೇಕಾದೀತು. ಆದ್ದರಿಂದ ಜೀವರು ಪ್ರತಿಬಿಂಬರಲ್ಲ, ಅಂಶರು. ಈಶನಿಂದ ಭಿನ್ನಾಭಿನ್ನರು. ಇದು ಈ ಅಧಿಕರಣದ ಪೂರ್ವಪಕ್ಷ.

**ಇತ್ಯಾಶಂಕಾನಿವೃತ್ತ್ಯರ್ಥಮಾಹ ವೇದಾಧಿಪಃ ಪ್ರಭುಃ ।**
**ಅತ ಏವೋಪಮೇತ್ಯೇವ ಚಾನ್ಯಾಭಾಸವಿಶೇಷಿತಾಮ್ ॥ ೧೨೫ ॥**

ಇತ್ಯಾಶಂಕಾನಿವೃತ್ತ್ಯರ್ಥಮ್=ಈ ಆಕ್ಷೇಪದ ನಿರಾಕರಣೆಗಾಗಿ ವೇದಾಧಿಪಃ ಪ್ರಭುಃ=ವೇದದ ಒಡೆಯನಾದ ಸ್ವಾಮಿಯು ಅತಏವೋಪಮೇತ್ಯೇವಚ=''ಅತ ಏವ ಚೋಪಮಾ'' ಎಂಬ ಸೂತ್ರವನ್ನು ಆಹ=ಹೇಳಿದ್ದಾರೆ. ಈ ಸೂತ್ರದಲ್ಲಿ ಜೀವನಿಗೆ ಅನ್ಯಾಭಾಸ ವಿಶೇಷಿತಾಂ ಆಹ=ಸೂರ್ಯಕಾದಿ ಪ್ರತಿಬಿಂಬಗಳಿಗಿಂತ ವಿಶೇಷವನ್ನು ಆಹ=ಹೇಳಿದ್ದಾರೆ.

ಭಾವಾರ್ಥ— ಹೀಗೆ ಜೀವರು ಈಶನಿಗಿಂತ ಭಿನ್ನಾಭಿನ್ನರು ಎನ್ನುವ ಆಕ್ಷೇಪದ ಪರಿಹಾರಕ್ಕಾಗಿ 'ಅತ ಏವ ಚೋಪಮಾ ಸೂರ್ಯಕಾದಿವತ್' ಎಂಬ ಸೂತ್ರವನ್ನು ವೇದವ್ಯಾಸರು ರಚಿಸಿದ್ದಾರೆ. ನೀರಿನಲ್ಲಿ ಕಾಣುವ ಸೂರ್ಯನ ಪ್ರತಿಬಿಂಬದಂತೆ ಜೀವನು ಈಶನ ಪ್ರತಿಬಿಂಬನಲ್ಲ, ಅವನು ವಿಲಕ್ಷಣವಾದ ಪ್ರತಿಬಿಂಬ ಎಂದು ಸೂತ್ರದ ಅಭಿಪ್ರಾಯ.

**ಯದುಕ್ತಂ ತದಧೀನತ್ವಂ ಸರ್ವಾವಸ್ಥಾಸ್ವಶೇಷತಃ ।**
**ಜೀವಸ್ಯ ಸದೃಶತ್ವಂ ಚ ಚಿತ್ತ್ವಮಾತ್ರಂ ನಚಾಪರಮ್ ॥ ೧೨೬ ॥**

ಸರ್ವಾವಸ್ಥಾಸು=ಜಾಗ್ರದಾದಿ ಎಲ್ಲಾ ಅವಸ್ಥೆಗಳಲ್ಲೂ ಅಶೇಷತಃ=ಎಲ್ಲ ಕ್ರಿಯೆಗಳಲ್ಲೂ ತದಧೀನತ್ವಂ=ಈಶಾಧೀನತ್ವವು ಯದುಕ್ತಂ=ಏನು ಸಂಧ್ಯಾಧಿಕರಣದಲ್ಲಿ ಹೇಳಲ್ಪಟ್ಟಿದೆಯೋ ಸದೃಶತ್ವಂ=ಈಶಸಾದೃಶ್ಯವು ಯದುಕ್ತಂ=ಪುಂಸ್ತ್ವಾಧಿಕರಣದಲ್ಲಿ (2-3-16) ಏನು ಹೇಳಲ್ಪಟ್ಟಿದೆಯೋ ತತ್=ಆ ಸಾದೃಶ್ಯವು ಚಿತ್ತ್ವಮಾತ್ರಂ=ಜ್ಞಾನಸ್ವರೂಪತ್ವ ಮಾತ್ರ ಹೊರತು, ನಚಾಪರಮ್=ಸ್ವಾತಂತ್ರ್ಯಾದಿರೂಪಸಾದೃಶ್ಯವಲ್ಲ.

ಭಾವಾರ್ಥ— ಅತ ಏವ ಚೋಪಮಾ ಸೂರ್ಯಕಾದಿವತ್, ಎಂದು ಸೂತ್ರದಲ್ಲಿರುವ 'ಅತಃ' ಎಂಬ ಏತಚ್ಛಬ್ದದ ಅರ್ಥವನ್ನು ಇಲ್ಲಿ ತಿಳಿಸಲಾಗಿದೆ. ಆ ಶಬ್ದ ಸಂಧ್ಯಾಧಿಕರಣದಲ್ಲಿ ಹೇಳಿರುವ, ಜೀವಕ್ರಿಯೆಯು ಭಗವಂತನ ಅಧೀನ ಎಂಬ ವಿಷಯವನ್ನೂ ಪುಂಸ್ತ್ವಾಧಿಕರಣದಲ್ಲಿ ಹೇಳಿದ ಈಶ ಸಾದೃಶ್ಯವನ್ನೂ ಪರಾಮರ್ಶ ಮಾಡುತ್ತದೆ. ಈಶನ ಸಾದೃಶ್ಯ ಜೀವನಲ್ಲಿ

ಚಿದ್ರೂಪತ್ವ. ಹೀಗೆ, ಅತಃ ಎಂದರೆ ಜೀವನ ಎಲ್ಲ ಕ್ರಿಯೆಗಳೂ ಭಗವಂತನ ಅಧೀನವಾದುದರಿಂದ ಮತ್ತು ಜೀವನು ಪರಮಾತ್ಮನ ಸದೃಶನಾದುದರಿಂದ ಅವನು ಈಶನ ಪ್ರತಿಬಿಂಬ. ಆದರಿಂದಾಗಿಯೇ ಭಗವಂತನ ಮತ್ಸ್ಯಾದಿ ರೂಪಗಳ ಅಭೇದಸಾದೃಶ್ಯ ಜೀವನಿಗೆ ಇಲ್ಲ. ಮತ್ಸ್ಯಾದಿಗಳಂತೆ ಜೀವನು ಪರಮಾತ್ಮನಿಗಿಂತ ಅಭಿನ್ನನಲ್ಲ. ಇದು ಸೂತ್ರದ ಅರ್ಥ.

**ತಾವನ್ಮಾತ್ರೇಣ ಚಾಭಾಸೋ ರೂಪಮೇಷಾಂ ಚಿದಾತ್ಮನಾಮ್ ।**
**ನೋಪಾಧ್ಯಧೀನತಾದ್ಯೈಶ್ಚ ನಾತಿಸಾಮ್ಯಂ ನಿದರ್ಶನೇ ॥ ೧೨೭ ॥**

ತಾವನ್ಮತ್ರೇಣ=ತದಧೀನತ್ವ ಮತ್ತು ತದಲ್ಪಸಾದೃಶ್ಯಗಳಿಂದಾಗಿಯೇ ಏಷಾಂ ಚಿದಾತ್ಮನಾಂ ರೂಪಂ=ಈ ಚಿದ್ರೂಪರಾದ ಜೀವರ ರೂಪವು ಆಭಾಸಃ=ಪರಮಾತ್ಮನ ಪ್ರತಿಬಿಂಬವು. ಉಪಾಧ್ಯಧೀನತಾದ್ಯೈಶ್ಚ ನ=ಲೌಕಿಕ ಪ್ರತಿಬಿಂಬಕ್ಕೆ ಉಪಾಧಿಯ ಅಪೇಕ್ಷೆ ಇರುವಂತೆ ಜೀವರು ಉಪಾಧಿಯ ಅಧೀನರಾಗಿರುವುದರಿಂದಲ್ಲ. ನಿದರ್ಶನೇ=ಸೂರ್ಯಪ್ರತಿಬಿಂಬರೂಪವಾದ ದೃಷ್ಟಾಂತದಲ್ಲಿ ನ ಅತಿಸಾಮ್ಯಂ=ಎಲ್ಲಾ ವಿಧದ ಸಾಮ್ಯವು ವಿವಕ್ಷಿತವಲ್ಲ.

ಭಾವಾರ್ಥ— ಸೂತ್ರದಲ್ಲಿ ನೀರಿನಲ್ಲಿ ಕಾಣುವ ಸೂರ್ಯನ ಪ್ರತಿಬಿಂಬವನ್ನು ಉದಾಹರಣೆಯನ್ನಾಗಿ ಕೊಟ್ಟು ಜೀವನು ಈಶನ ಪ್ರತಿಬಿಂಬ ಎಂದು ಹೇಳಲಾಗಿದೆ. ಸೂರ್ಯಪ್ರತಿಬಿಂಬ ಸೂರ್ಯಸದೃಶ-ಸೂರ್ಯಾಧೀನವಾಗಿರುವಂತೆ ನೀರು ಎಂಬ ಉಪಾಧಿಸಾಪೇಕ್ಷವೂ ಆಗಿದೆ. ಈ ಎಲ್ಲ ಧರ್ಮಗಳು ಜೀವನಲ್ಲಿ ಇಲ್ಲ. ಜೀವರೂಪಪ್ರತಿಬಿಂಬವು ಉಪಾಧಿಸಾಪೇಕ್ಷವಲ್ಲ. ಅದು ಬಿಟ್ಟು ತದಧೀನತ್ವ-ತತ್‌ಸಾದೃಶ್ಯ ಈ ಎರಡು ಧರ್ಮಗಳಿಂದಷ್ಟೇ ಸೂರ್ಯಪ್ರತಿಬಿಂಬದ ಸಾದೃಶ್ಯವು ವಿವಕ್ಷಿತ.

**ಕಿಂಚಿತ್ಸುಖಾದಿಸಾದೃಶ್ಯಮಪೀಶೇನಾಸುರಾನ್ಮತೇ ।**
**ತತ ಆಭಾಸತೇ ನಿತ್ಯಂ ತದ್ವದಾಭಾಸತೇಽಪಿ ಚ ॥ ೧೨೮ ॥**

**ಭಾನಮಸ್ತಿತ್ವಮಪಿ ಚೈವಾಸಮಂತಾದ್ ಯತಸ್ತತಃ ।**
**ಜೀವ ಆಭಾಸ ಉದ್ದಿಷ್ಟಃ ಸದೈವ ಪರಮಾತ್ಮನಃ ॥**
**ನ ಜಲಾಯತ್ತಸೂರ್ಯಾದಿಪ್ರತಿಬಿಂಬೋಪಮತ್ವತಃ ॥ ೧೨೯ ॥**

ಅಸುರಾನ್ ಋತೇ=ಅಸುರರನ್ನು ಬಿಟ್ಟು ಇತರ ಜೀವರಿಗೆ ಈಶೇನ=ಪರಮಾತ್ಮನಿಂದ ಕಿಂಚಿತ್‌ಸುಖಾದಿಸಾದೃಶ್ಯಂ=ಅಲ್ಪಸುಖಾದಿ ಧರ್ಮಗಳ ಸಾದೃಶ್ಯವೂ ಇದೆ.

ಜೀವನು ತತಃ=ಪರಮಾತ್ಮನಿಂದಾಗಿ ನಿತ್ಯಂ=ಸರ್ವದಾ ಆಭಾಸತೇ=ತಿಳಿಯುತ್ತಾನೆ ಹಾಗೂ ಇದ್ದಾನೆ, ಅಪಿಚ=ಮತ್ತು ತದ್ವದಾಭಾಸತೇ=ಪರಮಾತ್ಮನಂತೆಯೇ ಜ್ಞಾನರೂಪನಾಗಿ ಇದ್ದಾನೆ ಕೂಡಾ. ಜೀವನ ಭಾನಂ=ಜ್ಞಾನವೂ (ಆ=ಸಮಂತಾತ್= 'ಆಭಾಸ' ಎಂಬಲ್ಲಿರುವ ಆ ಎಂಬ ಶಬ್ದಕ್ಕೆ ಸಮಂತಾತ್ ಎಂದು ಅರ್ಥ.) ಅಸ್ತಿತ್ವಮಪಿ=ಇರುವೂ ಕೂಡಾ. ಹೀಗೆ ಜೀವನ ಜ್ಞಾನ ಮತ್ತು ಅಸ್ತಿತ್ವಗಳು ಯತಃ=ಯಾವ ಕಾರಣದಿಂದಾಗಿ ತತಃ=ಪರಮಾತ್ಮನಿಂದಾಗಿಯೇ ಆಗುವವೋ ತತಃ ಏವ=ಅದರಿಂದಾಗಿಯೇ ಜೀವಃ=ಜೀವನು ಸದೈವ=ಸರ್ವದಾ ಪರಮಾತ್ಮನಃ=ಪರಮಾತ್ಮನ ಆಭಾಸಃ= ಆ+ಭಾಸನೆಂದು ಉದ್ದಿಷ್ಟಃ=ಶ್ರುತಿಗಳಲ್ಲಿ ಹೇಳಲ್ಪಟ್ಟಿದ್ದಾನೆ. ನ ಜಲಾಯತ್ತ ಸೂರ್ಯಾದಿ ಪ್ರತಿಬಿಂಬೋಪಮತ್ವತಃ=ನೀರಿನ ಅಧೀನವಾದ ಸೂರ್ಯಾದಿಗಳ ಪ್ರತಿಬಿಂಬದಂತೆ ಇರುವ ಕಾರಣದಿಂದಾಗಿ ಜೀವನು ಈಶನ ಪ್ರತಿಬಿಂಬನಲ್ಲ.

ಭಾವಾರ್ಥ— ಶ್ರುತಿಗಳಲ್ಲಿ 'ಬ್ರಹ್ಮಾಭಾಸ ಜೀವ' ಎಂದಿದೆ. ಈ ಬ್ರಹ್ಮಾಭಾಸಶಬ್ದವು ಯೌಗಿಕ. ಆ=ಆಸಮಂತಾತ್=ಎಲ್ಲ ಕಾಲದಲ್ಲೂ ಎಂದರ್ಥ. 'ಭಾಸ' ಎಂಬುದನ್ನು 'ಭಾ+ಆಸ' ಎಂದು ವಿಭಾಗ ಮಾಡಬೇಕು. ಭಾ ಎಂದರೆ ಜ್ಞಾನ. ಆಸ ಎಂದರೆ ಇರುವು–ಅಸ್ತಿತ್ವ. 'ಭಾಚ ಆಸಾ ಚ=ಭಾಸೇ' ಎಂದು ದ್ವಂದಸಮಾಸ. ಅದರ ಜೊತೆಯಲ್ಲಿ 'ಆ' ಎಂದು ಅವ್ಯಯಸೇರಿ 'ಆಭಾಸೇ' ಎಂದಾಗಿದೆ. ಬ್ರಹ್ಮಣಃ ಆಭಾಸೇ ಯಸ್ಯ ಸಃ=ಬ್ರಹ್ಮಾಭಾಸಃ–ಬ್ರಹ್ಮನಿಂದಾಗಿ ಜ್ಞಾನ ಮತ್ತು ಅಸ್ತಿತ್ವವು ಯಾರಿಗಿದೆಯೋ ಅಂತಹ ಜೀವನು ಬ್ರಹ್ಮಾಭಾಸ. ಹೊರತು, ಸೂರ್ಯನ ಪ್ರತಿಬಿಂಬದಂತೆ ಜೀವ ಉಪಾಧಿಯಿಂದಾಗಿ ಮೂಡಿದ ಈಶಪ್ರತಿಬಿಂಬನಲ್ಲ.

**ತದಧೀನತ್ವಮೇವೇತಿ ಕಿಂಚಿತ್ಸಾದೃಶ್ಯಮೇವ ಚ ।**
**ಸಂಪ್ರಕಾಶಯತಃ ಸೂತ್ರಗತಾವಖಿಲಮಾನತಃ ।**
**ಜೀವೇಶಭೇದದೃಷ್ಟ್ಯೈವ ಸಮುದಾಯೈಕತಾ ಕುತಃ ॥ ೧೩೦ ॥**

ಸೂತ್ರದಲ್ಲಿರುವ ಏವಶಬ್ದವು ಅತಃ ಎಂಬ ಶಬ್ದೋಕ್ತವಾದ ತದಧೀನತ್ವ ಎಂಬ ಹೇತುವಿನೊಂದಿಗೆ ಅನ್ವಯ ಹೊಂದುತ್ತದೆ. ಚಶಬ್ದವೂ ಅವಧಾರಣಾರ್ಥಕವಾಗಿ ಅತಃಶಬ್ದೋಕ್ತವಾದ ಸಾದೃಶ್ಯದೊಂದಿಗೆ ಅನ್ವಯಿಸುತ್ತದೆ. ಆಗ ಸೂತ್ರಗತೌ=ಸೂತ್ರದಲ್ಲಿರುವ ಏವ ಮತ್ತು ಚಶಬ್ದಗಳು ತದಧೀನತ್ವಮೇವ, ಕಿಂಚಿತ್‌ಸಾದೃಶ್ಯಮೇವ ಎಂಬ ಅರ್ಥವನ್ನು ಪ್ರಕಾಶಯತಃ= ತಿಳಿಸಿಕೊಡುತ್ತವೆ.

ಭಾವಾರ್ಥ— ''ಅತ ಏವ ಚೋಪಮಾ'' ಎಂದು ಸೂತ್ರದಲ್ಲಿರುವ ಚಶಬ್ದವು ಆಭಾಸತ್ವಸಮುಚ್ಚಾಯಕ. ಜೀವನು ಈಶಾಭಾಸ=ಈಶನ ಪ್ರತಿಬಿಂಬ ಎಂದು ಅರ್ಥ.

ಅಥವಾ ಚಶಬ್ದ ಅವಧಾರಣಾರ್ಥಕ. ಆಗ ಚ ಮತ್ತು ಏವ ಎಂದು ಎರಡು ಅವಧಾರಣಾರ್ಥಕಶಬ್ದಗಳಿದ್ದಂತಾಯಿತು. ಅತಃ ಎಂಬ ಶಬ್ದಕ್ಕೂ ಹಿಂದೆ ತಿಳಿಸಿದಂತೆ ತದಧೀನತ್ವ-ತತ್‌ಸಾದೃಶ್ಯ ಎಂದು ಎರಡು ಅರ್ಥಗಳು. ಎರಡರೊಂದಿಗೆ ಎರಡು ಅವಧಾರಣಾರ್ಥಕ ಶಬ್ದಗಳಿಗೆ ಅನ್ವಯ. ಆಗ ತದಧೀನನಾದುದರಿಂದಲೇ ಜೀವನು ಪ್ರತಿಬಿಂಬ ಹಾಗೂ ಈಶನಿಂದ ಭಿನ್ನ. ತತ್ ಸದೃಶನಾದುದರಿಂದಲೇ ಜೀವ ಪ್ರತಿಬಿಂಬ ಹಾಗೂ ಈಶನಿಂದ ಭಿನ್ನ, ಎಂದು ಅರ್ಥ.

ಅಖಿಲಮಾನತಃ=ಎಲ್ಲಾ ಪ್ರಮಾಣಗಳಿಂದಲೂ ಜೀವೇಶಭೇದ ದೃಷ್ಟ್ಯೈವ=ಜೀವ ಮತ್ತು ಪರಮಾತ್ಮರಿಗೆ ಭೇದವೇ ತಿಳಿಯುವುದರಿಂದಾಗಿ ಸಮುದಾಯ್ಯೈಕತಾ=ಸಮುದಾಯ್ಯೈಕ್ಯವು ಕುತಃ=ಯಾವ ಪ್ರಮಾಣದಿಂದ ಸಿದ್ಧವಾಗಬೇಕು?

ಭಾವಾರ್ಥ— ಭಾಸ್ಕರಮತರೀತ್ಯಾ ಚೇತನತ್ವ ಹೇತುವಿನಿಂದ ಜೀವೇಶರಿಗೆ ಅಭೇದವನ್ನು ಸಾಧಿಸಿದಾಗ ಅದಕ್ಕೆ ವಿರುದ್ಧವಾಗಿ ಪ್ರತಿಬಿಂಬತ್ವಾನುಮಾನದಿಂದ ಭೇದವನ್ನು ಸಾಧಿಸಲಾಯಿತು. ಇದು ಸರಿಯಲ್ಲ. ಪ್ರತಿಬಿಂಬತ್ವವು ಅಭೇದ ಸಾಧಕ, ಬಿಂಬ ಪ್ರತಿಬಿಂಬಗಳಿಗೆ ಅಭೇದವಿರುವುದರಿಂದ, ಎಂದು ಆಕ್ಷೇಪ ಬಂದಾಗ ಪ್ರತಿಬಿಂಬತ್ವಸ್ವರೂಪವನ್ನು ವಿವರಿಸಿ, ಅದು ಭೇದ ಸಾಧಕವಾಗುತ್ತದೆ ಎಂದು ಈವರೆಗೆ ತಿಳಿಸಲಾಯಿತು. 'ಅಖಿಲಮಾನತಃ' ಎಂದು

ಮುಂದಿನ ಅನುವ್ಯಾಖ್ಯಾನಭಾಗದಲ್ಲಿ ಜೀವೇಶಾಭೇದಕ್ಕೆ ಪ್ರತ್ಯಕ್ಷ ಮತ್ತು ಆಗಮಗಳ ಬಾಧವೂ ಇದೆ, ಎಂದು ತಿಳಿಸಲಾಗಿದೆ.

'ನಾಹಂ ಸರ್ವಜ್ಞಃ' ಎಂಬ ಪ್ರತ್ಯಕ್ಷವು ಎಲ್ಲರಿಗೂ ಇದೆ. ಇದರಿಂದ ಈ ಸಾಕ್ಷಿಪ್ರತ್ಯಕ್ಷವು ಸರ್ವಜ್ಞನಾದ ಪರಮಾತ್ಮನ ಭೇದವನ್ನು ಜೀವರಲ್ಲಿ ತಿಳಿಸುತ್ತದೆ. ಇನ್ನು, ಭೇದಪ್ರತಿಪಾದಕವಾದ ಶ್ರುತಿಗಳನ್ನು ಅಲ್ಲಲ್ಲಿ ಉದಾಹರಿಸಲಾಗಿದೆ. ಹೀಗೆ, ಅಭೇದವು ಸಕಲಪ್ರಮಾಣಗಳಿಗೂ ವಿರುದ್ಧವಾಗಿದೆ. ಆದ್ದರಿಂದ ಜೀವೇಶರಿಗೆ ಭೇದಾಭೇದವಲ್ಲ, ಅತ್ಯಂತ ಭೇದವೇ ಇದೆ.

**ಅಶೇಷದೋಷರಾಹಿತ್ಯಂ ಸರ್ವಶಕ್ತಿತ್ವತೋ ಹರೇಃ ।**
**ಸರ್ವೋಪೇತೇತಿ ಕಥಿತಮತ ಐಕ್ಯಂ ಕ್ವ ದೋಷಿಣಾ ।**
**ಅಶೇಷಶಕ್ತಿಯುಕ್ತಶ್ಚೇತ್ ಸ್ವಾತಂತ್ರ್ಯಾದ್ ದೋಷವಾನ್**
**ಕಥಮ್ ॥ ೧೩೧ ॥**

ಹರೇಃ=ಪರಮಾತ್ಮನಿಗೆ 'ಸರ್ವೋಪೇತೇತಿ'='ಸರ್ವೋಪೇತಾ ಚ ತದ್ದರ್ಶನಾತ್' ಎಂಬ ಸೂತ್ರದಲ್ಲಿ ಸರ್ವಶಕ್ತಿತ್ವತಃ=ಸರ್ವವಿಧದ ಶಕ್ತಿಯು ಇರುವುದರಿಂದಾಗಿ ಅಶೇಷದೋಷರಾಹಿತ್ಯಂ=ಸಕಲದೋಷರಹಿತತ್ವವು ಕಥಿತಂ=ಹೇಳಲ್ಪಟ್ಟಿದೆ. ಅತಃ=ಆದ್ದರಿಂದ ದೋಷಿಣಾ=ದೋಷವುಳ್ಳ ಜೀವನಿಂದ ಐಕ್ಯಂ ಕ್ವ=ಅಭೇದವು ಹೇಗೆ ಬರಬೇಕು. ಅಶೇಷ ಶಕ್ತಿಯುಕ್ತಶ್ಚೇತ್= ಸಕಲಶಕ್ತಿಯುಕ್ತನಾದಲ್ಲಿ ಸ್ವಾತಂತ್ರ್ಯಾತ್=ಸ್ವಾತಂತ್ರ್ಯವು ಇರುವುದರಿಂದ ದೋಷವಾನ್ ಕಥಂ=ಭಗವಂತನು ದೋಷಿಯಾಗುವುದು ಹೇಗೆ?

**ಭಾವಾರ್ಥ—** ಹಿಂದೆ 'ಸರ್ವೋಪೇತಾ ಚ ತದ್ದರ್ಶನಾತ್'(2-1-30) ಎಂಬ ಸೂತ್ರದಲ್ಲಿ ಭಗವಂತ ಸರ್ವಶಕ್ತಿಸಂಪನ್ನ, ಎಂದು ಹೇಳಲಾಗಿದೆ. ಅಶಕ್ತರಿಗೆ ದೋಷಗಳು ಬರಬಹುದು. ದೋಷಬರದಂತೆ ತಡೆಯುವ ಶಕ್ತಿ ಇರುವವರಿಗೆ ದೋಷಗಳು ಬರಲು ಸಾಧ್ಯವಿಲ್ಲ. ಭಗವಂತನಿಗೆ ಅಂತಹ ಶಕ್ತಿ ಇರುವುದರಿಂದಾಗಿಯೇ ಅವನಲ್ಲಿ ದೋಷಗಳಿಲ್ಲ. ಆದರೆ, ಜೀವನಲ್ಲಿ ದೋಷಗಳಿವೆ. ಆದ್ದರಿಂದ ಜೀವನು ಬ್ರಹ್ಮನಲ್ಲ. ಇದು ಜೀವೇಶಭೇದಕ್ಕೆ ಇನ್ನೊಂದು ಪ್ರಮಾಣ.

**ಆಕ್ಷೇಪ**— ಪರಮಾತ್ಮನು ನಿರ್ದೋಷನಾದರೂ ಅಂತಃಕರಣಾದಿ ಉಪಾಧಿಗಳಿಂದ ಭಿನ್ನನಾದ ಜೀವನಲ್ಲಿ ದೋಷಗಳು ಇರಬಹುದು.

**ಸಮಾಧಾನ**– ಅಂತಃಕರಣಾದಿ ಉಪಾಧಿಗಳು ತಮ್ಮ ಸಾಮರ್ಥ್ಯದಿಂದ ಈಶ್ವರನನ್ನು ಜೀವನನ್ನಾಗಿ ಪ್ರತ್ಯೇಕಗೊಳಿಸಲಾರವು. ಹಾಗೆ ಮಾಡುವುದು ಈಶ ಶಕ್ತಿಗೆ ಕುಂದು. ಆಗ ಈಶನು ಸರ್ವಶಕ್ತನೇ ಆಗಲಾರ. ಆದ್ದರಿಂದ, ಪರಮಾತ್ಮನು ತನ್ನ ಇಚ್ಛೆಯಿಂದಲೇ ಉಪಾಧಿಪ್ರಯುಕ್ತವಾಗಿ ಭೇದವನ್ನು ಮಾಡಿ ತನ್ನ ಅಂಶನಾದ ಜೀವನಿಗೆ ದುಃಖವನ್ನು ಉಂಟುಮಾಡುತ್ತಾನೆ, ಎನ್ನಬೇಕು. ಇದು ಪ್ರೇಕ್ಷಾವಂತರು ಮಾಡುವ ಕೆಲಸವಲ್ಲ. ತಪಸ್ವಿಗಳು ತಮ್ಮ ದೇಹದಂಡನೆಯನ್ನು ತಾವೇ ಮಾಡಿಕೊಳ್ಳುತ್ತಾರೆ. ಅದರಿಂದ ಇಂದ್ರಿಯ ನಿಗ್ರಹ, ವೈರಾಗ್ಯಾದಿಸಿದ್ಧಿಯಾಗಿ ಮೋಕ್ಷದೊರಕುತ್ತದೆ. ಆದರೆ, ಪರಮಾತ್ಮ ನಿತ್ಯಮುಕ್ತ. ಅವನಿಗೆ ಯಾವ ಪ್ರಯೋಜನದ ಅಪೇಕ್ಷೆಯೂ ಇಲ್ಲ. ಅಂದಮೇಲೆ ತನ್ನ ಅಂಶಕ್ಕೆ ತಾನೇ ದುಃಖವನ್ನು ಏಕೆ ತಂದುಕೊಳ್ಳಬೇಕು? ಆದ್ದರಿಂದ ಜೀವನಿಗೆ ಔಪಾಧಿಕಭೇದವಲ್ಲ. ಸ್ವಾಭಾವಿಕವಾದ ಭೇದವೇ ಇದೆ.

**ಅನುಸಂಧಾನರಹಿತಮೈಕ್ಯಂ ಚೇದೇಕತಾ ನ ತತ್ ।**
**ಚೇತನೈಕ್ಯೇಽನುಸಂಧಾನಂ ಪ್ರಮಾಣಂ ನೈವ ಚಾಪರಮ್ ॥ ೧೩೨ ॥**

ಅನುಸಂಧಾನರಹಿತಂ=ದುಃಖಾನುಸಂಧಾನವಿಲ್ಲದ ಐಕ್ಯಂ ಚೇತ್= ಜೀವೈಕ್ಯವು ಪರಮಾತ್ಮನಿಗೆ ಇದ್ದಲ್ಲಿ ತತ್ ಏಕತಾ ನ=ಅದು ಐಕ್ಯವೇ ಅಲ್ಲ. ಚೇತನೈಕ್ಯೇ ಚೇತನರಲ್ಲಿ ಐಕ್ಯ ಇದೆ ಎನ್ನುವ ವಿಷಯದಲ್ಲಿ ಅನುಸಂಧಾನಂ= ಪರಸ್ಪರಸುಖಾದಿಸಂವೇದನೆಯೇ ಪ್ರಮಾಣಂ=ಪ್ರಮಾಣವು, ಅಪರಂ ನಚ=ಅದು ಬಿಟ್ಟು ಬೇರೆ ಪ್ರಮಾಣವಿಲ್ಲ.

**ಭಾವಾರ್ಥ**— ಜೀವ-ಬ್ರಹ್ಮರಿಗೆ ಐಕ್ಯವಿದ್ದರೆ ಜೀವನ ದುಃಖದ ಅನುಭವವು ಪರಮಾತ್ಮನಿಗೆ ಆಗಬೇಕು. ಐಕ್ಯವಿದ್ದರೂ ದುಃಖಾನುಭವ ಆಗುವುದಿಲ್ಲ ಎನ್ನುವುದು ಸರಿಯಲ್ಲ. ಅನುಸಂಧಾನವಿಲ್ಲದ ಐಕ್ಯ ಎಂದರೆ ಐಕ್ಯವೇ ಇಲ್ಲ, ಎಂದರ್ಥ. ಏಕೆಂದರೆ, ಐಕ್ಯವಿದೆ ಎನ್ನುವುದಕ್ಕೆ ದುಃಖಾನು ಸಂಧಾನವೇ ಪ್ರಮಾಣ. ಅರ್ಜುನನಿಗೆ ಆಗುವ ಸುಖದ ಸಂವೇದನೆ

ಇಂದ್ರನಿಗಿದೆ. ಆದ್ದರಿಂದ ಅವರಿಬ್ಬರಿಗೆ ಐಕ್ಯವಿದೆ. ಹೀಗೆ ಐಕ್ಯಕ್ಕೆ ಅನುಸಂಧಾನವೇ ಆಧಾರ. ಅನುಸಂಧಾನ ಇಲ್ಲದಿದ್ದರೆ ಐಕ್ಯವೇ ಇಲ್ಲ, ಎಂದರ್ಥ.

ಮನುಷ್ಯನಿಗೆ ಕಣ್ಣಿದೆ ಎನ್ನುವುದಕ್ಕೆ ರೂಪಜ್ಞಾನವೇ ಪ್ರಮಾಣ. ರೂಪಜ್ಞಾನವಿದ್ದರೆ ಕಣ್ಣು ಇದೆ, ಎಂದು ಅರ್ಥ. ಅದಿಲ್ಲದಿದ್ದರೆ ಕಣ್ಣಿಲ್ಲ. ಅದರಂತೆ ಚೇತನರಾಗಿದ್ದು ಒಬ್ಬರ ಸುಖದ ಅನುಸಂಧಾನವು ಮತ್ತೊಬ್ಬರಿಗೆ ಇದ್ದರೆ ಅವರಿಬ್ಬರಿಗೆ ಅಭೇದವಿದೆ, ಎಂದರ್ಥ. ಪ್ರಕೃತ ಜೀವೇಶರು ಚೇತನನಾಗಿದ್ದೂ ಜೀವನ ದುಃಖದ ಅನುಸಂಧಾನ ಈಶನಿಗೆ ಇಲ್ಲವೆಂದಾದರೆ ಅವರಲ್ಲಿ ಅಭೇದ ಇಲ್ಲವೆಂದೇ ಅರ್ಥ.

**ಅನುಸಂಧಾನರಹಿತಂ ಸಮುದಾಯ್ಯೈಕ್ಯಮೇವ ಚೇತ್ ।**
**ಚೇತನೇಷ್ವಸ್ತು ತನ್ನಾಮಮಾತ್ರಮೇವ ಯತಸ್ತತಃ ॥ ೧೩೩ ॥**

ಅನುಸಂಧಾನರಹಿತಂ=ಪರಸ್ಪರ ಅನುಸಂಧಾನವಿಲ್ಲದ ಸಮುದಾ-ಯ್ಯೈಕ್ಯಮೇವ ಚೇತ್=ಸಮುದಾಯಕ್ಕೆ ಸಮುದಾಯಿಯಾದ ಜೀವನಿಂದ ಐಕ್ಯಮೇವ=ಐಕ್ಯವೇ ಇದೆ, ಎಂದರೆ, ಚೇತನೇಷು=ಚೇತನರಲ್ಲಿ ತತ್ ಅಸ್ತು= ಅಂತಹ ಐಕ್ಯವು ಇರಲಿ. ಯತಃ=ಯಾವ ಕಾರಣದಿಂದ ನಾಮಮಾತ್ರ-ಮೇವ=ಐಕ್ಯವೆಂಬ ಹೆಸರು ಮಾತ್ರವೇ ಇದೆ, ಅದರ ಕಾರ್ಯ ಇಲ್ಲ. ತತಃ=ಆದ್ದರಿಂದ ಅಸ್ತು ತತ್=ಅಂತಹ ಐಕ್ಯ ಇರಲಿ, ಬಿಡಿ.

**ಭಾವಾರ್ಥ**— ಭಾಸ್ಕರಾಚಾರ್ಯರು ಜೀವ–ಈಶರ ಸಮುದಾಯವೇ ಬ್ರಹ್ಮ, ಎನ್ನುತ್ತಾರೆ. ಸಮುದಾಯಕ್ಕೆ ಸಮುದಾಯಿಗಳಿಂದ ಭೇದಾಭೇದ ಇದೆ. ಭೇದ ಇರುವುದರಿಂದಾಗಿ ಜೀವಗತವಾದ ದುಃಖದ ಅನುಸಂಧಾನ ಬ್ರಹ್ಮನಿಗಿಲ್ಲ. ಅನುಸಂಧಾನಾಭಾವವು ಭೇದಕ್ಕೆ ನಿಮಿತ್ತ. ಅದು ಇರುವುದ ರಿಂದ ಜೀವೇಶರಿಗೆ ಭೇದವಿದೆ, ಎಂದಿಷ್ಟೇ ಸಿದ್ಧವಾಗುತ್ತದೆ. ಅಭೇದವು ಇಲ್ಲ, ಎಂದೇನೂ ಸಿದ್ಧವಾಗುವುದಿಲ್ಲ. ತಂತು ಮತ್ತು ಪಟಗಳಿಗೆ ಭೇದಾಭೇದವಿದೆ. ಪಟದಿಂದಾಗುವ ಕಾರ್ಯವು ತಂತುವಿನಿಂದ ಆಗುವುದಿಲ್ಲ. ಈ ವಿರುದ್ಧ ಧರ್ಮದಿಂದಾಗಿ ತಂತು–ಪಟಗಳಲ್ಲಿ ಭೇದವು ಸಿದ್ಧವಾಗುತ್ತದೆ. ಅಭೇದವಿಲ್ಲ

ಎಂದೇನೂ ಆಗುವುದಿಲ್ಲ. ಅದರಂತೆ ಜೀವೇಶರಲ್ಲಿ ಪರಸ್ಪರವಾಗಿ ಅನುಸಂಧಾನ ಇಲ್ಲದಿರುವ ಮಾತ್ರಕ್ಕೆ ಅಭೇದವು ನಿರಾಕೃತವಾಗುವುದಿಲ್ಲ.

ಇದು ಸರಿಯಲ್ಲ—ವಿರುದ್ಧಧರ್ಮದಿಂದಾಗಿ ತಂತು-ಪಟಗಳಲ್ಲಿ ಭೇದವಷ್ಟೇ ಸಿದ್ಧವಾಗುತ್ತದೆ. ಅದರ ಜೊತೆಯಲ್ಲಿ ಪ್ರತ್ಯಕ್ಷದಿಂದ ಅಭೇದವೂ ಸಿದ್ಧವಾಗುತ್ತದೆ. ಆದ್ದರಿಂದ ಅವೆರಡಕ್ಕೆ ಭೇದಾಭೇದವಿದೆ. ಪ್ರಕೃತ ಜೀವೇಶದಲ್ಲಿ ಅನುಸಂಧಾನ ಇಲ್ಲದಿರುವುದರಿಂದ ಭೇದವು ಸಿದ್ಧವಾಗುತ್ತದೆ. ಅಭೇದಕ್ಕೆ ಪ್ರಮಾಣವಿಲ್ಲ. ಆದ್ದರಿಂದ ಅತ್ಯಂತಭೇದವೇ ಸಿದ್ಧವಾಗುತ್ತದೆ.

**ಮುಕ್ತೌ ಸ್ಯಾದನುಸಂಧಾನಮಿತ್ಯಪಿ ಸ್ಯಾತ್ ಸುದುಷ್ಕರಮ್ ।**
**ಸರ್ವಜ್ಞ ಏಕತಾಂ ನಾನುಸಂಧತ್ತೇ ನೈವ ಸಾ ಯತಃ ॥ ೧೩೪ ॥**

ಮುಕ್ತೌ=ಮೋಕ್ಷದಲ್ಲಿ ಅನುಸಂಧಾನಂ ಸ್ಯಾತ್=ಮುಕ್ತಜೀವರ ಸುಖದ ಅನುಸಂಧಾನವು ಇದೆ. ಇತ್ಯಪಿ=ಇದೂ ಸುದುಷ್ಕರಂ ಸ್ಯಾತ್=ಕಷ್ಟವಾಗುತ್ತದೆ. ಯತಃ=ಯಾವ ಕಾರಣದಿಂದ ಸರ್ವಜ್ಞಃ=ಸರ್ವಜ್ಞನಾದ ಪರಮಾತ್ಮನು ಏಕತಾಂ=ಜೀವೈಕ್ಯವನ್ನು ನಾನುಸಂಧತ್ತೇ=ಅನುಭವಿಸುತ್ತಿಲ್ಲವೋ ಆ ಕಾರಣದಿಂದ ಸಾ=ಆ ಏಕತೆಯು, ಜೀವಬ್ರಹ್ಮೈಕ್ಯವು ನ=ಇಲ್ಲ.

**ಭಾವಾರ್ಥ**— ಜೀವಗತಸುಖಾದಿಗಳ ಅನುಸಂಧಾನವು ಈಶನಿಗೆ ಇಲ್ಲದಿರುವುದರಿಂದ ಜೀವೇಶರಿಗೆ ಐಕ್ಯವಿಲ್ಲ, ಎನ್ನುವುದು ಸರಿಯಲ್ಲ. ಈಶನಿಗೆ ಮುಕ್ತಜೀವರ ಸುಖಾನುಸಂಧಾನ ಇದೆ. ಮುಕ್ತರಿಗೆ ದುಃಖಾದಿ ದೋಷಗಳು ಇಲ್ಲದಿರುವುದರಿಂದ ಅವುಗಳ ಅನುಸಂಧಾನ ಈಶನಿಗೆ ಇಲ್ಲ. ಇದು ಪ್ರತಿವಾದಿಗಳ ಆಕ್ಷೇಪ. ಇದು ಯುಕ್ತವಲ್ಲ. ಏಕೆಂದರೆ, ಮುಕ್ತರ ಸುಖಾನುಸಂಧಾನ ಪರಮಾತ್ಮನಿಗೆ ಇದೆ, ಎನ್ನುವುದು ಸಂದಿಗ್ಧ. ಅಲ್ಲದೆ, ಮುಕ್ತಿಯಲ್ಲಿ ಅನುಸಂಧಾನ ಇರುವುದಾದಲ್ಲಿ ಆ ಅನುಸಂಧಾನಕ್ಕೆ ಪ್ರಯೋಜಕವಾದ ಸ್ವರೂಪೈಕ್ಯವು ಸಂಸಾರದಲ್ಲೂ ಇರುವುದರಿಂದ ದುಃಖದ ಅನುಸಂಧಾನವೂ ಏಕಿಲ್ಲ?

ಸಂಸಾರದಲ್ಲಿ ಅವಿದ್ಯಾಕಾಮಕರ್ಮಾದಿಗಳು ಪ್ರತಿಬಂಧಕವಾಗಿರುವುದರಿಂದ ದುಃಖಾನುಸಂಧಾನ ಈಶನಿಗಿಲ್ಲ. ಮೋಕ್ಷದಲ್ಲಿ ಅವುಗಳೆಲ್ಲ

ನಾಶವಾಗುತ್ತವೆ. ಆದ್ದರಿಂದ ಸುಖಾನುಸಂಧಾನ ಈಶನಿಗೆ ಬರುತ್ತದೆ, ಎನ್ನುವುದೂ ಸರಿಯಲ್ಲ. ಸಂಸಾರದಲ್ಲಿ ದುಃಖಾನುಸಂಧಾನ ಇಲ್ಲದಿರುವುದಕ್ಕೆ ಐಕ್ಯ ಇಲ್ಲದಿರುವುದು ಕಾರಣ ಎಂದೂ ಹೇಳಬಹುದು. ಪ್ರತಿಬಂಧಕ ಇರುವುದೇ ಕಾರಣ, ಎಂದು ನಿರ್ಧರಿಸುವುದು ಹೇಗೆ? ವಸ್ತುತಃ, ಐಕ್ಯವು ಇಲ್ಲದಿರುವುದೇ ಕಾರಣ ಎಂದು ಕಲ್ಪಿಸುವುದೇ ಯುಕ್ತ. ಏಕೆಂದರೆ, ಒಂದುವೇಳೆ ಐಕ್ಯವಿದ್ದಲ್ಲಿ ಸರ್ವಜ್ಞನಾದ ಈಶನಿಗೆ ಐಕ್ಯದ ಅನುಭವ ಇರಬೇಕಿತ್ತು. ಅವನಿಗೆ ಎಂದೂ ಐಕ್ಯಾನುಭವ ಇಲ್ಲವೆಂದಾದ ಮೇಲೆ ಐಕ್ಯವು ಇಲ್ಲವೆಂದೇ ಅರ್ಥ. ಈಶನಿಗೆ ಐಕ್ಯಾನುಸಂಧಾನ ಇಲ್ಲವೆನ್ನುವುದು—

ಯಸ್ಮಾತ್ ಕ್ಷರಮತೀತೋಽಹಂ ಅಕ್ಷರಾದಪಿ ಚೋತ್ತಮಃ ।

ಎಂಬ ಶ್ರೀಕೃಷ್ಣನ ಗೀತಾವಾಕ್ಯದಿಂದ ತಿಳಿಯುತ್ತದೆ. ಆ ವಾಕ್ಯದಿಂದ ಶ್ರೀಕೃಷ್ಣನಿಗೆ ಕ್ಷರಾಕ್ಷರಭೇದಜ್ಞಾನವೇ ಇದೆ ಎಂದು ಸ್ಪಷ್ಟವಾಗುತ್ತದೆ. ಇದರಿಂದಾಗಿ ಸಂಸಾರದಶಾದಲ್ಲಿ ದುಃಖದ ಅನುಸಂಧಾನ ಇಲ್ಲದಿರುವುದಕ್ಕೆ ಐಕ್ಯಾಭಾವವೇ ಕಾರಣವೆಂದು ನಿರ್ಧಾರವಾಗುತ್ತದೆ.

**ಪಶ್ಚಾತ್ ಸ್ಯಾದನುಸಂಧಾನಂ ಚೇನ್ಮಿಥ್ಯಾಜ್ಞಾನಿತಾ ಭವೇತ್ ।**
**ವಿದ್ಯಮಾನಾನುಸಂಧಾನಂ ನ ಚೇದಜ್ಞತ್ವಮಾಪತೇತ್ ॥ ೧೩೫ ॥**

ಪರಮಾತ್ಮನಿಗೂ ಪಶ್ಚಾತ್=ಮುಂದೆ ಎಂದೋ ಒಮ್ಮೆ ಅನುಸಂಧಾನಂ ಸ್ಯಾತ್=ಜೀವೈಕ್ಯದ ಜ್ಞಾನವು ಬರುತ್ತದೆ ಇತಿ ಚೇತ್=ಹೀಗೆ ಹೇಳುವುದಾದಲ್ಲಿ ಪರಮಾತ್ಮನಿಗೆ ಮಿಥ್ಯಾಜ್ಞಾನಿತಾ ಭವೇತ್=ಭ್ರಾಂತಿ ಬರಬೇಕಾದೀತು. ವಿದ್ಯಮಾನಾನುಸಂಧಾನಂ=ಈಗಲೂ ಇರುವ ಜೀವೈಕ್ಯದ ಅನುಭವವು ನ ಚೇತ್=ಪರಮಾತ್ಮನಿಗೆ ಈಗ ಇಲ್ಲವೆಂದಾದಲ್ಲಿ ಅವನಿಗೆ ಅಜ್ಞತ್ವಂ= ಅಸರ್ವಜ್ಞತ್ವವು ಆಪತೇತ್=ಬಂದೀತು. ಐಕ್ಯದ ಅನುಭವ ವರ್ತಮಾನ ಕಾಲದಲ್ಲಿ ಇಲ್ಲದಿದ್ದರೆ ಐಕ್ಯವು ಇಲ್ಲವೆಂದೇ ಅರ್ಥ. ಇಲ್ಲದ ಐಕ್ಯವನ್ನು ಈಶನು ಮುಂದೆಂದೋ ತಿಳಿದರೆ ಅವನು ಭ್ರಾಂತನೇ ಆದಾನು.

ಭಾವಾರ್ಥ— ಪರಮಾತ್ಮನಿಗೆ ವರ್ತಮಾನಕಾಲದಲ್ಲಿ ಅಭೇದದ ಜ್ಞಾನವು ಇಲ್ಲವೆಂದ ಮಾತ್ರದಿಂದ ಅಭೇದವೇ ಇಲ್ಲವೆಂದಾಗುವುದಿಲ್ಲ.

ಅವನು ಮುಂದೆ ಅದನ್ನು ತಿಳಿಯಬಹುದು, ಎಂದು ಪೂರ್ವಪಕ್ಷ. ಇದು ಸರಿಯಲ್ಲ. ಪರಮಾತ್ಮನು ಈಗ ಅಭೇದವನ್ನು ತಿಳಿದಿಲ್ಲವೆಂದರೆ ಅಭೇದ ಇಲ್ಲವೆಂದೇ ಅರ್ಥ. ಏಕೆಂದರೆ, ಅಭೇದವು ವರ್ತಮಾನಕಾಲದಲ್ಲಿ ಇದ್ದರೂ ಅದನ್ನು ಅವನು ತಿಳಿದಿಲ್ಲವೆಂದಾದರೆ ಅಸರ್ವಜ್ಞ ಎನ್ನಬೇಕಾಗುತ್ತದೆ. ಆದ್ದರಿಂದ ಅವನ ಅನುಭವಕ್ಕೆ ಗೋಚರವಾಗದ ಐಕ್ಯವು ವಾಸ್ತವವಾಗಿ ಇಲ್ಲವೆಂದೇ ಹೇಳಬೇಕಾಗುತ್ತದೆ. ಇಲ್ಲದ ಐಕ್ಯವನ್ನು ಅವನು ಮುಂದೆಂದೋ ತಿಳಿದರೆ ಭ್ರಾಂತನೆಂದೇ ಹೇಳಬೇಕಾಗುತ್ತದೆ.

**ಅಸದೈಕ್ಯಂ ಭವೇತ್ ಪಶ್ಚಾದ್ ಯದಿ ಸ್ಯಾತ್ ಸಪ್ತಮೋ ರಸಃ ।**
**ಸಮುದಾಯೈಕ್ಯಮೇತಸ್ಮಾದ್ ದೂರತೋಽಪಾಕೃತಂ ಸದಾ ॥ ೧೩೬ ॥**

ಅಸದೈಕ್ಯಂ=ಈಗ ಇಲ್ಲದ ಐಕ್ಯವು ಯದಿ=ಒಂದುವೇಳೆ ಪಶ್ಚಾತ್= ಮುಂದೆಂದೋ ಭವೇತ್=ಬರುವುದಾದಲ್ಲಿ ಆಗ ಸಪ್ತಮೋ ರಸಃ=ಏಳನೆಯ ರಸವೂ ಭವೇತ್=ಮುಂದೆಂದೋ ಬರಬೇಕಾಗುವುದು.

ಭಾವಾರ್ಥ— ಐಕ್ಯವು ಈಗ ಇದ್ದಲ್ಲಿ ಅದರ ಅನುಭವ ಸರ್ವಜ್ಞನಾದ ಈಶ್ವರನಿಗೆ ಬರಬೇಕಾದೀತು. ಈಗ ಇಲ್ಲದಿದ್ದಲ್ಲಿ ಅದನ್ನು ತಿಳಿವ ಈಶ್ವರ ಭ್ರಾಂತನಾಗಬೇಕಾದೀತು. ಆದರೆ, ಈ ಎರಡೂ ದೋಷಗಳನ್ನು ಪರಿಹಾರ ಮಾಡಬಹುದು. ಐಕ್ಯ ಈಗಿಲ್ಲ. ಆದ್ದರಿಂದ ಅದನ್ನು ತಿಳಿಯದ ಈಶ್ವರನಿಗೆ ಸರ್ವಜ್ಞತ್ವಹಾನಿ ಇಲ್ಲ. ಮುಂದೆ ಬರುತ್ತದೆ. ಆಗ ಅದನ್ನು ತಿಳಿಯುವುದರಿಂದ ಈಶ್ವರ ಭ್ರಾಂತನೂ ಅಲ್ಲ.

ಈ ಪರಿಹಾರ ಸಮಂಜಸವಲ್ಲ. ಈಗ ಇಲ್ಲದ ಐಕ್ಯ ಮುಂದೆ ಎಂದೋ ಬರುವಂತೆ ಈಗ ಅಪ್ರಸಿದ್ಧವಾದ ಸಪ್ತಮರಸವೂ ಮುಂದೆ ಬರಬೇಕಾದೀತು.

ಏತಸ್ಮಾತ್=ಇದರಿಂದ ಸಮುದಾಯೈಕ್ಯಂ=ಸಂಸಾರ ಮತ್ತು ಮೋಕ್ಷ ಗಳಲ್ಲಿ ಹೀಗೆ ಸದಾ=ಯಾವಾಗಲೂ ಸಮುದಾಯೈಕ್ಯಂ=ಜೀವೇಶರಿಗೆ ಭೇದಾ ಭೇದಗಳಿವೆ ಎಂಬ ಮತವೂ ದೂರತಃ=ಅತ್ಯಂತವಾಗಿ ಅಪಾಕೃತಂ= ನಿರಾಕರಿಸಲ್ಪಟ್ಟಿತು.

ಭಾವಾರ್ಥ— ಜೀವೇಶರಿಗೆ ಸಂಸಾರದಲ್ಲಿ ಭೇದಾಭೇದ, ಮೋಕ್ಷದಲ್ಲಿ

ಅಭೇದಮಾತ್ರ. ಅಥವಾ, ಸಂಸಾರದಲ್ಲಿ ಕೇವಲ ಭೇದ, ಮೋಕ್ಷದಲ್ಲಿ ಕೇವಲಾಭೇದ. ಈ ಎರಡೂ ಮತಗಳನ್ನೂ ಇದುವರೆಗೆ ನಿರಾಕರಿಸಲಾಯಿತು. ಇದರಿಂದಾಗಿ ಸಂಸಾರ–ಮೋಕ್ಷಗಳಲ್ಲಿ ಸದಾ ಭೇದಾಭೇದ ಎನ್ನುವ ಸಿದ್ಧಾಂತವೂ ನಿರಾಕೃತವಾಯಿತು. ಅಭೇದಕ್ಕೆ ಪ್ರಮಾಣವಿಲ್ಲ ಹಾಗೂ ಅದು ಪ್ರಮಾಣಕ್ಕೆ ವಿರುದ್ಧವೂ ಆಗಿದೆ.

ಮೊದಲಿನ ಎರಡು ಸಿದ್ಧಾಂತಗಳಂತೆ ಮೋಕ್ಷದಲ್ಲಿ ಅಭೇದಮಾತ್ರ ಇರುವುದರಿಂದ ಜೀವೇಶರಿಗೆ ಪರಸ್ಪರ ಅನುಸಂಧಾನ ಬರಬಹುದು. ಅಲ್ಲಿ ಪ್ರತಿಬಂಧಕವಾದ ಭೇದವು ಇಲ್ಲ. ಆದರೆ, ಈ ಮೂರನೆಯ ದರ್ಶನದಲ್ಲಿ ಭೇದವು ಸಾರ್ವಕಾಲಿಕವಾದ ಕಾರಣ ಎಂದೂ ಅನುಸಂಧಾನ ಇರಲು ಸಾಧ್ಯವಿಲ್ಲ. ಈ ಅಧಿಕದೋಷ ಇರುವುದರಿಂದ 'ದೂರತಃ' ಎಂದು ಅನುವ್ಯಾಖ್ಯಾನದಲ್ಲಿ ಹೇಳಲಾಗಿದೆ.

**ಅತೋಽಶೇಷಗುಣೋನ್ನದ್ಧಂ (ದ್ಧ) ನಿರ್ದೋಷಂ ಯಾವದೇವ ಹಿ ।**
**ತಾವದೇವೇಶ್ವರೋ ನಾಮ ತತ್ರ ಭೇದೋಽಪಿ ನ ಕ್ವಚಿತ್ ॥ ೧೩೭ ॥**

ಅತಃ=ಅಭೇದ ಪಕ್ಷಕ್ಕೆ ಸಾಧಕ ಇಲ್ಲ, ಪ್ರತಿಬಿಂಬತ್ವವು ಬಾಧಕವಾಗಿದೆ, ಆದ್ದರಿಂದ ಯಾವದೇವ=ಯಾವ ಚೇತನವು ಅಶೇಷಗುಣೋನ್ನದ್ಧಂ= ಸಕಲಗುಣಪೂರ್ಣವಾಗಿದೆಯೋ, ನಿರ್ದೋಷಂ=ಸಕಲದೋಷದೂರವೋ ತಾವದೇವ=ಅದೇ ಈಶ್ವರೋ ನಾಮ=ಬ್ರಹ್ಮ. ತತ್ರ ಕ್ವಚಿತ್=ಆಬ್ರಹ್ಮನ ಗುಣಗಳಲ್ಲಿ ಪರಸ್ಪರವಾಗಲೀ, ಗುಣಗಳಿಂದ ಈಶ್ವರನಿಗಾಗಲೀ ಯಾವುದೇ ರೀತಿಯ ಭೇದೋಽಪಿ=ಭೇದವೂ ನ=ಇಲ್ಲ.

**ಭಾವಾರ್ಥ—** ಜೀವ–ಪರಮಾತ್ಮರಿಗೆ ಐಕ್ಯವು ಇಲ್ಲವಾದ ಕಾರಣ ಸಕಲಗುಣಾಕರ, ಸಕಲದೋಷದೂರವಾದ ಸರ್ವೋತ್ತಮ ಚೇತನವೇ ಈಶ್ವರ. ಅವನೇ ಬ್ರಹ್ಮ. ಅವನ ಗುಣಗಳಿಗೂ ಪರಸ್ಪರಭೇದವಿಲ್ಲ. ಗುಣಗಳಿಂದ ಅವನಿಗೂ ಭೇದವಿಲ್ಲ. ಅದು ಅಖಂಡವಾದ ಸರ್ವೋತ್ತಮ ಚೇತನ.

**'ನೇಹ ನಾನಾಸ್ತಿ ಕಿಮಪಿ' 'ಹರಯೋಽಯಮಯಂ ಹಿ ಸಃ ।'**
**ಇತ್ಯಾದಿಶ್ರುತಿಮಾನೇನ ಜೀವಾಂಶಾಃ ಸರ್ವ ಏವ ಚ ॥ ೧೩೮ ॥**

**ನಿಯಮೇನಾನುಸಂಧಾನವಂತೋ ಯದ್ಯೇಕತಾ ಸ್ವತಃ ।**
**ಅಂಶಿನೋಽಶೇಷಸಂಧಾನಮತ್ಯಲ್ಪಸ್ಯಾಪಿ ವಿದ್ಯತೇ ॥ ೧೩೯ ॥**

**ಭುವಿ ಜಾತೇನ ಚಾಂಶೇನ ಸುಖದುಃಖಾದಿ ತದ್ಗತಮ್ ।**
**ಅನುಭೂಯತೇ ವಿಶೇಷಸ್ತು ಕಶ್ಚಿದೀಶಕೃತೋ ಭವೇತ್ ॥ ೧೪೦ ॥**

'ನೇಹ ನಾನಾಸ್ತಿ ಕಿಂಚನ' 'ಅಯಂ ವೈ ಹರಯಃ' 'ಅಯಮೇವ ಸಃ ಯೋಽಯಮಾತ್ಮಾ' ಇತ್ಯಾದಿ ಶ್ರುತಿಮಾನೇನ=ಈ ಮೊದಲಾದ ಶ್ರುತಿ ಪ್ರಮಾಣದಿಂದ ತತ್ರ ಭೇದೋಽಪಿ ನ ಕ್ವಚಿತ್=ಗುಣಾದಿಗಳಲ್ಲಿ ಪರಸ್ಪರ ಭೇದವಿಲ್ಲ.

ಚೇತನರಲ್ಲಿ ಅಭೇದವಿದ್ದರೆ ಜೀವಾಂಶಾಃ=ಇಂದ್ರಾದಿ ಜೀವರ ಅಂಶರಾದ ಸರ್ವೇ ಏವ ಚ=ಅರ್ಜುನಾದಿಗಳೆಲ್ಲರೂ ನಿಯಮೇನ= ನಿಯತವಾಗಿ ಅನುಸಂಧಾನವಂತಃ=ಪರಸ್ಪರವಾಗಿ ಸುಖಾದಿ ಅನುಸಂಧಾನ ಉಳ್ಳವರೇ ಆಗಿರುತ್ತಾರೆ. ಯದಿ=ಒಂದುವೇಳೆ ಏಕತಾ=ಐಕ್ಯವು ಸ್ವತಃ= ಸ್ವಾಭಾವಿಕವಾಗಿದ್ದರೆ ಆಗ ಅನುಸಂಧಾನವು ಇರಲೇಬೇಕು.

ಅಲ್ಪಸ್ಯಾಪಿ ಅಂಶಿನಃ=ಅಲ್ಪರಾದ ಅಂಶಿಗಳಿಗೂ ಅಶೇಷಾನುಸಂಧಾನಂ= ಅಂಶಗತವಾದ ಎಲ್ಲ ವಿಷಯಗಳ ಅನುಸಂಧಾನವೂ ವಿದ್ಯತೇ=ಇದೆ. ಹಾಗಿದ್ದರೂ ಕಶ್ಚಿತ್ ವಿಶೇಷಃ=ಅಂಶಕ್ಕೆ ಅನಭಿಮತವಾದುದನ್ನು ಅಂಶಿಯು ಮಾಡುವುದು ಈಶಕೃತಃ ಭವೇತ್=ಅಂಶಜೀವನ ಕೀರ್ತಿಗಾಗಿ ಈಶಪ್ರೇರಿತ ನಾದ ಅಂಶಿಯಿಂದ ಮಾಡಲ್ಪಡುತ್ತದೆ.

ಅದರಂತೆ, ಭುವಿ ಜಾತೇನ=ಭೂಮಿಯಲ್ಲಿ ಅವತರಿಸಿದ ಅಂಶೇನ= ಅಂಶಜೀವನಿಂದ ತದ್ಗತಂ=ಅಂಶಿಗತವಾದ ಸುಖ–ದುಃಖಾದ್ಯೇವ=ಸುಖ ಮತ್ತು ದುಃಖಗಳು ಮಾತ್ರ ಅನುಭೂಯತೇ=ಅನುಭವಿಸಲ್ಪಡುತ್ತದೆ. ಐಕ್ಯವಿದ್ದರೂ ವಿಶೇಷಸ್ತು ಕಶ್ಚಿತ್=ಎಲ್ಲ ವಿಷಯಗಳ ಅನುಸಂಧಾನಾಭಾವ ರೂಪವಾದ ವಿಶೇಷವು, ಈಶಕೃತಂ=ಭೂವಾಸ, ಮಾನುಷಾನ್ನಭೋಗಾದಿ ಗಳನ್ನು ನಿಮಿತ್ತವನ್ನಾಗಿ ಮಾಡಿ ಪರಮಾತ್ಮನಿಂದಲೇ ಮಾಡಲ್ಪಟ್ಟಿದ್ದಾಗಿ ಭವೇತ್= ಇರುತ್ತದೆ.

**ಭಾವಾರ್ಥ—** ಪರಮಾತ್ಮನ ರೂಪ-ಕ್ರಿಯಾದಿಗಳಲ್ಲಿ ಭೇದವಿಲ್ಲ, ಎನ್ನಲು 'ನೇಹ ನಾನಾಸ್ತಿ ಕಿಂಚನ' ಎಂಬ ಕಾಠಕಶ್ರುತಿ ಪ್ರಮಾಣ. ಅದರಂತೆ, 'ಅಯಂ ವೈ ಹರಯೋಽಯಂ ವೈ ದಶ ಚ ಸಹಸ್ರಾಣಿ ಚ ಬಹೂನಿ ಚಾನಂ-ತಾನಿ ಚ' ಇತ್ಯಾದಿ ಬೃಹದಾರಣ್ಯಕ (4.5.19) ಶ್ರುತಿ ಪ್ರಮಾಣ. 'ಅಯ ಮೇವ ಸಃ ಯೋಽಯಮಾತ್ಮಾ' ಎಂಬ ಬೃಹದಾರಣ್ಯಕಶ್ರುತಿ (4.5.1) ಪ್ರಮಾಣ.

ಇಬ್ಬರಲ್ಲಿ ಐಕ್ಯವಿದ್ದರೆ ಪರಸ್ಪರ ಸುಖಾದ್ಯನುಸಂಧಾನ ಇರುತ್ತದೆ, ಎಂಬ ವ್ಯಾಪ್ತಿಯು ದೇವದತ್ತನಲ್ಲಿ ಕಂಡಿದೆ. ದೇವದತ್ತನ ಹಸ್ತಪಾದಿಗಳಲ್ಲಿರುವ ಅಂಶಗಳಿಗೆ ಅಂಶಿಯಾದ ದೇವದತ್ತನಿಂದ ಅಭೇದವು ಇರುವುದರಿಂದ ಹಸ್ತಪಾದಾದಿಗಳಲ್ಲಿ ಆಗುವ ಸುಖಾದಿಧರ್ಮಗಳ ಅನುಸಂಧಾನ ದೇವದತ್ತನಿಗಿದೆ. ಹಸ್ತಪಾದಾದಿ ಉಪಾಧಿಗಳು ಭಿನ್ನಗಳಾದರೂ ಆ ಉಪಾಧ್ಯವಚ್ಛೇದೇನ ಇರುವ ಅಂಶಗಳ ಸುಖಾದ್ಯನುಸಂಧಾನ ಅಂಶಿಯಾದ ದೇವದತ್ತನಿಗಿದೆ. ಏಕೆಂದರೆ, ಹಸ್ತಾದಿ ಉಪಾಧಿಗಳು ಏಕದೇಹದಲ್ಲಿ ಸಂಶ್ಲಿಷ್ಟ ಗಳಾಗಿವೆ. ಆದರೆ ಜೀವರ ಅಂತಃಕರಣಾದಿಉಪಾಧಿಗಳು ವಿಶ್ಲಿಷ್ಟಗಳಾಗಿವೆ. ಆದ್ದರಿಂದ ಅಭೇದವಿದ್ದರೂ ಅನುಸಂಧಾನ ಬರುವುದಿಲ್ಲ, ಎನ್ನುವುದೂ ಸರಿಯಲ್ಲ. ಇಂದ್ರಾವತಾರನಾದ ಅರ್ಜುನನ ದೇಹವು ಇಂದ್ರನ ದೇಹಕ್ಕಿಂತ ವಿಶ್ಲಿಷ್ಟವಾದರೂ ಅವರಿಬ್ಬರಿಗೆ ಅಭೇದವಿರುವುದರಿಂದ ಪರಸ್ಪರ ಅನುಸಂಧಾನವಿದೆ.

ಆದರೂ ತಂದೆ-ಮಕ್ಕಳಿಗೆ ಐಕ್ಯವಿದೆ—ಆತ್ಮಾ ವೈ ಪುತ್ರನಾಮಾಸಿ- ತಂದೆಯೇ ಮಗನಾಗಿ ಹುಟ್ಟುತ್ತಾನೆ, ಎನ್ನುತ್ತದೆ ಶ್ರುತಿ. ಅವರಿಬ್ಬರಲ್ಲಿ ಅನುಸಂಧಾನ ಏಕಿಲ್ಲ? ಅನುಸಂಧಾನಕ್ಕೆ ವಾಸ್ತವವಾದ ಸ್ವರೂಪೈಕ್ಯವು ಕಾರಣ. ತಂದೆ-ಮಕ್ಕಳಲ್ಲಿ ಇದಿಲ್ಲ. ಅವರಿಬ್ಬರಲ್ಲಿ ಐಕ್ಯವ್ಯಪದೇಶ ಗೌಣವಾದುದು. ವಾಸ್ತವವಾದ ಐಕ್ಯ ಇಲ್ಲ.

**ಆಕ್ಷೇಪ—** ಅಂಶಾಂಶಿಗಳಲ್ಲಿ ಪರಸ್ಪರ ಅನುಸಂಧಾನ ಇದೆ ಎನ್ನುವುದು ಸರಿಯಲ್ಲ. ಅರ್ಜುನ ಇಂದ್ರನ ಅಂಶ. ಅವನು ಖಾಂಡವವನವನ್ನು ಸುಟ್ಟ. ಅದಕ್ಕೆ ವಿರುದ್ಧವಾಗಿ ಇಂದ್ರ ಮಳೆಸುರಿಸಿದ. ಇಲ್ಲಿ ಭಿನ್ನಾಭಿಪ್ರಾಯವು ಕಾಣುವುದರಿಂದ ಅಂಶಾಂಶಿಗಳಿಗೆ ಅನುಸಂಧಾನ ಇಲ್ಲ.

**ಸಮಾಧಾನ**— ಅಂಶವು ಅಲ್ಪವಾದರೂ ಅಂಶಿಗಿರುವ ಸುಖಾದಿಗಳ ಅನುಸಂಧಾನವು ಇದ್ದೇ ಇರುತ್ತದೆ. ಕೆಲವೊಮ್ಮೆ ಅಂಶಿಗೆ ಅನಭಿಮತವಾದ ಕಾರ್ಯವನ್ನು ಅಂಶವು ಮಾಡುವುದು ಅಂಶಕ್ಕೆ ಕೀರ್ತಿತರುವುದಕ್ಕಾಗಿ ಈಶಪ್ರೇರಣೆಯಿಂದ ಅರ್ಜುನಾದಿಗಳಲ್ಲಿ ನಡೆಯುವುದಿದೆ. ಅದರಂತೆ, ಅಂಶಿಯಾದ ಇಂದ್ರನಲ್ಲಿರುವ ಎಲ್ಲ ಶಕ್ತಿ-ಸಾಮರ್ಥ್ಯಗಳೂ ಅರ್ಜುನನಿಗೆ ಇರುವುದಿಲ್ಲ. ಏಕೆಂದರೆ, ಅವನು ಸ್ವರ್ಗಕ್ಕಿಂತ ಅಪಕೃಷ್ಟವಾದ ಭೂಪ್ರದೇಶ ದಲ್ಲಿದ್ದಾನೆ. ಗರ್ಭವಾಸವನ್ನು ಮಾಡಿದ್ದಾನೆ. ಮಾನುಷಾನ್ನವನ್ನು ತಿನ್ನುತ್ತಾನೆ. ಅದರಿಂದಾಗಿ ಭಗವಂತ ಇಂದ್ರನಿಗಿರುವ ಎಲ್ಲ ಧರ್ಮಗಳೂ ಅರ್ಜುನನಲ್ಲಿ ಬರುವಂತೆ ಮಾಡುವುದಿಲ್ಲ. ಸುಖ-ದುಃಖಾದಿಗಳು ಮಾತ್ರ ಅವರಿಬ್ಬರಲ್ಲಿ ಸಮಾನವಾಗಿರುತ್ತದೆ.

ಜೀವೇಶರಲ್ಲಿ ಅನುಸಂಧಾನ ಇಲ್ಲದಿರುವುದರಿಂದ ಅಂಶಾಂಶಿಭಾವವೂ ಇಲ್ಲ, ಎನ್ನಲಾರದು. ಅಂಶ ಶಬ್ದಕ್ಕೆ ಎರಡು ಅರ್ಥಗಳಿವೆ. ತದೇಕದೇಶ, ತತ್‌ಸದೃಶ, ಎಂದು. ಬಟ್ಟೆಯ ಏಕದೇಶ ಬಟ್ಟೆಯ ಅಂಶ. ಆದರಂತೆ ಜೀವನು ಭಗವಂತನ ಏಕದೇಶನಲ್ಲ, ಭಗವಂತನಿಗೆ ಸದೃಶ. ಈ ಅಧಿಕರಣದಲ್ಲಿ ಜೀವನಿಗೆ ಅನುಸಂಧಾನಪ್ರಸಂಗರೂಪವಾದ ಬಾಧಕವನ್ನು ಹೇಳಿ ತದೇಕದೇಶತ್ವರೂಪವಾದ ಅಂಶತ್ವವನ್ನು ಮಾತ್ರ ನಿರಾಕರಿಸಲಾಗಿದೆ. ತತ್ ಸದೃಶತ್ವ ರೂಪವಾದ ಅಂಶತ್ವವು ಅಭಿಮತವೇ ಆಗಿದೆ.

**ಈಶಸ್ಯಾಚಿಂತ್ಯಶಕ್ತಿತ್ವಾನ್ನಾಶಕ್ಯಂ ಕ್ವಾಪಿ ವಿದ್ಯತೇ ।**
**ಸೇಶತಾಽನುಪಪನ್ನೈವ ಯದಿ ಜೀವೈಕತಾಽಸ್ಯ ಹಿ ॥ ೧೪೧ ॥**

**ಅನೀಶಸ್ಯೇಶತೇತ್ಯೇವ ವಿರುದ್ಧಂ ಸರ್ವಮಾನತಃ ।**
**ಈಶತ್ವೇನೈವ ವಿಜ್ಞಾತಮನೀಶತ್ವೇನ ಚೇಚ್ಛ್ರುತಿಃ ॥ ೧೪೨ ॥**

**ಅನೀಶತ್ವೇನ ವಿಜ್ಞಾತಮೀಶತ್ವೇನಾಥವಾ ದಿಶೇತ್ ।**
**ಉಪಜೀವ್ಯವಿರೋಧೇನ ನೈವ ಮಾನತ್ವಮೇಷ್ಯತಿ ॥ ೧೪೩ ॥**

ಈಶಸ್ಯ=ಪರಮಾತ್ಮನಿಗೆ ಅಚಿಂತ್ಯಶಕ್ತಿತ್ವಾತ್=ಅಘಟಿತಘಟನಾಶಕ್ತಿಯು

ಇರುವುದರಿಂದ ಕ್ವಾಪಿ=ಯಾವ ವಿಷಯದಲ್ಲಿಯೂ ಅಶಕ್ಯಂ=ಅಸಾಧ್ಯ ವಾದುದು ನ ವಿದ್ಯತೇ=ಇರುವುದಿಲ್ಲ.

ಅಸ್ಯ=ಈ ಪರಮಾತ್ಮನಿಗೆ ಯದಿ=ಒಂದುವೇಳೆ ಜೀವೈಕತಾ=ಜೀವನಿಂದ ಐಕ್ಯವು ಇರುವುದಾದಲ್ಲಿ ಸಾ ಈಶತಾ=ಆ ಅಘಟಿತಘಟನಾಶಕ್ತಿಯೇ ಅನುಪಪನ್ನೈವ=ಕೂಡಲೇಬಾರದಿತ್ತು. ಅನೀಶಸ್ಯ=ಅಸಮರ್ಥನಾದವನಿಗೆ ಈಶತಾ=ಸರ್ವಸಾಮರ್ಥ್ಯ ಇದೆ, ಎನ್ನುವುದು ಸರ್ವಮಾನತಃ=ಎಲ್ಲಾ ಪ್ರಮಾಣಗಳಿಂದ ವಿರುದ್ಧಮೇವ=ವಿರುದ್ಧವೇ ಆಗಿದೆ.

ಯದಿ=ಒಂದುವೇಳೆ ಈಶತ್ವೇನೈವ ವಿಜ್ಞಾತಂ=ಈಶನೆಂದೇ ತಿಳಿಯಲ್ಪಟ್ಟವನನ್ನು ಉದ್ದೇಶಿಸಿ ಶ್ರುತಿಃ='ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ' ಎಂಬ ಗೀತಾವಾಕ್ಯವು ಅನೀಶತ್ವೇನ=ಅನೀಶನಾದ ಜೀವನ ಅಭೇದವನ್ನು ಆದಿಶೇತ್ ಚೇತ್=ವಿಧಿಸುವುದಾದಲ್ಲಿ,

ಅಥವಾ, ಅನೀಶತ್ವೇನ ವಿಜ್ಞಾತಂ=ಅನೀಶನೆಂದು ತಿಳಿಯಲ್ಪಟ್ಟ ಜೀವನನ್ನು ಉದ್ದೇಶಿಸಿ ಈಶತ್ವೇನ ವಾ ಆದಿಶೇತ್=ಈಶಾಭೇದವನ್ನು ವಿಧಿ ಸುವುದಾದಲ್ಲಿ, ('ತತ್ತ್ವಮಸಿ' ಎಂಬ ಶ್ರುತಿಯು ಹಾಗೆ ವಿಧಿಸಬಹುದು.)

ಅದರಂತೆ ಇಬ್ಬರನ್ನೂ ಉದ್ದೇಶಿಸಿ 'ನೇಹ ನಾನಾಸ್ತಿ ಕಿಂಚನ' ಎಂದು ಅಭೇದವನ್ನು ವಿಧಾನಮಾಡಿದರೆ,

ಉಪಜೀವ್ಯವಿರೋಧೇನ=ಈ ಶ್ರುತಿಗಳಿಗೆ ಉಪಜೀವ್ಯಪ್ರಮಾಣದ ವಿರೋಧವಿರುವುದರಿಂದಾಗಿ ನೈವ ಮಾನತ್ವಮೇಷ್ಯತಿ=ಐಕ್ಯಶ್ರುತಿಗಳಿಗೆ ಪ್ರಾಮಾಣ್ಯವೇ ಬರಲಿಕ್ಕಿಲ್ಲ.

**ಭಾವಾರ್ಥ**— ಇಂದ್ರಾರ್ಜುನರು ಒಂದೇ ಆಗಿರುವಾಗ ಈಶನಾದರೂ ಇಂದ್ರನಿಗೆ ಅನಭಿಮತವಾದ ಖಾಂಡವದಾಹವನ್ನು ಅರ್ಜುನನಿಂದ ಮಾಡಿಸುವುದಾದರೂ ಹೇಗೆ? ಅಥವಾ, ಅವರಿಬ್ಬರೂ ಒಂದೇ ಆಗಿರುವಾಗ ಇಂದ್ರನ ಅಭಿಪ್ರಾಯ ಅರ್ಜುನನಿಗೆ ತಿಳಿಯದಿರುವಂತೆ ಮಾಡುವುದಾದರೂ ಹೇಗೆ? ಎಂದು ಪ್ರಶ್ನಿಸಬಾರದು. ಏಕೆಂದರೆ, ಈಶಶಕ್ತಿಗೆ ಅಸಾಧ್ಯವಾದುದು ಯಾವುದೂ ಇಲ್ಲ.

**ಆಕ್ಷೇಪ—** ಹೀಗೆ ಹೇಳುವುದಾದರೆ ಜೀವೇಶರಿಗೆ ಅಭೇದವನ್ನೂ ಸಮರ್ಥಿಸಬಹುದು. ಐಕ್ಯವಿದ್ದರೂ ಈಶಶಕ್ತಿಯಿಂದಾಗಿ ಈಶನಿಗೆ ಜೀವನ ದುಃಖಾನುಸಂಧಾನ ಇಲ್ಲ. ಜೀವನೂ ಅಂತಃಕರಣಾದಿಗಳ ಸಂಬಂಧದಿಂದಾಗಿ ಈಶಗತವಾದ ಸರ್ವಜ್ಞತ್ವವನ್ನು ಪಡೆಯುವುದಿಲ್ಲ. ಆದ್ದರಿಂದ ಅನುಸಂಧಾನ ಇಲ್ಲದಿರುವುದರಿಂದ ಜೀವೇಶರಿಗೆ ಐಕ್ಯ ಇಲ್ಲ, ಎನ್ನುವುದು ಸರಿಯಲ್ಲ.

**ಸಮಾಧಾನ—** ಐಕ್ಯವಿದ್ದರೆ ಈಶನಿಗೆ ಜೀವನಿಗಿಲ್ಲದ ಸಾಮರ್ಥ್ಯ ಬರುವುದೇ ಸಾಧ್ಯವಿಲ್ಲ. ಏಕೆಂದರೆ, ಜೀವನಿಗೆ ಅಂತಹ ಅಘಟಿತಘಟನಾ ಸಾಮರ್ಥ್ಯ ಇಲ್ಲ. ಅಂತಹ ಜೀವನಿಂದ ಅಭಿನ್ನನಾದ ಈಶನಿಗೂ ಅನೀಶತ್ವವೇ ಬರಬೇಕು. ಈಶತ್ವ(ಸರ್ವಸಾಮರ್ಥ್ಯ) ಅನೀಶತ್ವಗಳು ವಿರುದ್ಧಗಳು. ಆದ್ದರಿಂದ ಅಘಟಿತಘಟನಾಶಕ್ತಿಯೇ ಈಶನಿಗೆ ಇಲ್ಲದಿರುವುದರಿಂದ ಐಕ್ಯಪಕ್ಷದಲ್ಲಿ ಆ ರೀತಿಯ ಸಮಾಧಾನವನ್ನು ಹೇಳಲಾಗುವುದಿಲ್ಲ.

**ಆಕ್ಷೇಪ—** 'ಅನೀಶನಿಂದ ಐಕ್ಯವಿದ್ದಲ್ಲಿ ಈಶನಿಗೆ ಈಶತ್ವವು ಬರಲಿಕ್ಕಿಲ್ಲ' ಎನ್ನುವ ತರ್ಕ ಸರಿಯಲ್ಲ. ಏಕೆಂದರೆ, ಈಶತ್ವವು ಇರುವುದರಿಂದ ಐಕ್ಯವಿಲ್ಲ, ಎಂದು ತರ್ಕದ ವಿಪರ್ಯಯಪರ್ಯವಸಾನ ಮಾಡಬೇಕು. ಇದು ಐಕ್ಯಶ್ರುತಿಗೆ ವಿರುದ್ಧ. ತರ್ಕದ ವಿಪರ್ಯಯಪರ್ಯವಸಾನಕ್ಕೆ ಪ್ರಮಾಣ ವಿರೋಧವು ದೋಷ. ಆದ್ದರಿಂದ ತರ್ಕವನ್ನು ಹೇಳುವಂತಿಲ್ಲ.

ಇನ್ನು 'ಈಶನಿಗೆ ಈಶತ್ವವು ಅನುಪಪನ್ನ, ಅನೀಶನಿಂದ ಐಕ್ಯವಿರುವುದರಿಂದ' ಎಂದು ಅನುಮಾನ ಮಾಡಬೇಕು. ಈ ಅನುಮಾನದ ಹೇತು ಭೇದವಾದಿಗಳಿಗೆ ಅಸಿದ್ಧ. ಆದ್ದರಿಂದ ಅನುಮಾನವೂ ಸರಿಯಲ್ಲ.

**ಸಮಾಧಾನ—** ತರ್ಕವೆಂದೇ ಪರಿಗಣಿಸಬಹುದು. ಆದರೂ ಶ್ರುತಿ ವಿರೋಧವಿಲ್ಲ. ಶ್ರುತಿಗೆ ಐಕ್ಯದಲ್ಲಿ ತಾತ್ಪರ್ಯವಿಲ್ಲ. ಶ್ರುತಿಯು ಮೂರು ರೀತಿಯಿಂದ ಜೀವೇಶರಿಗೆ ಐಕ್ಯವನ್ನು ಹೇಳಬಹುದು. 'ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ' ಈ ಗೀತಾವಾಕ್ಯವು 'ಕ್ಷೇತ್ರಜ್ಞನೆನಿಸಿದ ಜೀವನೂ ನಾನೇ' ಎಂದು ಅನುಭವ ಸಿದ್ಧನಾದ ಜೀವನಿಗೆ ಕೃಷ್ಣನ ಅಭೇದವನ್ನು ವಿಧಿಸುತ್ತದೆ.

2. 'ತತ್–ತ್ವಮಸಿ' ಎಂಬ ಶ್ರುತಿಯು ತತ್, ಎಂದು ಈಶನನ್ನು ಉದ್ದೇಶಿಸಿ 'ನೀನಾಗಿರುವಿ' ಎಂದು ಜೀವಾಭೇದವನ್ನು ವಿಧಿಸುತ್ತದೆ.

3. ಅಥವಾ, 'ನೇಹ ನಾನಾಸ್ತಿ ಕಿಂಚನ' 'ಜೀವೇಶರಲ್ಲಿ ಭೇದವೇ ಇಲ್ಲ' ಎಂದು ಜೀವೇಶರನ್ನು ಉದ್ದೇಶಿಸಿ ಅಭೇದವನ್ನು ಹೇಳುತ್ತದೆ.

ಆದರೆ, ಈ ಮೂರೂ ವಿಧದಿಂದ ಶ್ರುತಿಯು ಅಭೇದವನ್ನು ಹೇಳಿದರೂ ಉಪಜೀವ್ಯಪ್ರತ್ಯಕ್ಷದ ವಿರೋಧವಿದೆ. ಇದನ್ನು ಮುಂದೆ 'ಕಥಂ ಬ್ರಹ್ಮೇತಿ ವಿಜ್ಞೇಯಂ' ಎಂಬ ಅನುವ್ಯಾಖ್ಯಾನದಲ್ಲಿ ಹೇಳಲಾಗಿದೆ.

**ಅತ ಏವೇಶತಾಸಿದ್ಧೇರ್ನ ಕಿಂಚಿಚ್ಛಕ್ಯಮಸ್ಯ ಚ ।**
**ಈಶತ್ವೇऽನೀಶಭೇದೇನ ಶ್ರುತ್ಯಾ ಸಮ್ಯಕ್ ಪ್ರಕಾಶಿತೇ ।**
**ಅಯುಕ್ತಮಪಿ ಚಾನ್ಯತ್ರ ಯುಕ್ತಂ ಭವತಿ ತದ್ಬಲಾತ್ ॥ ೧೪೪ ॥**

**ಅತೋऽನ್ಯತ್ರಾಪಿ ಯದ್ ದೃಷ್ಟಂ ತದೀಶೇನೈವ ಕಲ್ಪ್ಯತೇ ।**
**ಶ್ರುತ್ಯಾಭಾಸಾಪ್ತಮಪಿ ನಹೀಶತ್ವಪರಿಪಂಥಿ ಯತ್ ॥ ೧೪೫ ॥**

ಸಮ್ಯಕ್ ಅನೀಶಭೇದೇನ=ಅನೀಶರಾದ ಜೀವರ ಕೇವಲ ಭೇದವನ್ನು ಅಂಗೀಕಾರ ಮಾಡಿ ಈಶತ್ವೇ=ಈಶತ್ವವು ಶ್ರುತ್ಯಾ ಪ್ರಕಾಶಿತೇ ಸತಿ= ಶ್ರುತಿಯಿಂದ ಸರಿಯಾಗಿ ತಿಳಿಸಲ್ಪಡುತ್ತಿರಲು ಅನ್ಯತ್ರ=ಇತರ ಕಡೆಯಲ್ಲಿ ಅಯುಕ್ತಮಪಿ=ಪರಸ್ಪರ ಒಂದರ ಜೊತೆಗೆ ಇನ್ನೊಂದು ಇರಲಾಗದ ಧರ್ಮ ಗಳೂ ತದ್‌ಬಲಾತ್=ಈಶತ್ವ ಸಾಮರ್ಥ್ಯದಿಂದ ಯುಕ್ತಂ ಭವತಿ=ಈಶನಲ್ಲಿ ಜೊತೆಯಾಗಿ ಇರುವುದು ಯುಕ್ತವಾಗುತ್ತದೆ. ಅತಃ=ಪರಮಾತ್ಮನಿಗಿಂತ ಅನ್ಯತ್ರಾಪಿ=ಬೇರೆ ಕಡೆಯೂ ಯದ್ ದೃಷ್ಟಂ=ವಿರೋಧವು ಏನು ಕಂಡಿದೆಯೋ ತತ್=ಅದು ಈಶೇನೈವ=ಈಶತ್ವಶಕ್ತಿಯಿಂದಲೇ ಕಲ್ಪ್ಯತೇ= ಯುಕ್ತವೆಂದೇ ಕಲ್ಪಿಸಲ್ಪಡುತ್ತದೆ. ಶ್ರುತ್ಯಾಭಾಸಾಪ್ತಮಪಿ=ಶ್ರುತಿಯಿಂದ ಆಪಾತತಃ ಪ್ರತೀತವಾದರೂ ಯತ್ ಈಶತ್ವಪರಿಪಂಥಿ=ಯಾವುದು ಭಗವಂತನ ಈಶತ್ವಕ್ಕೆ ವಿರುದ್ಧವಾಗಿರುವುದೋ ನ ತತ್ ಕಲ್ಪ್ಯತೇ=ಅಂತಹ ಧರ್ಮವು ಕಲ್ಪಿಸಲ್ಪಡುವುದಿಲ್ಲ.

ಭಾವಾರ್ಥ— ಏಕಕಾಲದಲ್ಲಿ ಅಣುತ್ವ-ಮಹತ್ತ್ವಗಳು ಪರಮಾತ್ಮನಲ್ಲಿ ಪ್ರಮಾಣಸಿದ್ಧವಾಗಿವೆ. ಅಷ್ಟು ಮಾತ್ರವಲ್ಲದೆ, ಆದರಿಂದ ಅವನ ಈಶತ್ವಕ್ಕೆ

ಭಂಗವೂ ಬರುವುದಿಲ್ಲ. ಇಂತಹ ವಿರುದ್ಧಧರ್ಮಗಳನ್ನು ಪರಮಾತ್ಮನಲ್ಲಿ ಅಂಗೀಕರಿಸಬಹುದು, ಅವನ ಅಘಟಿತಘಟನಾಶಕ್ತಿವಿಶೇಷದಿಂದ ಆ ವಿರೋಧವನ್ನೂ ಪರಿಹರಿಸಬಹುದು. ಅದರಂತೆ, ಪರಮಾತ್ಮನನ್ನು ಬಿಟ್ಟು ಇತರಕಡೆಗಳಲ್ಲೂ ಈಶನ ಶಕ್ತಿವಿಶೇಷದಿಂದಾಗಿಯೇ ವಿರುದ್ಧಧರ್ಮಗಳು ಒಂದೇ ಕಡೆ ಇರಬಹುದು. ಉದಾಹರಣಗೆ, ಇಂದ್ರಾರ್ಜುನರಿಗೆ ಅಭೇದ ವಿದ್ದರೂ ಇಂದ್ರನ ಎಲ್ಲಾ ಧರ್ಮಗಳು ಅರ್ಜುನನಿಗಿಲ್ಲ. ಅದು ಪರಮಾತ್ಮನ ಶಕ್ತಿಗೆ ಸೇರಿದ್ದು.

ಯಾವುದು ಪ್ರಮಾಣದಿಂದ ಸಿದ್ಧವಲ್ಲವೋ ಅಂತಹ ಶಶವಿಷಾಣಾದಿ ಗಳನ್ನು ಈಶಶಕ್ತಿವಿಶೇಷದಿಂದ ಸಮರ್ಥನೆ ಮಾಡಬಾರದು. ಅಷ್ಟೇ ಅಲ್ಲ, ಯಾವುದು ಶ್ರುತ್ಯಾದಿಪ್ರಮಾಣಗಳಿಂದ ಆಪಾತತಃ ಪ್ರತೀತವಾಗಿದ್ದರೂ ಭಗವಂತನ ಈಶತ್ವಶಕ್ತಿಗೆ ವಿಘಾತಕವೋ ಅದನ್ನೂ ಅಂಗೀಕರಿಸಬಾರದು. ಉದಾಹರಣೆಗೆ, ಜೀವನಿಂದ ಈಶನಿಗೆ ಭೇದಾಭೇದ. ಇದನ್ನು ಒಪ್ಪಿದರೆ ಅಭೇದವಿರುವುದರಿಂದ ಜೀವನಲ್ಲಿರುವ ಅನೀಶತ್ವವು ಪರಮಾತ್ಮನಿಗೆ ಬಂದು ಅವನ ಈಶತ್ವವೇ ಭಗ್ನವಾಗುತ್ತದೆ. ಆದ್ದರಿಂದ ಅಭೇದವನ್ನು ತಿಳಿಸುವ ಶ್ರುತಿಗಳು ಆ ಅರ್ಥದಲ್ಲಿ ಅಪ್ರಮಾಣಗಳು. ಅವುಗಳಿಗೆ ಅರ್ಥಾಂತರವನ್ನು ಮಾಡಿ ಪ್ರಾಮಾಣ್ಯವನ್ನು ಸಮರ್ಥಿಸಬೇಕು.

**'ಈಶೋಽನೀಶೋ ಜಗನ್ಮಿಥ್ಯಾ ದುಃಖೀ ಮುಕ್ತೋ ಭಿದಾ ನಹಿ ।**
**ಇತಿ ಪ್ರತಿಜ್ಞಾವ್ಯಾಘಾತಃ ಸರ್ವದೋಷಾಧಿಕಾಧಿಕಃ' ॥ ೧೪೬ ॥**

**ಇತಿ ಹಿ ಬ್ರಹ್ಮತರ್ಕೋಕ್ತಿರತಿಹೇಯಮತೋಽಖಿಲೈಃ ।**
**ಬುಭೂಷುಭಿರ್ಮತಮಿದಂ ಜೀವೇಶಾಭೇದವಾದಿನಃ ॥ ೧೪೭ ॥**

ಈಶಃ ಅನೀಶಃ=ಈಶನು ಅನೀಶನಾಗಿದ್ದಾನೆ (ಜೀವನಾಗಿದ್ದಾನೆ), ದುಃಖೀ ಮುಕ್ತಃ=ದುಃಖವುಳ್ಳವನು ಮುಕ್ತನಾಗಿದ್ದಾನೆ ಇತಿ=ಹೀಗೆ ಹೇಳು ವುದು ಪ್ರತಿಜ್ಞಾವ್ಯಾಘಾತಃ=ಸ್ವವಾಕ್ಯವಿರೋಧ ಎಂಬ ಪ್ರತಿಜ್ಞಾವಿರೋಧ. ಜಗತ್‌ಮಿಥ್ಯಾ=ಈ ಜಗತ್ತು ಸುಳ್ಳು, ಭಿದಾ ನಹಿ=ಭೇದವೇ ಇಲ್ಲ ಇತಿ=ಇದೂ ಪ್ರತಿಜ್ಞಾವ್ಯಾಘಾತಃ=ಪ್ರಮಾಣವಿರೋಧ ಎಂಬ ಪ್ರತಿಜ್ಞಾವಿರೋಧ. ಈ

ದೋಷವು ಸರ್ವದೋಷಾಧಿಕಃ=ಎಲ್ಲ ಅನುಮಾನದೋಷಗಳಿಗಿಂತಲೂ ಪ್ರಬಲವಾದ ದೋಷ. ಇತಿ ಹಿ ಬ್ರಹ್ಮತರ್ಕೋಕ್ತಿಃ=ಈ ಬ್ರಹ್ಮತರ್ಕವಚನವು ಪ್ರಸಿದ್ಧವಾದುದು.

ಅತಃ=ಆದ್ದರಿಂದಲೇ ಜೀವೇಶಾಭೇದವಾದಿನಃ=ಜೀವ–ಪರಮಾತ್ಮರಿಗೆ ಅಭೇದವನ್ನು ಹೇಳುವ ಇದಂ ಮತಂ=ಈ ಮತವು ಅಖಿಲೈಃ ಬುಭೂಷುಭಿಃ= ಎಲ್ಲಾ ಜಿಜ್ಞಾಸುಗಳಿಂದ ಅತಿಹೇಯಮ್=ಅತ್ಯಂತ ತ್ಯಾಜ್ಯವಾದುದು.

ಭಾವಾರ್ಥ— ''ಅನೀಶಸ್ಯೇಶತೇತ್ಯೇವ ವಿರುದ್ಧಂ ಸರ್ವಮಾನತಃ'' ಎಂದು ಹಿಂದೆ ಹೇಳಿದ ವಿಷಯದ ಸಮರ್ಥನೆಯನ್ನು ಇಲ್ಲಿ ಮಾಡಲಾಗಿದೆ.

ಮಾಯಾವಾದಿಗಳು ಜಗತ್ತು ಮಿಥ್ಯಾ, ಜೀವೇಶರಿಗೆ ಅಭೇದವಿದೆ ಎಂದೆಲ್ಲ ಅನುಮಾನಗಳಿಂದ ಸಾಧಿಸುತ್ತಾರೆ. ಇಂತಹ ಅನುಮಾನಗಳಿಗೆ ಪ್ರತಿಜ್ಞಾವಿರೋಧ ಎಂಬ ಪ್ರಬಲದೋಷವಿದೆ. ಸ್ವವಾಕ್ಯವಿರೋಧ– ಪ್ರಮಾಣ ವಿರೋಧ ಎಂದು ಪ್ರತಿಜ್ಞಾವಿರೋಧವು ಎರಡುವಿಧ. 'ಈಶಃ ಅನೀಶಃ, ದುಃಖೀ ಮುಕ್ತಃ' ಎಂದು ಸಾಧಿಸುವ ಮಾಯಾವಾದಿಗಳ ಪ್ರತಿಜ್ಞಾವಾಕ್ಯಕ್ಕೆ ಸ್ವವಾಕ್ಯವಿರೋಧದೋಷ ಇದೆ. 'ಜಗತ್–ಮಿಥ್ಯಾ, ಭಿದಾ ನಹಿ' ಎಂಬ ಪ್ರತಿಜ್ಞೆಗಳು ಪ್ರಮಾಣವಿರುದ್ಧಗಳು ಎಂದು ಬ್ರಹ್ಮತರ್ಕ ಹೇಳುತ್ತದೆ. ಹೀಗೆ, ಪ್ರಬಲವಾದ ದೋಷವು ಇರುವಕಾರಣದಿಂದಾಗಿ ಮಾಯಾವಾದವು ಅತ್ಯಂತಹೇಯವಾದುದು. ಅದನ್ನು ಜಿಜ್ಞಾಸುಗಳು ಒಪ್ಪಬಾರದು.

**ನಾಯುಕ್ತಮೀಶಿತುಃ ಕಿಂಚಿದೀಶತ್ವಸ್ಯಾವಿರೋಧಿ ಯತ್ ।**
**ಯದೀಶಿತ್ವವಿರೋಧಿ ಸ್ಯಾತ್ ತದೇವಾಯುಕ್ತಮಂಜಸಾ ॥ ೧೪೮ ॥**

**ಈಶ (ಶಿ) ತ್ವಸ್ಯಾವಿರೋಧೇನ ಯೋಜಯಿತ್ವಾಽಖಿಲಾಃ ಪ್ರಮಾಃ ।**
**ಸಿದ್ಧೇಶ (ಶಿ) ತ್ವೇನ ಚಾಯುಕ್ತಮಪಿ ಹೀಶೇ ನ ಯೋಜಯೇತ್ ॥೧೪೯**

**ಮಾನತಃ ಪ್ರಾಪ್ತಮಖಿಲಂ ನಾಮಾನಂ ಯೋಜಯೇತ್ ಕ್ವಚಿತ್ ।**
**ಇತಿ ಹಿ ಬ್ರಹ್ಮತರ್ಕೋಕ್ತಿರತೋ ಯುಕ್ತಮಿಹೋದಿತಮ್ ॥ ೧೫೦ ॥**

(ಯಸ್ಮಾತ್=ಯಾವ ಕಾರಣದಿಂದ) ಈಶಿತುಃ=ಪರಮಾತ್ಮನಿಗೆ ಯತ್ ಕಿಂಚಿತ್=ಯಾವ ಅಲ್ಪವಿಷಯವೂ ಈಶತ್ವಸ್ಯಾವಿರೋಧಿ=ಅವನ ಈಶ್ವರತ್ವಕ್ಕೆ ವಿರೋಧಿಯಲ್ಲವೋ ತತ್=ಅದು ನಾಯುಕ್ತಂ=ಅಯುಕ್ತವಲ್ಲ. ಈಶತ್ವಕ್ಕೆ ವಿರೋಧಿಯಾಗದ ಯಾವುದೇ ಧರ್ಮವನ್ನು ಪರಮಾತ್ಮನಲ್ಲಿ ಅಂಗೀಕರಿಸಬಹುದು. ಯತ್=ಯಾವುದು ಈಶತ್ವವಿರೋಧಿ=ಈಶತ್ವಕ್ಕೆ ವಿರುದ್ಧವಾಗಿ ಸ್ಯಾತ್=ಆಗುವುದೋ ತದೇವ=ಅದೆಲ್ಲವೂ ಅಂಜಸಾ ಅಯುಕ್ತಂ=ಸರ್ವಥಾ ಈಶನಲ್ಲಿ ಅಯುಕ್ತವಾಗಿದೆ. ತಸ್ಮಾತ್=ಆದ್ದರಿಂದ ಸರ್ವಾಃ ಪ್ರಮಾಃ=ಎಲ್ಲ ಪ್ರಮಾಣಗಳನ್ನೂ ಈಶತ್ವಾವಿರೋಧೇನ=ಈಶತ್ವಕ್ಕೆ ವಿರೋಧವಾಗದಂತೆ ಯೋಜಯಿತ್ವಾ=ಹೊಂದಿಸಿ ಸಿದ್ಧೇಶತ್ವೇನ=ಸಿದ್ಧವಾದ ಈಶತ್ವವುಳ್ಳ ಈಶೇನ= ಪರಮಾತ್ಮನೊಂದಿಗೆ ಮಾನತಃ ಪ್ರಾಪ್ತಂ=ಪ್ರಮಾಣಸಿದ್ಧವಾದ ಅಖಿಲಂ= ಎಲ್ಲಾ ಅಯುಕ್ತಮಪಿ=ಲೋಕದಲ್ಲಿ ಅಸಂಭಾವಿತವೆನಿಸುವುದನ್ನೂ ಯೋಜಯೇತ್=ಹೊಂದಿಸಬಹುದು. ಕ್ವಚಿತ್=ಎಂದೂ ಅಮಾನಂ= ಪ್ರಮಾಣವಿರುದ್ಧವಾದುದನ್ನು ನ ಯೋಜಯೇತ್=ಹೊಂದಿಸಬಾರದು, ಇತಿ=ಹೀಗೆ ಬ್ರಹ್ಮತರ್ಕೋಕ್ತಿಃ=ಬ್ರಹ್ಮತರ್ಕದ ವಚನವಿದೆ.

ಅತಃ=ಆದ್ದರಿಂದ ಇಹ ಉದಿತಂ=ಇದುವರೆಗೆ ಹೇಳಿದ್ದೆಲ್ಲವೂ ಯುಕ್ತಂ=ಯೋಗ್ಯವಾಗಿದೆ.

ಭಾವಾರ್ಥ— ಬ್ರಹ್ಮತರ್ಕ ಹೀಗೆ ಹೇಳುತ್ತದೆ— ಭಗವಂತನ ಸಾರ್ವಭೌಮತೆಗೆ ಯಾವುದು ವಿರೋಧಿಯಲ್ಲವೋ ಅಂತಹ, ಲೋಕವಿರುದ್ಧವಾದ ಧರ್ಮಗಳನ್ನೂ, ಪ್ರಮಾಣವಿದ್ದರೆ, ಅವನಲ್ಲಿ ಹೇಳಬಹುದು. ಪ್ರಮಾಣೋಕ್ತವಾದರೂ ಅವನ ಸರ್ವೇಶ್ವರತ್ವಕ್ಕೆ ವಿರುದ್ಧವಾದ ಧರ್ಮವನ್ನು ಅವನಲ್ಲಿ ಹೇಳಬಾರದು. ಅಣುತ್ವ-ಮಹತ್ವಗಳು ಅವನಲ್ಲಿ ಪ್ರಮಾಣ ಸಿದ್ಧವಾಗಿವೆ. ಅವುಗಳು ಅವನ ಈಶತ್ವವಿರೋಧಿಗಳೂ ಅಲ್ಲ. ಆದ್ದರಿಂದ ಲೋಕ ವಿರುದ್ಧವಾದರೂ ಅವುಗಳನ್ನು ಅಂಗೀಕರಿಸಬಹುದು. ಜೀವನಿಂದ ಭೇದಾಭೇದಗಳು ಪ್ರಮಾಣಗಳಿಂದ ಆಪಾತಃ ಪ್ರತೀತಿಗಳಾಗಿರಬಹುದು. ಆದರೂ ಅವುಗಳು ಅವನ ಸರ್ವೇಶತ್ವಕ್ಕೆ ವಿಘಾತಕವಾದುದರಿಂದ ಅದನ್ನು ಅಂಗೀಕರಿಸಬಾರದು.

ಆದ್ದರಿಂದ ಈ ಉಪಮಾಧಿಕರಣದಲ್ಲಿ ಹೇಳಿರುವ ಅತ್ಯಂತ ಭೇದವು ಯುಕ್ತವಾಗಿದೆ.

ಇಲ್ಲಿಗೆ ಉಪಮಾಧಿಕರಣ ಮುಗಿಯಿತು.

## ಅರೂಪಾಧಿಕರಣ

### "ಓಂ ಅರೂಪವದೇವ ಹಿ ತತ್ಪ್ರಧಾನತ್ವಾತ್ ಓಂ"

**ಸ ಚಾಪ್ರಾಕೃತರೂಪತ್ವಾದರೂಪಃ, ಸ್ವಗುಣಾತ್ಮಕಮ್ ।**
**ರೂಪಮಸ್ಯ ಶಿರಃಪಾಣಿಪಾದಾದ್ಯಾತ್ಮಕಮಿಷ್ಯತೇ ॥ ೧೫೧ ॥**

ಸ ಚ=ಆ ಪರಮಾತ್ಮನಾದರೂ ಅಪ್ರಾಕೃತರೂಪತ್ವಾತ್=ಪ್ರಕೃತಿ–ಪಂಚ ಭೂತಗಳಿಂದಾದ ದೇಹವಿಲ್ಲದವನಾದುದರಿಂದ ಅರೂಪಃ=ದೇಹರಹಿತ ನೆಂದು ಹೇಳಲ್ಪಡುತ್ತಾನೆ. ಅಸ್ಯರೂಪಂ=ಪರಮಾತ್ಮನ ತಲೆ–ಕಾಲು–ಕೈಗಳಿಂದ ಕೂಡಿದ ದೇಹವು ಸ್ವಗುಣಾತ್ಮಕಂ=ಅವನ ಸ್ವರೂಪಭೂತವಾದ ಆನಂದಾದ್ಯಾತ್ಮಕವಾಗಿ ಇಷ್ಯತೇ=ಅಂಗೀಕರಿಸಲ್ಪಟ್ಟಿದೆ.

ಭಾವಾರ್ಥ— ಸೂತ್ರ ಮತ್ತು ಅನುವ್ಯಾಖ್ಯಾನದಲ್ಲಿರುವ ರೂಪಶಬ್ದಕ್ಕೆ ದೇಹ ಎಂದು ಅರ್ಥ. 'ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಂ' ಎಂಬ ಶ್ರುತಿಗಳು ಬ್ರಹ್ಮನಿಗೆ ವಿಗ್ರಹ ಇದೆ ಎಂದು ಹೇಳಿದರೆ 'ಅಸ್ಥೂಲಮನಣು' ಇತ್ಯಾದಿ ಶ್ರುತಿಗಳು ಅವನಿಗೆ ದೇಹವಿಲ್ಲ, ಎನ್ನುತ್ತವೆ. ಇವೆರಡೂ ವಿರುದ್ಧವಲ್ಲ. ರೂಪವಿಲ್ಲ ಎಂದರೆ ನಮ್ಮಂತಹ ಪಾಂಚಭೌತಿಕವಾದ ರೂಪವಿಲ್ಲ, ಎಂದರ್ಥ. ಅಪ್ರಾಕೃತವಾದ, ಜ್ಞಾನಾನಂದಮಯವಾದ, ಸಕಲಾಂಗೋಪೇತವಾದ ದೇಹ ಪರಮಾತ್ಮನಿಗೂ ಇದೆ.

**ಅತೋ ನಾನಿತ್ಯತಾ ನೈವ ಶ್ರುತಿದ್ವಯವಿರೋಧಿತಾ ।**
**ಯಥಾಹಿ ತೈಜಸಸ್ಯೈವ ಪ್ರಕಾಶಸ್ಯೋಜ್ಝಿತಾವಪಿ ।**
**ಆತ್ಮೈವ ಜ್ಯೋತಿರಿತ್ಯಾಹ ಜೀವಸ್ಯೇಶಂ ಶ್ರುತಿಸ್ತಥಾ ॥ ೧೫೨ ॥**

ಅತಃ=ಪ್ರಾಕೃತವಿಗ್ರಹವು ಇಲ್ಲದಿರುವುದರಿಂದ ನಾನಿತ್ಯತಾ=ಪರಮಾತ್ಮ

ನಿಗೆ ಅನಿತ್ಯತ್ವವು ಇಲ್ಲ. ಅತಃ=ಪ್ರಾಕೃತವಿಗ್ರಹ ಇಲ್ಲವಾದರೂ ಅಪ್ರಾಕೃತವಾದ ಜ್ಞಾನಾನಂದಮಯವಾದ ವಿಗ್ರಹವು ಇರುವುದರಿಂದ ಶ್ರುತಿದ್ವಯವಿರೋಧಿತಾ='ರೂಪ ಇದೆ, ಇಲ್ಲ' ಎನ್ನುವ ಎರಡು ಶ್ರುತಿಗಳ ವಿರೋಧವೂ ನ=ಇಲ್ಲ.

ಯಥಾ=ಹೇಗೆ ತೈಜಸಸ್ಯೈವ ಪ್ರಕಾಶಸ್ಯ=ಸೂರ್ಯಾದಿ ತೈಜಸ ವಸ್ತುಗಳ ಪ್ರಕಾಶವೇ ಪ್ರಕಾಶಶಬ್ದದಿಂದ ವಾಚ್ಯವೆಂದು ಲೋಕದಲ್ಲಿ ಪ್ರಸಿದ್ಧಿ ಇದ್ದರೂ ಅಂತಹ ಪ್ರಕಾಶದ ಉಜ್ಝಿತಾವಪಿ=ಅಭಾವ ಇದ್ದರೂ ಶ್ರುತಿಃ= ವೇದವು ಜೀವಸ್ಯ=ಜೀವನಿಗೆ ಈಶಂ ಪ್ರತಿ=ಪರಮಾತ್ಮನ ಬಗ್ಗೆ 'ಆತ್ಮೈವ ಜ್ಯೋತಿಃ'=ಮಲಗಿರುವಾಗ ಪರಮಾತ್ಮನೇ (ಜೀವನಿಗೆ) ಬೆಳಕು, ಇತ್ಯಾಹ= ಹೀಗೆ ಹೇಳುತ್ತದೆ. ತಥಾ=ಅದರಂತೆ, ಪರಮಾತ್ಮನ ಅಪ್ರಾಕೃತದೇಹವೂ ದೇಹಶಬ್ದದಿಂದ ವಾಚ್ಯವಾಗುತ್ತದೆ.

**ಭಾವಾರ್ಥ**— ಆಕಾರ ಇರುವ ವಸ್ತುಗಳು ಅನಿತ್ಯಗಳು. ಪರಮಾತ್ಮನಿಗೂ ದೇಹವಿದ್ದರೆ ಅನಿತ್ಯನಾದಾನು, ಎನ್ನುವ ಆಕ್ಷೇಪ ಸರಿಯಲ್ಲ. ಭೌತಿಕವಿಗ್ರಹಗಳಿದ್ದರೆ ಮಾತ್ರ ಅನಿತ್ಯತ್ವಪ್ರಸಂಗ. ಪರಮಾತ್ಮನ ವಿಗ್ರಹ ಅಭೌತಿಕವಾದುದು. ಆದ್ದರಿಂದ ಅನಿತ್ಯತ್ವಪ್ರಸಂಗ ಇಲ್ಲ. ಅದರಂತೆ ಭಗವಂತ ನಿರ್ದೇಹ–ಸದೇಹ ಎಂಬ ಶ್ರುತಿಗಳಿಗೂ ಪರಸ್ಪರವಿರೋಧವಿಲ್ಲ. ಪ್ರಾಕೃತ ದೇಹ ರಹಿತನಾದ ಕಾರಣ ನಿರ್ದೇಹನೆಂದೂ ಅಪ್ರಾಕೃತದೇಹವಿರುವುದರಿಂದ ಸದೇಹನೆಂದೂ ಭಗವಂತನನ್ನು ಹೇಳಬಹುದು.

ದೇಹ–ರೂಪ ಶಬ್ದಗಳಿಗೆ ಭೌತಿಕವಸ್ತುಗಳೇ ಅರ್ಥವೆಂದು ಸಿದ್ಧವಾಗಿದೆ. ಹೀಗಿದ್ದಮೇಲೆ ಅಭೌತಿಕ ದೇಹದಲ್ಲಿ ಆ ಶಬ್ದದ ಪ್ರಯೋಗ ಹೇಗೆ? ಇದಕ್ಕೆ ಉತ್ತರ–ಲೋಕದಲ್ಲಿ ಪ್ರಕಾಶಶಬ್ದಕ್ಕೆ ಬೆಂಕಿಯ ಅಥವಾ ಸೂರ್ಯನ ಬೆಳಕು ಎಂದು ಅರ್ಥ. ಆದರೆ 'ಆತ್ಮೈವಾಸ್ಯ ಜ್ಯೋತಿರ್ಭವತಿ' ಎಂದು ಉಪನಿಷತ್ತು 'ನಿದ್ರಾಕಾಲದಲ್ಲಿ ಜೀವನಿಗೆ ಪರಮಾತ್ಮನೇ ಬೆಳಕು' ಎಂದು ಜ್ಯೋತಿಃಶಬ್ದವನ್ನು ಪರಮಾತ್ಮನಲ್ಲೂ ಪ್ರಯೋಗಿಸಿದೆ. ಅದರಂತೆ, 'ರೂಪ–ದೇಹ' ಶಬ್ದಗಳ ವಿದ್ವದ್‌ರೂಢಿ ಚಿದಾನಂದಾದ್ಯಾತ್ಮಕದೇಹದಲ್ಲೂ ಇದೆ.

'ನ ಸ್ಥಾನತೋಽಪಿ...' ಎಂಬ ಅಧಿಕರಣದ ಅನಂತರವೇ

'ಅರೂಪವದೇವ..' ಎಂಬ ಸೂತ್ರವಿದ್ದರೂ ಇಲ್ಲಿ ಅವೆರಡರ ಮಧ್ಯದಲ್ಲಿ 'ಅತ ಏವ ಚೋಪಮಾ' ಎಂಬ ಸೂತ್ರವನ್ನು ವ್ಯಾಖ್ಯಾನಿಸಿ ಸೂತ್ರಕ್ರಮವನ್ನು ಉಲ್ಲಂಘಿಸಲಾಗಿದೆ. ಏಕೆಂದರೆ, ನ ಸ್ಥಾನತೋಽಪಿ, ಎಂಬ ಅಧಿಕರಣದಲ್ಲಿ ಪರಮಾತ್ಮನ ರೂಪಗಳಲ್ಲಿ ಭೇದವಿಲ್ಲ, ಎಂದು ಹೇಳಿದಾಗ 'ಜೀವರೂ ಮತ್ಸ್ಯಾದಿರೂಪಗಳಂತೆ ಪರಮಾತ್ಮನ ಅಂಶರು. ಅವರಿಗೂ ಪರಮಾತ್ಮನಿಗೂ ಭೇದಾಭೇದವಿದೆ' ಎನ್ನುವ ಆಕ್ಷೇಪ ಬರುತ್ತದೆ. ಅದರ ಪರಿಹಾರಕ್ಕಾಗಿ ಉಪಮಾಧಿಕರಣವನ್ನು ಮಧ್ಯದಲ್ಲಿ ವ್ಯಾಖ್ಯಾನಿಸಲಾಗಿದೆ. ಅರೂಪತ್ವಾಧಿ ಕರಣದಲ್ಲಿ ಉಪಮಾಧಿಕರಣದಲ್ಲಿ ಹೇಳಿರುವ ಜೀವೇಶರ ಅತ್ಯಂತಭೇದಕ್ಕೆ ಹೇತುವನ್ನು ಹೇಳಲಾಗಿದೆ. ಭಗವಂತ ಕಾಲತ್ರಯದಲ್ಲೂ ಪ್ರಾಕೃತದೇಹ ರಹಿತ. ಅಂತಹವನಿಗೆ ಪ್ರಾಕೃತ ದೇಹವಿರುವ ಜೀವನಿಂದ ಅಭೇದವಿರಲು ಸಾಧ್ಯವಿಲ್ಲ, ಎನ್ನುವುದು ಅರೂಪಾಧಿಕರಣದಿಂದ ಸಿದ್ಧವಾಗುತ್ತದೆ. ಆದ್ದರಿಂದ ಸೂತ್ರಕಾರರು ಅಪರೂಪತ್ವವನ್ನು ಉಪಮಾಧಿಕರಣಕ್ಕಿಂತಲೂ ಮೊದಲು ಉಪೋದ್ಘಾತರೂಪದಿಂದ ಹೇಳಿದ್ದಾರೆ. ಆಚಾರ್ಯರು ಆಕಾಂಕ್ಷಾನುಗುಣ ವಾಗಿ ಆಮೇಲೆ ವ್ಯಾಖ್ಯಾನಿಸಿದ್ದಾರೆ.

**ಇಲ್ಲಿಗೆ ಅರೂಪಾಧಿಕರಣ ಮುಗಿಯಿತು.**

## ವೃದ್ಧಿಹ್ರಾಸಾಧಿಕರಣ

### 'ಓಂ ವೃದ್ಧಿಹ್ರಾಸಭಾಕ್ತ್ವಮಂತರ್ಭಾವಾದುಭಯ ಸಾಮಂಜಸ್ಯಾದೇವಮ್ ಓಂ'

**ತದ್ಭಕ್ತಿತಾರತಮ್ಯೇನ ತಾರತಮ್ಯಂ ವಿಮುಕ್ತಿಗಮ್ ।**
**ಬ್ರಹ್ಮಾದೀನಾಂ ಚ ಸರ್ವೇಷಾಮಾನಂದಾದೇರ್ಯಥಾಕ್ರಮಮ್**
**॥ ೧೫೩ ॥**

ಬ್ರಹ್ಮಾದೀನಾಂ ಚ=ಬ್ರಹ್ಮಾದಿದೇವತೆಗಳ ಮತ್ತು ಮನುಷ್ಯರ ಹೀಗೆ ಸರ್ವೇಷಾಂ=ಎಲ್ಲರ ಆನಂದಾದೇಃ=ಆನಂದಜ್ಞಾನಾದಿಗುಣಗಳ ಯಥಾ ಕ್ರಮಂ=ಶ್ರುತ್ಯುಕ್ತವಾದ ಕ್ರಮವನ್ನು ಅನುಸರಿಸಿ ವಿಮುಕ್ತಿಗಂ=ಮೋಕ್ಷ

ದಲ್ಲಿರುವ ತಾರತಮ್ಯಂ=ತಾರತಮ್ಯವು ತದ್‌ಭಕ್ತಿತಾರತಮ್ಯೇನ=ಅವರವರ ಭಕ್ತಿಯ ತಾರತಮ್ಯದ ಕಾರಣದಿಂದಾಗಿ ಇದೆ.

ಭಾವಾರ್ಥ— ಸಾಧಕರ ಭಕ್ತಿಯಲ್ಲಿ ತಾರತಮ್ಯ ಇದೆ, ಎಂದು ಸಾಧಿಸಲು ಸೂತ್ರದಲ್ಲಿ 'ಅಂತರ್ಭಾವಾತ್ ಉಭಯಸಾಮಂಜಸ್ಯಾತ್' ಎಂಬ ಹೇತುಗಳನ್ನು ಹೇಳಲಾಗಿದೆ. ಭಕ್ತರಲ್ಲಿ ಬ್ರಹ್ಮಾದಿದೇವತೆಗಳೂ ಸೇರಿರುವುದರಿಂದ ಭಕ್ತಿಯಲ್ಲಿ ತಾರತಮ್ಯವಿದೆ, ಎಂದು ಮೊದಲ ಹೇತುವಿನ ಅರ್ಥ. ಉಭಯಸಾಮಂಜಸ್ಯಾತ್, ಎಂದು ಎರಡನೆಯ ಹೇತು. ಭಗವಂತನು ಬ್ರಹ್ಮಾದಿಗಳಿಗೂ ನಮಗೂ ಸಮಂಜಸನಾಗಬೇಕಾದರೆ ಭಕ್ತಿಯಲ್ಲಿ ತಾರತಮ್ಯ ಇರಬೇಕು, ಎಂದು ಅದರ ಅರ್ಥ. ಆದರೆ ಈ ಎರಡೂ ಹೇತುಗಳು ಭಕ್ತಿತಾರತಮ್ಯಕ್ಕೆ ಹೇಗೆ ಸಾಧಕವಾಗುತ್ತವೆ, ಎನ್ನುವುದು ತಿಳಿಯುವುದಿಲ್ಲ. ಅದಕ್ಕಾಗಿ ಈ ಅನುವ್ಯಾಖ್ಯಾನದಲ್ಲಿ ಅವೆರಡರ ಸಾಧ್ಯ–ಸಾಧನಭಾವವನ್ನು ಸಮರ್ಥಿಸಲಾಗಿದೆ.

ಮೋಕ್ಷದಲ್ಲಿ ಬ್ರಹ್ಮಾದಿದೇವತೆಗಳ ಹಾಗೂ ಜೀವರ ಆನಂದಾದಿಗಳಲ್ಲಿ ತಾರತಮ್ಯವಿದೆ. ಭಗವಂತನೇ ''ಆನಂದದಶ್ಚ ಮುಕ್ತಾನಾಂ=ಮುಕ್ತರಿಗೆ ಆನಂದ ನೀಡುವವನು.'' ಅವನು ನಿಷ್ಕಾರಣವಾಗಿ ಈ ಆನಂದದಲ್ಲಿ ವ್ಯತ್ಯಾಸಮಾಡಿದರೆ ಪಕ್ಷಪಾತಿಯಾಗುತ್ತಾನೆ. ಅದಕ್ಕಾಗಿ ಮೋಕ್ಷಸಾಧನವಾದ ಭಕ್ತಿಯಲ್ಲೂ ತಾರತಮ್ಯವನ್ನು ಒಪ್ಪಬೇಕು. ಆಗ ಭಕ್ತ್ಯನುಸಾರವಾಗಿ ಫಲಪ್ರದನಾದುದರಿಂದ ಭಗವಂತ ನಿಷ್ಪಕ್ಷಪಾತಿಯಾಗುತ್ತಾನೆ. ಹೀಗೆ ಸೂತ್ರದ ಅರ್ಥವನ್ನು ಸಮರ್ಥಿಸಬೇಕು, ಎಂದು ಅನುವ್ಯಾಖ್ಯಾನದ ಅಭಿಪ್ರಾಯ.

**ಇಲ್ಲಿಗೆ ವೃದ್ಧಿಹ್ರಾಸಾಧಿಕರಣ ಮುಗಿಯಿತು.**

## ಸ್ಥಾನವಿಶೇಷಾಧಿಕರಣ

**'ಓಂ ಸ್ಥಾನವಿಶೇಷಾತ್ ಪ್ರಕಾಶಾದಿವತ್ ಓಂ'**

**ಪ್ರತಿಬಿಂಬವದಪ್ಯೇಷಾಮಾನಂದೋಽನ್ಯಗುಣಾ ಯಥಾ ।**
**ನಾರಾಯಣಗುಣಾಧೀನಶ್ಚಾತ್ಯಲ್ಪಸ್ತದಪೇಕ್ಷಯಾ ॥ ೧೫೪ ॥**

ತಸ್ಮಾದ್ ಭಿನ್ನಶ್ಚ ಸತತಮ್ 'ಅನ್ಯಜ್ಞಾನಂ ಪರಸ್ಯ ಚ ।
ಅನ್ಯಜ್ಞಾನಂ ತು ಜೀವಾನಾಮನ್ಯ ಆನಂದ ಈಶತಾ ॥ ೧೫೫॥

ಮುಖ್ಯೇಶತಾ ಪರೇಶಸ್ಯ ಗೌಣೀ ಜೀವಸ್ಯ ಸಾ ಯತಃ' ।
ಇತಿ ಶ್ರುತೇಃ (ಸೃಷ್ಟಿನಾಶೌ ತದಧೀನಾವಿತೀರಿತೇ) ॥ ೧೫೬॥

ಏಷಾ=ಬ್ರಹ್ಮಾದಿದೇವತೆಗಳ ಆನಂದಃ=ಆನಂದವು ಪ್ರತಿಬಿಂಬವತ್=ಪರಮಾತ್ಮ ಆನಂದದ ಪ್ರತಿಬಿಂಬದಂತಿದೆ. ಆದರೂ, ಅನ್ಯಗುಣಾಃ ಯಥಾ=ಬ್ರಹ್ಮಾದಿಜೀವರ ಭಕ್ತ್ಯಾದಿಗುಣವೈಚಿತ್ರ್ಯವನ್ನು ಅತಿಕ್ರಮಿಸದೆ ಪ್ರತಿಬಿಂಬವತ್=ಸೂರ್ಯಕಾಂತಾದಿ ಅನೇಕ ವಸ್ತುಗಳಲ್ಲಿ ಸೂರ್ಯನ ಪ್ರತಿಬಿಂಬದಂತೆ ಪರಸ್ಪರ ಒಂದಕ್ಕಿಂತ ಇನ್ನೊಂದು ವಿಲಕ್ಷಣವಾಗಿದೆ.

**ವಿವರಣೆ**— ಈ ಸೂತ್ರವು 'ಪರಮತಃ...' ಇತ್ಯಾದಿ 15ನೇ ಅಧಿಕರಣದ 32ನೆಯ ಸೂತ್ರದ ಅನಂತರ ಮುಂದೆ ಬಂದಿದೆ. ಆದರೂ ಈ ಸೂತ್ರದ ಅರ್ಥವು ಹಿಂದಿನ 'ವೃದ್ಧಿಹ್ರಾಸಾಧಿಕರಣ'ದ ಸಿದ್ಧಾಂತದ ಮೇಲೆ ಬರಬಹುದಾದ ಆಕ್ಷೇಪಕ್ಕೆ ಸಮಾಧಾನವನ್ನು ನೀಡುತ್ತಿರುವುದರಿಂದ ಇಲ್ಲಿಯೇ ವ್ಯಾಖ್ಯಾನಿಸಲಾಗಿದೆ.

ಬ್ರಹ್ಮಾದಿ ಮುಕ್ತಿಯೋಗ್ಯ ಜೀವರ ಆನಂದದಲ್ಲಿ ತಾರತಮ್ಯ ಇದೆ, ಎಂದು ಹಿಂದೆ ಹೇಳಿರುವುದು ಸರಿಯಲ್ಲ. ಮುಕ್ತರ ಆನಂದವು ಬ್ರಹ್ಮಾನಂದದ ಪ್ರತಿಬಿಂಬ. ಬ್ರಹ್ಮಾನಂದ ಬಿಂಬ. ಅದರಲ್ಲಿ ವೈಚಿತ್ರ್ಯ ಇಲ್ಲ. ಬಿಂಬದಲ್ಲಿ ವೈಚಿತ್ರ್ಯವಿದ್ದರೆ ಪ್ರತಿಬಿಂಬದಲ್ಲಿ ವೈಚಿತ್ರ್ಯ ಇರಲು ಸಾಧ್ಯ. ಬ್ರಹ್ಮಾನಂದವು ಏಕವಿಧವಾಗಿರುವಾಗ ಪ್ರತಿಬಿಂಬವಾದ ದೇವತೆಗಳ ಆನಂದಗಳಲ್ಲಿ ವೈಚಿತ್ರ್ಯ ಇರುವುಗು ಹೇಗೆ?

ಈ ಆಕ್ಷೇಪಕ್ಕೆ ಸಮಾಧಾನ— ಬಿಂಬವು ಒಂದೇ ವಿಧವಾದರೂ ಉಪಾಧಿಗಳಲ್ಲಿ ವೈಚಿತ್ರವಿರುವಾಗ ಪ್ರತಿಬಿಂಬದಲ್ಲಿ ವೈಚಿತ್ರ್ಯವು ಇರುತ್ತದೆ. ಸೂರ್ಯನ ಪ್ರತಿಬಿಂಬ ನೀರಿನಲ್ಲಿ ಬಿದ್ದರೆ ಶಾಂತವಾಗಿರುತ್ತದೆ. ಸೂರ್ಯಕಾಂತಮಣಿಯಲ್ಲಿ ಬಿದ್ದರೆ ಬೆಂಕಿ ಬರುತ್ತದೆ. ಅದರಂತೆ ಉಪಾಧಿಯಂತಿರುವ ಬ್ರಹ್ಮಾದಿ ದೇವತೆಗಳ ಸ್ವರೂಪಭೂತವಾದ ಉಪಾಧಿಯಲ್ಲಿರುವ ಜ್ಞಾನಭಕ್ತ್ಯಾದಿ

ಗುಣಗಳ ವೈಚಿತ್ರ್ಯದಿಂದ ಪ್ರತಿಬಿಂಬವಾದ ಆನಂದದಲ್ಲಿ ವೈಚಿತ್ರ್ಯವು ಉಪಪನ್ನವಾಗುತ್ತದೆ.

ಪ್ರತಿಬಿಂಬದಲ್ಲಿ ವೈಚಿತ್ರ್ಯವು ನಾರಾಯಣಗುಣಾಧೀನಶ್ಚ=ಬಿಂಬನಾದ ನಾರಾಯಣನ ಸಾಮರ್ಥ್ಯವಿಶೇಷದಿಂದಾಗಿಯೂ ಉಪಪನ್ನವಾಗಿದೆ.

ಬ್ರಹ್ಮಾದಿಜೀವರ ಆನಂದಾದಿಗಳು ನಾರಾಯಣಗುಣಾಧೀನಾಃ= ಪರಮಾತ್ಮನ ಆನಂದಾದಿ ಗುಣಗಳ ಅಧೀನವಾಗಿವೆ ಮತ್ತು ತದಪೇಕ್ಷಯಾ ಅತ್ಯಲ್ಪಃ=ಪರಮಾತ್ಮನ ಆನಂದಾದಿಗಳ ಅಪೇಕ್ಷೆಯಿಂದ ಬಹಳ ಅಲ್ಪ ಪ್ರಮಾಣದ್ದು ಸತತಂ=ಸರ್ವದಾ ತಸ್ಮಾತ್ ಭಿನ್ನಶ್ಚ=ಅವನ ಗುಣಗಳಿಗಿಂತ ಭಿನ್ನಗಳೂ ಆಗಿವೆ.

ಹೀಗೆ ಹೇಳಲು ಆಧಾರ 'ಅನ್ಯಜ್ಞಾನಂ ಪರಸ್ಯಚ...' ಇತ್ಯಾದಿ ಶ್ರುತಿ. ಆ ಶ್ರುತಿಯ ಅರ್ಥ— ಪರಸ್ಯಚ=ಪರಮಾತ್ಮನ ಜ್ಞಾನಂ=ಜ್ಞಾನವು ಅನ್ಯತ್= ಭಿನ್ನವಾದುದು. ಜೀವಾನಾಂ=ಜೀವರ ಜ್ಞಾನಂ ತು=ಜ್ಞಾನವಾದರೋ ಅನ್ಯತ್=ಬ್ರಹ್ಮಜ್ಞಾನಕ್ಕಿಂತ ಭಿನ್ನವಾದುದು. ಆನಂದಃ=ಬ್ರಹ್ಮನ ಆನಂದವು ಅನ್ಯಃ=ಜೀವಾನಂದಕ್ಕಿಂತ ಭಿನ್ನವಾದುದು. ಈಶತಾ=ಬ್ರಹ್ಮನ ಪ್ರಭುತ್ವವೂ ಜೀವನ ಪ್ರಭುತ್ವಶಕ್ತಿಗಿಂತ ಭಿನ್ನವಾದುದು. ಯತಃ=ಏಕೆಂದರೆ, ಪರೇಶಸ್ಯ= ಪರಮಾತ್ಮನ ಈಶತಾ=ಪ್ರಭುತ್ವವು ಮುಖ್ಯಾ=ಅನನ್ಯಾಧೀನವಾಗಿದ್ದು ಪ್ರಧಾನವಾದುದು. ಜೀವಸ್ಯ=ಜೀವನ ಸಾ=ಪ್ರಭುತ್ವಶಕ್ತಿಯು ಗೌಣೀ= ಅಪ್ರಧಾನವಾದುದು'' ಇತಿ ಶ್ರುತೇಃ=ಹೀಗೆ ಶ್ರುತಿ ಇರುವುದರಿಂದ ಹಿಂದೆ ಹೇಳಿದಂತೆ ಜೀವೇಶರ ಗುಣಗಳು ಬಿಂಬ-ಪ್ರತಿಬಿಂಬಗಳಾಗಿದ್ದರೂ ಭಿನ್ನವಾಗಿವೆ, ಅವುಗಳಿಗೆ ಏಕರೂಪತೆ ಇಲ್ಲ.

ಇಲ್ಲಿಗೆ ಸ್ಥಾನವಿಶೇಷಾಧಿಕರಣ ಮುಗಿಯಿತು.

# ಪ್ರಕೃತ್ಯೈತಾವತ್ತ್ವಾಧಿಕರಣ

**'ಓಂ ಪ್ರಕೃತ್ಯೈತಾವತ್ತ್ವಂ ಹಿ ಪ್ರತಿಷೇಧತಿ ತತೋ ಬ್ರವೀತಿ ಚ ಭೂಯಃ ಓಂ'**

**(ಇತಿ ಶ್ರುತೇಃ) ಸೃಷ್ಟಿನಾಶೌ ತದಧೀನಾವಿತೀರಿತೇ ।**

**ಸ್ವಭಾವತ್ತಾ ತ್ವಾತ್ ಸ್ಥಿತೇರ್ನೈತದಪೇಕ್ಷೇತಿ ನ ಯುಜ್ಯತೇ ।**
**ಯತಃ ಸ್ವಭಾವೋಽಪ್ಯಖಿಲ ಈಶಾಯತ್ತೋಽಖಿಲಸ್ಯ ಚ ॥ ೧೫೭ ॥**

ಸೃಷ್ಟಿನಾಶೌ=ಜಗತ್ತಿನ ಸೃಷ್ಟಿ ಮತ್ತು ಸಂಹಾರಗಳು ತದಧೀನೌ= ಪರಮಾತ್ಮನ ಅಧೀನವಾಗಿವೆ, ಇತಿ ಈರಿತೇ=ಹೀಗೆ ಸಿದ್ಧಾಂತಿಗಳು ಒಪ್ಪಿದಲ್ಲಿ ಸ್ಥಿತೇಃ=ಸ್ಥಿತಿಗೆ ಸ್ವಭಾವತ್ವಾತ್=ಜಗತ್ತಿನ ಸ್ವಭಾವತ್ವವು ಸಿದ್ಧವಾಗುವುದರಿಂದ ಏತದಪೇಕ್ಷಾ ನ=ಪರಮಾತ್ಮನ ಅಪೇಕ್ಷೆ ಇರುವುದಿಲ್ಲ, ಇತಿ ನ ಯುಜ್ಯತೇ= ಹೀಗೆ ಹೇಳುವುದು ಸರಿಯಲ್ಲ. ಯತಃ=ಏಕೆಂದರೆ, ಅಖಿಲಸ್ಯ=ಎಲ್ಲವುದರ ಅಖಿಲಃ=ಎಲ್ಲ ಸ್ವಭಾವೋಽಪಿ=ಸ್ವಭಾವವೂ ಈಶಾಯತ್ತಃ=ಭಗವದಧೀನ ವಾದುದು.

**ಭಾವಾರ್ಥ—** ಈ ಅಧಿಕರಣದಲ್ಲಿ ಜಗತ್ತಿನ ಸ್ಥಿತಿಯೂ ಭಗವಂತನ ಅಧೀನಕ್ಕೊಳಪಟ್ಟಿದೆ ಎಂದು ಸಮರ್ಥಿಸವಾಗಿದೆ.

**ಪೂರ್ವಪಕ್ಷ—** ಜಗತ್ತಿನ ಸೃಷ್ಟಿಯನ್ನೂ ಸಂಹಾರವನ್ನೂ ಮಾಡುವವನು ಒಬ್ಬನೇ ಪರಮಾತ್ಮ. ಅವನು ಸೃಷ್ಟಿಮಾಡಿದ ಪ್ರಪಂಚವು ಅವನು ನಾಶಮಾಡುವವರೆಗೆ ತನ್ನಿಂದ ತಾನೇ ಇರುತ್ತದೆ. ಅದಕ್ಕೆ ಅವನ ಅಗತ್ಯವೇನಿಲ್ಲ. ಒಂದುವೇಳೆ ಸಂಹಾರವನ್ನು ಬೇರೊಬ್ಬರು ಮಾಡುವುದಾದಲ್ಲಿ ಆಗ ಅಕಾಲದಲ್ಲಿ ಆಗಬಹುದಾದ ಸಂಹಾರವನ್ನು ತಡೆಯಲು ಪರಮಾತ್ಮನ ಅಗತ್ಯವಿದೆ. ಅದರಂತೆ ಸೃಷ್ಟಿಯನ್ನು ಅಕಾಲದಲ್ಲಿ ಬೇರೊಬ್ಬರು ಮಾಡುವುದಾದಲ್ಲಿ ಅದನ್ನು ತಡೆಯಲು ಅವನ ಅಗತ್ಯವಿದೆ. ಸೃಷ್ಟಿ ಸಂಹಾರಗಳೆರಡನ್ನೂ ಒಬ್ಬನೇ ಮಾಡುವುದಾದಲ್ಲಿ ಸ್ಥಿತಿಗೆ ಯಾರ ಅಗತ್ಯವೂ ಇಲ್ಲ. ಅದು ವಸ್ತು ಸ್ವಭಾವವಾಗುತ್ತದೆ. ಆದ್ದರಿಂದ ಪರಮಾತ್ಮನಿಗೆ ಪಾಲಕತ್ವ ಇಲ್ಲ.

**ಸಿದ್ಧಾಂತ—** ಸ್ಥಿತಿಯು ವಸ್ತುಸ್ವಭಾವವಾದರೂ ಅದು ಭಗವಂತನ ಅಧೀನ. ಎಲ್ಲ ವಸ್ತುಗಳ ಸ್ವಭಾವಗಳೂ ಅವನ ಅಧೀನಗಳಾಗಿವೆ, ಎಂದು ''ಸ್ವಭಾವೋ ಜೀವ ಏವ ಚ'' ಎಂಬ ಶ್ರುತಿಯೇ ಹೇಳುತ್ತದೆ. ಆದ್ದರಿಂದ ಜಗತ್ತಿನ ಸ್ಥಿತಿಯೂ ಭಗವಂತನ ಅಧೀನವಾಗಿದೆ.

**ಇಲ್ಲಿಗೆ ಪ್ರಕೃತೈತಾವತ್ವಾಧಿಕರಣ ಮುಗಿಯಿತು.**

# ಅವ್ಯಕ್ತಾಧಿಕರಣ

## 'ಓಂ ತದವ್ಯಕ್ತಮಾಹ ಹಿ ಓಂ'

**ಅವ್ಯಕ್ತೋಽಪಿ ಸ್ವಶಕ್ತ್ಯೈವ ಭಕ್ತಾನಾಂ ದೃಶ್ಯತೇ ಹರಿಃ ॥ ೧೫೮ ॥**

ಹರಿಃ=ಪರಮಾತ್ಮನು ಭಕ್ತಾನಾಂ=ಭಕ್ತರಿಗೆ ಅವ್ಯಕ್ತೋಽಪಿ= ಅವ್ಯಕ್ತನಾದರೂ ಭಕ್ತನಾಂ(ಅನುಗ್ರಹಾಯ)=ಭಕ್ತರ ಅನುಗ್ರಹಕ್ಕಾಗಿ ಸ್ವಶಕ್ತ್ಯೈವ= ತನ್ನ ಸಾಮರ್ಥ್ಯದಿಂದಲೇ ದೃಶ್ಯತೇ=ಕಾಣಲ್ಪಡುತ್ತಾನೆ.

**ಭಾವಾರ್ಥ—** ಈ ಅಧಿಕರಣದ ಮೊದಲನೆಯ 'ತದವ್ಯಕ್ತಮಾಹಹಿ' ಎಂಬ ಸೂತ್ರದಲ್ಲಿ ಪರಮಾತ್ಮನು ಅವ್ಯಕ್ತೈಕಸ್ವಭಾವ, ಯಾರಿಗೂ ಕಣ್ಣಿಗೆ ಕಾಣುವುದಿಲ್ಲ, ಎಂದು ಹೇಳಿ ''ಪ್ರಕಾಶಶ್ಚ ಕರ್ಮಣ್ಯಭ್ಯಾಸಾತ್'' ಎಂಬ ಸೂತ್ರದಲ್ಲಿ ಅವನು ಭಕ್ತರಿಗೆ ಕಾಣುತ್ತಾನೆ, ಎನ್ನಲಾಗಿದೆ. ಇವೆರಡೂ ವಿರುದ್ಧವಾದುದು. ಅದರ ಪರಿಹಾರವನ್ನು 'ಅತೋಽನಂತೇನ...' ಎಂಬ ಸೂತ್ರದಲ್ಲಿ ಮಾಡಲಾಗಿದೆ. ಆ ಪರಿಹಾರವನ್ನು ಸ್ಪಷ್ಟವಾಗಿ ಈ ಅನುವ್ಯಾಖ್ಯಾನದಲ್ಲಿ ಹೇಳಲಾಗಿದೆ.

ಪರಮಾತ್ಮನು ಸರ್ವಥಾ ಅದೃಶ್ಯನಾದರೂ ತನ್ನ ದರ್ಶನವಿಲ್ಲದೆ ಭಕ್ತರಿಗೆ ಮೋಕ್ಷವಾಗುವುದಿಲ್ಲವಾದ ಕಾರಣ, ಭಕ್ತರ ಮೇಲಿನ ವಾತ್ಸಲ್ಯದಿಂದ ತನ್ನ ಅಘಟಿತಘಟನಾಶಕ್ತಿಯಿಂದಾಗಿ ದೃಶ್ಯನಾಗುತ್ತಾನೆ. ಹೀಗಾಗಿ, ಜೀವನ ಶಕ್ತಿಯ ದೃಷ್ಟಿಯಿಂದ ಅವನು ಅದೃಶ್ಯ, ಸ್ವಶಕ್ತಿಯ ದೃಷ್ಟಿಯಿಂದ ದೃಶ್ಯ. ಹೀಗೆ, ದೃಶ್ಯತ್ವ–ಅದೃಶ್ಯತ್ವಗಳೆರಡೂ ಅವನಲ್ಲಿ ಇವೆ.

ಇಲ್ಲಿಗೆ ಅವ್ಯಕ್ತಾಧಿಕರಣ ಸಮಾಪ್ತವಾಯಿತು.

# ಅಹಿಕುಂಡಲಾಧಿಕರಣ

## 'ಓಂ ಉಭಯವ್ಯಪದೇಶಾತ್ತ್ವಹಿ ಕುಂಡಲವತ್ ಓಂ'

**ತದಭಿನ್ನಾ ಗುಣಾ ನಿತ್ಯಮಪಿ ಸರ್ವೇ ವಿಶೇಷತಃ ।**
**ಗುಣತ್ವೇನ ಗುಣಿತ್ವೇನ ಭೋಕ್ತೃಭೋಗ್ಯತಯಾ ಸ್ಥಿತಃ (ತಾಃ) ॥ ೧೫೯ ॥**

ಗುಣಾಃ=ಜ್ಞಾನಾನಂದಾದಿಗುಣಗಳು ನಿತ್ಯಂ=ಸರ್ವದಾ ತದಭಿನ್ನಾಃ ಅಪಿ=ಪರಮಾತ್ಮನಿಂದ ಅಭಿನ್ನಗಳಾದರೂ ವಿಶೇಷತಃ=ವಿಶೇಷದಿಂದಾಗಿ ಗುಣತ್ವೇನ=ಪರಮಾತ್ಮನ ಧರ್ಮರೂಪವಾಗಿಯೂ ಅದರಂತೆ, ಭೋಕ್ತೃ-ಭೋಗ್ಯತಯಾ=ಪರಮಾತ್ಮನು ಆನಂದಭೋಕ್ತಾ, ಗುಣಗಳು ಭೋಗ್ಯಗಳು ಎಂಬುದಾಗಿಯೂ ಸ್ಥಿತಾಃ=ಇವೆ.

**ಭಾವಾರ್ಥ—** ಸೂತ್ರದಲ್ಲಿ 'ಉಭಯವ್ಯಪದೇಶಾತ್' ಎಂಬ ಹೇತು ಇದೆ. 'ಅಹಿಕುಂಡಲವತ್' ಎಂಬ ದೃಷ್ಟಾಂತ ಇದೆ. ಪ್ರತಿಜ್ಞಾಭಾಗವನ್ನು ಹೇಳಿ ಸೂತ್ರಾರ್ಥವನ್ನು ಅನುವ್ಯಾಖ್ಯಾನದಲ್ಲಿ ವಿವರಿಸಲಾಗಿದೆ.

ಪರಮಾತ್ಮನ ಗುಣ-ಕ್ರಿಯಾದಿಗಳು ಅವನಿಂದ ಅತ್ಯಂತಾಭಿನ್ನಗಳು. ಆದರೂ ''ಬ್ರಹ್ಮಣಃ ಆನಂದಃ'' ಎಂಬ ಭೇದೋಕ್ತಿ 'ಆನಂದಂ ಬ್ರಹ್ಮ' ಎಂದು ಅಭೇದೋಕ್ತಿ ಎರಡೂ ಶ್ರುತಿಗಳಲ್ಲಿ ಇದೆ. ಅದನ್ನು 'ವಿಶೇಷ'ದಿಂದ ಸಮರ್ಥಿಸಬೇಕು.

**ವಿಶೇಷಾತ್ಮತಯಾ ತೇಷಾಂ ನಿತ್ಯಶಕ್ತ್ಯಾತ್ಮನಾ ತಥಾ ।**
**ನಿತ್ಯಂ(ತ್ಯ)ಸ್ಥಿತೇರ್ನ ಧರ್ಮಾಣಾಂ ಕ್ರಿಯಾದೀನಾಮನಿತ್ಯತಾ ॥ ೧೬೦ ॥**

ತೇಷಾಂ=ಭಗವಂತನ ಸಂಬಂಧಿಯಾದ ಕ್ರಿಯಾದೀನಾಂ ಧರ್ಮಾಣಾಂ=ಕ್ರಿಯೆಯೇ ಮೊದಲಾದ ಧರ್ಮಗಳಿಗೆ ನಿತ್ಯಶಕ್ತ್ಯಾತ್ಮನಾ= ನಿತ್ಯವಾದ ಶಕ್ತಿರೂಪದಿಂದ ನಿತ್ಯಂ ಸ್ಥಿತೇಃ=ಸರ್ವದಾ ಅಸ್ತಿತ್ವವು ಇರುವುದರಿಂದ ತಥಾ=ಹಾಗೆಯೇ ವಿಶೇಷಾತ್ಮನಾ=ವ್ಯಕ್ತಿರೂಪೇಣ, 'ಸ್ರಕ್ಷ್ಯತಿ' ಎಂಬ ವ್ಯವಹಾರವೂ ಕೂಡುವುದರಿಂದ ಅನಿತ್ಯತಾ ನ=ಅನಿತ್ಯತ್ವವು ಇಲ್ಲ.

**ಭಾವಾರ್ಥ—** ಪರಮಾತ್ಮನಲ್ಲಿ ನಿತ್ಯವಾದ ಪರಿಮಾಣಾದಿಧರ್ಮಗಳೂ ಇವೆ, ಅನಿತ್ಯವಾದ ಜ್ಞಾನ-ಕ್ರಿಯಾದಿಗಳೂ ಇವೆ. ಅವನ ಜ್ಞಾನವು ಅನಿತ್ಯವಾಗಿರಬೇಕು. ಏಕೆಂದರೆ, ಅವನು ಹಿಂದಿನ ಬ್ರಹ್ಮಾಂಡವನ್ನು ನೋಡಿದ್ದ, ಈಗಿನದನ್ನು ನೋಡುತ್ತಿದ್ದಾನೆ, ಮುಂದಿನ ಬ್ರಹ್ಮಾಂಡವನ್ನೂ ನೋಡಲಿದ್ದಾನೆ. ಹೀಗೆ ಹೇಳಿದಾಗ ಅವನ ಜ್ಞಾನಕ್ಕೆ ಉತ್ಪತ್ತಿನಾಶಗಳನ್ನು ಹೇಳಬೇಕಾಗುತ್ತದೆ.

ಅವನು ಸೃಷ್ಟಿಮಾಡಿದ, ಮುಂದೆ ಸಂಹಾರವನ್ನೂ ಮಾಡುತ್ತಾನೆ ಎನ್ನಬೇಕಾದರೆ ಸೃಷ್ಟ್ಯಾದಿಕ್ರಿಯೆಗಳು ಕಾಲ-ಕಾಲಕ್ಕೆ ಬರಬೇಕಾಗುತ್ತವೆ. ಆದ್ದರಿಂದ ಕ್ರಿಯೆಗಳೂ ಅನಿತ್ಯಗಳು. ಇಂತಹ ಅನಿತ್ಯಧರ್ಮಗಳಿಗೆ ನಿತ್ಯನಾದ ಪರಮಾತ್ಮನಿಂದ ಅಭೇದ ಹೇಗೆ?

ಇದಕ್ಕೆ ಉತ್ತರ— ಅವನ ಜ್ಞಾನವೂ ನಿತ್ಯ, ಕ್ರಿಯೆಯೂ ನಿತ್ಯ. ಅವುಗಳಲ್ಲಿ ಶಕ್ತಿ-ವ್ಯಕ್ತಿಗಳೆಂಬ ಎರಡು ಧರ್ಮಗಳಿವೆ. ಸೃಷ್ಟಿಕಾಲದಲ್ಲಿ ಸಂಹಾರಕ್ರಿಯೆಯು ಶಕ್ತಿರೂಪದಿಂದ ಇದೆ, ಸಂಹಾರಕಾಲದಲ್ಲಿ ವ್ಯಕ್ತಾವಸ್ಥೆಗೆ ಬರುತ್ತದೆ. ಆಗ 'ಪರಮಾತ್ಮಾ ಸಂಹರತಿ' ಎಂಬ ವ್ಯವಹಾರ ಮಾಡಬಹುದು. ಆ ಕ್ರಿಯೆ ಸೃಷ್ಟಿಕಾಲದಲ್ಲಿ ಇದ್ದರೂ ಶಕ್ತ್ಯವಸ್ಥೆಯಲ್ಲಿ ಇರುವುದರಿಂದ ''ಸಂಹರತಿ'' ಎಂಬ ವ್ಯವಹಾರವಿಲ್ಲ. ಈ ವಿಷಯವನ್ನು ಅತ್ತೃತ್ವಾಧಿಕರಣದಲ್ಲಿ (1-2-2) ವಿಷದವಾಗಿ ನಿರೂಪಿಸಲಾಗಿದೆ.

**ನ ವಿಶೇಷಾತ್ಮತಾ ಚೇಯಮನಿತ್ಯಾ ಶಕ್ತಿರೂಪತಾ ।**
**ಸೈವ ಯತ್ ಸವಿಶೇಷಾ ಸ್ಯಾದ್ ವಿಶೇಷೋಽನ್ಯೋ ನಚಾಪ್ಯಯಮ್।**
**ಸ್ವನಿರ್ವಾಹಕತಾ ಹೇತೋಸ್ತಥಾಪಿ ಸ್ಯಾದ್ ವಿಶೇಷತಾ(ತಃ) ॥ ೧೬೧ ॥**

ಇಯಂ='ಸ್ರಕ್ಷ್ಯತಿ' ಎಂಬ ವ್ಯವಹಾರಕ್ಕೆ ಕಾರಣವಾಗಿ ಹೇಳಿರುವ ವಿಶೇಷಾತ್ಮತಾ=ಕ್ರಿಯೆಯಲ್ಲಿ ಇರುವ 'ವ್ಯಕ್ತಿ' ಎಂಬ ವಿಶೇಷವೂ ನ ಅನಿತ್ಯಾ=ಅನಿತ್ಯವಲ್ಲ. ಯತ್=ಯಾವಕಾರಣದಿಂದ ಸೈವ=ಆ 'ವ್ಯಕ್ತಿಯೂ' ಶಕ್ತಿರೂಪತಾ=ಶಕ್ತ್ಯಾತ್ಮಕವೇ ಆಗಿದೆ. ವ್ಯಕ್ತಿ-ಶಕ್ತಿಗಳಿಗೆ ಭೇದವಿಲ್ಲ. ಸವಿಶೇಷಾ ಸ್ಯಾತ್=ಶಕ್ತಿ-ವ್ಯಕ್ತಿಗಳಿಗೆ ಅಭೇದವಿದ್ದರೂ ಅವೆರಡರ ಮಧ್ಯದಲ್ಲಿ 'ವಿಶೇಷ' ಇದೆ.

ಅಯಂ ವಿಶೇಷಃ=ಜ್ಞಾನಾದಿಗಳಿಗೂ ಭಗವಂತನಿಗೂ ಇರುವ ವಿಶೇಷವೂ ನ ಅನ್ಯಶ್ಚ=ಭಗವಂತನಿಂದ ಅತ್ಯಂತಭಿನ್ನವಲ್ಲ. ತಥಾಪಿ= ವಿಶೇಷಕ್ಕೂ ಭಗವಂತನಿಗೂ ಅಭೇದವಿದ್ದರೂ ಸ್ವನಿರ್ವಾಹಕತಾಹೇತೋಃ= ಸ್ವನಿರ್ವಾಹಕತ್ವ ಇರುವ ಕಾರಣದಿಂದ ಆ ವಿಶೇಷಕ್ಕೆ ವಿಶೇಷತಾ ಸ್ಯಾತ್= ಭಗವದ್ಧರ್ಮತ್ವವು ಇರಬಹುದು.

ಭಾವಾರ್ಥ— ಕ್ರಿಯೆಯಲ್ಲಿ ಶಕ್ತಿ–ವ್ಯಕ್ತಿ ಎಂಬ ಎರಡು ಅವಸ್ಥಾ ವಿಶೇಷಗಳನ್ನು ಹೇಳಿ ''ಸ್ರಕ್ಷ್ಯತಿ'' ಎಂಬ ವ್ಯವಹಾರವನ್ನು ಸಮರ್ಥಿಸಿ ಕ್ರಿಯೆಗೆ ನಿತ್ಯತ್ವವನ್ನು ಹೇಳಿದರೂ ಆ ಶಕ್ತಿ–ವ್ಯಕ್ತಿಗಳು ಅನಿತ್ಯಗಳೆಂದು ಹೇಳಲೇಬೇಕಾಗುವುದು. ಸೃಷ್ಟಿಕಾಲದಲ್ಲಿ ಸಂಹಾರಕ್ರಿಯೆಯಲ್ಲಿ ಶಕ್ತಿರೂಪತಾ ಇದೆ, ವ್ಯಕ್ತಿ ಇಲ್ಲ. ಸಂಹಾರಕಾಲದಲ್ಲಿ ಶಕ್ತಿರೂಪತಾ ನಷ್ಟವಾಗಿ ವ್ಯಕ್ತಿ ಎಂಬ ಧರ್ಮ ಬರುತ್ತದೆ. ಹೀಗೆ, ಈ ಅನಿತ್ಯ ಧರ್ಮಗಳಿಗೂ ನಿತ್ಯಕ್ರಿಯೆಗೂ ಮತ್ತೆ ಅಭೇದವು ದುರ್ಘಟವಾಯಿತು.

ಈ ಆಕ್ಷೇಪಕ್ಕೆ ಹೀಗೆ ಸಮಾಧಾನ— ಆ ಶಕ್ತಿ ಮತ್ತು ವ್ಯಕ್ತಿ ಎಂಬ ಎರಡು ಧರ್ಮಗಳಿಗೂ ಅಭೇದವಿದೆ. ಸೃಷ್ಟಿಕಾಲದಲ್ಲಿ ಸಂಹಾರಕ್ರಿಯೆಯ ವ್ಯಕ್ತಿಯೂ ಶಕ್ತ್ಯಾತ್ಮನಾ ಇದೆ. ಅದು ಅನಿತ್ಯವಲ್ಲ.

ಹೀಗೆ ಹೇಳಿದರೆ, ಶಕ್ತಿ–ವ್ಯಕ್ತಿ ಎಂಬ ವ್ಯವಹಾರವಿಶೇಷ ಹೇಗೆ? ಆ ವ್ಯವಹಾರಕ್ಕೆ ವಿಷಯವಾದ ಧರ್ಮಗಳೆರಡೂ ಅಭಿನ್ನಗಳು. ಅಂದಮೇಲೆ ಅದನ್ನು ಶಕ್ತಿ ಎಂದೋ ವ್ಯಕ್ತಿ ಎಂದೋ ಒಂದು ಹೆಸರಿನಿಂದ ಕರೆಯಬೇಕು. ಕಾಲಭೇದೇನ ಈ ವ್ಯವಹಾರಭೇದ ಹೇಗೆ? ಇದಕ್ಕೆ ಸಮಾಧಾನ— ಶಕ್ತಿ ವ್ಯಕ್ತಿಗಳೆರಡು ಅಭಿನ್ನಗಳಾದರೂ ಅವೆರಡರಲ್ಲಿ ವಿಶೇಷವಿದೆ. ಅದರಿಂದಾಗಿ ವ್ಯವಹಾರಭೇದವು ಉಪಪನ್ನವಾಗುತ್ತದೆ.

ಪರಮಾತ್ಮನ ಧರ್ಮಗಳಿಗೆ ಪರಮಾತ್ಮನಿಂದ ಸವಿಶೇಷಾಭೇದವಾದರೂ ಆ ವಿಶೇಷಕ್ಕೂ ಪರಮಾತ್ಮನಿಗೂ ಮತ್ತೊಂದು ವಿಶೇಷವಿಲ್ಲ. ಆ ವಿಶೇಷವು ಪರಮಾತ್ಮನಿಂದ ಅಭಿನ್ನವಾದರೂ 'ಪರಮಾತ್ಮನ ವಿಶೇಷ' ಎಂಬ ಭೇದವ್ಯವಹಾರವನ್ನು ಅದು ತಾನೇ ನಿರ್ವಹಣೆ ಮಾಡುತ್ತದೆ. ಅದು ಸ್ವನಿರ್ವಾಹಕ. ಅದು 'ಪರಮಾತ್ಮನ ಜ್ಞಾನ' ಎಂಬ ಭೇದವ್ಯವಹಾರಕ್ಕೆ ಕಾರಣವಾದಂತೆ 'ಪರಮಾತ್ಮನ ವಿಶೇಷ, ಜ್ಞಾನದ ವಿಶೇಷ' ಎಂಬ ವ್ಯವಹಾರಕ್ಕೂ ಕಾರಣವಾಗುತ್ತದೆ.

**ವಿಶೇಷತ್ವೇನ ವಿಜ್ಞಾತೇಃ ಪ್ರಮಾಣೈರಖಿಲೈರಪಿ ।**
**ಸಸರ್ಜ ಸಂಜಹಾರೇತಿ ವಿಶೇಷೋ ಹ್ಯವಗಮ್ಯತೇ ।**
**ಶ್ರುತ್ಯೈವ ಸ ಸ ಏವೇತಿ ತದಭೇದಶ್ಚ ಗಮ್ಯತೇ ॥ ೧೬೨ ॥**

ಅಖಿಲೈಃ ಪ್ರಮಾಣೈಃ=ಎರಡು ರೀತಿಯಾದ ಶ್ರುತಿ ಪ್ರಮಾಣ ಗಳಿಂದಲೂ ಭಗವದ್ಧರ್ಮಗಳಿಗೆ ವಿಶೇಷತ್ವೇನ=ಭಗವಂತನ ವಿಶೇಷರೂಪ ಗಳಾಗಿಯೂ ಅಪಿ=ಭಗವದಭಿನ್ನಗಳಾಗಿಯೂ ವಿಜ್ಞಾತೇಃ=ತಿಳಿಯುವುದ ರಿಂದ ಧರ್ಮಗಳಿಗೆ ಭಗವಂತನಿಂದ ಸವಿಶೇಷಾಭೇದ ಇದೆ.

ಸಸರ್ಜ ಇತಿ='ಸ ಇದಂ ಸರ್ವಮಸೃಜತ' ಎಂಬ ಶ್ರುತಿಯಿಂದ ಭಗವಂತನು ಸೃಷ್ಟಿಮಾಡಿದ ಎಂದು ಭಗವಂತನಿಗೂ ಸೃಷ್ಟಿಕ್ರಿಯೆಗೂ ವಿಶೇಷಃ=ಭೇದವು ಗಮ್ಯತೇ=ತಿಳಿಯಲ್ಪಡುತ್ತದೆ. ಸಂಜಹಾರೇತಿ= ''ತತ್ತದತ್ತುಮಧ್ರಿಯತ'' ಎಂಬ ಶ್ರುತಿಯು ಸಂಹಾರ ಮಾಡಿದನು, ಎನ್ನುತ್ತಿರುವುದರಿಂದ ಸಂಹಾರಕ್ರಿಗೆ ಭಗವಂತನಿಂದ ವಿಶೇಷಃ=ಭೇದವು ಅವಗಮ್ಯತೇ=ತಿಳಿಯಲ್ಪಡುತ್ತದೆ. ಸಃ=ಆನಂದಾದಿಗಳು ಸಃ ಏವ= ಪರಮಾತ್ಮನೇ, ಎನ್ನುವ 'ಆನಂದೋ ಬ್ರಹ್ಮ' ಎಂಬ ಶ್ರುತಿಯಿಂದ ತದಭೇದಶ್ಚ=ಪರಮಾತ್ಮನಿಂದ ಅಭೇದವೂ ಗಮ್ಯತೇ=ತಿಳಿಯಲ್ಪಡುತ್ತದೆ.

**ಭಾವಾರ್ಥ**— ಈವರೆಗೆ 'ಧರ್ಮಗಳು ಈಶನಿಂದ ಸವಿಶೇಷಾ ಭಿನ್ನಗಳು' ಎನ್ನುವ ಪ್ರತಿಜ್ಞಾಭಾಗವನ್ನು ವಿವರಿಸಲಾಯಿತು. ಇಲ್ಲಿ ಸೂತ್ರೋಕ್ತ ವಾದ 'ಉಭಯವ್ಯಪದೇಶಾತ್' ಎಂಬ ಹೇತುವನ್ನು ವಿವರಿಸುತ್ತಾರೆ.

ಶ್ರುತಿಗಳಲ್ಲಿ ಎರಡೂವಿಧದ ವ್ಯಪದೇಶ(ವಾಕ್ಯ) ಇದೆ— 'ಸ ಇದಂ ಸರ್ವಂ ಅಸೃಜತ' ಇತ್ಯಾದಿ ಶ್ರುತಿಗಳು ಈಶನು ಸೃಷ್ಟಿಮಾಡಿದ, ಎಂದು ಹೇಳುವ ಮೂಲಕ ಈಶನಿಗೂ ಅವನ ಧರ್ಮಗಳಿಗೂ ಭೇದವಿದ್ದಂತೆ ಹೇಳಿವೆ. 'ಆನಂದೋ ಬ್ರಹ್ಮೇತಿ ವ್ಯಜಾನಾತ್' ಇಂತಹ ಕೆಲವು ವಾಕ್ಯಗಳು ಆನಂದಾದಿಗುಣಗಳೇ ಬ್ರಹ್ಮ ಎನ್ನುತ್ತವೆ. ಈರೀತಿ ವಿಭನ್ನ ವ್ಯಪದೇಶವನ್ನು ಸಮರ್ಥನೆ ಮಾಡಬೇಕಾದರೆ ಬ್ರಹ್ಮಧರ್ಮಗಳು ಬ್ರಹ್ಮನಿಂದ ಸವಿಶೇಷಾಭಿನ್ನಗಳು, ಅಭೇದವಿರುವುದರಿಂದಾಗಿ 'ಆನಂದೋ ಬ್ರಹ್ಮ' ಎಂಬ ವ್ಯಪದೇಶ, ಭೇದಕಾರ್ಯಕಾರಿಯಾದ ವಿಶೇಷದಿಂದಾಗಿ 'ಸಃ ಸಸರ್ಜ' ಎಂಬ ವ್ಯಪದೋಶವೂ ಉಪಪನ್ನವಾಗುತ್ತದೆ. ಇಷ್ಟೇ ಅಲ್ಲದೆ, ಕ್ರಿಯೆಯಲ್ಲಿ ಶಕ್ತಿ–ವ್ಯಕ್ತಿ, ಅವೆರಡಕ್ಕೆ ಅಭೇದ, ವಿಶೇಷ, ವಿಶೇಷಕ್ಕೆ ಸ್ವನಿವಾಹಕತ್ವ ಎಲ್ಲವನ್ನೂ ಕಲ್ಪಿಸಬೇಕಾಗುತ್ತದೆ.

'ವಿಶೇಷ' ಎಂಬ ತತ್ತ್ವವನ್ನು ಅಂಗೀಕರಿಸದ ಕೆಲವು ದಾರ್ಶನಿಕರು ಈ ಉಭಯವ್ಯಪದೇಶವನ್ನು ವಿಭಿನ್ನ ರೀತಿಯಿಂದ ಸಮರ್ಥಿಸುತ್ತಾರೆ.

(1) ಧರ್ಮಗಳಿಗೂ ಬ್ರಹ್ಮನಿಗೂ ಅತ್ಯಂತಭೇದವಿದೆ. ಅವೆರಡಕ್ಕೆ ಸಮವಾಯ ಸಂಬಂಧ ಎಂದು ಕೆಲವರು, ಸ್ವರೂಪಸಂಬಂಧ ಎಂದು ಇನ್ನು ಕೆಲವರು. ಆದ್ದರಿಂದ ಇವರು 'ಆನಂದೋ ಬ್ರಹ್ಮ' ಎಂಬ ಅಭೇದವ್ಯವಹಾರ ಔಪಚಾರಿಕ, ಎನ್ನುತ್ತಾರೆ.

(2) ಇನ್ನು ಕೆಲವರು, (ಮಾಯಾವಾದಿಗಳು) ಬ್ರಹ್ಮ ನಿರ್ಧರ್ಮಕ. ಜ್ಞಾನ, ಸೃಷ್ಟ್ಯಾದಿಧರ್ಮಗಳನ್ನು ನಿರೂಪಿಸುವ ಶ್ರುತಿಗಳು ಸಗುಣಬ್ರಹ್ಮನನ್ನು ನಿರೂಪಿಸುತ್ತವೆ. ಅವನಲ್ಲಿ ಮಾಯಾಮಯವಾದ ಗುಣಗಳು ಇವೆ. ಆದರೂ ಬ್ರಹ್ಮ ಮತ್ತು ಆನಂದಗಳಿಗೆ ಅಭೇದವಿದೆ. ಆದರೂ 'ಬ್ರಹ್ಮಣಃ ಆನಂದಃ' ಎಂಬ ಭೇದವ್ಯಪದೇಶ 'ರಾಹೋಃ ಶಿರಃ' ಎಂದಂತೆ ಗೌಣ ಎನ್ನುತ್ತಾರೆ.

(3) ಧರ್ಮಗಳಿಗೂ ಬ್ರಹ್ಮನಿಗೂ ಭೇದಾಭೇದ. ಭೇದವಿರುವುದರಿಂದ 'ಆನಂದಂ ಬ್ರಹ್ಮಣಃ' ಎಂಬ ಶ್ರುತಿಯೂ ಅಭೇದವಿರುವುದರಿಂದ 'ಆನಂದೋ ಬ್ರಹ್ಮ' ಎಂಬ ಶ್ರುತಿಯೂ ಉಪಪನ್ನವಾಗುತ್ತದೆ. ಇದು ಇನ್ನೊಂದು ವಾದ.

ಆದರೆ ಈ ಮೂವರೂ ಸಿದ್ಧಾಂತಿಗಳು ಅಂತತಃ ವಿಶೇಷವನ್ನು ಅಂಗೀಕರಿಸಲೇಬೇಕು. ಅಂದಮೇಲೆ ಮೊದಲೇ ಸವಿಶೇಷಾಭೇದವನ್ನು ಒಪ್ಪುವುದು ಉಚಿತ, ಎಂದು ಮುಂದೆ ಹೇಳಲಾಗಿದೆ.

**ಧರ್ಮ–ಧರ್ಮಿ ಭೇದವಾದಿಗೂ ವಿಶೇಷ ಅನಿವಾರ್ಯ**

**ಭೇದೋ ಯದಿ ವಿಶೇಷಸ್ಯ ಸ ಭೇದೋ ಭೇದಿನಾ ಕಥಮ್ ।**
**ಭಿನ್ನಶ್ಚೇದನವಸ್ಥಾ ಸ್ಯಾದಭಿನ್ನಶ್ಚೇತ್ ಪುರಾ ನ ಕಿಮ್ ॥ ೧೬೩ ॥**

ವಿಶೇಷಸ್ಯ=ಬ್ರಹ್ಮನ ಧರ್ಮಗಳಾದ ಜ್ಞಾನಾದಿಗಳಿಗೆ ಯದಿ ಭೇದಃ=ಒಂದುವೇಳೆ ಬ್ರಹ್ಮನಿಂದ ಭೇದವು ಇರುವುದಾದರೆ ಸ ಭೇದಃ=ಆ ಭೇದವು ಭೇದಿನಾ=ಭೇದಕ್ಕೆ ಸಂಬಂಧಿಸಿದ ಬ್ರಹ್ಮ ಮತ್ತು ಬ್ರಹ್ಮಧರ್ಮದಿಂದ

ಕಥಂ=ಹೇಗಿದೆ, ಅಂದರೆ ಆ ಭೇದಕ್ಕೂ ಬ್ರಹ್ಮ ಮತ್ತು ಬ್ರಹ್ಮಧರ್ಮಗಳಿಗೂ ಭೇದವಿದೆಯೋ, ಅಭೇದವಿದೆಯೋ? ಭಿನ್ನಶ್ಚೇತ್=ಆ ಭೇದವು ಅವೆರಡಕ್ಕಿಂತ ಭಿನ್ನವಾದರೆ ಅನವಸ್ಥಾ ಸ್ಯಾತ್=ಅನವಸ್ಥಾದೋಷ ಬಂದೀತು. ಅಭಿನ್ನಶ್ಚೇತ್= ಸವಿಶೇಷಾಭಿನ್ನವಾದರೆ ಪುರಾ ನ ಕಿಂ=ಮೊದಲೇ ಏಕೆ ಸವಿಶೇಷಾಭೇದವನ್ನು ಹೇಳಬಾರದು?

**ಭಾವಾರ್ಥ—** ಬ್ರಹ್ಮನಲ್ಲಿ ಜ್ಞಾನಾನಂದಾದಿ ಅನೇಕ ಧರ್ಮಗಳಿವೆ. ಆ ಧರ್ಮಗಳಿಗೆ ಬ್ರಹ್ಮನಿನಂದ ಭೇದವಿದ್ದಲ್ಲಿ ಆ ಭೇದವು ಬ್ರಹ್ಮ ಮತ್ತು ಅವನ ಧರ್ಮಗಳಿಗೆ ಸಂಬಂಧಪಡುತ್ತದೆ. ಅದು ಅವೆರಡಕ್ಕಿಂತಲೂ ಭಿನ್ನವಾದರೆ ಭೇದ ಮತ್ತು ಬ್ರಹ್ಮರ ಮಧ್ಯದಲ್ಲಿ ಇನ್ನೊಂದು ಭೇದ ಬಂತು. ಮೊದಲನೆಯದು ಧರ್ಮಗಳ ಭೇದ, ಎರಡನೆಯದು ಧರ್ಮಭೇದದ ಭೇದ. ಇದು ಎರಡನೆಯ ಭೇದ. ಈ ಭೇದವೂ ಬ್ರಹ್ಮಭಿನ್ನವಾದರೆ ಮೂರನೆಯ ಭೇದ ಬಂತು. ಹೀಗೆ ಅನವಸ್ಥಾದೋಷ. ಇದರ ಪರಿಹಾರಕ್ಕಾಗಿ, ಮೊದಲನೆಯ ಭೇದವು (ಧರ್ಮಭೇದ) ಬ್ರಹ್ಮನಿಂದ ಸವಿಶೇಷಾಭಿನ್ನ ಎನ್ನಬೇಕು. ಆದರೆ ಇಂತಹ ಅಭೇದವನ್ನು ಮೊದಲ ಹಂತದಲ್ಲೇ ಒಪ್ಪಬಹುದು. ಅಂದರೆ ಜ್ಞಾನಾದಿ ಧರ್ಮಗಳು ಬ್ರಹ್ಮನಿಂದ ಸವಿಶೇಷಾಭಿನ್ನಗಳೆಂದೇ ಹೇಳಬಹುದು. ಅದನ್ನು ಬಿಟ್ಟು ಆ ಧರ್ಮಗಳಿಗೆ ಭೇದವನ್ನು ಒಪ್ಪಿ, ಆ ಭೇದವು ಬ್ರಹ್ಮನಿಂದ ಸವಿಶೇಷಾಭಿನ್ನ ಎನ್ನುವ ಪ್ರಯಾಸ ಏಕೆ? ಭೇದದಲ್ಲಿ ಹೇಳುವ ರೀತಿಯನ್ನು ಧರ್ಮಗಳಲ್ಲೇ ಅನುಸರಿಸುವುದು ಲಾಘವ.

**ವಿಶೇಷೋಽಭಿನ್ನ ಏವೇತಿ ತೇನ ನಾಭ್ಯುಪಗಮ್ಯತೇ ।**
**ಅಭಿನ್ನೋ ನಿರ್ವಿಶೇಷಶ್ಚೇದ್ ಭೇದಸ್ತದ್ಭೇದತಾ ಕುತಃ ॥ ೧೬೪ ॥**

ತೇನ=ಧರ್ಮ–ಧರ್ಮಿಗಳಿಗೆ ಭೇದವನ್ನು ಹೇಳುವವನಿಂದ ವಿಶೇಷಃ= ಜ್ಞಾನಾದಿಧರ್ಮವು ಅಭಿನ್ನ ಏವೇತಿ=ಬ್ರಹ್ಮನಿಂದ ಅಭಿನ್ನವೆಂದೇ ನಾಭ್ಯುಪಗಮ್ಯತೇ=ಅಂಗೀಕರಿಸಲ್ಪಟ್ಟಿಲ್ಲ, ಇನ್ನು ಸವಿಶೇಷಾಭಿನ್ನ ಎನ್ನುವುದಂತೂ ದೂರದಲ್ಲೇ ಉಳಿಯಿತು.

ಭೇದಃ=ಆ ಭೇದವು 'ಭೇದಿ'ಗಳಿಂದ ನಿರ್ವಿಶೇಷಃ ಅಭಿನ್ನಶ್ಚೇತ್=

ನಿರ್ವಿಶೇಷಾಭಿನ್ನವಾದಲ್ಲಿ ತದ್ಭೇದತಾ ಕುತಃ=ಬ್ರಹ್ಮ ಮತ್ತು ಅವನ ಧರ್ಮಗಳ ಭೇದ ಎನ್ನುವುದಾದರೂ ಹೇಗೆ? ಭೇದವೂ ಬ್ರಹ್ಮ ಅಥವಾ ತದ್ಧರ್ಮಗಳೂ ನಿರ್ವಿಶೇಷಾಭಿನ್ನಗಳಾದರೆ ಬ್ರಹ್ಮ ಅಥವಾ ತದ್ಧರ್ಮಗಳು ಭೇದಾತ್ಮಕ ಗಳಾದವು. 'ಅವುಗಳಿಗೆ ಭೇದ ಇದೆ' ಎಂದು ಹೇಳುವುದು ಹೇಗೆ?

ಭಾವಾರ್ಥ— ಹಿಂದೆ ಬ್ರಹ್ಮ-ತದ್ಧರ್ಮಗಳಿಗೇ ಸವಿಶೇಷಾಭೇದವನ್ನು ಅಂಗೀಕರಿಸುವುದು ಉಚಿತ ಎಂದು ಆಪಾದಿಸಲಾಯಿತು. ಆದರೆ, ಪ್ರತಿವಾದಿಯು ಅವುಗಳಿಗೆ ಅಭೇದವನ್ನೇ ಒಪ್ಪುವುದಿಲ್ಲ. ಇನ್ನು ವಿಶೇಷ ಸಹಿತ ಅಭೇದವನ್ನು ಒಪ್ಪುವುದು ಹೇಗೆ?

ಇನ್ನು, ಧರ್ಮ-ಬ್ರಹ್ಮರಲ್ಲಿ ಒಪ್ಪಿದ ಭೇದವು ಅವೆರಡಕ್ಕಿಂತ ನಿರ್ವಿಶೇಷಾಭಿನ್ನವಾಗಲು ಸಾಧ್ಯವಿಲ್ಲ. ಆಗ ಭೇದಕ್ಕೂ ಭೇದಿಗಳಾದ ಬ್ರಹ್ಮ-ತದ್ಧರ್ಮಗಳಿಗೂ ಭೇದವಾಗಲೀ, ತತ್ಪ್ರತಿನಿಧಿಯಾದ ವಿಶೇಷವಾಗಲೀ ಇಲ್ಲದಿರುವುದರಿಂದ 'ಧರ್ಮದ ಭೇದವು ಬ್ರಹ್ಮನಲ್ಲಿ ಇದೆ' ಎಂದು ಹೇಳಲು ಬರುವುದಿಲ್ಲ.

**ಅನೇನಾನೇನ ಭಿನ್ನೋಽಯಮಿತಿ ಯತ್ ಸ ವಿಶೇಷತಃ ।**
**ಭೇದ ಏವೈಷ ಬಹುಧಾ ದೃಶ್ಯತೇ ತತ್ ಕಿಮುತ್ತರಮ್ ॥ ೧೬೫ ॥**

1. 'ಭಿನ್ನೋಽಯಂ'=ಇದು ಭಿನ್ನವಾಗಿದೆ, ಎಂದು ಭೇದಃ=ಭೇದವು ವಿಶೇಷತಃ=ಧರ್ಮಿಗೆ ವಿಶೇಷಣವಾಗಿ ದೃಶ್ಯತೇ=ತೋರುತ್ತದೆ. ಧರ್ಮಿಯು ಭೇದದಂತೆ ವಿಶೇಷಣವಾಗಿ ತೋರದೆ ವಿಶೇಷ್ಯವಾಗಿ ತೋರುತ್ತದೆ. ಆದ್ದರಿಂದ ಭೇದವು ಧರ್ಮಿ ಸ್ವರೂಪವಲ್ಲ.

2. ಅದರಂತೆ, ಅನೇನ=ಘಟಕ್ಕಿಂತ, ಅನೇನ=ಪಟಕ್ಕಿಂತ (ತೃತೀಯಾ ಪಂಚಮ್ಯರ್ಥಲ್ಲಿ-ವ್ಯತ್ಯಯೋ ಬಹುಲಂ) ಅಯಂ ಸ್ತಂಭವು ಭಿನ್ನಃ=ಬೇರೆ ಯಾಗಿದೆ. ಇತಿ=ಹೀಗೆ ಏಷ ಏವ=ಈ ಭೇದವೇ ಸವಿಶೇಷತಃ=ಪ್ರತಿಯೋಗಿ ರೂಪ ವಿಶೇಷ ಸಂಹಿತವಾಗಿಯೇ ದೃಶ್ಯತೇ=ತಿಳಿಯಲ್ಪಡುತ್ತದೆ. ಆದ್ದರಿಂದ ಭೇದವು ಪ್ರತಿಯೋಗಿ ಸ್ವರೂಪವೂ ಅಲ್ಲ.

3. ಅದರಂತೆ, ಅಯಂ=ಪುರೋದೇಶದಲ್ಲಿರುವ ವಸ್ತುವು ಅನೇನ= ವಕ್ರಾಕಾರರೂಪದಲ್ಲಿ ಇರುವುದರಿಂದಾಗಿ ಅನೇನ=ಪೊಟರೆವುಳ್ಳ ರೂಪದಲ್ಲಿ ಇರುವುದರಿಂದಾಗಿ ಪುರುಷನಿಗಿಂತ ಭಿನ್ನ (ಇದು ಕೊಂಬೆ-ರೆಂಬೆಗಳಿರುವುದ ರಿಂದ ಮರ, ಮನುಷ್ಯನಲ್ಲ, ಎಂದು ಭೇದದ ಪ್ರತೀತಿ ಬರುತ್ತದೆ.) ಇತಿ=ಹೀಗೆ ಏಷ ಏವ=ಭೇದವೇ ವಿಶೇಷಕಃ= ವ್ಯಾವರ್ತಕಧರ್ಮ ಸಹಿತವಾಗಿ ದೃಶ್ಯತೇ=ತಿಳಿಯಲ್ಪಡುತ್ತದೆ. ಆದರೆ, ಧರ್ಮಿ-ಪ್ರತಿಯೋಗಿಗಳು ಹೀಗೆ ತೋರುವುದಿಲ್ಲ.

4. ಅದರಂತೆ, ಏಷ ಏವ=ಭೇದಮಾತ್ರ 'ಈ ಘಟವು ಈ ಪಟಕ್ಕಿಂತ ಭಿನ್ನ, ಈ ಕಂಬಕ್ಕಿಂತ ಭಿನ್ನ, ಈ ಗೋಡೆಗಿಂತ ಭಿನ್ನ' ಇತಿ=ಹೀಗೆ ಸವಿಶೇಷತಃ=ಪ್ರತಿಯೋಗಿ ವಿಶೇಷಗಳಿಂದ ಸಹಿತವಾಗಿ ಬಹುಧಾ=ಅನೇಕ ವಿಧವಾಗಿ ಕಾಣುತ್ತದೆ. ಧರ್ಮಿಯು ಹೀಗೆ ತೋರುವುದಿಲ್ಲ.

ಹೀಗೆ ವೈಲಕ್ಷಣ್ಯವಿರುವುದರಿಂದಾಗಿ ಭೇದವು ಧರ್ಮಿಸ್ವರೂಪವಲ್ಲ ಎಂದು ಯಾರಾದರೂ ಆಕ್ಷೇಪಿಸಿದರೆ ಕಿಮುತ್ತರಂ=ಭೇದವು ಧರ್ಮಿ-ಪ್ರತಿ ಯೋಗಿಗಳಿಂದ ನಿರ್ವಿಶೇಷಾಭಿನ್ನ ಎಂದು ಹೇಳುವ ನಿನ್ನ ಉತ್ತರವೇನು?

**ಭಾವಾರ್ಥ**— ಭೇದವು ಧರ್ಮಿ ಅಥವಾ ಪ್ರತಿಯೋಗಿಗಳಿಂದ ಅಭಿನ್ನ, ಎಂದು ಹೇಳಿದರೆ ಭೇದಜ್ಞಾನಕ್ಕೂ ಧರ್ಮಿ-ಪ್ರತಿಯೋಗಿಗಳ ಜ್ಞಾನಕ್ಕೂ ಇರುವ ಅನೇಕ ವೈಲಕ್ಷಣ್ಯವನ್ನು ಸಮರ್ಥನೆ ಮಾಡಲು ಬರುವುದಿಲ್ಲ. ಆದ್ದರಿಂದ ಭೇದ-ಧರ್ಮಿಗಳಿಗೆ ಸವಿಶೇಷಾಭೇದವನ್ನೇ ಹೇಳಬೇಕು. ವಿಶೇಷವು ಭೇದಕಾರ್ಯಕಾರಿಯಾದುದರಿಂದ ಪ್ರತೀತಿಗಳಿಗೆ ವೈಲಕ್ಷಣ್ಯವನ್ನು ಸಮರ್ಥಿಸಬಹುದು. ಹೀಗೆ, ಧರ್ಮ-ಧರ್ಮಿಗಳಿಗೆ ಭೇದವನ್ನು ಅಂಗೀ ಕರಿಸಿದರೂ 'ವಿಶೇಷ'ವನ್ನು ಅಂಗೀಕರಿಸುವುದು ಅನಿವಾರ್ಯವೆಂದಮೇಲೆ ಧರ್ಮ-ಧರ್ಮಿಗಳಿಗೆ ಸವಿಶೇಷಾಭೇದವನ್ನೇ ಹೇಳುವುದು ಉಚಿತ.

**ಅಭೇದಭೇದಯೋಶ್ಚೈವ ಸ್ವರೂಪತ್ವಂ ಹಿ ಭೇದಿನಃ(ನಾ) ।**
**ತಯೋರಪ್ಯವಿಶೇಷತ್ವೇ ಪರ್ಯಾಯತ್ವಂ ಹಿ ಶಬ್ದಯೋಃ ।**
**ಅಭೇದಭೇದಶಬ್ದೌ ಚ ಪರ್ಯಾಯಾವಿತಿ ಕೋ ವದೇತ್ ॥ ೧೬೬ ॥**

ಯದಿ=ಒಂದುವೇಳೆ ಅಭೇದಭೇಯೋಶ್ಚ=ಅಭೇದ ಮತ್ತು ಭೇದ ಇವೆರಡಕ್ಕೂ ಭೇದಿನಃ ಸ್ವರೂಪತ್ವಂ=ಧರ್ಮಿಸ್ವರೂಪತ್ವವನ್ನು ಅಂಗೀಕರಿಸಿದರೆ ತಯೋರಪಿ=ಆ ಭೇದಾಭೇದಗಳಿಗೂ (ಪರಸ್ಪರವಾಗಿ ಅಭೇದ ಬಂದೀತು) ಅವಿಶೇಷತ್ವೇ=ಭೇದಾಭೇದಗಳಿಗೆ ಅಭೇದವಿದ್ದು ವಿಶೇಷವೂ ಇಲ್ಲವೆಂದಾದರೆ ಶಬ್ದಯೋಃ=ಭೇದ-ಅಭೇದ ಎಂಬ ಎರಡು ಶಬ್ದಗಳಿಗೆ ಪರ್ಯಾಯತ್ವಂ= ಪರ್ಯಾಯತ್ವಬಂದೀತು. ಆದರೆ, ಅಭೇದಭೇದಶಬ್ದೌ=ಅಭೇದ-ಭೇದ ಎಂಬ ಎರಡು ಶಬ್ದಗಳು ಪರ್ಯಾಯೌ=ಪರ್ಯಾಯವಾಚಕಗಳು ಎಂದು ಕೋ ವದೇತ್=ಯಾರು ತಾನೇ ಹೇಳಿಯಾನು?

**ಭಾವಾರ್ಥ—** ಭೇದವು ಧರ್ಮಿಯಿಂದ ನಿರ್ವಿಶೇಷಾಭಿನ್ನ ಎನ್ನುವ ಪಕ್ಷದಲ್ಲಿ ಇನ್ನೂ ಒಂದು ದೋಷವಿದೆ. ಭೇದವು ಧರ್ಮಿಸ್ವರೂಪವಾದರೆ ತುಲ್ಯನ್ಯಾಯೇನ ಅಭೇದವೂ ಧರ್ಮಿಸ್ವರೂಪವಾಗಬೇಕು. ಅವೆರಡು ಧರ್ಮಿಯಿಂದ ನಿರ್ವಿಶೇಷಾಭಿನ್ನಗಳಾದರೆ ಅವುಗಳಿಗೂ ಪರಸ್ಪರಾಭೇದ ಬರಬೇಕು. ಇಲ್ಲದಿದ್ದಲ್ಲಿ ಏಕಧರ್ಮಿಯಿಂದ ಅವೆರಡು ಅಭಿನ್ನಗಳಾಗಲು ಸಾಧ್ಯವಿಲ್ಲ. ಭೇದಾಭೇದಗಳಿಗೂ ನಿರ್ವಿಶೇಷಾಭೇದವಿದ್ದರೆ ತದ್ವಾಚಕ ಶಬ್ದಗಳು ಪರ್ಯಾಯ ವಾಚಕಗಳಾಗಬೇಕು. ಆದರೆ, ಅವೆರಡು ಶಬ್ದಗಳು ಪರ್ಯಾಯವಾಚಕಗಳೆಂದು ಯಾರೂ ಅಂಗೀಕರಿಸುವುದಿಲ್ಲ. ಆದ್ದರಿಂದ ವಿಶೇಷವನ್ನು ಅಂಗೀಕರಿಸಿಯೇ ಅವುಗಳಿಗೆ ಪರ್ಯಾಯತ್ವವನ್ನು ಪರಿಹರಿಸಬೇಕು.

**ಭೇದೋಽನ್ಯೋನ್ಯಮಭೇದಶ್ಚ ಭೇದಿನಾ ಚೇದ್ ವಿಶೇಷಿತಾ।**
**ಅವಿಶೇಷೇ ಕಥಂ ಭೇದೋ ಭೇದಿನ್ಯೈಕಸ್ತಥಾಽಭಿದಾ ।**
**ಪುನಸ್ತಯೋರ್ವಿಭೇದಶ್ಚ ಭೇದಿಮಾತ್ರತ್ವತೋ ಭವೇತ್ ॥ ೧೬೭ ॥**

ಭೇದಕ್ಕೂ ಅಭೇದಕ್ಕೂ ಭೇದಿನಾ=ಧರ್ಮಿಯೊಂದಿಗೆ ಅಭೇದಃ= ಅಭೇದವಿದೆ. ಆದರೂ ಭೇದಾಭೇದಗಳಿಗೆ ಅನ್ಯೋನ್ಯಮ್ ಭೇದೋ ಅಭೇದಶ್ಚ=ಭೇದಾಭೇದವಿದೆ. ಆದ್ದರಿಂದ ತದ್ವಾಚಕ ಶಬ್ದಗಳಿಗೆ ಪರ್ಯಾಯತ್ವ ಇಲ್ಲ, ಇತಿಚೇತ್=ಹೀಗೆ ಹೇಳಿದರೆ ಅದು ಸರಿಯಲ್ಲ.

ಅವಿಶೇಷೇ=ವಿಶೇಷ ಇಲ್ಲದೆ ಹೋದರೆ ಭೇದಃ ಭೇದಿನಾ ಏಕಃ=ಭೇದವು ಧರ್ಮಿಯಿಂದ ಅಭಿನ್ನ, ತಥಾ=ಹಾಗೆಯೇ ಅಭಿಧಾ=ಅಭೇದವೂ ಧರ್ಮಿಯಿಂದ ಅಭಿನ್ನ. ಪುನಃ=ಮತ್ತೆ ತಯೋಃ=ಆ ಭೇದಾಭೇದಗಳಿಗೆ ವಿಭೇದಶ್ಚ=ಪರಸ್ಪರ ಭೇದವಿದೆ ಎನ್ನುವುದು ಕಥಂ ಭವೇತ್=ಹೇಗಾದೀತು? ಏಕೆಂದರೆ, ಎರಡಕ್ಕೂ ಭೇದಿಮಾತ್ರತ್ವತಃ=ಧರ್ಮಿಯಿಂದ ನಿರ್ವಿಶೇಷಾ ಭೇದವಿರುವುದರಿಂದ.

ಭಾವಾರ್ಥ— ಧರ್ಮ-ಧರ್ಮಿಗಳಿಗೆ ಭೇದವನ್ನು ಹೇಳುವವರು ಹಿಂದೆ ಹೇಳಿದ ಪರ್ಯಾಯತ್ವವನ್ನು ಹೀಗೆ ಪರಿಹರಿಸಿಕೊಳ್ಳಬಹುದು. ಭೇದ ಮತ್ತು ಅಭೇಗಳೆರಡೂ ಧರ್ಮಿಯಿಂದ ಅಭಿನ್ನಗಳು. ಆದರೂ ಭೇದಾಭೇದ ಗಳಲ್ಲಿ ಭೇದವಿದೆ. ಆದ್ದರಿಂದ ತದ್ವಾಚಕ ಶಬ್ದಗಳಿಗೆ ಪರ್ಯಾಯತ್ವ ಇಲ್ಲ, ಎಂದು.

ಇದು ಅಸಂಬದ್ಧ— ಭೇದವೂ ಅಭೇದವೂ ಒಂದೇ ಧರ್ಮಿಯಿಂದ ಅತ್ಯಂತಾಭಿನ್ನವೆಂದಾದ ಮೇಲೆ ಅವೆರಡರಲ್ಲಿ ಪರಸ್ಪರ ಭೇದವು ಇರಲು ಹೇಗೆ ತಾನೇ ಸಾಧ್ಯ? 'ಯತ್ ಯದಭಿನ್ನಾಭಿನ್ನಂ ತತ್ ತದಭಿನ್ನಂ' ಎಂಬ ನ್ಯಾಯದಿಂದ ಒಂದೇ ಧರ್ಮಿಯ ಜೊತೆಗೆ ಅಭೇದ ಇರುವ ಎರಡು ಧರ್ಮಗಳಿಗೆ ಪರಸ್ಪರವಾಗಿಯೂ ಅಭೇದವೇ ಇರಬೇಕು, ಭೇದ ಇರಲು ಹೇಗೆ ಸಾಧ್ಯ?

**ಭೇದಿನಶ್ಚೈವ ಭೇದಸ್ಯ ವಿಶೇಷೋ ಯದಿ ಗಮ್ಯತೇ ।**
**ಅಭೇದಾಭೇದಿನೋಶ್ಚೈವ, ಕಿಂ ಭೇದೋಽಭೇದಭೇದಯೋಃ ॥೧೬೮॥**

ಭೇದಿನಃ=ಭೇದಕ್ಕೆ ಧರ್ಮಿಯಾದ ವಸ್ತುವಿಗೂ ಭೇದಸ್ಯ ಚ=ಭೇದಕ್ಕೂ ಅದರಂತೆ, ಅಭೇದಾಭೇದಿನೋಶ್ಚ=ಅಭೇದ ಮತ್ತು ಅದರ ಧರ್ಮಿಗೂ ಯದಿ=ಒಂದು ಪಕ್ಷ ವಿಶೇಷಶ್ಚ=ಅಭೇದದ ಜೊತೆಯಲ್ಲಿ ವಿಶೇಷವೂ ಗಮ್ಯತೇ=ಅಂಗೀಕರಿಸಲ್ಪಡುವುದಾದಲ್ಲಿ ಅಭೇದಭೇದಯೋಃ=ಅಭೇದ ಮತ್ತು ಭೇದಗಳಿಗೆ ಭೇದಃ=ಪರಸ್ಪರಾತ್ಯಂತಭೇದವು ಕಿಂ=ಏತಕ್ಕಾಗಿ ಕಲ್ಪಿಸಬೇಕು? ಅವೆರಡಕ್ಕೂ ಸವಿಶೇಷಾಭೇದವೇ ಇರಲಿ.

ಭಾವಾರ್ಥ- ಪರ್ಯಾಯತ್ವವನ್ನು ಹೀಗೆ ಪರಿಹಾರಮಾಡಬಹುದು-

ಭೇದ ಮತ್ತು ಅಭೇದಗಳು ಧರ್ಮಿಯಿಂದ ಅತ್ಯಂತಾಭಿನ್ನಗಳಲ್ಲ, ಸವಿಶೇಷಾಭಿನ್ನಗಳು. ವಿಶೇಷವಿರುವುದರಿಂದ ಒಂದೇ ಧರ್ಮಿಯಿಂದ ಅಭಿನ್ನಗಳಾದ ಭೇದಾಭೇದಗಳಿಗೆ ಅಭೇದವಿಲ್ಲ, ಅವೆರಡೂ ಭಿನ್ನಗಳು. ಆದರಿಂದಾಗಿ, ತದ್ವಾಚಕ ಶಬ್ದಗಳಿಗೆ ಪರ್ಯಾಯತ್ವ ಇಲ್ಲ.

ಹೀಗೆ ಹೇಳುವುದು ಕಲ್ಪನಾಗೌರವದೋಷಕ್ಕೆ ಕಾರಣವಾಗುತ್ತದೆ. ಹೇಗೆ ಭೇದಾಭೇದಗಳಿಗೆ ವಸ್ತುವಿನೊಂದಿಗೆ ಸವಿಶೇಷಾಭೇದವೋ ಅದರಂತೆ ಅವುಗಳಿಗೆ ಪರಸ್ಪರವಾಗಿ ಅತ್ಯಂತ ಭೇದವನ್ನು ಹೇಳುವ ಬದಲು ಸವಿಶೇಷಾ ಭೇದವನ್ನೇ ಅಂಗೀಕರಿಸಬಹುದು. ಆದರಿಂದಾಗಿಯೇ ಪರ್ಯಾಯತ್ವವನ್ನು ಪರಿಹರಿಸಬಹುದು. ಇದಕ್ಕೆ ಸಾಧಕಯುಕ್ತಿಯೂ ಇದೆ—

**ವಿಶೇಷೇಣೈವ ಸರ್ವತ್ರ ಯದಿ ವ್ಯವಹೃತಿರ್ಭವೇತ್ ।**
**ಕಲ್ಪನಾಗೌರವಾಯೈವ ಕಿಂ ಭೇದಃ ಕಲ್ಪ್ಯತೇ ತದಾ ॥ ೧೬ ॥**

ಯದಿ=ಒಂದುವೇಳೆ ಸರ್ವತ್ರ=ಭೇದ ಮತ್ತು ಧರ್ಮಿಗಳಿಗೆ ಹಾಗೂ ಅಭೇದ ಮತ್ತು ಧರ್ಮಿಗಳಿಗೆ ವಿಶೇಷೇಣೈವ=ಭೇದಪ್ರತಿನಿಧಿಯಾದ ವಿಶೇಷದಿಂದಲೇ ವ್ಯವಹೃತಿಃ=ಧರ್ಮ–ಧರ್ಮಿಭಾವಾದಿವ್ಯವಹಾರಗಳು ಆಗುವುದಾದಲ್ಲಿ ತದಾ=ಆಗ ಭೇದಾಭೇದಗಳಿಗೂ ಭೇದಃ=ಪರಸ್ಪರಭೇದವು ಕಲ್ಪನಾಗೌರವಾಯೈವ=ಕಲ್ಪನಾಗೌರವಕ್ಕಾಗಿಯೇ ಕಲ್ಪ್ಯತೇ ಕಿಂ=ಕಲ್ಪಿಸಲ್ಪಡಲಾಗುವುದೇನು?

ವಿಶೇಷೇಣೈವ=ವಿಶೇಷ ಪ್ರಯುಕ್ತವಾಗಿಯೇ ಸರ್ವತ್ರ=ಭೇದ ಮತ್ತು ಧರ್ಮಿಗಳಲ್ಲಿ ವ್ಯವಹೃತಿಃ=ಧರ್ಮ–ಧರ್ಮಿ ಎಂಬ ವ್ಯವಹಾರವು ಯದಿ ಭವೇತ್=ಆಗುವುದಾದಲ್ಲಿ ತದಾ=ಆಗ ಧರ್ಮ–ಧರ್ಮಿಗಳಿಗೂ ಭೇದಃ= ಭೇದವು ಕಲ್ಪನಾಗೌರವಾಯೈವ ಕಲ್ಪ್ಯತೇ ಕಿಂ=ಕಲ್ಪನಾ ಗೌರವಕ್ಕಾಗಿಯೇ ಕಲ್ಪಿಸಲಾಗುತ್ತದೆಯೇ!

**ಭಾವಾರ್ಥ—** ಭೇದವು ಧರ್ಮಿಸ್ವರೂಪವಾದರೂ ವಿಶೇಷವನ್ನು ಕಲ್ಪಿಸಿ 'ಭೇದವು ಧರ್ಮಿಯಲ್ಲಿದೆ' ಇತ್ಯಾದಿ ವ್ಯವಹಾರವನ್ನು ನಿರ್ವಾಹ ಮಾಡುವುದಾದಲ್ಲಿ ಭೇದ ಮತ್ತು ಅಭೇದಗಳಿಗೂ ಅಭೇದವನ್ನೇ ಹೇಳಿ

ವಿಶೇಷದಿಂದಾಗಿಯೇ ಅಪರ್ಯಾಯಶಬ್ದವಾಚ್ಯತ್ವವನ್ನೂ ಸಮರ್ಥಿಸಬಹುದು. ಹೀಗಿದ್ದರೂ ಅವೆರಡಕ್ಕೆ ಅತ್ಯಂತಭೇದವನ್ನು ಅಂಗೀಕರಿಸುವುದು ಕಲ್ಪನಾಗೌರವ ಬರಲಿ ಎನ್ನುವುದೇ ಉದ್ದೇಶವೋ!

ಅದರಂತೆ, ಧರ್ಮ-ಧರ್ಮಿಗಳಿಗೆ ಭೇದವನ್ನು ಹೇಳಿ ಆ ಭೇದಕ್ಕೆ ಧರ್ಮಿಯೊಂದಿಗೆ ಸವಿಶೇಷಾಭೇದವನ್ನು ಅಂಗೀಕರಿಸುವುದೂ ಕಲ್ಪನಾ ಗೌರವ. ಅದಕ್ಕಿಂತ, ಧರ್ಮ-ಧರ್ಮಿಗಳಿಗೇ ಸವಿಶೇಷಾಭೇದವನ್ನು ಅಂಗೀಕರಿಸುವುದೇ ಲಾಘವ.

**ಐಕ್ಯಪ್ರತೀತ್ಯಭಾವೇನ ಭೇದ ಏವ ಗವಶ್ವಯೋಃ ।**
**ಸ ಏವೇತಿ ಪ್ರತೀತೌ ಹಿ ವಿಶೇಷೋ ನಾಮ ಭಣ್ಯತೇ ॥ ೧೭೦ ॥**

ಗವಶ್ವಯೋಃ=ಹಸು ಮತ್ತು ಕುದುರೆಗಳಿಗೆ ಐಕ್ಯಪ್ರತೀತ್ಯಭಾವೇನ= ಅಭೇದಜ್ಞಾವು ಇಲ್ಲದಿರುವುದರಿಂದ ಭೇದ ಏವ=ಅತ್ಯಂತಭೇದವೇ ಅಂಗೀಕರಿಸಲ್ಪಟ್ಟಿದೆ. ಸ ಏವೇತಿ ಪ್ರತೀತೌ ಹಿ=ಅದೇ ಇದು, ಎನ್ನುವ ಜ್ಞಾನವಿದ್ದರೆ ಮಾತ್ರ ಅಲ್ಲಿ ವಿಶೇಷೋ ನಾಮ=ವಿಶೇಷ ಎಂಬ ಭೇದಪ್ರತಿನಿಧಿಯು ಭಣ್ಯತೇ=ಹೇಳಲ್ಪಡುತ್ತದೆ.

**ಭಾವಾರ್ಥ**— ಧರ್ಮ-ಧರ್ಮಿಗಳಿಗೆ ಭೇದವ್ಯವಹಾರವಿದ್ದರೂ ಅಭೇದವನ್ನು ಹೇಳಿ ವಿಶೇಷಬಲದಿಂದ ಭೇದವ್ಯವಹಾರವನ್ನು ಸಮರ್ಥಿಸುವುದಾದಲ್ಲಿ ಕುದುರೆ ಮತ್ತು ಹಸುಗಳಿಗೂ ಅಭೇದವನ್ನೇ ಹೇಳಿ ವಿಶೇಷದಿಂದಾಗಿ ಭೇದವ್ಯವಹಾರವನ್ನು ಸಮರ್ಥಿಸಬಹುದು. ಹೀಗೆ ಎಲ್ಲೂ ಅತ್ಯಂತ ಭೇದವೇ ಇಲ್ಲವೆಂದಾಗಲಿ, ಎಂದು ಆಕ್ಷೇಪ. ಇದು ಸರಿಯಲ್ಲ. ಧರ್ಮ-ಧರ್ಮಿಗಳಿಗೆ ಐಕ್ಯಜ್ಞಾನವಿದೆ. ಬಟ್ಟೆಗೂ ಬಣ್ಣಕ್ಕೂ ಅಭೇದಜ್ಞಾನವಿರುವುದರಿಂದಾಗಿ ಅವೆರಡಕ್ಕೆ ಅಭೇದವಿದೆ. ಆದರೆ, ಇದರಂತೆ ಆನೆ-ಹಸುಗಳಿಗೆ ಅಭೇದಜ್ಞಾನ ಇಲ್ಲ. ಭೇದಜ್ಞಾನವೇ ಇದೆ. ಆದ್ದರಿಂದ ಅವೆರಡಕ್ಕೆ ಭೇದವೇ ಇದೆ, ಅಭೇದ ಇಲ್ಲ. 'ಬಟ್ಟೆಯೇ ಬಿಳಿ' ಎನ್ನುವ ಪ್ರತೀತಿಯಿಂದಾಗಿ ಬಿಳಿಬಣ್ಣ ಮತ್ತು ಬಟ್ಟೆಗೆ ಅಭೇದ ಇದೆ. ಆದರೂ ಬಟ್ಟೆಯಲ್ಲಿ ಬಿಳಿಬಣ್ಣ ಇದೆ, ಎಂಬ ವ್ಯವಹಾರ ಇರುವುದರಿಂದ ಅದರ ನಿರ್ವಹಣೆಗಾಗಿ ವಿಶೇಷವನ್ನೂ ಅಂಗೀಕರಿಸಬೇಕಾಗುತ್ತದೆ.

**ಅಭೇದವಾದಿಗಳಿಗೂ ವಿಶೇಷ ಅನಿವಾರ್ಯ**

**ಸಚ್ಚಿದಾದೇರಪರ್ಯಾಯಸಿದ್ಧ್ಯರ್ಥಂ ಮಾಯಿನಾಽಪಿ ಹಿ ।**
**ಅಂಗೀಕಾರ್ಯೋ ವಿಶೇಷೋಽಯಂ ಯದ್ಯಸತ್ಯವಿಶೇಷಣಮ್ ॥೧೭೦॥**

**ಪೃಥಕ್ ಪೃಥಗ್ ವಾರಯಿತುಂ ಶಬ್ದಾಂತರಮಿತೀಷ್ಯತೇ ।**
**ಮಾಯಾವಿಶೇಷರಾಹಿತ್ಯವಿಶೇಷೇಣ ವಿಶೇಷಿತಾ ॥ ೧೭೨ ॥**

**ಸತ್ಯಸ್ಯಾಪಿ ಭವೇತ್, ಸಾ ಚ ತಥಾ ಚೇದನವಸ್ಥಿತಿಃ ।**
**ಯದಿ ಸತ್ಯೇ ವಿಶೇಷೋ ನ ನ ತದುಕ್ತಿರ್ಭವೇತ್ ತದಾ ॥ ೧೭೩ ॥**

ಮಾಯಿನಾಪಿ=ಬ್ರಹ್ಮನಲ್ಲಿ ಸೃಷ್ಟ್ಯಾದಿಕ್ರಿಯೆಗಳನ್ನು ತಿಳಿಸುವ ವೇದವಾಕ್ಯಗಳು ಮಾಯಾಮಯವಾದ ಅಸತ್ಯಧರ್ಮಗಳನ್ನು ಹೇಳುತ್ತವೆ ಎಂದು ಹೇಳುವ ಅದ್ವೈತವಾದಿಯಿಂದಲೂ ಸಚ್ಚಿದಾದೇಃ=ಸತ್ಯಂ, ಜ್ಞಾನಮನಂತಂ ಬ್ರಹ್ಮ, ಎಂಬ ಉಪನಿಷದ್ವಾಕ್ಯದಿಂದ ಪ್ರತಿಪಾದ್ಯಗಳಾದ ಸತ್–ಚಿತ್ ಮೊದಲಾದ ಧರ್ಮಗಳನ್ನು ಹೇಳುವ ಶಬ್ದಗಳಿಗೆ ಅಪರ್ಯಾಯ ಸಿದ್ಧ್ಯರ್ಥಂ=ಪರ್ಯಾಯತ್ವಾಭಾವದ ಸಿದ್ಧಿಗಾಗಿ ಅಯಂ=ಅಪರ್ಯಾಶಬ್ದ ಪ್ರಯೋಗಕ್ಕೆ ಕಾರಣವಾದ ವಿಶೇಷಃ=ವಿಶೇಷವು ಅಂಗೀಕಾರ್ಯಃ= ಅಂಗೀಕರಿಸಲ್ಪಡಬೇಕು.

**ಭಾವಾರ್ಥ**— ಇದುವರೆಗೆ ಧರ್ಮ–ಧರ್ಮಿಗಳಿಗೆ ಭೇದವನ್ನು ಹೇಳುವವರೂ ವಿಶೇಷವನ್ನು ಅಂಗೀಕರಿಸಬೇಕು, ಎಂದು ಸಾಧಿಸಿ ಇಲ್ಲ ಧರ್ಮ–ಧರ್ಮಿಗಳಿಗೆ ಅಭೇದವನ್ನು ಅಂಗೀಕರಿಸುವವರೂ ವಿಶೇಷವನ್ನು ಒಪ್ಪುವುದು ಅನಿವಾರ್ಯ ಎಂದು ಇಲ್ಲಿ ಸಾಧಿಸಲಾಗಿದೆ—

ಮಾಯಾವಾದಿಗಳು 'ಸ ಇದಂ ಸರ್ವಂ ಅಸೃಜತ್' ಎಂದು ಮುಂತಾದ ವಾಕ್ಯಗಳಲ್ಲಿ ಪ್ರತಿಪಾದ್ಯವಾದ ಕ್ರಿಯಾದಿಧರ್ಮಗಳು ಮಿಥ್ಯಾ, ಅದು ಬ್ರಹ್ಮನಲ್ಲಿ ಇಲ್ಲ, ಆದುದರಿಂದ ಅಂತಹ ಧರ್ಮಗಳಿಗೆ ಭೇದವೋ ಅಭೇದವೋ, ಎನ್ನುವ ಪ್ರಶ್ನೆಯೇ ಇಲ್ಲ, ಎನ್ನುತ್ತಾರಾದರೂ 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬ ವಾಕ್ಯದಲ್ಲಿ ಹೇಳಲಾದ ಸತ್ಯತ್ವ, ಜ್ಞಾನತ್ವ ಅನಂತತ್ವಾದಿ ಧರ್ಮಗಳೂ ಮಿಥ್ಯಾ ಎನ್ನುವುದಿಲ್ಲ, ಆ ಧರ್ಮಗಳು

ಸತ್ಯವಾಗಿವೆ, ಬ್ರಹ್ಮನಿಂದ ಅಭಿನ್ನವಾಗಿವೆ, ಎನ್ನುತ್ತಾರೆ. ಮೂರು ಧರ್ಮಗಳು ಒಬ್ಬನೇ ಬ್ರಹ್ಮನಿಂದ ಅಭಿನ್ನಗಳಾದರೆ ಆ ಧರ್ಮಗಳಿಗೆ ಪರಸ್ಪರ ಅಭೇದವು ಬಂದು, ತದ್ವಾಚಕಶಬ್ದಗಳಿಗೆ ಪರ್ಯಾಯತ್ವ ಬಂದೀತು. ಅಂದರೆ, ಆ ಮೂರೂ ಪದಗಳು ಅಖಂಡನಾದ ಏಕಬ್ರಹ್ಮನಿಗೆ ವಾಚಕಗಳಾಗುವುದರಿಂದ ಪರ್ಯಾಯಪದಗಳಾಗಬೇಕಾಗುತ್ತವೆ. ಅದರ ಪರಿಹಾರಕ್ಕಾಗಿ ಆ ಧರ್ಮಗಳಿಗೂ ಬ್ರಹ್ಮನಿಗೂ ವಿಶೇಷವನ್ನು ಅಂಗೀಕರಿಸಬೇಕು. ಹೀಗೆ, ಧರ್ಮ–ಧರ್ಮಿಗಳಿಗೆ ಅಭೇದವಾದಿಗಳೂ ವಿಶೇಷವನ್ನು ಅಂಗೀಕರಿಸಬೇಕು.

ಯದಿ=ಒಂದುವೇಳೆ ಅಸತ್ಯವಿಶೇಷಣಂ=ಅಸತ್ಯತ್ವಾದಿಧರ್ಮಗಳನ್ನು ಪೃಥಕ್ ಪೃಥಕ್=ಪ್ರತ್ಯೇಕ ಪ್ರತ್ಯೇಕವಾಗಿ ವಾರಯಿತುಂ=ನಿರಾಕರಿಸಲು ಶಬ್ದಾಂತರಂ=ಸತ್ಯಜ್ಞಾನಾದಿ ಅನೇಕಶಬ್ದಗಳಿವೆ ಇತಿ ಇಷ್ಯತೇ=ಹೀಗೆ ಹೇಳುವುದಾದಲ್ಲಿ ಆಗಲೂ ಮಾಯಾವಿಶೇಷ – ರಾಹಿತ್ಯ – ವಿಶೇಷಣ – ವಿಶೇಷಿತಾ= ಆರೋಪಿತವಾದ ಅಸತ್ಯತ್ವಾದಿಧರ್ಮಗಳ ಅಭಾವ ಎಂಬ ವಿಶೇಷಣಕ್ಕೆ ವಿಶೇಷ್ಯನಾಗುವುದು ಸತ್ಯಸ್ಯಾಪಿ=ಸತ್ಯನಾದ ಅಖಂಡಬ್ರಹ್ಮನಿಗೂ ಭವೇತ್= ಬಂದೀತು.

**ಭಾವಾರ್ಥ**— ಮಾಯಾವಾದಿಗಳು ಸತ್ಯಾದಿಪದಗಳಿಗೆ ಪರ್ಯಾಯತ್ವವನ್ನು ಹೀಗೆ ಪರಿಹರಿಸುತ್ತಾರೆ— ಸತ್ಯಶಬ್ದಕ್ಕೆ ಸತ್ಯತ್ವಧರ್ಮ ಉಳ್ಳವನು, ಎಂದು ವಿಧಿ ಮುಖವಾದ ಅರ್ಥವಲ್ಲ. ಅಸತ್ಯತ್ವಧರ್ಮ ಇಲ್ಲ, ಎಂದು ನಿಷೇಧ ಮುಖವಾದ ಅರ್ಥ ಸತ್ಯಶಬ್ದಕ್ಕೆ. ಅಜ್ಞನೊಬ್ಬ ಪ್ರಪಂಚದಂತೆ ಬ್ರಹ್ಮನೂ ಅಸತ್ಯ ಇಲ್ಲ ಎಂದು ತಿಳಿದರೆ ಅಂತಹ ಆರೋಪಿತವಾದ ಅಸತ್ಯತ್ವವನ್ನು ನಿರಾಕರಿಸುತ್ತದೆ. ಸತ್ಯಶಬ್ದ. ಜ್ಞಾನಶಬ್ದಕ್ಕೂ ಬ್ರಹ್ಮನಲ್ಲಿ ಅಜ್ಞಾನವಿಲ್ಲ, ಜಡತ್ವಇಲ್ಲ, ಎಂದರ್ಥ. ಬ್ರಹ್ಮನು ಸತ್ಯನಾದರೂ ಅವನಲ್ಲಿ ಜ್ಞಾನ ಇಲ್ಲ ಎನ್ನುವ ಭ್ರಾಂತಿಯ ನಿವಾರಣೆಯನ್ನು ಜ್ಞಾನಪದವು ಮಾಡುತ್ತದೆ. ಅನಂತಪದವೂ ಬ್ರಹ್ಮನು ದೇಶ–ಕಾಲಗಳ ಅಂತಕ್ಕೆ–ಪರಿಮಿತಿಗೆ ಒಳಪಟ್ಟವನಲ್ಲ ಎನ್ನುವ ಮೂಲಕ ಭ್ರಾಂತಿಯನ್ನು ನಿವಾರಣೆ ಮಾಡುತ್ತದೆ. ಹೀಗೆ ಸತ್ಯಾದಿಪದಗಳಿಗೆ ಅರ್ಥಭೇದವೂ ಇದೆ, ಅನೇಕ ರೀತಿಯ ಭ್ರಾಂತಿಗಳನ್ನು ನಿವಾರಣೆ ಮಾಡುವ ಮೂಲಕ ಸಾರ್ಥಕ್ಯವೂ ಇದೆ.

ಈ ವಾದ ಸರಿಯಲ್ಲ. ಹೀಗೆ ಹೇಳಿದರೂ ಬ್ರಹ್ಮನ ಅಖಂಡತೆಗೆ ಚ್ಯುತಿ ಬರುತ್ತದೆ. ಸತ್ಯಪದಕ್ಕೆ ಸತ್ಯತ್ವಗುಣವುಳ್ಳವನು ಎಂದು ಅರ್ಥಹೇಳಿದಾಗ ಬ್ರಹ್ಮನಲ್ಲಿ ಭಾವಧರ್ಮಸಿದ್ಧವಾಗುವಂತೆ ಅಸತ್ಯತ್ವಧರ್ಮದ ಅಭಾವ ಇದೆ, ಎಂದಾಗಲೂ ಅಭಾವರೂಪವಾದ ಧರ್ಮವನ್ನು ಅಂಗೀಕರಿಸಬೇಕಾಗುತ್ತದೆ. ಇದರಿಂದ 'ನಿರ್ಧರ್ಮಕ ಬ್ರಹ್ಮ' ಎಂಬ ನಿಮ್ಮ ವಾದಕ್ಕೆ ವಿರೋಧ ಬರುತ್ತದೆ.

ಸಾ ಚ=ಆರೋಪಿತವಾದ ಅಸತ್ಯತ್ವಾಭಾವವಿಶೇಷಣ–ವಿಶೇಷ್ಯತ್ವವೂ ತಥಾ ಚೇತ್=ಆರೋಪಿತ ಎಂದಾದಲ್ಲಿ ಅನವಸ್ಥಿತಿಃ=ಸತ್ಯಾದಿವಾಕ್ಯಕ್ಕೆ ಅರ್ಥವೇ ಇಲ್ಲವೆಂದಂತಾದೀತು.

**ಭಾವಾರ್ಥ—** ಅಸತ್ಯತ್ವವು ಹೇಗೆ ಆರೋಪಿತವೋ ಅಸತ್ಯತ್ವ ವ್ಯಾವೃತ್ತಿಯೂ ಬ್ರಹ್ಮನಲ್ಲಿ ಆರೋಪಿತವಾಗಿದ್ದು ಮಿಥ್ಯಾ. ಸತ್ಯಭೂತವಾದ ಧರ್ಮವು ಇದ್ದರೆ ಮಾತ್ರ ನಿರ್ಗುಣತ್ವಹಾನಿ. ಮಿಥ್ಯಾಧರ್ಮವು ನಿರ್ಗುಣತ್ವ ವಿರೋಧಿಯಲ್ಲ, ಎಂದು ಪೂರ್ವಪಕ್ಷ. ಇದು ಸರಿಯಲ್ಲ. ಹೀಗಾದರೆ 'ಸತ್ಯಂ ಜ್ಞಾನಂ ಅನಂತಂ ಬ್ರಹ್ಮ' ಎಂಬ ವಾಕ್ಯಕ್ಕೆ ಅರ್ಥವೇ ಇಲ್ಲವಾಗುತ್ತದೆ. ಪದಾರ್ಥದ್ವಯಸಂಸರ್ಗವೇ ವಾಕ್ಯಾರ್ಥ. ಸತ್ಯಪದದ ಅರ್ಥಕ್ಕೆ ಬ್ರಹ್ಮಪದ ಅರ್ಥದೊಂದಿಗೆ ಅನ್ವಯವನ್ನು ಹೇಳಬೇಕು. ಸತ್ಯಪದ ಅರ್ಥವು ಮಿಥ್ಯಾ ಎಂದಾದರೆ ಅದರ ಸಂಬಂಧವು ಸತ್ಯನಾದ ಬ್ರಹ್ಮನಲ್ಲಿ ಇಲ್ಲದಿರುವುದರಿಂದ 'ಸತ್ಯಂ ಬ್ರಹ್ಮ' ಎಂಬ ವಾಕ್ಯಕ್ಕೆ ಅರ್ಥವೇ ಇಲ್ಲ.

**ಲಕ್ಷ್ಯತೇ ಚೇತ್ ತೇನ ಲಕ್ಷ್ಯಮಿತ್ಯಪಿ ಸ್ಯಾದ್ ವಿಶೇಷಿತಾ ॥**
**ಪುನಃ ಪುನರ್ಲಕ್ಷಣಾಯಾಮಪಿ ಸ್ಯಾದನವಸ್ಥಿತಿಃ ॥ ೧೭೪ ॥**

ಯದಿ=ಒಂದುವೇಳೆ ಸತ್ಯೇ=ಸತ್ಯನಾದ ಬ್ರಹ್ಮನಲ್ಲಿ ವಿಶೇಷೋ ನ=ಯಾವುದೇ ಧರ್ಮಗಳು ಇಲ್ಲವೆಂದಾದರೆ ತದಾ=ಆಗ ತದುಕ್ತಿಃ= ಬ್ರಹ್ಮವಾಚಕವಾದಪದವೇ ನ ಭವೇತ್=ಇಲ್ಲದಾದೀತು. ತೇನ=ಆ ಪದದಿಂದ ಬ್ರಹ್ಮನು ಲಕ್ಷ್ಯತೇ=ಚೇತ್ ಲಕ್ಷಣಾವೃತ್ತಿಯಿಂದ ಪ್ರತಿಪಾದ್ಯನಾಗುತ್ತಾನೆ, ಎಂದರೆ ಹಾಗಾದರೂ ಲಕ್ಷ್ಯತ್ವಮಿತ್ಯಪಿ=ಲಕ್ಷ್ಯತ್ವ ಎಂಬ ವಿಶೇಷತಾ= ಧರ್ಮವು ಸ್ಯಾತ್=ಬಂದೀತು.

ಪುನಃ ಲಕ್ಷಣಾಯಾಮಪಿ=ಮತ್ತೆ ಲಕ್ಷ್ಯ ಎಂಬ ಪದಕ್ಕೂ ಬ್ರಹ್ಮನಲ್ಲಿ ಲಕ್ಷಣಾಮಾಡಿದರೂ ಅನವಸ್ಥಿತಿಃ ಸ್ಯಾತ್=ಅನವಸ್ಥಾದೋಷವು ಬಂದೀತು.

ಭಾವಾರ್ಥ— ಬ್ರಹ್ಮನು ನಿರ್ಗುಣ ಎಂದಾಗ ಸತ್ಯಾದಿಪದಗಳಿಗೆ ಪುನರುಕ್ತಿದೋಷವನ್ನು ಇದುವರೆಗೆ ಹೇಳಲಾಯಿತು. ಸತ್ಯಪದವು ಸತ್ಯತ್ವ ವಿಶಿಷ್ಟ ಬ್ರಹ್ಮನನ್ನು ಹೇಳಿದಾಗ ಜ್ಞಾನ ಪದವು ಅದನ್ನೇ ಹೇಳುವುದಿಲ್ಲವಾದ ಕಾರಣ ಪುನರುಕ್ತಿ ಇಲ್ಲ. ಬ್ರಹ್ಮ ನಿರ್ಗುಣನಾದರೆ ಸತ್ಯಪದವು ಸತ್ಯತ್ವ ವಿಶಿಷ್ಟವನ್ನು ಹೇಳುವುದಿಲ್ಲ. ಬ್ರಹ್ಮಸ್ವರೂಪವನ್ನು ಮಾತ್ರ ಹೇಳುತ್ತದೆ. ಜ್ಞಾನಪದವೂ ಅದನ್ನೇ ಹೇಳುತ್ತದೆ. ಆದ್ದರಿಂದ ಪುನರುಕ್ತಿ. ಇಷ್ಟೇ ಅಲ್ಲ, ಪ್ರಕೃತ ನಿರ್ಗುಣಬ್ರಹ್ಮವಾದದಲ್ಲಿ ಬ್ರಹ್ಮವಾಚಕವಾದ ಪದವೇ ಇಲ್ಲವೆಂದಾಗುತ್ತದೆ. ಪದವಾಚ್ಯವಾದ ಅರ್ಥದಲ್ಲಿ ಗುಣ–ಕ್ರಿಯಾದಿ ಪ್ರವೃತ್ತಿನಿಮಿತ್ತಗಳಿರಬೇಕು. ನಿರ್ಗುಣಬ್ರಹ್ಮನಲ್ಲಿ ಅಂತಹ ಯಾವ ಪ್ರವೃತ್ತಿನಿಮಿತ್ತಗಳೂ ಇಲ್ಲ. ಆದ್ದರಿಂದ ಬ್ರಹ್ಮನು ಪದವಾಚ್ಯನೇ ಅಲ್ಲ.

ಪದಗಳಿಂದ ಬ್ರಹ್ಮನು ವಾಚ್ಯನಲ್ಲದಿದ್ದರೂ ಲಕ್ಷ್ಯನಾಗುತ್ತಾನೆ. ಲಕ್ಷ್ಯಾರ್ಥದಲ್ಲಿ ಪ್ರವೃತ್ತಿನಿಮಿತ್ತಧರ್ಮಗಳು ಇರಬೇಕಾಗಿಲ್ಲ, ಎಂದು ಆಕ್ಷೇಪ. ಇದೂ ಸರಿಯಲ್ಲ. ಬ್ರಹ್ಮನು ಪದಲಕ್ಷ್ಯನಾದರೂ ಲಕ್ಷ್ಯತ್ವ ಎಂಬ ಧರ್ಮವು ಅವನಲ್ಲಿ ಬಂದಂತಾಗುತ್ತದೆ. ಅಷ್ಟೇ ಅಲ್ಲ, ವಾಚ್ಯಾರ್ಥ ಸಂಬಂಧವು ಲಕ್ಷ್ಯಾರ್ಥಕ್ಕೆ ಇರಬೇಕು. ನಿರ್ಗುಣ ಬ್ರಹ್ಮನಲ್ಲಿ ಯಾವುದರ ಸಂಬಂಧವೂ ಇಲ್ಲ. ಅದರಿಂದಾಗಿಯೂ ಅವನು ಲಕ್ಷ್ಯನಲ್ಲ.

'ಲಕ್ಷ್ಯ' ಎಂಬ ಪದದಿಂದಲೂ ಬ್ರಹ್ಮನು ಲಕ್ಷ್ಯ, ವಾಚ್ಯನಲ್ಲ. ಆದ್ದರಿಂದ ಅವನಲ್ಲಿ ಲಕ್ಷ್ಯತ್ವ ಎಂಬ ಧರ್ಮ ಇರಬೇಕಾಗಿಲ್ಲ ಎನ್ನುವುದಾದರೆ ಅನವಸ್ಥಾ. ''ಲಕ್ಷ್ಯ ಪದದಿಂದ ಬ್ರಹ್ಮ ಲಕ್ಷ್ಯ'' ಎಂಬ ವಾಕ್ಯಗತವಾದ ಲಕ್ಷ್ಯಪದದಿಂದ ಮತ್ತೆ ಬ್ರಹ್ಮನು ವಾಚ್ಯನಾದ. ಅದರಿಂದಲೂ ಲಕ್ಷ್ಯ ಎನ್ನಬೇಕು. ಆಗ ಅನವಸ್ಥಾ.

**ಯದ್ಯಭಾವವಿಶೇಷಿತ್ವಂ ಸ್ಯಾದಂಗೀಕೃತಮೇವ ತೇ ।**
**ಅಸಾರ್ವಜ್ಞ್ಯಾದಿರಾಹಿತ್ಯಮಪ್ಯೇವಂ ತೇ ಭವಿಷ್ಯತಿ ।**
**ತದಾ ಸಾರ್ವಜ್ಞ್ಯ ಮೇವ ಸ್ಯಾದ್ ಭಾವಾರ್ಥತ್ವಾನ್ನಞೋ**
**ರ್ದ್ವಯೋಃ ॥ ೧೭೫ ॥**

ಯದಿ=ಒಂದುವೇಳೆ ಅಭಾವವಿಶೇಷಿತ್ವಂ=ಅಭಾವರೂಪವಾದ ಧರ್ಮಕ್ಕೆ ವಿಶೇಷ್ಯತ್ವವು ತೇ=ನಿನ್ನಿಂದ(ತೃತೀಯಾರ್ಥೇऽವ್ಯಯಂ) ಅಂಗೀಕೃತ ಮೇವ=ಅಂಗೀಕರಿಸಲ್ಪಟ್ಟಿದೆ, ಆದ್ದರಿಂದ ಸತ್ಯಪದಕ್ಕೆ ಅಸತ್ಯತ್ವಾಭಾವ ಎಂದು ಅರ್ಥವನ್ನು ಹೇಳುವುದಾದಲ್ಲಿ ಅಸಾರ್ವಜ್ಞ್ಯಾದಿರಾಹಿತ್ಯಮಪಿ= ಅಸರ್ವಜ್ಞತ್ವಾದಿ ಅಭಾವಗಳು ತೇ ಭವಿಷ್ಯತಿ=ನಿನ್ನ ಮತದಂತೆ ಇರಬಹುದು. ಆದ್ದರಿಂದ 'ಏಷ ಸರ್ವಜ್ಞಃ, ಏಷ ಸರ್ವೇಶ್ವರಃ' ಇತ್ಯಾದಿ ವಾಕ್ಯಗಳೂ ತತ್ತ್ವಾವೇದಕಗಳಾಗಲಿ.

ಅಷ್ಟೇ ಅಲ್ಲ, ತದಾ=ಅಸರ್ವಜ್ಞತ್ವಾಭಾವವು ಬ್ರಹ್ಮನಲ್ಲಿದ್ದರೆ, ದ್ವಯೋಃ ನಞೋಃ=ಎರಡು ನಿಷೇಧಾರ್ಥಕಪದಗಳಿಗೆ ಭಾವಾರ್ಥತ್ವಾತ್= ಭಾವ ರೂಪವಾದ ಅರ್ಥವು ಬರುವುದರಿಂದಾಗಿ ಬ್ರಹ್ಮನಿಗೆ ಸಾರ್ವಜ್ಞ್ಯಮೇವ ಸ್ಯಾತ್=ಸರ್ವಜ್ಞತ್ವ ಎಂಬ ಭಾವಧರ್ಮವೇ ಬಂದೀತು.

ಭಾವಾರ್ಥ— ಹಿಂದೆ, ಸತ್ಯಪದಕ್ಕೆ ಅಸತ್ಯವ್ಯಾವೃತ್ತಿ ಎಂದು ಅರ್ಥ ಹೇಳಿದರೂ ಬ್ರಹ್ಮನಲ್ಲಿ ಧರ್ಮವನ್ನು ಅಂಗೀಕರಿಸಿದಂತಾಯಿತು, ಎನ್ನಲಾಗಿದೆ. ಇದು ನಿರ್ಗುಣ ಬ್ರಹ್ಮವಾದಕ್ಕೆ ವಿರುದ್ಧವಲ್ಲ. ಬ್ರಹ್ಮ ನಿರ್ಗುಣ ಎಂದರೆ ಅವನಲ್ಲಿ ಭಾವರೂಪವಾದ ಧರ್ಮಗಳು ಇಲ್ಲ, ಎಂದರ್ಥ. ಅಭಾವರೂಪವಾದ ಧರ್ಮಗಳು ಅವನಲ್ಲಿ ಇವೆ. 'ನೇಹ ನಾನಾಸ್ತಿ' ಎಂಬ ಶ್ರುತಿಯೂ ಧರ್ಮಗಳನ್ನು ಬ್ರಹ್ಮನಲ್ಲಿ ನಿಷೇಧಮಾಡುವ ಮೂಲಕ ಧರ್ಮಾಭಾವವನ್ನು ಪ್ರತಿಪಾದಿಸುತ್ತದೆ. ಹೀಗೆ ಆ ಶ್ರುತಿಗೆ ಅಭಾವಧರ್ಮವು ಸಮ್ಮತವಾಗಿದೆ.

ಹೀಗೆ ಅಭಾವಧರ್ಮಗಳು ಇರುವುದರಿಂದಾಗಿ ಅಭಾವಪ್ರವೃತ್ತಿ ನಿಮಿತ್ತಕವಾದ ಬ್ರಹ್ಮವಾಚಕಶಬ್ದವು ಇದೆ. ಲಕ್ಷ್ಯಪದದಿಂದಲೂ ಬ್ರಹ್ಮನು ವಾಚ್ಯನಾಗುತ್ತಾನೆ. ಆ ಪದಕ್ಕೆ ಅಲಕ್ಷ್ಯತ್ವಾಭಾವ, ಎಂದರ್ಥ. ಆ ಅಭಾವವು ಬ್ರಹ್ಮನಲ್ಲಿ ಇದೆಯಾದಕಾರಣ ಅವನು ಲಕ್ಷ್ಯಪದಿಂದ ವಾಚ್ಯನಾಗುತ್ತಾನೆ.

ಅದ್ವೈತವಾದದ ಈ ಸಮಾಧಾನ ಸರಿಯಲ್ಲ— ಏಕೆಂದರೆ, ಅದ್ವೈತವಾದದಂತೆ 'ಸತ್ಯಂ ಜ್ಞಾನಮ್ ಅನಂತಂ ಬ್ರಹ್ಮ' ಎಂಬ ವಾಕ್ಯವು ತತ್ತ್ವಾವೇದಕ. 'ಏಷ ಸರ್ವಜ್ಞಃ, ಏಷ ಸರ್ವೇಶ್ವರಃ' ಎಂಬ ವಾಕ್ಯವು

ಅತತ್ತ್ವಾವೇದಕ. ಹೀಗೆ, ವೈದಿಕವಾಕ್ಯಗಳನ್ನು ಎರಡು ಗುಂಪಿನಲ್ಲಿ ವಿಂಗಡಿಸಲಾಗಿದೆ. ಒಂದು ವೇಳೆ ಸತ್ಯಾದಿಪದಗಳು ಅಸತ್ಯವ್ಯಾವೃತ್ತಿಯನ್ನು ಹೇಳುವ ಮೂಲಕ ನಿರ್ಗುಣತ್ವಕ್ಕೆ ವಿರೋಧವಿಲ್ಲದ ಅರ್ಥವನ್ನು ಹೇಳುವುದರಿಂದ ತತ್ತ್ವಾವೇದಕಗಳಾದರೆ, ತಲ್ಯನ್ಯಾಯೇನ ಸರ್ವಜ್ಞ ಎಂಬ ಪದವೂ ಅಸಾರ್ವಜ್ಞವ್ಯಾವೃತ್ತಿಯನ್ನು ಪ್ರತಿಪಾದಿಸುವ ಮೂಲಕ ತತ್ತ್ವಾವೇದಕವಾದೀತು. ಹೀಗೆ, ತತ್ತ್ವಾವೇದಕ, ಅತತ್ತ್ವಾವೇದಕ ಎಂಬ ಪ್ರಭೇದವೇ ಇಲ್ಲವೆಂದಾದೀತು. ಈ ಪ್ರಭೇದ ಬೇಡ, ಎನ್ನುವುದಾದರೂ, ಸರ್ವಜ್ಞಪದವು ಅಸರ್ವಜ್ಞತ್ವದ ಅಭಾವವನ್ನು ಹೇಳಿದರೂ ಬ್ರಹ್ಮನಲ್ಲಿ ಸರ್ವಜ್ಞತ್ವವು ಇದೆ, ಎಂದೇ ಹೇಳಿದಂತಾಗುವುದು. ಅಭಾವದ ನಿಷೇಧ ಭಾವರೂಪವಾಗುತ್ತದೆ. ಆದ್ದರಿಂದ ಸರ್ವಜ್ಞಪದಕ್ಕೆ ಸರ್ವಜ್ಞತ್ವ ಇದೆ, ಎಂದರೂ ಅಸರ್ವಜ್ಞತ್ವ ಇಲ್ಲ ಎಂದರೂ ಎರಡೂ ಒಂದೇ. ಅದರಿಂದ ನಿರ್ಗುಣತ್ವವಾದಕ್ಕೆ ಯಾವ ಅನುಕೂಲವೂ ಆಗುವುದಿಲ್ಲ.

**ಯದಿ ನೈತಾದೃಶಂ ಗ್ರಾಹ್ಯಮಸುಖತ್ವಾನಿವರ್ತನಾತ್।**
**ಅಸತ್ತ್ವಾಜ್ಞಾನತಾದೇಶ್ಚ ಸ್ಯಾದಸತ್ತ್ವಾದಿಕಂ ತದಾ ॥ ೧೭೬ ॥**

ಯದಿ=ಒಂದುವೇಳೆ ಏತಾದೃಶಂ=ಸರ್ವಜ್ಞಪದವಾಚ್ಯನಾದ ಅಸರ್ವಜ್ಞತ್ವಾಭಾವವೂ ನ ಗ್ರಾಹ್ಯಂ=ಗ್ರಾಹ್ಯವಲ್ಲವೆಂದಾದರೆ ಆಗ ಆನಂದಾದಿಪದಗಳೂ ಅಸುಖತ್ವನಿಷೇಧವನ್ನು ಮಾಡಲಿಕ್ಕಿಲ್ಲ. ತದಾ=ಆಗ ಅಸುಖತ್ವಾನಿವರ್ತನಾತ್=ಅಸುಖತ್ವವು ಬ್ರಹ್ಮನಲ್ಲಿ ನಿಷಿದ್ಧವಲ್ಲವಾದ ಕಾರಣ ಅಸತ್ವಾಜ್ಞಾನತಾದೇಶ್ಚ=ಅಸತ್ವ, ಅಜ್ಞಾನತ್ವಾದಿಧರ್ಮಗಳ ಅನಿವರ್ತನಾತ್= ನಿವೃತ್ತಿಯನ್ನು ಮಾಡದಿರುವುದರಿಂದಾಗಿ ಅಸತ್ವಾದಿಕಂ ಸ್ಯಾತ್=ಬ್ರಹ್ಮನಲ್ಲಿ ಅಸತ್ವಾದಿಧರ್ಮಗಳು ಇರಬೇಕಾದೀತು.

ಭಾವಾರ್ಥ— ಸತ್ಯಪದವು ಸತ್ಯತ್ವವನ್ನು ಹೇಳಿದರೆ ನಿರ್ಗುಣತ್ವಹಾನಿ. ಅದು ಅಸತ್ಯತ್ವವ್ಯಾವೃತ್ತಿಯನ್ನು ಹೇಳಿದರೂ ನಿರ್ಗುಣತ್ವಹಾನಿ. ಅದಕ್ಕಾಗಿ ಸತ್ಯತ್ವ, ಅಸತ್ಯತ್ವವ್ಯಾವೃತ್ತಿ ಎರಡೂ ಬ್ರಹ್ಮನಲ್ಲಿ ಮಿಥ್ಯಾ ಎನ್ನಬೇಕು. ಅವುಗಳಲ್ಲಿ ಅಸತ್ಯತ್ವವ್ಯಾವೃತ್ತಿಯು ಮಿಥ್ಯಾ ಎಂದಾದರೆ ಸತ್ಯಪದವು ಬ್ರಹ್ಮನಲ್ಲಿ ಅಸತ್ಯತ್ವವ್ಯಾವೃತ್ತಿಯನ್ನು ತಿಳಿಸುವುದಿಲ್ಲ, ಎಂದಂತಾಗುತ್ತದೆ. ಹಾಗಾದರೆ

ಬ್ರಹ್ಮನಲ್ಲಿ ಆ ವ್ಯಾವೃತ್ತಿಯನ್ನು ಸತ್ಯಪದವು ಮಾಡದೇ ಇದ್ದಲ್ಲಿ ಅವನಲ್ಲಿ ಅಸತ್ಯವು ಬರಬೇಕಾಗುತ್ತದೆ. ಅದರಂತೆ, ಆನಂದ ಪದವು ಅಸುಖ ವ್ಯಾವೃತ್ತಿಯನ್ನು ಬೋಧಿಸದಿದ್ದರೆ ಅವನಲ್ಲಿ ಅಸುಖತ್ವ ಇದೆ, ಎಂದಾದೀತು. ಜ್ಞಾನಪದಿಂದ ಅಜ್ಞತ್ವವ್ಯಾವೃತ್ತಿಯು ಬೋಧಿತವಾಗದಿದ್ದರೆ ಅಜ್ಞತ್ವವು ಬಂದೀತು.

**ಅನೃತಾದಿವಿರೋಧಿತ್ವಂ ಯದ್ಯಸ್ಯಾಭ್ಯುಪಗಮ್ಯತೇ ।**
**ಅನೈಶ್ವರ್ಯವಿರೋಧಿತ್ವಮಪ್ಯೇವಂ ಕಿಂ ನಿವಾರ್ಯತೇ ॥ ೧೭೭ ॥**

ಯದಿ=ಒಂದುವೇಳೆ ಅಸ್ಯ=ಸತ್ಯತ್ವಕ್ಕೆ ಅನೃತಾದಿವಿರೋಧಿತ್ವಂ=ಅಸತ್ಯತ್ವ ದೊಂದಿಗೆ ವಿರೋಧವು ಅವಗಮ್ಯತೇ=ತಿಳಿಯಲ್ಪಡುವು ದಾದಲ್ಲಿ ಸರ್ವೇಶ್ವರ ಪದದಿಂದ ಪ್ರತಿಪಾದ್ಯವಾದ ಸರ್ವೇಶ್ವತ್ವಕ್ಕೆ ಅನೈಶ್ವ್ವರ್ಯವಿರೋಧಿತ್ವಂ= ಅನೈಶ್ವರ್ಯದ ವಿರೋಧವು ಕಿಂ ನಿವಾರ್ಯತೇ=ನಿವಾರಣೆ ಮಾಡಲ್ಪಡು ವುದು ಹೇಗೆ?

**ಭಾವಾರ್ಥ—** ಸತ್ಯಂ, ಜ್ಞಾನಂ, ಅನಂತಂ ಇತ್ಯಾದಿ ಪದಗಳಿಂದ ಬ್ರಹ್ಮನಲ್ಲಿ ಸತ್ಯತ್ವ ಜ್ಞಾನತ್ವಾದಿ ಧರ್ಮಗಳಿವೆ, ಎಂದು ತಿಳಿಯುತ್ತದೆ. ಇವುಗಳಲ್ಲಿ ಸತ್ಯತ್ವ ಧರ್ಮವು ಅಸತ್ಯತ್ವಕ್ಕೆ ವಿರೋಧಿಯಾಗಿದೆ. ಆದ್ದರಿಂದ ಬ್ರಹ್ಮನಲ್ಲಿ ಅಸತ್ಯತ್ವವು ಇಲ್ಲ, ಎನ್ನುವುದರಲ್ಲಿ ಪರ್ಯವಸಾನಗೊಳ್ಳುತ್ತದೆ. ಅದರಂತೆ ಜ್ಞಾನಪದವೂ ಜ್ಞಾನತ್ವಧರ್ಮವನ್ನು ಬ್ರಹ್ಮನಲ್ಲಿ ತಿಳಿಸಿ ಅದಕ್ಕೆ ವಿರೋಧಿಯಾದ ಅಜ್ಞಾನ ಎಂಬ ಧರ್ಮದ ವ್ಯಾವೃತ್ತಿಯನ್ನು ಬೋಧಿಸುತ್ತದೆ. ಇದನ್ನು ಸುರೇಶ್ವರಾಚಾರ್ಯರು ತೈತ್ತಿರೀಯಕಾರಿಕೆಯಲ್ಲಿ ತಿಳಿಸಿದ್ದಾರೆ—

ಪ್ರತಿಪಾದ್ಯ ಪದಾರ್ಥಂ ಹಿ ವಿರೋಧಾತ್ ತದ್ವಿರೋಧಿನಃ ।
ಪಶ್ಚಾದಭಾವಂ ಜಾನಾತಿ ವಧ್ಯಘಾತಕವತ್ ಪದಾತ್ ॥

''ಇಲಿಗಳಿಂದ ತುಂಬಿದ ಪ್ರದೇಶದಲ್ಲಿ ಬೆಕ್ಕಿಲ್ಲ ಎನ್ನುವ ಜ್ಞಾನಬರುವಂತೆ ಸತ್ಯತ್ವಾದಿ ಧರ್ಮಗಳಿರುವುದರಿಂದ ಬ್ರಹ್ಮನಲ್ಲಿ ಅಸತ್ಯತ್ವ ಇಲ್ಲ, ಎಂಬ ಜ್ಞಾನ ಬರುತ್ತದೆ.''

ಹೀಗೆ ಸತ್ಯಾದಿಪದಗಳಿಗೆ ಸಾರ್ಥಕ್ಯವನ್ನು ಹೇಳುವುದಾದಲ್ಲಿ 'ಏಷ

ಸರ್ವಜ್ಞಃ ಸರ್ವೇಶ್ವರಃ' ಎಂಬ ವಾಕ್ಯವೂ ಸರ್ವೇಶ್ವರತ್ವಾದಿ ಧರ್ಮಗಳ ಸಂಬಂಧವನ್ನು ಬ್ರಹ್ಮನಲ್ಲಿ ತಿಳಿಸಿ ಅದರಿಂದ ಬ್ರಹ್ಮನಲ್ಲಿ ಅನೀಶ್ವರತ್ವ ಇಲ್ಲ, ಎಂದು ಪ್ರತಿಪಾದಿಸುತ್ತದೆ, ಎಂದು ಹೇಳಬಹುದು. ಆದ್ದರಿಂದ ಸತ್ಯಜ್ಞಾನಾದಿ ಪದಗಳಂತೆ ಆ ಪದಗಳು ತತ್ತ್ವಾವೇದಕವಾಗಿವೆ.

**ಅಖಂಡಖಂಡನಾದೇವಂ ವಿಶೇಷೋಽಖಂಡವಾದಿನಾ ।**
**ಖಂಡಿತೇನಾಪಿ ಮನಸಾ ಸ್ವೀಕಾರ್ಯೋಽನನ್ಯಥಾಗತೇಃ ॥ ೧೭೮ ॥**

ಏವಂ=ಹೀಗೆ ಅಖಂಡಖಂಡನಾತ್=ಅಖಂಡ ಬ್ರಹ್ಮವಾದವನ್ನು ನಿರಾಕರಿಸಿರುವುದರಿಂದ ಅಖಂಡವಾದಿನಾ=ಅಖಂಡಾರ್ಥವಾದಿಯಾದ ಅದ್ವೈತವಾದಿಯಿಂದ ಖಂಡಿತೇನಾಪಿ ಮನಸಾ=ಖಂಡನೆಗೆ ಸಮಾಧಾನದ ಉತ್ಪ್ರೇಕ್ಷೆಯೂ ಇಲ್ಲದ ಮನಸ್ಸಿನಿಂದ ವಿಶೇಷಃ-'ವಿಶೇಷವು' ಸ್ವೀಕಾರ್ಯಃ= ಅಂಗೀಕರಿಸಲ್ಪಡಬೇಕು. ಅನ್ಯಥಾ ಅಗತೇಃ=ಒಪ್ಪದ ಹೊರತು ಅನ್ಯಮಾರ್ಗ ವಿಲ್ಲವಾದ ಕಾರಣ.

**ಭಾವಾರ್ಥ—** ಇದುವರೆಗೆ ಸತ್ಯಜ್ಞಾನಾದಿ ವಾಕ್ಯಗಳಿಗೆ ಅಖಂಡ ಬ್ರಹ್ಮಪರತ್ವ ಇಲ್ಲ, ಎಂದು ಸಾಧಿಸಲಾಗಿದೆ. ಆದರಿಂದ ಸತ್ಯಾದಿಪದಗಳಿಗೆ ಪೌನರುಕ್ತ್ಯ ಪರಿಹಾರವಾಗಿ ಸಾರ್ಥಕ್ಯ ಬರಬೇಕಾದರೆ ಅದ್ವೈತವಾದಿಯು ಮನಸ್ಸಿನಲ್ಲದ ಮನಸ್ಸಿನಿಂದ ವಿಶೇಷವನ್ನು ಒಪ್ಪಬೇಕಾಗುತ್ತದೆ. ಆಗ ಸತ್ಯತ್ವಾದಿ ಧರ್ಮಗಳು ಬ್ರಹ್ಮಾಭಿನ್ನವಾದರೂ ವಿಶೇಷದಿಂದಾಗಿ ಅವುಗಳಿಗೆ ಧರ್ಮ-ಧರ್ಮಿಭಾವವು ಕೂಡುತ್ತದೆ, ಮಾತ್ರವಲ್ಲ, ಸತ್ಯತ್ವ ಜ್ಞಾನತ್ವಗಳಿಗೆ ಭೇದವೂ ಸಿದ್ಧಿಸುತ್ತದೆ. ಇದರಿಂದ ಸತ್ಯಾದಿಪದಗಳಿಗೆ ಅರ್ಥಭೇದ ಸಿದ್ಧವಾಗಿ ಸಾರ್ಥಕ್ಯವೂ ಬರುತ್ತದೆ. ಇದು ಅದ್ವೈತವಾದಿಯೂ ವಿಶೇಷವನ್ನು ಅಂಗೀಕರಿಸಬೇಕು, ಎನ್ನುವುದರ ನಿಗಮನ.

**ಅಖಂಡಖಂಡವಾದಿಭ್ಯಾಂ ಖಂಡಾಖಂಡೇನ ಚೈವ ತತ್।**
**ಮಹಾದರೇಣ ಶಿರಸಿ ವಿಶೇಷೋ ಧಾರ್ಯ ಏವ ಹಿ ॥ ೧೭೯ ॥**

ಅಖಂಡ-ಖಂಡವಾದಿಭ್ಯಾಂ=ಧರ್ಮಧರ್ಮಿಗಳಿಗೆ ಅಭೇದವನ್ನು

ಅಂಗೀಕರಿಸುವ ಹಾಗೂ ಅವುಗಳಿಗೆ ಭೇದವನ್ನು ಅಂಗೀಕರಿಸುವ ಇಬ್ಬರು ವಾದಿಗಳಿಂದಲೂ ವಿಶೇಷಃ ಅಂಗೀಕಾರ್ಯಃ=ವಿಶೇಷವು ಅಂಗೀಕರಿಸಲ್ಪಡ ಬೇಕು. ತತ್=ಆದರಿಂದಾಗಿಯೇ ಖಂಡಾ-ಖಂಡೇನ=ಭೇದಾಭೇದವಾದಿ ಯಿಂದಲೂ ವಿಶೇಷಃ=ವಿಶೇಷವು ಶಿರಸಿ=ತಲೆಯಲ್ಲಿ ಮಹಾದರೇಣ= ಅತಿಗೌರವಪುರಸ್ಸರವಾಗಿ ಧಾರ್ಯ ಏವ ಹಿ=ಧರಿಸಲ್ಪಡಲೇಬೇಕು.

ಭಾವಾರ್ಥ— ಇದುವರೆಗೆ ಧರ್ಮ-ಧರ್ಮಿಗಳಿಗೆ ಭೇದವನ್ನು ಹೇಳಿದರೂ ಅನವಸ್ಥಾಪರಿಹಾರಕ್ಕಾಗಿ ವಿಶೇಷವು ಅಂಗೀಕಾರಾರ್ಹವಾದುದು. ಅಭೇದವನ್ನು ಹೇಳಿದರೂ ಪರ್ಯಾಯತ್ವ-ವೈಯ್ಯರ್ಥ್ಯಗಳ ಪರಿಹಾರಕ್ಕಾಗಿ ವಿಶೇಷವನ್ನು ಒಪ್ಪಲೇಬೇಕಾಗುವುದು, ಎಂದು ಸಾಧಿಸಿರುವುದರಿಂದ ಭೇದಾ ಭೇದವಾದಿಗಳೂ ಈ ಎರಡೂ ದೋಷಗಳ ಪರಿಹಾರಕ್ಕಾಗಿ ವಿಶೇಷವನ್ನು ಒಪ್ಪಲೇಬೇಕಾಗುವುದು, ಎಂದು ಹೇಳಿದಂತಾಗಿದೆ. ಏಕೆಂದರೆ, ಧರ್ಮ- ಧರ್ಮಿಗಳಿಗೆ ಭೇದಾಭೇದವನ್ನು ಹೇಳಿದರೆ ಆ ಭೇದಾಭೇದವು ಧರ್ಮಿ ಯಿಂದ ಭಿನ್ನವೆಂದಾದರೆ ಅನವಸ್ಥಾ. ಅಭಿನ್ನವಾದರೆ 'ಧರ್ಮಿಯಲ್ಲಿ ಭೇದಾ ಭೇದವಿದೆ' ಎನ್ನುವ ಆಧಾರಾಧೇಯ ವ್ಯವಹಾರಾನುಪಪತ್ತಿ. ಭೇದಾಭೇದ ವಾದರೆ ಅನವಸ್ಥಾ.

ಆದ್ದರಿಂದ ಭಗವಂತನಿಗೂ ಅವನ ಧರ್ಮಗಳಿಗೂ ಸವಿಶೇಷಾಭೇದವೇ ಯುಕ್ತವಾದುದು.

**ನಿದರ್ಶನತ್ರಯೇಣಾತೋ ಭಗವಾನತ್ಯಭಿನ್ನತಾಮ್ ।**
**ಗುಣಾನಾಮಾದರೇಣಾಹ ತಚ್ಚ ನಾಭಿಹಿತಾನ್ವಯಃ ॥ ೧೮೦ ॥**

ಅತಃ=ಗುಣಗಳಿಂದ ಭಗವಂತನಿಗೆ ಸವಿಶೇಷಾಭೇದವಿರುವುದರಿಂದಾಗಿ ಭಗವಾನ್=ಶ್ರೀವೇದವ್ಯಾಸರು ಆದರೇಣ=ತಾತ್ಪರ್ಯಪೂರ್ವಕವಾಗಿ ನಿದರ್ಶನತ್ರಯೇಣ=ಅಹಿಕುಂಡಲ, ಪ್ರಕಾಶ, ಕಾಲ ಈ ಮೂರು ದೃಷ್ಟಾಂತಗಳಿಂದ ಗುಣಾನಾಂ=ಗುಣಗಳಿಗೆ ಅತ್ಯಭಿನ್ನತಾಂ=ಭಗವಂತ ನೊಂದಿಗೆ ಸವಿಶೇಷಾಭೇದವನ್ನು ಆಹ=ಸೂತ್ರಗಳಲ್ಲಿ ಹೇಳಿದ್ದಾರೆ.

ಭಾವಾರ್ಥ— ಈ ಅಧಿಕರಣದ ಮೂರು ಸೂತ್ರಗಳಲ್ಲಿ ಮೂರು

ದೃಷ್ಟಾಂತಗಳನ್ನು ಹೇಳಿ ಗುಣಗಳಿಗೂ ಭಗವಂತನಿಗೂ ಅಭೇದವನ್ನು ಸೂತ್ರಕಾರರು ಹೇಳಿದ್ದಾರೆ. ಮೊದಲ ದೃಷ್ಟಾಂತ— ಅಹಿಕುಂಡಲ. ವೃತ್ತಾಕಾರವಾಗಿ ಹಾವು ತನ್ನ ದೇಹವನ್ನು ಸುತ್ತಿಕೊಳ್ಳುತ್ತದೆ. ಆ ಕುಂಡಲಾಕಾರಕ್ಕೂ ಸರ್ಪದ ದೇಹಕ್ಕೂ ಭೇದಾಭೇದವಿದೆ. ಅಭೇದಾಂಶದಲ್ಲಿ ಮಾತ್ರ ಈ ಉದಾಹರಣೆ. ಆಥರ್ವಣೋಪನಿಷತ್ತಿನಲ್ಲಿ ಬ್ರಹ್ಮನು ಜಗತ್ಕಾರಣ ಎನ್ನುವುದಕ್ಕೆ 'ಯಥಾ ಪೃಥಿವ್ಯಾಂ ಓಷಧಯಃ ಸಂಭವಂತಿ' ಎಂದು ಪೃಥಿವಿಯ ಉದಾಹಣೆಯನ್ನು ಕೊಡಲಾಗಿದೆ. ಪೃಥಿವೀ ಓಷಧಿಗಳಿಗೆ ಉಪಾದಾನ, ಬ್ರಹ್ಮನಿಮಿತ್ತ. ಆದರೂ ಪೃಥಿವೀ ಬ್ರಹ್ಮ ಎರಡೂ ಕಾರಣ, ಎನ್ನುವ ಅಂಶದಲ್ಲಿ ಮಾತ್ರ ಅದು ದೃಷ್ಟಾಂತ. ಯಾವರೀತಿ ಕಾರಣ ಎನ್ನುವ ಅಂಶದಲ್ಲಿ ಅಲ್ಲ. ಅದರಂತೆ ಅಹಿಕುಂಡಲ ದೃಷ್ಟಾಂತ.

ಎರಡನೆಯ ದೃಷ್ಟಾಂತ ಪ್ರಕಾಶ. ಪ್ರಕಾಶ ಎಂದರೆ ಬಿಳಿಬಣ್ಣ. ಅದಕ್ಕೂ ಸೂರ್ಯಮಂಡಲಕ್ಕೂ ಸವಿಶೇಷಾಭೇದವಿದೆ. ಮೂರನೆಯದು ಕಾಲ ದೃಷ್ಟಾಂತ. 'ಪೂರ್ವಃ ಕಾಲಃ' ಎಂದಾಗ ಪೂರ್ವಕಾಲ ಎಂಬ ಅಂಶಕ್ಕೂ ಅಖಂಡಕಾಲಕ್ಕೂ ಸವಿಶೇಷಾಭೇದ.

**ಅನ್ವಿತಾಭಿಧಾನವಾದ**

ತತ್=ಧರ್ಮಧರ್ಮಿಗಳಿಗೆ ಅಭೇದವಿರುವುದರಿಂದ ನ ಅಭಿಹಿತಾನ್ವಯಃ=ಅಭಿಹಿತಾನ್ವಯವಾದವು ಸರಿಯಲ್ಲ.

**ಭಾವಾರ್ಥ**— ಬ್ರಹ್ಮನಿಗೂ ಅವನ ಧರ್ಮಗಳಿಗೂ ಸವಿಶೇಷಾಭೇದವಿರುವುದರಿಂದ 'ಸತ್ಯಂ ಜ್ಞಾನಮ್ ಅನಂತಂ ಬ್ರಹ್ಮ' ಎಂಬ ವಾಕ್ಯದಲ್ಲಿರುವ ಬ್ರಹ್ಮಶಬ್ದವು ಸಾಮಾನ್ಯತಃ ಇತರ ಗುಣಗಳಿಂದ ಅನ್ವಿತವಾದ ಬ್ರಹ್ಮನನ್ನು ತಿಳಿಸುತ್ತದೆ. ಸತ್ಯಪದವು ಸತ್ಯತ್ವ ಎಂಬ ಗುಣವಿಶೇಷವಿಶಿಷ್ಟನಾದ ಬ್ರಹ್ಮನನ್ನು ಬೋಧಿಸುತ್ತದೆ. ಹೀಗೆ, ಶಬ್ದಗಳಿಗೆ ಯೋಗ್ಯೇತರಾನ್ವಿತ ಸ್ವಾರ್ಥದಲ್ಲಿ ಶಕ್ತಿಯನ್ನು ಸೂತ್ರಕಾರರು ತಿಳಿಸಿದ್ದಾರೆ. ಇದರಿಂದ ಅಭಿಹಿತಾನ್ವಯವಾದವು ಸೂತ್ರಕಾರರಿಗೆ ಸಮ್ಮತವಲ್ಲ, ಎಂದು ತಿಳಿಯುತ್ತದೆ.

**ಯದಾऽಶೇಷವಿಶೇಷಾಣಾಮುಕ್ತಿಃ ಸಾಮಾನ್ಯತೋ ಭವೇತ್ ।**
**ಪದೈಕೇನಾಪ್ಯುತ್ತರೇಣ ವಿಶೇಷಾವಗತಿರ್ಭವೇತ್ ॥ ೧೮೧ ॥**

ಯದಾ(ಯದಿ)=ಒಂದುವೇಳೆ ಅಶೇಷವಿಶೇಷಾಣಾಂ=ಎಲ್ಲಾ ವಿಶೇಷ ಗುಣಗಳ ಸಾಮಾನ್ಯತಃ=ಸಾಮಾನ್ಯಾನ್ವಿತನಾದ ಬ್ರಹ್ಮನ ಪದೈಕೇನ=ಬ್ರಹ್ಮ ಎಂಬ ಒಂದೇ ಪದದಿಂದ ಉಕ್ತಿಃ ಭವೇತ್=ಅಭಿಧಾನವಾದರೆ ಉತ್ತರೇಣ= ಇತರ ಪದಸಮೂಹದಿಂದ ವಿಶೇಷಾವಗತಿಃ ಭವೇತ್=ಗುಣವಿಶೇಷಗಳ ಅನ್ವಯಪ್ರತೀತಿಯು ಆಗುತ್ತದೆ.

**ಭಾವಾರ್ಥ—** ಅನ್ವಿತಾಭಿಧಾನದಲ್ಲೂ ಈ ವಿಶೇಷವನ್ನು ತಿಳಿಯ ಬೇಕು— ''ಸತ್ಯಂ ಜ್ಞಾನಂ ಅನಂತಂ ಬ್ರಹ್ಮ'' ಎಂಬ ವಾಕ್ಯದಲ್ಲಿ ಬ್ರಹ್ಮಶಬ್ದಕ್ಕೆ ಯೋಗ್ಯವಾದ ಗುಣಗಳಿಂದ ವಿಶಿಷ್ಟನಾದ ಬ್ರಹ್ಮನಲ್ಲಿ ಶಕ್ತಿ ಇದೆ. ಆದ್ದರಿಂದ ಬ್ರಹ್ಮಶಬ್ದವು ಆ ಎಲ್ಲ ಗುಣಗಳಿಗೆ ವಾಚಕವಾಗಿದೆ. ಆದರೂ, ಗುಣವಿಶೇಷಗಳನ್ನು ಹೇಳುವ ಸತ್ಯಾದಿಪದಗಳು ವ್ಯರ್ಥವಲ್ಲ. ಬ್ರಹ್ಮಶಬ್ದವು ಎಲ್ಲ ಗುಣಗಳನ್ನು ಹೇಳಿದರೂ ಆ ಗುಣಗಳನ್ನು ಯೋಗ್ಯಗುಣಗಳು ಎಂದು ಸಾಮಾನ್ಯತಃ ಹೇಳುತ್ತದೆಯೇ ಹೊರತು ಅವುಗಳನ್ನು ಜ್ಞಾನ, ಆನಂದ, ಸತ್ಯ ಎಂದು ವಿಶೇಷರೂಪದಿಂದ ಹೇಳುವುದಿಲ್ಲ. ಸತ್ಯಾದಿಪದಗಳು ಮಾತ್ರ ವಿಶೇಷರೂಪದಿಂದ ಒಂದೊಂದೇ ಗುಣಗಳನ್ನು ತಿಳಿಸಿಕೊಡುತ್ತವೆ. ಆದ್ದರಿಂದ ಆ ಪದಗಳೂ ಸಾರ್ಥಕವಾಗಿವೆ.

**ಯತೋಽಶೇಷವಿಶೇಷಾಣಾಂ ವಸ್ತುನಾಽಸ್ಯೈವ ಚೈಕತಾ ।**
**ಅತಃ ಸಾಮಾನ್ಯತೋ ಜ್ಞಾತಃ ಪದಾಂತರಬಲಾತ್ ಪುನಃ ।**
**ಭವೇದ್ ವಿಶೇಷತೋ ಜ್ಞಾತಸ್ತೇನ ಸ್ಯಾದನ್ವಿತೋಕ್ತಿತಾ ॥ ೧೮೨ ॥**

ಯತಃ=ಯಾವ ಕಾರಣದಿದಂದ ಅಶೇಷವಿಶೇಷಣಾಂ=ಜ್ಞಾನಾದಿ ಎಲ್ಲಾ ಧರ್ಮಗಳಿಗೂ ವಸ್ತುನಾ=ಬ್ರಹ್ಮನಿಂದ ಏಕತಾ ಚ=ವಿಶೇಷ ಮತ್ತು ಅಭೇದವು ಅಸ್ತಿ=ಇದೆಯೋ ಅತಃ=ಆದ್ದರಿಂದ ಅಭಿಹಿತಾನ್ವಯವು ಸರಿಯಲ್ಲ, ಅನ್ವಿತಾಭಿಧಾನವಾದವೇ ಯುಕ್ತವಾದುದು. ಸಾಮಾನ್ಯತಃ ಜ್ಞಾತಃ=ಒಂದು ಪದದಿಂದ ಸಾಮಾನ್ಯತಃ ಯೋಗ್ಯೇತರಾನ್ವಿತವಾದ ಸ್ವಾರ್ಥವು ತಿಳಿಯಲ್ಪಟ್ಟದ್ದಾಗಿ ಪುನಃ=ಮತ್ತೆ ಪದಾಂತರಬಲಾತ್=ಇನ್ನೊಂದು ಪದದಿಂದಾಗಿ ವಿಶೇಷತಃ ಜ್ಞಾತಃ=ಇನ್ನೊಂದು ಪದದ ಅರ್ಥದೊಂದಿಗೆ

ಅನ್ವಿತವಾಗಿ ತಿಳಿಯಲ್ಪಡುತ್ತದೆ. ತೇನ=ಆ ಕಾರಣದಿಂದ ಅನ್ವಿತೋಕ್ತಿತಾ ಸ್ಯಾತ್=ಪದಗಳಿಗೆ ಇತರಾನ್ವಿತಸ್ವಾರ್ಥಾಭಿಧಾಯಕತ್ವವು ಇದೆ.

**ಭಾವಾರ್ಥ—** ಪದಗಳಿಗೆ ಇತರಾನ್ವಿತಸ್ವಾರ್ಥದಲ್ಲಿ ಮಾತ್ರ ಶಕ್ತಿಯಾದರೆ 'ಜಲಮಾನಯ' ಎಂಬ ವಾಕ್ಯದಿದಂದ ಇತರಾನ್ವಿತ ಜಲದ ಜ್ಞಾನ ಮಾತ್ರ ಬರಬಹುದು. ಆನಯನಾನ್ವಿತ ಜಲಜ್ಞಾನ ಬರುವುದು ಹೇಗೆ? ಇದಕ್ಕೆ ಉತ್ತರ— ಜಲಪದವನ್ನು ಕೇಳಿದ ಕೂಡಲೇ ಶಕ್ತಿವೃತ್ತಿಯಿಂದ ಇತರಾನ್ವಿತವಾದ ಜಲದ ಸ್ಮರಣೆ ಬರುತ್ತದೆ. ಆಮೇಲೆ ಇತರ ಯಾವುದು ಎನ್ನುವ ಜಿಜ್ಞಾಸೆ ಬಂದಾಗ ಆನಯ ಎಂಬ ಪದದಿಂದ ಇತರಾನ್ವಿತವಾದ ಆನಯನವು ಸ್ಮರಣೆಗೆ ಬರುತ್ತದೆ. ಆಗ ಜಲಪದವು ಆನಯಾನ್ವಿತ ಜಲದ ಶಾಬ್ದಬೋಧವನ್ನು ಹುಟ್ಟಿಸುತ್ತದೆ. ಹೀಗೆ ಸಾಮಾನ್ಯತಃ ಇತರಾನ್ವಿತ ಸ್ವಾರ್ಥದಲ್ಲಿ ಶಕ್ತಿ ಇರುವ ಪದಗಳು ಯೋಗ್ಯಪದಾಂತರದ ಸಹಕಾರವನ್ನು ಪಡೆದು ವಿಶೇಷಾನ್ವಿತವಾದ ಸ್ವಾರ್ಥದ ಜ್ಞಾನಕ್ಕೆ ಕಾರಣವಾಗುತ್ತವೆ.

**ಸ್ವಾರ್ಥ ಏವಾನ್ವಿತೋ ಯಸ್ಮಾತ್ ಕೇನಚಿತ್ ತದ್ವಿಶೇಷತಃ।**
**ಅನೇನೇತಿ ತದುಕ್ತ್ಯೈವ ಜ್ಞಾಯತೇಽನುಭವೇನ ಹಿ ॥ ೧೮೩ ॥**

ಯಸ್ಮಾತ್=ಯಾವ ಕಾರಣದಿಂದ ಕೇನಚಿತ್ ಅನ್ವಿತ ಏವ=ಇತರ ಗುಣಗಳಿಂದ ಅನ್ವಿತವಾದುದೇ ಸ್ವಾರ್ಥಃ=ಪದಗಳ ಅರ್ಥವೇ ಅನೇನ= ಸತ್ಯತ್ವ–ಜ್ಞಾನತ್ವ ರೂಪವಿಶೇಷಧರ್ಮಗಳಿಂದ ಅನ್ವಿತಃ=ಅನ್ವಿತವಾಗಿದೆ. ಆದರೂ, ತದ್ವಿಶೇಷತಃ=ಧರ್ಮವಿಶೇಷದ ಅನ್ವಯವು ತದುಕ್ತೈವ=ಸತ್ಯಾದಿ ಪದಗಳ ಉಕ್ತಿಯಿಂದಲೇ (ಸತ್ಯಾದಿಪದಗಳನ್ನು ಹೇಳಿದಾಗಲೇ) ಜ್ಞಾಯತೇ= ತಿಳಿಯಲ್ಪಡುತ್ತದೆ. ಇತಿ=ಎಂಬುದು ಅನುಭವೇನ ಹಿ=ಅನುಭವದಿಂದಲೇ ಸಿದ್ಧವಾಗಿದೆ. ತಸ್ಮಾತ್=ಆದ್ದರಿಂದ ಸಕಲ ಧರ್ಮಗಳಿಗೂ ಬ್ರಹ್ಮನಿಂದ ಸವಿಶೇಷಾಭೇದವು ಯುಕ್ತವಾಗಿದೆ.

**ಭಾವಾರ್ಥ—** ಧರ್ಮಗಳಿಗೆ ಬ್ರಹ್ಮನಿಂದ ಸವಿಶೇಷಾಭೇದವಿರುವುದ ರಿಂದ ಬ್ರಹ್ಮಶಬ್ದವು ಯೋಗ್ಯೇತರಾನ್ವಿತಸ್ವಾರ್ಥಾಭಿಧಾಯಕ (ಗುಣಾನ್ವಿತ ಬ್ರಹ್ಮವಾಚಕ) ಎಂದು ಅನ್ವಿತಾಭಿಧಾನವು ಸಿದ್ಧವಾಗುತ್ತದೆ, ಹೀಗೆ ಹಿಂದೆ

ಹೇಳಿರುವುದು ಸರಿಯಲ್ಲ. ಅಭೇದವಿದ್ದ ಮಾತ್ರಕ್ಕೆ ಬ್ರಹ್ಮಶಬ್ದವು ಗುಣಾನ್ವಯವನ್ನೂ ಹೇಳಿದರೆ ರೂಪಕ್ಕೂ ಘಟಕ್ಕೂ ಅಭೇದವಿರುವುದರಿಂದ ತ್ವಗಿಂದ್ರಿಯದಿಂದ ಘಟದ ಜ್ಞಾನ ಬಂದಾಗ ರೂಪಜ್ಞಾನವೂ ಬರಬೇಕಾದೀತು. ಅಭೇದವಿದ್ದರೂ ರೂಪಜ್ಞಾನಕ್ಕೆ ವಿಶೇಷವು ಪ್ರತಿಬಂಧಕ ವಾಗುತ್ತದೆ, ಎನ್ನುವುದಾದಲ್ಲಿ ಗುಣಾನ್ವಯ ಜ್ಞಾನಕ್ಕೂ ವಿಶೇಷವು ಪ್ರತಿಬಂಧಕವಾಗಲಿ, ಬ್ರಹ್ಮಶಬ್ದದಿಂದ ವ್ಯಕ್ತಿವಿಶೇಷದ ಜ್ಞಾನಮಾತ್ರ ಬರಲಿ, ಎನ್ನುವ ಈ ಆಕ್ಷೇಪಕ್ಕೆ ಸಮಾಧಾನವನ್ನು ಇಲ್ಲಿ ಹೇಳಲಾಗಿದೆ.

ಧರ್ಮಧರ್ಮಿಗಳಿಗೆ ಅಭೇದವಿರುವುದರಿಂದ ಗುಣಸಾಮಾನ್ಯಾನ್ವಿತ ನಾದ ಬ್ರಹ್ಮನೇ ಸತ್ಯತ್ವಾದಿಗುಣವಿಶೇಷಗಳಿಂದಲೂ ಅನ್ವಿತನಾಗಿದ್ದಾನೆ. ಆದರೂ 'ಸತ್ಯ' ಪದವಿದ್ದಾಗ ಮಾತ್ರ ಸತ್ಯತ್ವವಿಶಿಷ್ಟನಾದವನು ಬ್ರಹ್ಮ, ಎಂಬ ಜ್ಞಾನವು ಬರುತ್ತದೆ, ಬ್ರಹ್ಮಶಬ್ದಮಾತ್ರದಿಂದ ಅಂತಹ ಜ್ಞಾನವು ಬರುವುದಿಲ್ಲ. ಇದು ಅನುಭವಸಿದ್ಧವಾಗಿದೆ. ಆದ್ದರಿಂದ ಅಭೇದವಿದ್ದರೂ ವಿಶೇಷವು ಪ್ರತಿಬಂಧಕವಾದುದರಿಂದ ಬ್ರಹ್ಮಪದವು ಸತ್ಯತ್ವಾನ್ವಿತ ಬ್ರಹ್ಮಬೋಧಕ ವಾಗುವುದಿಲ್ಲ. ಗುಣಾನ್ವಿತ ಬ್ರಹ್ಮ ಮಾತ್ರ ಬೋಧಕವಾಗುತ್ತದೆ.

**ಯದ್ಯನನ್ವಿತಮೇವೈತತ್ ಪದಂ ಸ್ವಾರ್ಥಂ ವದೇದಿಹ ।**
**ತಥಾನ್ಯಾನ್ಯಪಿ ಸರ್ವಾಣಿ ಕಃ ಕುರ್ಯಾದನ್ವಯಂ ಪುನಃ ॥ ೧೮೪॥**

ಇಹ='ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬ ವಾಕ್ಯದಲ್ಲಿ ಏತತ್‌ಪದಂ=ಬ್ರಹ್ಮ ಎಂಬ ಪದವು ಯದಿ=ಒಂದುವೇಳೆ ಅನನ್ವಿತಂ ಸ್ವಾರ್ಥಂ=ಯೋಗ್ಯೇತರ ಅರ್ಥಗಳಿಂದ ಅನ್ವಯವಿಲ್ಲದ ಸ್ವಾರ್ಥವನ್ನು ಮಾತ್ರ ವದೇತ್=ಹೇಳಿದರೆ, ಪುನಃ=ಮತ್ತೆ ಅನ್ಯಾನ್ಯಪಿ ಪದಾನಿ=ಇತರ ಪದಗಳೂ ತಥಾ=ಅನನ್ವಿತಸ್ವಾರ್ಥವನ್ನೇ ಹೇಳಿದರೆ ಅನ್ವಯಂ= ಅನ್ವಯಜ್ಞಾನವನ್ನು ಕಃ ಕುರ್ಯಾತ್=ಯಾವ ಪದವು ತಾನೇ ಉಂಟುಮಾಡಬೇಕು?

**ಭಾವಾರ್ಥ—** ಅಭಿಹಿತಾನ್ವಯವಾದದಲ್ಲಿ ಪದಗಳಿಗೆ ಸ್ವಾರ್ಥದಲ್ಲಿ ಮಾತ್ರ ಶಕ್ತಿ. ಅನ್ವಯದಲ್ಲಿ ಶಕ್ತಿ ಇಲ್ಲ. ಎಲ್ಲ ಪದಗಳೂ ಸ್ವಾರ್ಥವನ್ನು ಮಾತ್ರ

ಹೇಳಿದರೆ ಅನ್ವಯ ಜ್ಞಾನ ಬರುವುದು ಹೇಗೆ? ಅನ್ವಿತಾಭಿಧಾನದಲ್ಲಿ ಈ ಸಮಸ್ಯೆ ಇಲ್ಲ. ಏಕೆಂದರೆ, ಮೊದಲನೆಯ ಪದವು ಇತರಾನ್ವಿತಸ್ವಾರ್ಥ ಬೋಧಕವಾದರೂ ಎರಡನೆಯ ಪದಕ್ಕೆ ಮೊದಲಪದದ ಸಹಾಯವು ಇರುವುದರಿಂದ ಅದು ಪ್ರಥಮಪದಾರ್ಥದಿಂದ ಅನ್ವಿತವಾದ ಸ್ವಾರ್ಥದ ಬೋಧವನ್ನು ಉಂಟುಮಾಡುತ್ತದೆ. ಹೀಗೆ ಅನ್ವಯವಿಶೇಷರೂಪವಾದ ವಾಕ್ಯಾರ್ಥಬೋಧವು ಬರುತ್ತದೆ.

**ವ್ಯಾಪಾರೋ ನಹಿ ಶಬ್ದಸ್ಯ ಪರಃ ಸ್ವಾರ್ಥಪ್ರಕಾಶನಾತ್ ।**
**ಪುಮಾನಪ್ಯೇಕವಾರೋಕ್ತ್ಯಾ ಕೃತಕೃತ್ಯೋ ಯದಾ ಭವೇತ್ ।**
**ಅನ್ವಯಸ್ಯ ಕಥಂ ಜ್ಞಾನಂ ಶಬ್ದಾರ್ಥತ್ವಂ ಯದಾಽಸ್ಯ ನ ॥ ೧೮೫ ॥**

ಯದಾ=ಒಂದುವೇಳೆ ಶಬ್ದಸ್ಯ=ಪದಕ್ಕೆ ಸ್ವಾರ್ಥಪ್ರಕಾಶನಾತ್ ಪರಃ= ತನ್ನ ಅರ್ಥದ ಜ್ಞಾನವನ್ನು ಉಂಟುಮಾಡುವುದಕ್ಕಿಂತ ಬೇರೆಯಾದ ವ್ಯಾಪಾರಃ=ಕಾರ್ಯವು ನ=ಇಲ್ಲ. ಪುಮಾನಪಿ=ವಾಕ್ಯವನ್ನು ಉಚ್ಚರಿಸುವ ವ್ಯಕ್ತಿಯೂ ಏಕವಾರೋಕ್ತ್ಯಾ=ಒಮ್ಮೆ ವಾಕ್ಯವನ್ನು ಉಚ್ಚರಿಸುವುದರಿಂದಲೇ ಕೃತಕೃತ್ಯಃ=ಕೃತಕೃತ್ಯನಾಗಿ ಯದಾ ಭವೇತ್=ಆಗುವುದಾದಲ್ಲಿ ಯದಾ= ಒಂದುವೇಳೆ ಅಸ್ಯ=ಅನ್ವಯಕ್ಕೆ ಶಬ್ದಾರ್ಥತ್ವಂ ನ=ಶಬ್ದಾವಾಚ್ಯತ್ವವು ಇಲ್ಲವೆಂದಾದಲ್ಲಿ ಅನ್ವಯಸ್ಯ=ಅನ್ವಯದ ಜ್ಞಾನಂ=ಜ್ಞಾನವು ಕಥಂ ಭವೇತ್=ಹೇಗೆ ಬರಬೇಕು?

**ಭಾವಾರ್ಥ—** ಪದಾರ್ಥಗಳ ಅನ್ವಯವೇ ವಾಕ್ಯಾರ್ಥ. ಆ ಅನ್ವಯವನ್ನು ಪದಗಳೇ ಹೇಳಬೇಕು. ಪದಗಳಿಗೆ ಸ್ವಾರ್ಥದಲ್ಲಿ ಮಾತ್ರ ಶಕ್ತಿ ಇದ್ದರೆ ಅಂತಹ ಪದಗಳಿಂದ ಅನ್ವಯದ ಜ್ಞಾನವು ಬರಲಾರದು. ಅವುಗಳು ಅನನ್ವಿತವಾದ ಅರ್ಥಗಳನ್ನಷ್ಟೇ ಹೇಳಿ ಸುಮ್ಮನಾಗುತ್ತವೆ. ಇನ್ನು ವಾಕ್ಯಪ್ರಯೋಗಮಾಡುವ ವ್ಯಕ್ತಿ. ಅವನ ಕೆಲಸ ವಾಕ್ಯದ ಉಚ್ಚಾರಣೆ ಮಾತ್ರ. ವಾಕ್ಯದಿಂದ ಶಾಬ್ದಬೋಧ ಬರುವಲ್ಲಿ ಅವನ ಪಾತ್ರವಿಲ್ಲ. ಹೀಗಿದ್ದಮೇಲೆ ಅನ್ವಯದ ಬೋಧ ಯಾವುದರಿಂದ ಬರಬೇಕು? ಅದಕ್ಕಾಗಿ ಪದಗಳಿಗೆ ಸ್ವಾರ್ಥದಂತೆ ಅನ್ವಯದಲ್ಲೂ ಶಕ್ತಿಯನ್ನು ಅಂಗೀಕರಿಸಬೇಕು.

**ಯದ್ವೈವಾನನ್ವಿತಾರ್ಥಸ್ಯ ವಚನಂ ತೈಃ ಪದೈರ್ಭವೇತ್ ।**
**ಅನನ್ವಿತಃ ಸ್ಯಾಚ್ಛಬ್ದಾರ್ಥೋ ನ ತದರ್ಥೋ ಹಿ ಸೋऽನ್ವಯಃ ॥೧೮೬॥**

ಯದಾ=ಒಂದುವೇಳೆ ತೈಃ ಪದೈಃ=ವಾಕ್ಯದಲ್ಲಿ ಘಟಕಗಳಾದ ಪದಗಳಿಂದ ಅನನ್ವಿತಾರ್ಥಸ್ಯೈವ=ಅನ್ವಯ ಸಹಿತವಾಗಿರದ ಕೇವಲ ಸ್ವಾರ್ಥಗಳ ವಚನಂ ಭವೇತ್=ಪ್ರತಿಪಾದನೆಯು ಆಗುವುದಾದಲ್ಲಿ ಆಗ ಅನನ್ವಿತಃ ಏವ=ಅನ್ವಯವೇ ಇಲ್ಲದಿರುವ ಅರ್ಥಗಳೇ ಶಾಬ್ದಾರ್ಥಃ=ವಾಕ್ಯಾರ್ಥವು, ಸ್ಯಾತ್=ಆದೀತು. ಸಃ ಅನ್ವಯಃ=ಪದಾರ್ಥಗಳಿಂದ ತಿಳಿಯಲ್ಪಡುವ ಅನ್ವಯವು ತದರ್ಥೋ ನಹಿ=ಪದಗಳ ಅರ್ಥ ಅಲ್ಲವಷ್ಟೇ!

ಭಾವಾರ್ಥ— ಅಭಿಹಿತಾನ್ವಯವಾದದಲ್ಲಿ ಪದಗಳು ಸ್ವಾರ್ಥವನ್ನು ಮಾತ್ರ ತಿಳಿಸುತ್ತವೆ. ಅನ್ವಯವನ್ನು ತಿಳಿಸುವುದಿಲ್ಲ. ಅನ್ವಯದಲ್ಲಿ ಪದಗಳಿಗೆ ಶಕ್ತಿ ಇಲ್ಲ. ಹೀಗಾದರೆ ಅನ್ವಯವು ಶಾಬ್ದಬೋಧದಲ್ಲಿ ತೋರಬಾರದು. ಅಶಕ್ಯವಾದುದು ಶಾಬ್ದಬೋಧದಲ್ಲಿ ತೋರುವುದಿಲ್ಲ. ಒಂದು ವೇಳೆ ಅನ್ವಯವು ಪದಶಕ್ಯವಲ್ಲ, ಅದು ಪದಾರ್ಥಗಳಿಂದ ತಿಳಿಯಲ್ಪಡುವ ಅರ್ಥ. ಹೀಗೆ ಪದಗಳಿಂದ ಅಭಿಹಿತಗಳಾದ ಅರ್ಥಗಳೇ ಅನ್ವಯ ಬೋಧಕಗಳಾದರೆ ಶಾಬ್ದಬೋಧಜನಗಳಾದುದರಿಂದ ಪದಾರ್ಥಗಳು ಪ್ರತ್ಯಕ್ಷಾದ್ಯತಿರಿಕ್ತವಾದ ಪ್ರಮಾಣಾಂತರವಾದೀತು. ಆದ್ದರಿಂದ ಅಭಿಹಿತಾನ್ವಯವಾದದಲ್ಲಿ ಗೌರವ ದೋಷವಿದೆ. ಅಲ್ಲದೆ, ಪದಗಳಿಂದ ಅಭಿಹಿತವಾದ ಅರ್ಥಗಳಿಂದ ತಿಳಿಸಲ್ಪಡುವ ಅನ್ವಯದ ಜ್ಞಾನವೂ ಶಾಬ್ದಬೋಧವೆಂದಾದರೆ ಪ್ರತ್ಯಕ್ಷವಾದ ಧೂಮದಿಂದ ತಿಳಿಯಲ್ಪಡುವ ವಹ್ನಿಯ ಜ್ಞಾನವೂ ಪ್ರತ್ಯಕ್ಷವೆಂದಾದೀತು. ಅನುಮಿತಿಯಾಗಲಿಕ್ಕಿಲ್ಲ.

**ನಿರಾಕಾಂಕ್ಷಪದಾನ್ಯೇವ ವಾಕ್ಯಮಿತ್ಯುಚ್ಯತೇ ಬುಧೈಃ ।**
**ತತ್ತದರ್ಥಾಭಿಧಾನೇನ ಸ್ಯಾನ್ನಿರಾಕಾಂಕ್ಷತಾ ಚ ಸಾ ।**
**ಅಪೂರ್ತೇಸ್ತಾವದರ್ಥಾನಾಮಾಕಾಂಕ್ಷಾ ಪೂರ್ವಮಿಷ್ಯತೇ ॥ ೧೮೭ ॥**

ಬುಧೈಃ=ಬಲ್ಲವರಿಂದ ನಿರಾಕಾಂಕ್ಷಾಪದಾನ್ಯೇವ=ಆಕಾಂಕ್ಷಾಪೂರ್ಣಗೊಳಿಸುವ ಪದಗಳೇ ವಾಕ್ಯಮ್ ಇತಿ=ವಾಕ್ಯವೆಂದು ಉಚ್ಯತೇ=ಹೇಳಲ್ಪಡು

ತ್ತದೆ. ತತ್ತದರ್ಥಾಭಿಧಾನೇನ=ವಾಕ್ಯದಲ್ಲಿರುವ ಪದಗಳಿಂದ ಅವುಗಳ ಅರ್ಥಗಳು ಮಾತ್ರ ಹೇಳಲ್ಪಡುವುದರಿಂದ ಸಾ ನಿರಾಕಾಂಕ್ಷತಾ ಸ್ಯಾತ್=ಕೇಳುವ ವ್ಯಕ್ತಿಯ ಜಿಜ್ಞಾಸೆಯು ಶಾಂತವಾಗುತ್ತದೆ. ಆನಯ ಎಂದು ಹೇಳಿದ ಮೇಲೆ ಪೂರ್ವಂ='ಗಾಂ' ಎಂಬ ಪದವನ್ನು ಹೇಳುವ ಮೊದಲು ತಾವದರ್ಥಾನಾಂ= ಆನಯನ ಕ್ರಿಯೆಯಿಂದ ಆಕ್ಷಿಪ್ತವಾದ ಕರ್ತೃ-ಕರ್ಮಾದಿಗಳ ಯಾ ಆಕಾಂಕ್ಷಾ=ಯಾವ ಜಿಜ್ಞಾಸೆಯು ಬರುವುದೋ ಆ ಜಿಜ್ಞಾಸೆಯು 'ಗಾಂ' ಎಂಬ ಪದವನ್ನು ಹೇಳದ ಹೊರತು ಅಪೂರ್ತೇಃ=ಶಾಂತವಾಗುವುದಿಲ್ಲವಾದುದರಿಂದ ಸಾ=ಅಂತಹ ಆಕಾಂಕ್ಷೆಯು ಇಷ್ಯತೇ=ಅಂಗೀಕರಿಸಲ್ಪಡುತ್ತದೆ.

ಭಾವಾರ್ಥ— ಪದಗಳು ಅನ್ವಯಬೋಧಕಗಳಾಗದಿದ್ದರೂ ವಾಕ್ಯವು ಬೋಧಕವಾಗಬಹುದು, ಎನ್ನುವುದೂ ಸರಿಯಲ್ಲ. ಏಕೆಂದರೆ ಪದಾತಿರಿಕ್ತವಾದ ವಾಕ್ಯವೇ ಇಲ್ಲ. ಆಕಾಂಕ್ಷಾ-ಸನ್ನಿಧಿಗಳಿಂದ ಸಹಿತವಾದ ಪದಗಳ ಗುಂಪೇ ವಾಕ್ಯವೆನಿಸುತ್ತದೆ. 'ಗೌಃ, ಅಶ್ವಃ, ಪುರುಷಃ, ಹಸ್ತೀ'' ಇಲ್ಲಿ ಪದಗಳ ಗುಂಪು ಇದ್ದರೂ ಆಕಾಂಕ್ಷಾಶಾಂತವಾಗುವುದಿಲ್ಲ. ಆದುದರಿಂದ ಅದು ವಾಕ್ಯವಲ್ಲ. 'ಗಾಂ ಆನಯ' ಎಂದಾಗ ನಿರಾಕಾಂಕ್ಷಿತ ಬೋಧವು ಬರುತ್ತದೆ. ಆದ್ದರಿಂದ ಅದು ವಾಕ್ಯ. 'ಆನಯ' ಎಂದು ಕ್ರಿಯಾವಾಚಕವಾದ ಪದವನ್ನು ಮಾತ್ರ ಹೇಳಿದರೆ 'ಏನನ್ನು ತರಬೇಕು?' ಎನ್ನುವ ಆಕಾಂಕ್ಷಾ ಹುಟ್ಟುತ್ತದೆ. 'ಗಾಂ' ಎಂದಾಗ ಆ ಆಕಾಂಕ್ಷಾ ಶಾಂತವಾಗುತ್ತದೆ. ಆಕಾಂಕ್ಷಾ ಪುರುಷಗತವಾದ ಧರ್ಮ. ಅದು ತಂತುಗಳ ಜೋಡಣೆಯಂತೆ ಪದಗಳ ಧರ್ಮವಲ್ಲ. ಪದಧರ್ಮವಾಗಿದ್ದಲ್ಲಿ ಪದಗಳಿಂದಾದ ವಾಕ್ಯವು ಪಟದಂತೆ ವಸ್ತ್ವಂತರವಾಗುತ್ತಿತ್ತು. ಅದು ಪುರುಷಧರ್ಮವಾದುದರಿಂದ ಪದ ಸಮೂಹವೇ ವಾಕ್ಯ. ಆದ್ದರಿಂದ ಪದಾತಿರಿಕ್ತವಾದ ವಾಕ್ಯವಿಲ್ಲ.

**ಸ್ಫೋಟನಿರಾಸ**

**ಕರ್ಮಕರ್ತೃಕ್ರಿಯಾಣಾಂ ತು ಪೂರ್ತೌ ಕೋಽನ್ಯೋಽನ್ವಯೋ ಭವೇತ್ ।**

**ಅಪೂರ್ತಿಶ್ಚೇತ್ ಪದೈರುಕ್ತೈಃ ಕಿಂ ನೃಶೃಂಗೇಣ ಪೂರ್ಯತೇ ॥ ೧೮೮ ॥**

ಕರ್ಮ–ಕರ್ತೃ–ಕ್ರಿಯಾಣಾಂ=ಅನ್ಯೋನ್ಯಸಂಸೃಷ್ಟವಾದ ಜಿಜ್ಞಾಸಿತ ವಾದ ಕರ್ಮ, ಕರ್ತೃ, ಕ್ರಿಯೆ ಮುಂತಾದವುಗಳ ಪೂರ್ತೌ=ಪದಗಳಿಂದ ಅಭಿಧಾನವಾದಾಗ ಅನ್ವಯೋ ಭವೇತ್=ಅನ್ವಯವೂ(ವಾಕ್ಯಾರ್ಥವೂ) ಹೇಳಲ್ಪಟ್ಟಂತೆಯೇ ಆಯಿತು. ಉಕ್ತೈಃ=ಹೇಳಲ್ಪಟ್ಟ (ಪ್ರಮಿತವಾದ) ಪದೈಃ= ಪದಗಳಿಂದ ಅಪೂರ್ತಿಶ್ಚೇತ್=ಅನ್ವಯವು ಹೇಳಲ್ಪಟ್ಟಿಲ್ಲವಾದರೆ ನೃಶೃಂಗೇಣ =ನರವಿಷಾಣದಿಂದ ಕಿಂ ಪೂರ್ಯತೇ=ಅನ್ವಯವು ಹೇಳಲ್ಪಡುವುದೇನು?

ಭಾವಾರ್ಥ— ವೈಯಾಕರಣರು ವಾಕ್ಯಸ್ಫೋಟವು ವಾಕ್ಯಾರ್ಥಾ ಭಿಧಾಯಕ ಎಂದು ಹೇಳುತ್ತಾರೆ. ಇದು ಸರಿಯಲ್ಲ. ವಾಕ್ಯಾರ್ಥ ಎಂದರೆ ಅನ್ವಯ. ಪದಗಳಿಗೆ ಅನ್ವಿತಸ್ವಾರ್ಥದಲ್ಲಿ ಶಕ್ತಿ ಇರುವುದರಿಂದಾಗಿ ಪದ ಗಳಿಂದಲೇ ಅನ್ವಯಬೋಧವೂ ಬರುತ್ತದೆ. ಪದಗಳಾದರೂ ಪ್ರಮಿತವಾಗಿವೆ. ಸ್ಫೋಟವು ಅಪ್ರಮಿತ. ಅದು ಶಶಶೃಂಗದಂತೆ ಅಪ್ರಾಮಾಣಿಕ. ಪ್ರಮಿತವಾದ ಪದಗಳನ್ನು ಬಿಟ್ಟು ಅಪ್ರಮಿತವಾದ ಸ್ಫೋಟಕ್ಕೆ ವಾಕ್ಯಾರ್ಥಾಭಿಧಾಯಕತ್ವ ವನ್ನು ಕಲ್ಪಿಸುವುದು ಗೌರವ.

**ನವೀನಾಭಿಹಿತಾನ್ವಯವಾದ ನಿರಾಸ**

**ವ್ಯಾಪಾರಶ್ಚೇತ್ ಪುನಸ್ತೇಷಾಮನುಕ್ತಾವಪಿ ಕಿಂ ನ ಸಃ ।**
**ಉಕ್ತೇ ಬುದ್ಧಿಸ್ಥತಾಹೇತೋರ್ಯದಿ ವ್ಯಾಪಾರ ಇಷ್ಯತೇ ॥ ೧೮೯ ॥**

**ಬುದ್ಧಿಸ್ಥತ್ವಾಯ ಯತ್ನಂ ನ ಕಥಂ ಕುರ್ಯುಃ ಪುರೈವ ಚ ॥**
**ಪುರುಷಾಧೀನತಾ ತೇಷಾಂ ಯದಿ ಪಶ್ಚಾಚ್ಚ ಸಾ ಸಮಾ ॥ ೧೯೦ ॥**

ತೇಷಾಂ=ಪದಗಳಿಗೆ ಪುನಃ ವ್ಯಾಪಾರಃ ಚೇತ್=ಸ್ವಾರ್ಥವನ್ನು ಹೇಳಿದಮೇಲೆ ಅನ್ವಯವನ್ನು ಹೇಳಲು ವಿರಮ್ಯವ್ಯಾಪಾರವು ಅಂಗೀಕರಿಸ ಲ್ಪಡುತ್ತದೆ ಎನ್ನುವುದಾದಲ್ಲಿ ಅನುಕ್ತಾವಪಿ=ಪದಗಳನ್ನು ಉಚ್ಚರಿಸದಿದ್ದರೂ ಸಃ ಕಿಂ ನ=ಅಂತಹ ವ್ಯಾಪಾರ ಏಕಿಲ್ಲ?

ಉಕ್ತೇ=ಉಚ್ಚರಿಸಿದಾಗ ಬುದ್ಧಿಸ್ಥತಾಹೇತೋಃ=ಬುದ್ಧಿವಿಷಯತ್ವವು ಬರುವುದರಿಂದಾಗಿ ಯದಿ ವ್ಯಾಪಾರಃ ಇಷ್ಯತೇ=ಅನ್ವಯಭೋಧಕತ್ವರೂಪ ವ್ಯಾಪಾರವು ಅಭಿಲಷಿಸಲ್ಪಡುವುದಾದಲ್ಲಿ ಪುರೈವ=ಉಚ್ಚರಿಸುವುದಕ್ಕೆ

ಮೊದಲೇ ಬುದ್ಧಿಸ್ಥತ್ವಾಯ=ಶ್ರೋತೃವಿನ ಬುದ್ಧಿಸ್ಥವಾಗುವುದಕ್ಕೆ ಪದಗಳು ಯತ್ನಂ ಕಥಂ ನ ಕುರ್ಯುಃ=ಪ್ರಯತ್ನವನ್ನು ಏಕೆ ಮಾಡುವುದಿಲ್ಲ?

ತೇಷಾಂ=ಜಡವಾದ ಪದಗಳಿಗೆ ಪುರುಷಾಧೀನತಾ ಯದಿ=ವಕ್ತೃ ಪುರುಷನ ಅಧೀನತ್ವ ಇರುವುದರಿಂದಾಗಿ ಹಾಗಾಗುವುದಿಲ್ಲವೆಂದಾದಲ್ಲಿ ಪಶ್ಚಾತ್=ಪುರುಷನು ಉಚ್ಚಾರಣೆ ಮಾಡಿ ಶ್ರೋತೃವು ಕೇಳಿಸಿಕೊಂಡಮೇಲೆ ಅನ್ವಯಭೋಧನೆಯಲ್ಲೂ ಸಾ ಸಮಾ=ಪುರುಷಾಧೀನತ್ವವು ಸಮಾನ.

**ಭಾವಾರ್ಥ**— ನವೀನರ ಅಭಿಹಿತಾನ್ವಯವಾದ ಹೀಗಿದೆ— ಪದಗಳು ಪದಾರ್ಥಜ್ಞಾನವನ್ನು ಮೊದಲು ಉಂಟುಮಾಡಿ ತದ್ವಾರಾ ಅನ್ವಯದ ಬೋಧವನ್ನು ಮಾಡಿಕೊಡುತ್ತವೆ. ಹೀಗೆ, ಪದಗಳೇ ಅನ್ವಯಬೋಧಕಗಳು, ಪದಾಭಿಹಿತವಾದ ಪದಾರ್ಥಗಳಲ್ಲ, ಎಂದು.

ಈ ವಾದವೂ ಸರಿಯಲ್ಲ. ಪದಗಳಿಗೆ ಅನ್ವಯವನ್ನು ಬೋಧಿಸುವ ಶಕ್ತಿ ಇದೆ ಎಂದಾದರೆ ಅವುಗಳು ಮೊದಲೇ ಅನ್ವಯವನ್ನು ಬೋಧಿಸಬೇಕು. ಸ್ವಾರ್ಥವನ್ನು ಹೇಳಿದ ಮೇಲೆ ಏಕೆ ಬೋಧಿಸಬೇಕು? ಜಡವಸ್ತುವಿಗೆ ವಿರಮ್ಯವ್ಯಾಪಾರ ಇಲ್ಲ. ದೀಪದಲ್ಲಿ ಪ್ರಕಾಶನ ಶಕ್ತಿಯೂ ಇದೆ, ದಾಹಶಕ್ತಿಯೂ ಇದೆ. ಬತ್ತಿಯನ್ನು ಹಚ್ಚಿದಾಗ ಈ ಎರಡೂ ಶಕ್ತಿಗಳೂ ಯುಗಪತ್ ಸ್ವಕಾರ್ಯವನ್ನು ಮಾಡುತ್ತವೆ. ಅದರಂತೆ ಪದಗಳಿಗೂ ಉಭಯ ವಿಧಶಕ್ತಿಯು ಇದ್ದಲ್ಲಿ ಒಂದೇ ಬಾರಿ ಪದಾರ್ಥ ಮತ್ತು ಅನ್ವಯಗಳನ್ನು ತಿಳಿಸಬೇಕು. ಮೊದಲು ಪದಾರ್ಥ, ಆಮೇಲೆ ಅನ್ವಯ ಎಂಬ ಕ್ರಮ ಸರಿಯಲ್ಲ. ಇದನ್ನು ಚಮತ್ಕಾರಪೂರ್ವಕವಾಗಿ ಅನುವ್ಯಾಖ್ಯಾನದಲ್ಲಿ ನಿರೂಪಿಸಲಾಗಿದೆ. ಅದು ಹೀಗೆ—

ಪ್ರಶ್ನೆ — ಪದಗಳನ್ನು ಉಚ್ಚಾರಣೆ ಮಾಡದಿದ್ದರೂ ಪದಾರ್ಥದ ಜ್ಞಾನ ಯಾಕೆ ಬರುವುದಿಲ್ಲ?

ಉತ್ತರ— ಇಂದ್ರಿಯಗಳು ಅಜ್ಞಾತಕರಣಗಳಾದುದರಿಂದ ಕಣ್ಣು ಇದ್ದರೆ ಸಾಕು ಪದಾರ್ಥಗಳ ಜ್ಞಾನವು ಬರುತ್ತದೆ. ಆದರೆ, ಪದಗಳು ಜ್ಞಾತಕರಣಗಳು. ಅವುಗಳ ಜ್ಞಾನ ಬಂದರೆ ಮಾತ್ರ ಅರ್ಥಜ್ಞಾನ ಬರುತ್ತದೆ. ಆದ್ದರಿಂದ ಉಚ್ಚರಿಸದೇ ಇದ್ದಾಗ ಅವುಗಳಿಂದ ಜ್ಞಾನ ಬರುವುದಿಲ್ಲ.

ಪ್ರಶ್ನೆ— ಪದಗಳೇ ಶ್ರೋತೃವಿಗೆ ತಮ್ಮ ಜ್ಞಾನವು ಬರುವಂತೆ ಏಕೆ ಮಾಡುವುದಿಲ್ಲ? ಅಥವಾ, ತಮ್ಮನ್ನು ಉಚ್ಚಾರಣೆ ಮಾಡುವಂತೆ ವಕ್ತೃವಿಗೆ ಪ್ರೇರಣೆಯನ್ನು ಏಕೆ ನೀಡುವುದಿಲ್ಲ?

ಉತ್ತರ— ಪದಗಳು ಜಡವಾಗಿವೆ. ಚೇತನಗಳಲ್ಲ. ಆದ್ದರಿಂದ ಈ ಕೆಲಸವನ್ನು ಮಾಡಲಾರವು.

ಪ್ರಶ್ನೆ— ಈ ಉತ್ತರ ನಿಮಗೂ ಅನ್ವಯಿಸುತ್ತದೆ. ಪದಗಳು ಚೇತನಗಳಾಗಿದ್ದಲ್ಲಿ ಮೊದಲು ಪದಾರ್ಥಗಳನ್ನಷ್ಟೇ ತಿಳಿಸಿ ಆಮೇಲೆ ಅವುಗಳ ಅನ್ವಯವನ್ನು ತಿಳಿಸುತ್ತಿದ್ದವು. ಅರ್ಥವನ್ನು ತಿಳಿಸದೆ ಅನ್ವಯದ ಜ್ಞಾನ ಬರುವುದಿಲ್ಲ, ಎನ್ನುವ ವಿವೇಕ ಅವುಗಳಲ್ಲಿ ಇರುತ್ತಿತ್ತು. ಆದರೆ ಅವುಗಳು ಜಡಗಳು. ಆ ವಿವೇಕ ಅವುಗಳಲ್ಲಿ ಇಲ್ಲ. ಆದ್ದರಿಂದ ವಿರಮ್ಯವ್ಯಾಪಾರ ಪದಗಳಲ್ಲಿ ಬರಲಾರದು, ಎಂದು.

**ಪುಮಾನೇವಾನ್ವಯಾಯೈಷಾಂ ಯದಿ ಪಶ್ಚಾದ್ ವಿಚೇಷ್ಟತೇ ।**
**ಅನನ್ವಿತಾಭಿಧಾನಾನಾಂ ಸ ಏವಾರ್ಥಾಂತರೋಕ್ತಿಷು ।**
**ಯತತಾಂ ಶಬ್ದಶಕ್ತಿಶ್ಚೇತ್ ತತ್ರ ನೈವಾನ್ವಯೇ ಕಥಮ್ ॥ ೧೯೧ ॥**

ಪುಮಾನೇವ=ಶ್ರೋತೃಪುರುಷನೇ ಪಶ್ಚಾತ್=ಪದಗಳಿಂದ ಅರ್ಥಗಳ ಸ್ಮರಣೆ ಬಂದಮೇಲೆ ಅನನ್ವಿತಾಭಿಧಾನಾನಾಂ=ಅನ್ವಿತಾರ್ಥಗಳಿಗೆ ವಾಚಕ ವಾಗದ ಪದಗಳ ಸಹಾಯದಿಂದ ಏಷಾಂ=ಪದಾಭಿಹಿತಪದಾರ್ಥಗಳ ಅನ್ವಯಾಯ=ಅನ್ವಯಜ್ಞಾನಕ್ಕಾಗಿ ವಿಚೇಷ್ಟತೇ=ಪ್ರಯತ್ನಿಸುತ್ತಾನೆ, ಇತಿ ಯದಿ ಉಚ್ಯತೇ=ಹೀಗೆ ಒಂದುವೇಳೆ ಹೇಳುವುದಾದಲ್ಲಿ ತರ್ಹಿ=ಹಾಗಾದರೆ ಸ ಏವ=ಶ್ರೋತೃವೇ ಅರ್ಥಾಂತರೋಕ್ತಿಷು=ಗವಾದಿ ಅರ್ಥಾಂತರ ಜ್ಞಾನ ಗಳಲ್ಲೂ ಯತತಾಂ=ಯತ್ನಿಸಲಿ.

ತತ್ರ=ಗವಾದಿರೂಪ ಅರ್ಥಗಳಲ್ಲಿ ಶಬ್ದಶಕ್ತಿಃ ನೈವ ಚೇತ್=ಅಶ್ವಾದಿ ಶಬ್ದಗಳಿಗೆ ಶಕ್ತಿ ಇಲ್ಲ ಎನ್ನುವುದಾದಲ್ಲಿ ಅನ್ವಯೇ=ಅನ್ವಯದ ವಿಷಯ ದಲ್ಲಿಯೂ ಕಥಂ=ಶಕ್ತಿ ಇಲ್ಲದಿರುವುದರಿಂದ ಶಾಬ್ದಬೋಧವು ಹೇಗೆ?

ಭಾವಾರ್ಥ— ಅಭಿಹಿತಾನ್ವಯವಾದಿಗಳು ಹೀಗೆ ಹೇಳಬಹುದು— ಪದಗಳಿಗೆ ಸ್ವಾರ್ಥದಲ್ಲಿ ಮಾತ್ರ ಶಕ್ತಿ, ಅನ್ವಯದಲ್ಲಿ ಶಕ್ತಿ ಇಲ್ಲ. ಆದರೆ ಪದಗಳಿಂದ ಅರ್ಥವನ್ನು ತಿಳಿದುಕೊಂಡ ಶ್ರೋತೃಗಳೇ ಪದಗಳ ಸಹಕಾರದಿಂದ ಅನ್ವಯವನ್ನು ತಿಳಿದುಕೊಳ್ಳುತ್ತಾರೆ. ಅನ್ವಯಜ್ಞಾನಕ್ಕಾಗಿ ಪದಗಳಿಗೆ ಅನ್ವಯದಲ್ಲಿ ಶಕ್ತಿಯನ್ನು ಕಲ್ಪನೆ ಮಾಡುವ ಅಗತ್ಯವಿಲ್ಲ, ಎಂದು.

ಇದು ಸರಿಯಲ್ಲ— ಶಕ್ತಿ ಇಲ್ಲದೆಯೂ ಅನ್ವಯದ ಜ್ಞಾನವು ಬರುವುದಾದಲ್ಲಿ ''ಅಶ್ವಮಾನಯ'' ಎಂಬ ವಾಕ್ಯದಿಂದ ''ಹಸುವನ್ನು ತಾ'' ಎಂಬ ಶಾಬ್ದಬೋಧವು ಏಕೆ ಬರುವುದಿಲ್ಲ? ''ಅಶ್ವ ಪದಕ್ಕೆ ಹಸುವಿನಲ್ಲಿ ಶಕ್ತಿ ಇಲ್ಲ''. ಆದ್ದರಿಂದ ಹಸುವಿನ ಶಾಬ್ದಬೋಧ ಬರುವುದಿಲ್ಲ, ಎನ್ನುವುದಾದಲ್ಲಿ ಅನ್ವಯದಲ್ಲೂ ಶಕ್ತಿ ಇಲ್ಲದಿರುವುದರಿಂದ ಅನ್ವಯದ ಜ್ಞಾನವಾದರೂ ಹೇಗೆ ಬರುವುದು?

**ತತ್ಕಲ್ಪನಾಗುರುತ್ವಾದಿದೋಷೇತೋಽಭಿಹಿತಾನ್ವಯಃ ।**
**ಅನುಭೂತಿವಿರುದ್ಧಶ್ಚ ತ್ಯಾಜ್ಯ ಏವ ಮನೀಷಿಭಿಃ ॥ ೧೯೨ ॥**

ತತ್=ಆದಕಾರಣ ಅಭಿಹಿತಾನ್ವಯಃ=ಅಭಿಹಿತಾನ್ವಯವಾದವು ಕಲ್ಪನಾ ಗುರುತ್ವಾದಿ ದೋಷೇತಃ=ಕಲ್ಪನಾಗೌರವದೋಷಗ್ರಸ್ತವಾಗಿದೆ. ಅನುಭೂತಿ ವಿರುದ್ಧಶ್ಚ=ಅನುಭವವಿರುದ್ಧವೂ ಆಗಿದೆ. ಆದ್ದರಿಂದ ಮನೀಷಿಭಿಃ= ಬಲ್ಲವರಿಂದ ತ್ಯಾಜ್ಯ ಏವ=ತ್ಯಾಜ್ಯವಾದುದು.

ಭಾವಾರ್ಥ— ಹೀಗೆ ಅಭಿಹಿತಾನ್ವಯವಾದದಲ್ಲಿ ಕಲ್ಪನಾಗೌರವ ದೋಷವಿದೆ. ಅದು ಅನುಭವಕ್ಕೆ ವಿರುದ್ಧವೂ ಆಗಿದೆ. ''ಗೌರವಂ ಕಲ್ಪನೇಽನ್ಯಥಾ'' ಎಂಬ ಜಿಜ್ಞಾಸಾಧಿಕರಣದ ಅನುವ್ಯಾಖ್ಯಾನದಲ್ಲಿ ಈ ವಾದದಲ್ಲಿ ಕಲ್ಪನಾಗೌರವವನ್ನು ಸಮರ್ಥಿಸಲಾಗಿದೆ. ಆದ್ದರಿಂದ ಈ ವಾದ ಸರಿಯಲ್ಲ.

**ಕರ್ತೃಶಬ್ದೇ ಹ್ಯಭಿಹಿತೇ ಧರ್ಮಸಾಮಾನ್ಯವೇದನಾತ್ ।**
**ವಿಶೇಷಧರ್ಮಮನ್ವಿಚ್ಛನ್ ಕಿಮಿತ್ಯೇವ ಹಿ ಪೃಚ್ಛತಿ ॥ ೧೯೩ ॥**

ಕರ್ತೃಶಬ್ದೇ=ಕರ್ತೃವಾಚಕವಾದ 'ದೇವದತ್ತೇನ' ಎಂಬ ಶಬ್ದವು ಅಭಿಹಿತೇ ಸತಿ=ಹೇಳಲ್ಪಟ್ಟಾಗ ಧರ್ಮಸಾಮಾನ್ಯವೇದನಾತ್=ಅವನಿಗೆ ಸಂಬಂಧಿಸಿದ ಕ್ರಿಯಾಕರ್ತೃತ್ವರೂಪ ಸಾಮಾನ್ಯಧರ್ಮದ ಜ್ಞಾನವು ಬರುವುದ ರಿಂದಾಗಿಯೇ ವಿಶೇಷಧರ್ಮಂ=ಕ್ರಿಯಾವಿಶೇಷದ ಜ್ಞಾನವನ್ನು ಬಯಸಿ 'ಕಿಮಿತ್ಯೇವ=ದೇವದತ್ತನಿಂದ ಏನು ಮಾಡಲ್ಪಟ್ಟಿತು?' ಎಂದೇ ಪೃಚ್ಛತಿ=ಕೇಳು ತ್ತಾನೆ.

**ಗುಣಕ್ರಿಯಾದಿಧರ್ಮಾಣಾಂ ವಿಶೇಷೇ ಕಥಿತೇ ಪುನಃ ।**
**ನಿರಾಕಾಂಕ್ಷೋ ಭವೇದ್ ಯಸ್ಮಾತ್ ಶಬ್ದಾ ಅನ್ವಿತವಾಚಕಾಃ ॥ ೧೯೪ ॥**

ಪುನಃ=ಆ ಪ್ರಶ್ನೆಗೆ ಉತ್ತರವಾಗಿ ಮತ್ತೆ ಗುಣಕ್ರಿಯಾದಿಧರ್ಮಾಣಾಂ ವಿಶೇಷೇ=ಗುಣವಿಶೇಷ, ಕ್ರಿಯಾವಿಶೇಷಗಳು ಕಥಿತೇ=ಹೇಳಲ್ಪಟ್ಟಾಗ ಯಸ್ಮಾತ್=ಯಾವ ಕಾರಣದಿಂದ ನಿರಾಕಾಂಕ್ಷಃ ಭವೇತ್=ಜಿಜ್ಞಾಸಾರಹಿತ ನಾಗಿ ಆಗುವನೋ ಆದ್ದರಿಂದ ಶಬ್ದಾಃ=ಎಲ್ಲಾ ಶಬ್ದಗಳೂ ಅನ್ವಿತವಾಚಕಾಃ= ಇತರಾನ್ವಿತ ಸ್ವಾರ್ಥಕ್ಕೆ ವಾಚಕಗಳು.

ಭಾವಾರ್ಥ— ಶಬ್ದಗಳು ಅನ್ವಿತಸ್ವಾರ್ಥವಾಚಕಗಳು ಎನ್ನುವುದನ್ನು ಇಲ್ಲಿ ಸಮರ್ಥಿಸಲಾಗಿದೆ. 'ರಾಮನು' ಎಂದಿಷ್ಟೇ ಕೇಳಿದಾಗ 'ರಾಮನು ತಿನ್ನುತ್ತಿದ್ದಾನೋ, ಬರುತ್ತಿದ್ದಾನೋ, ಹೋಗುತ್ತಿದ್ದಾನೋ' ಎಂಬ ಜಿಜ್ಞಾಸೆಯು ಬರುತ್ತದೆ. ಇದು ಕ್ರಿಯಾವಿಶೇಷ ಜಿಜ್ಞಾಸೆ. ವಿಶೇಷಜಿಜ್ಞಾಸೆಗೆ ಸಾಮಾನ್ಯ ಜ್ಞಾನವು ಕಾರಣ. ಕತ್ತಲಲ್ಲಿ ಅಸ್ಪಷ್ಟವಾಗಿ ಒಂದು ವಸ್ತು ಕಂಡಾಗ ಮಾತ್ರ 'ಅದು ಕಂಬವೋ ಕಳ್ಳನೋ' ಎಂಬ ವಿಶೇಷ ಜಿಜ್ಞಾಸೆಯು ಬರುತ್ತದೆ. ಹಾಗೆಯೇ 'ರಾಮನು' ಎಂಬ ಪದದಿಂದ 'ಏನೋ ಮಾಡುತ್ತಿದ್ದಾನೆ' ಎಂಬ ಕ್ರಿಯಾಸಾಮಾನ್ಯಜ್ಞಾನವು ಬಂದಾಗ 'ಹೋಗುತ್ತಾನೋ, ಬರುತ್ತಾನೋ' ಎಂಬ ಕ್ರಿಯಾವಿಶೇಷದ ಜಿಜ್ಞಾಸೆಯು ಬರುತ್ತದೆ. ಅಂತಹ ಕ್ರಿಯಾವಿಶೇಷ ಗಳನ್ನು ಹೇಳಿದಾಗ ಆ ಆಕಾಂಕ್ಷೆಯು ಶಾಂತವಾಗುತ್ತದೆ. ಇದರಿಂದ 'ರಾಮ' ಎಂಬ ಶಬ್ದವು ವ್ಯಕ್ತಿಮಾತ್ರ ವಾಚಕವಲ್ಲ, ಕ್ರಿಯಾಸಾಮಾನ್ಯಾನ್ವಿತವ್ಯಕ್ತಿವಾಚಕ ಎಂದೇ ತಿಳಿಯುತ್ತದೆ. ಆದ್ದರಿಂದ ಎಲ್ಲಾ ಶಬ್ದಗಳು ಇತರಾನ್ವಿತಸ್ವಾರ್ಥ ವಾಚಕಗಳು, ಎನ್ನುವ ಅನ್ವಿತಾಭಿಧಾನವೇ ಯುಕ್ತವಾದುದು.

**ಅತೋಽನಂತಗುಣಾತ್ಮೈಕೋ ಭಗವಾನೇಕ ಏವ ತು ।**
**ಉಚ್ಯತೇ ಸರ್ವವೇದೈಶ್ಚ (ತೇ ಚಾಖಿಲವಿಲಕ್ಷಣಾಃ) ॥ ೧೯೫ ॥**

ಅತಃ=ಆದ್ದರಿಂದ ಅನಂತಗುಣಕಃ=ಅನಂತಗುಣಗಳುಳ್ಳ ಭಗವಾನ್ ಏಕ ಏವ=ಭಗವಂತನೊಬ್ಬನೇ ಸರ್ವವೇದೈಶ್ಚ=ಎಲ್ಲ ವೇದಗಳಿಂದಲೂ ಉಚ್ಯತೇ= ಹೇಳಲ್ಪಡುತ್ತಾನೆ.

ಭಾವಾರ್ಥ— ಉಭಯವ್ಯಪದೇಶಾಧಿಕರಣದಲ್ಲಿ ಹೇಳಿರುವಂತೆ ಭಗವಂತನಿಗೂ ಅವನ ಗುಣಗಳಿಗೂ ಅಭೇದವಿದ್ದರೂ ವಿಶೇಷವಿರುವುದರಿಂದ ಅನಂತವೇದಗಳು ಒಬ್ಬನೇ ಭಗವಂತನ ಅನಂತಗುಣಗಳನ್ನು ಹೇಳುತ್ತವೆ.

**ಇಲ್ಲಿಗೆ ಅಹಿಕುಂಡಲಾಧಿಕರಣ ಮುಗಿಯಿತು.**

## ಪರಮತೋಽಧಿಕರಣ

**'ಓಂ ಪರಮತಃ ಸೇತೂನ್ಮಾನಸಂಬಂಧಭೇದವ್ಯಪದೇಶೇಭ್ಯಃ ಓಂ'**

**(ಉಚ್ಯತೇ ಸರ್ವವೇದೈಶ್ಚ) ತೇ ಚಾಖಿಲವಿಲಕ್ಷಣಾಃ ।**
**ಸರ್ವೇ ಸರ್ವಗುಣಾತ್ಮಾನಃ ಸರ್ವಕರ್ತಾರ ಏವ ತು ॥ ೧೯೬ ॥**

ತೇ=ಆ ಎಲ್ಲ ಭಗವದ್ಗುಣಗಳು ಅಖಿಲವಿಲಕ್ಷಣಃ=ಗುಣಿಯಾದ ಭಗವಂತನಿಂದ ಅಭಿನ್ನವಾಗಿದೆ ಮಾತ್ರವಲ್ಲ ನಮ್ಮಲ್ಲಿರುವ ಜ್ಞಾನಾದಿ ಗುಣ ಗಳಿಗಿಂತ ವಿಲಕ್ಷಣಗಳೂ ಆಗಿವೆ. ಸರ್ವೇ=ಎಲ್ಲ ಗುಣಗಳೂ ಸರ್ವ ಗುಣಾತ್ಮಾನ=ಎಲ್ಲಾ ಗುಣರೂಪಗಳಾಗಿವೆ. ಜ್ಞಾನವು ಆನಂದಾತ್ಮಕವಾಗಿ, ಆನಂದವು ಜ್ಞಾನಾತ್ಮಕವಾಗಿದೆ. ಸರ್ವಕರ್ತಾರ ಏವ ತು=ಎಲ್ಲ ಗುಣಗಳು ಜಗತ್ಕರ್ತೃತ್ವಾದಿ ರೂಪಗಳೂ ಆಗಿವೆ. (ಕ್ರಿಯಾರೂಪಗಳೂ ಆಗಿವೆ)

**ತಥಾಪಿ ಸ ವಿಶೇಷಾಶ್ಚ ವಿದ್ವದ್ವ್ಯುತ್ಪತ್ತಿತೋಽಪಿ ಚ ।**
**ತೈಸ್ತೈಃ ಶಬ್ದೈಶ್ಚ ಭಣ್ಯಂತೇ ಯುಜ್ಯತೇ ಚೋಪದೇಶತಃ ॥ ೧೯೭ ॥**

ತಥಾಪಿ=ಭಗವಂತನ ಗುಣಗಳೆಲ್ಲವೂ ಪರಸ್ಪರ ಅಭಿನ್ನಗಳಾದರೂ ಸವಿಶೇಷಾಶ್ಚ=ವಿಶೇಷಗಳುಳ್ಳವುಗಳಾಗಿವೆ. ವಿದ್ವದ್ವ್ಯುತ್ಪತ್ತಿತಃ=ವಿದ್ವದ್

ರೂಢಿಯಿಂದಾಗಿ ತೈಃ ತೈಃ ಶಬ್ದೈಶ್ಚ=ಜ್ಞಾನ-ಆನಂದ ಮೊದಲಾದ ಶಬ್ದಗಳಿಂದ ಭಣ್ಯಂತೇ=ಭಗವಂತನ ಅಲೌಕಿಕಗುಣಗಳು ಹೇಳಲ್ಪಡುತ್ತವೆ. ಉಪದೇಶತಃ= ಭಗವಂತನನ್ನು ನೋಡಿದ ಜ್ಞಾನಿಗಳ ಉಪದೇಶದಿಂದ ಅಜ್ಞಾನಿಗಳಿಗೂ ಯುಜ್ಯತೇ=ಜ್ಞಾನಾದಿ ಶಬ್ದವ್ಯುತ್ಪತ್ತಿಯು ಕೊಡುತ್ತದೆ.

ಭಾವಾರ್ಥ— ಭಗವಂತನ ಗುಣಗಳಿಗೆ ಪರಸ್ಪರ ಅಭೇದವಿದೆ. ಅವನ ಜ್ಞಾನವೂ ಆನಂದ, ಕ್ರಿಯಾತ್ಮಕವಾಗಿದೆ. ಕ್ರಿಯೆಯೂ ಜ್ಞಾನಾನಂದಾತ್ಮಕ ವಾಗಿದೆ. ಆದರೂ ಅವುಗಳಿಗೆ ವಿಶೇಷವಿರುವುದರಿಂದ ಜ್ಞಾನ-ಆನಂದ ಮುಂತಾದ ಅಪರ್ಯಾಯ ಶಬ್ದವಾಚ್ಯತ್ವವು ಇದೆ.

'ಬುದ್ಧ್ಯರ್ಥಃ ಪಾದವತ್' ಎಂದು ಈ ಅಧಿಕರಣದ ಎರಡನೆಯ ಸೂತ್ರ. ಪರಮಾತ್ಮನ ಜ್ಞಾನಾದಿಗುಣಗಳು ಲೋಕವಿಲಕ್ಷಣಗಳಾದರೂ ಲೌಕಿಕವಾದ ಜ್ಞಾನಾದಿ ಶಬ್ದಗಳಿಂದಲೇ ಅವುಗಳನ್ನು ಕರೆಯಲಾಗುತ್ತದೆ. ಇಲ್ಲದಿದ್ದರೆ ಸಾಮಾನ್ಯರಿಗೆ ಅವುಗಳನ್ನು ತಿಳಿಸಲಾಗುವುದಿಲ್ಲ, ಎಂದು ಈ ಸೂತ್ರದ ಅರ್ಥ.

ಗುಣಗಳು ಅಲೌಕಿಕಗಳಾದರೆ ಅವುಗಳು ಕಣ್ಣಿಗೆ ಕಾಣುವುದಿಲ್ಲವಾದ ಕಾರಣ ಜ್ಞಾನಾದಿಶಬ್ದಗಳಿಗೆ ಭಗವಂತನ ಗುಣಗಳಲ್ಲಿ ಶಕ್ತಿಜ್ಞಾನ ಬರುವುದು ಹೇಗೆ? ಎಂದರೆ, ಜ್ಞಾನಿಗಳು ಭಗವಂತನ ಗುಣಗಳನ್ನು ಕಂಡು ಅವುಗಳಲ್ಲಿ ಜ್ಞಾನಾದಿಶಬ್ದವಾಚ್ಯತ್ವವನ್ನು ತಿಳಿಯುತ್ತಾರೆ. ಹೀಗೆ ತಾವು ವ್ಯುತ್ಪತ್ತಿಯನ್ನು ಪಡೆದು ದೇವರನ್ನು ನೋಡದ ಜ್ಞಾನಿಗಳಿಗೆ ಉಪದೇಶದ ಮೂಲಕ ಶಕ್ತಿಗ್ರಹವನ್ನು ಮಾಡಿಸುತ್ತಾರೆ.

**ಅನ್ಯಾನಂದಾದಿಸಾದೃಶ್ಯಮಾನುಕೂಲ್ಯಾದಿ ನಾಪರಮ್ ।**
**ಪೂರ್ಣತ್ವಾದಿ ಮಹತ್ ತೇಷಾಂ ವೈಲಕ್ಷಣ್ಯಂ ಶ್ರುತೌ ಶ್ರುತಮ್ ।।೧೯೮।**

ಅನ್ಯಾನಂದಾದಿ ಸಾದೃಶ್ಯಂ=ಲೌಕಿಕ ಆನಂದಾದಿ ಗುಣಗಳ ಸಾದೃಶ್ಯವು ಭಗವಂತನ ಆನಂದದಲ್ಲಿ ಆನುಕೂಲ್ಯಾದಿ=ನಿರುಪಾಧಿಕಪ್ರಿಯತ್ವ ನಾಪರಂ= ಇದರ ಹೊರತಾಗಿ ಅನ್ಯವಿಧವಾದ ಸಾದೃಶ್ಯ ಇಲ್ಲ. ತೇಷಾಂ=ಭಗವಂತನ ಗುಣಗಳಿಗೆ ಪೂರ್ಣತ್ವಾದಿ=ಪೂರ್ಣತ್ವವೇ ಮೊದಲಾದ ಮಹದ್

ವೈಲಕ್ಷಣ್ಯಂ=ದೊಡ್ಡ ವ್ಯತ್ಯಾಸವು ಶ್ರುತೌ=ಶ್ರುತಿಗಳಲ್ಲಿ ಶ್ರುತಂ= ತಿಳಿಯಲ್ಪಟ್ಟಿದೆ.

ಭಾವಾರ್ಥ— ಭಗವಂತನ ಗುಣಗಳು ಲೋಕವಿಲಕ್ಷಣಗಳಾದರೆ ಅವುಗಳು ಜ್ಞಾನ–ಆನಂದ ಮೊದಲಾದ ಶಬ್ದಗಳಿಂದ ವಾಚ್ಯವಾಗಿವೆ, ಎಂದು ತಿಳಿಯುವುದು ಹೇಗೆ? ಒಂದು ಗೋವನ್ನು ತೋರಿಸಿ ಹಿರಿಯರು 'ಇಯಂ ಗೌಃ' ಎಂದು ಉಪದೇಶ ಮಾಡಿದಾಗ ಸಾಸ್ನಾದಿಮತ್ವರೂಪಸಾದೃಶ್ಯದಿಂದ ಎಲ್ಲಾ ಹಸುಗಳಲ್ಲೂ ಗೋಶಬ್ದವಾಚ್ಯತ್ವಜ್ಞಾನವು ಬರುತ್ತದೆ. ಅದರಂತೆ, ನಮ್ಮ ಆನಂದಗತವಾದ ಧರ್ಮಗಳು ಈಶನ ಆನಂದದಲ್ಲೂ ಇದ್ದರೆ ಸಾದೃಶ್ಯಾತ್ ಅದರಲ್ಲೂ ಆನಂದಶಬ್ದವಾಚ್ಯತ್ವಜ್ಞಾನ ಬರಬಹುದು. ಸಾದೃಶ್ಯವೇ ಇಲ್ಲ ದಿದ್ದರೆ ಆನಂದ ಶಬ್ದವಾಚ್ಯತ್ವ ಜ್ಞಾನ ಹೇಗೆ?

ಸಾದೃಶ್ಯ ಇದೆ. ಭಗವಂತನ ಆನಂದವು ಲೋಕವಿಲಕ್ಷಣವಾದರೂ ಲೌಕಿಕಾನಂದದಲ್ಲಿರುವ ನಿರುಪಾಧಿಕಪ್ರಿಯತ್ವ ಎಂಬ ಧರ್ಮ ಅವನ ಆನಂದದಲ್ಲೂ ಇದೆ. ಇದೇ ಆನಂದ ಶಬ್ದಕ್ಕೆ ಪ್ರವೃತ್ತಿನಿಮಿತ್ತ. ಅದರಿಂದಾಗಿ ಅದೂ ಆನಂದ ಶಬ್ದವಾಚ್ಯವಾಗಿದೆ. ಆದರೂ ಆ ಆನಂದದಲ್ಲಿ ನಮ್ಮ ಆನಂದ ದಲ್ಲಿಲ್ಲದ ಪೂರ್ಣತ್ವಾದಿರೂಪವಾದ ವೈಲಕ್ಷಣ್ಯವನ್ನು ಶ್ರುತಿಯು ಹೇಳುತ್ತದೆ.

**''ಪೂರ್ಣೋಽಶೇಷನಿಯಂತಾ ಚ ಸುಖಾದುತ್ತ (ಸುಖಾದುತ) ಮ**
**ಏಕಲಃ ।**
**ಗುಣಾದಿ (ಗುಣೋರು) ಸಮುದಾಯೋಽಯಂ ವಾಸುದೇವಃ ಸು**
**(ಸ) ನಿಷ್ಕಲಃ ॥''**
**ವಾಸುದೇವಶ್ರುತಿಶ್ಚೈ (ಸ್ವೈ)ಷಾ ಗುಣಾನ್ ವಕ್ತಿ**
**ಹರೇಃ ಪರಾನ್ ॥ ೧೯ ।**

'ಅಯಂ=ಈ ಭಗವಂತನು ಪೂರ್ಣಃ=ಪೂರ್ಣನು ಅಶೇಷ ನಿಯಂತಾ ಚ=ಸಕಲ ನಿಯಾಮಕ, ಸುಸ್ವಾದುತಮಃ=ಮಿತಿಮೀರಿದ ಶುಭಾನಂದನು, ಗುಣೋರುಸಮುದಾಯಃ=ಶ್ರೇಷ್ಠವಾದ ಗುಣಸಮೂಹ ರೂಪನು, ಸುನಿಷ್ಕಲಃ=ವಿಭಿನ್ನಾಂಶರಹಿತನು.'

ಏಷಾ ವಾಸುದೇವಶ್ರುತಿಃ=ಈ ವಾಸುದೇವಶ್ರುತಿಯು, ಹರೇಃ= ವಿಷ್ಣುವಿಗೆ ಪರಾನ್ ಗುಣಾನ್=ಶ್ರೇಷ್ಠವಾದ ಗುಣಗಳನ್ನು ವಕ್ತಿ=ಹೇಳುತ್ತದೆ.

**ಇಲ್ಲಿಗೆ ಪರಮತೋಽಧಿಕರಣ ಮುಗಿಯಿತು.**

## ಫಲದಾನಾಧಿಕರಣ

**'ಓಂ ಫಲಮತ ಉಪಪತ್ತೇಃ ಓಂ'**

**ಸ ಏವಾಶೇಷಜೀವಸ್ಥ ನಿಃಸಂಖ್ಯಾನಾದಿಕಾಲಿಕಾನ್ ।**
**ಧರ್ಮಾಧರ್ಮಾನ್ ಸದಾ ಪಶ್ಯನ್ ಸ್ವೇಚ್ಛಯಾ ಬೋಧಯತ್ಯಜಃ**
**॥ ೨೦೦ ॥**

**ಕಾಂಶ್ಚಿತ್ ತೇಷಾಂ ಫಲಂ ಚೈವ ದದಾತಿ ಸ್ವಯಮಚ್ಯುತಃ ।**
**ನ ತೇ ವಿಶೇಷಂ ಕಮಪಿ ಪ್ರೇರಣಾದಿಕಮಚ್ಯುತೇ ।**
**ಕುರ್ಯುಃ ಕದಾಽಪಿ, ತೇನಾಯಂ ಸ್ವತಂತ್ರೋಽನುಪಚಾರತಃ ॥೨೦೧॥**

ಸ ಏವ ಅಜಃ=ಆ ಪರಮಾತ್ಮನೇ ಅಶೇಷಜೀವಸ್ಥ-ನಿಃಸಂಖ್ಯಾನ್ ಅನಂತಜೀವರಲ್ಲಿರುವ ಅಸಂಖ್ಯಾತವಾದ ಅನಾದಿಕಾಲಿಕಾನ್=ಅನಾದಿ ಕಾಲೀನವಾದ ಧರ್ಮಾಧರ್ಮಾನ್=ಪುಣ್ಯ-ಪಾಪಗಳನ್ನು ಸದಾ= ಯಾವಾಗಲೂ ಪಶ್ಯನ್=ನೋಡುತ್ತಾ ಸ್ವೇಚ್ಛಯಾ=ತನ್ನ ಇಚ್ಛೆಯಂತೆ ಕಾಂಶ್ಚಿತ್=ಕೆಲವೊಂದು ಕರ್ಮಗಳನ್ನು ಬೋಧಯಿತಿ=ಆ ಕರ್ಮಗಳು ಫಲನೀಡುವಂತೆ ಪ್ರೇರಿಸುತ್ತಾನೆ. ಅಚ್ಯುತಃ=ಪರಮಾತ್ಮನೇ ಸ್ವಯಮೇವ= ತಾನೇ ತೇಷಾಂ ಫಲಂ ದದಾತಿ=ಆ ಕರ್ಮಗಳ ಫಲವನ್ನು ಕೊಡುತ್ತಾನೆ. ತೇ=ಆ ಕರ್ಮಗಳು ಕಮಪಿ=ಯಾವುದೇ ರೀತಿಯ ಪ್ರೇರಣಾದಿಕಂ ವಿಶೇಷಂ=ಪ್ರೇರಣಾದಿರೂಪವಾದ ವಿಶೇಷವನ್ನು ಕದಾಪಿ=ಎಂದೂ, ನ ಕುರ್ಯುಃ=ಮಾಡಲಾರವು. ತೇನ=ಆದ್ದರಿಂದ ಅಯಂ=ಈ ಪರಮಾತ್ಮನು ಅನುಪಚಾರತಃ ಸ್ವತಂತ್ರಃ=ನಿರುಪಚರಿತವಾದ ಸ್ವಾತಂತ್ರ್ಯವುಳ್ಳವನು.

ಭಾವಾರ್ಥ— ಈ ಅಧಿಕರಣದಲ್ಲಿ ಸ್ವರ್ಗ–ನರಕಾದಿಫಲಗಳನ್ನು ಭಗವಂತನೇ ಕೊಡುತ್ತಾನೆ, ಎನ್ನಲಾಗಿದೆ. ವ್ಯಾಸರ ಶಿಷ್ಯರಾದ ಜೈಮಿನಿಗಳು ಪುಣ್ಯ–ಪಾಪಗಳೇ ಫಲ ನೀಡುತ್ತವೆ, ಈಶ್ವರನ ಅಗತ್ಯವಿಲ್ಲ ಎನ್ನುತ್ತಾರೆ. ಅದಕ್ಕೆ ವ್ಯಾಸರು 'ಪೂರ್ವಂ ತು ಬಾದರಾಯಣಃ ಹೇತುವ್ಯಪದೇಶಾತ್' ಎಂಬ ಸೂತ್ರದಲ್ಲಿ ಧರ್ಮಾದಿಗಳಂತೆ ಈಶ್ವರನೂ ಫಲದಾತೃ ಎಂದು ಶ್ರುತಿಗಳಲ್ಲಿ ಹೇಳಿರುವುದರಿಂದ ಕರ್ಮಗಳನ್ನು ಅವಲಂಬಿಸಿ ಅದಕ್ಕೆ ಅನುಗುಣವಾದ ಫಲವನ್ನು ಈಶನೇ ಕೊಡುತ್ತಾನೆ, ಎಂದಿದ್ದಾರೆ. ಇದರಿಂದ ಈಶನಿಗೆ ನಿರುಪಚರಿತ ಸ್ವಾತಂತ್ರ್ಯ ಇಲ್ಲವೆಂದಂತೆ ತೋರುತ್ತದೆ. ಅದಕ್ಕಾಗಿ ಅನುವ್ಯಾಖ್ಯಾನದಲ್ಲಿ, ಈಶ್ವರನು ತಾನೇ ಸ್ವತಂತ್ರವಾಗಿ ಸ್ವರ್ಗ–ನರಕಾದಿ ಫಲಗಳನ್ನು ಕೊಡಲು ಸಮರ್ಥನಾದರೂ ವೈಷಮ್ಯಾದಿದೋಷಪರಿಹಾರಕ್ಕಾಗಿ ಕರ್ಮಗಳನ್ನು ಸ್ವೇಚ್ಛಯಾ ಅವಲಂಬಿಸುತ್ತಾನೆ. ಇದರಿಂದ ಕರ್ಮಫಲ ಬೋಧಕವಾದ ವೇದದ ಪ್ರಾಮಾಣ್ಯವೂ ಸಿದ್ಧವಾಗುತ್ತದೆ, ಎಂದು ಹೇಳಲಾಗಿದೆ.

**ಕರ್ಮಗಳೂ ಚೇತನಾಧಿಷ್ಠಿತಗಳು**

**ಕರ್ಮಾಣಿ ತಾನಿ ಚ ಪೃಥಕ್ ಚೇತನಾನ್ಯೇವ ಸರ್ವಶಃ ।**
**ಅಚೇತನಶರೀರಾಣಿ ಸ್ವಕರ್ಮಫಲಭಾಂಜಿ ಚ ॥ ೨೦೨ ॥**

**ಪ್ರತ್ಯೇಕಂ ತೇಷು ಚಾನಂತಕರ್ಮಾಣ್ಯೇವಂವಿಧಾನಿ ಚ ।**
**ತಾನಿ ಚೈವಮಿತೀಶಸ್ಯ ನಿಃಸೀಮಾ ಶಕ್ತಿರುತ್ತಮಾ ॥ ೨೦೩ ॥**

ತಾನಿ ಕರ್ಮಾಣಿ ಚ ಸರ್ವಶಃ=ಅಶೇಷ ಜೀವರಲ್ಲಿ ಇರುವ ಕರ್ಮಗಳೆಲ್ಲವೂ ಪೃಥಕ್=ಒಂದೊಂದೂ ಅಚೇತನಶರೀರಾಣಿ=ಜಡವಾದ ಕರ್ಮವೆಂಬ ದೇಹವುಳ್ಳ, ಸ್ವಕರ್ಮಫಲಬಾಂಜಿ ಚ=ತಮ್ಮ ತಮ್ಮ ಕರ್ಮಗಳ ಫಲವನ್ನು ಅನುಭವಿಸುವ ಚೇತನಾನ್ಯೇವ=ಚೇತನಗಳೇ ಆಗಿವೆ. ತೇಷು=ಆ ಕರ್ಮಾಧಿಷ್ಠಿತ ಜೀವರಲ್ಲೂ ಏವಂ ವಿಧಾನಿ=ಇದೇ ರೀತಿ ಚೇತನಾಧಿಷ್ಠಿತವಾದ ಅನಂತಕರ್ಮಾಣಿ=ಅನಂತಕರ್ಮಗಳಿವೆ. ತಾನಿ ಚ=ಆ ಕರ್ಮಗಳೂ ಏವಂ=ಹೀಗೆಯೇ ಚೇತನಾಧಿಷ್ಠಿತಗಳಾಗಿವೆ. ಇತಿ=ಹೀಗೆ ಅನಂತಕರ್ಮಗಳ

ಪ್ರತ್ಯಕ್ಷ ಇರುವ ಈಶಸ್ಯ=ಪರಮಾತ್ಮನ ಶಕ್ತಿಃ=ಸಾಮರ್ಥ್ಯವು ಉತ್ತಮಾ= ಪ್ರತಿಬಂಧಕಗಳಾವುವೂ ಇಲ್ಲದ ಕಾರಣ ಉತ್ತಮವಾಗಿದೆ.

**ಭಾವಾರ್ಥ**— ಈ ಪಾದದ ಎಲ್ಲ ಅಧಿಕರಣಗಳಲ್ಲಿ ಹೇಳಿರುವ ಭಗವಂತನ ಮಹಿಮೆಯ ಜ್ಞಾನದಿಂದಲೇ ಪರಮಾತ್ಮನಲ್ಲಿ ಗೌರವಭಾವ ಬರಬೇಕಾಗಿಲ್ಲ. ಅನಂತಕರ್ಮಗಳು, ಆ ಕರ್ಮಗಳ ದರ್ಶನ, ಅವುಗಳ ಪ್ರೇರಣೆ, ಅವುಗಳಿಗೆ ಅನುಗುಣವಾಗಿ ಫಲದಾನ ಇವುಗಳಿಂದಲೇ ಅವನಲ್ಲಿ ಗೌರವಭಾವ ಬೆಳೆಯುತ್ತದೆ. ನಮ್ಮಲ್ಲಿ ಅನಂತ, ಜಡರೂಪವಾದ ಪುಣ್ಯ-ಪಾಪ ಗಳಿವೆ. ಅವುಗಳು ಒಂದೊಂದೂ ಒಬ್ಬೊಬ್ಬ ಜೀವರಿಗೆ ಶರೀರವಾಗಿವೆ. ಆ ಜೀವರಿಗೂ ಅನಂತಕರ್ಮಗಳಿವೆ. ಅವುಗಳ ಒಳಗೂ ಮತ್ತೆ ಜೀವರಿದ್ದಾರೆ. ಹೀಗೆ ಒಬ್ಬ ಜೀವನನ್ನು ಪರಿಗಣಿಸಿದರೂ ಸಾಕು. ಆ ಜೀವನ ಕರ್ಮಗಳ ಪ್ರತ್ಯಕ್ಷ. ಅದರೊಳಗಿನ ಜೀವರ ಕರ್ಮಗಳ ಪ್ರತ್ಯಕ್ಷಗಳು ಪರಮಾತ್ಮನಿಗೆ ಇವೆ. ಇದೇ ರೀತಿ ಅನಂತಜೀವರನ್ನು ಪರಿಗಣಿಸಿದಾಗ ಈಶ್ವರನ ಮಹಿಮೆ ಎಷ್ಟೆಂದು ಊಹಿಸಬಹುದು. ಇದು ಈ ಅನುವ್ಯಾಖ್ಯಾನದ ಅಭಿಪ್ರಾಯ.

**ಏಕೈವ ಬ್ರಹ್ಮಹತ್ಯಾ ಹಿ ವರಾಹಹರಿಣೋದಿತಾ ।**
**ಬ್ರಹ್ಮಪಾರಸ್ತವೇನೈವ ನಿಷ್ಕ್ರಾಂತಾ ರಾಜದೇಹತಃ ॥ ೨೦೪ ॥**

**ಸ್ತೋತ್ರಸ್ಯ ತಸ್ಯ ಮಾಹಾತ್ಮ್ಯಾದ್ ವ್ಯಾಧತ್ವಂ ಗಮಿತಾ ಪುನಃ ।**
**ಪ್ರಾಪ್ಯ ಜ್ಞಾನಂ ಪರಂ ಚಾಪ ತಥಾನ್ಯಾನ್ಯಪಿ ಸರ್ವಶಃ(ದಾ) ॥ ೨೦೫ ॥**

**ಅನಂತಾನ್ಯುದಿತಾನ್ಯೇವಂ ಪ್ರಭುಣಾ ಕಪಿಲೇನ ಹಿ ।**
**ಸಂಸಾರೇ ಪಚ್ಯಮಾನಾನಿ ಕರ್ಮಾಣ್ಯಪಿ ಪೃಥಕ್‌ಪೃಥಕ್ ॥ ೨೦೬ ॥**

ಏಕೈವ=ಒಂದೇ ಬ್ರಹ್ಮಹತ್ಯಾ=ಬ್ರಹ್ಮಹತ್ಯಾಪಾಪವು ವರಾಹಹರಿಣಾ= ವರಾಹರೂಪಿಯಾದ ಶ್ರೀಹರಿಯಿಂದ ವರಾಹಪುರಾಣದಲ್ಲಿ ಉದಿತಾ= ಚೇತನರೂಪವೆಂದು ಹೇಳಲ್ಪಟ್ಟಿದೆ.

ಬ್ರಹ್ಮಪಾರಸ್ತವೇನೈವ=ಬ್ರಹ್ಮಪಾರಸ್ತೋತ್ರದಿಂದಲೇ (ಪುಂಡರೀಕಾಕ್ಷ

ಸ್ತೋತ್ರ) ರಾಜದೇಹತಃ=ವಸುರಾಜನ ದೇಹದಿಂದ ನಿಷ್ಕ್ರಾಂತಾ ಹೊರಬಂದ ಬ್ರಹ್ಮತ್ಯಾಪಾಪವು ತಸ್ಯಸ್ತೋತ್ರಸ್ಯ ಮಾಹಾತ್ಮ್ಯಾತ್=ಆ ಸ್ತೋತ್ರದ ಸಾಮರ್ಥ್ಯದಿಂದ ವ್ಯಾಧತ್ವಂ ಗಮಿತಾ=ವ್ಯಾಧ ಜನ್ಮವನ್ನು ಹೊಂದಿದ್ದಾಗಿ ಪುನಃ=ಮತ್ತೆ ಜ್ಞಾನಂ ಪ್ರಾಪ್ಯ=ಬ್ರಹ್ಮಜ್ಞಾನವನ್ನು ಪಡೆದು ಪರಂ ಚ ಆಪ=ಪರಮಾತ್ಮನನ್ನು ಹೊಂದಿದ ತಥಾ=ಅದರಂತೆ ಇನ್ನೂ ಬೇರೆ ಇತಿಹಾಸಗಳಲ್ಲಿ ಅನ್ಯಾನ್ಯಪಿ=ಬ್ರಹ್ಮಹತ್ಯೆಗಿಂತ ಬೇರೆಯಾದ ಸರ್ವಶಃ=ಎಲ್ಲಾ ಅನಂತಾನಿ=ಅನೇಕ ಪಾಪಗಳೂ ಏವಂ=ಚೇತನರೂಪಗಳೆಂದು, ಪ್ರಭುಣಾ ಕಪಿಲೇನ=ಪ್ರಭುವಾದ ಕಪಿಲನಿಂದ ಉದಿತಾನಿ=ಹೇಳಲ್ಪಟ್ಟಿವೆ. ಸಂಸಾರೇ= ಸಂಸಾರದಲ್ಲಿ ಪೃಥಕ್ ಪೃಥಕ್=ಬೇರೆಬೇರೆ ವಿಧದ ಕರ್ಮಾಣಿ=ಕರ್ಮಗಳು ಪಚ್ಯಮಾನಾನಿ=ಪಕ್ವಾವಸ್ಥೆಯನ್ನು ಹೊಂದುತ್ತವೆ. ಹಿ=ಇದು ಪರಮಸಾಂಖ್ಯದಲ್ಲಿ ಪ್ರಸಿದ್ಧವಾಗಿದೆ.

ಭಾವಾರ್ಥ— ವರಹಾಪುರಾಣದಲ್ಲಿ (3ನೇ ಅಧ್ಯಾಯ) ವಸುರಾಜನ ಚರಿತ್ರೆಯಲ್ಲಿ ಬಂದ ಘಟನೆ ಹೀಗಿದೆ— ''ಒಮ್ಮೆ ರಾಜ ಬೇಟೆಗೆ ಹೋದಾಗ ಜಿಂಕೆಯ ರೂಪದಲ್ಲಿದ್ದ ಒಬ್ಬ ಋಷಿಗೆ ಗೊತ್ತಿಲ್ಲದೆ ಬಡಿಗೆ ಬೀಸಿ ಕೊಂದ. ಅದರಿಂದ ಬ್ರಹ್ಮಹತ್ಯಾಪಾಪಕ್ಕೆ ಒಳಗಾದ. ಕೊನೆಗೊಮ್ಮೆ ಪುಂಡರೀಕಾಕ್ಷ ಸ್ತೋತ್ರವನ್ನು ಭಕ್ತಿಯಿಂದ ಪಠಿಸಿದ. ಅವನಲ್ಲಿ ಅದುವರೆಗೂ ಸೇರಿಕೊಂಡ್ದ ಬ್ರಹ್ಮಹತ್ಯೆಯ ಪಾಪವು ವ್ಯಾಧರೂಪದಿಂದ ಅವನ ಮುಂದೆ ನಿಂತಿತು.'' ಈ ಘಟನೆಯನ್ನು ವರಾಹರೂಪದ ಶ್ರೀಹರಿಯು ಧರಣೀದೇವಿಗೆ ಹೇಳಿದ್ದಾನೆ. ಇದರಿಂದ ಬ್ರಹ್ಮಹತ್ಯಾ ಎಂಬ ಜಡವಾದ ಪಾಪವನ್ನು ಶರೀರವನ್ನಾಗಿ ಮಾಡಿಕೊಂಡು ಒಬ್ಬ ಚೇತನ ಇದ್ದ, ಎಂದು ತಿಳಿಯುತ್ತದೆ.

ಅದರಂತೆ, ಪರಮಸಾಂಖ್ಯದರ್ಶನದಲ್ಲಿ ಕಪಿಲರೂಪದ ಪರಮಾತ್ಮನು ಅನೇಕ ಪಾಪಗಳು ಸಂಸಾರದಲ್ಲಿ ಬಿದ್ದು ಪರಿಪಕ್ವಾವಸ್ಥೆಗೆ ಬರುತ್ತವೆ, ಎಂದು ಹೇಳಿದ್ದಾನೆ.

ಇದರಿಂದ ಪುಣ್ಯ-ಪಾಪಗಳು ಚೇತನಾಧಿಷ್ಠಿತವಾಗಿವೆ, ಎಂದು ತಿಳಿಯುತ್ತದೆ.

**ಪಾದದ ಉಪಸಂಹಾರ**

**ತಸ್ಮಾದನಂತಮಾಹಾತ್ಮ್ಯಗುಣಪೂರ್ಣೋ(ಗೋ) ಜನಾರ್ದನಃ ।**
**ಭಕ್ತ್ಯಾ ಪರಮಯಾಽರಾಧ್ಯ ಇತಿ ಪಾದಾರ್ಥ ಈಯತೇ ॥ ೨೦೭ ॥**

ತಸ್ಮಾತ್=ಆದ್ದರಿಂದ ಜನಾರ್ದನಃ=ಪರಮಾತ್ಮನು ಅನಂತಮಾಹಾತ್ಮ್ಯ ಗುಣಪೂರ್ಣಃ=ಅಪರಿಮಿತವಾದ ಶಕ್ತಿ ಮತ್ತು ಗುಣಗಳಿಂದ ಪೂರ್ಣನಾಗಿದ್ದಾನೆ. ಅವನೇ ಪರಮಯಾ ಭಕ್ತ್ಯಾ=ಪರಮಭಕ್ತಿಯಿಂದ ಆರಾಧ್ಯಃ= ಉಪಾಸ್ಯನು ಇತಿ=ಹೀಗೆ ಪಾದಾರ್ಥಃ=ಈ ಎರಡೆಯ ಭಕ್ತಿಪಾದದ ಅರ್ಥವು.

**ಇಲ್ಲಿಗೆ ಮೂರನೇ ಅಧ್ಯಾಯದ ಎರಡನೆಯ ಪಾದ ಮುಗಿಯಿತು.**

॥ ಶ್ರೀವೇದವ್ಯಾಸೋ ವಿಜಯತೇ ॥

ಶ್ರೀಮದಾನಂದತೀರ್ಥಭಗವತ್ಪಾದರು ರಚಿಸಿದ

# ಶ್ರೀಮದನುವ್ಯಾಖ್ಯಾನ

## ಮೂರನೆಯ ಅಧ್ಯಾಯದ ಮೂರನೇ ಪಾದ

## ಉಪಾಸನಾಪಾದ

**ಓಂ॥ ವೈರಾಗ್ಯತೋ ಭಕ್ತಿದಾರ್ಢ್ಯಂ ತೇನೋಪಾಸಾ ಯದಾ ಭವೇತ್ ।**
**ಆಪರೋಕ್ಷ್ಯಂ ತಯಾ ವಿ (ಭವೇದ್ ವಿ)ಷ್ಣೋರಿತಿ ಪಾದಕ್ರಮೋ ಭವೇತ್ ॥೧॥**

ವೈರಾಗ್ಯತಃ=ವಿಷಯಗಳಲ್ಲಿ ವೈರಾಗ್ಯದಿಂದಾಗಿ ಭಕ್ತಿದಾರ್ಢ್ಯಂ=ಭಕ್ತಿಯಲ್ಲಿ ದೃಢತೆಯು ಆಗುತ್ತದೆ. ತೇನ=ದೃಢಭಕ್ತಿಯಿಂದ ಉಪಾಸಾ=ಧ್ಯಾನವು ಯದಾ ಭವೇತ್=ಯಾವಾಗ ಆಗುವುದೋ ಆಗ ವಿಷ್ಣೋಃ=ವಿಷ್ಣುವಿನ ಆಪರೋಕ್ಷ್ಯಂ=ಅಪರೋಕ್ಷಜ್ಞಾನವು ಭವೇತ್=ಆಗುತ್ತದೆ. ಇತಿ=ಹೀಗೆ ಪಾದಕ್ರಮಃ=ಈ ಅಧ್ಯಾಯದ ಪಾದಗಳ ಕ್ರಮವು ಭವೇತ್=ಇದೆ.

ಭಾವಾರ್ಥ— ತೃತೀಯಾಧ್ಯಾಯ ಸಾಧನಾಧ್ಯಯ. ಮೋಕ್ಷಕ್ಕೆ ಪ್ರಧಾನ ಸಾಧನ ಭಗವಂತನ ಪ್ರಸಾದ. ಪ್ರಸಾದಕ್ಕೆ ಅಪರೋಕ್ಷಜ್ಞಾನವು ಸಾಧನ. ಆದಕ್ಕೆ ಧ್ಯಾನ, ಧ್ಯಾನಕ್ಕೆ ಭಕ್ತಿ, ಭಕ್ತಿಗೆ ವೈರಾಗ್ಯ. ಹೀಗೆ ವೈರಾಗ್ಯ, ಭಕ್ತಿ, ಉಪಾಸನಾ, ಅಪರೋಕ್ಷ ಈ ನಾಲ್ಕು ಮೋಕ್ಷಹೇತುವಾದ ಭಗವತ್ಪ್ರಸಾದಕ್ಕೆ ಕಾರಣವಾಗಿವೆ.

**ಅಧ್ಯಾಯಾರ್ಥ ಸಂಗ್ರಹ**

**ಯುಕ್ತಿತೋ ಜ್ಞಾತವೇದಾರ್ಥೋ ನಿರಸ್ಯ ಸಮಯಾನ್ ಪರಾನ್ ।**
**ಪರಸ್ಪರವಿರೋಧಂ ಚ ಪ್ರಣುದ್ಯಾಶೇಷವಾಕ್ಯಗಮ್ ॥ ೨ ॥**

ಅಧ್ಯಾತ್ಮಪ್ರವಣೋ ಭೂತ್ವಾ ತಸ್ಯ ಸನ್ನಿಹಿತತ್ವತಃ ।
ಬಹುಯುಕ್ತಿವಿರೋಧಾನಾಂ ಭಾನಾತ್ ತತ್ಸಹಿತಶ್ರುತೇಃ ॥ ೩ ॥

ವಿರೋಧಂ ಚ ನಿರಾಕೃತ್ಯ ಶ್ರುತೀನಾಂ ಪ್ರಾಣತತ್ವಗಾನ್ ।
ಪರಿಹೃತ್ಯ ವಿರೋಧಾಂಶ್ಚ ತತ್ಪ್ರಸಾದಾನುರಂಜಿತಃ ॥ ೪ ॥

ದೇಹಕರ್ತೃತ್ವಮೀಶಸ್ಯ ಜ್ಞಾತ್ವಾ ತತ್ಪಿತೃತಾಸ್ಮೃತೇಃ ।
ವಿಶೇಷಸ್ನೇಹಮಾಪಾದ್ಯ ಸರ್ವಕರ್ತೃತ್ವತೋಽಧಿಕಮ್ ॥ ೫ ॥

ನಿಷ್ಪಾದ್ಯ ಬಹುಮಾನಂ ಚ ತದನ್ಯತ್ರಾತಿದುಃಖತಃ ।
ಉತ್ಪಾದ್ಯಾಧಿಕವೈರಾಗ್ಯಂ ತದ್ಗುಣಾಧಿಕ್ಯವೇದನಾತ್ ॥ ೬ ॥

ಸರ್ವಸ್ಯ ತದ್ವಶತ್ವಾಚ್ಚ ದಾರ್ಢ್ಯಂ ಭಕ್ತೇರವಾಪ್ಯ ಚ ।
ಯತೇತೋಪಾಸನಾಯೈವ ವಿಶಿಷ್ಟಾಚಾರ್ಯಸಂಪದಾ ॥ ೭ ॥

ಯುಕ್ತಿತಃ=ಬ್ರಹ್ಮಸೂತ್ರಗಳಲ್ಲಿ ಹೇಳಿರುವ ಯುಕ್ತಿಗಳನ್ನು ಅರಸಿ ಜ್ಞಾತ ವೇದಾರ್ಥಃ=ಸಕಲವೇದಗಳಿಂದಲೂ ವಿಷ್ಣುವೇ ಮುಖ್ಯಪ್ರತಿಪಾದ್ಯ ಎಂದು ತಿಳಿದವನಾಗಿ (ಇದು ಪ್ರಥಮಾಧ್ಯಾಯದ ತಾತ್ಪರ್ಯಾರ್ಥ)

ಯುಕ್ತಿತಃ=ವೇದಾರ್ಥಗಳಿಗೆ ವಿರುದ್ಧವಾದ ಯುಕ್ತಿಗಳನ್ನು ನಿರಾಕರಿಸಿ (ಲ್ಯಬ್‌ಲೋಪೇ ಪಂಚಮಿ–ಯುಕ್ತೀಃ ನಿರಾಕೃತ್ಯ) ಇದು ದ್ವಿತೀಯಾಧ್ಯಾಯದ ಮೊದಲ ಪಾದದ ಅರ್ಥ.

ಪರಾನ್=ವೈಷ್ಣವಾತಿರಿಕ್ತವಾದ ಸಮಯಾನ್=ಸಾಂಖ್ಯಾದಿ ಸಿದ್ಧಾಂತಗಳನ್ನು ನಿರಸ್ಯ=ನಿರಾಕರಿಸಿ (ದ್ವಿತೀಯಾಧ್ಯಾಯದ ದ್ವಿತೀಯ ಪಾದದ ಅರ್ಥ.)

ಅಶೇಷವಾಕ್ಯಗಂ=ಸಕಲವೇದವಾಕ್ಯಗಳಲ್ಲೂ ಆಪಾತತಃ ಇರುವ ಪರಸ್ಪರವಿರೋಧಂ=ಅನ್ಯೋನ್ಯವಿರೋಧವನ್ನು ಪರಾಣುದ್ಯ=ನಿರಾಕರಿಸಿ (ತೃತೀಯ, ಚತುರ್ಥ ಪಾದಗಳ ಅರ್ಥ.)

ಅಧ್ಯಾತ್ಮಪ್ರವಣೋ ಭೂತ್ವಾ=ಆತ್ಮನಿಗೆ ಸಂಬಂಧಸಿರುವ ದೇಹೇಂದ್ರಿ ಯಾದಿಗಳಲ್ಲಿ 'ಪ್ರವಣ'ನಾಗಿ ತಸ್ಯ=ದೇಹೇಂದ್ರಿಯಗಳ ವಿಚಾರಕ್ಕೆ ಸನ್ನಿಹಿತತ್ವತಃ=ಬಂಧ-ಮೋಕ್ಷಗಳಿಗೆ ಅಂತರಂಗದ ಸಾಧನತ್ವ ಇರುವುದರಿಂದ ಬಹುಯುಕ್ತಿವಿರೋಧಾನಾಂ ಭಾನಾತ್=ಅನೇಕ ಯುಕ್ತಿಗಳ ವಿರೋಧವು ಶ್ರುತಿಗಳಿಗೆ ಕಾಣುವುದರಿಂದಾಗಿ ತತ್‌ಸಹಿತಶ್ರುತೇಃ=ಯುಕ್ತಿಸಹಿತವಾದ ಶ್ರುತಿಗಳ ವಿರೋಧಂ ಚ=ವಿರೋಧವನ್ನೂ ನಿರಾಕೃತ್ಯ=ನಿರಾಕರಿಸಿ. (ಮೂರನೆಯ ಪಾದದಲ್ಲಿ ಶ್ರುತಿವಿರೋಧ ಪರಿಹಾರ ನಾಲ್ಕನೆಯ ಪಾದದಲ್ಲಿ ಯುಕ್ತಿಯುಕ್ತಶ್ರುತಿವಿರೋಧ ಪರಿಹಾರ.)

ಮೂರನೆಯ ಮತ್ತು ನಾಲ್ಕನೆಯ ಎರಡೂ ಪಾದಗಳಲ್ಲಿ ಶ್ರುತಿಗಳ ಪರಸ್ಪರ ವಿರೋಧವನ್ನು ಪರಿಹಾರ ಮಾಡಿದ್ದರೂ ಅವೆರಡರಲ್ಲಿ ಅಲ್ಪ ವ್ಯತ್ಯಾಸವೂ ಇದೆ. ಮೂರನೆಯ ಪಾದದಲ್ಲಿ ಕೇವಲ ಶ್ರುತಿವಿರೋಧ ಪರಿಹಾರ, ನಾಲ್ಕನೆಯ ಪಾದದಲ್ಲಿ ಯುಕ್ತಿಯುಕ್ತ ಶ್ರುತಿವಿರೋಧದ ಪರಿಹಾರ. ನಾಲ್ಕನೆಯ ಪಾದದಲ್ಲಿ ಇಂದ್ರಿಯ, ದೇಹಾದಿಗಳ ಬಗ್ಗೆ ಇರುವ ಶ್ರುತಿಗಳ ವಿರೋಧವನ್ನು ಪರಿಹರಿಸಲಾಗಿದೆ. ಅವುಗಳು ನಮ್ಮ ಅನುಭವ ಸಿದ್ಧಗಳಾಗಿದ್ದು ಆಯುಕ್ತಿಗಳು ಅನುಭವಾಧಾರಿತವಾಗಿವೆ. ಅಂತಹ ಪ್ರಬಲ ಯುಕ್ತಿಯುಕ್ತಶ್ರುತಿಗಳ ವಿರೋಧವನ್ನು ಪರಿಹರಿಸಲಾಗಿದೆ. ದೇಹೇಂದ್ರಿ ಯಾದಿಗಳ ಯಥಾರ್ಥಜ್ಞಾನ ಮೋಕ್ಷಸಾಧನ, ಅಯಥಾರ್ಥ ಜ್ಞಾನ ಸಂಸಾರ ಬಂಧಕ್ಕೆ ಸಾಧನ. ಹೀಗೆ ಬಂಧ-ಮೋಕ್ಷಗಳಿಗೆ ಅಂತರಂಗ ಸಾಧನಗಳಾದುದ ರಿಂದ ಆ ವಿಚಾರವನ್ನು ನಾಲ್ಕನೆಯ ಪಾದದಲ್ಲಿ ಮಾಡಲಾಗಿದೆ. ಇದನ್ನು 'ತಸ್ಯಸನ್ನಿಹಿತತ್ವತಃ' ಎಂದು ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ.

ಶ್ರುತೀನಾಂ=ವೇದಗಳ ಪ್ರಾಣತತ್ತ್ವಗಾನ್=ಮುಖ್ಯಪ್ರಾಣತತ್ತ್ವಕ್ಕೆ ಸಂಬಂಧಿಸಿರುವ ವಿರೋಧಾಂಶ್ಚ=ವಿರೋಧಗಳನ್ನು ಪರಿಹೃತ್ಯ=ಪರಿಹರಿಸಿ (ನಾಲ್ಕನೆಯ ಪಾದದಲ್ಲಿ) ತತ್‌ಪ್ರಸಾದಾನುರಂಜಿತಃ=ಆ ಮುಖ್ಯಪ್ರಾಣನ ಪ್ರಸಾದದಿಂದ ಕೂಡಿದವನಾಗಿ (ಸಾಧಕನು)

'ಅಧ್ಯಾತ್ಮಪ್ರವಣೋ ಭೂತ್ವಾ' ಎಂದುದರಿಂದಲೇ ಇಂದ್ರಿಯಗಳ

ಪ್ರೇರಕನಾದ ಮುಖ್ಯಪ್ರಾಣನ ನಿರೂಪಣೆಯೂ ಚತುರ್ಥಪಾದದಲ್ಲಿ ತಿಳಿಯಲ್ಪಟ್ಟರೂ ಮತ್ತೆ 'ಪ್ರಾಣತತ್ತ್ವಗಾನ್ ವಿರೋಧಾನ್ ಪರಿಹೃತ್ಯ' ಎಂದಿರುವುದು ಜಿಜ್ಞಾಸೆಗೆ ಮುಖ್ಯಪ್ರಾಣನ ವಿಶೇಷಾನುಗ್ರಹವೂ ಆಗತ್ಯ ಎನ್ನುವುದನ್ನು ತಿಳಿಸುವುದಕ್ಕಾಗಿ. ಅದನ್ನು 'ತತ್ಪ್ರಸಾದಾನುರಂಜಿತಃ' ಎಂಬ ಪದವು ತಿಳಿಸುತ್ತದೆ.

ದೇಹಕರ್ತೃತ್ವಂ=ನಮ್ಮ ದೇಹದ ನಿರ್ಮಾಣಕರ್ತೃತ್ವವನ್ನು ಈಶಸ್ಯ= ಭಗವಂತನಿಗೆ ಜ್ಞಾತ್ವಾ=ತಿಳಿದು, (ಇದು 'ಸಂಜ್ಞಾಮೂರ್ತಿ' ಎಂಬ ಅಧಿಕರಣದ ಅರ್ಥ.)

ಸರ್ವಕರ್ತೃತ್ವತಃ=ಎಲ್ಲದಕ್ಕೂ ಕರ್ತೃವಾದ್ದರಿಂದ ಈಶನಲ್ಲಿ ಅಧಿಕಂ ಬಹುಮಾನಂ=ಹೆಚ್ಚಿನ ಗೌರವವನ್ನು ನಿಷ್ಪಾದ್ಯ=ಹುಟ್ಟಿಸಿ ತದನ್ಯತ್ರ= ಭಗವಂತನನ್ನು ಬಿಟ್ಟುಇತರ ವಿಷಯಪದಾರ್ಥಗಳಲ್ಲಿ ಅತಿದುಃಖತಃ=ಹೆಚ್ಚಿನ ದುಃಖಕ್ಕೆ ಕಾರಣವಾಗುವುದರಿಂದ ಅಧಿಕವೈರಾಗ್ಯಂ ಉತ್ಪಾದ್ಯ=ಅತಿಶಯವಾದ ವೈರಾಗ್ಯವನ್ನು ಹುಟ್ಟಿಸಿ (ಇದು ತೃತೀಯಾಧ್ಯಾಯದ ಪ್ರಥಮಪಾದದ ಅರ್ಥ.)

ತದ್ಗುಣಾಧಿಕ್ಯವೇದನಾತ್=ಭಗವಂತನಲ್ಲಿ ಅಧಿಕಗುಣವನ್ನು ತಿಳಿಯುವುದರಿಂದ ಹಾಗೂ ಸರ್ವಸ್ಯ=ಎಲ್ಲದಕ್ಕೂ ತದ್ವಶತ್ವಾಚ್ಚ=ಅವನ ಅಧೀನಕ್ಕೆ ಒಳಪಟ್ಟಿರುವುದರಿಂದ ಭಕ್ತೇಃ=ಭಕ್ತಿಯ ದಾರ್ಢ್ಯಂ=ದೃಢತೆಯನ್ನು ಅವಾಪ್ಯ ಚ=ಹೊಂದಿ ವಿಶಿಷ್ಟಾಚಾರ್ಯಸಂಪದಾ=ವಿಶಿಷ್ಟರಾದ ಗುರುಗಳ ಸಮಾಗಮದಿಂದ ಉಪಾಸನಾಯೈವ=ಧ್ಯಾನಕ್ಕಾಗಿಯೇ ಯತೇತ= (ಸಾಧಕನು) ಪ್ರಯತ್ನಿಸಬೇಕು.

'ವಿಶಿಷ್ಟಾಚಾರ್ಯಸಂಪದಾ' ಎಂಬ ಪದವನ್ನು ಎಲ್ಲ ಸಾಧನೆಗಳ ಜೊತೆಯಲ್ಲೂ ಅನ್ವಯಿಸಿಕೊಳ್ಳಬೇಕು.

'ಉಪಾಸನಾಯೈವ ಯತೇತ' ಎನ್ನುವುದು 'ಬ್ರಹ್ಮಜಿಜ್ಞಾಸಾ ಕರ್ತವ್ಯಾ' ಎಂಬ ಪ್ರಥಮ ಸೂತ್ರದ ಅರ್ಥ. ಉಳಿದ ವಿಷಯಗಳು ಅಥಶಬ್ದದ ಅರ್ಥ. ಪ್ರಥಮಸೂತ್ರೋಕ್ತವಾದ ಜಿಜ್ಞಾಸೆ ಎಂದರೆ ವೇದಾಂತವಿಚಾರ. (ಜಿಜ್ಞಾಸಾ ನಾಮ ವಿಚಾರಾಪರಪರ್ಯಾಯಂ ಮನನಂ –ಸುಧಾ) ಇದಕ್ಕೆ ಶ್ರವಣ ಜನ್ಯವಾದ ಜ್ಞಾನವು ಕಾರಣ. ಅಂತಹ ಜ್ಞಾನವಿದ್ದವನಿಗೆ ಪೂರ್ವಜನ್ಮದ

ಕರ್ಮಾನುಷ್ಠಾನದ ಫಲವಾಗಿ ಸತ್ಕುಲಪ್ರಸೂತನಾದ, ಸಾತ್ವಿಕಸ್ವಭಾವದ ವ್ಯಕ್ತಿಗೆ ವೈರಾಗ್ಯಾದಿಗಳು ಇದ್ದೇ ಇರುತ್ತವೆ. ಅಂತಹವನು ಬ್ರಹ್ಮವಿಚಾರವನ್ನು ಮಾಡಬೇಕು. ವಿಚಾರದಿಂದ ತತ್ತ್ವಜ್ಞಾನವು ದೃಢವಾಗಿ ವೈರಾಗ್ಯವು ಅಭಿವೃದ್ಧಿಯಾಗುತ್ತದೆ. ಸಜ್ಜನ ಸಂಗದಿಂದ ಬಂದ ವೈರಾಗ್ಯವು ಶ್ರವಣದಿಂದ ಅಲ್ಪಅಭಿವೃದ್ಧಿಯಾಗಿರುತ್ತದೆ. ಹೀಗೆ ವಿಚಾರಕ್ಕಿಂತ ಮೊದಲು ಇದ್ದ ವೈರಾಗ್ಯ ವಿಚಾರದಿಂದ ಇನ್ನೂ ಹೆಚ್ಚು ಅಭಿವೃದ್ಧಿ ಹೊಂದುತ್ತದೆ.

**ಕರ್ತವ್ಯಾ ಬ್ರಹ್ಮಜಿಜ್ಞಾಸೇತ್ಯುಕ್ತೇ ಕಿಮಿತಿ ಸಂಶಯೇ ।**
**ಅತ ಇತ್ಯುದಿತೇಽಪ್ಯಸ್ಯ ವಿಶೇಷಾನುಕ್ತಿತಃ ಪುನಃ ॥ ೮ ॥**

ಬ್ರಹ್ಮಜಿಜ್ಞಾಸಾ ಕರ್ತವ್ಯಾ=ಬ್ರಹ್ಮವಿಚಾರವು ಮಾಡಲ್ಪಡಬೇಕು. ಇತ್ಯುಕ್ತೇ=ಹೀಗೆ ಪ್ರಥಮಸೂತ್ರದಲ್ಲಿ ಹೇಳಿದಾಗ ಕಿಮಿತಿ ಕರ್ತವ್ಯಾ=ಯಾವ ಪ್ರಯೋಜನಕ್ಕಾಗಿ ಜಿಜ್ಞಾಸೆ ಮಾಡಲ್ಪಡಬೇಕು? ಇತಿ ಸಂಶಯೇ=ಹೀಗೆ ಸಂದೇಹ ಬಂದಾಗ,

ಅತ ಇತ್ಯುದಿತೇಽಪಿ=ಅತಃ ಎಂದು ಸೂತ್ರದಲ್ಲಿ ಮೋಕ್ಷರೂಪ ಪ್ರಯೋಜನವನ್ನು ಹೇಳಿದ್ದರೂ ವಿಶೇಷಾನುಕ್ತಿತಃ=ಪ್ರಮಾಣಾಧಾರಿತವಾಗಿ ಹೇಳದೇ ಇರುವುದರಿಂದ ಪುನಃ=ಮತ್ತೆ ಸಂಶಯೇ=ಸಂಶಯ ಬಂದಾಗ, (ಜನ್ಮಾದಿಸೂತ್ರದಲ್ಲಿ ಮೋಕ್ಷಕಾರಣತ್ವವನ್ನು ಹೇಳಲಾಗಿದೆ.)

**ಭಾವಾರ್ಥ**— ಮೊದಲ ಸೂತ್ರದಲ್ಲಿ ಬ್ರಹ್ಮವಿಚಾರವನ್ನು ಮಾಡಬೇಕೆಂದು ಹೇಳಿದ್ದರೂ ಅದರ ಪ್ರಯೋಜನವನ್ನು ದೃಢಪಡಿಸಿಲ್ಲ. ಆ ಸೂತ್ರದ ಅತಃ ಎಂಬ ಶಬ್ದವು ಮೋಕ್ಷರೂಪಪ್ರಯೋಜನ ಇದೆ, ಎಂದು ಹೇಳಿದರೂ ಅದಕ್ಕೆ ಪ್ರಮಾಣವನ್ನು ಹೇಳಿಲ್ಲ. ಆದ್ದರಿಂದ ಪ್ರಯೋಜನಪ್ರಶ್ನೆ ಹಾಗೆಯೇ ಉಳಿಯುತ್ತದೆ. ಅದಕ್ಕಾಗಿ,

**ಸೃಷ್ಟಿಬಂಧನಮೋಕ್ಷಾದಿ ಕರ್ತೃತ್ವಸ್ಯ ಶ್ರುತತ್ವತಃ ।**
**ಯತೋ ಮೋಕ್ಷಾದಿದಾತಾಸಾವತೋ ಜಿಜ್ಞಾಸ್ಯ ಏವ ವಃ ।**
**ಇತ್ಯಾಹ ತತ್ ಪರಂ ಬ್ರಹ್ಮ ವ್ಯಾಸಾಖ್ಯಂ ಜ್ಞಾನರಶ್ಮಿಮತ್ ॥ ೯ ॥**

ಸೃಷ್ಟಿ – ಬಂಧನ – ಮೋಕ್ಷಾದಿಕರ್ತೃತ್ವಸ್ಯ = ಸೃಷ್ಟಿ – ಸಂಸಾರಬಂಧನ-ಆದರಿಂದ ಬಿಡುಗಡೆ ಮುಂತಾದವುಗಳ ಕರ್ತೃತ್ವದ ಶ್ರುತತ್ವತಃ=ವೇದಗಳಲ್ಲಿ ಪರಮಾತ್ಮನಿಗೆ ಹೇಳಲ್ಪಟ್ಟಿರುವ ಕಾರಣದಿಂದಾಗಿ, 'ಯತೋ ಮೋಕ್ಷಾದಿದಾತಾ=ಯಾವ ಕಾರಣದಿಂದ ಪರಮಾತ್ಮನು ಮೋಕ್ಷಾದಿಗಳನ್ನು ಕೊಡುವನೋ ಅತಃ=ಆದ್ದರಿಂದ ವಃ=ಮೋಕ್ಷಾಥಿಗಳಾದ ನಿಮಗೆ ಜಿಜ್ಞಾಸ್ಯ ಏವ=ಪರಮಾತ್ಮ ಜಿಜ್ಞಾಸ್ಯನಾಗಿದ್ದಾನೆ' ಇತಿ=ಹೀಗೆ ಜ್ಞಾನರಶ್ಮಿಮತ್= ವ್ಯಾಪ್ತಜ್ಞಾನರೂಪರಾದ ವ್ಯಾಸಾಖ್ಯಂ=ವ್ಯಾಸರೆಂಬ ತತ್ ಪರಂ ಬ್ರಹ್ಮ=ಆ ಪರಬ್ರಹ್ಮರೂಪಿಯು ಅಹ=ಹೇಳಿದ್ದಾರೆ.

**ಭಾವಾರ್ಥ—** 'ಜನ್ಮಾದ್ಯಸ್ಯ ಯತಃ ಶ್ರುತಂ' ಯಾರಿಂದಾಗಿ ಈ ಜಗತ್ತಿಗೆ ಜನ್ಮಾದಿಗಳು ಶ್ರುತಿಯಲ್ಲಿ ಹೇಳಲ್ಪಟ್ಟಿದೆಯೋ ಅವನು ಪರಬ್ರಹ್ಮ, ಎಂದು ಎರಡನೆಯ ಸೂತ್ರದ ಅರ್ಥ. 'ವೇದಗಳಲ್ಲಿ ಬ್ರಹ್ಮನು ಮೋಕ್ಷಪ್ರದನೆಂದು ಶ್ರುತನಾದುದರಿಂದ ಮೋಕ್ಷಾರ್ಥಿಗಳಾದ ನೀವು ಬ್ರಹ್ಮಜಿಜ್ಞಾಸೆಯನ್ನು ಮಾಡಿ' ಎಂದು ವ್ಯಾಸರು ಎರಡು ಸೂತ್ರಗಳಲ್ಲಿ ಹೇಳಿದ್ದಾರೆ.

**ಯೇನೈವ ಬಂಧಮೋಕ್ಷಃ ಸ್ಯಾತ್ ಸ ಚ ಜಿಜ್ಞಾಸಯಾ ಗತಃ ।**
**ಸುಪ್ರಸನ್ನೋ ಭವೇದೀಶೋ ಜಿಜ್ಞಾಸಾಽತೋಽಸ್ಯ ಮುಕ್ತಿದಾ ॥ ೧೦ ॥**

ಯೇನೈವ=ಯಾವ ಪರಮಾತ್ಮನಿಂದಲೇ ಬಂಧಮೋಕ್ಷಃ ಸ್ಯಾತ್= ಸಂಸಾರ ಬಂಧದಿಂದ ಮೋಕ್ಷವಾಗುವುದೋ ಜಿಜ್ಞಾಸಯಾ=ವಿಚಾರದಿಂದ ಗತಃ=ತಿಳಿಯಲ್ಪಟ್ಟ ಸಃ=ಅಂತಹ ಈಶಃ=ಪರಮಾತ್ಮನು ಸುಪ್ರಸನ್ನೋ ಭವೇತ್=ಅತಿಪ್ರಸನ್ನನಾಗುವನು. ಅತಃ=ಆದ್ದರಿಂದ ಅಸ್ಯ ಜಿಜ್ಞಾಸಾ= ಅಂತಹ ಈಶನ ಜಿಜ್ಞಾಸೆಯು ಅಸ್ಯ=ಜೀವನಿಗೆ ಮುಕ್ತಿದಾ=ಮೋಕ್ಷಪ್ರದ ವಾಗುತ್ತದೆ.

**ಭಾವಾರ್ಥ—** ವಿಚಾರವು ಮೋಕ್ಷಕ್ಕೆ ಸಾಕ್ಷಾತ್ ಕಾರಣವಲ್ಲ. ಪ್ರಸನ್ನನಾದ ಪರಮಾತ್ಮನೇ ಮೋಕ್ಷಕಾರಣ. ಸರ್ವೋತ್ಕೃಷ್ಟತ್ವೇನ ಜ್ಞಾತನಾದರೆ ಅವನು ಪ್ರಸನ್ನನಾಗುತ್ತಾನೆ. ವೇದಗಳ ವಿಚಾರಮಾಡಿದಾಗ ಮಾತ್ರ ಅವನು ಸರ್ವೋತ್ತಮನೆಂದು ತಿಳಿಯುತ್ತದೆ. ಅದಕ್ಕಾಗಿ ಬ್ರಹ್ಮವಿಚಾರವನ್ನು ಮಾಡಬೇಕು, ಎಂದು ವ್ಯಾಸರ ಅಭಿಪ್ರಾಯ.

**ಮೋಕ್ಷಾದಿದತ್ವಮೀಶಸ್ಯ ಕಥಮೇವಾವಗಮ್ಯತೇ ।**
**ಇತಿ ಚೇಚ್ಛಾಸ್ತ್ರಯೋನಿತ್ವಾಚ್ಛಾಸ್ತ್ರಗಮ್ಯೋ ಹಿ ಮೋಕ್ಷದಃ ॥ ೧೧ ॥**

ಈಶಸ್ಯ=ಈಶನಿಗೆ ಮೋಕ್ಷಾದಿದತ್ವಂ=ಬಂಧ-ಮೋಕ್ಷಪ್ರದತ್ವವು ಕಥಮೇವ=ಹೇಗೆ ತಾನೇ ಅವಗಮ್ಯತೇ=ತಿಳಿಯಲ್ಪಡುತ್ತದೆ? ಇತಿಚೇತ್= ಹೀಗೆಂದರೆ, ಶಾಸ್ತ್ರಯೋನಿತ್ವಾತ್=ಶಾಸ್ತ್ರಯೋನಿತ್ವಾತ್ ಎಂದಿರುತ್ತಾರೆ ಸೂತ್ರಕಾರರು. ಹಿ=ಯಾವ ಕಾರಣದಿಂದ ಮೋಕ್ಷಪ್ರದನು ಶಾಸ್ತ್ರೈಕ ವೇದ್ಯನೋ ಆದ್ದರಿಂದ ಶಾಸ್ತ್ರವು ಮೋಕ್ಷಾದಿಪ್ರದ ಎಂದು ಯಾರನ್ನು ಹೇಳಿದೆಯೋ ಅವನನ್ನೆ ಮೋಕ್ಷಪ್ರದನನ್ನಾಗಿ ತಿಳಿಯಬೇಕು.

ಭಾವಾರ್ಥ— ಮೋಕ್ಷಪ್ರದನು ಯಾರೆಂದು ಹೇಗೆ ತಿಳಿಯುವುದು, ಎನ್ನುವ ಪ್ರಶ್ನೆ ಬಂದಾಗ ತೃತೀಯ ಸೂತ್ರ ಉತ್ತರಿಸುತ್ತದೆ. ಮೋಕ್ಷಪ್ರದನು ಶಾಸ್ತ್ರಮಾತ್ರದಿಂದ ತಿಳಿಯಲ್ಪಡಬೇಕಾದುದರಿಂದ ಅನುಮಾನಾದಿ ಪ್ರಮಾಣ ಗಳಿಂದ ಅದನ್ನು ನಿರ್ಧರಿಸಲಾಗದು, ಎಂದು ಆ ಸೂತ್ರದ ಅರ್ಥ.

**ಪ್ರತ್ಯಕ್ಷಾವಸಿತೇಭ್ಯಃ ಸ್ಯಾದ್ ಯದಿ ಮೋಕ್ಷಃ ಕಥಂಚನ ।**
**ಕಿಮಿತ್ಯನಾದಿಸಂಸಾರಮಗ್ನಾಃ ಸರ್ವಾ ಇಮಾಃ ಪ್ರಜಾಃ ॥ ೧೨ ॥**

ಪ್ರತ್ಯಕ್ಷಾವಸಿತೇಭ್ಯಃ=ಪ್ರತ್ಯಕ್ಷದಿಂದ ನಿರ್ಧಾರಿತರಾದ ವ್ಯಕ್ತಿಗಳಿಂದ ಯದಿ=ಒಂದುವೇಳೆ ಕಥಂಚನ=ಯಾವುದೇ ವಿಧದಿಂದ ಮೋಕ್ಷಃ ಸ್ಯಾತ್= ಮೋಕ್ಷವು ಆಗುವುದಾದಲ್ಲಿ ಇಮಾಃ ಸರ್ವಾಃ ಪ್ರಜಾಃ=ಈ ಎಲ್ಲ ಸಂಸಾರಿಗಳು ಕಿಮಿತಿ=ಏತಕ್ಕಾಗಿ ಅನಾದಿಸಂಸಾರಮಗ್ನಾಃ=ಅನಾದಿ ಕಾಲದಿಂದ ಸಂಸಾರ ದಲ್ಲಿ ಮುಳುಗಿರುತ್ತಿದ್ದರು?

**ಯಸ್ಮಾನ್ನಿಯಮತೋ ದುಃಖಹಾನಿಃ ಪ್ರತ್ಯಕ್ಷತೋ ಭವೇತ್ ।**
**ಧಾವಂತ್ಯೇವ ತಮುದ್ದಿಶ್ಯ ರಾಜಾದ್ಯಮಖಿಲಾಃ ಪ್ರಜಾಃ ॥ ೧೩ ॥**

ಯಸ್ಮಾತ್=ಯಾವ ವ್ಯಕ್ತಿಯಿಂದಾಗಿ ನಿಯಮತಃ=ನಿಶ್ಚಿತವಾಗಿ ದುಃಖಹಾನಿಃ=ದುಖನಾಶವು ಪ್ರತ್ಯಕ್ಷತಃ ಭವೇತ್=ಪ್ರತ್ಯಕ್ಷದಿದಂದಲೇ ತಿಳಿಯಲ್ಪಡುವುದೋ ತಂ ರಾಜಾದ್ಯಂ=ಅಂತಹ ರಾಜನೇ ಮೊದಲಾದವ

ರನ್ನು ಉದ್ದಿಶ್ಯ=ಉದ್ದೇಶಿಸಿಕೊಂಡು ಅಖಿಲಾಃ ಪ್ರಜಾಃ=ಎಲ್ಲ ಜನರೂ ಧಾವಂತ್ಯೇವ=ಓಡಿಯೇ ಓಡುತ್ತಾರೆ.

**ಭಾವಾರ್ಥ—** ಯಾರಿಗೂ ಬೇಡವಾದುದು ದುಃಖ. ಅಂತಹ ದುಃಖವು ರಾಜನಿಂದಲೋ ಸಂನ್ಯಾಸಿಗಳಿಂದಲೋ ನಾಶವಾಗತ್ತದೆ, ಎಂದು ಪ್ರತ್ಯಕ್ಷವಾಗಿ ತಿಳಿದು ಬಂದರೆ ಜನರೆಲ್ಲ ಅವರಲ್ಲಿಗೆ ದೌಡಾಯಿಸುತ್ತಾರೆ. ಇದು ಲೋಕದಲ್ಲಿ ಕಂಡಿದೆ.

**ಅನುಮಾ (ನ) ಗಮ್ಯತೋ ಮೋಕ್ಷೋ ಯದಿ ಸ್ಯಾದ (ತಸ್ಯಾ)ನು-**
**ಮೈವ ಹಿ ।**

**ದೃಷ್ಟಪೂರುಷವನ್ಮೋಕ್ಷದಾತೃತಾಂ ವಿನಿವಾರಯೇತ್ ।**
**ತಚ್ಛಾಸ್ತ್ರಗಮ್ಯ ಏವೈಕೋ ಮೋಕ್ಷದೋ ಭವತಿ ಧ್ರುವಮ್ ॥ ೧೪॥**

ಅನುಮಾನಗಮ್ಯತಃ=ಅನುಮಾನಪ್ರಮಾಣದಿಂದ ತಿಳಿಯಲ್ಪಟ್ಟವನಿಂದ ಯದಿ=ಒಂದುವೇಳೆ ಮೋಕ್ಷಃ=ಮೋಕ್ಷವಾಗುವುದಾದಲ್ಲಿ ಆಗ ಅನುಮೈವ=ಅನುಮಾನವೇ ದೃಷ್ಟಪೂರುಷವತ್=ಮೋಕ್ಷಪ್ರದನಲ್ಲವೆಂದು ನಿರ್ಧಾರಿತವಾದ ವ್ಯಕ್ತಿಯ ದೃಷ್ಟಾಂತದಿಂದ ಆ ಪುರುಷನಿಗೂ ಮೋಕ್ಷ ದಾತೃತಾಂ=ಮೋಕ್ಷಪ್ರದತ್ವವನ್ನು ನಿವಾರಯೇತ್=ನಿಷೇಧ ಮಾಡೀತು!

**ಭಾವಾರ್ಥ—** ಇನ್ನು, ಒಬ್ಬ ವ್ಯಕ್ತಿ ಮೋಕ್ಷವನ್ನು ಕೊಡುತ್ತಾನೆ, ಎಂದು ಅನುಮಾನ ಮಾಡಿದರೆ ಅದಕ್ಕೆ ವಿರುದ್ಧವಾಗಿ ಮೋಕ್ಷಕೊಡದ ವ್ಯಕ್ತಿಯನ್ನು ದೃಷ್ಟಾಂತವನ್ನಾಗಿ ಮಾಡಿ ಅವನಂತೆ ಇವನೂ ಮೋಕ್ಷಕೊಡಲಾರ, ಎಂದು ಪ್ರತಿಪಕ್ಷಾನುಮಾನವನ್ನು ಮಾಡಬಹುದು.

ತಸ್ಮಾತ್=ಆದ್ದರಿಂದ ಮೋಕ್ಷದಃ=ಮೋಕ್ಷಪ್ರದನು ಧ್ರುವಂ=ಕೇವಲ ಶಾಸ್ತ್ರಗಮ್ಯಃ ಏವ=ಶಾಸ್ತ್ರಿಂದ ತಿಳಿಯಲ್ಪಡುವ ಒಬ್ಬನೇ ವ್ಯಕ್ತಿಯು ಭವತಿ= ಆಗಿದ್ದಾನೆ.

**ಶಾಸ್ತ್ರಗಮ್ಯಶ್ಚ ನಾನ್ಯೋಽಸ್ತಿ ಮೋಕ್ಷದತ್ವೇನ ಕೇಶವಾತ್ ।**
**ಮೋಕ್ಷದೋ ಹಿ ಸ್ವತಂತ್ರಃ ಸ್ಯಾತ್ ಪರತಂತ್ರಃ ಸ್ವಯಂ ಸೃತೌ ।**
**ವರ್ತಮಾನಃ ಕಥಂ ಶಕ್ತಃ ಪರಮೋಕ್ಷಾಯ ಕೇವಲಮ್ ॥ ೧೫ ॥**

ಮೋಕ್ಷದತ್ತೇನ=ಮೋಕ್ಷಪ್ರದನಾಗಿ ಶಾಸ್ತ್ರಗಮ್ಯಶ್ಚ=ಶಾಸ್ತ್ರದಿಂದ ತಿಳಿಯಲ್ಪಡುವವನು ಕೇಶವಾತ್=ವಿಷ್ಣುವಿಗಿಂತಲೂ ಅನ್ಯಃ=ಮತ್ತೊಬ್ಬ ನ ಅಸ್ತಿ=ಇಲ್ಲ. ಹಿ=ಏಕೆಂದರೆ ಮೋಕ್ಷದಃ=ಮೋಕಷಪ್ರದನು ಸ್ವತಂತ್ರ ಸ್ಯಾತ್=ಸ್ವತಂತ್ರನಾಗಿರಬೇಕು. ಪರತಂತ್ರಃ=ಪರಾಧೀನನಾದವನು ಸ್ವಯಂ ಸೃತೌ ವರ್ತಮಾನಃ=ತಾನೇ ಸಂಸಾರದಲ್ಲಿ ಮುಳುಗಿದ್ದವನಾಗಿದ್ದರೆ ಕೇವಲಂ=ಮತ್ತೊಬ್ಬರ ಆಸರೆ, ಇಲ್ಲದೆ ಪರಮೋಕ್ಷಾಯ=ಮತ್ತೊಬ್ಬರಿಗೆ ಮೋಕ್ಷವನ್ನು ಕೊಡುವುದಕ್ಕಾಗಿ ಕಥಂ ಶಕ್ತಃ=ಹೇಗೆ ಶಕ್ತನಾದಾನು?

**ಭಾವಾರ್ಥ—** ಮೋಕ್ಷದೋ ಹಿ, ಎಂಬ ಅನುವ್ಯಾಖ್ಯಾನದಲ್ಲಿ ತತ್ತು ಸಮನ್ವಯಾತ್ ಎಂಬ ಸೂತ್ರದ ಸಮನ್ವಯಾತ್ ಎಂಬ ಪದಕ್ಕೆ 'ಸ್ವಾತಂತ್ರ್ಯದ ಸಂಬಂಧವಿರುವುದರಿಂದ' ಎಂದರೆ ಸ್ವಾತಂತ್ರ್ಯವಿರುವುದರಿಂದ ಅಥವಾ ರುದ್ರಾದಿವಾಚಕಪದಗಳಿಂದ ವಿಷ್ಣುವೇ ಉಪಕ್ರಮಾದಿ ಲಿಂಗಗಳಿಂದ ಮುಖ್ಯವಾಚ್ಯನಾದುದರಿರಂದ, ಎಂದು ಅರ್ಥವನ್ನು ಹೇಳಲಾಗಿದೆ.

**ಅನ್ಯಾಶ್ರಯೇಣ ಯದ್ಯೇಷ ದದ್ಯಾನ್ ಮೋಕ್ಷಂ ಸ ಏವ ಹಿ ।**
**ತೇನಾನನುಸೃತೋ ಮೋಕ್ಷಂ ನ ದದ್ಯಾದನ್ಯವಾಕ್ಯತಃ ।**
**ಅತಸ್ತದರ್ಥಮಪಿ ಸ ಜ್ಞೇಯೋ ವಿಷ್ಣುರ್ಮುಮುಕ್ಷುಭಿಃ ॥ ೧೬॥**

ಏಷಃ=ಈ ಮೋಕ್ಷಪ್ರದನಾದ ವ್ಯಕ್ತಿಯು ಯದಿ=ಒಂದುವೇಳೆ ಅನ್ಯಾಶ್ರಯೇಣ=ಮತ್ತೊಬ್ಬರ ಅವಲಂಬನೆಯಿಂದ ಮೋಕ್ಷಂ ದದ್ಯಾತ್=ಮೋಕ್ಷವನ್ನು ಕೊಡುವುದಾದಲ್ಲಿ ಆಗ ಆ ಸ್ವತಂತ್ರ ವ್ಯಕ್ತಿಯು ತೇನ=ಮೋಕ್ಷಾಪೇಕ್ಷಿಯಿಂದ ನಾನುಸೃತಃ=ಉಪಸತ್ತಿ ಮಾಡಲ್ಪಡದೇ ಇದ್ದವನಾಗಿ ಅನ್ಯವಾಕ್ಯತಃ='ಇವನಿಗೆ ಮೋಕ್ಷವನ್ನು ಕೊಡು' ಎನ್ನುವ ಮತ್ತೊಬ್ಬರ ಮಾತಿನಿಂದ ಮೋಕ್ಷಂ=ಮೋಕ್ಷವನ್ನು ನ ದದ್ಯಾತ್=ಕೊಡಲಾರ.

ಅತಃ=ಆದ್ದರಿಂದ ತದರ್ಥಮಪಿ=ಮಧ್ಯದ ವ್ಯಕ್ತಿಹೇಳಿದಂತೆ ಮೋಕ್ಷವನ್ನು ಕೊಡುವುದಕ್ಕಾಗಿಯಾದರೂ ಸ ವಿಷ್ಣು=ಆ ಸ್ವತಂತ್ರಮೋಕ್ಷಪ್ರದ ವಿಷ್ಣುವು ಮುಮುಕ್ಷುಭಿಃ ಜ್ಞೇಯಃ=ಮೋಕ್ಷಾರ್ಥಿಗಳಿಂದ ಉಪಾಸ್ಯನಾಗಿದ್ದಾನೆ.

**ಭಾವಾರ್ಥ—** ಮೋಕ್ಷವನ್ನು ಕೊಡಲು ಸಮರ್ಥನೆಂದು ಕಲ್ಪಿಸಿದ ವ್ಯಕ್ತಿಯು ತಾನೇ ಮೋಕ್ಷವನ್ನು ಕೊಡಲಾರ. ಏಕೆಂದರೆ ನಮ್ಮಂತೆ ಅವನೇ ಸಂಸಾರದಲ್ಲಿ ಮುಳುಗಿರುವಾಗ ನಮಗೆ ಹೇಗೆ ಮೋಕ್ಷಕೊಟ್ಟಾನು? ಇನ್ನು ಮತ್ತೊಬ್ಬರಿಗೆ ಹೇಳಿ ಅವರಿಂದ ಮೋಕ್ಷಕೊಡಿಸಬೇಕು. ಅದೂ ಸಾಧ್ಯವಿಲ್ಲ. ಆ ಮತ್ತೊಬ್ಬ ತನ್ನನ್ನು ಮೆಚ್ಚಿಸಿದವರಿಗೆ ಮೋಕ್ಷಕೊಟ್ಟಾನು. ಮತ್ತೊಬ್ಬರ ಮಾತಿನಿಂದ ತನ್ನನ್ನು ಮೆಚ್ಚಿಸದಿದ್ದರೂ ಏಕೆ ಮೋಕ್ಷಕೊಟ್ಟಾನು? ಆದ್ದರಿಂದ ಅದಕ್ಕಾಗಿಯಾದರೂ ಮೋಕ್ಷದಾತೃವಾದ ಸ್ವತಂತ್ರವ್ಯಕ್ತಿಯನ್ನು ಅಂಗೀಕರಿಸಲೇಬೇಕಾಗುವುದು, ಅವನೇ ವಿಷ್ಣು. ಮುಮುಕ್ಷುಗಳಿಂದ ಅವನೇ ಉಪಾಸ್ಯ.

**ಯಮೇವೈಷ ಇತಿ ಶ್ರುತ್ಯಾ ತಮೇವೇತಿ ಚ ಸಾದರಮ್ ।**
**ಶಾಸ್ತ್ರಯೋನಿತ್ವಮಸ್ಯೈವ ಜ್ಞಾಯತೇ ವೇದವಾದಿಭಿಃ ॥ ೧೭ ॥**

'ಯಮೇವೈಷ' ಇತಿ ಶ್ರುತ್ಯಾ='ಯಮೇವೈಷ ವೃಣುತೇ ತೇನ ಲಭ್ಯಃ' ಎಂಬ ಶ್ರುತಿಯಿಂದ ತಮೇವೇತಿ ಚ='ತಮೇವ ವಿದಿತ್ವಾತಿಮೃತ್ಯುಮೇತಿ' ಎಂಬ ಶ್ರುತಿಯಿಂದ ಸಾದರಂ=ಆ ಶ್ರುತಿಯ ಉತ್ತರಾರ್ಧಲ್ಲಿ 'ನಾನ್ಯಃ ಪಂಥಾಃ ವಿದ್ಯತೇಽಯನಾಯ' ಎಂದು ತಾತ್ಪರ್ಯಪೂರ್ವಕವಾಗಿ ವೇದವಾದಿಭಿಃ=ವೈದಿಕರಿಂದ ಅಸ್ಯೈವ=ವಿಷ್ಣುವಿಗೇ ಶಾಸ್ತ್ರಯೋನಿತ್ವಂ= ಮೋಕ್ಷಪ್ರದತ್ವೇನ ಶಾಸ್ತ್ರಪ್ರತಿಪಾದ್ಯತ್ವವು ಜ್ಞಾಯತೇ=ತಿಳಿಯಲ್ಪಡುತ್ತದೆ.

**ಭಾವಾರ್ಥ—** 'ಶಾಸ್ತ್ರಯೋನಿತ್ವಾತ್' ಎಂಬ ಸೂತ್ರೋಕ್ತವಾದ ಹೇತುವನ್ನು ಇನ್ನೊಂದು ರೀತಿಯಿಂದ ಇಲ್ಲಿ ವ್ಯಾಖ್ಯಾನಿಸಲಾಗಿದೆ. 'ಸಮನ್ವಯಾತ್' ಎಂಬ ಹೇತುವಿಗೆ ಹಿಂದೆ ಹೇಳಿದ ಅರ್ಥ– ಸ್ವಾತಂತ್ರ್ಯೇಣ ವೇದಶಾಸ್ತ್ರವಿಷಯತ್ವ. ಈ ಅನುವ್ಯಾಖ್ಯಾನದಲ್ಲಿ 'ಏನಂ ವಿದುಃ' ಇತ್ಯಾದಿ ಶ್ರುತಿಸಿದ್ಧವಾದ ತಾತ್ಪರ್ಯಪೂರ್ವಕ ವಿಷ್ಣುಪ್ರತಿಪಾದಕತ್ವ ಎಂಬ ಇನ್ನೊಂದು ಅರ್ಥವನ್ನು ಹೇಳಲಾಗಿದೆ. 'ಯಮೇವೈಷ' ಎಂಬ ಶ್ರುತಿಯಲ್ಲಿ ವಿಷ್ಣು ಪ್ರಸಾದವೇ ಮೋಕ್ಷಕ್ಕೆ ಕಾರಣ, ಎಂದು ಹೇಳಲಾಗಿದೆ. 'ತಮೇವ ವಿದಿತ್ವಾ' ಎಂಬ ಶ್ರುತಿಯು ಸಂಸಾರ ಬಂಧಮೋಕ್ಷವು ವಿಷ್ಣುವಿನ ಜ್ಞಾನದಿಂದಲೇ

ಆಗುತ್ತದೆ, ಎಂದು ಹೇಳಿ 'ನಾನ್ಯಃ ಪಂಥಾಃ' ಎಂದು 'ವಿಷ್ಣುಜ್ಞಾನ ಬಿಟ್ಟು ಮೋಕ್ಷಕ್ಕೆ ಬೇರೆ ದಾರಿ ಇಲ್ಲ' ಎನ್ನುವ ಮೂಲಕ ಶ್ರುತಿಯು ಈ ವಿಷಯದಲ್ಲಿ ತಾತ್ಪರ್ಯ ಇದೆ, ಎಂದು ತಿಳಿಸುತ್ತದೆ. ಇದನ್ನೇ 'ಸಮನ್ವಯಾತ್ ತತ್ತು ಶಾಸ್ತ್ರಯೋನಿ=ತಾತ್ಪರ್ಯಪೂರ್ವಕ ಅನ್ವಯದಿಂದ ವಿಷ್ಣುವೇ ಮೋಕ್ಷಪ್ರದತ್ವೇನ ಶಾಸ್ತ್ರಪ್ರತಿಪಾದ್ಯ' ಎಂದು ಎರಡು ಸೂತ್ರಗಳು ಸೇರಿ ಹೇಳುತ್ತವೆ.

**'ಯ ಏನಂ ವಿದುರಮೃತಾ' ಇತ್ಯುಕ್ತಸ್ತು ಸಮುದ್ರಗಃ ।**
**'ತದೇವ ಬ್ರಹ್ಮ ಪರಮಮಿ'ತಿ ಶ್ರುತ್ಯಾಽವಧಾರಿತಃ ॥ ೧೮ ॥**

**ಯತಃ ಪ್ರಸೂತೇತಿ ತತಃ ಸೃಷ್ಟಿಮಾಹ ತತೋ ಹರಿಃ ।**
**ಶಾಸ್ತ್ರಯೋನಿರ್ನಚಾನ್ಯೋಽಸ್ತಿ ಮುಖ್ಯತಸ್ತ್ವಿತಿ ಗಮ್ಯತೇ ॥ ೧೯ ॥**

'ಯ ಏನಂ ವಿದುರಮೃತಾಸ್ತೇ ಭವಂತಿ–ಯಾರು ಇವನನ್ನು ತಿಳಿಯುವರೋ ಅವರು ಮುಕ್ತರಾಗುತ್ತಾರೆ' ಇತಿ ಶ್ರುತ್ಯಾ=ಈ ಶ್ರುತಿ ಯಿಂದಲೂ ಅಸ್ಯೈವ ಶಾಸ್ತ್ರಯೋನಿತ್ವಂ ಜ್ಞಾಯತೇ=ವಿಷ್ಣುವಿಗೇ ಶಾಸ್ತ್ರ ಪ್ರತಿಪಾದ್ಯತ್ವವು ತಿಳಿಯಲ್ಪಡುತ್ತದೆ.

ಇತ್ಯುಕ್ತಸ್ತು=ಈ ಶ್ರುತಿಯ ಏನಂ ಎಂಬ ಸರ್ವನಾಮದಿಂದ ಹೇಳಲ್ಪಟ್ಟವನು ಸಮುದ್ರಗಃ=ಕ್ಷೀರಸಮುದ್ರದಲ್ಲಿರುವ ವಿಷ್ಣುವೇ. ಅಲ್ಲದೆ, 'ತದೇವ ಬ್ರಹ್ಮ ಪರಮಂ(ಕವೀನಾಂ)' ಇತಿ ಶ್ರುತ್ಯಾ='ತದೇವ ಬ್ರಹ್ಮ' ಎಂಬ ಶ್ರುತಿಯಿಂದ ಇತ್ಯುಕ್ತಃ=ಸಮುದ್ರಸ್ಥತ್ವೇನ ಹೇಳಲ್ಪಟ್ಟವನು ಅವಧಾರಿತಃ= ಮುಖ್ಯಬ್ರಹ್ಮನೆಂದು ನಿರ್ಧರಿಸಲ್ಪಟ್ಟಿದ್ದಾನೆ.

ತತಃ=ಆದ್ದರಿಂದ ಹರಿಃ=ವಿಷ್ಣುವೇ ಮುಖ್ಯತಃ=ಮುಖ್ಯವಾಗಿ ಶಾಸ್ತ್ರಯೋನಿಃ=ಶಾಸ್ತ್ರಪ್ರತಿಪಾದ್ಯನು, ನ ಅನ್ಯಃ ಅಸ್ತಿ=ಮತ್ತೊಬ್ಬನಿಲ್ಲ ಇತಿ ಗಮ್ಯತೇ=ಹೀಗೆ ತಿಳಿಯಲ್ಪಡುತ್ತದೆ.

**ಭಾವಾರ್ಥ**— ಯ ಏನಂ ವಿದುರಮೃತಾಸ್ತೇ ಭವಂತಿ, ಎಂಬ ಶ್ರುತಿಯು ನಾರಾಯಣೋಪನಿಷತ್ತಿನಲ್ಲಿದೆ. ಅದರ ಅರ್ಥ 'ಇವನನ್ನು

ಯಾರು ತಿಳಿಯುತ್ತಾರೋ ಅವರು ಮುಕ್ತರಾಗುತ್ತಾರೆ' ಎಂದು. ಇವನು ಎಂದರೆ ವಿಷ್ಣು. ಏಕೆಂದರೆ, ಏನಂ ಎಂಬ ವ್ಯಕ್ತಿಯನ್ನು 'ತದೇವ ಬ್ರಹ್ಮ' ಎಂದು ಬ್ರಹ್ಮಪದದಿಂದ ಉಲ್ಲೇಖಿಸಲಾಗಿದೆ. ಇದರ ಹಿಂದೆ 'ಯಮಂತಃ ಸಮುದ್ರೇ' ಎಂದು ಕ್ಷೀರಸಾಗರಸ್ಥತ್ವ, ಎಂಬ ವಿಷ್ಣುವಿನ ಲಿಂಗ ಇದೆ. ಅಷ್ಟೇ ಅಲ್ಲ, 'ತದೇವ ಬ್ರಹ್ಮ ಪರಮಂ ಕವೀನಾಂ' ಎಂದು ಮೋಕ್ಷಕಾರಣನಾದವನು ಪರಬ್ರಹ್ಮನೆಂದು ನಿರ್ಧರಿಸಲ್ಪಟ್ಟಿದ್ದಾನೆ. ಅಲ್ಲದೆ, 'ಯತಃ ಪ್ರಸೂತಾ ಜಗತಃ ಪ್ರಸೂತೀ'ಎಂದು ಜಗತ್ತಿಗೆ ಕಾರಣವಾದ ಜಡಪ್ರಕೃತಿಗೂ ಕಾರಣವಾದ ವ್ಯಕ್ತಿಯ ಪ್ರಸ್ತಾವ ಇದೆ. ಇದೂ ವಿಷ್ಣುವಿಗೇ ಅನ್ವಯಿಸುತ್ತದೆ. ಆದ್ದರಿಂದಲೂ 'ಏನಂ' ಎಂದರೆ ವಿಷ್ಣುವನ್ನು ಎಂದೇ ಅರ್ಥ. ಆದ್ದರಿಂದ ಮೋಕ್ಷಪ್ರದತ್ವೇನ ಶಾಸ್ತ್ರಪ್ರತಿಪಾದ್ಯ ವಿಷ್ಣುಮಾತ್ರ .

**ಶಾಸ್ತ್ರಯೋನಿತ್ವಮೇತಸ್ಯ ಜ್ಞಾಯತೇ ಹಿ ಸಮನ್ವಯಾತ್ ।**
**ಸಮಿತಿ ಹ್ಯುಪಸರ್ಗೇಣ ಪರಮುಖ್ಯಾರ್ಥತೋಽಚ್ಯತೇ ॥ ೨೦ ॥**

ಏತಸ್ಯ=ವಿಷ್ಣುವಿಗೆ ಶಾಸ್ತ್ರಯೋನಿತ್ವಂ=ಶಾಸ್ತ್ರಪ್ರತಿಪಾದ್ಯತ್ವವು ಸಮನ್ವಯಾತ್=ಉಪಕ್ರಮಾದಿ ತಾತ್ಪರ್ಯನಿರ್ಣಾಯಕಯುಕ್ತಿಗಳಿಂದ ಜ್ಞಾಯತೇ=ತಿಳಿಯಲ್ಪಡುತ್ತದೆ. ಸಮಿತ್ಯುಪಸರ್ಗೇಣ='ಸಮನ್ವಯಾತ್' ಎಂಬ ಸೂತ್ರದ ಪದದಲ್ಲಿರುವ 'ಸಮ್' ಎಂಬ ಉಪಸರ್ಗದಿಂದ ಏತಸ್ಯ= ವಿಷ್ಣುವಿಗೆ ಪರಮಮುಖ್ಯಾರ್ಥತಾ ಉಚ್ಯತೇ=ವೈದಿಕಪದಗಳಿಂದ ಪರಮುಖ್ಯ ವೃತ್ತಿಯಿಂದ ವೇದ್ಯತ್ವವು ಹೇಳಲ್ಪಟ್ಟಿದೆ.

ಭಾವಾರ್ಥ– ರುದ್ರಾದಿ ಇತರ ದೇವತೆಗಳು ಶಾಸ್ತ್ರವೇದ್ಯರಾಗಬಹುದು ಎಂಬ ಸಂದೇಹಕ್ಕೆ ಪರಿಹಾರರೂಪವಾಗಿಯೂ 'ತತ್ತು ಸಮನ್ವಯಾತ್' ಎಂಬ ಸೂತ್ರವನ್ನು ಇಲ್ಲಿ ವ್ಯಾಖ್ಯಾನಿಸಲಾಗಿದೆ. ಉಪಕ್ರಮಾದಿ ಲಿಂಗಗಳನ್ನು ಪರಿಶೀಲಿಸಿದಾಗ ವಿಷ್ಣುವೇ ಶಾಸ್ತ್ರಪ್ರತಿಪಾದ್ಯ. ಲಕ್ಷಣಾವೃತ್ತಿಯಿಂದ ವಿಷ್ಣುವಿಗೆ ಶಾಸ್ತ್ರಪ್ರತಿ ಪಾದ್ಯತ್ವದ ನಿರಾಸಕ್ಕಾಗಿ 'ಸಮ್' ಎಂಬ ಉಪಸರ್ಗವನ್ನು ಸೂತ್ರದಲ್ಲಿ ಹೇಳಲಾಗಿದೆ.

**ಏವಂ ಪರಮಮುಖ್ಯಾರ್ಥೋ ನಾರಾಯಣ ಇತಿ ಶ್ರುತೇಃ ।**
**ನಿರ್ಧಾರಣಾಯ ನಾಶಬ್ದಮಿತಿ ವೇದಪತಿರ್ಜಗೌ ॥ ೨೧ ॥**

ಏವಂ=ಹೀಗೆ ನಾರಾಯಣಃ=ನಾರಾಯಣನು ಶ್ರುತೇಃ=ವೇದಕ್ಕೆ ಪರಮಮುಖ್ಯಾರ್ಥಃ=ಪರಮಮುಖ್ಯತಾತ್ಪರ್ಯ ವಿಷಯನು ಇತಿ= ಹೀಗೆಂದು ನಿರ್ಧಾರಣಾಯ=ತೀರ್ಮಾನಿಸುವುದಕ್ಕಾಗಿ 'ಸಮ್' ಎಂಬ ಉಪಸರ್ಗವನ್ನು ಸಮನ್ವಯಸೂತ್ರದಲ್ಲಿ ಸೂತ್ರಕಾರರು ಪ್ರಯೋಗಿಸಿರು ವರು ಏವಂ=ಆದ್ದರಿಂದಲೇ ಸಂಗತವಾದುದರಿಂದ ವೇದಪತಿಃ= ಭಗವಾನ್ ವ್ಯಾಸರು ನಾಶಬ್ದಂ='ಈಕ್ಷತೇರ್ನಾಶಬ್ದಂ' ಎಂಬ ಸೂತ್ರದಲ್ಲಿ 'ನ ಅಶಬ್ದಂ'= ಶಬ್ದಾಗಮ್ಯನಲ್ಲ, ಎಂದು ಜಗೌ=ಹೇಳಿದ್ದಾರೆ.

**ಭಾವಾರ್ಥ—** ಐದನೆಯದು ಈಕ್ಷ್ಯತ್ಯಧಿಕರಣ. ಅಲ್ಲಿ ಬ್ರಹ್ಮನಿಗೆ 'ಯತೋ ವಾಚೋ ನಿವರ್ತಂತೇ' ಎಂಬ ಶ್ರುತಿಯಿಂದ ಪ್ರಾಪ್ತವಾದ ಅವಾಚ್ಯತ್ವವನ್ನು ನಿಷೇಧಮಾಡಲಾಗಿದೆ. ಇದು ಅಸಂಗತವೆಂದು ತಿಳಿಯಬಾರದು. ಹಿಂದಿನ ಸೂತ್ರದ 'ಸಂ' ಉಪಸರ್ಗದಿಂದ ಸೂತ್ರಕಾರರು ಸಕಲಶಾಸ್ತ್ರಗಳ ಮುಖ್ಯಾರ್ಥ ಬ್ರಹ್ಮ ಎಂದಿದ್ದಾರೆ. ಆದರೆ, 'ಅಶಬ್ದಮಸ್ಪರ್ಶಂ' ಇತ್ಯಾದಿ ಶ್ರುತಿಗಳು ಬ್ರಹ್ಮನು ಸಕಲ ಶಬ್ದಗಳಿಂದ ಅವಾಚ್ಯ ಎನ್ನುತ್ತವೆ. ಅಂತಹವನು ಸಕಲಶಾಸ್ತ್ರದಿಂದ ಮುಖ್ಯಪ್ರತಿಪಾದ್ಯನಾಗಲಾರ, ಎನ್ನುವ ಆಕ್ಷೇಪ ಬಂದಾಗ ಈ ಸೂತ್ರದಲ್ಲಿ ಅವಾಚ್ಯತ್ವವನ್ನು ನಿಷೇಧ ಮಾಡಲಾಗಿದೆ.

**ಕಥಂ ಸಮನ್ವಯೋ ಜ್ಞೇಯಃ ಸ್ವಲ್ಪಶಾಖಾವಿದಾಂ ನೃಣಾಮ್ ।**
**ವೇದಾ ಹ್ಯನಂತಾ ಇತಿ ಹಿ ಶ್ರುತಿರಾಹಾಪ್ಯನಂತತಾಮ್ ॥ ೨೨ ॥**

**ಅನಂತವೇದನಿರ್ಣೀತಿರ್ಮಹಾಪ್ರಳಯವಾರಿಧೇಃ ।**
**ಉತ್ತಾರಣೋಪಮೇತ್ಯಸ್ಮಾನ್ನ ಜ್ಞೇಯೋಽತ್ರ ಸಮನ್ವಯಃ ॥ ೨೩ ॥**

ಸ್ವಲ್ಪಶಾಖಾವಿದಾಂ=ಕೆಲವೇ ಶಾಖೆಗಳನ್ನು ತಿಳಿದಿರುವ ನೃಣಾಂ= ಮನುಷ್ಯರಿಗೆ ಸಮನ್ವಯಃ=ಸರ್ವವೇದಗಳ ಸಮನ್ವಯವು ಕಥಂ ಜ್ಞೇಯಃ= ಹೇಗೆ ತಿಳಿಯಲ್ಪಡಬೇಕು? 'ಅನಂತಾ ಹಿ ವೇದಾ' ಇತಿ ಶ್ರುತಿಃ='ಅನಂತಾ ವೈ ವೇದಾಃ' ಎಂಬ ಶ್ರುತಿಯೇ ಅನಂತತಾಮ್ ಆಹ=ವೇದಗಳಿಗೆ ಅನಂತತೆ ಯನ್ನು ಹೇಳುತ್ತದೆ. ಅನಂತವೇದನಿರ್ಣೀತಿಃ=ಅನಂತವೇದಗಳ ಅರ್ಥ ನಿರ್ಣಯವು ಮಹಾಪ್ರಲಯವಾರಿಧೇಃ = ಮಹಾಪ್ರಲಯಕಾಲದ

ಸಮುದ್ರದ ಉತ್ತಾರಣೋಪಮಾ=ದಾಟುವುದಕ್ಕೆ ಸಮಾನ ಇತಿ ಅಸ್ಮಾತ್=ಈ ಕಾರಣದಿಂದಾಗಿ ಅತ್ರ=ವಿಷ್ಣುವಿನಲ್ಲಿ ಸಮನ್ವಯಃ=ಸಕಲಶಾಸ್ತ್ರಗಳ ಸಮನ್ವಯವು ನ ಜ್ಞೇಯಃ=ತಿಳಿಯಲು ಸಾಧ್ಯವಿಲ್ಲ.

**ಭಾವಾರ್ಥ**— ಈಕ್ಷತ್ಯಧಿಕರಣದಲ್ಲಿ ಎರಡು ವಿಷಯಗಳನ್ನು ಹೇಳಲಾಗಿದೆ. ಮೊದಲನೆಯದು– ಬ್ರಹ್ಮನಿಗೆ ಅವಾಚ್ಯತ್ವವನ್ನು ನಿಷೇಧ ಮಾಡುವ ಮೂಲಕ ವಾಚ್ಯತ್ವ ಸಮರ್ಥನೆ. ಎರಡನೆಯದು— ಗತಿಸಾಮಾನ್ಯ, ಅಂದರೆ, ಅನಂತವೇದಗಳಲ್ಲಿ ಹೇಳಿರುವ ವಿಷಯ ಒಂದೇ, ಅದರಲ್ಲಿ ವ್ಯತ್ಯಾಸವಿಲ್ಲ. ಒಂದೆಡೆ ಒಂದು, ಇನ್ನೊಂದೆಡೆ ಮತ್ತೊಂದನ್ನು ವೇದಗಳು ಹೇಳುವುದಿಲ್ಲ, ಎಂದು. ಇವೆರಡೂ 'ಸಮನ್ವಯಾತ್' ಎಂಬ ಹಿಂದಿನ ಸೂತ್ರದ 'ಸಮ್' ಉಪಸರ್ಗದ ಅರ್ಥ. ಅದಕ್ಕೆ ಸಕಲ ಎಂದೂ ಮುಖ್ಯ ಎಂದೂ ಅರ್ಥ. 'ಶಾಸ್ತ್ರಯೋನಿ' ಶಬ್ದದೊಂದಿಗೆ ಅದನ್ನು ಸೇರಿಸಿದಾಗ 'ಸಂಶಾಸ್ತ್ರಯೋನಿ– ವಿಷ್ಣುವು ಸಕಲಶಾಸ್ತ್ರಗಳಿಂದ ಮುಖ್ಯಪ್ರತಿಪಾದ್ಯ' ಎಂದು ಅರ್ಥವಾಗುತ್ತದೆ. ಮುಖ್ಯಪ್ರತಿಪಾದ್ಯತ್ವದ ಸಮರ್ಥನೆಯನ್ನು 'ಅಶಬ್ದಂ ನ' ಎಂಬ ಪ್ರಥಮ ಸೂತ್ರದಿಂದ ಮಾಡಲಾಗಿದೆ. ಅದೇ ಅಧಿಕರಣದಲ್ಲಿ ಬರುವ 'ಗತಿಸಾಮಾನ್ಯಾತ್' ಎಂಬ ಸೂತ್ರದಲ್ಲಿ ಸಕಲ ವೇದಗಳಿಂದ ಬರುವ ಗತಿ= ಅವಗತಿ–ಜ್ಞಾನ ಸಮಾನ ಎಂದು ಹೇಳಲಾಗಿದೆ. ಇದರಿಂದ ಪರಿಹರಿಸಲ್ಪಡುವ ಆಕ್ಷೇಪವನ್ನು ಈ ಅನುವ್ಯಾಖ್ಯಾನಭಾಗದಲ್ಲಿ ತಿಳಿಸಲಾಗಿದೆ— ವೇದಗಳಿಗೆ ಕೊನೆ ಇಲ್ಲ. ಅವುಗಳ ಪರಿಜ್ಞಾನ ಅಲ್ಪಾಯುಷ್ಯ ಹಾಗೂ ಅಲ್ಪಪ್ರಜ್ಞೆ ಇರುವ ಮನುಷ್ಯರಿಗೆ ಇರಲು ಸಾಧ್ಯವಿಲ್ಲ. ಹೀಗಿರುವಾಗ ಸಕಲ ವೇದಗಳು ವಿಷ್ಣುಪರವಾಗಿವೆ, ಎನ್ನುವುದನ್ನು ತಿಳಿಯುವುದು ಹೇಗೆ? ಮಹಾಪ್ರಲಯದ ಸಮುದ್ರವನ್ನು ದಾಟುವ ಸಾಹಸ ಇದು, ಎಂದು.

**ಇತ್ಯಾಶಂಕಾಪನೋದಾರ್ಥಂ ಸ ಆಹ ಕರುಣಾಕರಃ ।**
**ಅಶಕ್ಯೋತ್ತಾರಣತ್ವೇಽಪಿ ಹ್ಯಾಗಮಾಪಾರವಾರಿಧೇಃ ।**
**ನಿರ್ಣೀಯತೇ ಮಯ್ಯೈವಾಯಂ ರೋಮಕೂಪಲಯೋದಿನಾ ॥ ೨೪ ॥**

ಇತಿ=ಈ ವಿಧದ ಆಶಂಕಾನಿರಾಸಾಯ=ಸಂದೇಹದ ಪರಿಹಾರಕ್ಕಾಗಿ

ಕರುಣಾಕರಃ ಸಃ=ಕರುಣಾಸಮುದ್ರರಾದ ವ್ಯಾಸರು ಆಹ='ಗತಿ ಸಾಮಾನ್ಯಾತ್' ಎಂಬ ಸೂತ್ರವನ್ನು ಹೇಳಿರುತ್ತಾರೆ. ಅದರ ಅರ್ಥ— ಆಗಮಾಪಾರಮಾರಿಧೇಃ=ವೇಗಳೆಂಬ ದಡ ಇಲ್ಲದ ಸಮುದ್ರದ ಅಶಕ್ಯೋತ್ತಾರಣತ್ವೇಽಪಿ=ದಡಸೇರುವ ಅಸಾಧ್ಯತೆ ಇದ್ದರೂ ರೋಮ-ಕೂಪಲಯೋದಿನಾ=ಮೈಯ್ಯಲ್ಲಿರುವ ಒಂದೊಂದು ರೋಮ ಕೂಪವೂ ಪ್ರಲಯಸಮುದ್ರವೇ ಆಗಿರುವ(ಉದಃ ಅಸ್ಯ ಅಸ್ತೀತಿ ಉದೀ=ಸಮುದ್ರ) ಮಯ್ಯೈವ=ನನ್ನಿಂದಲೇ (ವ್ಯಾಸರಿಂದಲೇ) ಅಯಂ= ಇದು (ಮುಂದೆ ಹೇಳುವ ಗತಿ ಸಾಮಾನ್ಯ ಸೂತ್ರದ ಅರ್ಥವು) ನಿರ್ಣೀಯತೇ= ನಿರ್ಣಯಿಸಲ್ಪಟ್ಟಿದೆ.

**ಭಾವಾರ್ಥ—** 'ಗತಿ ಸಾಮಾನ್ಯಾತ್' ಎಂಬ ಸೂತ್ರವು ಹಿಂದಿನ ಆಕ್ಷೇಪಕ್ಕೆ ಸಮಾಧಾನವನ್ನು ಕೊಡುತ್ತದೆ— ವೇದದ ಅನಂತ ಶಾಖೆಗಳಿಂದ ಉಂಟಾಗುವ ಜ್ಞಾನವು ಏಕವಿಧವಾದುದು. ಆದ್ದರಿಂದ, ಪ್ರಸಿದ್ಧ ಶಾಖೆಗಳಲ್ಲಿ ಯಾವ ಅರ್ಥವನ್ನು ನಿರ್ಣಯಿಸಲಾಗಿದೆಯೋ ಅದೇ ಅರ್ಥವು ಅನಂತ ವೇದಗಳಿಗೆ, ಅದಕ್ಕೆ ಭಿನ್ನವಾದ ಅರ್ಥವಿಲ್ಲ, ಆದ್ದರಿಂದ ಸಕಲ ವೇದಗಳಿಂದಲೂ ವಿಷ್ಣುವೇ ಪ್ರತಿಪಾದ್ಯ ಎಂಬ ನಿರ್ಣಯವನ್ನು ಎಲ್ಲರೂ ಮಾಡಬಹುದು.

ಆದರೆ, ವೇದಗಳು ಅನಂತವಾದುದರಿಂದ ಈ ವಿಷಯವನ್ನಾದರೂ ಹೇಗೆ ನಿರ್ಣಯಮಾಡುವುದು? ವೇದಗಳನ್ನೆಲ್ಲ ತಿಳಿದರೆ ಮಾತ್ರ ಈ ರೀತಿಯ ಗತಿಸಾಮಾನ್ಯವನ್ನು ತಿಳಿಯಲು ಸಾಧ್ಯ. ಅನಂತವೇದಗಳನ್ನು ತಿಳಿಯ ಲಾಗದವರು ಈ 'ಗತಿಸಾಮಾನ್ಯ'ವನ್ನೂ ತಿಳಿಯಲು ಸಾಧ್ಯವಿಲ್ಲ. ಈ ಆಕ್ಷೇಪಕ್ಕೆ ಪ್ರಕೃತ ಅನುವ್ಯಾಖ್ಯಾನವು ಸಮಾಧಾನ ನೀಡಿದೆ— ಈ ನಿರ್ಣಯ ಕೊಟ್ಟವರು ನಮ್ಮಂತಹವರಲ್ಲ, ಭಗವಾನ್ ವೇದವ್ಯಾಸರು. ಅವರು ಸಾಕ್ಷಾತ್ ನಾರಾಯಣಸ್ವರೂಪರು. ನಾರಾಯಣನ ಒಂದೊಂದು ರೋಮಕೂಪವೂ ಪ್ರಲಯ ಸಮುದ್ರವನ್ನು ತುಂಬಿಸಿಕೊಂಡಿದೆ. ಅಂತಹವನು ವೇದ ಎಂಬ ಮಹಾಸಮುದ್ರದ ದಡವನ್ನು ಕಂಡಿದ್ದಾನೆ. ಇತರರಿಗೆ ಅದು ಅಸಾಧ್ಯ ವಾದರೂ ಅವನಿಗೆ ಅದು ಸಾಧ್ಯ.

**ಯದ್ಯಪ್ಯಶೇಷವೇದಾರ್ಥೋ ದುರ್ಗಮೋऽಖಿಲಮಾನವೈಃ ।**
**ಮಜ್ಞಾನಾವ್ಯಾಕೃತಾಕಾಶೇ ಪ್ರಾಪ್ನೋತಿ ಪರಮಾಣುತಾಮ್ ॥ ೨೫ ॥**

ಯದ್ಯಪಿ=ವಸ್ತುತಃ ಅಶೇಷವೇದಾರ್ಥಃ=ಸಮಸ್ತವೇದಗಳ ಅರ್ಥವು ಅಖಿಲಮಾನವೈಃ=ಎಲ್ಲ ಮನುಷ್ಯರಿಂದ ದುರ್ಗಮಃ=ತಿಳಿಯಲು ಅಸಾಧ್ಯವಾದುದು. ಆದರೂ ಮಜ್ಞಾನಾವ್ಯಾಕೃತಾಕಾಶೇ=ನನ್ನ ಜ್ಞಾನವೆಂಬ ಎಲ್ಲೆ ಇಲ್ಲದ ಅವ್ಯಾಕೃತಾಕಾಶದಲ್ಲಿ ಪರಮಾಣುತಾಂ=ಪರಮಾಣುತ್ವವನ್ನು ಆಪ್ನೋತಿ=ಹೊಂದುತ್ತದೆ.

**ಭಾವಾರ್ಥ—** ''ಅನಂತ ವೇದಗಳ ಅರ್ಥವು ಸಾಮಾನ್ಯರಿಗೆ ದುರ್ಜ್ಞೇಯವಾದರೂ ನನಗೆ ತಿಳಿದಿದೆ. ನನ್ನ ಜ್ಞಾನವೂ ಅನಂತವಾದುದು. ಎಲ್ಲೆಯೇ ಇಲ್ಲದ ಅವ್ಯಾಕೃತಾಕಾಶದಲ್ಲಿ ಹಾರಾಡುವ ಪರಮಾಣುವಿನಂತೆ ನನ್ನ ವಿಶಾಲಬುದ್ಧಿಯಲ್ಲಿ ವೇದದ ಅರ್ಥವು ಇದೆ. ಆದ್ದರಿಂದ ನಾನು ವೇದಗಳ ಗತಿಸಾಮಾನ್ಯವನ್ನು ನಿರ್ಣಯಿಸಬಲ್ಲೆ'' ಇದು ವ್ಯಾಸರ ಮಾತು.

**ಇತಿ ಪ್ರಕಾಶಯನ್ ವಿಶ್ವಪತಿರಾಹ ಪ್ರಮೇಯತಾಮ್ ।**
**ನಿಖಿಲಸ್ಯಾಪಿ ವೇದಸ್ಯ ಗತಿಸಾಮಾನ್ಯಮಂಜಸಾ ॥ ೨೬ ॥**

ಇತಿ=ಹಿಂದೆ ಹೇಳಿದಂತೆ ನಿಖಿಲಸ್ಯಾಪಿ ವೇದಸ್ಯ=ಸಮಸ್ತವೇದಕ್ಕೂ ತನ್ನಿಂದ ಅಂಜಸಾ=ಚೆನ್ನಾಗಿ ಪ್ರಮೇಯತಾಂ=ಪ್ರಮಾವಿಷಯತ್ವನ್ನು ಪ್ರಕಾಶಯನ್=ಸೂಚಿಸುತ್ತಾ ಗತಿಸಾಮಾನ್ಯಂ=ಸಮಸ್ತವೇದಗಳಿಂದ ಬರುವ ಜ್ಞಾನಕ್ಕೆ ಸಮಾನತೆಯನ್ನು ಸೂತ್ರಕಾರರು ಹೇಳಿದ್ದಾರೆ.

**ಭಾವಾರ್ಥ—** ವೇದವ್ಯಾಸರು ಸಮಸ್ತ ಜಗತ್ತಿನ ರಕ್ಷಕರು. ಸಮಸ್ತದಲ್ಲಿ ವೇದವೂ ಸೇರಿದೆ. ವೇದವನ್ನು ತಿಳಿಯದೇ ಪಾಲಿಸುವುದೆಂತು? ಆದ್ದರಿಂದ ಸಮಸ್ತಪಾಲಕರಾದ ವೇದವ್ಯಾಸರಿಗೆ ಸಮಸ್ತವೇದಗಳೂ ತಿಳಿದಿವೆ. ಆದ್ದರಿಂದ ಅವರು ಅನಂತವೇದಗಳ ಗತಿಸಾಮಾನ್ಯವನ್ನು ಹೇಳಬಲ್ಲರು.

**ಕೋ ನಾಮ ಗತಿಸಾಮಾನ್ಯಮನಂತಾಗಮಸಂಪದಃ ।**
**ಜ್ಞಾನಸೂರ್ಯಮೃತೇ ಬ್ರೂಯಾತ್ ತಮೇಕಂ ಬಾದರಾಯಣಮ್ ॥**

ಅನಂತಾಗಮಸಂಪದಃ=ಅನಂತವಾದ ವೇದಗಳೆಂಬ ಸಂಪತ್ತಿಗೆ ಗತಿಸಾಮಾನ್ಯಂ=ಏಕವಿಧಜ್ಞಾನಜನಕತ್ವವನ್ನು ಜ್ಞಾನಸೂರ್ಯಂ=ಜ್ಞಾನದಿಂದ ಸೂರ್ಯನಂತಿರುವ ತಮೇಕಂ= ಆ ಒಬ್ಬನೇ ಬಾದರಾಯಣಮ್ ಋತೇ=ವೇದವ್ಯಾಸರನ್ನು ಹೊರತಾಗಿ ಕೋ ನಾಮ=ಇನ್ನಾರುತಾನೇ ಬ್ರೂಯಾತ್=ಹೇಳಿಯಾರು?

ಭಾವಾರ್ಥ— ವೇದವ್ಯಾಸರು ಜ್ಞಾನದಿಂದ ಸೂರ್ಯನಂತಿದ್ದಾರೆ. ಸೂರ್ಯನು ತನ್ನ ಪ್ರಕಾಶದಿಂದ ಎಲ್ಲವನ್ನೂ ಬೆಳಗುವಂತೆ ವ್ಯಾಸರ ಜ್ಞಾನಕ್ಕೆ ಎಲ್ಲವೂ ವಿಷಯವಾಗಿದೆ. ಅವರಿಗೆ ತಿಳಿಯದ ವಿಷಯವೇ ಇಲ್ಲ. ಸಕಲವೇದಗಳನ್ನೂ ಅರ್ಥಸಹಿತವಾಗಿ ಅವರು ತಿಳಿದಿದ್ದಾರೆ. ಅಂತಹವರನ್ನು ಬಿಟ್ಟರೆ ಇನ್ನಾರು ತಾನೇ ವೇದಗಳಿಗೆ ಗತಿಸಾಮಾನ್ಯವನ್ನು ಹೇಳಬಲ್ಲರು?

**ಅನ್ಯೋಽಪ್ಯಲ್ಪಮತಿಃ ಶಾಖಾಚತುಷ್ಪಂಚಗತಂ ವಸು ।**
**ಜಾನನ್ನನುಮಿತತ್ವೇನ ಬ್ರೂಯಾತ್ ತಸ್ಯ ಪ್ರಸಾದತಃ ॥ ೨೮ ॥**

ಅಲ್ಪಮತಿರಪಿ ಅನ್ಯಃ=ಅಲ್ಪಜ್ಞಾನವಿರುವ ಇತರರೂ ಶಾಖಾಚತುಷ್ಪಂಚ ಗತಂ=ನಾಲ್ಕೈದು ಶಾಖೆಗಳಲ್ಲಿರುವ ವಸು=ಸಂಪತ್ತನ್ನು ತಸ್ಯ ಪ್ರಸಾದತಃ= ಭಗವಂತನ ಅನುಗ್ರಹದಿಂದ ಜಾನನ್=ತಿಳಿದು ಇತರ ವೇದಶಾಖೆಗಳಲ್ಲಿ ಅನುಮಿತತ್ವೇನ=ಅನುಮಾನಮಾಡಿ ಬ್ರೂಯಾತ್=ಗತಿಸಾಮಾನ್ಯವನ್ನು ಹೇಳಿಯಾನು.

ಭಾವಾರ್ಥ— ಇಲ್ಲಿ ಸಾಮಾನ್ಯರ ದೃಷ್ಟಿಯಿಂದ ಗತಿಸಾಮಾನ್ಯಸೂತ್ರಕ್ಕೆ ಅರ್ಥಾಂತರವನ್ನು ಹೇಳುತ್ತಾರೆ. ಗತಿಸಾಮಾನ್ಯಾತ್ ಎಂದರೆ 'ಗತಿಸಾಮಾನ್ಯ ವನ್ನು ಅನುಮಾನ ಮಾಡಬಹುದಾದ್ದರಿಂದ' ಎಂದರ್ಥ. ಇತರರೂ, ಉಪಲಬ್ಧವಾದ ಶಾಖೆಗಳಲ್ಲಿ ಗತಿಸಾಮಾನ್ಯವನ್ನು ತಿಳಿದು ಅನಂತಶಾಖೆ ಗಳಲ್ಲೂ ಗತಿಸಾಮಾನ್ಯವನ್ನು ಅನುಮಾನಮಾಡಿ ತಿಳಿಯಬಹುದು. ಇದು ಗತಿಸಾಮಾನ್ಯಾತ್ ಎಂಬ ಸೂತ್ರದ ಅರ್ಥ.

**ಇತಿ ಮುಖ್ಯತಯಾಽಶೇಷಗತಿಸಾಮಾನ್ಯವಿತ್ ಪ್ರಭುಃ ।**
**ಪ್ರತಿಜಜ್ಞೇ ದೃಢಂ ಯಸ್ಮಾದ್ ದೇವಾನಾಮಪಿ ಪೂರ್ಯತೇ ॥ ೨೯ ॥**

ಇತಿ=ಹೀಗೆ ಮುಖ್ಯತಯಾ=ಅನುಮಾನಾದಿ ಇತರ ಪ್ರಮಾಣಗಳ ಸಹಾಯವಿಲ್ಲದೆ ಅಶೇಷ-ಗತಿಸಾಮಾನ್ಯವಿತ್=ಸಕಲ ಶಾಸ್ತ್ರಗಳಿಂದ ಪ್ರತಿಪಾದ್ಯವಾದುದೂ ಒಂದೇ ರೀತಿಯ ವಿಷಯ, ಅವುಗಳಲ್ಲಿ ವಿರೋಧವಿಲ್ಲ ಎನ್ನುವುದನ್ನು ತಿಳಿದಿರುವ ಪ್ರಭುಃ=ಭಗವಾನ್ ವೇದವ್ಯಾಸರು ಯಸ್ಮಾತ್= ಯಾವಕಾರಣದಿಂದ ದೃಢಂ=ನಿರ್ಧಾರಪೂರ್ವಕವಾಗಿ ಪ್ರತಿಜಜ್ಞೇ= ಗತಿಸಾಮಾನ್ಯಾತ್, ಎಂಬ ಸೂತ್ರದಿಂದ ಪ್ರತಿಜ್ಞೆ ಮಾಡಿರುವರೋ ಅದರಿಂದ ದೇವಾನಾಮಪಿ=ದೇವತೆಗಳ ಸಂದೇಹವೂ (ಅಪಿಃ ಪದಾರ್ಥೇ, ಶಂಕೇತ್ಯರ್ಥಃ) ಪೂರ್ಯತೇ=ನಿರಾಕರಿಸಲ್ಪಟ್ಟಿದೆ.

**ಭಾವಾರ್ಥ**— 'ಗತಿಸಾಮಾನ್ಯಾತ್' ಎಂಬ ಸೂತ್ರದಲ್ಲಿ ಉತ್ತಮಾಧಿ ಕಾರಿಗಳಾದ ದೇವತೆಗಳಿಗೆ ಸೂತ್ರಕಾರರಾದ ವೇದವ್ಯಾಸರು ತಾವು ಅನಂತವೇದಗಳ ಗತಿಸಾಮಾನ್ಯವನ್ನು ತಿಳಿದು ಹೇಳಿದ್ದಾರೆ. ದೇವತೆಗಳು, ಸೂತ್ರಕಾರರು ಪರಮಾಪ್ತರೆಂದು ತಿಳಿದಿರುವುದರಿಂದ ಈ ಸೂತ್ರದಿಂದ ಅವರಿಗೆ ಅನಂತವೇದಗಳ ಗತಿಸಾಮಾನ್ಯವು ದೃಢವಾಗುತ್ತದೆ. ಮಧ್ಯಮರ ದೃಷ್ಟಿಯಿಂದ ಗತಿಸಾಮಾನ್ಯಾತ್, ಎಂಬ ಸೂತ್ರಕ್ಕೆ ಗತಿಸಾಮಾನ್ಯಾನು ಮಾನಾತ್, ಎಂದರ್ಥ. ಹಿಂದೆ ಹೇಳಿದಂತೆ ಉಪಲಬ್ದವಾದ ಶಾಖೆಗಳಲ್ಲಿ ಗತಿಸಾಮಾನ್ಯವನ್ನು ನೋಡಿ ಅವರು ಅನುಪಲಬ್ಧಾನಂತಶಾಖೆಗಳಲ್ಲೂ ಗತಿಸಾಮಾನ್ಯವನ್ನು ಅನುಮಾನ ಮಾಡಿ ತಿಳಿಯುತ್ತಾರೆ. ಅವರ ದೃಷ್ಟಿಯಲ್ಲಿ ಗತಿಸಾಮಾನ್ಯಾತ್ ಎಂಬ ಸೂತ್ರಕ್ಕೆ ಗತಿಸಾಮಾನ್ಯಾನುಮಾನಾತ್ ಎಂದು ಅರ್ಥ.

ಇದಲ್ಲದೆ, ಭಾಷ್ಯದಲ್ಲಿ 'ಗತಿಸಾಮಾನ್ಯ ಶ್ರುತೇಃ' ಎಂಬ ಇನ್ನೊಂದು ಅರ್ಥವನ್ನೂ ಇದರ ಮುಂದಿನ 'ಶ್ರುತೇಶ್ಚ' ಎಂಬ ಸೂತ್ರಕ್ಕೆ ಹೇಳಲಾಗಿದೆ.

ಸರ್ವೇ ವೇದಾಃ ಯುಕ್ತಯಃ ಸಪ್ರಮಾಣಾಃ ।
ಬ್ರಾಹ್ಮಂ ಜ್ಞಾನಂ ಜನಯಂತ್ಯೇಕಮೇವ ॥

ಎಂಬ ಪೈಂಗಿಶ್ರುತಿಯಲ್ಲಿ ಸಮಸ್ತವೇದಗಳಿಂದಲೂ ಬರುವ ಬ್ರಹ್ಮಜ್ಞಾನವು ಏಕವಿಧವಾದುದು ಎಂದು ಹೇಳಲಾಗಿದೆ. ಹೀಗೆ ಶ್ರುತೇಶ್ಚ

ಎಂಬ ಸೂತ್ರದ ಅರ್ಥ. ಒಟ್ಟಿನಲ್ಲಿ ಗತಿಸಾಮಾನ್ಯವು ಈಶ್ವರ ಪ್ರತ್ಯಕ್ಷಸಿದ್ಧವಾಗಿದೆ, ಅನುಮಾನ–ಆಗಮಸಿದ್ಧವಾಗಿದೆ, ಎಂದಂತಾಯಿತು.

**ಅತೋ ನಿಖಿಲವೇದಾನಾಂ ಸಿದ್ಧ ಏವಂ ಸಮನ್ವಯಃ ।**
**ಇತಿ ಸುಜ್ಞಾಪಿತಾರ್ಥೋಽಪಿ ಪೃಥಕ್ ಚಾಹ ಸಮನ್ವಯಮ್ ॥ ೩೦ ॥**

ಅತಃ=ಆದ್ದರಿಂದ ನಿಖಿಲವೇದಾನಾಂ=ಸಮಸ್ತವೇದಗಳಿಗೆ ಸಮನ್ವಯಃ= ಉಪಕ್ರಮಾದಿ ಲಿಂಗಗಳಿಂದ ಬ್ರಹ್ಮನಲ್ಲಿ ಸಮನ್ವಯವು ಸಿದ್ಧ ಏವ=ಪ್ರಮಾಣ ಸಿದ್ಧವೇ ಆಯಿತು, ಇತಿ=ಹೀಗೆ ಸುಜ್ಞಾಪಿತಾರ್ಥೋ$\cdot$ಪಿ=ಸ್ಪಷ್ಟವಾಗಿ ಸಮನ್ವಯರೂಪವಿಷಯವನ್ನು ತಿಳಿಸಿರುವ ವ್ಯಾಸರು ಪೃಥಕ್=ಇನ್ನುಳಿದ ಸಮಗ್ರ ಪ್ರಥಮಾಧ್ಯಾಯದಿಂದ ಸಮನ್ವಯಂ=ವೈದಿಕಶಬ್ದಗಳ ಸಮನ್ವಯವನ್ನು ಆಹ=ಹೇಳಿದ್ದಾರೆ.

**ತತ್ರ ಪ್ರಥಮತೋಽನ್ಯತ್ರ ಪ್ರಸಿದ್ಧಾನಾಂ ಸಮನ್ವಯಃ ।**
**ಶಬ್ದಾನಾಂ ವಾಚ್ಯ ಏವಾತ್ರ ಮಹಾಮಲ್ಲೇಶಭಂಗವತ್ ॥ ೩೧ ॥**

ತತ್ರ=ಪ್ರಥಮಾಧ್ಯಾಯದಲ್ಲಿ ಪ್ರಥಮತಃ=ಪ್ರಥಮಪಾದದಲ್ಲಿ ಅತ್ರ= ವಿಷ್ಣುವಿನಲ್ಲಿ ಮಹಾಮಲ್ಲೇಶಭಂಗವತ್=ಮಹಾಮಲ್ಲನನ್ನು ಮೊದಲು ಕೃಷ್ಣನು ಸೋಲಿಸಿದಂತೆ ಅನ್ಯತ್ರಪ್ರಸಿದ್ಧಾನಾಂ ಶಬ್ದಾನಾಂ=ವಿಷ್ಣುಬಿಟ್ಟು ಅನ್ಯರಲ್ಲಿ ಪ್ರಸಿದ್ಧವಾದ ಶಬ್ದಗಳ ಸಮನ್ವಯಃ=ವಿಷ್ಣುವಿನಲ್ಲಿ ಸಮನ್ವಯವು ವಾಚ್ಯ ಏವ=ಹೇಳಲ್ಪಡಬೇಕು.

**ಭಾವಾರ್ಥ**— ಬ್ರಹ್ಮಸೂತ್ರದ ಪ್ರಥಮಪಾದದಲ್ಲಿ ಭಗವದಿತರವಾಚಕಗಳಾಗಿ ಲೋಕ–ವೇದಗಳಲ್ಲಿ ಪ್ರಸಿದ್ಧವಾದ ನಾಮಾತ್ಮಕ ಶಬ್ದಗಳನ್ನು ಭಗವಂತನಲ್ಲಿ ಸಮನ್ವಯಮಾಡಲಾಗಿದೆ. ದ್ವಿತೀಯಪಾದದಲ್ಲಿ ಅನ್ಯತ್ರ ಪ್ರಸಿದ್ಧವಾದ ಲಿಂಗಾತ್ಮಕ ಶಬ್ದಗಳ ಸಮನ್ವಯ. ತೃತೀಯಪಾದದಲ್ಲಿ ಉಭಯತ್ರಪ್ರಸಿದ್ಧವಾದ ನಾಮ–ಲಿಂಗಾತ್ಮಕಶಬ್ದಗಳ ಸಮನ್ವಯ. ಭಗವಂತನಲ್ಲೂ, ಇತರರಲ್ಲೂ ಪ್ರಸಿದ್ಧವಾದ ಶಬ್ದಗಳು ಉಭಯತ್ರ ಪ್ರಸಿದ್ಧಗಳು. ಇಂತಹ ಶಬ್ದಗಳಿಗೆ ಅನ್ಯತ್ರಪ್ರಸಿದ್ಧಿಯನ್ನು ನಿರಾಕರಣೆ ಮಾಡಿದರೆ ಸಾಕು.

ಭಗವಂತಲ್ಲಿ ಅವುಗಳ ಪ್ರಯೋಗವು ಸಿದ್ಧವಾದುದರಿಂದ ತದ್ವಾಚಕತ್ವವನ್ನು ಸಮರ್ಥಿಸಬೇಕಾದ ಅಗತ್ಯವಿಲ್ಲ. ಆದರೆ, ಅನ್ಯತ್ರ ಪ್ರಸಿದ್ಧಶಬ್ದಗಳಲ್ಲಿ ಅನ್ಯತ್ರ ಪ್ರಸಿದ್ಧಿಯನ್ನು ನಿರಾಕರಿಸಬೇಕು, ಭಗವದ್ವಾಚಕತ್ವವನ್ನು ಸಮರ್ಥಿಸಬೇಕು. ಇಂತಹ ಶಬ್ದಗಳ ಸಮನ್ವಯ ಪ್ರಯಾಸಸಾಧ್ಯ. ಅದಕ್ಕಾಗಿ ಅಂತಹ ಶಬ್ದಗಳ ಸಮನ್ವಯವನ್ನು ಮೊದಲು ಮಾಡಲಾಗಿದೆ. ಶ್ರೀಕೃಷ್ಣ ಮಧುರೆಯಲ್ಲಿ ಅನೇಕ ಜಟ್ಟಿಗಳ ಜೊತೆಯಲ್ಲಿ ಹೋರಾಡಬೇಕಾಗಿ ಬಂದಾಗ ಮೊದಲು, ಅವರಲ್ಲಿ ಪ್ರಬಲರಾದ ಚಾಣೂರ–ಮುಷ್ಟಿಕರ ಜೊತೆಗೆ ಹೋರಾಡಿದ. ಅದರಂತೆ, ಪ್ರಯಾಸಸಾಧ್ಯವಾದ ಕೆಲಸವನ್ನು ಮೊದಲು ಮಾಡಬೇಕು. ಆದ್ದರಿಂದ ಅನ್ಯತ್ರಪ್ರಸಿದ್ಧಶಬ್ದಗಳ ಸಮನ್ವಯವನ್ನು ಮೊದಲು ಮಾಡಲಾಗಿದೆ.

**ಇತೋಽಪ್ಯ(ತ್ಯ)ಭ್ಯಧಿಕತ್ವೇಽಪಿ ತುರ್ಯಪಾದೋದಿತಸ್ಯ ತು ।**
**ಮಹಾಸಮನ್ವಯೇ ತಸ್ಮಿನ್ ನಾಧಿಕಾರೋಽಖಿಲಸ್ಯ ಹಿ ॥ ೩೨ ॥**

**ಬ್ರಹ್ಮೈವಾಧಿಕೃತಸ್ತತ್ರ ಮುಖ್ಯತೋಽನ್ಯೇ ಯಥಾಕ್ರಮಮ್ ।**
**ದುರ್ಗಮತ್ವಾಚ್ಚ ನೈವಾತ್ರ ಪ್ರಾಥಮ್ಯೇನೋದಿತೋಽಂಜಸಾ ॥ ೩೩ ॥**

ತುರ್ಯಪಾದೋದಿತಸ್ಯತು=ನಾಲ್ಕನೆಯ ಪಾದದಲ್ಲಿ ಹೇಳಲ್ಪಟ್ಟ ಅನ್ಯತ್ರೈವ ಪ್ರಸಿದ್ಧವಾದ ದುಃಖೀ, ಬದ್ಧಃ ಇತ್ಯಾದಿ ಶಬ್ದಗಳ ಸಮನ್ವಯವು ಇತೋಽಪಿ=ಪ್ರಥಮ ಪಾದದಲ್ಲಿ ಹೇಳಲ್ಪಟ್ಟ ಅನ್ಯತ್ರಪ್ರಸಿದ್ಧ ಶಬ್ದಸಮನ್ವಯ ಕ್ಕಿಂತಲೂ ಅಭ್ಯಧಿಕತ್ವೇಽಪಿ=ಅಧಿಕಶ್ರಮಸಾಧ್ಯವಾದರೂ ತಸ್ಮಿನ್ ಮಹಾಸಮನ್ವಯೇ=ಆ ಮಹಾಸಮನ್ವಯದಲ್ಲಿ ಅಖಿಲಸ್ಯ=ಎಲ್ಲರಿಗೂ ನಾಧಿಕಾರಃ=ಅಧಿಕಾರವಿಲ್ಲ. ತತ್ರ=ಆ ಸಮನ್ವಯದಲ್ಲಿ ಮುಖ್ಯತಃ=ಪ್ರಧಾನ ವಾಗಿ ಬ್ರಹ್ಮೈವ=ಚತುರ್ಮುಖಬ್ರಹ್ಮದೇವನೇ ಅಧಿಕೃತಃ=ಅಧಿಕಾರವನ್ನು ಪಡೆದಿರುತ್ತಾನೆ. ಅನ್ಯೇ=ಇತರರು ಯಥಾಕ್ರಮಂ=ಯೋಗ್ಯತೆಗೆ ಅನುಗುಣ ವಾಗಿ ಅಧಿಕೃತಾಃ=ಅಧಿಕಾರಿಗಳು. ದುರ್ಗಮತ್ವಾಚ್ಚ=ಕೂಡಲೇ ಎಲ್ಲರ ಬುದ್ಧಿಗೂ ತಿಳಿಯುವುದಿಲ್ಲವಾದ ಕಾರಣದಿಂದ ಅತ್ರ=ಸಮನ್ವಯಾಧ್ಯಾಯ ದಲ್ಲಿ ಅಂಜಸಾ=ವಿಸ್ತೃತವಾಗಿ ಪ್ರಾಥಮ್ಯೇನ= ಮೊದಲನೇ ಪಾದದಲ್ಲಿ ನ ಉದಿತಃ=ಹೇಳಲ್ಪಟ್ಟಿಲ್ಲ.

ಭಾವಾರ್ಥ— ಮಹಾಮಲ್ಲಭಂಗ ನ್ಯಾಯವನ್ನು ಅನುಸರಿಸುವುದಾದಲ್ಲಿ ಚತುರ್ಥಪಾದದಲ್ಲಿ ಮಾಡಿರುವ ಅನ್ಯತ್ರೈವ ಪ್ರಸಿದ್ಧವಾದ ಶಬ್ದಗಳ ಸಮನ್ವಯವನ್ನು ಮೊದಲು ಮಾಡಬೇಕು. ಅನ್ಯತ್ರಪ್ರಸಿದ್ಧಶಬ್ದಗಳಿಂದ ಅನ್ಯಪದಾದರ್ಥಗಳ ಉಪಸ್ಥಿತಿ ಬ್ರಹ್ಮನ ಅನುಪಸ್ಥಿತಿಯಾಗುತ್ತದೆ. ಆಕಾಶ ಶಬ್ದದಿಂದ ಜಡಾಕಾಶದ ಉಪಸ್ಥಿತಿ ಬರುತ್ತದೆ, ಬ್ರಹ್ಮನ ಉಪಸ್ಥಿತಿ ಬರುವುದಿಲ್ಲ. ಆದರೆ, ದುಃಖೀ ಎಂಬ ಅನ್ಯತ್ರೈವ ಪ್ರಸಿದ್ಧವಾದ ಶಬ್ದವನ್ನು ಬ್ರಹ್ಮನಲ್ಲಿ ಸಮನ್ವಯ ಮಾಡಲು 'ಈ ಶಬ್ದವು ಸರ್ವಥಾ ಬ್ರಹ್ಮವಾಚಕವಾಗಲಾರದು' ಎನ್ನುವ ಕಲ್ಪನೆಯು ಪ್ರಬಲ ಪ್ರತಿಬಂಧಕವಾಗುತ್ತದೆ. ಆದ್ದರಿಂದ ಆ ಸಮನ್ವಯವನ್ನೇ ಮೊದಲು ಮಾಡಬೇಕು. ಹಾಗೆ ಮಾಡದಿರುವುದಕ್ಕೆ ಮೊದಲನೆಯ ಕಾರಣ— ಅನ್ಯತ್ರೈವ ಪ್ರಸಿದ್ಧವಾದ ಶಬ್ದಗಳ ಸಮನ್ವಯದಲ್ಲಿ ಬ್ರಹ್ಮನೇ ಮುಖ್ಯಾಧಿಕಾರಿ. ಅದು ಇತರ ಶಬ್ದಗಳ ಸಮನ್ವಯದಂತೆ ಸರ್ವಾಧಿಕಾರಿಕವಲ್ಲ. ಸರ್ವಾಧಿಕಾರಿಕ ಸಮನ್ವಯದಲ್ಲಿ ಕ್ಲಿಷ್ಟಕರವಾದುದು ಅನ್ಯತ್ರಪ್ರಸಿದ್ಧಶಬ್ದಸಮನ್ವಯ. ಆದ್ದರಿಂದ ಅದನ್ನು ಮೊದಲು ಮಾಡಲಾಗಿದೆ. ಎರಡನೆಯ ಕಾರಣ–ಅಂತಹ ಶಬ್ದಗಳ ಸಮನ್ವಯ ಸಾಮಾನ್ಯರ ಬುದ್ಧಿಗೆ ನಿಲುಕುವುದಿಲ್ಲ. ಇತರ ವೈದಿಕ ಶಬ್ದಗಳನ್ನು ಸಮನ್ವಯಮಾಡಿದ ಮೇಲೆ ಕ್ರಮೇಣ ಅದು ನಮ್ಮ ಬುದ್ಧಿಗೆ ಹಿಡಿಸುತ್ತದೆ. ಆದ್ದರಿಂದ ಅದನ್ನು ಮೊದಲು ಮಾಡಿಲ್ಲ.

**ಅತೋಽನ್ಯತ್ರ ಪ್ರಸಿದ್ಧಾನಾಂ ಶಬ್ದಾನಾಂ ನಿರ್ಣಯಾಯ ತು ।**
**ಪ್ರವೃತ್ತಃ ಪ್ರಥಮಂ ದೇವಸ್ತತ್ರಾನಂದಾದಯೋ ಗುಣಾಃ ।**
**ಈಶಸ್ಯೈವೇತಿ ನಿರ್ಣೀತಾಃ ಶ್ರುತಿಯುಕ್ತಿ ಸಮಾಶ್ರಯಾತ್ ॥ ೩೪ ॥**

**ದೇವತಾಂತರಗಾಃ ಸರ್ವೇ ಶಬ್ದವೃತ್ತಿನಿಮಿತ್ತತಃ ।**
**ವಿಷ್ಣುಮೇವ ವದಂತ್ಯದ್ಧಾ ತತ್ಸಂಗಾದುಪಚಾರತಃ ॥ ೩೫ ॥**

**ಅನ್ಯದೇವಾನ್ ವದಂತೀಹ ವಿಶೇಷಗುಣವಕ್ತೃತಃ ।**
**ವಿಷ್ಣುಮೇವ ಪರಂ ಬ್ರೂಯುರೇವಮನ್ಯೇಽಪ್ಯಶೇಷತಃ ॥ ೩೬ ॥**

ಅತಃ=ಆದ್ದರಿಂದ ಅನ್ಯತ್ರಪ್ರಸಿದ್ಧಾನಾಂ ಶಬ್ದಾನಾಂ ತು=ಅನ್ಯತ್ರ ಪ್ರಸಿದ್ಧವಾದ ಶಬ್ದಗಳದೇ ನಿರ್ಣಯಾಯ=ಬ್ರಹ್ಮಪರತ್ವ ನಿರ್ಣಯಕ್ಕಾಗಿ ದೇವಃ=ವೇದವ್ಯಾಸರು ಪ್ರಥಮಂ=ಮೊದಲು ಪ್ರವೃತ್ತಃ=ಪ್ರವೃತ್ತಿಮಾಡಿದ್ದಾರೆ.

ತತ್ರ=ಸಮನ್ವಯದಲ್ಲೂ ಶ್ರುತಿ–ಯುಕ್ತಿ ಸಮಾಶ್ರಯಾತ್=ಶ್ರುತಿ ಮತ್ತು ಯುಕ್ತಿಗಳ ಆಧಾರದಿಂದ ಪ್ರಥಮಂ=ಮೊದಲು ಆನಂದಾದಯಃ ಗುಣಾಃ= ಶುಭಗುಣಗಳಲ್ಲಿ ಪ್ರಧಾನವಾಗಿರುವ ಆನಂದ–ವಿಜ್ಞಾನಾದಿ ಗುಣಗಳು ಈಶಸ್ಯೈವ=ಬ್ರಹ್ಮನಿಗೇ ಎಂದು ನಿರ್ಣೀತಾಃ=ಆನಂದಮಯಾಧಿಕರಣದಲ್ಲಿ ನಿರ್ಣಯಿಸಲ್ಪಟ್ಟಿದೆ.

ದೇವತಾಂತರಗಾಃ ಸರ್ವೇ=ಪ್ರಾಣಾದಿ ದೇವತಾಂತರವಾಚಕಗಳಾದ ಶಬ್ದಗಳೆಲ್ಲವೂ ಶಬ್ದವೃತ್ತಿನಿಮಿತ್ತತಃ=ಶಬ್ದದ ವೃತ್ತಿಗಳಾದ ಯೋಗ ಮತ್ತು ರೂಢಿಗಳ ನಿಮಿತ್ತವಾದ ಬಹುಲಪ್ರಯೋಗ ಪ್ರವೃತ್ತಿನಿಮಿತ್ತಪ್ರಾಚುರ್ಯಾದಿ ಕಾರಣಗಳಿಂದ ವಿಷ್ಣುಮೇವ=ವಿಷ್ಣುವನ್ನೇ ಅದ್ಧಾ=ಮುಖ್ಯವಾಗಿ ವದಂತಿ= ಹೇಳುತ್ತವೆ. ತತ್ಸಂಗಾತ್=ಅಂತಹ ವಿಷ್ಣುವಿನ ಸಂಗದಿಂದಾಗಿ ಉಪಚಾರತಃ=ಅಲ್ಪಪ್ರವೃತ್ತಿ ನಿಮಿತ್ತದಿಂದಾಗಿ ಅನ್ಯದೇವಾನ್=ಇತರ ದೇವತೆಗಳನ್ನು ವದಂತಿ=ಹೇಳುತ್ತವೆ. ವಿಶೇಷಗುಣವಕ್ತೃತಃ=ನಿರವಧಿಕ ಐಶ್ವರ್ಯಾದಿ ಗುಣವಾಚಕಗಳಾದುದರಿಂದ ಶಬ್ದಗಳೆಲ್ಲವೂ ಪರಂ ವಿಷ್ಣುಮೇವ=ಸರ್ವೋತ್ತಮನಾದ ವಿಷ್ಣುವನ್ನೇ ಬ್ರೂಯುಃ=ಹೇಳುತ್ತವೆ. ಇಹ=ದೇವತಾಂತರದಲ್ಲಿ ತಥಾ ನ=ಪ್ರವೃತ್ತಿನಿಮಿತ್ತಪ್ರಾಚುರ್ಯ ಮತ್ತು ತತ್ಸ್ವಾತಂತ್ರ್ಯಗಳು ಇಲ್ಲ. ಆದ್ದರಿಂದ ಇತರ ದೇವತೆಗಳು ಇಂದ್ರಾದಿ ಶಬ್ದಗಳಿಂದ ಮುಖ್ಯವಾಚ್ಯರಲ್ಲ. ಏವಂ=ಇದೇ ರೀತಿಯಲ್ಲಿ ಅನ್ಯೇಪಿ= ಜಡವಾಚಕಗಳಾದ ಆಕಾಶಾದಿ ಶಬ್ದಗಳೂ ವಿಷ್ಣುವನ್ನೇ ಹೇಳುತ್ತವೆ.

ಭಾವಾರ್ಥ— ಪ್ರಥಮಪಾದದಲ್ಲಿ ಹೀಗೆ ಅನ್ಯತ್ರಪ್ರಸಿದ್ಧವಾದ ಶಬ್ದಗಳ ಸಮನ್ವಯಕ್ಕೆ ಪ್ರವೃತ್ತರಾದ ಸೂತ್ರಕಾರರು ಶುಭಗುಣಗಳಲ್ಲಿ ಪ್ರಧಾನವಾದ ಆನಂದಮಯ, ವಿಜ್ಞಾನಮಯ ಮುಂತಾದ ಶಬ್ದಗಳನ್ನು ಆನಂದಮಯಾಧಿಕರಣದಲ್ಲಿ ಸಮನ್ವಯಮಾಡಿದ್ದಾರೆ. ಅದಕ್ಕೆ ಬ್ರಹ್ಮಶಬ್ದವೆಂಬ ಶ್ರುತಿಯನ್ನೂ

ಲೋಕಪ್ರೇರಕತ್ವಯುಕ್ತಿಯನ್ನೂ (ತದ್ಧೇತು ವ್ಯಪದೇಶಾಚ್ಚ) ಆಧಾರವನ್ನಾಗಿ ಕೊಟ್ಟಿದ್ದಾರೆ. ದೇವತಾವಾಚಕಗಳಾದ ಇಂದ್ರ–ಪ್ರಾಣಾದಿಗಳೂ ಪರಮ ಮುಖ್ಯವೃತ್ತಿಯಿಂದ ಬ್ರಹ್ಮವಾಚಕಗಳು. ಯೋಗ ಮತ್ತು ರೂಡಿಗಳು ಶಬ್ದವೃತ್ತಿಗಳು. ಇಂದ್ರ ಶಬ್ದದ ಯೋಗಾರ್ಥ ಈಶನಶಕ್ತಿ. ಇಂತಹ ಪರಿಪೂರ್ಣ ಶಕ್ತಿ ಪರಮಾತ್ಮನಲ್ಲಿದೆ. ಆದ್ದರಿಂದ ಇಂದ್ರಶಬ್ದದ ಪರಮಮುಖ್ಯಾರ್ಥ ಪರಮಾತ್ಮ. ಅಂತಹ ಪರಮಾತ್ಮನು ಶಚೀಪತಿಯ ಒಳಗೆ ಇರುವುದರಿಂದ ಹಾಗೂ ಅಲ್ಪ ಈಶನಶಕ್ತಿಯೂ ಇರುವುದರಿಂದ ಅವನೂ ಇಂದ್ರಶಬ್ದದ ಮುಖ್ಯಾರ್ಥ. ಹೀಗೆ ದೇವತಾವಾಚಕಗಳಾದ ಎಲ್ಲ ಶಬ್ದಗಳನ್ನೂ ಜಡವಾಚಕಗಳಾದ ಆಕಾಶಾದಿ ಶಬ್ದಗಳನ್ನೂ ಇದೇ ನ್ಯಾಯದಿಂದ ಸೂತ್ರಕಾರರು ಬ್ರಹ್ಮನಲ್ಲಿ ಸಮನ್ವಯ ಮಾಡಿದ್ದಾರೆ.

**ಇತ್ಯನ್ಯತ್ರ ಪ್ರಸಿದ್ಧೋರುಶಬ್ದರಾಶೇರಶೇಷತಃ ।**
**ಜ್ಞಾತೇ ಸಮನ್ವಯೇ ವಿಷ್ಣೌ ಲಿಂಗೈರ್ಹ್ಯೇಷ ಸಮನ್ವಯಃ ॥ ೩೭ ॥**

**ತೇಷಾಮನ್ಯಗತತ್ವೇ ತು ನ ಸ್ಯಾತ್ ಸಮ್ಯಕ್ ಸಮನ್ವಯಃ ।**
**ಇತ್ಯೇವಾಶೇಷಲಿಂಗಾನಾಂ ಬ್ರಹ್ಮಣ್ಯೇವ ಸಮನ್ವಯಮ್ ॥ ೩೮ ॥**

ಇತಿ=ಹೀಗೆ ಪ್ರವೃತ್ತಿನಿಮಿತ್ತಸ್ವಾತಂತ್ರ್ಯ ಮತ್ತು ಪ್ರಾಚುರ್ಯಗಳಿಂದ ಅನ್ಯತ್ರಪ್ರಸಿದ್ಧೋರುಶಬ್ದರಾಶೇಃ=ಅನ್ಯತ್ರಪ್ರಸಿದ್ಧವಾದ ಸಕಲಶಬ್ದರಾಶಿಯ ಅಶೇಷತಃ=ಸಮಗ್ರವಾದ ವಿಷ್ಣೌ ಸಮನ್ವಯೇ ಜ್ಞಾತೇ ಸತಿ=ವಿಷ್ಣುವಿನಲ್ಲಿ ಸಮನ್ವಯವು ಪ್ರಥಮಪಾದದಿಂದ ತಿಳಿಯಲ್ಪಟ್ಟಾಗ ಏಷಃ ಸಮನ್ವಯಃ=ಈ ಪ್ರಥಮಪಾದೋಕ್ತವಾದ ಸಮನ್ವಯವು ವಿಷ್ಣುವಿನಲ್ಲಿ ಲಿಂಗೈಃ=ಆ ಪ್ರಕರಣಗತವಾದ ವಿಷ್ಣುವಿನ ಅಸಾಧಾರಣಧರ್ಮಗಳಿಂದ ತೇಷಾಂ=ಅಂತಹ ಲಿಂಗಗಳಿಗೆ ಅನ್ಯಗತತ್ವೇ ಸತಿ=ಇತರ ದೇವತಾ ಸಾಧಾರಣ್ಯವಿದ್ದಲ್ಲಿ ಸಮನ್ವಯಃ=ವಿಷ್ಣುವಿನಲ್ಲಿ ಶಬ್ದಸಮನ್ವಯವು ಸಮ್ಯಕ್ ನ ಸ್ಯಾತ್= ಸರಿಯಾಗಲಿಕ್ಕಿಲ್ಲ. ಇತ್ಯೇವ=ಈ ಕಾರಣಕ್ಕಾಗಿಯೇ ಅಶೇಷಲಿಂಗಾನಾಂ= ಸಕಲಧರ್ಮಗಳ ಸಮನ್ವಯಂ=ಸಮನ್ವಯವನ್ನು ಬ್ರಹ್ಮಣ್ಯೇವ=ಬ್ರಹ್ಮನಲ್ಲೇ ಆಹ=ವೇದವ್ಯಾಸರು ದ್ವಿತೀಯಪಾದದಲ್ಲಿ ಮಾಡಿರುತ್ತಾರೆ.

ಭಾವಾರ್ಥ— ಪ್ರಥಮ ಪಾದದಲ್ಲಿ ಅನ್ಯತ್ರಪ್ರಸಿದ್ಧವಾದ ಕೆಲವೇ ನಾಮಗಳನ್ನು ಸಮನ್ವಯ ಮಾಡಿದ್ದರೂ ಅಲ್ಲಿ ಹೇಳಿರುವ ನ್ಯಾಯದಿಂದ ಅಂತಹ ಸಕಲ ಶಬ್ದಗಳ ಸಮನ್ವಯವನ್ನೂ ಮಾಡಿದಂತಾಗಿದೆ.

ಪ್ರಥಮಪಾದದಲ್ಲಿ ನಾಮಸಮನ್ವಯ ಮಾಡಲು 'ತನ್ನಿಷ್ಠಸ್ಯ-ಮೋಕ್ಷೋಪದೇಶಾತ್' ಇತ್ಯಾದಿ ಲಿಂಗಗಳನ್ನು ಆಧಾರವನ್ನಾಗಿ ಕೊಡಲಾಗಿದೆ. ಅಂತಹ ಲಿಂಗಗಳು ಇತರ ದೇವತೆಗಳಲ್ಲೂ ಇದ್ದಲ್ಲಿ ಅವುಗಳು ಸಾಧಕ ಗಳಾಗುವುದಿಲ್ಲ. ಅದಕ್ಕಾಗಿ ದ್ವಿತೀಯಪಾದದಲ್ಲಿ ಶ್ರುತ್ಯುಕ್ತಲಿಂಗಗಳನ್ನು ವಿಷ್ಣುವಿನಲ್ಲಿ ಸಮರ್ಥಿಸಲಾಗಿದೆ.

ವಸ್ತುತಃ ''ಸರ್ವತ್ರ ಪ್ರಸಿದ್ಧೋಪದೇಶಾತ್'' ಎಂಬ ದ್ವಿತೀಯಪಾದ ದಲ್ಲಿ ಹೇಳಿರುವ ಸರ್ವಗತತ್ವಲಿಂಗವನ್ನು ಪ್ರಥಮಪಾದದಲ್ಲಿ ಯಾವ ಶಬ್ದಸಮನ್ವಯಕ್ಕೂ ಆಧಾರವನ್ನಾಗಿ ಕೊಡಲಾಗಿಲ್ಲ. 'ಅಂತಸ್ತದ್ಧರ್ಮೋಪ ದೇಶಾತ್' ಎಂಬ ಸೂತ್ರದಲ್ಲಿ ಅಂತಃಸ್ಥತ್ವವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಲು ಸಮುದ್ರಾಂತಸ್ಥತ್ವಲಿಂಗವನ್ನು ಸೂತ್ರಕಾರರು ಹೇಳಿದ್ದಾರೆ. ಅದನ್ನು ದ್ವಿತೀಯಪಾದದಲ್ಲಿ ಸಮರ್ಥಿಸಿಲ್ಲ. ಆದರೂ, ಪ್ರಥಮಪಾದದಲ್ಲಿ ಸೂತ್ರೋಕ್ತವಾದ ನಾಮಗಳ ಸಮನ್ವಯ ಮಾತ್ರ ವಿವಕ್ಷಿತವಲ್ಲ. ಸಕಲವೈದಿಕ ಶಬ್ದಗಳ ಸಮನ್ವಯವೂ ಉದ್ದಿಷ್ಟವಾಗಿದೆ. ಹೀಗೆ ಅನಂತ ಅನ್ಯತ್ರ ಪ್ರಸಿದ್ಧನಾಮಾತ್ಮಕ ಶಬ್ದಗಳೊಂದಿಗೆ ಆ ಪ್ರಕರಣಗತವಾದ ಅನೇಕ ಲಿಂಗಗಳು ಸಾಧಕವಾಗಿವೆ. ಅವುಗಳಲ್ಲಿ ಕೆಲವು ಅವಿಪ್ರತಿಪನ್ನವಾಗಿವೆ, ಕೆಲವು ಮಾತ್ರ ವಿಪ್ರತಿಪನ್ನವಾಗಿವೆ. ಅಂತಹ ಲಿಂಗಗಳನ್ನು ದ್ವಿತೀಯಪಾದದಲ್ಲಿ ಸಮನ್ವಯ ಮಾಡಲಾಗಿದೆ.

**ಆಹೋಭಯಗತತ್ವಂ ಚ ಸ್ಯಾದತೋ ಲಿಂಗಶಬ್ದಯೋಃ ।**
**ಇತಿ ಸಂಶಯನುತ್ತ್ಯರ್ಥಮುಭಯತ್ರ ಪ್ರತೀತಿತಃ ॥ ೩೯ ॥**

**ಶಬ್ದಾನಾಂ ವರ್ತಮಾನಾನಾಂ ಸಲಿಂಗಾನಾಂ ವಿಶೇಷತಃ ।**
**ಸಮನ್ವಯೋ ಹರಾಮೇವ ಯನ್ನೈವಾನ್ಯತ್ರ ಮುಖ್ಯತಃ ॥ ೪೦ ॥**

**ಶಬ್ದಾ ಲಿಂಗಾನಿ ಚ ಯತೋ ನೈವಾನ್ಯತ್ರ ಸ್ವತಂತ್ರತಾ ।**
**ಅಸ್ವತಂತ್ರೇಷು ಶಬ್ದಸ್ಯ ವೃತ್ತಿಹೇತುರ್ನ ಮುಖ್ಯತಃ ॥ ೪೧ ॥**

ಅತಃ=ಪ್ರಥಮದ್ವಿತೀಯಪಾದಗಳಲ್ಲಿ ಅನ್ಯತ್ರ ಪ್ರಸಿದ್ಧವಾದ ಶಬ್ದಗಳನ್ನು ಸಮನ್ವಯ ಮಾಡಿರುವುದರಿಂದ ಲಿಂಗ-ಶಬ್ದಯೋಃ=ಲಿಂಗಾತ್ಮಕ ಮತ್ತು ನಾಮಾತ್ಮಕ ಶಬ್ದಗಳಿಗೆ ಉಭಯಗತತ್ವಂ ಚ ಸ್ಯಾತ್=ಬ್ರಹ್ಮ ಮತ್ತು ಇತರ ವಾಚಕತ್ವವು (ಉಭಯ ವಾಚಕತ್ವವು) ಸ್ಯಾತ್=ಇರಲಿ, ಇತಿ=ಈ ರೀತಿಯ ಸಂಶಯನುತ್ತ್ಯರ್ಥಂ=ಸಂಶಯದ ನಿರಾಸಕ್ಕಾಗಿ ಉಭಯತ್ರ=ಭಗವಂತನಲ್ಲಿ ಹಾಗೂ ಇತರದಲ್ಲಿ ಪ್ರತೀತಿತಃ=ವರ್ತಮಾನಾನಾಂ=ವಾಚಕವಾಗಿರುವಂತೆ ಕಾಣುವ ಸಲಿಂಗಾನಾಂ ಶಬ್ದಾನಾಂ=ಲಿಂಗಾತ್ಮಕಶಬ್ದಗಳಿಂದ ಸಹಿತವಾದ ನಾಮಾತ್ಮಕ ಶಬ್ದಗಳ ಹರಾವೇವ=ವಿಷ್ಣುವಿನಲ್ಲೇ ವಿಶೇಷತಃ=ಮಪರಮ ಮುಖ್ಯವೃತ್ತಿಯಿಂದ ಸಮನ್ವಯಃ=ಸಮನ್ವಯವು ಹೇಳಲ್ಪಟ್ಟಿದೆ. ಯತ್= ಯಾವಕಾರಣದಿಂದ ಶಬ್ದಾಃ=ನಾಮಗಳು ಲಿಂಗಾನಿ ಚ=ಲಿಂಗಾತ್ಮಕ ಶಬ್ದಗಳೂ ಅನ್ಯತ್ರ=ವಿಷ್ಣು ಬಿಟ್ಟು ಇತರಲ್ಲಿ ನೈವ=ಇಲ್ಲ, ಯತಃ=ಏಕೆಂದರೆ, ಅನ್ಯತ್ರ=ಇತರಲ್ಲಿ ಸ್ವತಂತ್ರತಾ=ಸ್ವಾತಂತ್ರ್ಯವು ನೈವ=ಇಲ್ಲ. ಯತಃ=ಯಾವ ಕಾರಣದಿಂದ ಅಸ್ವತಂತ್ರೇಷು=ಅಸ್ವತಂತ್ರರಲ್ಲಿ ಶಬ್ದಸ್ಯ=ಶಬ್ದಸಮೂಹದ ವೃತ್ತಿ ಹೇತುಃ=ಪ್ರವೃತ್ತಿನಿಮಿತ್ತವು ಮುಖ್ಯತಃ=ಮುಖ್ಯವಾಗಿ ನ=ಇಲ್ಲ. ಅತಃ= ಇತರವು ಶಬ್ದಗಳ ಮುಖ್ಯಾರ್ಥವಲ್ಲ. ಆದರೂ ಶಬ್ದಕ್ಕೊಂದು ಮುಖ್ಯಾರ್ಥವು ಇರಲೇಬೇಕು. ಆದ್ದರಿಂದ ಹರಿಯೇ ಮುಖ್ಯಾರ್ಥ.

**ಭಾವಾರ್ಥ—** ಮೊದಲು ಎರಡು ಪಾದಗಳಲ್ಲಿ ಅನ್ಯತ್ರ ಪ್ರಸಿದ್ಧವಾದ ನಾಮ–ಲಿಂಗಾತ್ಮಕವಾದ ಶಬ್ದಗಳನ್ನು ಸಮನ್ವಯ ಮಾಡಿದಾಗ– ಹಾಗಾದರೆ ಶಬ್ದಗಳು ಉಭಯತ್ರಪ್ರಸಿದ್ಧಗಳಾಗಲಿ, ಎಂಬ ಸಂದೇಹಬರುತ್ತದೆ. ಅದರ ಪರಿಹಾರಕ್ಕಾಗಿ ತೃತೀಯಪಾದದಲ್ಲಿ ಅಂತಹ ಶಬ್ದಗಳೂ ವಿಷ್ಣುವನ್ನೇ ಮುಖ್ಯ ವಾಗಿ ಪ್ರತಿಪಾದಿಸುತ್ತವೆ, ಎಂದು ಮೂರನೆಯ ಪಾದದಲ್ಲಿ ತಿಳಿಸಲಾಗಿದೆ.

ಶಬ್ದವನ್ನು ಒಂದು ವಸ್ತುವಿನಲ್ಲಿ ಪ್ರಯೋಗ ಮಾಡಬೇಕಾದರೆ ಅದರಲ್ಲಿ ಆ ಶಬ್ದಪ್ರವೃತ್ತಿನಿಮಿತ್ತ ಇರಬೇಕು. 'ಧನಿಕ' ಎಂಬ ಶಬ್ದದ ಪ್ರಯೋಗಕ್ಕೆ ಹಣವು ನಿಮಿತ್ತ. ಹಣವಿದ್ದವನಲ್ಲಿ ಆ ಶಬ್ದವನ್ನು ಪ್ರಯೋಗಿಸಲಾಗುತ್ತದೆ. ಬ್ಯಾಂಕಿನ

ಲೆಕ್ಕಿಗನಲ್ಲಿ ಬೇಕಾದಷ್ಟು ಹಣವಿದ್ದರೂ ಅವನನ್ನು ಧನಿಕ, ಎನ್ನುವುದಿಲ್ಲ. ಏಕೆಂದರೆ, ಆ ಹಣವನ್ನು ಬೇಕಾದಂತೆ ವಿನಿಯೋಗಿಸಲು ಅವನಿಗೆ ಹಕ್ಕಿಲ್ಲ. ಆದ್ದರಿಂದ ಶಬ್ದದ ಮುಖ್ಯಪ್ರಯೋಗಕ್ಕೆ ಪ್ರವೃತ್ತಿನಿಮಿತ್ತ ಸ್ವಾತಂತ್ರ್ಯವೂ ಕಾರಣ. ಎಲ್ಲ ಪ್ರವೃತ್ತಿನಿಮಿತ್ತಗಳ ಸ್ವಾತಂತ್ರ್ಯವೂ ದೇವರಲ್ಲಿದೆ. ಅಂದಮೇಲೆ ಎಲ್ಲ ಶಬ್ದಗಳ ಮುಖ್ಯಾರ್ಥವೂ ಅವನೇ. ಇತರರು ಅಮುಖ್ಯವಾಗಿ ಶಬ್ದವಾಚ್ಯರು. ಹೀಗೆ ತೃತೀಯಪಾದದಲ್ಲಿ ಉಭಯತ್ರ ಪ್ರಸಿದ್ಧವಾದ ಶಬ್ದ ಗಳಿಂದಲೂ ಮುಖ್ಯವಾಚ್ಯ ಪರಮಾತ್ಮನೇ ಆಗಿದ್ದಾನೆ, ಎಂದು ಸಮರ್ಥಿಸು ತ್ತಾರೆ.

**ಯತೋಽತೋ ಯದಧೀನಾಸ್ತೇ ಶಬ್ದಾರ್ಥತ್ವಮುಪಾಗತಾಃ ।**
**ಅತ್ಯಲ್ಪೇನೈವ ಶಬ್ದಸ್ಯ ವೃತ್ತಿಹೇತುಗುಣೇನ ತು ॥ ೪೨ ॥**

**ಅಯೋ ಯಥಾ ದಾಹಕತ್ವಂ ಸ ಏವೇಶಃ ಸ್ವತಂತ್ರತಃ ।**
**ಮುಖ್ಯಶಬ್ದಾರ್ಥ ಇತಿ ಹಿ ಸ್ವೀಕರ್ತವ್ಯೋ ಮನೀಷಿಭಿಃ ॥ ೪೩ ॥**

ತೇ=ಭಗವಂತನಿಗಿಂತ ಇತರ ಪದಾರ್ಥಗಳು ಯದಧೀನಾಃ= ಭಗವಂತನ ಅಧೀನಗಳಾಗಿದ್ದು ಶಬ್ದಸ್ಯ=ಸ್ವವಾಚಕಶಬ್ದಗಳ ಅತ್ಯಲ್ಪೇನೈವ= ಅತ್ಯಂತ ಕಡಿಮೆಯಾದ ಪ್ರವೃತ್ತಿಹೇತುಗುಣೇನ=ಪ್ರವೃತ್ತಿನಿಮಿತ್ತವಾದ ಧರ್ಮದಿಂದ ಶಬ್ದಾರ್ಥತ್ವಂ=ತತ್ತತ್ ಶಬ್ದವಾಚ್ಯತ್ವವನ್ನು ಅಯಃ=ಕಬ್ಬಿಣವು ಯಥಾ=ಹೇಗೆ ದಾಹಕತ್ವಂ=ಬೆಂಕಿಯಿಂದಾಗಿ ದಾಹಕತ್ವವನ್ನು ಉಪಾಗತಃ= ಹೊಂದಿದೆಯೋ ಅದರಂತೆ ಉಪಾಗತಾಃ=ಹೊಂದಿವೆ. ಆದ್ದರಿಂದ ಸಃ ಈಶಃ ಏವ=ಆ ಪರಮಾತ್ಮನೇ ಸ್ವತಂತ್ರತಃ=ಸ್ವತಂತ್ರನಾದ ಕಾರಣ ಮುಖ್ಯಶಬ್ದಾರ್ಥಃ ಇತಿ=ಶಬ್ದಗಳ ಮುಖ್ಯಾರ್ಥನೆಂದು ಮನೀಷಿಭಿಃ=ಶುತ್ಯಾದಿಗಳ ಪರಿಚ ಇರುವವರಿಂದ ಸ್ವೀಕರ್ತವ್ಯಃ=ಅಂಗೀಕರಿಸಲ್ಪಡಬೇಕು, ಇತ್ಯಾಹ=ಹೀಗೆಂದು ತೃತೀಯಪಾದದಲ್ಲಿ ಹೇಳಲಾಗಿದೆ.

**ಭಾವಾರ್ಥ—** ಸಕಲಶಬ್ದಗಳ ಪ್ರವೃತ್ತಿನಿಮಿತ್ತಗಳ ಸ್ವಾತಂತ್ರ್ಯವು ಭಗವಂತನಲ್ಲಿ ಇರುವುದರಿಂದ ಅವನೇ ಮುಖ್ಯಾರ್ಥ ಎಂದು ಹಿಂದಿನ ಅನುವ್ಯಾಖ್ಯಾನದಲ್ಲಿ ಹೇಳಿ ಇಲ್ಲಿ ಇನ್ನೊಂದು ಕಾರಣವನ್ನು ಹೇಳಲಾಗದೆ—

ಶಬ್ದಗಳ ಪ್ರವೃತ್ತಿ ನಿಮಿತ್ತವು ನಿರವಧಿಕವಾಗಿ ಇರುವುದು ಭಗವಂತನಲ್ಲಿ ಮಾತ್ರ, ಇತರರಲ್ಲಿ ಅಲ್ಪಪ್ರವೃತ್ತಿನಿಮಿತ್ತ ಮಾತ್ರ ಇದೆ. ಇದರಿಂದಾಗಿಯೂ ಸಕಲಶಬ್ದಗಳ ಮುಖ್ಯಾರ್ಥ ಭಗವಂತ. ಉಳಿದವೆಲ್ಲ ಅಮುಖ್ಯಾರ್ಥಗಳು.

ಶಬ್ದದ ಪ್ರವೃತ್ತಿನಿಮಿತ್ತವು ಯಾರ ಅಧೀನವೋ ಅವನೇ ಆ ಶಬ್ದದ ಮುಖ್ಯಾರ್ಥ, ಎನ್ನುವುದಕ್ಕೆ ನಿದರ್ಶನ ಕಬ್ಬಿಣ. ಅದು ಬೆಂಕಿ ತಗುಲಿದಾಗ ಸುಡುತ್ತದೆ. ಆದರಲ್ಲಿ ದಾಹಕತ್ವಧರ್ಮ ಅಗ್ನಿಯ ಅಧೀನವಾದುದು. ಆದ್ದರಿಂದ ದಹತಿ ಎಂಬ ಶಬ್ದದ ಮುಖ್ಯಾರ್ಥ ಅಗ್ನಿ. ಕಬ್ಬಿಣ ಅಮುಖ್ಯಾರ್ಥ. ಆದ್ದರಿಂದಲೇ 'ಅಯೋ ದಹತಿ' ಎಂಬ ಪ್ರಯೋಗ ಅಮುಖ್ಯ. ಆದರಂತೆ ಎಲ್ಲ ಶಬ್ದಗಳ ಮುಖ್ಯಾರ್ಥ ಸ್ವತಂತ್ರನಾದ ಭಗವಂತ, ಇತರೆಲ್ಲವೂ ಅಮುಖ್ಯಾರ್ಥ.

**ಇತ್ಯಾಹೈವಂ ಚ ಶಬ್ದಾನಾಂ ನಾರಾಯಣ ಸಮನ್ವಯೇ ।**
**ಸಿದ್ಧೇಽಪ್ಯಶೇಷಶಬ್ದಾನಾಂ ನ ಕಥಂಚನ ಯುಜ್ಯತೇ ।**
**ವಿರೋಧಾದವರತ್ವಾದೇರಪಿ ಪ್ರಾಪ್ತಿರ್ಯತೋ ಭವೇತ್ ॥ ೪೪ ॥**

ಈ ಶ್ಲೋಕದಲ್ಲಿರುವ 'ಇತ್ಯಾಹ' ಎನ್ನುವ ಎರಡು ಪದಗಳಿಗೆ ಹಿಂದಿನ ಶ್ಲೋಕದೊಂದಿಗೆ ಅನ್ವಯ.

ಏವಂ ಚ=ಹೀಗೆ, ಅಂದರೆ, ಶಬ್ದಾನಾಂ=ಸೂತ್ರೋಕ್ತವಾದ ಕೆಲವು ಶಬ್ದಗಳಿಗೆ ನಾರಾಯಣಸಮನ್ವಯೇ=ಶ್ರೀಮನ್ನಾರಾಯಣನಲ್ಲಿ ಸಮನ್ವಯವು ಸಿದ್ಧೇಪಿ=ಮೂರು ಪಾದಗಳಿಂದ ಸಿದ್ಧವಾದರೂ ಅಶೇಷಶಬ್ದಾನಾಂ=ಎಲ್ಲಾ ವೈದಿಕಶಬ್ದಗಳಿಗೂ (ನಾರಾಯಣೇ ಸಮನ್ವಯಃ=ನಾರಾಯಣನಲ್ಲಿ ಸಮನ್ವಯವು) ನ ಯುಜ್ಯತೇ=ಕೂಡುವುದಿಲ್ಲ. ಏಕೆಂದರೆ, ದುಃಖೀ, ಬದ್ಧ, ಅವರಾದಿ ಪದಗಳು ಮತ್ತು ಕರ್ಮವಾಚಕವಾದ ಜ್ಯೋತಿಷ್ಟೋಮಾದಿ ಪದಗಳಿಂದ ಪರಮಾತ್ಮನು ವಾಚ್ಯನಾಗಲು ಸಾಧ್ಯವಿಲ್ಲ. ಯತಃ=ಯಾವ ಕಾರಣದಿಂದ ಅಂತಹ ಶಬ್ದಗಳಿಂದ ಭಗವಂತನು ವಾಚ್ಯನಾದರೆ ಅವರತ್ವಾದೇರಪಿ ಪ್ರಾಪ್ತಿಃ ಭವೇತ್=ದುಃಖ, ಅವರತ್ವ ಮೊದಲಾದ ಧರ್ಮಗಳ ಪ್ರಾಪ್ತಿಯೂ ಆದೀತು. ಅಂತಹ ಧರ್ಮಗಳು ಭಗವಂತನಲ್ಲಿ

ಇರುವುದಕ್ಕೆ ವಿರೋಧಾತ್=ಸರ್ವಪ್ರಮಾಣಗಳ ವಿರೋಧವಿರುವುದರಿಂದ ಆ ಧರ್ಮಗಳು ಅವನಲ್ಲಿ ಇಲ್ಲ. ಆದ್ದರಿಂದ ಸರ್ವಶಬ್ದವಾಚ್ಯತ್ವವು ಭಗವಂತನಿಗೆ ಇಲ್ಲ.

**ಇತಿ ಚೇದವರತ್ವಾದಿ ದ್ವಿವಿಧಂ ಹ್ಯುಪಲಭ್ಯತೇ ।**
**ಪರಸ್ಯಾವರತಾಹೇತುರ್ಯಃ ಸ್ವಯಂ ಪರ ಏವ ಸನ್ ।**
**ಸೋऽಪಿ ಹ್ಯವರಶಬ್ದಾರ್ಥೋ ಯಥಾ ರಾಜಾ ಜಯೀ**
**ಭವೇತ್ ॥ ೪೫ ॥**

**ಅನ್ಯೋऽವರತ್ವಾನುಭವೀ ತಯೋಃ ಪೂರ್ವೋऽಸ್ತಿ ಕೇಶವೇ ।**
**ದ್ವಿತೀಯೋ ಜೀವ ಏವಾಸ್ತಿ ಸ್ವಾತಂತ್ರ್ಯಾನ್ನೈವ(ನ್ನಚ)**
**ದೂಷಣಮ್ ॥ ೪೬ ॥**

ಇತಿಚೇತ್=ಹೀಗೆ ಆಕ್ಷೇಪಿಸಿದರೆ ಉತ್ತರ ಇದು— ದ್ವಿವಿಧಂ=ಎರಡು ವಿಧವಾದ ಅವರತ್ವಾದಿ=ಅವರತ್ವ ದುಃಖ ಮೊದಲಾದ ಅವರ–ದುಃಖ್ಯಾದಿ ಶಬ್ದಗಳ ಪ್ರವೃತ್ತಿನಿಮಿತ್ತವು ಉಪಲಭ್ಯತೇ=ಲೋಕದಲ್ಲಿ ಕಂಡಿದೆ. ಸ್ವಯಂ ಪರ ಏವ ಸನ್=ಸ್ವತಃ ತಾನು ಸರ್ವೋತ್ತಮನಾದರೂ ಯಃ=ಯಾರು ಪರಸ್ಯ=ಮತ್ತೊಬ್ಬರ ಅವರತಾಹೇತುಃ=ಮತ್ತೊಬ್ಬರ ಅವರತ್ವಕ್ಕೆ ಕಾರಣವಾಗಿರುವುದು. (ಇದೂ ಅವರ ಶಬ್ದದ ಪ್ರವೃತ್ತಿನಿಮಿತ್ತ.) ಯಥಾ=ಹೇಗೆ ರಾಜಾ=ರಾಜನು ಜಯೀ ಭವೇತ್=ಸೈನಿಕರಲ್ಲಿ ಇರುವ ವಿಜಯಕ್ಕೆ ಕಾರಣನಾದುದರಿಂದ ಜಯಶಬ್ದವಾಚ್ಯನಾಗುತ್ತಾನೆ. ಅನ್ಯಃ=ಇನ್ನೊಂದು ಅವರ ಶಬ್ದದ ಅರ್ಥ– ಅವರತ್ವಾನುಭವೀ=ಅವರತ್ವವನ್ನು ಅನುಭವಿಸುವವನು. ತಯೋಃ=ಈ ಎರಡರಲ್ಲಿ ಕೇಶವೇ=ಪರಮಾತ್ಮನಲ್ಲಿ ಪೂರ್ವಃ ಅಸ್ತಿ=ಮೊದಲನೆಯ ಪ್ರವತ್ತಿನಿಮಿತ್ತವು ಇದೆ. ದ್ವಿತೀಯಃ=ಎರಡನೆಯ ಪ್ರವೃತ್ತಿನಿಮಿತ್ತವು ಜೀವೇ ಏವಾಸ್ತಿ=ಜೀವನಲ್ಲಿ ಮಾತ್ರವೇ ಇದೆ. ಸ್ವಾತಂತ್ರ್ಯಾತ್=ಇನ್ನೊಬ್ಬರಲ್ಲಿ ಅವರತ್ವವನ್ನು ತರುವಲ್ಲಿ ಸ್ವಾತಂತ್ರ್ಯವು ನಿಮಿತ್ತವಾಗಿರುವುದರಿಂದ ಹರೇಃ=ಪರಮಾತ್ಮನಿಗೆ ನೈವ ದೂಷಣಂ=ಅವರತ್ವವು ದೋಷಕಾರಕವಲ್ಲ.

ಭಾವಾರ್ಥ— ಮೊದಲ ಮೂರು ಪಾದಗಳಲ್ಲಿ ಅನೇಕ ಶಬ್ದಗಳನ್ನು ಪರಮಾತ್ಮನಲ್ಲಿ ಸಮನ್ವಯ ಮಾಡಿದ ಮಾತ್ರದಿಂದ ಅವನಿಗೆ ವೈದಿಕ ಸರ್ವಶಬ್ದವಾಚ್ಯತ್ವವು ಬರುವುದಿಲ್ಲ. ಅವರ (ಕಡಿಮೆಯವನು) ದುಃಖೀ ಮುಂತಾದ ಶಬ್ದಗಳೂ ಉಪನಿಷತ್ತುಗಳಲ್ಲಿವೆ. ಅವರತ್ವ, ದುಃಖ ಮುಂತಾದ ದೋಷಗಳಿದ್ದಲ್ಲಿ ಅಂತಹ ಶಬ್ದಗಳನ್ನು ಪ್ರಯೋಗಿಸಬೇಕು. ಪರಮಾತ್ಮನು ದೋಷದೂರ. ಅವನಲ್ಲಿ ದುಃಖಾದಿ ಪ್ರವೃತ್ತಿನಿಮಿತ್ತಗಳು ಇಲ್ಲ. ಆದ್ದರಿಂದ ಅವರಾದಿಶಬ್ದಗಳಿಂದ ಅವನು ವಾಚ್ಯನಾಗಲು ಸಾಧ್ಯವಿಲ್ಲ. ಇದು ಪೂರ್ವಪಕ್ಷ.

ಇದಕ್ಕೆ ಹೀಗೆ ಉತ್ತರ— ಅವರ, ದುಃಖೀ ಮುಂತಾದ ಶಬ್ದಗಳನ್ನು ಅವರತ್ವ-ದುಃಖ ಮೊದಲಾದ ದೋಷಗಳಿರುವ ವ್ಯಕ್ತಿಯಲ್ಲೂ ಪ್ರಯೋಗ ಮಾಡಬಹುದು. ಅಂತಹ ದೋಷಗಳನ್ನು ನಿಯಂತ್ರಿಸುವ ವ್ಯಕ್ತಿಯಲ್ಲೂ ಪ್ರಯೋಗಿಸಬಹುದು. ಇದಕ್ಕೆ ಉದಾಹರಣೆ— ಸೈನಿಕರು ಯುದ್ಧರಂಗದಲ್ಲಿ ಹೋರಾಡಿ ಜಯಶಾಲಿಗಳಾದರೂ ಅದಕ್ಕೆ ನಿಯಾಮಕ ರಾಜನಾದ ಕಾರಣ ರಾಜನನ್ನು ಜಯಶಾಲಿ, ಎನ್ನಲಾಗುತ್ತದೆ. ಇವೆರಡರಲ್ಲಿ ಮೊದಲನೆಯದು ಪರಮಾತ್ಮನಲ್ಲಿ ಇಲ್ಲವಾದರೂ ಎರಡನೆಯ ಕಾರಣ ಪರಮಾತ್ಮನಲ್ಲಿ ಇದೆ. ಆದ್ದರಿಂದ ಇಂತಹ ಶಬ್ದಗಳಿಂದ ಪರಮಾತ್ಮನು ವಾಚ್ಯನಾಗುತ್ತಾನೆ.

**ಹರೇರೇವಮಶೇಷೇಣ ಸರ್ವಶಬ್ದ ಸಮನ್ವಯೇ ।**
**ಉಕ್ತೇ ವಿರೋಧಹೀನಸ್ಯ ಸ್ಯಾತ್ ಸಮನ್ವಯತಾ ಯತಃ ।**
**ಅತೋಽಶೇಷವಿರೋಧಾನಾಂ ಕೃತೇಶೇನ ನಿರಾಕೃತಿಃ ॥ ೪೭ ॥**

(ಆರಂಭದಲ್ಲಿರುವ ಹರೇಃ ಎಂಬ ಶಬ್ದ ಹಿಂದೆ ಅನ್ವಿತವಾಗಿದೆ)

ಏವಂ=ಹೀಗೆ ಅಶೇಷೇಣ=ನಿಃಶೇಷವಾಗಿ ಸರ್ವಶಬ್ದಸಮನ್ವಯೇ ಉಕ್ತೇ ಸತಿ=ಎಲ್ಲ ವೈದಿಕಶಬ್ದಗಳ ಸಮನ್ವಯವು ಮಾಡಲ್ಪಟ್ಟಾಗ ಯತಃ=ಯಾವ ಕಾರಣದಿಂದ ವಿರೋಧಹೀನಸ್ಯ=ವಿರೋಧರಹಿತವಾದ (ಸಮನ್ವಯಸ್ಯ= ಸಮನ್ವಯಕ್ಕೆ) ಸಮನ್ವಯತಾ ಸ್ಯಾತ್=ಸಮನ್ವಯತ್ವವು ಬರುವುದೋ ಅತಃ=ಆದ್ದರಿಂದ ಅಶೇಷವಿರೋಧಾನಾಂ=ಯುಕ್ತಿ-ಸಮಯ-ಶ್ರುತಿ ಈ ಎಲ್ಲ

ವಿರೋಧಗಳ ನಿರಾಕೃತಿಃ=ನಿರಾಕರಣೆಯು ಈಶೇನ= ಶ್ರೀವೇದವ್ಯಾಸರಿಂದ ಕೃತಾ=ದ್ವಿತೀಯಾಧ್ಯಾಯದಲ್ಲಿ ಮಾಡಲ್ಪಟ್ಟಿದೆ.

**ಭಾವಾರ್ಥ**—ಪ್ರಥಮಾಧ್ಯಾಯದಲ್ಲಿ ವೈದಿಕ ಸರ್ವಶಬ್ದಗಳ ಸಮನ್ವಯ ಮಾಡಿ ದ್ವಿತೀಯಾಧ್ಯಾಯದಲ್ಲಿ ಅದಕ್ಕೆ ಬರಬಹುದಾದ ಎಲ್ಲ ವಿರೋಧಗಳನ್ನೂ ಸೂತ್ರಕಾರರು ಪರಿಹಾರ ಮಾಡಿದ್ದಾರೆ.

ಈ ಅನುವ್ಯಾಖ್ಯಾನದಲ್ಲಿ 'ಸರ್ವಸಮನ್ವಯೇ' ಎಂಬಲ್ಲಿರುವ ಸರ್ವ ಶಬ್ದದ ವಿವರಣೆಯನ್ನೇ 'ಅಶೇಷೇಣ' ಎಂಬ ಶಬ್ದದಿಂದ ಮಾಡಲಾಗಿದೆ.

**ಸಮನ್ವಯಾವಿರೋಧಾಭ್ಯಾಂ ಸಂಜಾತೇ ವಸ್ತುನಿರ್ಣಯೇ ।**
**ಕಿಂ ಮಯಾ ಕಾರ್ಯಮಿತ್ಯೇವ ಸಾದ್ ಬುದ್ಧಿರಧಿಕಾರಿಣಃ ॥ ೪೮ ॥**

ಸಮನ್ವಯಾವಿರೋಧಾಭ್ಯಾಂ=ಶಬ್ದಸಮನ್ವಯ ಮತ್ತು ವಿರೋಧ ಪರಿಹಾರಗಳಿಂದ ವಸ್ತುನಿರ್ಣಯೇ=ಬ್ರಹ್ಮಸ್ವರೂಪದ ನಿರ್ಣಯವು ಸಂಜಾತೇ=ಉಂಟಾಗುತ್ತಿರಲು ಅಧಿಕಾರಿಣಃ=ಮೋಕ್ಷಾಧಿಕಾರಿಗೆ 'ಮಯಾ= ನನ್ನಿಂದ ಕಿಂ ಕಾರ್ಯಂ=ಏನು ಮಾಡಲ್ಪಡಬೇಕು' (ಬ್ರಹ್ಮದರ್ಶನವಾಗ ಬೇಕಾದರೆ ನಾನು ಮಾಡಬೇಕಾದ ಸಾಧನೆಗಳು ಯಾವುವು?) ಇತಿ ಬುದ್ಧಿಃ ಸ್ಯಾತ್=ಈ ರೀತಿಯ ಜ್ಞಾನವು ಬರುವುದು.

**ತತ್ರ ಭಕ್ತಿವಿಧಾನಾರ್ಥಮಭಕ್ತಾನರ್ಥಸಂತತೌ ।**
**ಉಕ್ತಾಯಾಂ ಭಕ್ತಿದಾರ್ಢ್ಯಾಯ ಪ್ರೋಕ್ತೇಽಶೇಷಗುಣೋಚ್ಚಯೇ ।**
**ವಕ್ತವ್ಯೋಪಾಸನಾ ನಿತ್ಯಂ ಕರ್ತವ್ಯೇತ್ಯಾದರೇಣ ಹಿ ॥ ೪೯ ॥**

ತತ್ರ=ಮೂರನೆಯ ಅಧ್ಯಾಯದಲ್ಲಿ ಭಕ್ತಿವಿಧಾನಾರ್ಥಂ=ವೈರಾಗ್ಯ ಸಿದ್ಧಿಗಾಗಿ ಅಭಕ್ತಾನಾಂ=ಕಾಮ್ಯಕರ್ಮದಲ್ಲಿ ಆಸಕ್ತರಾದ ಪಾಪಿಗಳಿಗೆ ಮತ್ತು ಭಗವದ್ವೇಷಿಗಳಿಗೆ ಅನರ್ಥಸಂತತೌ=ನರಕಾದಿ ಅನರ್ಥಸಮೂಹಗಳು ಉಕ್ತಾಯಾಂ=ಪ್ರಥಮಪಾದದಲ್ಲಿ ಹೇಳಲ್ಪಟ್ಟಾಗ ಭಕ್ತಿದಾರ್ಢ್ಯಾಯ=ಭಕ್ತಿಯು ದೃಢವಾಗುವುದಕ್ಕಾಗಿ ಅಶೇಷಗುಣೋಚ್ಚಯೇ=ಪರಮಾತ್ಮನಲ್ಲಿ ನಿಖಿಲಗುಣ ಪೂರ್ಣತ್ವವು ಪ್ರೋಕ್ತೇ ಸತಿ=ದ್ವಿತೀಯ ಪಾದದಲ್ಲಿ ಹೇಳಲ್ಪಟ್ಟಾಗ ಯತಃ=

ಉಪಾಸನಾ ನಿತ್ಯಂ ಆದರೇಣ ಕರ್ತವ್ಯಾ=ಗೌರವದಿಂದ ನಿರಂತರವಾಗಿ ಧ್ಯಾನವು ಮಾಡಲ್ಪಡಬೇಕಾದುದರಿಂದ ಉಪಾಸನಾ='ಉಪಾಸನೆಯು' ವಕ್ತವ್ಯಾ=ಹೇಳಲ್ಪಡಬೇಕು.

ಭಾವಾರ್ಥ– ಪ್ರಥಮ–ದ್ವಿತೀಯ ಅಧ್ಯಾಯಗಳ ಸಂಗತಿ – ತಾತ್ಪರ್ಯಗಳನ್ನು ಹೇಳಿ ತೃತೀಯಾಧ್ಯಾಯದ ಸಂಗತ್ಯಾದಿಗಳನ್ನು ನಿರೂಪಿಸಲಾಗಿದೆ.

ಮೊದಲೆರಡು ಅಧ್ಯಾಯಗಳಿಂದ ಬ್ರಹ್ಮಸ್ವರೂಪದ ನಿರ್ಣಯವಾದ ಮೇಲೆ ಮೋಕ್ಷಾಧಿಕಾರಿಗೆ, ಬ್ರಹ್ಮದರ್ಶನಕ್ಕೆ ನಾನು ಯಾವ ರೀತಿಯ ಸಾಧನೆಗಳನ್ನು ಮಾಡಬೇಕು? ಎನ್ನುವ ಜಿಜ್ಞಾಸೆ ಬರುತ್ತದೆ. ಅದರ ಪರಿಹಾರಕ್ಕಾಗಿ ಈ ಅಧ್ಯಾಯದ ಮೊದಲ ಪಾದದಲ್ಲಿ ವೈರಾಗ್ಯನಿಷ್ಪತ್ತಿಗಾಗಿ ಭಗವಂತನ ದ್ವೇಷಿಗಳಿಗೆ ಹಾಗೂ ಕಾಮ್ಯಕರ್ಮಾನುಷ್ಠಾನ ಮಾಡುವವರಿಗೆ ಸ್ವರ್ಗ–ನರಕಾದಿಫಲಗಳನ್ನು ಹೇಳಲಾಗಿದೆ. ಸ್ವರ್ಗಾದಿ ನಶ್ವರಲೋಕಗಳ ಗಮನಾಗಮನಗಳು ಕ್ಲೇಷದಾಯಕಗಳಾದುದರಿಂದ ಯೋಗ್ಯರಿಗೆ ಅವುಗಳಲ್ಲಿ ಜುಗುಪ್ಸೆ ಮೂಡುತ್ತದೆ.

ಎರಡನೆಯ ಪಾದದಲ್ಲಿ, ಭಗವಂತನಲ್ಲಿ ಭಕ್ತಿಮೂಡುವುದಕ್ಕಾಗಿ ಅವನ ಮಹಿಮೆಗಳನ್ನು ಹೇಳಲಾಗುತ್ತದೆ. ವಿಷಯವೈರಾಗ್ಯದಿಂದ ಮತ್ತು ಪರಮಾತ್ಮನ ಮಹಿಮಾಜ್ಞಾನದಿಂದ ಭಗವದ್ಭಕ್ತಿಯು ದೃಢವಾಗುತ್ತದೆ. ಇದರಿಂದಾಗಿ ಧ್ಯಾನರೂಪವಾದ ಉಪಾಸನೆಯಲ್ಲಿ ಆದರ ಮತ್ತು ನಿರಂತರತೆ ಸಿದ್ಧವಾಗುತ್ತದೆ. ಭಕ್ತಿಯಿಂದ ಆದರ, ವೈರಾಗ್ಯದಿಂದಾಗಿ ಚಿತ್ತವೃತ್ತಿಗಳು ನಿರುದ್ಧವಾಗಿ ಮನಸ್ಸು ಭಗವದೇಕನಿಷ್ಠವಾಗುತ್ತದೆ.

**ಸೋಪಾಸನಾ ಚ ದ್ವಿವಿಧಾ ಶಾಸ್ತ್ರಭ್ಯಾಸಸ್ವರೂಪಿಣೀ।**
**ಧ್ಯಾನರೂಪಾ ಪರಾ ಚೈವ ತದಂಗಂ ಧಾರಣಾದಿಕಮ್ ॥ ೫೦ ॥**

ಸಾ ಉಪಾಸನಾ=ವೈರಾಗ್ಯ–ಭಕ್ತಿಗಳಿಂದಾಗುವ ಧ್ಯಾನವು ದ್ವಿವಿಧಾ= ಎರಡು ವಿಧವಾದುದು–ಶಾಸ್ತ್ರಾಭ್ಯಾಸಸ್ವರೂಪಿಣೀ=ಸಚ್ಛಾಸ್ತ್ರಗಳ ಅಭ್ಯಾಸ ಮತ್ತು ಪರಾ=ಶಾಸ್ತ್ರಾಭ್ಯಾಸಾನಂತರದಲ್ಲಿ ಉಂಟಾಗುವ ಧ್ಯಾನರೂಪಾ ಚ=ಧ್ಯಾನ–ಸಮಾಧಿರೂಪವಾದುದು. ತದಂಗತಂ=ಧ್ಯಾನ–ಸಮಾಧಿಗಳಿಗೆ ಅಂಗವಾಗಿರುವುದು ಧಾರಣಾಧಿಕಂ=ಧಾರಣ–ಪ್ರತ್ಯಾಹಾರ–ಆಸನಗಳು.

**ಭಾವಾರ್ಥ**— ಭಕ್ತಿ–ವೈರಾಗ್ಯಗಳಿಂದ ಧ್ಯಾನವು ಸಾಧ್ಯವಾಗುತ್ತದೆ. ಧ್ಯಾನವು ಚಿತ್ತೈಕಾಗ್ರ್ಯರೂಪವಾದುದು. ಶಾಸ್ತ್ರಗ್ರಂಥಗಳ ಅರ್ಥಾನುಸಂಧಾನಪೂರ್ವಕವಾದ ನಿರಂತರ ಅಧ್ಯಯನದಿಂದ ಮನಸ್ಸಿಗೆ ಏಕಾಗ್ರತೆಯು ಉಂಟಾಗುವುದು. ಅಂತಹ ಏಕಾಗ್ರತೆ ಧಾರಣಾ–ಸಮಾಧಿ ಎಂದು ಎರಡು ವಿಧ. ಖಂಡಸ್ಮೃತಿ ಧಾರಣಾ. ಇಲ್ಲಿ ಮನಸ್ಸು ನಿರಂತರವಾಗಿ ಭಗವದೇಕನಿಷ್ಠವಾಗುವುದಿಲ್ಲ. ಚಲಿಸುವ ಮನಸ್ಸನ್ನು ಪ್ರಯತ್ನಪೂರ್ವಕ ಏಕಾಗ್ರಗೊಳಿಸಬೇಕಾಗತ್ತದೆ. ಸಹಜವಾಗಿ ಮನಸ್ಸು ದೀರ್ಘಕಾಲ ಭಗವದೇಕನಿಷ್ಠವಾಗುವುದು ಸಮಾಧಿ. ಇಂತಹ ಸಮಾಧಿಗೆ ಅಂಗವಾದುದು ಧಾರಣ ಮತ್ತು ಪ್ರತ್ಯಾಹಾರ. ಇಂದ್ರಿಯಗಳನ್ನು ವಿಷಯಪದಾರ್ಥಗಳ ಕಡೆಗೆ ಹರಿಯದಂತೆ ತಡೆಯುವ ಪ್ರಯತ್ನ ಪ್ರತ್ಯಾಹಾರ.

ಶಾಸ್ತ್ರವಿಮರ್ಶೆಯು ಧ್ಯಾನಕ್ಕೆ ಅಂಗಮಾತ್ರವಲ್ಲ. ಅದೇ ಧ್ಯಾನದಂತೆ ಮೋಕ್ಷಕ್ಕೆ ಸಾಕ್ಷಾತ್ ಕಾರಣವೂ ಆಗುತ್ತದೆ. 'ಅಥವಾ ಸತತಂ ಶಾಸ್ತ್ರವಿಮರ್ಶೇನ ಭವಿಷ್ಯತಿ' ಎಂದು ಇದನ್ನು ಆಚಾರ್ಯರು ತಿಳಿಸಿದ್ದಾರೆ.

**ತಥೋಭಯಾತ್ಮಕಂ ಚೈವ ಪಾದೇऽಸ್ಮಿನ್ ಬಾದರಾಯಣಃ ।**
**ಆಹೋಪಾಸನಮದ್ಧೈವ ವಿಸ್ತರಾಚ್ಛ್ರುತಿಪೂರ್ವಕಮ್ ॥ ೫೧ ॥**

ತಥಾ=(ತಸ್ಮಾತ್) ಪ್ರಸಂಗಪ್ರಾಪ್ತವಾದುದರಿಂದ ಉಭಯಾತ್ಮಕಂ= ಎರಡು ವಿಧವಾದ ಉಪಾಸನಮೇವ=ಉಪಾಸನೆಯನ್ನು ಅಸ್ಮಿನ್ನೇವ ಪಾದೇ=ಇದೇ ಪಾದದಲ್ಲಿ ಬಾದರಾಯಣಃ=ಶ್ರೀವೇದವ್ಯಾಸರು ಅದ್ಧೈವ= ಉಪಾಸನೆಗೆ ಉಪಯುಕ್ತವಾದ ಪ್ರಮೇಯಗಳೊಂದಿಗೆ ಅಂದರೆ ವಿಸ್ತರಾತ್= ವಿಸ್ತಾರವಾಗಿ ಶ್ರುತಿಪೂರ್ವಕಂ=ಶ್ರುತ್ಯಾದಿಪ್ರಮಾಣಪೂರ್ವಕವಾಗಿ ಆಹ= ಹೇಳುತ್ತಾರೆ.

**ಭಾವಾರ್ಥ**— ಉಪಾಸನೆಯು ಪ್ರಸ್ತುತವಾದುದರಿಂದ ಈ ಮೂರನೆಯ ಪಾದದಲ್ಲಿ ದ್ವಿವಿಧ–ಉಪಾಸನೆಯನ್ನು ವಿಸ್ತಾರವಾಗಿ ಪ್ರಮಾಣಬದ್ಧವಾಗಿ ನಿರೂಪಿಸಲಾಗಿದೆ.

**ಪೂರ್ವಪಕ್ಷ – ಸಿದ್ಧಾಂತಯುಕ್ತಿಗಳ ಸಂಗ್ರಹ**

ಪೃಥಗ್ದೃಷ್ಟಿರಶಕ್ಯತ್ವಮನಿರ್ಣೀತಿಃ ಸಮುಚ್ಚಯಃ ।
ವಿಶೇಷದರ್ಶನಂ ಕಾರ್ಯಲೋಪೋ ನಾನೋಕ್ತಿರಾಶುತಾ ॥ ೫೨ ॥

ವಿಭ್ರಮೋಽಪಾಕೃತಿರ್ಲಿಂಗಮನವಸ್ಥಾಽವಿಶೇಷಿತಾ।
ಅಪ್ರಯೋಜನತಾ ಚಾತಿಪ್ರಸಂಗೋಽದೂರಸಂಶ್ರಯಃ ॥ ೫೩ ॥

ವಿಶಿಷ್ಟಕಾರಣಂ ಚೇಷ್ಟಾ ದೃಷ್ಟವೈರೂಪ್ಯಮುನ್ನತಿಃ ।
ಅನುಕ್ತಿರಪ್ರಯತ್ನತ್ವಂ ದೃಢಬಂಧಪರಾಭವೌ ॥ ೫೪ ॥

ಪುಂಸಾಮ್ಯಂ ಪ್ರಾಪ್ತಸಂತ್ಯಾಗಃ ಕಾರಣಾನಿರ್ಣಯೋ ಭ್ರಮಃ ।
ವಿಶೇಷದರ್ಶಿತಾಲಾಪೌ (ಪೋ)ಗುಣಸಾಮ್ಯಂ ಪೃಥಗ್ದೃಶಿಃ ॥ ೫೫ ॥

ಅಗಮ್ಯವರ್ತ್ಮ ಸಂಧಾನಮಿಷ್ಟಂ ಫಲಮಕಲ್ಪನಾ ।
ಶುದ್ಧವೈರೂಪ್ಯಮಂಗತ್ವಮವಿಶೇಷದೃಶಿಃ ಕ್ರಿಯಾ ॥ ೫೬ ॥

ಯುಕ್ತಯಃ ಪೂರ್ವಪಕ್ಷಸ್ಥಾಃ, ಸುಜ್ಞೇಯತ್ವಂ ವಿಧಿಕ್ರಿಯಾ ।
ಮಾಹಾತ್ಮ್ಯಮಲ್ಪಶಕ್ತಿತ್ವಂ ಯಥಾಯೋಗ್ಯಫಲಂ ಭವಃ ॥ ೫೭ ॥

ಫಲಸಾಮ್ಯಂ ವಿಶೇಷಶ್ಚ ಗುಣಾಧಿಕ್ಯಂ ಪ್ರಧಾನತಾ ।
ಯಥಾಶಕ್ತಿ ಕ್ರಿಯಾ ಸಂಧಿಃ ಪ್ರಮಾಣಬಲಮಾನತಿಃ ॥ ೫೮ ॥

ಕಾರಣಂ ಕಾರ್ಯವೈಶೇಷ್ಯಂ ಸ್ವಭಾವೋ ವಸ್ತುದೂಷಣಮ್ ।
ಪ್ರತಿಕ್ರಿಯಾವಿರೋಧಶ್ಚ ಪ್ರತಿಸಂಧಿರನೂನತಾ ॥ ೫೯ ॥

ಸಂಸ್ಕಾರಪಾಟವಂ ಸ್ವೇಚ್ಛಾ ನಿಯತಿರ್ವಸ್ತುವೈಭವಮ್ ।
ವಿಶೇಷೋಕ್ತಿರಮಾನತ್ವಂ ಪ್ರಾಧಾನ್ಯಂ ಪ್ರೀತಿರಾಗಮಃ ॥ ೬೦ ॥

ಸುಸ್ಥಿರತ್ವಂ ಕೃತಪ್ರಾಪ್ತಿರನಾದಿಗುಣವಿಸ್ತರಃ ।
ಸಾಧನೋತ್ತಮತಾ ನಾನಾದೃಷ್ಟಿಃ ಶಿಷ್ಟಿರನೂನತಾ ॥ ೬೧ ॥

**ಅವಿಘ್ನತ್ವಾವಿರೋಧೌ ಚ ಗುಣವೈಶೇಷ್ಯಮಾಗಮಃ ।**
**ಸಿದ್ಧಾಂತನಿರ್ಣಯೇ ಹ್ಯೇತಾ ಯುಕ್ತಯೋऽವ್ಯಾಹತಾಃ ಸದಾ ॥ ೬೨ ॥**

ಈ ಪಾದದಲ್ಲಿ ಒಟ್ಟು ನಲವತ್ತೆರಡು ಅಧಿಕರಣಗಳಿವೆ. ಅವುಗಳ ಪೂರ್ವಪಕ್ಷ–ಸಿದ್ಧಾಂತ ಯುಕ್ತಿಗಳನ್ನು ಮೊದಲು ಸಂಗ್ರಹಿಸಿಕೊಡಲಾಗಿದೆ.

1. **ಸರ್ವವೇದಾಧಿಕರಣ**— ಪೃಥಗ್‌ದೃಷ್ಟಿಃ='ಪ್ರತ್ಯೇಕದರ್ಶನ' ಪೂರ್ವಪಕ್ಷಯುಕ್ತಿ. ವೇದದ ಸಕಲ ಶಾಖಾಧ್ಯಯನ ಮಾಡಿ ಬ್ರಹ್ಮಜ್ಞಾನವನ್ನು ಗಳಿಸಬೇಕೋ ಸ್ವಸ್ವಶಾಖಾಧ್ಯಯನ ಮಾತ್ರ ಸಾಕೋ, ಎಂದು ಸಂದೇಹ. ಸ್ವಸ್ವಶಾಖಾಧ್ಯಯನ ಮಾತ್ರ ಸಾಕು, ಎಂದು ಪೂರ್ವಪಕ್ಷ. ಒಂದೊಂದು ಶಾಖೆಯಲ್ಲಿ ಹೇಳಿರುವ ವಿಷಯಗಳು ಬೇರೆಬೇರೆಯಾದುದರಿಂದ ಅಧಿಕಾರಿಗಳು ತಮ್ಮ ಶಾಖೆಗಳಲ್ಲಿ ಹೇಳಿರುವ ವಿಷಯಗಳನ್ನಷ್ಟೇ ತಿಳಿದರೆ ಸಾಕು. ಇಲ್ಲದಿದ್ದರೆ ಶಾಖಾಭೇದವನ್ನು ಮಾಡಿರುವುದೇ ವ್ಯರ್ಥ. ವೇದವು ಅನಂತವಾದುದರಿಂದ ಎಲ್ಲವನ್ನೂ ತಿಳಿಯುವುದು ಅಸಾಧ್ಯವಾದ ಕೆಲಸ, ಎಂದು ಪೂರ್ವಪಕ್ಷ.

'ಪೃಥಗ್ ದೃಷ್ಟಿ' ಎಂದರೆ ಶಾಖಾಭೇದದ ದರ್ಶನ ಮತ್ತು ಶಾಖೆಗಳಲ್ಲೆ ಉಪದೇಶಭೇದದರ್ಶನ. 'ಸುಜ್ಞೇಯತ್ವಂ=ಸರಿಯಾಗಿ ತಿಳಿಯಲ್ಪಡಬೇಕಾಗಿರುವುದು, ಇದು ಸಿದ್ಧಾಂತಯುಕ್ತಿ.

**ನಾನಾವೇದೈರಿತಿಹಾಸೈಃ ಪುರಾಣೈಃ ಸುಜ್ಞೇಯ ಏಕೋ ಭಗವಾನ್ಯುಕ್ತಿಭಿಶ್ಚ ।** ಈ ಸ್ಮೃತಿಯಲ್ಲಿ ವೇದಾದಿಶಾಸ್ತ್ರಗಳಿಂದ ವಿಷ್ಣುವನ್ನು ಸರಿಯಾಗಿ ತಿಳಿಯಬೇಕು, ಎಂದು ಹೇಳಿರುವುದರಿಂದ ಸಕಲವೇದಗಳಿಂದ ಬ್ರಹ್ಮನು ಜ್ಞೇಯ, ಸ್ವಶಾಖಾ ಮಾತ್ರದಿಂದಲ್ಲ, ಇದು ಸಿದ್ಧಾಂತ.

2. **ಉಪಸಂಹಾರಾಧಿಕರಣ**— ಅಶಕ್ಯತ್ವಂ=ಅಸಾಧ್ಯತೆ, ಪೂರ್ವಪಕ್ಷ ಯುಕ್ತಿ. ಸರ್ವವೇದೋಕ್ತಗುಣಗಳನ್ನು ಕ್ರೋಢೀಕರಿಸಿ ಬ್ರಹ್ಮನನ್ನು ಧ್ಯಾನಿಸುವುದು ಸಾಧ್ಯವಿಲ್ಲ. ಆದುದರಿಂದ, ಸರ್ವಗುಣೋಪಸಂಹಾರ ಮಾಡಬೇಕಾಗಿಲ್ಲ, ಎಂದು. ವಿಧಿಕ್ರಿಯಾ–ವಿಹಿತಕ್ರಿಯೆ, ಇದು ಸಿದ್ಧಾಂತಯುಕ್ತಿ.

ಸರ್ವೇ ಗುಣಾಃ ಸರ್ವದೈವ ಹ್ಯುಪಾಸ್ಯಾಃ
ತೇನೈವ ವಿದ್ವಾನ್ ವಿಧಿಕೃನ್ನಾನ್ಯಥಾ ಸ್ಯಾತ್ ॥

ಎಂಬ ಪ್ರಮಾಣದಲ್ಲಿ ಸರ್ವಗುಣಗಳನ್ನೂ 'ಉಪಸಂಹಾರ' ಮಾಡಿ ಧ್ಯಾನಮಾಡಬೇಕೆಂದು ವಿಧಾನಮಾಡಲಾಗಿದೆ. ವಿಹಿತವಾದುದನ್ನು ಮಾಡದಿದ್ದರೆ ದೋಷವಿದೆ. ಆದ್ದರಿಂದ ಸರ್ವಗುಣೋಪಸಂಹಾರವನ್ನು ಮಾಡಬೇಕು.

**3. ಪ್ರಾಪ್ತ್ಯಧಿಕರಣ—** ಅನಿರ್ಣೀತಿಃ=ಅಧಿಕಾರಿಭೇದ ನಿರ್ಣಯಾಭಾವ, ಪೂರ್ವಪಕ್ಷಯುಕ್ತಿ. ಹಿಂದಿನ ಅಧಿಕರಣದಲ್ಲಿ ಸರ್ವೋಪಸಂಹಾರವನ್ನು ಮಾಡಬೇಕೆಂದೂ, ಮಾಡಬೇಕಾಗಿಲ್ಲ, ಎಂದೂ ಹೇಳಲಾಗಿದೆ. ವಿಧಿ ಇರುವುದರಿಂದ ಮಾಡಬೇಕು, ಅಸಾಧ್ಯವಾದುದರಿಂದ ಮಾಡಬೇಕಾಗಿಲ್ಲ, ಎಂದು ಉಭಯಪಕ್ಷವೂ ಪ್ರಾಪ್ತ. ಕೆಲವರು ಸರ್ವಗುಣೋಪಸಂಹಾರವನ್ನು ಮಾಡಬೇಕು ಎನ್ನುವುದಕ್ಕೆ ನಿರ್ಣಾಯಕವಿಲ್ಲದಿರುವುದರಿಂದ ಎಲ್ಲರೂ ಮಾಡಬೇಕು. ಇವರು ಮಾಡಬೇಕು, ಇವರು ಮಾಡಬೇಕಾಗಿಲ್ಲ, ಎಂದು ನಿರ್ಣಯ ಮಾಡಲಾಗದು, ಎಂದು ಪೂರ್ವಪಕ್ಷ.

**ಮಾಹಾತ್ಮ್ಯಂ—** ಇದು ಸಿದ್ಧಾಂತಯುಕ್ತಿ.

ಯಸ್ಯ ಯಾವದ್ ಗುಣಾಃ ಸ್ಪಷ್ಟಂ ಪ್ರತಿಭಾಸಂತ್ಯುಪಾಸನೇ ।
ಯುಗಪತ್ ಸ್ವಭುಜೌ ಯದ್ವತ್ ಧ್ಯಾಯೇತ್ ತಾವತ ಏವ ಸಃ ॥
ಯುಗಪದ್ ಬ್ರಹ್ಮಣಃ ಸರ್ವೇ ಭಾಸಂತೇ ಹಿ ಗುಣಾಃ ಹರೇಃ ।
ತದನ್ಯೇಷಾಂ ಯಥಾಯೋಗ್ಯಂ ಸ್ವಮಾಹಾತ್ಮ್ಯಾನುಸಾರತಃ ॥

ಬ್ರಹ್ಮದೇವರಿಗೆ ಪರಮಾತ್ಮನ ಸಕಲಗುಣಗಳೂ ಯುಗಪತ್ ಪ್ರತಿಭಾಸವಾಗುವುದರಿಂದ ಅವರು ಸರ್ವಗುಣೋಪಸಂಹಾರಪೂರ್ವಕ ಧ್ಯಾನವನ್ನು ಮಾಡಬೇಕು. ಇತರರು ತಮ್ಮ ಯೋಗ್ಯತೆಗೆ ಅನುಗುಣವಾಗಿ ಪ್ರತಿಭಾಸವಾಗುವ ಗುಣಗಳನ್ನು ಉಪಸಂಹಾರ ಮಾಡಿ ಧ್ಯಾನಿಸಬೇಕು. ಹೀಗೆ ಯುಗಪತ್ ಅನೇಕಗುಣಪ್ರತೀತ್ಯಾದಿ ಮಹಾತ್ಮ್ಯದಿಂದ ಉಪಾಸನಾ ಭೇದವು ಉಪಪನ್ನವಾಗುತ್ತದೆ.

**4. ಸರ್ವಾಭೇದಾಧಿಕರಣ–** ಇಲ್ಲೂ ಅನಿರ್ಣೀತಿಃ=ಅಧಿಕಗುಣಗಳನ್ನು ಉಪಾಸನೆ ಮಾಡುವವರಿಗೆ ಅಧಿಕಫಲಪ್ರಾಪ್ತಿಯ ನಿರ್ಣಯಾಭಾವ, ಪೂರ್ವಪಕ್ಷಯುಕ್ತಿ. ಮಾಹಾತ್ಮ್ಯಂ=ಸರ್ವಗುಣೋಪಸಂಹಾರ ಮಹಿಮೆಯಿಂದಾಗಿಯೇ ಫಲಾಧಿಕ್ಯವೂ ಸಿದ್ಧವಾಗುತ್ತದೆ–ಎಂದು ಸಿದ್ಧಾಂತ.

ಅಲ್ಪಗುಣಗಳನ್ನು ಉಪಸಂಹಾರ ಮಾಡಿ ಧ್ಯಾನಿಸುವವರಿಗಿಂತ ಅಧಿಕಗುಣಗಳನ್ನು ಉಪಸಂಹಾರ ಮಾಡಿದ ಅಧಿಕಾರಿಗಳಿಗೆ ಫಲಾಧಿಕ್ಯವಿದೆ, ಎನ್ನಲು ಆಧಾರಗಳಿಲ್ಲದಿರುವುದಿರಂದ ಸರ್ವಗುಣೋಪಸಂಹಾರವ್ಯರ್ಥ ಎಂದು ಪೂರ್ವಪಕ್ಷ.

ಸಾಧನೆಯು ಹೆಚ್ಚಾದಂತೆ ಫಲದಲ್ಲೂ ಆಧಿಕ್ಯವಿದೆ ಎಂದು ಕಂಡಿರುವುದರಿಂದ ಗುಣಗಳನ್ನು ಹೆಚ್ಚು ಹೆಚ್ಚು ಉಪಸಂಹಾರ ಮಾಡಿದಷ್ಟು ಮೋಕ್ಷಾನಂದದಲ್ಲಿ ಆಧಿಕ್ಯವಿರುತ್ತದೆ. ಹೀಗೆ ಅಧಿಕಾಧಿಕಗುಣೋಪಸಂಹಾರ ಮಾಹಾತ್ಮ್ಯದಿಂದಾಗಿ ಫಲದಲ್ಲಿ ಆಧಿಕ್ಯವೂ ಸಿದ್ಧ.

**5. ಆನಂದಾಧಿಕರಣ—** ಸಮುಚ್ಚಯಃ–ಸರ್ವಗುಣಗಳ ಸಮುಚ್ಚಯ, ಇದು ಪೂರ್ವಪಕ್ಷಯುಕ್ತಿ. ಅಲ್ಪಶಕ್ತಿತ್ವಂ=ಮುಮುಕ್ಷುಗಳಿಗೆ ಇರುವ ಅಲ್ಪಶಕ್ತಿ, ಸಿದ್ಧಾಂತಯುಕ್ತಿ.

ಕೆಲವರಿಗೆ ಐದು ಗುಣಗಳು, ಕೆಲವರಿಗೆ ಹತ್ತು ಎನ್ನುವುದಾಗಿ ಪ್ರತ್ಯೇಕ ನಿರ್ದೇಶವಿಲ್ಲ. ಆನಂದಗುಣದೊಂದಿಗೆ ಯಾರು, ಎಷ್ಟು ಗುಣಗಳನ್ನು ಸಮುಚ್ಚಯ ಮಾಡಬೇಕು ಎನ್ನುವುದಕ್ಕೆ ನಿರ್ದಿಷ್ಟ ಪ್ರಮಾಣಗಳು ಇಲ್ಲದಿರುವುದರಿಂದ ಮಾಡುವುದಾದಲ್ಲಿ ಸಕಲಗುಣಗಳನ್ನು ಸಮುಚ್ಚಯ ಮಾಡಬೇಕು. ಅದು ಎಲ್ಲರಿಗೂ ಅಸಾಧ್ಯ. ಆದ್ದರಿಂದ ಸಕಲ ಮುಮುಕ್ಷುಗಳಿಂದಲೂ ಧ್ಯೇಯಗಳಾದ ನಿರ್ದಿಷ್ಟಗುಣಗಳು ಇಲ್ಲದಿರುವುದರಿಂದ ಧ್ಯಾನದ ಅಗತ್ಯವಿಲ್ಲ, ಎಂದು ಪೂರ್ವಪಕ್ಷ.

'ತಂ ಯಥಾಯಥೋಪಾಸತೇ ತದೇವ ಭವತಿ'

ಎಂದು ಉಪಾಸನೆಗೆ ಅನುಗುಣವಾದ ಫಲವೇ ಸಿಗುತ್ತದೆ. ಮುಮುಕ್ಷುಗಳಿಗೆ ನಿರ್ದೋಷತ್ವ, ಜ್ಞಾನ, ಆನಂದಗಳು ಅವಶ್ಯಾಪೇಕ್ಷಿತ. ಸ್ವಾಮಿತ್ವ ಗುಣವು

ಭಗವಂತನ ಪ್ರೀತಿಗೆ ಕಾರಣವಾದುದರಿಂದ, ಅದನ್ನೂ ಸೇರಿಸಿದರೆ ಒಟ್ಟು ನಾಲ್ಕು ಗುಣಗಳು ಸರ್ವರಿಂದಲೂ ಉಪಾಸ್ಯಗಳಾಗಿವೆ. ಬ್ರಹ್ಮಾದಿಗಳಿಗೆ ಸರ್ವಗುಣಗಳ ಉಪಸಂಹಾರವು ಸಾಧ್ಯವಾದರೂ ಇತರರಿಗೆ ಅಲ್ಪಶಕ್ತಿ ಇರುವುದರಿಂದ ಅದು ಸಾಧ್ಯವಿಲ್ಲ, ಎಂದು ಸಿದ್ಧಾಂತ.

**6. ಪ್ರಿಯಶಿರಸ್ತ್ವಾದ್ಯಧಿಕರಣ—** ವಿಶೇಷದರ್ಶನಂ=ಪ್ರಿಯಾದಿಗಳು ಆನಂದವಿಶೇಷಗಳೆಂದು ಶ್ರುತಿಹೇಳುತ್ತಿರುವುದು, ಪೂರ್ವಪಕ್ಷಯುಕ್ತಿ. ಪ್ರಿಯವೇ ಆನಂದಮಯನ ಶಿರಸ್ಸು, ಮೋದವೇ ಆನಂದಮಯನ ಬಲಕೈ. ಹೀಗೆ ಪ್ರಿಯಾದಿಗಳು ಆನಂದಪ್ರಭೇದಗಳಾಗಿ ಕಂಡಿರುವುದರಿಂದ ಪ್ರಿಯಶಿರಸ್ತ್ವಾದಿಗಳೂ (ತಸ್ಯ ಪ್ರಿಯಮೇವ ಶಿರಃ...) ಮುಮುಕ್ಷುಗಳಿಂದ ಉಪಾಸ್ಯ ಎಂದು ಪೂರ್ವಪಕ್ಷ.

ಯಥಾಯೋಗ್ಯಫಲಂ–ಅಧಿಕಾರಿಗಳ ಯೋಗ್ಯತೆಗೆ ಅನುಗುಣವಾಗಿ ನಾಲ್ಕು ಗುಣಗಳ ಉಪಾಸನೆಯಿಂದಲೇ ಮೋಕ್ಷಫಲ ಸಿದ್ಧಿ, ಇದು ಸಿದ್ಧಾಂತಯುಕ್ತಿ.

ಯಥಾಯೋಗ್ಯಾನ್ ಗುಣಪೂಗಾನುಪಾಸ್ಯ
ಫಲಂ ಭವೇನ್ಮುಕ್ತಿಗಂ ನಾನ್ಯಥಾ ಸ್ಯಾತ್ ॥

ಎಂದು ಯಥಾಯೋಗ್ಯವಾದ ನಾಲ್ಕೇ ಗುಣಗಳ ಉಪಾಸನೆ. ಪ್ರಿಯಾದಿಗಳು ಆನಂದ ವಿಶೇಷಗಳಾದರೂ ಆನಂದತ್ವೇನೈವ ಅವುಗಳು ಇತರೋಪಾಸ್ಯಗಳು. ಪ್ರಿಯಶಿರಸ್ತ್ವೇನ ಉಪಾಸ್ಯಗಳಲ್ಲ, ಎಂದು ಸಿದ್ಧಾಂತ.

**7. ಇತರಾಧಿಕರಣ—** ಕಾರ್ಯಲೋಪಃ=ಬಹುಗುಣೋಪಾಸನೆ ಎಂಬ ಕಾರ್ಯಕ್ಕೆ ಲೋಪಬರುತ್ತದೆ, ಎಂದು ಪೂರ್ವಪಕ್ಷಯುಕ್ತಿ. ಭವಃ= ಯೋಗ್ಯತೆಯನ್ನು ತಿಳಿದು ಉಪದೇಶಿಸುವ ಸ್ವರೂಪಗುರುಗಳ ಉಪದೇಶದ ಇರುವಿಕೆ, ಎಂದು ಸಿದ್ಧಾಂತಯುಕ್ತಿ.

ಧ್ಯಾನಕಾಲದಲ್ಲಿ ನಾಲ್ಕು ಗುಣಗಳಿಗಿಂತಲೂ ಹೆಚ್ಚು ಗುಣಗಳು ಯಾರಿಗೆ ಪ್ರತಿಭಾಸವಾಗುವವೋ ಅಷ್ಟನ್ನೂ ಉಪಾಸನೆ ಮಾಡುವುದು ಅವರ ಯೋಗ್ಯತೆಗೆ ಮೀರಿದ್ದಾಗಿರಬಹುದು. ಅಂತಹ ಅಯೋಗ್ಯೋಪಾಸನೆಯಿಂದ

ಮೋಕ್ಷರೂಪ ಫಲಕ್ಕೆ ಲೋಪ ಬಂದೀತು. ಆದ್ದರಿಂದ ಚತುರ್ಮುಖನಿಗಿಂತ ಇತರರು ಚತುರ್ಗುಣಗಳಿಗಿಂತ ಹೆಚ್ಚು ಗುಣಗಳನ್ನು ಉಪಾಸನೆ ಮಾಡ ಬಾರದು, ಎಂದು ಪೂರ್ವಪಕ್ಷ.

ಸರ್ವಜ್ಞರಾದ ಬ್ರಹ್ಮದೇವರು ಸಾಧಕರಿಂದ ಮುಂದೆ ಪ್ರಾಪ್ಯವಾದ ಮೋಕ್ಷಸ್ವರೂಪವನ್ನು ತಿಳಿದು ಆ ಫಲಕ್ಕೆ ಅನುಗುಣವಾಗಿ ಉಪಾಸ್ಯಗಳಾದ ಗುಣಗಳ ಸಂಖ್ಯೆಯನ್ನು ತಿಳಿಸುತ್ತಾರೆ. ಆದ್ದರಿಂದ, ಯೋಗ್ಯರು ನಾಲ್ಕ ಕ್ಕಿಂತಲೂ ಹೆಚ್ಚು ಗುಣಗಳನ್ನು ಉಪಾಸನೆ ಮಾಡಬೇಕು, ಎಂದು ಸಿದ್ಧಾಂತ.

**8. ಆಧ್ಯಾನಾಧಿಕರಣ—** ಪೂರ್ವಪಕ್ಷಯುಕ್ತಿ ನಾನೋಕ್ತಿಃ=ನಾನಾ ಸ್ಥಾನಗಳಲ್ಲಿ ಗುಣಗಳನ್ನು ಹೇಳಿರುವುದು. ಸಿದ್ಧಾಂತಯುಕ್ತಿ–ಫಲಸಾಮ್ಯಂ= ಅಲ್ಲಲ್ಲಿ ಹೇಳಿರುವ ಗುಣೋಪಸಂಹಾರಯತ್ನಕ್ಕೆ ಮುಕ್ತಿಯಲ್ಲಿ ಆನಂದಾತಿಷಯ ರೂಪವಾದ ಫಲಸಾಮ್ಯ.

ಸಕಲಗುಣೋಪಸಂಹಾರವು ವಿವಕ್ಷಿತವಾಗಿದ್ದಲ್ಲಿ ಎಲ್ಲ ಗುಣಗಳನ್ನೂ ಒಂದೇ ಶಾಖೆಯಲ್ಲಿ ಹೇಳಬೇಕಾಗಿತ್ತು. ಶಾಖಾಭೇದೇನ ಅಲ್ಲಲ್ಲಿ ವಿಕ್ಷಿಪ್ತವಾಗಿ ಹೇಳಿರುವುದರಿಂದಾಗಿ ಶಾಸ್ತ್ರಗಳಿಗೆ ಸರ್ವಗುಣೋಪಸಂಹಾರದಲ್ಲಿ ತಾತ್ಪರ್ಯ ವಿಲ್ಲ, ಎಂದು ಪೂರ್ವಪಕ್ಷ.

ವಿಕ್ಷಿಪ್ತವಾಗಿ ಹೇಳಿರುವ ಉಪಾಸನಾಯೋಗ್ಯಗುಣಗಳನ್ನು ಉಪಸಂಹಾರ ಮಾಡುವುದರಿಂದ ಅದಕ್ಕನುಗುಣವಾದ ಆನಂದಾತಿಶಯವು ಮೋಕ್ಷದಲ್ಲಿ ಸಿಗುವುದರಿಂದ ಯೋಗ್ಯವಾದ ಅನೇಕ ಗುಣೋಪಾಸನೆಯನ್ನು ಮಾಡಬೇಕು, ಎಂದು ಸಿದ್ಧಾಂತ.

**9. ಆತ್ಮಗೃಹೀತ್ಯಧಿಕರಣ—** ಆಶುತಾ=ಅಪರೋಕ್ಷಜ್ಞಾನಕ್ಕೆ ಶೀಘ್ರತ್ವವು ಪೂರ್ವಪಕ್ಷಯುಕ್ತಿ. ವಿಶೇಷಃ=ಆನಂದಾದಿಗುಣಗಳೂ ಆತ್ಮಶಬ್ದಾರ್ಥ ವಿಶೇಷವಾಗಿರುವುದು ಸಿದ್ಧಾಂತಯುಕ್ತಿ.

ಆತ್ಮಾ=ಸ್ವಾಮಿ ಎಂಬ ಉಪಾಸನೆ ಸುಲಭ ಮತ್ತು ಬೇಗನೇ ಅಪರೋಕ್ಷಕ್ಕೆ ಕಾರಣವಾಗುತ್ತದೆ. ಆದ್ದರಿಂದ 'ಆತ್ಮೇತ್ಯೇವೋಪಾಸೀತ' ಎಂಬ ಶ್ರುತಿಹೇಳು ವಂತೆ ಆತ್ಮತ್ವೇನ ಉಪಾಸನೆ ಮಾಡಿದರೆ ಸಾಕು, ಚತುರ್ಗುಣೋಪಾಸನೆ ಬೇಕಿಲ್ಲ, ಎಂದು ಪೂರ್ವಪಕ್ಷ.

'ಆತ್ಮ' ಎಂಬ ಶಬ್ದದಿಂದಲೇ ನಾಲ್ಕು ಗುಣಗಳು ಹೇಳಲ್ಪಟ್ಟಿವೆ. ಆದ್ದರಿಂದ ಚತುರ್ಗುಣೋಪಾಸನೆಯು ಆ ಶ್ರುತಿಗೆ ವಿರುದ್ಧವಲ್ಲ, ಎಂದು ಸಿದ್ಧಾಂತ. ಆನಂದಾದಿ ನಾಲ್ಕು ಗುಣಗಳು ಆತ್ಮಶಬ್ದಾರ್ಥವಿಶೇಷವಾಗಿವೆ, ಎಂದು ಸಿದ್ಧಾಂತಯುಕ್ತಿಯ ಅಭಿಪ್ರಾಯ.

**10.** ಅನ್ವಯಾಧಿಕರಣ— ವಿಭ್ರಮಃ=ಭ್ರಾಂತಿಕಾರಕ, ಇದು ಪೂರ್ವಪಕ್ಷಯುಕ್ತಿ. ಗುಣಾಧಿಕ್ಯಂ=ಚತುರ್ಮುಖಾದಿ ಅಧಿಕಾರಿಗಳಿಗೆ ಅಧಿಕಗುಣವು ಆತ್ಮಶಬ್ದದಿಂದ ತಿಳಿಯುತ್ತದೆ, ಎಂದು ಸಿದ್ಧಾಂತಯುಕ್ತಿ.

'ಆತ್ಮೇತ್ಯೇವೋಪಾಸೀತ' ಎಂಬ ಶ್ರುತಿಯು ಬ್ರಹ್ಮದೇವರಿಂದ ಆರಂಭಿಸಿ ಎಲ್ಲ ಸಾಧಕರಿಗೂ ಅನ್ವಯಿಸುತ್ತದೆ. ಬ್ರಹ್ಮದೇವರಿಗೆ ಸರ್ವಗುಣೋಪ ಸಂಹಾರದಲ್ಲಿ ಅಧಿಕಾರವಿರುವುದರಿಂದ ಆತ್ಮಶಬ್ದಕ್ಕೆ ಸರ್ವಗುಣವಾಚಕತ್ವವನ್ನು ಅಂಗೀಕರಿಸಬೇಕು. ಆಗ ಏವಶಬ್ದವು 'ಎಲ್ಲಾ' ಎನ್ನುವ ಅರ್ಥವನ್ನು ಹೇಳುವುದರಿಂದ ಚತುರ್ಗುಣೋಪಾಸಕರೂ ಎಲ್ಲ ಗುಣಗಳನ್ನು ಉಪಸಂಹಾರ ಮಾಡಬೇಕು ಎಂಬ ಭ್ರಾಂತಿ ಉಂಟಾಗುತ್ತದೆ. ಆದ್ದರಿಂದ ಚತುರ್ಗುಣಾದಿ ಉಪಾಸನೆ ಯುಕ್ತವಲ್ಲ ಎಂದು ಪೂರ್ವಪಕ್ಷ. ಹೀಗೆ ಆತ್ಮಶಬ್ದವೇ ಈ ರೀತಿಯ ಭ್ರಾಂತಿಗೆ ಕಾರಣ.

ಆತ್ಮಶಬ್ದಕ್ಕೆ ಸರ್ವಗುಣ ವಾಚಕತ್ವವು ಇದ್ದರೂ ಎಲ್ಲಾ ಅಧಿಕಾರಿಗಳಿಗೂ ಆ ಶಬ್ದದಿಂದ ಸರ್ವಗುಣಗಳ ಸ್ಫುರಣೆಯಾಗುವುದಿಲ್ಲ. ಅವರವರಿಗೆ ಯೋಗ್ಯ ವಾದ ಗುಣಸ್ಫುರಣೆಯೇ ಆತ್ಮಶಬ್ದದಿಂದ ಆಗುತ್ತದೆ. ಅಷ್ಟು ಗುಣಗಳನ್ನು ಅವರು ಉಪಾಸನೆ ಮಾಡಿದರೆ ಸಾಕು. ಅವರಿಗೆ ಅಪರೋಕ್ಷವಾಗುತ್ತದೆ.

**11.** ಅನ್ವಯಾಧಿಕರಣ — ಅಪಾಕೃತಿಃ=ಧ್ಯಾನಾಭಾವ, (ಧ್ಯಾನದ ನಿರಾಸ) ಪೂರ್ವಪಕ್ಷಯುಕ್ತಿ. ಪ್ರಧಾನತಾ=ಅಲೌಕಿಕಗುಣಗಳ ಧ್ಯಾನಕ್ಕೆ ಪ್ರಾಧಾನ್ಯ, ಇದು ಸಿದ್ಧಾಂತಯುಕ್ತಿ.

ಬ್ರಹ್ಮನಲ್ಲಿ ಲೌಕಿಕ ಗುಣಗಳನ್ನು ಧ್ಯಾನಿಸಬೇಕೋ ಅಲೌಕಿಗುಣಗಳನ್ನೋ ಎನ್ನುವ ಸಂದೇಹ. ಲೌಕಿಕಗುಣಗಳೇ ನಮಗೆ ಅನುಭವಸಿದ್ಧವಾದುದರಿಂದ ಅವುಗಳ ಸಂಸ್ಕಾರಬಲಾತ್ ಅಂತಹ ಗುಣಗಳೇ ಧ್ಯೇಯಗಳಾಗಬಹುದು.

ಅಂತಹ ಗುಣಗಳು ಭಗವಂತನಲ್ಲಿ ಇಲ್ಲ, ಆದುದರಿಂದ ಧ್ಯಾನವೇ ಸಾಧ್ಯ ಇಲ್ಲ, ಎಂದು ಪೂರ್ವಪಕ್ಷ.

ಧ್ಯಾನದ ಫಲ ಮೋಕ್ಷ. ಅದು ಅಲೌಕಿಕಾನಂದರೂಪವಾದುದು. ಅದಕ್ಕೆ ಸಾಧನವಾದ ಧ್ಯಾನವೂ ಅಲೌಕಿಕ ಗುಣವಿಷಯಕವೇ ಆಗಬೇಕು, ಎಂದು ಸಿದ್ಧಾಂತ. ಭಗವಂತನ ಗುಣಗಳು ಅಲೌಕಿಕಗಳು, ಎನ್ನುವ ಜ್ಞಾನಿಗಳ ಉಪದೇಶದಿಂದ ಧ್ಯಾನೋಪಯೋಗಿಯಾದ ಜ್ಞಾನವನ್ನು ಪಡೆದುಕೊಳ್ಳಬೇಕು.

**12. ಸಮನಾಧಿಕರಣ—** ಲಿಂಗಂ=ಬ್ರಹ್ಮ-ಸರಸ್ವತಿಯರಿಗೆ ಸ್ಥಾನೈಕ್ಯ ವಿದ್ದರೂ ಆನಂದದಲ್ಲಿ ತಾರತಮ್ಯ, ಈ ಲಿಂಗ=ಹೇತು ಪೂರ್ವಪಕ್ಷಯುಕ್ತಿ. ಯಥಾಶಕ್ರಿಯಾ=ಸರಸ್ವತೀ-ಬ್ರಹ್ಮರಿಗೆ ತಮ್ಮ ಯೋಗ್ಯತಾನುಸಾರ ಭಗವಂತನ ಕ್ರಿಯೆಯು ಉಪಾಸನಾಯೋಗ್ಯ, ಎಂದು ಸಿದ್ಧಾಂತಯುಕ್ತಿ.

ಸರಸ್ವತೀ-ಬ್ರಹ್ಮರಿಗೆ ಮೋಕ್ಷದಲ್ಲಿ ಪರಮಾತ್ಮನ ಸಮಾನಾಂಗಸ್ಥಿತಿ ರೂಪವಾದ ಸ್ಥಾನೈಕ್ಯವಿದ್ದರೂ ಗುಣದಲ್ಲಿ=ಆನಂದದಲ್ಲಿ ತಾರತಮ್ಯವಿದೆ. ಅವರಿಬ್ಬರೂ ಪರಮಾತ್ಮನ ಗುಣಗಳನ್ನೂ ಕ್ರಿಯೆಗಳನ್ನೂ ಒಂದೇ ರೀತಿ ಉಪಾಸನೆ ಮಾಡುತ್ತಾರೆ. ಆದರೆ, ಮೋಕ್ಷಫಲದಲ್ಲಿ ತಾರತಮ್ಯವಿದೆ. ಹೀಗೆ ಏಕರೀತಿಯ ಸಾಧನೆಯಿಂದ ಫಲತಾರತಮ್ಯ ಅಯುಕ್ತ. ಆದ್ದರಿಂದ ಉಪಾಸನೆಯು ತನಗೆ ಅನುಗುಣವಾದ ಫಲವನ್ನು ನೀಡುವುದಿಲ್ಲ, ಎಂದು ಪೂರ್ವಪಕ್ಷ.

ಭಗವಂತನ ತ್ರಿವಿಕ್ರಮ ಕ್ರಿಯೆ (ಮೂರು ಹೆಜ್ಜೆಗಳಿಂದ ಸರ್ವವನ್ನೂ ಆಕ್ರಮಿಸಿರುವುದು) ನಿತ್ಯ. ಅದನ್ನು ಕ್ರಿಯಾಸಾಮಾನ್ಯವನ್ನಾಗಿ ಸರಸ್ವತಿಯು ಉಪಾಸನೆ ಮಾಡುತ್ತಾಳೆ. ಬ್ರಹ್ಮದೇವರು ತ್ರಿವಿಕ್ರಮಕ್ರಿಯಾತ್ವೇನ ಉಪಾಸನೆ ಮಾಡುತ್ತಾರೆ. ಹೀಗೆ ಉಪಾಸನಾ ಪ್ರಕಾರದಲ್ಲಿ ವೈಷಮ್ಯವಿರುವುದರಿಂದ ಫಲತಾರತಮ್ಯವು ಯುಕ್ತವಾಗಿದೆ, ಎಂದು ಸಿದ್ಧಾಂತ.

ಯಥಾಶಕ್ತಿ ಸ್ಮೃತಾನ್ ಧಾತ್ರಾ ಗುಣಾನ್ ವಿಷ್ಣೋಃ ಸರಸ್ವತೀ ।
ಸ್ಮರೇತ್, ತ್ರೈವಿಕ್ರಮಾದ್ಯಾಂಸ್ತು ನಿತ್ಯವಿಕ್ರಾಂತಿಪೂರ್ವಕೈಃ ।

ಕದಾಚಿದ್ ಲೋಪಯೇದ್ದೇವೀ ಸ್ಥಾನೈಕ್ಯಂ ನ ಗುಣೈಸ್ತತಃ ।
ಸಾಮ್ಯಂ ತಯೋರ್ಯಥಾವಿಷ್ಣೋರ್ಗುಣೋಪಸಾಫಲಂ ಭವೇತ್ ॥

**13. ನವಾ ವಿಶೇಷಾಧಿಕರಣ—** ಅನವಸ್ಥಾ=ಆತ್ಮಶಬ್ದವು ಪುರುಷ ಭೇದೇನ ನಿರ್ದಿಷ್ಟ ಗುಣಗಳನ್ನು ಮಾತ್ರ ಹೇಳುತ್ತದೆ, ಎನ್ನುವ ವ್ಯವಸ್ಥೆಯು ಇಲ್ಲದಿರುವುದು, ಇದು ಪೂರ್ವಪಕ್ಷಯುಕ್ತಿ. ಸಂಧಿಃ=ಅಭಿಸಂಧಿ–ಅಭಿಪ್ರಾಯ, ಇದು ಸಿದ್ಧಾಂತಯುಕ್ತಿ.

ಆತ್ಮಶಬ್ದವು ಭಗವಂತನ ಅನಂತಗುಣಗಳನ್ನು ಹೇಳುತ್ತದೆ. ಅವೆಲ್ಲವನ್ನೂ ಉಪಾಸನೆ ಮಾಡುವ ಅಧಿಕಾರ ಎಲ್ಲರಿಗೂ ಇಲ್ಲ. ಅವರವರಿಗೆ ಉಪಾಸನಾಯೋಗ್ಯವಾದ ಗುಣಗಳನ್ನು ಮಾತ್ರ ಅವರವರಿಗೆ ತಿಳಿಸುತ್ತದೆ, ಎನ್ನಲು ಆಧಾರವಿಲ್ಲ. ಆದ್ದರಿಂದ ಆತ್ಮಶಬ್ದೋಕ್ತಗುಣಗಳಿಗೆ ಸರ್ವೋಪಾಸ್ಯತ್ವ ಇಲ್ಲ. ಇದು ಪೂರ್ವಪಕ್ಷ.

ಯಾರಿಗೆ ಯೋಗ್ಯತಾನುಗುಣವಾಗಿ ಆತ್ಮಶಬ್ದದಿಂದ ಎಷ್ಟು ಗುಣಗಳು ಪ್ರತೀತವಾಗುತ್ತವೋ ಅಷ್ಟು ಗುಣಗಳನ್ನು ಅವರು ಧ್ಯಾನಿಸಬೇಕು. ಅದು ಅನೇಕ ಗುಣಗಳನ್ನು ಹೇಳುತ್ತಿದ್ದರೂ ಆ ಶಬ್ದದಿಂದ ಎಲ್ಲರಿಗೂ ಅಷ್ಟು ಗುಣಗಳ ಪ್ರತೀತಿಯು ಬರುವುದಿಲ್ಲ. ಸಮುದ್ರವು ಅಪಾರವಾದರೂ ಬಿಂದಿಗೆಯಷ್ಟೇ ನೀರು ಬಿಂದಿಗೆಯಲ್ಲಿ ತುಂಬುತ್ತದೆ. ಇದು ಸಿದ್ಧಾಂತ.

**14. ಸಂಭೃತ್ಯಧಿಕರಣ—** ಅವಿಶೇಷಿತಾ=ಮೋಕ್ಷ–ಫಲಾಪೇಕ್ಷಿಗಳಿಗೆ ವಿಶೇಷವಿಲ್ಲದಿರುವುದು, ಪೂರ್ವಪಕ್ಷಯುಕ್ತಿ. ಪ್ರಮಾಣಬಲಂ='ಸತ್ಯಂ ಜ್ಞಾನಮನಂತಂ ಬ್ರಹ್ಮ' ಇತ್ಯಾದಿ ಪ್ರಮಾಣಗಳ ಸಾಮರ್ಥ್ಯ, ಇದು ಸಿದ್ಧಾಂತಯುಕ್ತಿ.

'ಉಕ್ಥಾಸ ದ್ಯಾವಾಪೃಥಿವೀ ಬಿಭರ್ತಿ।'
'ಏಷ ಹಿ ಸರ್ವೇಷು ಲೋಕೇಷು ಭಾತಿ॥''

ಈ ಶ್ರುತಿಯಲ್ಲಿ ಭಗವಂತನಿಗೆ ದ್ಯಾವಾ–ಪೃಥಿವೀಭರಣ ಮತ್ತು ಸರ್ವಲೋಕಪ್ರಕಾಶ ಈ ಎರಡು ಗುಣಗಳು ಹೇಳಲ್ಪಟ್ಟಿವೆ. ಮುಮುಕ್ಷುವಿಗೆ ಮೋಕ್ಷದಲ್ಲಿ ಸ್ವಾವರಭರಣ, ಪ್ರಕಾಶಗಳೂ ಅಪೇಕ್ಷಿತವಾಗಿವೆ. ಈ ಅಪೇಕ್ಷೆ

ಎಲ್ಲರಿಗೂ ಸಮಾನವಾದುದು. ಆದ್ದರಿಂದ ಅವೆರಡಕ್ಕೆ ಕಾರಣವಾದ ಭಗವಂತನ ಈ ಎರಡು ಗುಣಗಳೂ ಅಧಿಕಾರಿಗಳೆಲ್ಲರಿಗೂ ಉಪಾಸ್ಯಗಳಾಗಿವೆ, ಎಂದು ಪೂರ್ವಪಕ್ಷ.

ಸತ್ಯೋ ಜ್ಞಾನಂ ಪರಮಾನಂದರೂಪಃ
ಆತ್ಮೇತ್ಯೇವಂ ನಿತ್ಯದೋಪಾಸನಂ ಸ್ಯಾತ್ ।
ನಾನ್ಯತ್ ಕಿಂಚಿತ್ ಸಮುಪಾಸೀತ ಧೀರಃ
ಸರ್ವೈರ್ಗುಣೈರ್ದೇವಗಣಾ ಉಪಾಸತೇ ॥

ಈ ಪ್ರಮಾಣ ಮತ್ತು 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಈ ಪ್ರಮಾಣಗಳ ಆಧಾರದಿಂದ ಸಂಭೃತಿ–ದ್ಯುವ್ಯಾಪ್ತಿಗುಣಗಳು ಸರ್ವೋಪಾಸ್ಯಗಳಲ್ಲ, ಇದು ಸಿದ್ಧಾಂತ.

**15. ಪುರುಷವಿದ್ಯಾಧಿಕರಣ—** ಅಪ್ರಯೋಜನತಾ=ಸರ್ವಗುಣೋಪ ಸಂಹಾರದ ನಿರರ್ಥಕತೆ. ಇದು ಪೂರ್ವಪಕ್ಷಯುಕ್ತಿ. ಆನತಿಃ=ಸರ್ವ ಗುಣೋಪಸಂಹಾರಕ್ಕೆ ಅರ್ಥಾತ್ ಪ್ರಾಪ್ತಿ, ಇದು ಸಿದ್ಧಾಂತಯುಕ್ತಿ.

**ಪೂರ್ವಪಕ್ಷ—** ಶ್ರುತಿಗಳಲ್ಲಿ ಕೆಲವೆಡೆ ಬಹುಗುಣಗಳು, ಇನ್ನು ಕೆಲವೆಡೆ ಅಲ್ಪಗುಣಗಳೂ ಹೇಳಲ್ಪಟ್ಟಿವೆ. ಬಹುಗುಣೋಪಾಸನೆಗೆ ಯೋಗ್ಯರು ಬಹುಗುಣಪ್ರತಿಪಾದಕ ಶ್ರುತಿಗಳನ್ನೂ ಅಲ್ಪಗುಣೋಪಾಸನೆಗೆ ಯೋಗ್ಯ ರಾದವರು ಅಲ್ಪಗುಣಗಳನ್ನು ಹೇಳುವ ಶ್ರುತಿಗಳನ್ನೂ ಅಧ್ಯಯನ ಮಾಡಿದರೆ ಸಾಕು. ಆದ್ದರಿಂದ ಸಕಲ ಶ್ರುತಿಗಳ ಅಧ್ಯಯನ ಮಾಡಿ ಗುಣೋಪ ಸಂಹಾರವನ್ನು ಮಾಡಬೇಕಾಗಿಲ್ಲ.

**ಸಿದ್ಧಾಂತ—** ಪುರುಷಸೂಕ್ತದಲ್ಲೂ ಎಲ್ಲಾ ಗುಣಗಳನ್ನು ಹೇಳಲಾಗಿಲ್ಲ ಎಂದ ಮೇಲೆ ಇತರ ವಿದ್ಯೆಗಳಲ್ಲಿ ಸರ್ವಗುಣೋಕ್ತಿ ಇಲ್ಲವೆಂದು ಕೈಮುತ್ಯಸಿದ್ಧ. ಆದ್ದರಿಂದ ಸರ್ವಗುಣೋಪಾಸನೆಗೆ ಯೋಗ್ಯರಾದ ಉತ್ತಮಾಧಿಕಾರಿಗಳು ಪ್ರಮಾಣಸಿದ್ಧರಾದುದರಿಂದ ಅರ್ಥಾತ್ ಸರ್ವಗುಣೋಪಸಂಹಾರವೂ ಸಿದ್ಧವಾಗುತ್ತದೆ. ಅಂತಹವರು, ಸಮಗ್ರವೇದದ ಅಧ್ಯಯನ ಮಾಡಬೇಕು. ಇನ್ನು ಮಧ್ಯಮರಿಗೆ ಯೋಗ್ಯವಾಗಿರುವ ಗುಣಗಳೂ ಒಂದೇ ವಿದ್ಯೆಯಲ್ಲಿ ಸಿಗುವುದಿಲ್ಲ, ಅವರೂ ಬೇರೆ ಬೇರೆ ವಿದ್ಯೆಗಳನ್ನು ಓದಿ ಸ್ವಯೋಗ್ಯ ಗುಣಗಳ

ಉಪಸಂಹಾರ ಮಾಡಬೇಕು. ಆದ್ದರಿಂದ ಎಲ್ಲರೂ ಸ್ವಯೋಗ್ಯ ಶ್ರುತಿಗಳಿಂದಲೇ ಯೋಗ್ಯ ಗುಣೋಪಸಂಹಾರ ಮಾಡಬೇಕು.

**16.** ವೇಧಾದ್ಯಧಿಕರಣ– ಅಪ್ರಯೋಜನ=ನ ವಿದ್ಯತೇ ಪ್ರಯೋಜನಂ ಯಸ್ಮಿನ್–ದುರ್ಜನರ ಅಸ್ತಿತ್ವಕ್ಕೆ ಪ್ರಯೋಜನಾಭಾವ ಇದು ಪೂರ್ವಪಕ್ಷ ಯುಕ್ತಿ. ಆನತಿಃ=ಪ್ರಾಪ್ತಿ, ಇದು ಸಿದ್ಧಾಂತಯುಕ್ತಿ.

ಅಗ್ನೇ ತ್ವಚಂ ಯಾತುಧಾನಸ್ಯ ಭಿಂದಿ ।
ತಂ ಪ್ರತ್ಯಂಚಮರ್ಚಿಷಾ ವಿಧ್ಯ್ಯಮರ್ಮನ್ ॥

ಶತ್ರುವೇಧಾದಿ ಗುಣಗಳನ್ನು ಇಲ್ಲಿ ಭಗವಂತನಿಗೆ ಹೇಳಲಾಗಿದೆ. ದುಷ್ಟಜನನಿಗ್ರಹವು ಸರ್ವಾಪೇಕ್ಷಿತವಾದುದರಿಂದ ಇಂತಹ ಗುಣಗಳು ಸರ್ವೋಪಾಸ್ಯಗಳಾಗಿವೆ. ಆದ್ದರಿಂದ ಚತುರ್ಗುಣಗಳು ಮಾತ್ರ ಸರ್ವೋಪಾಸ್ಯಗಳು, ಎಂದುದು ಸರಿಯಲ್ಲ. ಇದು ಪೂರ್ವಪಕ್ಷ.

ಸಿದ್ಧಾಂತ— ಇಂತಹ ಉಪಾಸನೆಗಳನ್ನು ಯತಿಗಳು ಮಾಡಬಾರದೆಂದು ನಿಷೇಧಿಸಲಾಗಿದೆ. ಯತಿಗಳೂ ಬ್ರಹ್ಮೋಪಾಸನಾಧಿಕಾರಿಗಳಾಗಿ ಆನತೇಃ=ಪ್ರಾಪ್ತರಾಗಿದ್ದರಿಂದ ಅವರಿಗೆ ಅಂತಹ ಫಲದಲ್ಲಿ ಅಪೇಕ್ಷೆಯೇ ಸಲ್ಲದು. ಅಂತಹ ಉಪಾಸನೆಗಳು ಕ್ಷತ್ರಿಯರಿಗೆ ಮಾತ್ರ ಯೋಗ್ಯ. ಆದ್ದರಿಂದ ಚತುರ್ಗುಣೋಪಾಸನಾನಿಯಮ ಯುಕ್ತವಾಗಿದೆ.

**17.** ಹಾನ್ಯಧಿಕರಣ— ಪೂರ್ವಪಕ್ಷಯುಕ್ತಿ–ಅತಿಪ್ರಸಂಗಃ=ಮೋಕ್ಷದಲ್ಲೂ ಉಪಾಸನೆ ಇದ್ದರೆ ಫಲಾದಿಗಳು ಇರಬೇಕಾದೀತು, ಎಂಬ ಅತಿಪ್ರಸಂಗ. ಕಾರಣಂ=ಫಲವಿಲ್ಲದಿದ್ದರೂ ಪೂರ್ವಸಂಸ್ಕಾರರೂಪ ಕಾರಣ, ಇದು ಸಿದ್ಧಾಂತಯುಕ್ತಿ.

ಮೋಕ್ಷದಲ್ಲೂ ಉಪಾಸನೆಯು ಇದೆ. ಮುಕ್ತರೂ ವಿಧಿಬದ್ಧರು. ಅಥವಾ, ಬೇಸರಾದಿ ಅನಿಷ್ಟಪರಿಹಾರಕ್ಕಾಗಿ ಮುಕ್ತರೂ ಉಪಾಸನೆಯನ್ನು ಮಾಡುತ್ತಾರೆ. ಆದ್ದರಿಂದ ಮುಕ್ತರೂ ಸಂಸಾರಿಗಳಂತೆ, ಅವರಿಗೂ ಅನಿಷ್ಟನಿವೃತ್ತಿ–ಇಷ್ಟಪ್ರಾಪ್ತಿ ರೂಪವಾದ ಫಲಗಳು ಇವೆ. ಇದು ಪೂರ್ವಪಕ್ಷ.

ಸಿದ್ಧಾಂತ— ನ ಹೀಯತೇ ಯತ್ರಗತ್ವಾ ಯತ್ರ ಗತ್ವಾ ನ ವರ್ಧತೇ ।

ಎಂಬ ಶ್ರುತಿಯಿಂದ, ಮೋಕ್ಷದಲ್ಲಿ ಅನಿಷ್ಟನಿವೃತ್ತಿ ಇಷ್ಟಪ್ರಾಪ್ತಿರೂಪವಾದ ಯಾವ ಫಲವೂ ಇಲ್ಲ. ಆದರೂ ಈಶಕ್ರಿಯೆಯಂತೆ, ಮುಕ್ತರು ಪೂರ್ವ ಸಂಸ್ಕಾರಬಲಾತ್ ಉಪಾಸನೆಯನ್ನು ಮಾಡುತ್ತಾರೆ. ಸಂಸ್ಕಾರರೂಪಕಾರಣ ಇರುವುದರಿಂದ ಉಪಾಸನಾರೂಪಕಾರ್ಯವೂ ಇದೆ.

**18. ಛಂದಾಧಿಕರಣ–** ಪೂರ್ವಪಕ್ಷಯುಕ್ತಿ–ಅದೂರಸಂಶ್ರಯಃ= ಕರ್ಮಕರಣಶಕ್ತಿಗೆ ಸನ್ನಿಹಿತತ್ವ. ಸಿದ್ಧಾಂತಯುಕ್ತಿ–ಕಾರ್ಯವೈಶೇಷ್ಯಂ= ಉಪಾಸನಾಕಾರ್ಯಕ್ಕೆ ಕಾರಣಸತ್ವಾದಿರೂಪ ವಿಶೇಷ.

ಮುಕ್ತರೂ ಕರ್ಮವನ್ನು ನಿಯತವಾಗಿ ಮಾಡುತ್ತಾರೆ. ಅವರ ಕರ್ಮಕರಣಶಕ್ತಿಯು ಸ್ವಾಭಾವಿಕವಾದುದು. ಅಂದಮೇಲೆ ಮೋಕ್ಷದಲ್ಲೂ ಕರ್ಮವನ್ನು ಮಾಡಲೇಬೇಕು. ಇದು ಪೂರ್ವಪಕ್ಷ.

ಉಪಾಸನಾ ಮಾಡಲು ಪೂರ್ವಸಂಸ್ಕಾರವೆಂಬ ಕಾರಣವಿದೆ. ಆದರೆ ಉಪಾಸನಾದಂತೆ ಸಾಧಕರಿಗೆ ಕರ್ಮವು ನಿಯತವಲ್ಲವಾದುದರಿಂದ ಕರ್ಮ ಸಂಸ್ಕಾರವಿಲ್ಲ. ಕರ್ಮಮಾಡಲು ವಿಹಿತತ್ವ ಮತ್ತು ಅಕರಣೇ ಪ್ರತ್ಯವಾಯುವು ಕಾರಣ. ಅವೆರಡೂ ಮುಕ್ತರಿಗೆ ಇಲ್ಲ. ಆದ್ದರಿಂದ ಉಪಾಸನಾದಂತೆ ಕರ್ಮವನ್ನು ಅವರು ಮಾಡುವುದಿಲ್ಲ, ಎಂದು ಸಿದ್ಧಾಂತ.

**19. ಅನಿಯಮಾಧಿಕರಣ—** ವಿಶಿಷ್ಟಕಾರಣಂ=ಅಯೋಗ್ಯತಾಖ್ಯ ವಿಶಿಷ್ಟಕಾರಣವು ಪೂರ್ವಪಕ್ಷಯುಕ್ತಿ. ಸ್ವಭಾವಃ=ಈಶ್ವರನು ಎಲ್ಲ ಜ್ಞಾನಿ ಗಳಿಗೂ ಮೋಕ್ಷವನ್ನು ಕೊಟ್ಟೇ ಕೊಡುತ್ತಾನೆ ಎನ್ನುವ ಸ್ವಭಾವ, ಅದರಿಂದಾಗಿಯೇ ಅಯೋಗ್ಯರಿಗೆ ಜ್ಞಾನ ಹುಟ್ಟುವುದಿಲ್ಲ, ಎನ್ನುವ ನಿಯಮ–ಸಿದ್ಧಾಂತಯುಕ್ತಿ.

ಎಲ್ಲ ಜ್ಞಾನಿಗಳಿಗೂ ಮೋಕ್ಷವಿಲ್ಲ, ಮೋಕ್ಷವು ಯೋಗ್ಯರಿಗೆ ಮಾತ್ರ ಲಭ್ಯ. ಜ್ಞಾನಿಗಳಲ್ಲೂ ಕೆಲವರು ಅಯೋಗ್ಯರಿರಬಹುದು. ಆದ್ದರಿಂದ ಜ್ಞಾನಿ ಗಳೆಲ್ಲರಿಗೂ ಮೋಕ್ಷವಿಲ್ಲ. ಇದು ಪೂರ್ವಪಕ್ಷ.

ಸಿದ್ಧಾಂತ— ಎಲ್ಲ ಜ್ಞಾನಿಗಳಿಗೂ ಮೋಕ್ಷವಿದೆ. ಉಪಾಸನೆಯಲ್ಲಿ ಯೋಗ್ಯಾಯೋಗ್ಯರು ಇದ್ದರೂ ಜ್ಞಾನಿಗಳಲ್ಲಿ ಈ ಭೇದವಿಲ್ಲ.

''ನ ಕಶ್ಚಿದ್ ಬ್ರಹ್ಮವಿದ್ ಸ್ರುತಿಮನುಭವತಿ ಮುಕ್ತೋಹ್ಯೇಷ ಭವತಿ'' ಎಂಬ ಪ್ರಮಾಣದಂತೆ ಎಲ್ಲ ಜ್ಞಾನಿಗಳಿಗೂ ಮೋಕ್ಷವು ನಿಯತ. ಜ್ಞಾನಿಮೋಕ್ಷ ಪ್ರದತ್ವ ಭಗವಂತನ ಸ್ವಭಾವ.

**20.** ಯಾವದಧಿಕರಣ— ಚೇಷ್ಟಾ=ಪ್ರಯತ್ನಕ್ಕೆ ಅನುಗುಣವಾಗಿ ಆನಂದತಾರತಮ್ಯ, ಪೂರ್ವಪಕ್ಷಯುಕ್ತಿ. ವಸ್ತುದೂಷಣಂ=ಪ್ರಯತ್ನದಿಂದ ಗಳಿಸಿದ ಸಾಧನಕ್ಕೆ (ವಸ್ತು)ದೋಷಪ್ರಾಪ್ತಿ, ಸಿದ್ಧಾಂತಯುಕ್ತಿ.

ಮೋಕ್ಷದಲ್ಲಿ ತಾರತಮ್ಯವಿದ್ದಲ್ಲಿ ದ್ವೇಷಾದಿದೋಷಪ್ರಸಕ್ತಿ ಇರುವುದರಿಂದ ತಾರತಮ್ಯವು ಸರಿಯಲ್ಲ. ಒಂದುವೇಳೆ ಆನಂದತಾರತಮ್ಯವಿದ್ದರೂ ಅದಕ್ಕೆ ಅವರ ಸಾಧನಯತ್ನತಾರತಮ್ಯವೇ ಕಾರಣ, ಯೋಗ್ಯತಾ ತಾರತಮ್ಯವಲ್ಲ. ಕೃಷ್ಯಾದಿಫಲತಾರತಮ್ಯಕ್ಕೆ ಪ್ರಯತ್ನತಾರತಮ್ಯವು ಕಾರಣವೆಂದು ಸಿದ್ಧವಾಗಿದೆ. ಆದ್ದರಿಂದ ಉಪಾಸಕರ ಯೋಗ್ಯತೆಯಲ್ಲಿ ತಾರತಮ್ಯವಿಲ್ಲ, ಎಂದು ಪೂರ್ವಪಕ್ಷ.

ಸ್ವಾಧಿಕಾರಾಧಿಕೋ ಯತ್ನಃ ಪ್ರಾಯಶೋ ನೋಪಪದ್ಯತೇ ।
ಕಥಂಚಿದಧಿಕೇ ಯತ್ನೇ ದೋಷಃ ಕಶ್ಚಿತ್ ಸಮಾಪತೇತ್॥

ಎಂಬ ಪ್ರಮಾಣದಲ್ಲಿ ಸಾಧಕರ ಪ್ರಯತ್ನ ತಾರತಮ್ಯಕ್ಕೂ ಅವರ ಯೋಗ್ಯತಾ ತಾರತಮ್ಯವೇ ಪ್ರಯೋಜಕ. ಒಂದುವೇಳೆ ಪ್ರಯತ್ನವು ಯೋಗ್ಯತೆಗಿಂತ ಹೆಚ್ಚಾದರೆ ಅದಕ್ಕೆ ದೋಷದಿಂದ ಚ್ಯುತಿ ಬರುವುದು. ಆದ್ದರಿಂದ ತತ್ಪ್ರಯುಕ್ತವಾಗಿಯೇ ಮೋಕ್ಷದಲ್ಲಿ ಆನಂದತಾರತಮ್ಯವೂ ಇದೆ. ಮೋಕ್ಷದಲ್ಲಿ ವಿಷಯಲಂಪಟತ್ವ ಇಲ್ಲ, ಎಲ್ಲರೂ ಪೂರ್ಣರು. ಆದ್ದರಿಂದ ತಾರತಮ್ಯ ಪ್ರಯುಕ್ತವಾಗಿ ದ್ವೇಷಾಸೂಯೆಗಳಿಗೂ ಅವಕಾಶವಿಲ್ಲ. ಇದು ಸಿದ್ಧಾಂತ.

**21.** ಇಯದಾಮನನಾಧಿಕರಣ— ಪೂರ್ವಪಕ್ಷಯುಕ್ತಿ–ದೃಷ್ಟ ವೈರೂಪ್ಯಂ=ಪ್ರಪಂಚದಲ್ಲಿ ಒಂದರಿಂದ ಮತ್ತೊಂದು ಅಧಿಕವಾಗಿ ಕಂಡಿದೆ. ಸಾಧಕರಲ್ಲೂ ಹೀಗೇ ಇರುವುದು ಉಚಿತ. ಒಬ್ಬನು ಸಾಧಕೋತ್ತಮನಿದ್ದಾನೆ ಎನ್ನುವುದು ದೃಷ್ಟವಾದುದಕ್ಕೆ ವಿರುದ್ಧವಾದುದು. ಸಿದ್ಧಾಂತಯುಕ್ತಿ– ಪ್ರತಿಕ್ರಿಯಾವಿರೋಧಃ=ಪ್ರತಿಕ್ರಿಯಾ=ಪರಿಹಾರ, ಹಿಂದೆ ಹೇಳಿದ ನಿಯಮವನ್ನು ಪರಿಹಾರ ಮಾಡುವ ಶ್ರುತಿವಿರೋಧ.

ಲೋಕದಲ್ಲಿ ಒಂದರಿಂದ ಇನ್ನೊಂದು ಉತ್ತಮೋತ್ತಮವಾಗಿರುವುದೇ ಕಂಡಿದೆ. ಇದೇ ಸರ್ವೋತ್ತಮ, ಇದಕ್ಕಿಂತ ಉತ್ತಮ ಇನ್ನೊಂದಿಲ್ಲ, ಎನ್ನುವ ಕೊನೆ ಇಲ್ಲ.ಹೀಗೆ ದೃಷ್ಟವೈರೂಪ್ಯವಿರುವುದರಿಂದ ಸಾಧಕರ ತರತಮಭಾವಕ್ಕೂ ಕೊನೆಯಿಲ್ಲ ಎಂದು ಪೂರ್ವಪಕ್ಷ.

''ಪ್ರಾಣೋ ವಾವ ಸರ್ವೇಭ್ಯೋ ಭೂಯಾನ್''

ಎಂಬ ಶ್ರುತಿ ಇರುವುದರಿಂದ ಸಾಧಕೋತ್ತಮ ಮುಖ್ಯಪ್ರಾಣ. ಅವನಿಗಿಂತ ಉತ್ತಮಸಾಧಕ ಮತ್ತೊಬ್ಬನಿಲ್ಲ.

ಯಃ ಸರ್ವಮೇವ ಜಾನೀಯಾತ್ ಋತೇ ದೇವಂ
ನಾರಾಯಣಂ ದೇವೀಂ ಚ ಪರಮಾಂ ಶ್ರಿಯಮ್ ।
ಸ ಪ್ರಾಣಾನವರುದ್ಧ್ಯೇಮಂ ಮಂತ್ರಮಾವರ್ತಯೀತ ॥

ಯಾರು ಶ್ರೀಮನ್ನಾರಾಯಣನನ್ನೂ, ಸರ್ವೋತ್ತಮಳಾದ ಲಕ್ಷ್ಮೀದೇವಿ ಯನ್ನೂ ಹೊರತು ಇತರವಾದ ಅಖಿಲಜಗತ್ತನ್ನೂ ತಿರಸ್ಕರಿಸುವನೋ ಅವನು ಮುಖ್ಯಪ್ರಾಣನಿಗೆ ಅವಮಾನಮಾಡಿದಂತಾಗಿ ಅದರ ಪರಿಹಾರಕ್ಕಾಗಿ ''ಆತ್ಮಾ ದೇವಾನಾಂ'' ಎಂಬ ಮಂತ್ರವನ್ನು ಹೇಳಬೇಕು. ಈ ಪ್ರಾಯಶ್ಚಿತ್ತದಿಂದ ಬಂದ ಪಾಪವನ್ನು ಪರಿಹಾರ ಮಾಡಿಕೊಳ್ಳಬೇಕು. ಹೀಗೆ ಪ್ರಾಣನಿಗೆ ಜೀವೋತ್ತಮತ್ವ ವನ್ನು ಹೇಳಿರುವುದರಿಂದ ವಾಯುದೇವರೇ ಸರ್ವ ಸಾಧಕೋತ್ತಮರು.

**22. ವ್ಯತಿಹಾರಾಧಿಕರಣ**— ಉನ್ನತಿಃ, ಇದು ಪೂರ್ವಪಕ್ಷಯುಕ್ತಿ. ಸರ್ವೋತ್ಕೃಷ್ಟತ್ವ ಎಂದು ಅದರ ಅರ್ಥ. ಪ್ರತಿಸಂಧಿಃ=ಪ್ರಶ್ನ–ಪ್ರತಿವಚನಗಳ ಪ್ರತಿಸಂಧಾನ, ಇದು ಸಿದ್ಧಾಂತ ನ್ಯಾಯ.

ಛಾಂದೋಗ್ಯೋಪನಿಷತ್ತಿನಲ್ಲಿ ಬಂದಿರುವ ಸನತ್ಕುಮಾರ–ನಾರದ ಸಂವಾದದಲ್ಲಿ 'ವಾಗೇವ ನಾಮ್ನೋ ಭೂಯಸೀ' ಇತ್ಯಾದಿಯಾಗಿ ನಾಮವನ್ನು ಆರಂಭಿಸಿ ಪ್ರಾಣದವರೆಗೆ ಒಂದಕ್ಕಿಂತ ಇನ್ನೊಂದು ಉತ್ತಮ, ಎಂದು ಹೇಳಿ ''ಪ್ರಾಣೋ ವಾ ಆಶಾಯಾಃ ಭೂಯಾನ್'' ಎಂಬ ವಾಕ್ಯದಲ್ಲಿ ಪ್ರಾಣನನ್ನು ಉತ್ತಮನನ್ನಾಗಿ ಹೇಳಿ ಅವನಿಗಿಂತ ಮತ್ತೊಬ್ಬ ಉತ್ತಮನನ್ನು ಹೇಳಲಾಗಿಲ್ಲ.

ಆದ್ದರಿಂದ ಮುಖ್ಯಪ್ರಾಣನೇ ಉತ್ತಮನು, ವಿಷ್ಣುವೂ ಪ್ರಾಣನಿಗಿಂತ ಉತ್ತಮನಲ್ಲ, ಎಂದು ಪೂರ್ವಪಕ್ಷ.

ಪ್ರಾಣನಿಗಿಂತಲೂ ಉತ್ತಮನಾದ ಸತ್ಯನಾಮಕ ಪರಮಾತ್ಮನ ಉಪದೇಶವೂ ''ಏಷು ತು ವಾ ಅತಿವದತಿ, ಯಃ ಸತ್ಯೇನಾತಿವದತಿ' ಎಂದು ಈ ಪ್ರಕರಣದಲ್ಲಿ ಶ್ರುತವಾಗಿದೆ. ಯದ್ಯಪಿ 'ಅಸ್ತಿ ಭಗವಃ ನಾಮ್ನೋ ಭೂಯಃ' ಎಂಬ ಪ್ರಶ್ನೆಯಂತೆ ಇಲ್ಲಿ 'ಅಸ್ತಿ ಭಗವಃ ಪ್ರಾಣಾದ್ ಭೂಯಃ' ಎಂಬ ಪ್ರಶ್ನೆಯಾಗಲೀ ಅದಕ್ಕೆ 'ಸತ್ಯಂ ವಾವ ಪ್ರಾಣಾದ್ ಭೂಯಃ' ಎಂಬ ಉತ್ತರವಾಗಲೀ ಇಲ್ಲ. ಆದರೂ ಅವೆರಡನ್ನೂ ಅಧ್ಯಾಹಾರ ಮಾಡಬೇಕು. ಆದ್ದರಿಂದ ಪ್ರಾಣನು ಸರ್ವೋತ್ತಮನಲ್ಲ. ಪರಮಾತ್ಮನೇ ಸರ್ವೋತ್ತಮ.

**23. ಸತ್ಯಾಧಿಕಕರಣ—** ಅನುಕ್ತಿಃ=ಸತ್ಯನ ಅನಂತರ ಬರುವ ವಿಜ್ಞಾನಾದಿಗಳಿಗೆ ಸತ್ಯನೊಂದಿಗೆ ಅಭೇದವನ್ನು ಹೇಳದಿರುವುದು, ಇದು ಪೂರ್ವಪಕ್ಷಯುಕ್ತಿ. ಅನೂನತಾ=ಪೂರ್ವಪೂರ್ವೋಕ್ತವಾದ ಸತ್ಯಾದಿಗಳಿಗೆ ಉತ್ತರೋಕ್ತವಾದ ವಿಜ್ಞಾನಾದಿಗಳಿಂದ ಊನತ್ವ ಇಲ್ಲದಿರುವುದು ಸಿದ್ಧಾಂತ ಯುಕ್ತಿ.

ಛಾಂದೋಗ್ಯದಲ್ಲಿ ಸತ್ಯಪದದಿಂದ ಪರಮಾತ್ಮನನ್ನು ಹೇಳಿ ವಿಜ್ಞಾನ, ಕೃತಿ, ಮತಿ ಹೀಗೆ ಅನೇಕ ತತ್ತ್ವಗಳನ್ನು ಹೇಳಲಾಗಿದೆ. ಅವೆಲ್ಲಕ್ಕೂ ಅಭೇದವನ್ನು ಹೇಳಲಾಗಿಲ್ಲ. ಆದ್ದರಿಂದ ಸತ್ಯನಾಮಕಪರಮಾತ್ಮನಿಗಿಂತಲೂ ಉತ್ತಮರಾದವರು ಅನೇಕರಿದ್ದಾರೆ, ಎಂದು ಪೂರ್ವಪಕ್ಷ.

ಅನೇಕ ತತ್ತ್ವಗಳನ್ನು ಹೇಳಿ ಸತ್ಯಂ ಪೂರ್ಣಂ, ವಿಜ್ಞಾನಂ ಪೂರ್ಣಂ, ಕೃತಿಃ ಪೂರ್ಣಾ ಎಂದು ಮುಂತಾಗಿ 'ಸತ್ಯ' ತತ್ತ್ವದ ಅನಂತರ ಹೇಳಲಾಗಿರುವ ವಿಜ್ಞಾನಾದಿಗಳೂ ಪೂರ್ಣಗಳು ಎಂದು ಹೇಳಲಾಗಿದೆ. ಸತ್ಯಾದಿಗಳೆಲ್ಲವೂ ಪೂರ್ಣಗಳೇ ಆಗಿರುವುದರಿಂದ ಅವುಗಳಲ್ಲಿ ನ್ಯೂನಾಧಿಕಭಾವ ಇಲ್ಲ. ಆದ್ದರಿಂದ ಅವೆಲ್ಲವೂ ಅಭಿನ್ನಗಳು. ಆದ್ದರಿಂದ ಸತ್ಯಕ್ಕಿಂತ ಭಿನ್ನವಾದ ಸರ್ವೋತ್ತಮ ಇಲ್ಲ, ಇದು ಸಿದ್ಧಾಂತ.

**24. ಕಾಮಾಧಿಕರಣ—** ಅಪ್ರಯತ್ನತ್ವಂ=ಲಕ್ಷ್ಮೀದೇವಿಗೆ ಪ್ರಯತ್ನ

ಇಲ್ಲದಿರುವಿಕೆ ಪೂರ್ವಪಕ್ಷಯುಕ್ತಿ. ಸಂಸ್ಕಾರಪಾಟವಂ ಚ=ಪಟುವಾದ ಸಂಸ್ಕಾರ ಮತ್ತು ನಿತ್ಯಮುಕ್ತತ್ವ, ಇದು ಸಿದ್ಧಾಂತನ್ಯಾಯ.

ಲಕ್ಷ್ಮೀದೇವಿಯೂ ಅಧಿಕಾರವರ್ಗದಲ್ಲೇ ಸೇರಿರುವುದರಿಂದ ಮುಖ್ಯ ಪ್ರಾಣನೇ ಸರ್ವೋತ್ತಮ ಸಾಧಕ ಎನ್ನುವುದು ಯುಕ್ತವಲ್ಲ, ಎಂದು ಪೂರ್ವಪಕ್ಷ.

ಲಕ್ಷ್ಮೀದೇವಿಗೆ ಪ್ರಯತ್ನವಿದ್ದರೆ ಅವಳೂ ಸಂಸಾರಿಯಾಗುತ್ತಾಳೆ. ಪ್ರಯತ್ನವೇ ಇಲ್ಲವೆಂದಾದರೆ ಉಪಾಸನೆಯೇ ಇಲ್ಲವೆಂದಾಗುತ್ತದೆ. ಉಪಾಸನೆ ಇಲ್ಲದ ಪ್ರಯುಕ್ತ ಅವಳು ಅಕೃತಾರ್ಥಳು. ಆದ್ದರಿಂದಲೇ ಅವಳೂ ಅಧಿಕಾರವರ್ಗದಲ್ಲಿ ಸೇರುತ್ತಾಳೆ. ಅಲ್ಲಿಗೆ ಪ್ರಾಣನಿಗಿಂತಲೂ ಉತ್ತಮರಾದ ಅಧಿಕಾರಿಗಳು ಇದ್ದಾರೆ. ಅವನೇ ಉತ್ತಮಾಧಿಕಾರಿ ಅಲ್ಲ. ಇದು ಪೂರ್ವಪಕ್ಷ.

ಸಿದ್ಧಾಂತ— ಲಕ್ಷ್ಮೀದೇವಿ ಅಸ್ವತಂತ್ರಳಾದರೂ ನಿತ್ಯಮುಕ್ತಳು. ಸದಾ ಪರಮಾತ್ಮನ ಜೊತೆಯಲ್ಲೇ ಇದ್ದು ಪರಮಾತ್ಮನನ್ನು ಅತಿ ಹೆಚ್ಚು ಪ್ರೀತಿಸುತ್ತಾಳೆ. ಅತಿಪ್ರಿಯವಾದ ವಸ್ತು ಸದಾ ಮನಸ್ಸಿನಲ್ಲಿ ಸ್ಥಿರವಾಗಿರುತ್ತದೆ. ಹೀಗೆ, ಲಕ್ಷ್ಮೀದೇವಿಗೆ ಪಟುತಮವಾದ ಸಂಸ್ಕಾರವು ಇರುವುದರಿಂದ ಅವಳೂ ಸರ್ವದಾ ಉಪಾಸನೆ ಮಾಡುತ್ತಿರುತ್ತಾಳೆ. ಸಾಧಕರ ಗುಂಪಿನಲ್ಲಿ ಸೇರುವುದಿಲ್ಲ.

**25. ನಿರ್ಧಾರಣಾಧಿಕರಣ—** ದೃಢಬಂಧಃ–ಇದು ಪೂರ್ವಪಕ್ಷ ನ್ಯಾಯ. ಜೀವಸ್ವರೂಪಾವರಣವು ದೃಢವಾದುದು ಎಂದು ಅರ್ಥ. ಸ್ವೇಚ್ಛಾನಿಯತಿ=ಈಶೇಚ್ಛೆಯ ನಿಯಮನ, ಇದು ಸಿದ್ಧಾಂತನ್ಯಾಯ.

ಸಂಸಾರಬಂಧ ಕೇವಲ ಶ್ರವಣ–ಮನನಗಳಿಂದ ನಿವೃತ್ತಿಯಾಗುವುದಿಲ್ಲ. ಧ್ಯಾನದಿಂದಾದ ಅಪರೋಕ್ಷದಿಂದಲೇ ಬಂಧನಿವೃತ್ತಿ. ಇದರಿಂದ ಬಂಧವು ಅತಿ ದೃಢವೆಂದು ತಿಳಿಯುತ್ತದೆ. ಅದು ಅದೃಢವಾಗಿದ್ದಲ್ಲಿ ಶ್ರವಣ–ಮನನ ಗಳಿಂದಲೇ ನಿವೃತ್ತಿಯಾಗಿ ಜ್ಞಾನವು ವ್ಯರ್ಥವಾದೀತು. ಅದು ಅತಿದೃಢ ವಾದುದು, ಅದು ಅಚ್ಛೇದ್ಯ. ಆದ್ದರಿಂದ ಶ್ರವಣಾದಿಗಳು ವ್ಯರ್ಥ, ಎಂದು ಪೂರ್ವಪಕ್ಷ.

ಸಿದ್ಧಾಂತ— ಶ್ರವಣಾದಿತ್ರಿತಯಜನ್ಯವಾದ ಅಪರೋಕ್ಷಜ್ಞಾನ ದಿಂದಲೇ ಬಂಧವು ನಿವೃತ್ತಿಯಾಗಲೆಂದು ಭಗವಂತನ ಇಚ್ಛೆ.

ಶ್ರವಣಾದಿತ್ರಯೋತ್ಪನ್ನ ದೃಷ್ಟ್ಯೈವ ಸ್ವೇಚ್ಛಯಾ ಹರಿಃ ।
ಪ್ರಸನ್ನೋ ಮುಕ್ತಿದೋ ನಿತ್ಯಮ್ ಅನ್ಯಥಾ ನ ಕಥಂಚನ ॥

ಆದ್ದರಿಂದ ಶ್ರವಣ, ಮನನ, ಧ್ಯಾನವೆಂಬ ಸಮಸ್ತೋಪಾಸನೆಯು ಅವಶ್ಯಕರ್ತವ್ಯ. ಇಚ್ಛಾನಿಯತಿ=ಈಶೇಚ್ಛಾನಿಯಮ, ಸಿದ್ಧಾಂತಯುಕ್ತಿ.

**26. ಪ್ರದಾನಾಧಿಕರಣ—** ಪರಾಭವಃ=ಗುರುಗಳ ಕೋಪದಿಂದ ಜ್ಞಾನಕ್ಕೆ ಪರಾಭವ, ಇದು ಪೂರ್ವಪಕ್ಷಯುಕ್ತಿ. ವಸ್ತುವೈಭವಂ=ಸಾಕ್ಷಾತ್ಕೃತನಾದ ಬ್ರಹ್ಮನ (ವಸ್ತುವಿನ)ಸಾಮರ್ಥ್ಯವಿಶೇಷ, ಇದು ಸಿದ್ಧಾಂತಯುಕ್ತಿ.

ಜ್ಞಾನ ಮತ್ತು ಮೋಕ್ಷಗಳು ಗುರುಗಳ ಅಧೀನಗಳೆಂದಾದರೆ ಜ್ಞಾನ ಬಂದರೂ ಗುರುಗಳ ಕೋಪದಿಂದ ಜ್ಞಾನದ ಶಕ್ತಿಯು ಕುಂಠಿತವಾಗಿ ಜ್ಞಾನಿಗೆ ಮೋಕ್ಷವು ದೊರಕದೇ ಹೋಗಬಹುದು, ಎಂದು ಪೂರ್ವಪಕ್ಷ.

ಅಪರೋಕ್ಷೀಕೃತನಾದ ಪರಮಾತ್ಮನ ಸಾಮರ್ಥ್ಯಕ್ಕೆ ಗುರುಶಾಪವು ತಡೆಯಾಗುವುದಿಲ್ಲ. ಆದ್ದರಿಂದ ಜ್ಞಾನಿಗೆ ಮೋಕ್ಷವು ನಿಶ್ಚಿತ. ಆದರೂ ಗುರುಶಾಪವಿದ್ದರೆ ಮೋಕ್ಷದಲ್ಲಿ ಆನಂದಹ್ರಾಸವಾಗುತ್ತದೆ. ಇದು ಸಿದ್ಧಾಂತ.

ಜ್ಞಾನಿನೋ ಗುರುಶಾಪೇಽಪಿ ನಾಮುಕ್ತಿಃ ಸಂಸೃತೇಃ ಕ್ವಚಿತ್ ।
ಆನಂದಹ್ರಾಸದೋಷೇಣ ಸೈವ ಮುಕ್ತಿರ್ವಿದುಷ್ಯತಿ ॥

**27. ಲಿಂಗಭೂಯಸ್ತ್ವಾಧಿಕರಣ—** ಪುಂಸಾಮ್ಯಂ=ಗುರು–ಶಿಷ್ಯರಿಗೆ ಪುರುಷತ್ವವು ಸಮಾನ, ಇದು ಪೂರ್ವಪಕ್ಷಯುಕ್ತಿ. ವಿಶೇಷೋಕ್ತಿಃ–ಪುರುಷತ್ವ ಸಮಾನವಾದರೂ ಗುರುಪ್ರಸಾದವೇ ಪ್ರಬಲ ಎನ್ನುವ ವಿಶೇಷೋಕ್ತಿ ಸಿದ್ಧಾಂತಯುಕ್ತಿ.

ಶಿಷ್ಯನೂ ಗುರುವಿಗೆ ಪುರುಷತ್ವೇನ ಸಮಾನನಾದುದರಿಂದ ಧ್ಯಾನ ಧಾರಣಾದಿ ರೂಪವಾದ ಶಿಷ್ಯನ ಪ್ರಯತ್ನವು ದುರ್ಬಲವೇನಲ್ಲ. ಆದ್ದರಿಂದ ಶಿಷ್ಯಪ್ರಯತ್ನವು ಗುರುಪ್ರಸಾದಕ್ಕೆ ಸಮಾನ ಅಥವಾ ಅದಕ್ಕಿಂತಲೂ ಪ್ರಬಲ, ಎಂದು ಪೂರ್ವಪಕ್ಷ.

ಗುರುಪ್ರಸಾದೋ ಬಲವಾನ್ ನ ತಸ್ಮಾದ್ ಬಲವತ್ತರಮ್ ।
ತಥಾಪಿ ಶ್ರವಣಾದಿಶ್ಚ ಕರ್ತವ್ಯೋ ಮೋಕ್ಷಸಿದ್ಧಯೇ ॥

ಎಂಬ ವಿಶೇಷವಚನವಿರುವುದರಿಂದ ಶಿಷ್ಯಪ್ರಯತ್ನಕ್ಕಿಂತಲೂ ಗುರುಗಳ ಪ್ರಸಾದವೇ ಪ್ರಬಲ, ಎಂದು ಸಿದ್ಧಾಂತ.

**28. ವಿಕಲ್ಪಾಧಿಕರಣ—** ಪ್ರಾಪ್ತಸಂತ್ಯಾಗಃ=ಮೊದಲು ಪ್ರಾಪ್ತರಾದ ಗುರುಗಳ ಪರಿತ್ಯಾಗಪ್ರಯುಕ್ತದೋಷ, ಪೂರ್ವಪಕ್ಷಯುಕ್ತಿ, ಅಮಾನತ್ವಂ= ಉತ್ತಮಗುರುಗಳನ್ನು ಪರಿಗ್ರಹಿಸಿದರೆ ದೋಷವಿದೆ, ಎನ್ನುವುದಕ್ಕೆ ಪ್ರಮಾಣ ಇಲ್ಲದಿರುವುದು, ಸಿದ್ಧಾಂತಯುಕ್ತಿ.

ಉತ್ತಮ ಗುರುಗಳು ದೊರಕಿದರೂ ಪ್ರಥಮಪ್ರಾಪ್ತರಾದ ಗುರುಗಳ ಪರಿತ್ಯಾಗವು ದೋಷಪ್ರದ. ಆದ್ದರಿಂದ ಸರ್ವಜ್ಞರಾದ ಗುರುಗಳು ಸಿಕ್ಕಿದರೂ ಮೊದಲ ಗುರುಗಳನ್ನು ಬಿಡಬಾರದು, ಎಂದು ಪೂರ್ವಪಕ್ಷ.

ಮೊದಲ ಗುರುಗಳ ಅನುಜ್ಞೆಪಡೆದು ಉತ್ತಮ ಗುರುಗಳ ಉಪಸತ್ತಿಯನ್ನು ಮಾಡಬಹುದು. ಸರ್ವಜ್ಞರಾದ ಗುರುಗಳು ಸಿಕ್ಕಿದಾಗ ಪೂರ್ವಗುರುಗಳನ್ನು ಬಿಡುವುದರಿಂದ ದೋಷವಿದೆ, ಎನ್ನುವ ಪ್ರಮಾಣವೇನೂ ಇಲ್ಲ.

**29. ವಿದ್ಯಾಧಿಕರಣ—** ಕಾರಣಾನಿರ್ಣಯಃ = ಸಂಸಾರನಿವೃತ್ತಿಗೆ ವಿದ್ಯೆಯೋ ಕರ್ಮವೋ ಕಾರಣ ಎನ್ನುವ ನಿರ್ಣಯ ಇಲ್ಲದಿರುವುದು, ಪೂರ್ವಪಕ್ಷಯುಕ್ತಿ. ಪ್ರಾಧಾನ್ಯಂ=ವಿದ್ಯಾಕಾರಣತ್ವವಚನಕ್ಕೆ ಪ್ರಾಧಾನ್ಯವು ಸಿದ್ಧಾಂತಯುಕ್ತಿ.

'ತರತಿ ಶೋಕಮಾತ್ಮವಿತ್' ಈ ಶ್ರುತಿಯು ಜ್ಞಾನವು ಮೋಕ್ಷಕ್ಕೆ ಕಾರಣ ಎನ್ನುತ್ತದೆ. ''ಕರ್ಮಣೈವ ಹಿ ಸಂಸಿದ್ಧಿಂ ಆಸ್ಥಿತಾಃ ಜನಕಾದಯಃ''. ಈ ಗೀತಾವಾಕ್ಯಕರ್ಮವು ಬಂಧನಿವೃತ್ತಿಗೆ ಕಾರಣ ಎಂದಿದೆ. ಇವೆರಡಲ್ಲಿ ಮೋಕ್ಷಕ್ಕೆ ಯಾವುದು ಕಾರಣ ಎನ್ನುವುದು ನಿರ್ಣಯವಾಗದಿರುವುದರಿಂದ ಜ್ಞಾನಕ್ಕಾಗಿ ಉಪಾಸನಾದಿ ಪ್ರಯತ್ನಗಳನ್ನು ಮಾಡಲೇಬೇಕೆಂಬ ನಿರ್ಬಂಧ ಇಲ್ಲ. ಇದು ಪೂರ್ವಪಕ್ಷ.

'ನಾನ್ಯಃ ಪಂಥಾಃ ಅಯನಾಯ ವಿದ್ಯತೇ' ಮೋಕ್ಷಕ್ಕೆ ಜ್ಞಾನವು ಕಾರಣ, ಎನ್ನುವ ಈ ಪ್ರಮಾಣವಚನದಲ್ಲಿ 'ನಾನ್ಯಃ ಪಂಥಾಃ=ಜ್ಞಾನಮಾರ್ಗ ಬಿಟ್ಟು ಅನ್ಯಮಾರ್ಗವಿಲ್ಲ', ಎನ್ನುವ ವಿಶೇಷವು ಇರುವುದರಿಂದ ಇದಕ್ಕೆ ಪ್ರಾಧಾನ್ಯವಿದೆ. ಆದ್ದರಿಂದ ಮೋಕ್ಷಕ್ಕೆ ಜ್ಞಾನವೇ ಕಾರಣ. ಇದು ಸಿದ್ಧಾಂತ.

**30. ಅಬಾಧಾಧಿಕರಣ—** ಭ್ರಮಃ='ನಾನ್ಯಃ ಪಂಥಾಃ' ಎಂಬ ಶ್ರುತಿಗೆ ಪ್ರಾಧಾನ್ಯವಿದೆ, ಎನ್ನುವ ಭ್ರಮೆ, ಇದು ಪೂರ್ವಪಕ್ಷನ್ಯಾಯ. ಪ್ರೀತಿಃ=ಜ್ಞಾನಿಯಲ್ಲಿರುವ ಭಗವಂತನ ಪ್ರೀತಿ, ಇದು ಸಿದ್ಧಾಂತ ನ್ಯಾಯ.

'ಕರ್ಮಣೈವ ಹಿ ಸಂಸಿದ್ಧಿಂ ಆಸ್ಥಿತಾ ಜನಕಾದಯಃ' ಎಂಬ ಉಕ್ತಿಯು ಭಗವದ್ವಚನವಾದುದರಿಂದ ಪ್ರಧಾನ. ಶ್ರುತಿಯು ಪ್ರಧಾನ ಎನ್ನುವುದು ಭ್ರಮೆ, ಎಂದು ಪೂರ್ವಪಕ್ಷ.

''ಪ್ರಿಯೋ ಹಿ ಜ್ಞಾನಿನೋಽತ್ಯರ್ಥಂ' ಎಂಬ ಭಗವದ್ವಚನವು ಜ್ಞಾನಿಯೇ ಭಗವಂತನಿಗೆ ಅತಿಪ್ರಿಯನಾದವನು, ಎಂದಿದೆ. ಭಗವತ್ಪ್ರೀತಿಯೇ ಮೋಕ್ಷ ಸಾಧನ. ಆದ್ದರಿಂದ ಜ್ಞಾನವೇ ಮೋಕ್ಷಕಾರಣ, ಎಂದು ಸಿದ್ಧಾಂತ.

**31. ಅನುಬಂಧಾದ್ಯಧಿಕರಣ—** ವಿಶೇಷದರ್ಶಿತಾ–ಇದು ಪೂರ್ವಪಕ್ಷ ನ್ಯಾಯ. ಭಕ್ತ್ಯಾದಿಗಳು ಇಲ್ಲದೆಯೂ ಗುರುವಿನ ಅನುಗ್ರಹದಿಂದಾಗಿ ಅಥವಾ ದ್ವೇಷದಿಂದ ಭಗವಂತನ ಧ್ಯಾನ ಮಾಡಿದಾಗಲೂ ವಿಶೇಷಜ್ಞಾನ ಎಂದು ಅದರ ಅರ್ಥ. ಆಗಮಃ='ಭಕ್ತ್ಯೈವೇನಂ' ಈ ಆಗಮವು ಸಿದ್ಧಾಂತನ್ಯಾಯ.

ಧ್ಯಾನವು ಅಪರೋಕ್ಷಜ್ಞಾನಕ್ಕೆ ಕಾರಣ. ಧ್ಯಾನವೆಂದರೆ ಮನಸ್ಸನ್ನು ಬ್ರಹ್ಮನಲ್ಲಿ ನೆಲೆಗೊಳಿಸುವುದು. ಭಕ್ತಿಯಂತೆ ಸರ್ವಜ್ಞನಾದ ಗುರುವಿನ ಅನುಗ್ರಹದಿಂದ ಅಥವಾ ದ್ವೇಷದಿಂದಲೂ ಇದು ಸಾಧ್ಯ. ಆದ್ದರಿಂದ ದ್ವೇಷಾದಿಗಳಿಂದಲೂ ಧ್ಯಾನಮಾಡಿ ಅಪರೋಕ್ಷವಾಗಬಹುದಾದ್ದರಿಂದ ಮೋಕ್ಷಕ್ಕೆ ಭಕ್ತಿಯ ಅಗತ್ಯವಿಲ್ಲ, ಎಂದು ಪೂರ್ವಪಕ್ಷ.

ಭಿನತ್ತಿ ಕರ್ಮಸಂಘಾತಂ ಪ್ರಸನ್ನೋ ಭಗವಾನ್ ಹರಿಃ ||

ಈ ಆಗಮದಲ್ಲಿ ಭಕ್ತಿಯೇ ಮೋಕ್ಷಹೇತುವಾದ ಭಗವತ್‌ಪ್ರಸಾದಕ್ಕೆ ಕಾರಣ ಎಂದು ಹೇಳಿದೆ. ಇದು ಸಿದ್ಧಾಂತ.

**32. ಪ್ರಜ್ಞಾಂತರಾಧಿಕರಣ—** ಆಲಾಪಃ=ಸಾಮಾನ್ಯವಚನ, ಇದು ಪೂರ್ವಪಕ್ಷಯುಕ್ತಿ. ಸುಸ್ಥಿರತ್ವಂ=ಭಗವದ್ದರ್ಶನದಲ್ಲಿ ತಾರತಮ್ಯಕ್ಕೆ ಅತಿಸ್ಥಿರತ್ವವು ಸಿದ್ಧಾಂತಯುಕ್ತಿ.

'ದೃಷ್ಟ್ವೈವ ತಂ ಮುಚ್ಯತೇ' ಇತ್ಯಾದಿ ಶ್ರುತಿಗಳು ಭಗವದ್ದರ್ಶನ ಮಾತ್ರ

ಮೋಕ್ಷಕ್ಕೆ ಸಾಧನ, ಎನ್ನುತ್ತವೆ. ಆ ಭಗವದ್‌ದರ್ಶನದಲ್ಲಿ ಅಧಿಕಾರಿಭೇದೇನ ಭೇದವನ್ನು ಹೇಳುತ್ತಿಲ್ಲ. ಆದ್ದರಿಂದ ಎಲ್ಲ ಅಧಿಕಾರಿಗಳಿಗೂ ಭಗವದ್ದರ್ಶನವು ಸಮಾನವಾದುದು, ಅದರಲ್ಲಿ ವೈಚಿತ್ರ್ಯವಿಲ್ಲ, ಎಂದು ಪೂರ್ವಪಕ್ಷ.

''ಯಥಾಯೋಗ್ಯಮೇವೈಷ ಆತ್ಮಾನಂ ದರ್ಶಯತಿ''

''...ಸುಸ್ಥಿರೋ ಹ್ಯೇಷ ನಿಯಮಃ''

ಈ ಶ್ರುತಿಯಲ್ಲಿ ದರ್ಶನತಾರತಮ್ಯಕ್ಕೆ ಸುಸ್ಥಿರತ್ವವನ್ನು ಹೇಳಿರುವುದರಿಂದ ಅಧಿಕಾರಿಭೇದೇನ ಅಪರೋಕ್ಷಜ್ಞಾನದಲ್ಲಿ ಭೇದವಿದೆ, ಎಂದು ತಿಳಿಯುತ್ತದೆ.

**33. ನ ಸಾಮಾನ್ಯಾಧಿಕರಣ—** ಗುಣಸಾಮ್ಯಂ=ಭಗವಂತನ ಎಲ್ಲ ರೂಪಗಳಲ್ಲೂ ಗುಣಗಳ ಸಾಮ್ಯ, ಇದು ಪೂರ್ವಪಕ್ಷಯುಕ್ತಿ. ಕೃತ ಪ್ರಾಪ್ತಿಃ= ಸ್ವಕೃತಕರ್ಮದಿಂದ ಮಾತ್ರ ಫಲಪ್ರಾಪ್ತಿ, ಇದು ಸಿದ್ಧಾಂತನ್ಯಾಯ.

ಭಗವಂತನ ಎಲ್ಲ ರೂಪಗಳೂ ಸಮಾನವಾಗಿವೆ. ಆದ್ದರಿಂದ ಎಲ್ಲ ರೂಪಗಳಿಗೂ ಮೋಕ್ಷಪ್ರದತ್ವಗುಣ ಇದೆ. ಅಧಿಕಾರಿಗಳು ಯಾವ ರೂಪವನ್ನು ನೋಡಿದರೂ ಮುಕ್ತರಾಗುತ್ತಾರೆ. ರೂಪವಿಶೇಷದ ದರ್ಶನ ಬೇಕಾಗಿಲ್ಲ,ಎಂದು ಪೂರ್ವಪಕ್ಷ.

ಸಮೋಽಪಿ ಭಗವಾನ್ ಸ್ವಬಿಂಬದರ್ಶನೇ ಏವೈನಂ ಮೋಚಯತಿ ।
ಯಥಾ ಸರ್ವೇಷ್ವಪಿ ಕರ್ಮಸು ಸ್ವಕೃತಮೇವೈನಂ ಭೋಜಯತಿ ॥

ಈ ಶ್ರುತಿಯಲ್ಲಿ ಕರ್ಮದೃಷ್ಟಾಂತವನ್ನು ಕೊಟ್ಟು ಭಗವಂತನ ಬಿಂಬರೂಪದರ್ಶನದಿಂದಲೇ ಮೋಕ್ಷ ಎಂದು ಹೇಳಲಾಗಿದೆ. ಅನಂತಕರ್ಮಗಳಿದ್ದರೂ ಭಗವಂತ ಅವರವರು ಮಾಡಿರುವ ಕರ್ಮಕ್ಕೆ ತಕ್ಕಂತೆ ಅವರವರಿಗೆ ಫಲವನ್ನು ಕೊಡುತ್ತಾನೆ. ಅದರಂತೆ ಅನಂತಭಗವದ್ರೂಪಗಳಿದ್ದರೂ ಬಿಂಬದರ್ಶನದಿಂದ ಮಾತ್ರ ಮೋಕ್ಷ. ಇದು ಸಿದ್ಧಾಂತ.

**34. ಪರೇಣಾಧಿಕರಣ—** ಪೃಥಗ್‌ದೃಶಿಃ–ಈಶನಿಗಿಂತ ಪೃಥಕ್ಕಾಗಿ ಭಕ್ತಿಮಾತ್ರಕ್ಕೆ ಮೋಕ್ಷಕಾರಣತ್ವವು ಶ್ರುತವಾಗಿರುವುದು ಪೂರ್ವಪಕ್ಷ ಯುಕ್ತಿ. ಅನಾದಿಗುಣವಿಸ್ತರಃ=ಜೀವರಲ್ಲಿರುವ ಅನಾದಿಕಾಲದ ಭಕ್ತ್ಯಾದಿ ಗುಣ ವಿಸ್ತಾರವು ಸಿದ್ಧಾಂತನ್ಯಾಯ.

ಪೂರ್ವಪಕ್ಷ—'ಭಕ್ತಿರೇವೈನಂ ಮೋಚಯತಿ' ಭಕ್ತಿಯೇ ಜೀವನಿಗೆ ಮೋಕ್ಷವನ್ನು ಕೊಡುತ್ತದೆ, ಎಂದು ಏವಕಾರದಿಂದ ಈಶನಿಲ್ಲದೆ ಭಕ್ತಿಮಾತ್ರಕ್ಕೆ ಮೋಕ್ಷಪ್ರದತ್ವವು ಶ್ರುತವಾಗಿರುವುದರಿಂದ ಪರಮಾತ್ಮನ ಅಗತ್ಯ ಮೋಕ್ಷಕ್ಕಿಲ್ಲ, ಎಂದು.

ಅನಾದಿತೋ ಗುಣಾಃ ಸಂತಃ ಭಕ್ತ್ಯಾದ್ಯಾಃ ನಹ್ಯಮೂಮುಚನ್ ।
ಜೀವಂ ಸದ್ಗುಣಸುವ್ಯಕ್ತಂ ಕೃತ್ವೈನಂ ಮೋಚಯೇದ್ಧರಿಃ ॥

ಈ ಬ್ರಹ್ಮತರ್ಕವಚನವು ಸಯುಕ್ತಿಕವಾಗಿ ಈಶನಿಂದಲೇ ಮೋಕ್ಷ ಎನ್ನುತ್ತದೆ. ಅನಾದಿಕಾಲೀನಭಕ್ತಿಯು ಅಧಿಕಾರಿವರ್ಗಕ್ಕೆ ಇದ್ದರೂ ಮೋಕ್ಷ ವಾಗಲಿಲ್ಲ. ಆದ್ದರಿಂದ ಅಪರೋಕ್ಷಜ್ಞಾನದಿಂದ ಪ್ರಸನ್ನನಾದ ಭಗವಂತ ನಿಂದಲೇ ಮೋಕ್ಷ, ಎಂದು ಸಿದ್ಧಾಂತ.

35. ಏಕಾಧಿಕರಣ– ಪೂರ್ವಪಕ್ಷಯುಕ್ತಿ–ಅಗಮ್ಯವರ್ತ್ಮ=ಅಂಶದಿಂದ ಹೊಂದಲಾಗದ ಅಂಶಿಯ ಮಾರ್ಗ. ಸಾಧನೋತ್ತಮತಾ=ಅದೃಷ್ಟಕ್ಕೆ ಸಾಧನ ಗಳಲ್ಲಿ ಉತ್ತಮತ್ವ, ಇದು ಸಿದ್ಧಾಂತಯುಕ್ತಿ.

ಅಂಶಿಯಾದ ಇಂದ್ರಾದಿಗಳಲ್ಲಿರುವ ಜ್ಞಾನ–ಸುಖಾದಿಗಳ ಸಮಗ್ರಾನುಭವವು ಅಂಶನಾದ ಅರ್ಜುನನಿಗೆ ಇಲ್ಲ. ಅಂಶಿಯ ಜ್ಞಾನಾದಿಗಳು ಅಂಶಕ್ಕೆ ಇಲ್ಲದಿರುವುದರಿಂದಲೇ ಅಂಶಿಯ 'ಮಾರ್ಗವು' ಅಂಶದಿಂದ ಅಗಮ್ಯ ವಾಗಿದೆ. ಆದ್ದರಿಂದ, ಅಂಶಾಂಶಿಗಳಿಗೆ ಭೇದವಿದೆ, ಎಂದು ಪೂರ್ವಪಕ್ಷ.

ಅದೃಷ್ಟವು ಸಾಧನೋತ್ತಮವಾದುದು. ಅಂಶಿಯ ಅದೃಷ್ಟದಿಂದ ಅಂಶಕ್ಕೆ ಸುಖಾದಿಗಳ ಅನುಸಂಧಾನವಿದೆ. ಭೇದವಿದ್ದರೆ ಹೀಗೆ ಅನುಸಂಧಾನ ವಿರಲು ಸಾಧ್ಯವಿಲ್ಲ. ಆದ್ದರಿಂದ ಅಂಶಾಂಶಿಗಳಿಗೆ ಭೇದವಿಲ್ಲ. ಆದರೂ, ಭಗವಂತನ ಅಚಿಂತ್ಯಶಕ್ತಿಯಿಂದ ಅಂಶಿಯಲ್ಲಿರುವ ಕೆಲವು ಧರ್ಮಗಳ ಅನುಭವ ಅಂಶಕ್ಕಿರುವುದಿಲ್ಲ. ಅರ್ಜುನನಿಗೆ ಶರೀರೋತ್ಪತ್ತಿಯಾಗಬೇಕಾದರೆ ಅದಕ್ಕೆ ಕಾರಣವಾದ ಅದೃಷ್ಟವು ಅಂಶಿಯಾದ ಇಂದ್ರನಲ್ಲಿರಬೇಕು. ಒಬ್ಬನ ಅದೃಷ್ಟದಿಂದ ಮತ್ತೊಬ್ಬರಿಗೆ ಶರೀರೋತ್ಪತ್ತ್ಯಾದಿಗಳು ಆಗುವುದಿಲ್ಲ. ಆದ್ದರಿಂದ ಅಂಶಾಂಶಿಗಳಿಗೆ ಅಭೇದವು ಇರಲೇಬೇಕು. (ಅನ್ಯಥಾ ಅದೃಷ್ಟಂ ವಿನಾ ಶರೀರಾದ್ಯನುಪಪತ್ತೇಃ । ನ್ಯಾ:ವಿ.)

**36. ಅಂಗಾವಬದ್ಧಾಧಿಕರಣ**—ಸಂಧಾನಂ=ದೇವತ್ವಾದಿಸಾಧಾರಣ ಗುಣಗಳ ಅನುಸಂಧಾನ, ಇದು ಪೂರ್ವಪಕ್ಷನ್ಯಾಯ. ನಾನಾದೃಷ್ಟಿಃ= ಬ್ರಹ್ಮಾದಿದೇವತೆಗಳಲ್ಲಿ ಪರಸ್ಪರವಿಲಕ್ಷಣಗಳಾದ ಗುಣಗಳ ದರ್ಶನವು ಸಿದ್ಧಾಂತನ್ಯಾಯ.

**ಪೂರ್ವಪಕ್ಷ**—ಚತುರ್ಮುಖ ಸರ್ವೋತ್ತಮಸಾಧಕ. ಅವನಲ್ಲಿರುವ ದೇವತ್ವಗುಣವನ್ನು ಅವನಿಗಿಂತ ಅವರದೇವತೆಗಳಲ್ಲಿ ಉಪಾಸನೆ ಮಾಡಬೇಕು. ತುಲ್ಯನ್ಯಾಯೇನ, ಅಧಿಕದೇವತೆಗಳಲ್ಲಿರುವ ಅಸಾಧಾರಣಗುಣಗಳನ್ನೂ ಅವರದೇವತೆಗಳಲ್ಲಿ ಉಪಾಸನೆ ಮಾಡಬೇಕು. ಗರುಡ-ಶೇಷರು ಸಮಕಕ್ಷರು. ಆದ್ದರಿಂದ ಶೇಷನಲ್ಲಿರುವ ಸಹಸ್ರವದನತ್ವವನ್ನು ಗರುಡನಲ್ಲೂ ಗರುಡ ನಲ್ಲಿರುವ ವಕ್ರತುಂಡತ್ವವನ್ನು ಶೇಷನಲ್ಲಿಯೂ ಉಪಾಸನೆ ಮಾಡಬೇಕು, ಎಂದು.

ಬ್ರಹ್ಮದೇವ ಚತುರಾನನ, ಶೇಷ ಸಹಸ್ರವದನ, ಇಂದ್ರ ಸಹಸ್ರಾಕ್ಷ. ಹೀಗೆ ಶ್ರುತಿಗಳಲ್ಲಿ ಆಯಾಯದೇವತೆಗಳಿಗೆ ಅಸಾಧಾರಣವಾದ ಗುಣಗಳನ್ನು ಹೇಳ ಲಾಗಿದೆ. ಇಂತಹ ಗುಣಗಳು ಆ ದೇವತೆಗಳನ್ನು ಬಿಟ್ಟು ಇತರದೇವತೆಗಳಲ್ಲಿ ಇಲ್ಲ. ಇಂತಹ ಗುಣಗಳನ್ನು ಮತ್ತೊಬ್ಬ ದೇವತೆಯಲ್ಲಿ ಉಪಾಸನೆ ಮಾಡ ಬಾರದು. ಅನಿಷಿದ್ಧವಾದ ದೇವತ್ವ, ಯಜ್ಞಭೋಕ್ತೃತ್ವಾದಿಗುಣಗಳನ್ನು ಮಾತ್ರ ವಾಕ್ಯಾನ್ವಯನ್ಯಾಯದಿಂದ ಉಪಾಸನೆ ಮಾಡಬೇಕು. ಇದು ಸಿದ್ಧಾಂತ.

**37. ಭೂಮಕ್ರತ್ವಧಿಕರಣ**— ಇಷ್ಟಫಲಂ (ಇಷ್ಟಾತ್‌ಗುಣಾತ್ ಜಾಯಮಾನಂ ಫಲಂ)=ಇಷ್ಟವಾದ ಗುಣಕ್ಕೆ ಅನುಗುಣವಾಗಿ ಫಲೋಪಪತ್ತಿ, ಇದು ಪೂರ್ವಪಕ್ಷಯುಕ್ತಿ. ಶಿಷ್ಟಿಃ(ಶಿಷ್ಟೈಃ ಅನುಶಾಸನಾತ್)=ಭೂಮಗುಣೋ ಪಾಸನೆಯ ವಿಧಿ, ಸಿದ್ಧಾಂತಯುಕ್ತಿ. ಸಾಧಕರು ಮೋಕ್ಷದಲ್ಲಿ ತಮಗೆ ಅಭಿಲಷಿತವಾದ ಫಲಕ್ಕೆ ಅನುಗುಣವಾದ ಉಪಾಸನೆಯನ್ನು ಮಾಡಬೇಕು. ಮೋಕ್ಷದಲ್ಲಿ ಜ್ಞಾನಾನಂದಾದಿಗಳು ಅಭಿಲಷಿತವಾಗಿರುವುದರಿಂದ ಭಗವಂತ ನಲ್ಲಿ ಆ ಗುಣಗಳನ್ನು ಉಪಾಸನೆ ಮಾಡಬೇಕು. ಆ ಆನಂದಾದಿಗಳಲ್ಲಿ 'ಭೂಮತ್ವ' (ಪೂರ್ಣತ್ವವು) ಇದ್ದರೂ ಅದು ಜೀವರಿಂದ ಹೊಂದಲು ಅಸಾಧ್ಯವಾದುದರಿಂದ ಪ್ರಿಯಶಿರಸ್ತ್ವಾದಿಗಳಂತೆ ಭೂಮಗುಣವೂ ಉಪಾಸನಾಯೋಗ್ಯವಲ್ಲ, ಎಂದು ಪೂರ್ವಪಕ್ಷ.

ಭೂಮ್ನೈವ ದೇವಃ ಪರಮೋ ಹ್ಯುಪಾಸ್ಯಃ
ನೈವಾಭೂಮಾ ಫಲಮೇಷಾಂ ವಿಧತ್ತೇ ॥

ಇತ್ಯಾದಿ ವಿಧಿ ಇರುವ ಕಾರಣ ಆನಂದಾದಿಗುಣಗಳಲ್ಲಿ ಭೂಮತ್ವವೂ ಉಪಾಸ್ಯವಾಗಿದೆ, ಎಂದು ಸಿದ್ಧಾಂತ.

**38.**ನಾನಾಶಬ್ದಾಧಿಕರಣ—ಅಕಲ್ಪನಾ=ಭೂಮಗುಣದಲ್ಲಿ ವಿಶೇಷ ಕಲ್ಪಕಾಭಾವ, ಪೂರ್ವಪಕ್ಷಯುಕ್ತಿ. ಅನೂನತಾ=ಭೂಮಗುಣಕ್ಕೆ ಬ್ರಹ್ಮಾದಿ-ಅಧಿಕಾರಿವಿಶೇಷಾಪೇಕ್ಷಯಾ ನ್ಯೂನತ್ವ ಇಲ್ಲದಿರುವಿಕೆ, ಅರ್ಥಾತ್ ಅಧಿಕಾರಾನುಸಾರಿತ್ವ. ಇದು ಸಿದ್ಧಾಂತಯುಕ್ತಿ.

ಭೂಮಗುಣವನ್ನು ಎಲ್ಲರೂ ಉಪಾಸನೆ ಮಾಡುವುದು ಯುಕ್ತವಲ್ಲ. ಬ್ರಹ್ಮಾದಿ–ಅಧಿಕಾರಿಗಳಲ್ಲಿ ತಾರತಮ್ಯವಿದೆ. ಆದರೆ ಪರಮಾತ್ಮನ ಆನಂದಾದಿ ಗಳಲ್ಲಿರುವ ಭೂಮತ್ವ ಒಂದೇ ವಿಧವಾದುದು. ಆದರಲ್ಲಿ ತಾರತಮ್ಯವಿಲ್ಲ. ಇಲ್ಲದಿರುವ ತಾರತಮ್ಯವನ್ನು ಉಪಾಸನೆ ಮಾಡುವುದು ಅಸದುಪಾಸನೆ. ಅದು ನಿಷಿದ್ಧ. ಆದ್ದರಿಂದ ಭೂಮಗುಣೋಪಾಸನೆಯಲ್ಲಿ ತಾರತಮ್ಯವಿಲ್ಲ. ಇದು ಪೂರ್ವಪಕ್ಷ.

ಉಪಾಸಕರಾದ ಬ್ರಹ್ಮಾದಿಗಳಲ್ಲಿ ತಾರತಮ್ಯವಿರುವಂತೆ ಅವರ ಉಪಾಸನೆಯಲ್ಲೂ ತಾರತಮ್ಯವಿದೆ. ಅವರವರಿಗೆ ಎಷ್ಟು ಪೂರ್ಣತ್ವವನ್ನು ತಿಳಿಯಲು ಸಾಧ್ಯವೋ ಅಷ್ಟಷ್ಟು ಪೂರ್ಣತ್ವವನ್ನು ಅವರು ಉಪಾಸಿಸಬೇಕು. ಹೀಗೆ ಯೋಗ್ಯತಾನುಸಾರವಾಗಿ ಭೂಮೋಪಾಸನೆಯಲ್ಲೂ ತಾರತಮ್ಯವಿದೆ, ಎಂದು ಸಿದ್ಧಾಂತ.

**39.**ವಿಕಲ್ಪಾಧಿಕರಣ– ಶುದ್ಧವೈರೂಪ್ಯಂ=ಶುದ್ಧವಾದ ಮೋಕ್ಷಸಾಧನೆಗೆ ಆವಶ್ಯಕತ್ವಾಭಾವ ಇದು ಪೂರ್ವಪಕ್ಷಯುಕ್ತಿ. ಅವಿಘ್ನತ್ವ=ಮೋಕ್ಷಪ್ರತಿಬಂಧಕ ವಾದ ದುರಿತನಿವೃತ್ತಿ ಇದು ಸಿದ್ಧಾಂತಯುಕ್ತಿ.

ಪೂರ್ವಪಕ್ಷ– ಮುಮುಕ್ಷುಗಳು ಬಿಂಬಾತಿರಿಕ್ತವಾದ ಭಗವದ್‌ರೂಪದ ಉಪಾಸನೆಯನ್ನು ಮಾಡಬಾರದು. ಇತರ ರೂಪಗಳ ಉಪಾಸನೆಯು ಬಿಂಬೋಪಾಸನೆಗೆ ವಿಘ್ನಕಾರಕ. ಅಷ್ಟೇ ಅಲ್ಲ, ಇತರ ರೂಪಗಳ ಉಪಾಸನೆಯ

ಅಗತ್ಯವೂ ಇಲ್ಲ. ನಿಷ್ಕಾಮವಾದ ಉಪಾಸನೆಯೇ ಮೋಕ್ಷಕ್ಕೆ ಸಾಧನ. ಅಂತಹ ಉಪಾಸನೆ ಬಿಂಬೋಪಾಸನೆ. ಇತರರೂಪಗಳ ಉಪಾಸನೆಯನ್ನು ಕಾಮ್ಯಾಂತರಸಿದ್ಧಿಗಾಗಿ ಮಾಡಬೇಕು. ಕಾಮ್ಯಾಂತರವು ಮೋಕ್ಷಪ್ರತಿಬಂಧಕ. ಆದ್ದರಿಂದ, ರೂಪಾಂತರೋಪಾಸನೆ ಮಾಡಬಾರದು.

**ಸಿದ್ಧಾಂತ**—ಬಿಂಬಾತಿರಿಕ್ತವಾದ ನರಸಿಂಹಾದಿರೂಪಗಳ ಉಪಾಸನೆಯನ್ನು ಮಾಡುವುದರಿಂದ ಮೋಕ್ಷಪ್ರತಿಬಂಧಕವಾದ ದುರಿತವು ನಿವೃತ್ತಿಯಾಗುತ್ತದೆ. ಹೀಗೆ ವಿಘ್ನ ಬಾರದಿರಲು ಸಾಧನವಾದುದರಿಂದ ನರಸಿಂಹಾದಿ ರೂಪಗಳ ಉಪಾಸನೆಯನ್ನು ಮಾಡಬೇಕು.

**40.ಕಾಮ್ಯಾಧಿಕರಣ**—ಅಂಗತ್ವಂ=ಕಾಮ್ಯೋಪಾಸನೆಗೆ ಮೋಕ್ಷಾಂಗತ್ವವು ಪೂರ್ವಪಕ್ಷಯುಕ್ತಿ. ಅವಿರೋಧಃ=ಜ್ಞಾನಸಿದ್ಧಿರೂಪವಾದ ವಿರೋಧ ಮತ್ತು ಪ್ರತಿಬಂಧಕದುರಿತನಿವೃತ್ತ್ಯಭಾವ ಈ ಎರಡು ಪ್ರತಿಬಂಧಕಾಭಾವಗಳು, ಸಿದ್ಧಾಂತಯುಕ್ತಿ. ಶ್ರೀಕರಾದಿಭಗವದ್ರೂಪಗಳ ಉಪಾಸನೆಯು ಲೌಕಿಕವಾದ ಅರ್ಥಾದಿಪ್ರಾಪ್ತಿಗೆ ಸಾಧನ. ಅರ್ಥಪ್ರಾಪ್ತಿ ಗುರುಪ್ರಸಾದ ದ್ವಾರಾ ಜ್ಞಾನಕ್ಕೆ ಸಾಧನ. ಆದ್ದರಿಂದ ಕಾಮ್ಯೋಪಾಸನೆಯೂ ಅವಶ್ಯಕರಣೀಯ, ಎಂದು ಪೂರ್ವಪಕ್ಷ.

ಇಂತಹ ಕಾಮ್ಯೋಪಾಸನೆಯನ್ನು ಮಾಡದಿದ್ದರೂ ಮೋಕ್ಷಹೇತುವಾದ ಜ್ಞಾನವು ಬರುವುದಿಲ್ಲ ಎಂದೇನಿಲ್ಲ. ಅಥವಾ, ಆ ಉಪಾಸನೆಯು ಮೋಕ್ಷ ಪ್ರತಿಬಂಧಕವಾದ ದುರಿತನಿವರ್ತಕವೂ ಅಲ್ಲ. ಆದ್ದರಿಂದ ಬಿಂಬೋಪಾಸನೆಯಂತೆ ಕಾಮ್ಯೋಪಾಸನೆಯು ಅನಿವಾರ್ಯವಲ್ಲ, ಎಂದು ಸಿದ್ಧಾಂತ.

**41.ಅಂಗಾಧಿಕರಣ**— ಅವಿಶೇಷದೃಷ್ಟಿಃ=ದೇವತೆಗಳು ತಾವು ಭಗವಂತನ ಅಂಗಾಶ್ರಿತರು ಎಂದು ಉಪಾಸನೆಯನ್ನು ಮಾಡಬೇಕು, ಎನ್ನುವ ವಿಶೇಷವಚನಾದೃಷ್ಟಿ ಇದು ಪೂರ್ವಪಕ್ಷನ್ಯಾಯ.

ಗುಣವೈಶೇಷ್ಯಂ=ಮೋಕ್ಷದಲ್ಲಿ ವಿಶಿಷ್ಟವಾದ ಗುಣಗಳ ಪ್ರಾಪ್ತಿ ಮತ್ತು ದೇವತೆಗಳು ಭಗವಂತನಿಗೆ ಅನುರೂಪರೂ ಆಗಿರುವುದು ಸಿದ್ಧಾಂತಯುಕ್ತಿ.

**ಪೂರ್ವಪಕ್ಷ**— 'ಬ್ರಹ್ಮಾ ಶಿರಸಿ, ಲಲಾಟೇ ರುದ್ರಃ' 'ಚಕ್ಷೋಃ

ಸೂರ್ಯೋ ಅಜಾಯತ' ಹೀಗೆ ಬ್ರಹ್ಮಾದಿದೇವತೆಗಳು ಭಗವಂತನ ಒಂದೊಂದು ಅಂಗಗಳನ್ನು ಆಶ್ರಯಿಸಿದ್ದಾರೆ. ಇದು ಭಗವಂತನ ಮಹಿಮಾ ವಿಶೇಷ. ಇದನ್ನು ಆಯಾಯ ದೇವತೆಗಳು ಉಪಾಸನೆ ಮಾಡಬೇಕೆಂದು ಶ್ರುತಿವಚನವಿಲ್ಲ. ಆದ್ದರಿಂದ ಆ ಮಹಿಮೆಗಳು ದೇವತೋಪಾಸ್ಯಗಳಲ್ಲ, ಎಂದು ಪೂರ್ವಪಕ್ಷ.

**ಸಿದ್ಧಾಂತ**—'ವಿಶಿಷ್ಟಾ ಹಿ ಗುಣಾಃ ಮುಕ್ತೌ ದೇವಾನಾಂ ಭವಂತಿ' ಮೋಕ್ಷದಲ್ಲೂ ದೇವತೆಗಳು ಭಗವಂತನ ಚಕ್ಷುರಾದಿ ಅಂಗಾಶ್ರಿತರಾಗಿರುತ್ತಾರೆ. ಇದೇ ಅವರಿಗೆ ವಿಶಿಷ್ಟಮೋಕ್ಷ. 'ತೇ ಹಿ ಹರೇರನುರೂಪಾಃ' ಆಯಾಯ ದೇವತೆಗಳೇ ಭಗವದನುರೂಪರು. ಆದ್ದರಿಂದ ಹರಿಯ ಅಂಗಾಶ್ರಿತರು ಎನ್ನುವ ಉಪಾಸನೆಯನ್ನು ದೇವತೆಗಳು ಮಾಡಬೇಕು, ಎಂದು ಸಿದ್ಧಾಂತ. ಗುಣವೈಶೇಷ್ಯಂ, ಇದು ಸಿದ್ಧಾಂತನ್ಯಾಯ.

**42. ನವಾ ಅಧಿಕರಣ**— ಕ್ರಿಯಾ = ಅಂಗದೇವತೋಪಾಸನೆಯು ಒಂದು ಕ್ರಿಯೆ, ಇದು ಪೂರ್ವಪಕ್ಷನ್ಯಾಯ. ಆಗಮಃ=ಆಗಮವಿಶೇಷವು ಸಿದ್ಧಾಂತ ನ್ಯಾಯ.

**ಪೂರ್ವಪಕ್ಷ**—ಅಂಗದೇವತೋಪಾಸನೆಯು ಕ್ರಿಯಾವಿಶೇಷ. ಅದು ಅವಶ್ಯಕರ್ತವ್ಯವಾದಲ್ಲಿ ಪ್ರತಿಶಾಖೆಯಲ್ಲೂ ಅಗ್ನಿಷ್ಟೋಮಾದಿಯಾಗಗಳಂತೆ ಅವುಗಳನ್ನು ಹೇಳಬೇಕಾಗಿತ್ತು. ಹಾಗೆ ಹೇಳಲಾಗಿಲ್ಲ. ಆದ್ದರಿಂದ ಅಂಗದೇವತೋಪಾಸನೆ ಅವಶ್ಯಕರ್ತವ್ಯವಲ್ಲ.

ಉಪಾಸನಾ ಯಜನಂ ಚೇತಿ ಸಾಮ್ಯಂ
ತತ್ತದ್‌ವಿಶೇಷಾನ್ ಸಂಹರೇತ್ ಸರ್ವತಶ್ಚ ।
ತಥಾ ಕರ್ತೄಣಾಂ ತತ್ಫಲಾನಾಂ ವಿಶೇಷಾದ್
ವ್ಯರ್ಥಾ ಹಿ ಶಾಖಾ ಅನ್ಯಥೈವಂ ಚ ಸಾರ್ಥಾಃ ॥

ಈ ಆಗಮದಿಂದ ಅಂಗದೇವತೋಪಾಸನೆ ಅವಶ್ಯಕಾರ್ಯ. 'ಚಕ್ಷೋಃ ಸೂರ್ಯೋಽಜಾಯತ' ಇತ್ಯಾದಿ ಅಂಗದೇವತೋಪಾಸನಾವಾಕ್ಯಗಳು ಎಲ್ಲಾ ಶಾಖೆಗಳಲ್ಲೂ ಇಲ್ಲ. ಆದರೂ ಆ ಗುಣಗಳನ್ನು ಉಪಸಂಹಾರ ಮಾಡಿ

ಉಪಾಸನೆ ಮಾಡಬೇಕು. ಇಲ್ಲದಿದ್ದರೆ ಆ ಗುಣೋಕ್ತಿಯು ವ್ಯರ್ಥವಾದಂತೆ. ಇದು ಸಿದ್ಧಾಂತ.

ಹೀಗೆ ಇಲ್ಲಿ 'ಯುಕ್ತಯಃ ಪೂರ್ವಪಕ್ಷಸ್ಥಾಃ' ಎಂಬಲ್ಲಿಯವರೆಗೆ (ಶ್ಲೋಕ 57) 42 ಪೂರ್ವಪಕ್ಷಯುಕ್ತಿಗಳನ್ನೂ ಅಲ್ಲಿಂದ ಮುಂದೆ 42 ಸಿದ್ಧಾಂತ ಯುಕ್ತಿಗಳನ್ನೂ ಹೇಳಲಾಗಿದೆ.

## ಸರ್ವವೇದಾಂತಪ್ರತ್ಯಯಾಧಿಕರಣಮ್

### 'ಓಂ ಸರ್ವವೇದಾಂತಪ್ರತ್ಯಯಂ ಚೋದನಾದ್ಯವಿಶೇಷಾತ್ ಓಂ'

**ಯಥಾಶಕ್ತ್ಯಖಿಲಾನ್ ವೇದಾನ್ ವಿಜ್ಞಾಯೋಪಾಸನಂ ಭವೇತ್ ।**
**ತತ್ರಾಖಿಲಸ್ಯ ವಿಜ್ಞಪ್ತಿಃ ಸಮ್ಯಗ್ ಬ್ರಹ್ಮಣ ಏವ ಹಿ ॥ ೬೩ ॥**

**ತದನ್ಯೇಷಾಂ ಯಥಾಯೋಗ್ಯಮಖಿಲಜ್ಞಪ್ತಿರಿಷ್ಯತೇ ।**
**ತಾವತೋಪಾಸನೇ ಯೋಗ್ಯೋ ಭವೇದೇವಾಖಿಲಃ ಪುಮಾನ್ ॥ ೬೪ ॥**

ಅಖಿಲಾನ್ ವೇದಾನ್=ಎಲ್ಲಾ ವೇದಗಳನ್ನೂ ಯಥಾಶಕ್ತಿ=ಶಕ್ತ್ಯನುಸಾರವಾಗಿ ವಿಜ್ಞಾಯ=ತಿಳಿದು ಉಪಾಸನಂ(ಕುರ್ವಾಣಃ) ಭವೇತ್= ಉಪಾಸನೆಯನ್ನು ಮಾಡಬೇಕು. ತತ್ರ=ಉಪಾಸಕರಲ್ಲಿ ಬ್ರಹ್ಮಣಃ ಏವ= ಪರಬ್ರಹ್ಮನಿಗೆ ಮಾತ್ರ ಅಖಿಲಸ್ಯ=ಎಲ್ಲಾ ವೇದದ ಸಮ್ಯಗ್‌ವಿಜ್ಞಪ್ತಿಃ= ಸರಿಯಾದ ಜ್ಞಾನವು. ತದನ್ಯೇಷಾಂ=ಉಳಿದವರಿಗೆ ಯಥಾಯೋಗ್ಯಂ= ಯಥಾಶಕ್ತಿಯಾಗಿ ಅಖಿಲಜ್ಞಪ್ತಿಃ=ಸಕಲವೇದಾರ್ಥಜ್ಞಾನವು ಇಷ್ಯತೇ= ಅಭಿಲಷಿಸಲ್ಪಟ್ಟಿದೆ.

ತಾವತಾ=ಯಥಾಶಕ್ತಿಜ್ಞಾನಮಾತ್ರದಿಂದಲೇ ಅಖಿಲಃ ಪುಮಾನ್= ಎಲ್ಲಾ ಅಧಿಕಾರಿಗಳೂ ಉಪಾಸನೇ ಯೋಗ್ಯೋ ಭವೇತ್=ಧ್ಯಾನರೂಪವಾದ ಉಪಾಸನೆಗೆ ಯೋಗ್ಯರಾಗುತ್ತಾರೆ.

ಭಾವಾರ್ಥ— ಭಗವಂತನ ಅಪರೋಕ್ಷಜ್ಞಾನಕ್ಕೆ ಧ್ಯಾನವು ಸಾಧನ. ಧ್ಯಾನಮಾಡುವುದಕ್ಕಾಗಿಯೇ ವೇದಗಳು ಭಗವಂತನಲ್ಲಿ ಗುಣಗಳನ್ನು

ಹೇಳುತ್ತವೆ. ಅಪಾರವೇದಾಧ್ಯಯನ ಮಾಡಿ ಗುಣಗಳನ್ನೆಲ್ಲ ತಿಳಿದು ಧ್ಯಾನ ಮಾಡುವ ಅಧಿಕಾರ ಚತುರ್ಮುಖಬ್ರಹ್ಮದೇವರಿಗೆ ಮಾತ್ರ. ಉಳಿದವರೂ ತಮ್ಮ ತಮ್ಮ ಯೋಗ್ಯತಾನುಸಾರವಾಗಿ ವೇದಾಧ್ಯಯನ ಮಾಡಿ ಜ್ಞಾನಗಳಿಸಿ ಧ್ಯಾನಮಾಡಬೇಕು. ಸ್ವಶಾಖಾಧ್ಯಯನವನ್ನು ಮಾತ್ರ ಮಾಡಿದರೆ ಸಾಲದು.

ವಸ್ತುತಃ, ಸೂತ್ರದಲ್ಲಿ 'ಸರ್ವವೇದಾಂತಪ್ರತ್ಯಯಂ' ಎಂದು ಸರ್ವಪದವನ್ನು ಹೇಳುವ ಮೂಲಕ ಸಮಗ್ರವೇದಾಧ್ಯಯನವೇ ಎಲ್ಲರಿಗೂ ವಿಹಿತ. ಆದರೂ ಅದು ಎಲ್ಲರಿಗೂ ಸಾಧ್ಯವಿಲ್ಲ. ಆದ್ದರಿಂದ ಸರ್ವಶಬ್ದಕ್ಕೆ ಅರ್ಥಸಂಕೋಚ ಮಾಡಬೇಕು.

**'ಮಹತ್ತ್ವಸ್ಯ ಪರಂ ಪಾರಂ ವಿದಿತ್ವೈವ ಜನಾರ್ದನಃ ।**
**ಸ್ತೋಷ್ಯತಾಮೇತಿ (ವ) ತುಷ್ಟತ್ವಮಿತಿ ನಾಸ್ತ್ಯೇವ ನಾರದ ॥ ೬೫ ॥**

**ಕಿಂತು ನಿಶ್ಚಲಯಾ ಭಕ್ತ್ಯಾ ಹ್ಯಾತ್ಮಜ್ಞಾನಾನುರೂಪತಃ ।**
**ಯಃ ಸ್ತೋಷ್ಯತಿ ಸದಾ ಭಕ್ತಸ್ತುಷ್ಟಸ್ತಸ್ಯ ಸದಾ ಹರಿಃ' ॥ ೬೬ ॥**

**ಇತ್ಯಾದಿ ವಾಕ್ಯಸಂದರ್ಭಾದ್ ಯಥಾಯೋಗ್ಯಾಖಿಲಜ್ಞತಾ ।**
**ಆತ್ಮಜ್ಞಾನಾನುರೂಪತ್ವಂ ಯಥಾಶಕ್ತಿ ವಿಚಾರಣಾತ್ ॥ ೬೭ ॥**

ಯಥಾಶಕ್ತಿ ವೇದಾರ್ಥಜ್ಞಾನವೇ ಉಪಾಸನಾಕ್ಕೆ ಉಪಯೋಗಿ, ಎಂಬುದಕ್ಕೆ ಪುರಾಣವಾಕ್ಯವನ್ನು ಉದಾಹರಿಸಲಾಗಿದೆ.

''ಮಹತ್ತ್ವಸ್ಯ=ಉತ್ತಮತ್ವದ ಪರಂ ಪಾರಂ=ಪೂರ್ಣ ಅವಧಿಯನ್ನು ವಿದಿತ್ವೈವ=ತಿಳಿದೇ ಜನಾರ್ದನಃ=ಪರಮಾತ್ಮನು ಸ್ತೋಷ್ಯತಾಂ=ಸ್ತುತ್ಯರ್ಹತೆಯನ್ನು (ಹಾಗೂ ಧ್ಯಾನಾರ್ಹತೆಯನ್ನೂ) ಏತಿ=ಹೊಂದುತ್ತಾನೆ, ತುಷ್ಟತ್ವಮ್ ಏಷ್ಯತಿ=ತುಷ್ಟನೂ ಆಗುತ್ತಾನೆ ಇತಿ ನಾಸ್ತ್ಯೇವ=ಹೀಗೇನೂ ನಿಯಮವಿಲ್ಲ. ನಾರದ=ನಾರದಮಹರ್ಷಿಯೆ, ಕಿಂತು=ಹೊರತಾಗಿ ನಿಶ್ಚಲಯಾ ಭಕ್ತ್ಯಾ=ನಿಶ್ಚಲವಾದ ಭಕ್ತಿಯಿಂದ ಆತ್ಮಜ್ಞಾನಾನುರೂಪತಃ=ತನಗೆ ಯೋಗ್ಯವಾದ ಜ್ಞಾನಾನುಗುಣವಾಗಿ ಯಃ=ಯಾರು ಸದಾಭಕ್ತಃ=ನಿತ್ಯಭಕ್ತನಾಗಿ ಸ್ತೋಷ್ಯತಿ=ಸ್ತುತಿಸುವನೋ (ಧ್ಯಾನಿಸುವನೋ) ತಸ್ಯ=ಅಂತಹವನಿಗೂ ಹರಿಃ=ಭಗವಂತನು ಸದಾ ತುಷ್ಟಃ=ಸರ್ವದಾ ಪ್ರಸನ್ನನಾಗುವನು''.

ಇತ್ಯಾದಿವಾಕ್ಯಸಂದರ್ಭಾತ್=ಇಂತಹ ಪ್ರಮಾಣಗಳಿಂದಾಗಿ ಯಥಾಯೋಗ್ಯಾಖಿಲಜ್ಞತಾ=ಯೋಗ್ಯತೆಗೆ ಅನುಗುಣವಾದ ಅಖಿಲ ವೇದಾರ್ಥಜ್ಞಾನವು ಸೂತ್ರಕಾರರಿಗೆ ವಿವಕ್ಷಿತವಾಗಿದೆ. ಉಪಾಸನೆಗೆ, ಆತ್ಮಜ್ಞಾನಾನುರೂಪತ್ವಂ=ತನಗೆ ಯೋಗ್ಯವಾದ ಜ್ಞಾನಾನುಗುಣತ್ವವೆಂದರೆ ಯಥಾಶಕ್ತಿ ವಿಚಾರಣಾತ್(ಭಾವಿತ್ವಂ)=ತನಗೆ ಶಕ್ತಿ ಇದ್ದಷ್ಟು ವೇದವಿಚಾರ ಮಾಡಿ ಬಂದಿರುವ ಜ್ಞಾನಾನುರೂಪತ್ವ.

**ಭಾವಾರ್ಥ**—'ಪರಮಾತ್ಮ ಉತ್ಕೃಷ್ಟತೆಯ ಪರಾಕಾಷ್ಠೆ. ಅದನ್ನು ತಿಳಿಯಬೇಕಾದರೆ ಅಖಿಲವೇದಾಧ್ಯಯನವೇ ಬೇಕು. ಅದನ್ನು ತಿಳಿದು ಧ್ಯಾನಿಸಬೇಕು. ಆದರೂ, ಎಲ್ಲರೂ ಅವನ ಎಲ್ಲ ಗುಣಗಳನ್ನೂ ತಿಳಿದಿರುತ್ತಾರೆ, ಎಂಬ ನಿಯಮವಿಲ್ಲ. ಅವರವರಿಗೆ ಯೋಗ್ಯವಾದಷ್ಟೇ ವೇದಾಧ್ಯಯನವನ್ನು ಮಾಡಿ, ಭಗವಂತನ ಗುಣಗಳನ್ನು ತಿಳಿದು ಮಾಡುವ ನಿಶ್ಚಲವಾದ ಭಕ್ತಿಗೂ ಅವನು ಪ್ರಸನ್ನನಾಗುತ್ತಾನೆ.'' ಇಂತಹ ಅನೇಕ ಪ್ರಮಾಣಗಳು ಇರುವುದರಿಂದ ಯಥಾಯೋಗ್ಯಪರಿಜ್ಞಾನವೇ ಮೋಕ್ಷಕ್ಕೆ ಸಾಧನ. ಆದ್ದರಿಂದ ಸೂತ್ರದ ಸರ್ವಶಬ್ದಕ್ಕೆ ಅರ್ಥ ಸಂಕೋಚಮಾಡಬೇಕು.

ಪುರಾಣವಾಕ್ಯದಲ್ಲಿ ''ಆತ್ಮಜ್ಞಾನಾನುರೂಪತಃ'' ಎಂದರೆ ಉಪಾಸಕನಿಗೆ (ಆತ್ಮ) ಯೋಗ್ಯವಾದ ಜ್ಞಾನಕ್ಕೆ ಅನುಗುಣವಾಗಿ ಉಪಾಸನೆ ಮಾಡಿ ಎಂದರ್ಥ.

### 'ಓಂ ಸ್ವಾಧ್ಯಾಯಸ್ಯ ತಥಾತ್ವೇನ ಹಿ ಸಮಾಚಾರೇಽಧಿಕಾರಾಚ್ಚ ಓಂ'

**ವೇದಃ ಕೃತ್ಸ್ನೋಽಧಿಗಂತವ್ಯಃ ಸ್ವಾಧ್ಯಾಯಾಧ್ಯಯನಂ ಭವೇತ್ ।**
**ಇತ್ಯಾದಿವಾಕ್ಯವೈಯರ್ಥ್ಯಮನ್ಯಥಾ ನ ನಿವಾರ್ಯತೇ ॥ ೬೮ ॥**

'ವೇದಃ ಕೃತ್ಸ್ನೋಽಧಿಗಂತವ್ಯಃ' 'ಸ್ವಾಧ್ಯಾಯೋಽಧ್ಯೇತವ್ಯಃ' (ಇದು 'ಸ್ವಾಧ್ಯಾಯಧ್ಯಯನಂ ಭವೇತ್' ಎಂಬ ಅನುವ್ಯಾಖ್ಯಾನದಿಂದ ಸೂಚಿತ ವಾದ ವೇದವಾಕ್ಯ.) ಅನ್ಯಥಾ=ಸ್ವಶಾಖಾಮಾತ್ರಾಧ್ಯಯನವನ್ನು ಅಂಗೀಕರಿಸಿ ದರೆ ಇತ್ಯಾದಿವಾಕ್ಯವೈಯರ್ಥ್ಯಂ=ಮೇಲೆ ಹೇಳಿರುವ ವಾಕ್ಯಗಳಿಗೆ ವೈಯ್ಯರ್ಥ್ಯವು ನ ನಿವಾರ್ಯತೇ=ನಿವಾರಿಸಲ್ಪಡುವುದಿಲ್ಲ.

ಭಾವಾರ್ಥ— ಎಲ್ಲರೂ ಎಲ್ಲಾ ಶಾಖೆಯ ಅಧ್ಯಯನವನ್ನು ಮಾಡಬೇಕೆನ್ನುವುದಾದಲ್ಲಿ ಶಾಖಾಭೇದವು ಅನಾವಶ್ಯಕ. ಆದ್ದರಿಂದ ಸ್ವ-ಸ್ವಶಾಖಾಧ್ಯಯನ ಮಾತ್ರ ಸಾಕು. ಈ ಆಕ್ಷೇಪಕ್ಕೆ ಸೂತ್ರಕಾರರು 'ಚೋದನಾದ್ಯವಿಶೇಷಾತ್', ಎಂಬ ಒಂದು ಸಮಾಧಾನವನ್ನು ಹೇಳಿದ್ದಾರೆ. ಇನ್ನೊಂದು ಸಮಾಧಾನ— 'ಸ್ವಾಧ್ಯಾಯಸ್ಯ ತಥಾತ್ವೇನ' ಎಂಬ ಈ ಸೂತ್ರದಲ್ಲಿದೆ. 'ಸ್ವಸ್ವಶಾಖಾಮಾತ್ರಾಧ್ಯಯನವು 'ವೇದಃ ಕೃತ್ಸ್ನೋಽಧಿಗಂತವ್ಯಃ' ಇತ್ಯಾದಿವಿಧಿಗಳಿಗೆ ವಿರುದ್ಧವಾಗಿದೆ, ಎಂದು. ಇಂತಹ ವಿಧಿಗಳು ಸಮಗ್ರವೇದಾಧ್ಯಯನವನ್ನು ಹೇಳುತ್ತವೆ. ಸ್ವಸ್ವಶಾಖಾಧ್ಯಯನ ಮಾತ್ರ ಸಾಕು ಎನ್ನುವುದಾದಲ್ಲಿ ಈ ವಿಧಿ ಅನರ್ಥಕವಾಗುತ್ತದೆ.

**ಅದ್ಯಾಪಿ ತೇನ ದೇವಾದ್ಯಾಃ ಶೃಣ್ವತೇ ಮನ್ವತೇ ಸದಾ ।**
**ಧ್ಯಾಯಂತಿ ಚ ಯಥಾಯೋಗಂ ತಥಾಪ್ಯಾವಸ್ತುನಿರ್ಣಯಾತ್ ।**
**ಶ್ರವಣಂ ಮನನಂ ಚೈವ ಕರ್ತವ್ಯಂ ಸರ್ವಥೈವ ಹಿ ॥ ೬೯ ॥**

ತೇನ=ಸರ್ವವೇದಾರ್ಥಜ್ಞಾನವು ಆವಶ್ಯಕವಾದುದರಿಂದಲೇ ದೇವಾದ್ಯಾಃ=ದೇವತೆಗಳು, ಋಷಿಗಳು ಅದ್ಯಾಪಿ=ಇಂದೂ ಯಥಾ ಯೋಗ್ಯಂ=ಯಥಾಶಕ್ತಿಯಾಗಿ ಶ್ರುಣ್ವತೇ=ಶ್ರವಣಮಾಡುತ್ತಾರೆ, ಮನ್ವತೇ= ಮನನ ಮಾಡುತ್ತಾರೆ. ಸದಾ ಧ್ಯಾಯಂತಿ ಚ=ಸರ್ವದಾ ಧ್ಯಾನ ಮಾಡುತ್ತಿರುತ್ತಾರೆ. ತಥಾಪಿ=ಸೂತ್ರಕಾರರು ಜಾತಾಪರೋಕ್ಷಿಗಳಾದ ದೇವತೆಗಳ ಆಚಾರವನ್ನು ಉಲ್ಲೇಖಿಸಿದ್ದರೂ ಉಳಿದವರಿಂದ ಆವಸ್ತುನಿರ್ಣಯಾತ್= ಬ್ರಹ್ಮತತ್ವದ ನಿರ್ಣಯವಾಗುವವರೆಗೂ ಸರ್ವದಾ=ಯಾವಾಗಲೂ ಶ್ರವಣಂ=ಶಾಸ್ತ್ರಶ್ರವಣವೂ ಮನನಂ ಚ=ಮನನವೂ ಕರ್ತವ್ಯಂ= ಮಾಡಲ್ಪಡಬೇಕು.

ಭಾವಾರ್ಥ— ಈ ಅನುವ್ಯಾಖ್ಯಾನದಲ್ಲಿ 'ಸಮಾಚಾರೇ ಅಧಿಕಾರಾಚ್ಚ' ಎಂಬ ಸೂತ್ರಶೇಷವನ್ನು ವಿವರಿಸುತ್ತಾರೆ. ದೇವತೆಗಳಿಗೆ ಬ್ರಹ್ಮಾಪರೋಕ್ಷವಾಗಿದೆ. ಆದರೂ, ಇಂದಿಗೂ ಶಾಸ್ತ್ರಶ್ರವಣ, ಶಾಸ್ತ್ರದಿಂದ ತಿಳಿದ ವಿಷಯಗಳ ಮನನ, ನಿರಂತರ ಧ್ಯಾನ ಇವುಗಳನ್ನು ಅವರು ಮಾಡುತ್ತಿರುತ್ತಾರೆ.

ಸ್ವಶಾಖಾಧ್ಯಯನ ಮಾತ್ರ ಸಾಕಾಗಿದ್ದಲ್ಲಿ ಅದನ್ನು ಅಲ್ಪಕಾಲದಲ್ಲಿ ಮಾಡಿಮುಗಿಸಬಹುದಾದ್ದರಿಂದ ಸತತಾಧ್ಯಯನದ ಆಗತ್ಯವೇ ಇರಬಾರದಾಗಿತ್ತು. ಆದ್ದರಿಂದ ಯಥಾಶಕ್ತಿ ಸರ್ವವೇದಾಧ್ಯಯನವು ಕರ್ತವ್ಯ.

ಅಪರೋಕ್ಷವಾದ ಮೇಲೂ ದೇವತೆಗಳು ಅಧ್ಯಯನ ಮಾಡುತ್ತಾರೆ ಎಂದರೆ ಅಧ್ಯಯನಕ್ಕೆ ಕೊನೆಯೇ ಇಲ್ಲವೆ? ಇದೆ. ಇತರ ಅಧಿಕಾರಿಗಳು ಬ್ರಹ್ಮತತ್ತ್ವದ ನಿರ್ಧಾರವಾಗುವವರೆಗೆ ಅಧ್ಯಯನ, ಮನನಗಳನ್ನು ಮಾಡುತ್ತಿರಬೇಕು.

**ಮತಿಶ್ರುತಿಧ್ಯಾನಕಾಲವಿಶೇಷಂ ಗುರುರುತ್ತಮಃ ।**
**ವೇತ್ತಿ ತಸ್ಯೋಕ್ತ(ಕ್ತಿ) ಮಾರ್ಗೇಣ ಕುರ್ವತಃ ಸ್ಯಾದ್ಧಿ ದರ್ಶನಮ್ ॥೭೦॥**

ಮತಿ-ಶ್ರುತಿ-ಧ್ಯಾನಕಾಲವಿಶೇಷಂ=ಮನನ, ಶ್ರವಣ, ಧ್ಯಾನ ಇವುಗಳನ್ನು ಎಷ್ಟುಕಾಲದವರೆಗೆ ಮಾಡಬೇಕೆಂಬ ಕಾಲವಿಶೇಷವನ್ನು ಉತ್ತಮಃ= ಶಿಷ್ಯನ ಯೋಗ್ಯತೆಯನ್ನು ತಿಳಿದ ಗುರುಃ=ಗುರುವು ವೇತ್ತಿ=ತಿಳಿದಿರುತ್ತಾನೆ. ಉಕ್ತ ಮಾರ್ಗೇಣ=ಗುರು ಹೇಳಿದ ಕ್ರಮದಿಂದ ಕುರ್ವತಃ=ಶ್ರವಣಾದಿಗಳನ್ನು ಮಾಡುವ ತಸ್ಯ=ಆ ಸಾಧಕನಿಗೆ ದರ್ಶನಂ=ಬ್ರಹ್ಮಸಾಕ್ಷಾತ್ಕಾರವು ಸ್ಯಾತ್= ಆಗುವುದು.

**ಭಾವಾರ್ಥ**— ಶ್ರವಣ-ಮನನಗಳು ಬ್ರಹ್ಮಸಾಕ್ಷಾತ್ಕಾರಕ್ಕೆ ಅಂಗಗಳು. ಆದ್ದರಿಂದ ಹೇಗೇಗೋ ಮಾಡಿದ ಶ್ರವಣಾದಿಗಳು ಅಪರೋಕ್ಷಜ್ಞಾನಕ್ಕೆ ಕಾರಣಗಳಾಗುವುದಿಲ್ಲ. ಶಿಷ್ಯರ ಸ್ವರೂಪಯೋಗ್ಯತೆಯನ್ನು ತಿಳಿದಿರುವ ಗುರುಗಳಿಂದ ಶ್ರವಣಾದಿಗಳು ನಡೆಯಬೇಕು. ಅಂತಹ ಗುರುವು ಶಿಷ್ಯನು ಎಷ್ಟುಕಾಲ ಶ್ರವಣಾದಿಗಳನ್ನು ಮಾಡಬೇಕೆಂದು ಹೇಳುವನೋ ಅಷ್ಟುಕಾಲ ಶ್ರವಣಾದಿಸಾಧನಗಳನ್ನು ನಡೆಸಬೇಕು. ಅದರ ನಂತರ ನೂರಾರು ಕಾರಣಗಳು ಬಂದರೂ ಸಂದೇಹವು ಬರುವುದಿಲ್ಲ.

**ಶ್ರವಣಂ ದೃಷ್ಟತತ್ವಸ್ಯ ಮನನಂ ಧ್ಯಾನಮೇವ ಚ ।**
**ವಿಶೇಷಾನಂದಸಂಪ್ರಾಪ್ತ್ಯಾ ಅನ್ಯಸ್ಯೈತಾನಿ ದೃಷ್ಟಯೇ ॥ ೭೧ ॥**

ದೃಷ್ಟತತ್ವಸ್ಯಚ=ಬ್ರಹ್ಮದರ್ಶನ ಮಾಡಿದ ದೇವತೆಗಳಿಗೂ ಶ್ರವಣಂ= ಶಾಸ್ತ್ರಶ್ರವಣವೂ ಮನನಂ=ತತ್ತ್ವವಿಮರ್ಶೆಯೂ ಧ್ಯಾನಮೇವ ಚ= ಧ್ಯಾನವೂ ವಿಶೇಷಾನಂದಸಂಪ್ರಾಪ್ತ್ಯೈ=ಮೋಕ್ಷದಲ್ಲಿ ಆನಂದವಿಶೇಷದ ಪ್ರಾಪ್ತಿಗಾಗಿ ಯುಜ್ಯತೇ ಏವ=ಯುಕ್ತವೇ ಆಗುತ್ತದೆ. ಅನ್ಯಸ್ಯ=ಬ್ರಹ್ಮದರ್ಶನ ವಾಗದವನಿಗೆ ಏತಾನಿ=ಈ ಶ್ರವಣಾದಿಗಳು ದೃಷ್ಟಯೇ=ಬ್ರಹ್ಮಾಪರೋಕ್ಷಕ್ಕಾಗಿ ಇರುತ್ತವೆ.

**ಭಾವಾರ್ಥ—** ಜ್ಞಾನಕ್ಕಿಂತ ಮೊದಲು ಮಾಡಿದ ಕರ್ಮಗಳು ಜ್ಞಾನೋತ್ಪತ್ತಿಗೆ ಕಾರಣಗಳಾಗುತ್ತವೆ. ಅಪರೋಕ್ಷಜ್ಞಾನವಾದ ಮೇಲೆ ಮಾಡಿದ ಕರ್ಮಗಳು ಮೋಕ್ಷದಲ್ಲಿ ಆನಂದವೃದ್ಧಿಗೆ ಕಾರಣವಾಗುತ್ತವೆ. ಅದರಂತೆಯೇ, ಅಪರೋಕ್ಷಜ್ಞಾನ ಬಂದ ಮೇಲಿನ ಶ್ರವಣಾದಿಗಳು ಮೋಕ್ಷದಲ್ಲಿ ಆನಂದ ವೃದ್ಧಿಗೆ ಕಾರಣವಾಗುತ್ತವೆ, ಮೊದಲು ಮಾಡಿದ ಶ್ರವಣಾದಿಗಳು ಅಪರೋಕ್ಷಜ್ಞಾನಕ್ಕೆ ಕಾರಣವಾಗುತ್ತವೆ.

ವಸ್ತುತಃ ಪ್ರಕೃತವಾದುದು ಜ್ಞಾನಕ್ಕೆ ಹೇತುವಾದ ಶ್ರವಣಾದಿಗಳು. ಅದನ್ನು ಮಾಡಬೇಕು ಎಂದು ತಿಳಿಸಲು ದೇವತೆಗಳ ಆಚರಣೆಯನ್ನು 'ಸ್ವಾಧ್ಯಾಯಸ್ಯ ತಥಾತ್ವೇನ ಹಿ ಸಮಾಚಾರೇಽಧಿಕಾರಾಚ್ಚ' ಎಂದು ಸೂತ್ರದಲ್ಲಿ ಹೇಳುವುದು ಅಸಂಗತ. ದೇವತೆಗಳ ಆಚರಣೆ ಆನಂದವೃದ್ಧಿಗೆ ಕಾರಣವಾದ ಶ್ರವಣಾದಿಗಳು. ಆದರೂ, ಶ್ರವಣಾದಿಗಳು ಅವಶ್ಯಕರ್ತವ್ಯ ಎನ್ನುವ ತಾತ್ಪರ್ಯದಿಂದ ದೇವತೆಗಳ 'ಸಮಾಚಾರ'ವನ್ನು ಆಧಾರವನ್ನಾಗಿ ಕೊಡಲಾಗಿದೆ.

### ಗುರುಗಳ ಅನ್ವೇಷಣೆ

**ಯದಿ ತಾದೃಗ್ ಗುರುರ್ನಾಸ್ತಿ ನಿರ್ಣೀತಶ್ರವಣಾದಿಕಮ್ ।**
**ಸತ್ಸಿದ್ಧಾಂತಾನುಸಾರೇಣ ನಿರ್ಣಯಜ್ಞಾತ್ ಸಮಾಚರೇತ್ ॥ ೭೨ ॥**

ಯದಿ=ಒಂದುವೇಳೆ ತಾದೃಕ್ ಗುರುಃ=ಶಿಷ್ಯರ ಯೋಗ್ಯತೆಯನ್ನು ಬಲ್ಲ ಗುರುಗಳು ನಾಸ್ತಿ=ಇಲ್ಲವೆಂದಾದಲ್ಲಿ ಸತ್‌ಸಿದ್ಧಾಂತಾನುಸಾರೇಣ=ಸರ್ವಜ್ಞ ರಾದ ಗುರುಗಳ ಸಿದ್ಧಾಂತಕ್ಕೆ ಅನುಗುಣವಾದ ನಿರ್ಣಯಜ್ಞಾತ್=ನಿರ್ಣಯ

ಶಾಸ್ತ್ರವನ್ನು ತಿಳಿದಿರುವ ಗುರುಗಳಿಂದ ನಿರ್ಣೀತ–ಶ್ರವಣಾದಿಕಂ= ನಿರ್ಣಯ ಶಾಸ್ತ್ರವೆನಿಸಿರುವ ಬ್ರಹ್ಮಸೂತ್ರಗಳ ಶ್ರವಣಾದಿಗಳನ್ನು ಸಮಾಚರೇತ್= ಮಾಡಬೇಕು.

**ಭಾವಾರ್ಥ**— ಶಿಷ್ಯರ ಸ್ವರೂಪಯೋಗ್ಯತೆಯನ್ನು ಅರಿತಿರುವ ಗುರುಗಳು ಮೊದಲೇ ಸಿಗುವುದಿಲ್ಲ. ಆದರೂ ಅಂತಹ ಗುರುಗಳು ಸಿಗುವುದಕ್ಕಾಗಿ ಯೋಗ್ಯತೆಯನ್ನು ಸಂಪಾದಿಸಲು ಶ್ರವಣಾದಿಗಳನ್ನು ಮಾಡುತ್ತಿರಬೇಕು.

ನಿರ್ಣೇಯಶಾಸ್ತ್ರ ನಿರ್ಣೀತಶಾಸ್ತ್ರ ಎಂದು ಎರಡುವಿಧಶಾಸ್ತ್ರಗಳಿವೆ. ವೇದಾದಿಗಳು ನಿರ್ಣೇಯಶಾಸ್ತ್ರಗಳು. ಸಾಮಾನ್ಯರಿಗೆ ಈ ನಿರ್ಣೇಯ ವೇದಾದಿಶಾಸ್ತ್ರಗಳ ಅರ್ಥವನ್ನು ತಿಳಿಯುವ ಸಾಮರ್ಥ್ಯವಿಲ್ಲ. ಅವುಗಳ ಅರ್ಥ ಅತಿ ಗಹನವಾದುದು. ಬ್ರಹ್ಮಸೂತ್ರಗಳು ನಿರ್ಣೀತಶಾಸ್ತ್ರಗಳು. ಅವುಗಳ ಶ್ರವಣಾದಿಗಳನ್ನು ಗುರುಗಳಿಂದ ಮಾಡಬೇಕು. ಅವುಗಳಿಗೂ ವಿರುದ್ಧವಾದ ಅನೇಕ ಅರ್ಥಗಳಿದ್ದರೂ ಸರ್ವಜ್ಞರಾದವರು ರಚಿಸಿದ ಭಾಷ್ಯದಲ್ಲಿ ಹೇಳಿರುವ ಅರ್ಥವು ಪ್ರಾಮಾಣಿಕವಾದುದು. ಅದನ್ನು ತಿಳಿದ ಸಾಮಾನ್ಯ ಗುರುಗಳಿಂದ ಬ್ರಹ್ಮಸೂತ್ರದ ಶ್ರವಣಾದಿಗಳನ್ನು ಮಾಡಬೇಕು. ಇದು ಅಮುಖ್ಯಶ್ರವಣ. ಇದನ್ನು ಮಾಡಿ ಯೋಗ್ಯತೆಯನ್ನು ಸಂಪಾದಿಸಿದರೆ ಮುಖ್ಯಗುರುಗಳು ಲಭ್ಯವಾಗುತ್ತಾರೆ.

**ಶ್ರವಣಾದಿ ವಿನಾ ನೈವ ಕ್ಷಣಂ ತಿಷ್ಠೇದಪಿ ಕ್ವಚಿತ್ ।**
**ಅತ್ಯಶಕ್ಯೇ ತು ನಿದ್ರಾದೌ ಪುನರೇವ ಸಮಾಚರೇ (ರಭೇ)ತ್ ॥ ೭೩ ॥**

ಕ್ವಚಿತ್=ಎಂದೂ ಶ್ರವಣಾದಿ ವಿನಾ=ಶ್ರವಣಾದಿಗಳನ್ನು ಮಾಡದೇ ಕ್ಷಣಮಪಿ=ಒಂದು ಕ್ಷಣಕಾಲವೂ ನ ತಿಷ್ಠೇತ್=ಇರಬಾರದು. ಅತ್ಯಶಕ್ಯೇ= ತಡೆಯಲು ಸಾಧ್ಯವೇ ಆಗದ ನಿದ್ರಾದೌ ಪ್ರಾಪ್ತೇ=ನಿದ್ದೆ ಮೊದಲಾದ ಪ್ರತಿಬಂಧಕಗಳು ಬಂದಲ್ಲಿ ಪುನರೇವ=ನಿದ್ದೆಮಾಡಿ ಮತ್ತೆ ಶ್ರವಣಾದಿಗಳನ್ನು ಸಮಾಚರೇತ್=ಮಾಡಬೇಕು.

**ಭಾವಾರ್ಥ**—ಯೋಗ್ಯರಾದ ಗುರುಗಳು ಸಿಗಲಿಲ್ಲ, ಎನ್ನುವ ಕಾರಣಕ್ಕಾಗಿ ಶ್ರವಣಾದಿಗಳನ್ನೇ ಬಿಟ್ಟು ಇರಬಾರದು. ''ಸ್ವಾಧ್ಯಾಯಪ್ರವಚನೇ

ಏವೇತಿ ನಾಕೋ ಮೌದ್ಗಲ್ಯಃ'' ''ಸ್ವಾಧ್ಯಾಯ ಪ್ರವಚನಾಭ್ಯಾಂ ನ ಪ್ರಮದಿತವ್ಯಮ್'' ಎಂದು ಉಪನಿಷತ್ತು ಶ್ರವಣಾದಿಗಳೇ ತಪಸ್ಸು, ಅವನ್ನು ಬಿಟ್ಟಿರಬಾರದು, ಎನ್ನುತ್ತದೆ. ಆದ್ದರಿಂದ ಸರ್ವಜ್ಞಪ್ರಣೀತವಾದ ವ್ಯಾಖ್ಯಾನಕ್ಕೆ ಅನುಸಾರವಾಗಿ ಬ್ರಹ್ಮಸೂತ್ರಗಳ ಅರ್ಥವನ್ನು ತಿಳಿದಿರುವ ಗುರುಗಳಿಂದ ಶ್ರವಣಾದಿಗಳನ್ನು ಸತತವಾಗಿ ಮಾಡುತ್ತಿರಬೇಕು. ಅಸಾಧ್ಯವಾದ ನಿದ್ರಾದಿ ತೊಂದರೆಗಳು ಬಂದಾಗ ಮಾತ್ರ ಶ್ರವಣಾದಿಗಳನ್ನು ಬಿಟ್ಟಿರಬಹುದು. ಆದ್ದರಿಂದ ಶ್ರವಣಾದಿಗಳು ಅವಶ್ಯಕರ್ತವ್ಯ.

**ಅಭಾವೇ ನಿರ್ಣಯಜ್ಞಸ್ಯ ಸಚ್ಛಾಸ್ತ್ರಾಣ್ಯೇವ ಸರ್ವದಾ ।**
**ಶೃಣುಯಾದ್ ಯದಿ ಸಜ್ಜ್ಞಾನಪ್ರಾಚುರ್ಯಮುಪಲಭ್ಯತೇ ॥ ೭೪ ॥**

ಯದಿ=ಒಂದುವೇಳೆ ನಿರ್ಣಯಜ್ಞಸ್ಯ=ಸರ್ವಜ್ಞಕಲ್ಪರಾದ ನಿರ್ಣಯಜ್ಞ ಗುರುಗಳ ಅಭಾವೇ=ದೌರ್ಲಭ್ಯವಿದ್ದರೆ ಸಜ್ಞಾನ ಪ್ರಾಚುರ್ಯಂ= ನಮಗಿಂತಲೂ ಹೆಚ್ಚು ಜ್ಞಾನವು ಉಪಲಭ್ಯತೇ=ಯಾರಲ್ಲಿ ಕಂಡುಬರುವುದೋ ಅವರಿಂದ ಸರ್ವದಾ=ಯಾವಾಗಲೂ ಸಚ್ಛಾಸ್ತ್ರಾಣ್ಯೇವ= ಸಚ್ಛಾಸ್ತ್ರಗಳನ್ನೇ ಶೃಣುಯಾತ್=ಕೇಳಬೇಕು.

ಭಾವಾರ್ಥ— ಸರ್ವಜ್ಞಗುರುಗಳಿಂದ ಶ್ರವಣಕ್ಕೆ ಅವಕಾಶ ಸಿಗದಿದ್ದರೆ ಸರ್ವಜ್ಞ ಕಲ್ಪರು. ಅವರೂ ಸಿಗದಿದ್ದರೆ ನಮಗಿಂತ ಹೆಚ್ಚು ತಿಳಿದವರಿಂದ ಶ್ರವಣ ಮಾಡುತ್ತಿರಬೇಕು. ಆದರೆ, ಎಲ್ಲರಿಂದಲೂ ಸಚ್ಛಾಸ್ತ್ರವನ್ನೇ ಶ್ರವಣ ಮಾಡ ಬೇಕು.

**ಮಹದ್ಭ್ಯೋ ವಿಷ್ಣುಭಕ್ತೇಭ್ಯೋ ಯಥಾಶಕ್ತಿ ಚ ಸಂಶಯಾನ್ ।**
**ಛಿಂದ್ಯಾತ್ ಸ್ವತೋಽಧಿಕಾಭಾವೇ ಸ್ವಯಮೇವ ಸಮಭ್ಯಸೇತ್ ।**
**ಬ್ರೂಯಾದಪಿ ಚ ಶಿಷ್ಯೇಭ್ಯಃ ಸತ್ಸಿದ್ಧಾಂತಮಹಾಪಯನ್ ॥ ೭೫ ॥**

ತನಗಿಂತ ಜ್ಞಾನದಲ್ಲಿ ಅಧಿಕರಾದ ಪಾಠಹೇಳುವ ಗುರುಗಳೂ ಸಿಗದಿದ್ದಲ್ಲಿ ಮಹದ್ಭ್ಯಃ=ತನಗಿಂತ ಹೆಚ್ಚು ತಿಳಿದಿರುವ ವಿಷ್ಣುಭಕ್ತೇಭ್ಯಃ=ವಿಷ್ಣುಭಕ್ತರಿಂದ ಯಥಾಶಕ್ತಿ=ಸಾಧ್ಯವಾದಷ್ಟು ಸಂಶಯಾನ್=ಸಂಶಯ ಮತ್ತು ಭ್ರಮೆಗಳನ್ನು ಛಿಂದ್ಯಾತ್=ಪರಿಹರಿಸಿಕೊಳ್ಳಬೇಕು. ಸ್ವತಃ ಅಧಿಕಾಭಾವೇ=ತನಗಿಂತ

ಜ್ಞಾನಾಧಿಕರೂ ಸಿಗದಿದ್ದರೆ ಸ್ವಯಮೇವ=ತಾನೇ ಸತ್ಸಿದ್ಧಾಂತಂ=ಸರಿಯಾದ ಸಿದ್ಧಾಂತವನ್ನು ಅಹಾಪಯನ್=ಬಿಡದೆ ಸಮಭ್ಯಸೇತ್=ಶಾಸ್ತ್ರಾಭ್ಯಾಸ ಮಾಡುತ್ತಿರಬೇಕು. ಅಪಿಚ=ಮತ್ತು ಶಿಷ್ಯೇಭ್ಯಃ=ಶಿಷ್ಯರಿಗೆ ಬ್ರೂಯಾತ್ ಹೇಳಬೇಕು.

**ಭಾವಾರ್ಥ**— ಅಧಿಕರಾದ ಗುರುಗಳಿಂದ ಉದ್ಗ್ರಂಥಗಳನ್ನು ಪಾಠ ಕೇಳುವುದು ಸಾಧ್ಯವಾಗದಿದ್ದಲ್ಲಿ ಜ್ಞಾನಾಧಿಕರಾದ ಅನೇಕ ವಿಷ್ಣುಭಕ್ತರಿಂದ ಸಂದೇಹ, ಅಜ್ಞಾನಗಳನ್ನು ಪರಿಹರಿಸಿಕೊಳ್ಳಬೇಕು. ಶ್ರವಣಾದಿಗಳು ಆದರ ಪೂರ್ವಕವಾಗಿರಬೇಕಾದರೆ ಹೇಳುವವರು ವಿಷ್ಣುಭಕ್ತರಾಗಿರಬೇಕು. ಅಂತಹವರೂ ಸಿಗದಿದ್ದರೆ ಸಿದ್ಧಾಂತಕ್ಕೆ ಚ್ಯುತಿಬಾರದಂತೆ ತಾವೇ ಓದಿಕೊಳ್ಳಬೇಕು. ಅಂತಹವರು ಶಿಷ್ಯರಿಗೆ ಪಾಠವನ್ನೂ ಹೇಳಬಹುದು. ಅಲ್ಪಸ್ವಲ್ಪ ಸ್ಖಾಲಿತ್ಯ ಬಂದರೂ ಸತ್ಸಿಂದ್ಧಾಂತಕ್ಕೆ ಚ್ಯುತಿಬರದಂತೆ ಪಾಠವನ್ನು ಹೇಳಬೇಕು.

**ಸತ್ಸಿದ್ಧಾಂತ**

**ಅಶೇಷಗುಣಪೂರ್ಣತ್ವಂ ಸರ್ವದೋಷಸಮುಜ್ಝಿತಿಃ।**
**ವಿಷ್ಣೋರನ್ಯಚ್ಚ ತತ್ತಂತ್ರಮಿತಿ ಸಮ್ಯಗ್ ವಿನಿರ್ಣಯಃ ॥ ೭೬ ॥**

ವಿಷ್ಣೋಃ=ವಿಷ್ಣುವಿಗೆ ಅಶೇಷಗುಣಪೂರ್ಣತ್ವಂ= ಸಕಲಗುಣ ಸಮೃದ್ಧಿಯು ಸರ್ವದೋಷಸಮುಜ್ಝಿತಿಃ=ಸಕಲದೋಷರಾಹಿತ್ಯವು ಅನ್ಯತ್= ಉಳಿದೆಲ್ಲವೂ ತತ್ತಂತ್ರಂ=ಅವನ ಅಧೀನವು (ಸಕಲಜಗಜ್ಜನ್ಮಾದಿಕಾರಣತ್ವ) ಇತಿ=ಹೀಗೆ ಸಮ್ಯಕ್ ವಿನಿರ್ಣಯಃ=ಸರಿಯಾಗಿ ನಿರ್ಣೀತವಾದ ತತ್ತ್ವ.

**ಭಾವಾರ್ಥ**— ಹಿಂದೆ ಸತ್ಸಿಂದ್ಧಾತಕ್ಕೆ ವಿರೋಧಬಾರದಂತೆ ಪಠನ– ಪಾಠನಗಳನ್ನು ಮಾಡಬೇಕು ಎನ್ನಲಾಗಿದೆ. ಸತ್ಸಿದ್ಧಾಂತ ಯಾವುದು ಎನ್ನುವುದನ್ನು ಇಲ್ಲಿ ಹೇಳಲಾಗಿದೆ.

ಸತ್ಸಿದ್ಧಾಂತವು ಪರಸಿದ್ಧಾಂತ ಮತ್ತು ಅಪರಸಿದ್ಧಾಂತ ಎಂದು ಎರಡು ವಿಧ. ಅವೆರಡೂ ಮತ್ತೆ ಪ್ರತ್ಯೇಕವಾಗಿ ವಾಚನಿಕ, ಆನುಷಂಗಿಕ ಎಂದು ಎರಡು ವಿಧ. ಇಲ್ಲಿ ವಾಚನಿಕ ಪರಸಿದ್ಧಾಂತವನ್ನು ಹೇಳಲಾಗಿದೆ. ವಿಷ್ಣು ಸಕಲ ಗುಣಪೂರ್ಣ, ಸರ್ವದೋಷರಹಿತ, ಜಗಜ್ಜನ್ಮಾದಿಕಾರಣ. ಈ ಮೂರು ಅಂಶಗಳು ಪರಸಿದ್ಧಾಂತದಲ್ಲಿ ಸೇರಿವೆ.

**ಸ್ವತಂತ್ರತ್ವಂ ಸದಾ ತಸ್ಯ ತಸ್ಯ ಭೇದಶ್ಚ ಸರ್ವತಃ ।**
**ಅದೋಷತ್ವಸ್ಯ ಸಿದ್ಧ್ಯರ್ಥಂ ಯದಭೇದೇ ತದನ್ವಯಃ ।**
**ತತ್ತಂತ್ರತ್ವಂ ಚ ಮುಕ್ತಾನಾಮಪಿ ತದ್ಗುಣಪೂರ್ತಯೇ ॥ ೭೭ ॥**

ತಸ್ಯ=ವಿಷ್ಣುವಿಗೆ ಸದಾ=ಯಾವಾಗಲೂ ಸ್ವತಂತ್ರತ್ವಂ=ಸ್ವಾತಂತ್ರ್ಯವು. ಸರ್ವತಃ=ಎಲ್ಲವುಗಳಿಂದಲೂ ತಸ್ಯ=ಅವನಿಗೆ ಭೇದಶ್ಚ=ಭೇದವೂ. ಇವೆರಡು ಆನುಷಂಗಿಕ ಸಿದ್ಧಾಂತಗಳು. ('ಇತಿ ಸಮ್ಯಕ್ ಸ್ಥಿತಿಃ' ಎಂದು ಮುಂದಿನ ಅನುವ್ಯಾಖ್ಯಾನದಲ್ಲಿದೆ. ಅದರೊಂದಿಗೆ ಅನ್ವಯಿಸಿಕೊಂಡಾಗ 'ಇದು ಸತ್ಸಿದ್ಧಾಂತ' ಎಂಬ ಅರ್ಥಬರುತ್ತದೆ.)

ಇದು ಪರಸಿದ್ಧಾಂತಕ್ಕೆ ಉಪಪಾದಕವಾದುದರಿಂದಾಗಿ ಆನುಷಂಗಿಕ ಸಿದ್ಧಾಂತ ಎನಿಸಿದೆ. ಹೇಗೆಂದರೆ, ಯತ್=ಯಾವಕಾರಣದಿಂದ ಅಭೇದೇ= ಜಗತ್ತಿನ ಅಭೇದವು ಪರಮಾತ್ಮನಿಗೆ ಇದ್ದಲ್ಲಿ ತದನ್ವಯಃ=ಜಗತ್ತಿನ ದೋಷ ಗಳೆಲ್ಲವೂ ಅವನಿಗೆ ಬರಬೇಕಾಗುವುದರಿಂದ ಅದೋಷತ್ವಸಿದ್ಧ್ಯರ್ಥಂ= ವಿಷ್ಣುವಿಗೆ ನಿರ್ದೋಷತ್ವಸಿದ್ಧಿಗಾಗಿ ಇರುವ ಭೇದವು ಆನುಷಂಗಿಕಸಿದ್ಧಾಂತ. ಅದರಂತೆ, ವಿಷ್ಣುವು ಅಸ್ವತಂತ್ರನಾದರೆ ಗುಣಪೂರ್ಣತ್ವವು ಬರಲಾರದು. ಗುಣ-ದೋಷಗಳು ಅವನ ಅಧೀನಗಳಾಗಿದ್ದಲ್ಲಿ ಮಾತ್ರ ಬೇಡವಾದ ದೋಷವನ್ನು ಬರದಂತೆ ತಡೆಯಬಹುದು, ಬೇಕಾದ ಗುಣಗಳನ್ನು ಪಡೆದು ಕೊಳ್ಳಬಹುದು. ಆದ್ದರಿಂದ ಸ್ವಾತಂತ್ರ್ಯವೂ ಗುಣಪೂರ್ಣತ್ವ ಮತ್ತು ನಿರ್ದೋಷತ್ವಗಳಿಗೆ ಸಾಧಕವಾಗುತ್ತದೆ. ಹೀಗೆ ಜಡ-ಚೇತನಗಳಿಂದ ಭೇದ ಮತ್ತು ಸ್ವಾತಂತ್ರ್ಯ ಇವೆರಡು ಪ್ರಧಾನಸಿದ್ಧಾಂತಗಳಿಗೆ ಸಾಧಕಗಳಾದುದರಿಂದ ಆನುಷಂಗಿಕ ಪರಸಿದ್ಧಾಂತಗಳೆನಿಸಿವೆ.

'ಅನ್ಯತ್ ತತ್ತಂತ್ರಂ' ಎಂದು ಪರಸಿದ್ಧಾಂತವನ್ನು ಹೇಳಲಾಗಿದೆ. ಇಲ್ಲಿ ಅನ್ಯತ್ ಎಂದರೆ ಅಮುಕ್ತವರ್ಗ ಮಾತ್ರ ಎಂದು ತಿಳಿಯಬಾರದು. ಆಗ ಮುಕ್ತವರ್ಗವು ಸ್ವತಂತ್ರವೆನಿಸಿ ನಿರಂಕುಶವಾದ ಐಶ್ವರ್ಯವು ಭಗವಂತನಿಗೆ ಸಿದ್ಧವಾಗಲಿಕ್ಕಿಲ್ಲ. ಅಂತಹ ಐಶ್ವರ್ಯ(ಈಶನಶಕ್ತಿ) ಇಲ್ಲದಿದ್ದಲ್ಲಿ ಗುಣ ಪೂರ್ಣತ್ವವು ಸಿದ್ಧವಾಗುವುದಿಲ್ಲ. ಆದ್ದರಿಂದ, ಮುಕ್ತಾನಾಮಪಿ=ಮುಕ್ತರಿಗೂ

ತತ್ತಂತ್ರತ್ವಂ=ಭಗವದಧೀನತ್ವವು ತದ್ಗುಣಪೂರ್ತಯೇ=ಭಗವಂತನ ಗುಣಪೂರ್ಣತ್ವದ ಸಿದ್ಧಿಗಾಗಿ ಅಂಗೀಕರಿಸಲ್ಪಡಬೇಕು.

**ಮುಕ್ತಾನಾಮಪಿ ಭೇದಶ್ಚ ನಹಿ ಭಿನ್ನಮಭಿನ್ನತಾಮ್ ।**
**ಗಚ್ಛದ್ ದೃಷ್ಟಂ ಕ್ವಚಿತ್ ತಸ್ಯಾಪ್ಯಭಾವೋಽನುಭವೋಪಗಃ ॥ ೭೮ ॥**

ಮುಕ್ತಾನಾಮಪಿ=ಮುಕ್ತರಿಗೂ ಪರಮಾತ್ಮನಿಂದ ಭೇದಶ್ಚ=ಭೇದವೂ ಅಂಗೀಕರಿಸಲ್ಪಡಬೇಕು. 'ತಸ್ಯ ಭೇದಶ್ಚ ಸರ್ವತಃ' ಎಂದು ಹಿಂದೆ ಹೇಳಿದ ಆನುಷಂಗಿಕಸಿದ್ಧಾಂತದಲ್ಲೂ ಸರ್ವತಃ ಎಂದರೆ 'ಅಮುಕ್ತವರ್ಗದಿಂದ' ಎಂದಿಷ್ಟೇ ಅರ್ಥವಲ್ಲ, ಮುಕ್ತವರ್ಗದಿಂದಲೂ ಭೇದವು ಆನುಷಂಗಿಕ ಸಿದ್ಧಾಂತ.

ಕ್ವಚಿತ್=ಎಂದೂ ಭಿನ್ನಂ=ಭಿನ್ನವಾದುದು ಅಭಿನ್ನತಾಂ ಗಚ್ಛತ್=ಅಭೇದ ವನ್ನು ಹೊಂದಿರುವುದು ನ ದೃಷ್ಟಂ=ಕಂಡಿಲ್ಲ. ತಸ್ಯಾಪಿ ಅಭಾವಃ=ಭಿನ್ನವು ಅಭಿನ್ನವಾಗುತ್ತದೆ ಎನ್ನುವುದರ ಅಭಾವವೂ ಅರ್ಥಾತ್ ಭಿನ್ನವು ಅಭಿನ್ನ ವಾಗುವುದಿಲ್ಲ ಎನ್ನುವುದೂ ಅನುಭವೋಪಗಃ=ಅನುಭವಸಿದ್ಧವೂ ಆಗಿದೆ.

ಇದು ಮುಂದೆ ಹೇಳುವ ವಿಷಯಕ್ಕೆ ಪೀಠಿಕೆ. ಮೊದಲು ಭಿನ್ನರಾದ ಜೀವರಿಗೆ ಮೋಕ್ಷದಲ್ಲಿ ಅಭೇದವನ್ನು ಹೇಳಲಾಗದು. ಆದ್ದರಿಂದ ಮೋಕ್ಷದಲ್ಲಿ ಅಭೇದಬರಬೇಕಾದರೆ ಸಂಸಾರದಲ್ಲೂ ಅಭೇದವನ್ನು ಅಂಗೀಕರಿಸಬೇಕು. ಇದನ್ನೇ ಮುಂದೆ ಹೇಳಿ ನಿರಾಕರಿಸುತ್ತಾರೆ—

**ಪೂರ್ವಾಭೇದೇ ದೋಷವತ್ತ್ವಮೀಶಸ್ಯೇತ್ಯತಿಭಿನ್ನತಾ ।**
**ನಾರಾಯಣೇನ ಮುಕ್ತಾನಾಮಪಿ ಸಮ್ಯಗಿತಿ ಸ್ಥಿತಿಃ ।**
**ಭೇದಾಭೇದೇಽಪ್ಯಭೇದೇನ ದೋಷಾಣಾಮಪಿ ಸಂಭವಃ ॥ ೭೯ ॥**

ಪೂರ್ವಾಭೇದೇ=ಮೋಕ್ಷಕ್ಕಿಂತಲೂ ಮೊದಲು ಜೀವರಿಂದ ಈಶಸ್ಯ= ವಿಷ್ಣುವಿಗೆ ಅಭೇದವಿದ್ದಲ್ಲಿ ದೋಷವತ್ತ್ವಂ=(ಜೀವರಲ್ಲಿರುವ) ದೋಷವು ಬಂದೀತು ಇತಿ=ಈ ಕಾರಣದಿಂದಾಗಿ ನಾರಾಯಣೇನ=ವಿಷ್ಣುವಿನಿಂದ ಮುಕ್ತಾನಾಮಪಿ=ಮುಕ್ತರಿಗೂ ಅತಿಭಿನ್ನತಾ=ಆತ್ಯಂತಿಕಭೇದವು ಅಂಗೀಕರಿಸ

ಲ್ಪಡಬೇಕು. ಇತಿ=ಈ ಕಾರಣದಿಂದ ಇದು ಸಮ್ಯಕ್‌ಸ್ಥಿತಿಃ=ಆನುಷಂಗಿಕ ಪರಸಿದ್ಧಾಂತ. ಹೀಗೆ ಅತ್ಯಂತಭೇದವೂ ದೋಷದೂರತ್ವ ಎಂಬ ಪರಸಿದ್ಧಾಂತಕ್ಕೆ ಸಮರ್ಥಕವಾದ ಆನುಷಂಗಿಕ ಸಿದ್ಧಾಂತ.

ಭೇದಾಭೇದೇಽಪಿ=ಭೇದ ಮತ್ತು ಅಭೇದವಿದ್ದರೂ ಅಭೇದೇನ= ಅಭೇದವಿರುವ ನಿಮಿತ್ತದಿಂದ ದೋಷಾಣಾಮಪಿ=ಪ್ರಪಂಚದ ದೋಷಗಳ ಸಂಭವಃ=ಸಂಭವವಿದೆ. ಪ್ರಪಂಚಕ್ಕೂ ಬ್ರಹ್ಮನಿಗೂ ಭೇದ ಸಹಿತಾಭೇದವನ್ನು ಹೇಳಿದರೂ ಅಭೇದವು ಇರುವ ಪ್ರಯುಕ್ತ ಬ್ರಹ್ಮನಿಗೆ ಪ್ರಪಂಚಗತ ದೋಷ ಬರುತ್ತದೆ. ಆದ್ದರಿಂದ ಅತ್ಯಂತಭೇದವನ್ನೇ ಅಂಗೀಕರಿಸಬೇಕು.

**ಅಪರಸಿದ್ಧಾಂತ**

**ನಿರ್ದೋಷತ್ವಂ ರಮಾಯಾಶ್ಚ ತದನಂತರತಾ ತಥಾ ।**
**ಬ್ರಹ್ಮಾ ಸರಸ್ವತೀ ವೀಂದ್ರಶೇಷರುದ್ರಾಶ್ಚ ತತ್‌ಸ್ತ್ರಿಯಃ ॥ ೮೦ ॥**

**ಶಕ್ರಕಾಮೌ ತದನ್ಯೇ ಚ ಕ್ರಮಾನ್ಮುಕ್ತಾವಪೀತಿ ಚ ।**
**ಸತ್ಸಿದ್ಧಾಂತ ಇತಿ ಜ್ಞೇಯೋ ನಿರ್ಣೀತೋ ಹರಿಣಾ ಸ್ವಯಮ್ ॥ ೮೧ ॥**

ಪರಮಾತ್ಮನಂತೆಯೇ ರಮಾಯಾಶ್ಚ=ಲಕ್ಷ್ಮೀದೇವಿಗೂ ನಿರ್ದೋಷತ್ವಂ= ಸಕಲದೋಷದೂರತ್ವ. ತಥಾ=ಅದರಂತೆ ರಮಾದೇವಿಗೆ ತದನಂತರತಾ= ತದಧೀನತಾ ಎಂಬ ದೋಷ ಇದೆ. ಪಾರತಂತ್ರ್ಯದೋಷ ಲಕ್ಷ್ಮೀದೇವಿಗೂ ಇದೆ.

'ಕಾಮಾದಿತರತ್ರ ಅನ್ಯತ್ರ ಚಾಯತನಾದಿಭ್ಯಃ' 'ಸಮನಾ ಚಾಸೃತ್ಯುಪ- ಕ್ರಮಾದಮೃತತ್ವಂ ಚಾನುಪೋಷ್ಯ' ಎಂಬ ಸೂತ್ರಗಳಲ್ಲಿ ಲಕ್ಷ್ಮೀದೇವಿಗೆ ಸಕಲದೋಷದೂರತ್ವವನ್ನು ಹೇಳಲಾಗಿದೆ. 'ಅಸ್ಯೈವ ಚೋಪಪತ್ತೇರೂಷ್ಮಾ' ಈ ಸೂತ್ರದಲ್ಲಿ ಲಕ್ಷ್ಮೀದೇವಿಗೂ ಪಾರತಂತ್ರ್ಯದೋಷವನ್ನು ಹೇಳಲಾಗಿದೆ.

ಬ್ರಹ್ಮಾ=ಚತುರ್ಮುಖಬ್ರಹ್ಮದೇವರು, ಸರಸ್ವತೀ=ಸರಸ್ವತೀದೇವಿ ವೀಂದ್ರ–ಶೇಷ–ರುದ್ರಾಶ್ಚ=ಗರುಡ–ಶೇಷ–ರುದ್ರರು ತತ್‌ಸ್ತ್ರಿಯಃ=ಅವರ ಪತ್ನಿಯರಾದ ಸೌಪರ್ಣೀ–ವಾರುಣೀ–ಸರಸ್ವತಿಯರು, ಶಕ್ರ–ಕಾಮೌ= ಇಂದ್ರ ಮತ್ತು ಕಾಮರು, ತದನ್ಯೇ ಚ=ಇವರಲ್ಲದ ಇತರರು ಮುಕ್ತಾವಪಿ= ಮೋಕ್ಷದಲ್ಲೂ ಕ್ರಮಾತ್=ಇಲ್ಲಿ ಹೇಳಿರುವ ಕ್ರಮದಿಂದ ತಾರತಮ್ಯವೂ

ಸತ್ಸಿದ್ಧಾಂತಃ=ಇನ್ನೊಂದು ಅಪರಸಿದ್ಧಾಂತ. ಇತಿ ಜ್ಞೇಯಃ=ಎಂದು ತಿಳಿಯ ಬೇಕು.

ಇದೆಲ್ಲವೂ ಹರಿಣಾ=ವೇದವ್ಯಾಸರಿಂದ ಸ್ವಯಂ=ಸಾಕ್ಷಾತ್ತಾಗಿ ಸೂತ್ರ ಗಳ ಅರ್ಥವಾಗಿ ನಿರ್ಣೀತಃ=ನಿರ್ಣಯಿಸಲ್ಪಟ್ಟಿದೆ.

**ಏತದ್ವಿರೋಧಿ ಯತ್ ಸರ್ವಂ ತಮಸೇಽಂಧಾಯ ಕೇವಲಮ್ ।**
**ಅಂಧಂತಮೋ ವಿಶಂತೀತಿ ಪ್ರಾಹ ಶ್ರುತಿರತಿಸ್ಫುಟಮ್ ॥ ೮೨ ॥**

ಏತದ್‌ವಿರೋಧಿ ಯತ್=ಇದಕ್ಕೆ ವಿರೋಧಿಯಾದುದು ಏನಿದೆಯೋ ತತ್‌ಸರ್ವಂ=ಅವೆಲ್ಲವೂ ಕೇವಲಂ ಅಂಧಾಯ ತಮಸೇ=ಸುಖಲೇಶವೂ ಇಲ್ಲದ ಅಂಧಂತಮಸ್ಸಿಗೆ ಕಾರಣವಾದವುಗಳು.

ಇದನ್ನು ''ಅಂಧಂತಮೋ ವಿಶಂತೀತಿ''='ಅಂಧಂತಮಃ ಪ್ರವಿಶಂತಿ ಯೇಽವಿದ್ಯಾಮುಪಾಸತೇ' ಎಂಬ ಶ್ರುತಿಃ=ಉಪನಿಷತ್ತು ಸ್ಫುಟಂ= ಸ್ಪಷ್ಟವಾಗಿ ಪ್ರಾಹ=ಹೇಳುತ್ತದೆ.

**ಇತ್ಯೇವ ಶ್ರುತಯೋಽಶೇಷಾಃ ಪಂಚರಾತ್ರಮಥಾಖಿಲಮ್ ।**
**ಮೂಲರಾಮಾಯಣಂ ಚೈವ ಭಾರತಂ ಸ್ಮೃತಯೋಽಖಿಲಾಃ ॥ ೮೩ ॥**

**ವೈಷ್ಣವಾನಿ ಪುರಾಣಾನಿ ಸಾಂಖ್ಯಯೋಗೌ ಪರಾವಪಿ ।**
**ಬ್ರಹ್ಮತರ್ಕಶ್ಚ ಮೀಮಾಂಸೇತ್ಯನಂತಃ ಶಬ್ದಸಾಗರಃ ॥ ೮೪ ॥**

**ಅನಂತಾ ಯುಕ್ತಯಶ್ಚೈವ ಪ್ರತ್ಯಕ್ಷಾಗಮಮೂಲಕಾಃ ।**
**ಪ್ರತ್ಯಕ್ಷಮೈಶ್ವರಂ ಚೈವ ರಮಾದೀನಾಮಶೇಷತಃ ॥ ೮೫ ॥**

**ಮುಕ್ತಾನಾಮಪ್ಯಮುಕ್ತಾನಾಮೇತಮೇವಾರ್ಥಮುತ್ತಮಮ್ ।**
**ಅನ್ಯಾವಕಾಶರಹಿತಂ ಪ್ರಕಾಶಯತಿ ಸಾದರಮ್ ॥ ೮೬ ॥**

ಇತ್ಯೇವ=ಹೀಗೆಯೇ (ಹಿಂದೆ ಹೇಳಿದಂತೆಯೇ) ಅಶೇಷಾಃ ಶ್ರುತಯಃ= ಎಲ್ಲ ವೇದಗಳೂ ಅಖಿಲಂ ಪಂಚರಾತ್ರಂ=ಪಂಚರಾತ್ರದ ಎಲ್ಲ ಸಂಹಿತೆಗಳೂ ಮೂಲರಾಮಾಯಣಂ ಚೈವ=ಮೂಲರಾಮಾಯಣವೂ ಭಾರತಂ=ಮಹಾ

ಭಾರತವು, ಅಖಿಲಾಃ ಸ್ಮೃತಯಃ=ಎಲ್ಲ ವಿಷಯಗಳನ್ನೊಳ ಗೊಂಡ ಸ್ಮೃತಿಗಳು, ವೈಷ್ಣವಾನಿ ಪುರಾಣಾನಿ=ವೈಷ್ಣವ ಪುರಾಣಗಳು ಪರೌ ಸಾಂಖ್ಯಯೋಗಾವಪಿ=ಅರ್ವಾಚೀನಭಿನ್ನವಾದ ಸಾಂಖ್ಯ-ಯೋಗ ಶಾಸ್ತ್ರಗಳು ಬ್ರಹ್ಮತರ್ಕಶ್ಚ=ಬ್ರಹ್ಮತರ್ಕವೂ, ಮೀಮಾಂಸಾ=ಕರ್ಮಮೀಮಾಂಸಾ, ದೈವೀಮೀಮಾಂಸಾ ಮತ್ತು ಬ್ರಹ್ಮಮೀಮಾಂಸಾಗಳು, ಇತಿ=ಹೀಗೆ ಅನಂತಃ= ಕೊನೆ ಇಲ್ಲದ ಶಬ್ದಸಾಗರಃ=ವಾಙ್ಮಯಸಮುದ್ರವು ಪ್ರತ್ಯಕ್ಷಾಗಮ ಮೂಲಕಾಃ=ಪ್ರತ್ಯಕ್ಷ ಮತ್ತು ಆಗಮಗಳನ್ನು ಆಧರಿಸಿದ ಅನಂತಾ ಯುಕ್ತಯಶ್ಚೈವ=ಅಪಾರ ಯುಕ್ತಿಗಳೂ, ಐಶ್ವರಂ=ಈಶ್ವರನಿಗೆ ಸಂಬಂಧಿಸಿದ ಪ್ರತ್ಯಕ್ಷವು, ಅಶೇಷತಃ ರಮಾದೀನಾಂ=ರಮಾ- ಬ್ರಹ್ಮಾದಿ ಗಳೆಲ್ಲರ ಹಾಗೂ ಮುಕ್ತಾನಾಮ್, ಅಮುಕ್ತಾನಾಮಪಿ=ಮುಕ್ತರ ಮತ್ತು ಅಮುಕ್ತರ ಪ್ರತ್ಯಕ್ಷಂ= ಪ್ರತ್ಯಕ್ಷಗಳೂ ಏತಮೇವ ಉತ್ತಮಂ ಅರ್ಥಂ=ಇದೇ ಶ್ರೇಷ್ಠವಿಷಯಗಳನ್ನು ಅನ್ಯಾವಕಾಶರಹಿತಂ=ನಿರವಕಾಶಗಳಾಗಿ ಸಾದರಂ=ತಾತ್ಪರ್ಯಪೂರ್ವಕವಾಗಿ ಪ್ರಕಾಶಯತಿ=ತಿಳಿಸುತ್ತವೆ.

**ದುಃಶಾಸ್ತ್ರಾಧ್ಯಯನ ಮಾಡಬಾರದು**

**ಏತದೇವ ಚ ಸಚ್ಛಾಸ್ತ್ರಂ ದುಃಶಾಸ್ತ್ರಂ ತು ತತಃ ಪರಮ್ ।**
**ಸಚ್ಛಾಸ್ತ್ರಮಭ್ಯಸೇನ್ನಿತ್ಯಂ ದುಶ್ಶಾಸ್ತ್ರಂ ತು (ಚ) ಪರಿತ್ಯಜೇತ್ ।**
**ಅಸಂಶಯೇನ ತತ್ವಸ್ಯ ನಿರ್ಣಯೇ ಬ್ರಹ್ಮದರ್ಶನಮ್ ॥ ೮೭ ॥**

ಏತದೇವಚ=ಹಿಂದೆ ಹೇಳಿರುವ ವೇದಾದಿಗಳೇ ಸಚ್ಛಾಸ್ತ್ರಂ=ಸರಿಯಾದ ಶಾಸ್ತ್ರವು. ತತಃ ಪರಂ=ಇವನ್ನು ಬಿಟ್ಟು ಇತರೆಲ್ಲವೂ ದುಃಶ್ಶಾಸ್ತ್ರಂ= ದುಷ್ಟಶಾಸ್ತ್ರವು. ಸಚ್ಛಾಸ್ತ್ರಂ=ಸಚ್ಛಾಸ್ತ್ರವನ್ನೇ ನಿತ್ಯಂ=ಸರ್ವದಾ ಅಭ್ಯಸೇತ್= ಅಭ್ಯಾಸ ಮಾಡಬೇಕು. ದುಃಶ್ಶಾಸ್ತ್ರಂ ತು=ಕೆಟ್ಟ ಶಾಸ್ತ್ರಗಳನ್ನು ಪರಿತ್ಯಜೇತ್= ಬಿಡಬೇಕು.

ಯಥಾರ್ಥವಾದ ಬ್ರಹ್ಮಚಿಂತನೆಯೇ ಧ್ಯಾನ. ಅಂತಹ ಧ್ಯಾನಕ್ಕೆ ಶ್ರವಣ ಮತ್ತು ಮನನ ಇವೆರಡೂ ಬೇಕು. ಶ್ರವಣದಿಂದ ಬ್ರಹ್ಮಜ್ಞಾನಪ್ರಾಪ್ತಿ, ಆ ಜ್ಞಾನದಲ್ಲಿ ಸಂದೇಹ, ಭ್ರಾಂತಿಗಳ ನಿರಾಸಕ್ಕಾಗಿ ಮನನ. ಅದರಿಂದ ನಿಶ್ಚಲವಾದ ಧ್ಯಾನ. ಧ್ಯಾನದಿಂದ ಬ್ರಹ್ಮದರ್ಶನ.

ಅಸಂಶಯೇನ=ಸಂಶಯರಹಿತವಾಗಿ ತತ್ತ್ವಸ್ಯ=ಬ್ರಹ್ಮತತ್ತ್ವದ ನಿರ್ಣಯೇ=ನಿಶ್ಚಯವಾದಲ್ಲಿ ಅದರಿಂದ ಧ್ಯಾನಮಾಡಿ ಬ್ರಹ್ಮದರ್ಶನಂ= ಬ್ರಹ್ಮನ ಅಪರೋಕ್ಷವಾಗುತ್ತದೆ.

**ಸಮ್ಯಗ್ವಿಷಮವಿಜ್ಞಾನತಾರತಮ್ಯಾನುಸಾರತಃ ।**
**ಫಲಂ ಭವೇತ್ ತಾರತಮ್ಯಾತ್ ಸುಖದುಃಖಾತ್ಮಕಂ ನೃಣಾಮ್ ॥೮೮॥**

ಸಮ್ಯಗ್–ವಿಷಮ–ವಿಜ್ಞಾನತಾರತಮ್ಯಾನುಸಾರತಃ=ತತ್ತ್ವಜ್ಞಾನ ಹಾಗೂ ಮಿಥ್ಯಾಜ್ಞಾನಗಳ ತಾರತಮ್ಯಕ್ಕೆ ಅನುಗುಣವಾಗಿ ನೃಣಾಂ= ಚೇತನರಿಗೆ ಸುಖ–ದುಃಖಾತ್ಮಕಂ ಫಲಂ=ಸುಖ ಮತ್ತು ದುಃಖರೂಪವಾದ ಫಲವು ತಾರತಮ್ಯಾತ್=ಸಾಧನತಾರತಮ್ಯಪ್ರಯುಕ್ತವಾಗಿ ತಾರತಮ್ಯ ದಿಂದಲೇ ಭವೇತ್=ಬರುತ್ತದೆ.

ಭಾವಾರ್ಥ— ಎಷ್ಟು ಅಧಿಕವಾದ ತತ್ತ್ವಜ್ಞಾನವು ಬರುವುದೋ ಅಷ್ಟೇ ಅಧಿಕವಾದ ಮೋಕ್ಷಸುಖವೂ ಬರುವುದು. ಅದರಂತೆ, ಅಧಿಕಮಿಥ್ಯಾ ಜ್ಞಾನದಿಂದ ಅಧಿಕ ದುಃಖವೂ ಆಗುವುದು. ಹೀಗೆ ಸಾಧನತಾರತಮ್ಯಕ್ಕೆ ಅನುಗುಣವಾಗಿ ಫಲತಾರತಮ್ಯವೂ ಉಂಟಾಗುತ್ತದೆ.

**ಸಮ್ಯಕ್ ಚಾಧಿಕವಿಜ್ಞಾನಾತ್ ಸುಖಾಧಿಕ್ಯಂ ಭವೇನ್ನೃಣಾಮ್ ।**
**ಅತೋ ಯಥಾತ್ಮಶಕ್ತ್ಯೈವ ಶ್ರವಣಂ ಮನನಂ ತಥಾ ॥ ೮೯ ॥**

ಸಮ್ಯಕ್ ಚ=ಸಮೀಚೀನವಾದ ಅಧಿಕವಿಜ್ಞಾನಾತ್=ಹೆಚ್ಚು ಜ್ಞಾನದಿಂದ ನೃಣಾಂ=ಸಾಧಕಜೀವರಿಗೆ ಸುಖಾಧಿಕ್ಯಂ=ಅಧಿಕಸುಖವು ಭವೇತ್=ಆಗು ತ್ತದೆ. ಇದರಂತೆ ಮಿಥ್ಯಾಜ್ಞಾನದಿಂದಲೂ ಅದಕ್ಕೆ ಅನುಗುಣವಾದ ದುಃಖ ವಾಗುತ್ತದೆ.

ಅತಃ=ಆದ್ದರಿಂದ ಯಥಾತ್ಮಶಕ್ತ್ಯೈವ=ಆತ್ಮಯೋಗ್ಯತಾನುಸಾರ ವಾಗಿಯೇ ಶ್ರವಣಂ=ಶ್ರವಣವನ್ನೂ ತಥಾ=ಹಾಗೆಯೇ ಮನನಂ= ಮನನ ವನ್ನೂ ಮಾಡಬೇಕು. ಸರ್ವಶಾಖಾವಿಷಯಕಶ್ರವಣವಾಗಲೀ ಸ್ವಶಾಖಾ ಮಾತ್ರವಿಷಯಗಳೇ ಆಗಲೀ ಎರಡೂ ಮೋಕ್ಷಸಾಧನಗಳು.

ಇಲ್ಲಿಗೆ ಸರ್ವವೇದಾಂತಪ್ರತ್ಯಯಾಧಿಕರಣ ಮುಗಿಯಿತು.

# ಉಪಸಂಹಾರಾಧಿಕರಣ

## 'ಓಂ ಉಪಸಂಹಾರೋಽರ್ಥಾಭೇದಾದ್ ವಿಧಿಶೇಷವತ್ ಸಮಾನೇ ಚ ಓಂ'

**ಕೃತ್ವಾಥ ಕುರ್ವನ್ನಪಿ ವಾ ನಿದಿಧ್ಯಾಸನಮಾಚರೇತ್ ॥ ೯೦ ॥**

ಅಥ ಶ್ರವಣಂ ಮನನಂ ಕೃತ್ವಾ=ಶ್ರವಣಮನನಗಳನ್ನು ಮಾಡಿ ವಾ=ಅಥವಾ ಕುರ್ವನ್ನಪಿ ವಾ=ಮಾಡುತ್ತಿರುವಾಗಲೇ ಯಥಾತ್ಮಶಕ್ತ್ಯೈವ= ತಮ್ಮತಮ್ಮ ಯೋಗ್ಯತೆಗೆ ಅನುಗುಣವಾದ ನಿದಿಧ್ಯಾಸನಂ=ಧ್ಯಾನವನ್ನು ಆಚರೇತ್=ಮಾಡಬೇಕು.

ಇಲ್ಲಿಗೆ ಉಪಸಂಹಾರಾಧಿಕರಣ ಮುಗಿಯಿತು.

# ಅನುಬಂಧಾಧಿಕರಣ

## 'ಓಂ ಅನುಬಂಧಾದಿಭ್ಯಃ ಓಂ'

**'ವಿಷಯೇಷು ಚ ಸಂಸರ್ಗಾಚ್ಛಾಶ್ವತಸ್ಯ ಚ ಸಂಶಯಾತ್।**
**ಮನಸಾ ಚಾನ್ಯದಾಕಾಂಕ್ಷಾತ್ ಪರಂ ನ ಪ್ರತಿಪದ್ಯತೇ' ॥ ೯೧ ॥**

**ಇತಿ ಭಾರತವಾಕ್ಯಂ ಹಿ ತೇನೈತದ್ದೋಷವರ್ಜಿತಃ।**
**ಸದೋಪಾಸನಯಾ ಯುಕ್ತೋ ವಾಸುದೇವಂ ಪ್ರಪಶ್ಯತಿ ॥ ೯೨ ॥**

''ವಿಷಯೇಷು ಚ ಸಂಸರ್ಗಾತ್=ವಿಷಯಪದಾರ್ಥಗಳ ಸೇವನೆ ಯಿಂದ ಶಾಶ್ವತಸ್ಯ=ಬ್ರಹ್ಮನ ಬಗ್ಗೆ ಸಂಶಯಾತ್=ಸಂದೇಹದಿಂದ ಮನಸಾ= ಮನಸ್ಸಿನಿಂದ ಅನ್ಯತ್=ಮೋಕ್ಷಾನ್ಯವಿಷಯಗಳ ಆಕಾಂಕ್ಷಾತ್= ಆಸೆಪ ಡುವುದರಿಂದ ಪರಂ ಬ್ರಹ್ಮ=ಪರಮಾತ್ಮನನ್ನು ನ ಪ್ರತಿಪದ್ಯತೇ= ಹೊಂದುವು ದಿಲ್ಲ.'' ಇತಿ=ಈ ರೀತಿಯಾದ ಭಾರತವಾಕ್ಯಂ= ಮಹಾಭಾರತವಚನವು ಹಿ=ಯಾವ ಕಾರಣದಿಂದ ವಿಷಯಸಂಸರ್ಗಾದಿಗಳು ಜ್ಞಾನಕ್ಕೆ ವಿರೋಧಿಗಳು ಎಂದು ಹೇಳುತ್ತಿದೆಯೋ ತೇನ=ಆದ್ದರಿಂದ ಏತದ್ದೋಷವರ್ಜಿತಃ=ಈ

ದೋಷಗಳಿಂದ ರಹಿತನಾಗಿ ಸದಾ=ನಿರಂತರ ಉಪಾಸನಯಾ=ಧ್ಯಾನದಿಂದ ಯುಕ್ತೋ ಭವತಿ=ಸಂಬದ್ಧನಾಗುತ್ತಾನೆ. ಅಂತಹವನು ವಾಸುದೇವಂ= ಪರಮಾತ್ಮನನ್ನು ಪಶ್ಯತಿ=ಕಾಣುತ್ತಾನೆ.

**ಭಾವಾರ್ಥ**— ಯಮ–ನಿಯಮಾದಿಗಳು ಧ್ಯಾನಕ್ಕೆ ಅಂಗಗಳು. ಅವುಗಳ ಜೊತೆಗೆ ವಿಷಯವೈರಾಗ್ಯ ಮತ್ತು ಭಗವದ್ಭಕ್ತಿಯೂ ಇರಬೇಕು. ವಿಷಯಾಸಕ್ತಿ ಇದ್ದರೆ ಹಾಗೂ ಭಗವಂತನಲ್ಲಿ ಪ್ರೇಮವಿಲ್ಲದಿದ್ದರೆ ನಿರಂತರ ಧ್ಯಾನವನ್ನು ಮಾಡಲಾಗುವುದಿಲ್ಲ.

ದ್ವೇಷದಿಂದಲೂ ಶಿಶುಪಾಲಾದಿಗಳಿಗೆ ಏಕಾಗ್ರತೆ ಇದ್ದರೂ ಅದು ವೈರಾಗ್ಯ–ಭಕ್ತ್ಯಾದಿರಹಿತವಾದುದರಿಂದ ಅಪರೋಕ್ಷಸಾಧನವಾಗುವುದಿಲ್ಲ. ಅವರು ಯಮ–ನಿಯಮಾದಿ ಯುಕ್ತರೂ ಅಲ್ಲ.

ಅಹಿಂಸಾ ಸತ್ಯಮಸ್ತೇಯಂ ಬ್ರಹ್ಮಚರ್ಯಾಪರಿಗ್ರಹೌ ।
ಯಮಾಃ, ಶೌಚಂ ತಪಸ್ತುಷ್ಟಿಃ ಸ್ವಾಧ್ಯಾಯೋ ಹರಿಪೂಜನಮ್ ।
ನಿಯಮಾಃ, ವೀರಪದ್ಮೇ ಚ ಸ್ವಸ್ತಿಕಾದ್ಯಾನಿ ಚಾಸನಮ್ ॥

ಹೀಗೆ ತಂತ್ರಸಾರಸಂಗ್ರಹದಲ್ಲಿ ಆಚಾರ್ಯರು ಧ್ಯಾನಾಂಗವಾದ ಯಮ ಮತ್ತು ನಿಯಮಗಳನ್ನು ನಿರೂಪಿಸಿದ್ದಾರೆ.

**ದೋಷಾ ಅನಾದಿಸಂಬದ್ಧಾಸ್ತೇ ಮುಕ್ತಿಪರಿಪಂಥಿನಃ ।**
**ಸಂತ್ಯೇವ ಪ್ರಾಯಶಃ ಪುಂಸು ತೇನ ಮೋಕ್ಷೋ ನ ಜಾಯತೇ ।**
**ಸರ್ವೇ ತ ಏತೇ ಜೀವೇಷು ದೃಶ್ಯಂತೇ ತಾರತಮ್ಯತಃ ॥ ೯೩ ॥**

ತೇ ದೋಷಾಃ=ವಿಷಯಸಂಸರ್ಗ, ವಿಷ್ಣುಭಕ್ತಿಯ ಅಭಾವ ಈ ಮೊದಲಾದ ದೋಷಗಳು ಮುಕ್ತಿಪರಿಪಂಥಿನಃ=ಮುಕ್ತಿಗೆ ಪ್ರತಿಬಂಧಕಗಳಾಗಿ ಪ್ರಾಯಶಃ=ಪ್ರಚುರವಾಗಿ ಪುಂಸು=ಜೀವರಲ್ಲಿ ಅನಾದಿಸಂಬದ್ಧಾಃ= ಅನಾದಿ ಕಾಲದಿಂದ ಸಂಬದ್ಧವಾಗಿ ಸಂತ್ಯೇವ=ಇದ್ದೇ ಇರುತ್ತವೆ. ತೇನ=ಅದರಿಂದಾಗಿ ಮೋಕ್ಷಃ=ಮೋಕ್ಷವು ನ ಜಾಯತೇ=ಉಂಟಾಗುವುದಿಲ್ಲ.

ತೇ ಏತೇ ಸರ್ವೇ=ಈ ಎಲ್ಲಾ ದೋಷಗಳು ಜೀವೇಷು=ಬಾಲವೃದ್ಧಾದಿ

ಸಕಲಜೀವರಲ್ಲೂ ತಾರತಮ್ಯತಃ=ವ್ಯಕ್ತ–ಅವ್ಯಕ್ತಾದಿತಾರತಮ್ಯದಿಂದ ದೃಶ್ಯಂತೇ=ತಿಳಿದು ಬರುತ್ತವೆ.

**ಭಾವಾರ್ಥ**— ವಿಷಯಾಭಿಲಾಷೆಯೇ ಮೊದಲಾದ ದೋಷಗಳು ಎಲ್ಲ ಮನುಷ್ಯರಲ್ಲೂ ಇರುವುದರಿಂದ ಆ ದೋಷಗಳ ಪರಿಹಾರಕ್ಕಾಗಿ ಧ್ಯಾನಾಂಗ ವಾದ ಯಮ–ನಿಯಮಾದಿ ಅನುಷ್ಠಾನವನ್ನು ಎಲ್ಲರೂ ಮಾಡಬೇಕು. ಬಾಲ್ಯದಲ್ಲಿ ರಾಗಾದಿಗಳು ವ್ಯಕ್ತವಾಗದಿರಬಹುದು. ಅವುಗಳು ನಾಲ್ಕು ಅವಸ್ಥೆಗಳಲ್ಲಿ ಇರುತ್ತವೆ. ಪ್ರಸುಪ್ತ–ತನು–ವಿಚ್ಛಿನ್ನ–ಉದಾರ, ಎಂದು. ಬಾಲ್ಯದಲ್ಲಿ ರಾಗಾದಿಗಳು ಉದಾರಾವಸ್ಥೆಯಲ್ಲಿ ಇಲ್ಲದಿದ್ದರೂ ಸುಪ್ತಾವಸ್ಥೆ ಯಲ್ಲಿ ಇರುತ್ತವೆ. ಚಂದ್ರನ ಒಂದೊಂದು ಕಲೆಗಳು ಶುಕ್ಲಪಕ್ಷದಲ್ಲಿ ವೃದ್ಧಿ ಯಾಗುತ್ತಾ ಬರುವಂತೆ ಮಗು ಬೆಳೆದಂತೆಲ್ಲಾ ರಾಗಾದಿಗಳು ಬೆಳೆಯುತ್ತಾ ಬರುತ್ತವೆ.

**ಋಜೂನಾಮೇಕ ಏವಾಸ್ತಿ ಪರಮೋತ್ಸಾಹವರ್ಜನಮ್ ।**
**ಸ ಗುಣಾಲ್ಪತ್ವಮಾತ್ರತ್ವಾನ್ನರ್ಜುತ್ವೇನ ವಿರುದ್ಧ್ಯತೇ ॥ ೯೪ ॥**

ಋಜೂನಾಂ=ಋಜುವರ್ಗದಲ್ಲಿ ಸೇರಿರುವವರಿಗೂ ಪರಮೋತ್ಸಾಹ-ವರ್ಜನಂ=ಮೋಕ್ಷಕ್ಕಾಗಿ ಮಹಾಪ್ರಯತ್ನರಾಹಿತ್ಯರೂಪವಾದ ಏಕಏವ= ಒಂದೇ ದೋಷವು ಅಸ್ತಿ=ಇದೆ. ಸಃ=ಆ ದೋಷವಾದರೂ ಗುಣಾಲ್ಪತ್ವಮಾತ್ರೇಣ=ಉತ್ಸಾಹ ಎಂಬ ಗುಣದ ಅಲ್ಪತ್ವರೂಪವಾದುದರಿಂದ (ಅಲ್ಪಉತ್ಸಾಹರೂಪವಾದುದರಿಂದ) ಋಜುತ್ವೇನ=ಋಜುತ್ವಗುಣದಿಂದ ನ ವಿರುದ್ಧ್ಯತೇ=ವಿರುದ್ಧವಾಗುವುದಿಲ್ಲ.

**ಭಾವಾರ್ಥ**—ಬ್ರಹ್ಮಪದವಿಗೆ ಯೋಗ್ಯರಾದವರು ಋಜುಗಳು. ಋಜುಗಳು ಎಂದರೆ ದೋಷವಿಲ್ಲದವರು ಎಂದರ್ಥ. ಅಂತಹವರಲ್ಲೂ ಒಂದು ಚಿಕ್ಕ ದೋಷವಿದೆ. ಅವರು ಶಕ್ತರಾದರೂ ಮೋಕ್ಷಕ್ಕಾಗಿ ಅತಿಪ್ರಯತ್ನ ವನ್ನು ಮಾಡುವುದಿಲ್ಲ. ಇಂತಹ ಅಲ್ಪದೋಷವಿದ್ದರೂ ಬಹಳದೋಷಗಳು ಇಲ್ಲ, ಎನ್ನುವ ಅಭಿಪ್ರಾಯದಲ್ಲಿ ಋಜುಗಳು, ಎನ್ನಲಾಗುತ್ತದೆ. ಸ್ವಲ್ಪ ಹಣ ಇರುವವನನ್ನು ನಿರ್ಧನ, ಎಂದಂತೆ. ಅಥವಾ, ಮಹಾಯತ್ನಾಭಾವವು

ರಾಗಾದಿಗಳಂತೆ ಭಾವರೂಪವಾದ ದೋಷವಲ್ಲ. ಅಥವಾ, ಗುಣಾಭಾವ ರೂಪವೂ ಅಲ್ಲ. ಕಿಂತು ಅಲ್ಪ-ಉತ್ಸಾಹರೂಪ. ಆದ್ದರಿಂದ ಋಜುತ್ವವಿರೋಧ ಇಲ್ಲ.

**ಅತೋ ವಿಷ್ಣೌ ಪರಾ ಭಕ್ತಿಸ್ತದ್ಭಕ್ತೇಷು ರಮಾದಿಷು ।**
**ತಾರತಮ್ಯೇನ ಕರ್ತವ್ಯಾ ಪುರುಷಾರ್ಥಮಭೀಪ್ಸತಾ ॥ ೯೫ ॥**

ಅತಃ=ಆದ್ದರಿಂದ ವಿಷ್ಣೌ=ವಿಷ್ಣುವಿನಲ್ಲಿ ಪರಾಭಕ್ತಿಃ=ಅನನ್ಯ ಭಕ್ತಿಯು ತದ್‌ಭಕ್ತೇಷು ರಮಾದಿಷು=ವಿಷ್ಣುಭಕ್ತರಾದ ರಮಾಬ್ರಹ್ಮಾದಿಗಳಲ್ಲಿ ತಾರತಮ್ಯೇನ ಭಕ್ತಿಃ=ತಾರತಮ್ಯಾನುಸಾರವಾದ ಭಕ್ತಿಯೂ ಪುರುಷಾರ್ಥಂ ಅಭೀಪ್ಸತಾ=ಮೋಕ್ಷರೂಪವಾದ ಪುರುಷಾರ್ಥವನ್ನು ಬಯಸುವವನಿಂದ ಕರ್ತವ್ಯಾ=ಮಾಡಲ್ಪಡಬೇಕು.

ಭಾವಾರ್ಥ—ವಿಷ್ಣುಭಕ್ತ್ಯಭಾವ ದೋಷ. ಅದು ಮೋಕ್ಷಕ್ಕೆ ಪ್ರತಿಬಂಧಕ. ಮೋಕ್ಷಕ್ಕೆ ವಿರೋಧಿ. ಮೋಕ್ಷವಾಗಬೇಕಾದರೆ ಅದು ಇರಬಾರದು. ಅದರಂತೆ, ಭಕ್ತಿಯ ಅಭಾವ ಇರಬಾರದು, ಎಂದರೆ ಭಕ್ತಿ ಇರಬೇಕು, ಎಂದರ್ಥ. ವಿಷ್ಣುವಿನಲ್ಲಿ ಪರಾಭಕ್ತಿ ಇರಬೇಕು. ವಿಷ್ಣುಭಕ್ತರಾದ ರಮಾದಿಗಳಲ್ಲಿ ತಾರತಮ್ಯಾನುಸಾರಿಯಾದ ಭಕ್ತಿ ಇರಬೇಕು.

**ಸ್ವಾದರಃ ಸರ್ವಜಂತೂನಾಂ ಸಂಸಿದ್ಧೋ ಹಿ ಸ್ವಭಾವತಃ ।**
**ತತೋಽಧಿಕಃ ಸ್ವೋತ್ತಮೇಷು ತದಾಧಿಕ್ಯಾನುಸಾರತಃ ॥ ೯೬ ॥**

**ಕರ್ತವ್ಯೋ ವಾಸುದೇವಾಂತಂ ಸರ್ವಥಾ ಶುಭಮಿಚ್ಛತಾ ।**
**ನ ಕದಾಚಿತ್ ತ್ಯಜೇತ್ ತಂ ಚ ಕ್ರಮೇಣೈನಂ ವಿವರ್ಧಯೇತ್ ॥೯೭॥**

ಸ್ವಾದರಃ=ತಮ್ಮಲ್ಲಿ ಸ್ನೇಹವು ಸರ್ವಜಂತೂನಾಂ=ಎಲ್ಲ ಚೇತನ ವರ್ಗಕ್ಕೂ ಸ್ವಭಾವತಃ=ಉಪಕಾರಾದಿಗಳ ಅಪೇಕ್ಷೆ ಇಲ್ಲದೆ ಸ್ವಾಭಾವಿಕವಾಗಿ ಸಂಸಿದ್ಧೋ ಹಿ=ಸಿದ್ಧವಾಗಿದೆ. ಸ್ವೋತ್ತಮೇಷು=ತನಗಿಂತ ಉತ್ತಮರಲ್ಲಿ ತತೋಽಧಿಕಃ=ತನ್ನಲ್ಲಿರುವ ಸ್ನೇಹಕ್ಕಿಂತಲೂ ಹೆಚ್ಚು ಸ್ನೇಹವು ಕರ್ತವ್ಯಃ=

ಮಾಡಲ್ಪಡಬೇಕು. ಶುಭಮಿಚ್ಛತಾ=ಧ್ಯಾನಾದಿಸಾಧನಗಳನ್ನು ಬಯಸುವ ಸಾಧಕನಿಂದ ತದಾಧಿಕ್ಯಾನುಸಾರತಃ=ವ್ಯಕ್ತಿಗಳ ಉತ್ತಮತ್ವಕ್ಕೆ ಅನುಗುಣವಾಗಿ ವಾಸುದೇವಾಂತಂ=ಭಗವಂತನ ಪರ್ಯಂತವಾಗಿ ಸರ್ವಥಾ ಕರ್ತವ್ಯಃ= ಅವಶ್ಯ ಮಾಡಲ್ಪಡಬೇಕು. ಪರಮಾತ್ಮನಲ್ಲಿ ನಿರತಿಶಯಪ್ರೇಮವನ್ನು ಮಾಡಬೇಕು. ತಂ=ವಿಷ್ಣುವಿನಲ್ಲಿರುವ ಭಕ್ತಿಯನ್ನು ಕದಾಚಿತ್=ಎಂದೂ ನ ತ್ಯಜೇತ್=ಬಿಡಬಾರದು. ಏನಂ=ಈ ಭಕ್ತಿಯನ್ನು ವಿಷ್ಣುವಿನಲ್ಲಿ ಕ್ರಮೇಣ= ಕ್ರಮವಾಗಿ ವಿವರ್ಧಯೇತ್=ವೃದ್ಧಿಗೊಳಿಸಬೇಕು.

**ಸಮೇಷು ಸ್ವಾತ್ಮವತ್ ಸ್ನೇಹಃ ಸತ್ಸ್ವನ್ಯತ್ರ ತತೋ ದಯಾ ।**
**ಕಾರ್ಯೈವಮಾಪರೋಕ್ಷ್ಯೇಣ ದೃಶ್ಯತೇ ಕ್ಷಿಪ್ರಮೀಶ್ವರಃ ॥ ೯೮ ॥**

ಸಮೇಷು=ಸಮಾನಸ್ಕಂಧರಲ್ಲಿ ಸ್ವಾತ್ಮವತ್=ತನ್ನಲ್ಲಿ ಮಾಡುವಷ್ಟೇ ಸ್ನೇಹವನ್ನೂ ತತಃ ಅನ್ಯತ್ರ ಸತ್ಸು=ಉತ್ತಮ–ಸಮರನ್ನು ಬಿಟ್ಟು ಅಧಮರಾದ ಸಜ್ಜನರಲ್ಲಿ ದಯಾ ಕಾರ್ಯಾ=ದಯೆಯನ್ನು ತೋರಿಸಬೇಕು. ಏವಂ=ಹೀಗೆ ಮಾಡಿದಾಗ ಈಶ್ವರಃ=ಪರಮಾತ್ಮನು ಕ್ಷಿಪ್ರಂ=ಬೇಗನೆ ದೃಶ್ಯತೇ= ಕಾಣಲ್ಪಡುತ್ತಾನೆ.

ಭಾವಾರ್ಥ—ಉತ್ತಮರಲ್ಲಿ ತನಗಿಂತಲೂ ಹೆಚ್ಚಿನ ಸ್ನೇಹವನ್ನು ಮಾಡಬೇಕು. ಸಮಾನರಲ್ಲಿ ತನ್ನಷ್ಟೇ ಸ್ನೇಹವನ್ನು ಮಾಡಬೇಕು. ತನಗಿಂತ ಕೆಳಗಿನ ಸಜ್ಜನರಲ್ಲಿ ದಯೆಯನ್ನು ತೋರಬೇಕು. ಶ್ರವಣಾದಿಸಾಧನ ಗಳೊಂದಿಗೆ ಇದನ್ನು ಮಾಡುತ್ತಲಿದ್ದರೆ ದೇವರು ಬೇಗನೆ ಪ್ರತ್ಯಕ್ಷನಾಗುತ್ತಾನೆ.

**''ತತ್ ತಮೋಽಂಧಂ ವ್ರಜೇದ್ ವಿಷ್ಣುಸಮತ್ವಂ ಯೋಽನುಪಶ್ಯತಿ ।**
**ರಮಾಬ್ರಹ್ಮಶಿವಾದೀನಾಮಪಿ ಮುಕ್ತೌ ಕಥಂಚನ ॥ ೯೯ ॥**

**ಕಿಮುತಾಧಿಕ್ಯದೃಷ್ಟೇಸ್ತದ್ಗುಣಾಭಾವಮತೇರಪಿ ।**
**ದೋಷವೇತ್ತುರಭೇದಸ್ಯ ದ್ರಷ್ಟುರ್ದ್ರಷ್ಟುಸ್ತಥೋಭಯೋಃ '' ॥ ೧೦೦ ॥**

**ಇತ್ಯಾಹ ಸಚ್ಛ್ರುತಿಸ್ತೇನ ಸಂಪ್ರೋಕ್ತಗುಣಸಂಯುತಃ (ತಮ್)।**
**ಉಪಾಸೀತ ಹರಿಂ ದೃಷ್ಟ್ವಾ ಮುಕ್ತಿಸ್ತೇನೈವ ಜಾಯತೇ ॥ ೧೦೧ ॥**

ಅಜ್ಞರಲ್ಲಿ ಉಪೇಕ್ಷೆಯನ್ನೂ ವಿಷ್ಣುದ್ವೇಷಿಗಳಲ್ಲಿ ವಿರೋಧವನ್ನೂ ಮಾಡಬೇಕು. ''ತತ್=ಪ್ರಸಿದ್ಧವಾದ ಅಧಂತಮಃ=ಅಂಧಂತಮಸ್ಸಿಗೆ ವ್ರಜೇತ್=ಹೋಗುತ್ತಾನೆ, ಯಃ=ಯಾರು ರಮಾ–ಬ್ರಹ್ಮ– ಶಿವಾದೀನಾಮಪಿ=ಲಕ್ಷ್ಮೀದೇವ, ಬ್ರಹ್ಮದೇವ, ಶಿವಾದಿದೇವತೆಗಳಿಗೆ ವಿಷ್ಣುಸಮತ್ವಂ=ವಿಷ್ಣುವಿಗೆ ಸಮಾನತೆಯನ್ನು ಮುಕ್ತೌ=ಮೋಕ್ಷದಲ್ಲೂ ಕಥಂಚನ=ಯಾವುದೇ ಧರ್ಮದಿಂದ ಪಶ್ಯತಿ=ತಿಳಿಯುವನು. ಆಧಿಕ್ಯದೃಷ್ಟೇಃ=ರಮಾದಿಗಳನ್ನು ವಿಷ್ಣುವಿಗಿಂತಲೂ ಮಿಗಿಲಾದವರನ್ನಾಗಿ ತಿಳಿದರೆ, ತದ್ಗುಣಾಭಾವಮತೇರಪಿ=ಯಾವುದೇ ಗುಣಗಳು ವಿಷ್ಣುವಿನಲ್ಲಿ ಇಲ್ಲ, ಎಂದು ತಿಳಿದರೂ ಕಿಮುತ=ಅಂಧಂತಮಸ್ಸು ಆಗುವುದೆಂದು ಇನ್ನೇನು ಹೇಳಬೇಕು? ದೋಷವೇತ್ತುಃ=ವಿಷ್ಣುವಿನಲ್ಲಿ ದೋಷಗಳನ್ನು ತಿಳಿದವನಿಗೆ ಅಭೇದಸ್ಯ=ಜೀವ ಮತ್ತು ಜಡಗಳಿಂದ ಅಭೇದದ ದ್ರಷ್ಟುಃ=ತಿಳುವಳಿಕೆ ಇರುವವನು ತಥಾ=ಹಾಗೆಯೇ ಉಭಯೋಃ=ಭೇದಾಭೇದಗಳ ದ್ರಷ್ಟುಃ=ದರ್ಶನವುಳ್ಳವನು ತಮೋಂಧಂ ವ್ರಜೇದಿತಿ ಕಿಮುತ=ಅಂಧಂತಮಸ್ಸಿಗೆ ಹೋಗುವನೆಂದು ಇನ್ನೇನು ಹೇಳಬೇಕು?''

ಸಚ್ಛ್ರುತಿಃ=ಶ್ರುತಿಯು ಇತ್ಯಾಹ=ಹೀಗೆ ಹೇಳುತ್ತದೆ. ತೇನ=ಆದ್ದರಿಂದ ಸಂಪ್ರೋಕ್ತಗುಣಸಂಯುತಃ=ಹಿಂದೆ ಹೇಳಿದ ಹರಿಭಕ್ತಿ, ಯಮನಿಯಮಾದಿ ಗುಣಗಳಿಂದ ಕೂಡಿದವನಾಗಿ ಹರಿಂ=ವಿಷ್ಣುವನ್ನು ಉಪಾಸೀತ=ಉಪಾಸನೆ ಮಾಡಬೇಕು. ತೇನೈವ=ಅದೇ ಉಪಾಸಕನೆಯಿಂದ ಹರಿಂ ದೃಷ್ಟ್ವಾ=ಶ್ರೀಹರಿಯನ್ನು ನೋಡಿ ಮುಕ್ತಿಃ=ಮೋಕ್ಷವು ಜಾಯತೇ=ಉಂಟಾಗುತ್ತದೆ.

**ಭಾವಾರ್ಥ**—''ವಿಷ್ಣುವು ರಮಾ–ಬ್ರಹ್ಮಾದಿದೇವತೆಗಳಿಗೆ ಸಮಾನ ಎಂದು ತಿಳಿದರೇ ಅಂಧಂತಮಸ್ಸಾಗುತ್ತದೆ. ಅಂದಮೇಲೆ, ಅವರು ವಿಷ್ಣುವಿಗಿಂತಲೂ ಉತ್ತಮರು ಎಂದು ತಿಳಿದರೆ ತಮಸ್ಸಾಗುತ್ತದೆ, ಎಂದು ಹೇಳಲೇ ಬೇಕಾಗಿಲ್ಲ. ಆದರಂತೆ ವಿಷ್ಣು ನಿರ್ಗುಣ, ಅವನಲ್ಲಿ ಉತ್ಪತ್ತ್ಯಾದಿದೋಷಗಳಿವೆ, ಅವನು ಜೀವ–ಜಡಗಳಿಂದ ಅಭಿನ್ನ ಅಥವಾ ಭಿನ್ನಾಭಿನ್ನ ಎಂದು ತಿಳಿದರೂ ಇದೇ ಗತಿ''. ಹೀಗೆ ಶ್ರುತಿಯು ಹೇಳುತ್ತದೆ. ಸಾಧಕನಲ್ಲಿರುವ ರಾಗಾದಿ ದೋಷಗಳು ಸಂಸಾರಕ್ಕೆ ಕಾರಣವಾದರೆ ಇಂತಹ ವಿಪರೀತಜ್ಞಾನವು

ನಿತ್ಯನರಕಪ್ರಾಪ್ತಿಗೆ ಕಾರಣ. ಆದ್ದರಿಂದ ಇಂತಹ ದೋಷಗಳಿಂದ ರಹಿತನಾಗಿ ಪೂರ್ವೋಕ್ತ ಗುಣಗಳಿಂದ ಯುಕ್ತನಾದ ಸಾಧಕನು ಶ್ರೀಹರಿಯನ್ನು ಧ್ಯಾನಿಸಿ ಪ್ರತ್ಯಕ್ಷೀಕರಿಸಿ ಕೊಳ್ಳುತ್ತಾನೆ.

**ದ್ವೇಷದಿಂದ ಮೋಕ್ಷವಿಲ್ಲ**

**ದ್ವೇಷಾದ್ ಯನ್ಮುಕ್ತಿಕಥನಂ ಶ್ರುತಿವಾಕ್ಯವಿರೋಧಿ ತತ್ ॥ ೧೦೨ ॥**

**ರಿಪವೋ ಯೇ ತು ರಾಮಸ್ಯ ವಿಮುಖತ್ವಾನ್ನಿರಾಮಿಣಃ ।**
**ಅಭಿದ್ರೋಹಪದೇ ನಿತ್ಯಮಂಧೇತಮಸಿ ತೇ ಸ್ಥಿತಾಃ ॥ ೧೦೩ ॥**

**''ಹರಿದ್ವಿಷಸ್ತಮೋ ಯಾಂತಿ ಯೇ ಚೈವ ತದಭೇದಿನಃ ।**
**ತನ್ನಿರ್ಗುಣತ್ವವೇತ್ತಾರಸ್ತಸ್ಯ ದೋಷವಿದೋಽಪಿ ಚ'' ॥ ೧೦೪ ॥**

ದ್ವೇಷಾತ್=ಹರಿದ್ವೇಷದಿಂದ ಯತ್=ಯಾವ ಮುಕ್ತಿಕಥನಂ= ಮುಕ್ತಿಯನ್ನು ಹೇಳುವ ವಾಕ್ಯವಿದೆಯೋ ತತ್=ಅದು ಶ್ರುತಿವಾಕ್ಯವಿರೋಧಿ= 'ಮಾನಸ್ತೇಭ್ಯೋ...'' ಇತ್ಯಾದಿ ವೇದವಾಕ್ಯಕ್ಕೆ ವಿರುದ್ಧ. ಆ ಶ್ರುತಿಯ ಅರ್ಥ–ಯೇತು=ಯಾರು ವಿಮುಖತ್ವಾತ್=ರಾಮನಿಗೆ ವಿಮುಖರಾದುದ ರಿಂದ ನಿರಾಮಿಣಃ=ರಾಮನಿಂದ ದೂರಸರಿದವರೋ ಅವರು ರಾಮಸ್ಯ= ರಾಮನಿಗೆ ರಿಪವಃ=ಶತ್ರುಗಳು. ಇದು ಶ್ರುತಿಯಲ್ಲಿರುವ 'ನಿರಾಮಿಣೋ ರಿಪವಃ' ಎಂಬ ಪದಗಳ ಅರ್ಥ. ಅಭಿದ್ರೋಹಪದೇ, ಎನ್ನುವ ಶ್ರುತಿಗತಪದದ ಅರ್ಥ–ನಿತ್ಯಂ ಅಂಧೇ ತಮಸಿ=ಸದಾ ಅಂಧಂತಮಸ್ಸಿನಲ್ಲಿ ಎಂದು. ತೇ ಸ್ಥಿತಾಃ=ಅಂತಹವರು (ತಮಸ್ಸಿನಲ್ಲೇ) ಇರುತ್ತಾರೆ. (ಇದು ಶ್ರುತಿಗೆ ಸೇರಿಸಬೇಕಾದ ಅಂಶ.)

ಇದು ಇನ್ನೊಂದು ಪ್ರಮಾಣ– ಹರಿದ್ವಿಷಃ=ಹರಿದ್ವೇಷಿಗಳು ತಮೋ ಯಾಂತಿ=ತಮಸ್ಸಿನಲ್ಲಿ ಬೀಳುತ್ತಾರೆ. ಯೇ ಚೈವ=ಯಾರಾದರೋ ತದಭೇದಿನಃ=ವಿಷ್ಣುವಿಗೆ ಜೀವಾಭೇದವನ್ನು ಹೇಳುವರೋ ತನ್ನಿರ್ಗುಣತ್ವ- ವೇತ್ತಾರಃ=ದೇವರಿಗೆ ಗುಣಗಳೇ ಇಲ್ಲ, ಎನ್ನುವರೋ, ತಸ್ಯ=ದೇವರಿಗೆ ದೋಷವಿದೋಽಪಿ ಚ=ದೋಷವನ್ನು ತಿಳಿಯುವರೋ ಅವರೆಲ್ಲರೂ ತಮಸ್ಸಿಗೆ ಹೋಗುತ್ತಾರೆ.

ಭಾವಾರ್ಥ—'ದ್ವೇಷಾತ್ ಚೈದ್ಯಾದಯೋ ನೃಪಾಃ' ಎಂಬ ಭಾಗವತ ವಾಕ್ಯವು ಶಿಶುಪಾಲಾದಿಗಳು ಹರಿದ್ವೇಷದಿಂದಲೇ ಮೋಕ್ಷಪಡೆದರು, ಎನ್ನುತ್ತದೆ. ಈ ವಾಕ್ಯ ಶ್ರುತಿಗೆ ವಿರುದ್ಧ. ವಿದ್ಯಾದೇವತೆ ವಾಯುದೇವನಲ್ಲಿ ಮಾಡುವ ಪ್ರಾರ್ಥನೆ ವೇದದಲ್ಲಿ ಹೀಗಿದೆ—

ಮಾನಸ್ತೇನೇಭ್ಯೋ ಯೇ ಅಭಿದ್ರುಹಸ್ಪದೇ ।
ನಿರಾಮಿಣೋ ರಿಪವೋऽನ್ನೇಷು ಜಗೃಧುಃ ॥

ಇಲ್ಲಿರುವ ನಿರಾಮಿಣಃ ಎಂಬ ಪದಕ್ಕೆ ಭಗವಂತನಿಂದ ವಿಮುಖರಾದವರು, ಎಂದರ್ಥ. (ರಾಮಃ=ರಮಣಂ. ತದಸ್ಯಾಸ್ತೀತಿ ರಾಮೀ= ಭಗವಾನ್, ತಸ್ಮಾತ್ ನಿಷ್ಕ್ರಾಂತಾಃ=ನಿರಾಮಿಣಃ) ಅಭಿದ್ರುಹಸ್ಪದೇ ಎಂದರೆ ಅಂಧಂತಮಸ್ಸು. ಅನ್ನೇಷು ಜಗೃಧುಃ ಎಂದರೆ ಭೋಗರತರು. ''ಪರಮಾತ್ಮನಿಂದ ವಿಮುಖರಾಗಿದ್ದು ಭೋಗರತರಾದವರು ಅಂಧಂತಮಸ್ಸಿಗೆ ಹೋಗುತ್ತಾರೆ, ಅಂತಹವರಿಗೆ ನಮ್ಮನ್ನು ಉಪದೇಶಿಸಬೇಡ'' ಎಂದು ಶ್ರುತಿಯ ಅರ್ಥ.

**ಇತ್ಯಾದಿಶ್ರುತಿಸಂದರ್ಭಾದ್ ದ್ವೇಷಿಣಸ್ತಮ ಈಯತೇ ॥ ೧೦೫ ॥**

ಇದೇ ಮೊದಲಾದ ವೇದವಾಕ್ಯಗಳಿಂದ ಭಗವದ್‌ದ್ವೇಷಿಗಳಿಗೆ ತಮಸ್ಸಾಗುತ್ತದೆ, ಎಂದೇ ತಿಳಿಯುತ್ತದೆ.

**ಹಿರಣ್ಯಕಶಿಪುಶ್ಚಾಪಿ ಭಗವನ್ನಿಂದಯಾ ತಮಃ ।**
**ವಿವಿಕ್ಷುರತ್ಯಗಾತ್ ಸೂನೋಃ ಪ್ರಹ್ಲಾದಸ್ಯಾನುಭಾವತಃ ॥ ೧೦೬ ॥**

**ಯದನಿಂದತ್ ಪಿತಾ ಮಹ್ಯಂ ತ್ವದ್ಭಕ್ತೇ ಮಯಿ ಚಾಘವಾನ್ ।**
**ತಸ್ಮಾತ್ ಪಿತಾ ಮೇ ಪೂಯೇತ ದುರಂತಾದ್ ದುಸ್ತರಾದಘಾತ್ ॥೧೦೭**

**'ನಿಂದಾಂ ಭಗವತಃ ಶೃಣ್ವನ್ ತತ್ಪರಸ್ಯ ಜನಸ್ಯ ವಾ ।**
**ತತೋ ನಾಪೈತಿ ಯಃ ಸೋऽಪಿ ಯಾತ್ಯಧಃ ಸುಕೃತಾಚ್ಚ್ಯುತಃ' ॥೧೦೮॥**

**'ಅವಜಾನಂತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಮ್ ।**
**ಪರಂ ಭಾವಮಜಾನಂತೋ ಮಮ ಭೂತಮಹೇಶ್ವರಮ್ ॥ ೧೦೯ ॥**

ಮೋಘಾಶಾ ಮೋಘಕರ್ಮಾಣೋ ಮೋಘಜ್ಞಾನಾ ವಿಚೇತಸಃ ।
ರಾಕ್ಷಸೀಮಾಸುರೀಂ ಚೈವ ಪ್ರಕೃತಿಂ ಮೋಹಿನೀಂ ಶ್ರಿತಾಃ ॥ ೧೧೦ ॥

ಮಾಮಾತ್ಮಪರದೇಹೇಷು ಪ್ರದ್ವಿಷಂತೋಽಭ್ಯಸೂಯಕಾಃ ।
ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ ॥ ೧೧೧ ॥

ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವ ಯೋನಿಷು ।
ಆಸುರೀಂ ಯೋನಿಮಾಪನ್ನಾ ಮೂಢಾ ಜನ್ಮನಿಜನ್ಮನಿ ।
ಮಾಮಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂ
ಗತಿಮ್' ॥ ೧೧೨ ॥

'ಯೋ ದ್ವಿಷ್ಯಾದ್ ವಿಬುಧಶ್ರೇಷ್ಠಂ ದೇವಂ ನಾರಾಯಣಂ ಪ್ರಭುಮ್ ।
ಕಥಂ ಸ ನ ಭವೇದ್ ದ್ವೇಷ್ಯ ಆಲೋಕಾಂತಸ್ಯ ಕಸ್ಯಚಿತ್' ॥ ೧೧೩ ॥

'ಯೋ ದ್ವಿಷ್ಯಾದ್ ವಿಬುಧಶ್ರೇಷ್ಠಂ ದೇವಂ ನಾರಾಯಣಂ ಪ್ರಭುಮ್ ।
ಮಜ್ಜಂತಿ ಪಿತರಸ್ತಸ್ಯ ನರಕೇ ಶಾಶ್ವತೀಃ ಸಮಾಃ' ॥ ೧೧೪ ॥

1. ಹಿರಣ್ಯಕಶಿಪುಶ್ಚಾಪಿ=ಹಿರಣ್ಯಕಶಿಪುವೂ ಕೂಡ ಭಗವನ್ನಿಂದಯಾ=ಭಗವಂತನನ್ನು ನಿಂದೆ ಮಾಡಿದ ಕಾರಣದಿಂದಾಗಿ ತಮಃ=ಅಂಧಂತಮಸ್ಸನ್ನು ವಿವಿಕ್ಷುಃ=ಪ್ರವೇಶಿಸಬೇಕಾಗಿದ್ದವನು ಸೂನೋಃ ಪ್ರಹ್ಲಾದಸ್ಯ=ಮಗನಾದ ಪ್ರಹ್ಲಾದನ ಅನುಭಾವತಃ=ಭಗವದ್ಭಕ್ತಿಯ ಪ್ರಭಾವದಿಂದ ಅತ್ಯಗಾತ್=ನರಕವನ್ನು ದಾಟಿನಿಂತನು. (ನರಕಕ್ಕೆ ಹೋಗಲಿಲ್ಲ.)

2. ಇದು ಪ್ರಹ್ಲಾದರಾಜರು ಭಗವಂತನಲ್ಲಿ ಮಾಡಿದ ಪ್ರಾರ್ಥನೆ–ಯತ್=ಯಾವ ಕಾರಣದಿಂದ ಪಿತಾ=ನನ್ನ ತಂದೆಯಾದ ಹಿರಣ್ಯಕಶಿಪುವು ಮಹ್ಯಂ=ನನ್ನ ನಿಮಿತ್ತದಿಂದ ಅನಿಂದತ್=ನಿನ್ನನ್ನು ನಿಂದಿಸಿದನೋ ತ್ವದ್‌ಭಕ್ತೇ ಚ ಮಯಿ=ನಿನ್ನ ಭಕ್ತನಾದ ನನ್ನಲ್ಲಿ ಅಘವಾನ್=ಕೇಡುಬಗೆದು ಅಪರಾಧಿಯಾಗಿರುವನೋ ಮೇ ಪಿತಾ=ನನ್ನ ತಂದೆಯು ತಸ್ಮಾತ್=ವಿಷ್ಣು ವೈಷ್ಣವ ನಿಂದೆಯಿಂದಾದ ದುರಂತಾತ್=ದುಃಖಕಾರಕವಾದ, ದುಸ್ತರಾತ್=ಪರಿಹರಿಸಲಾಗದ ಅಘಾತ್=ಪಾಪದಿಂದ ಪೂಯೇತ=ವಿಮುಕ್ತನಾಗಿ ಪವಿತ್ರನಾಗಲಿ.

ಇದರಿಂದ ಹಿರಣ್ಯಕಶಿಪು ಭಗವದ್ಭಕ್ತನಿಗೆ ಮಾಡಿದ ಅಪರಾಧವೂ ನರಕಸಾಧನ, ಎಂದು ತಿಳಿಯಬಹುದು.

3.ಭಗವತಃ ನಿಂದಾಂ=ಭಗವಂತನ ನಿಂದನೆಯನ್ನು, ತತ್ಪರಸ್ಯ ಜನಸ್ಯವಾ=ಭಗವದ್ಭಕ್ತಜನರದ್ದಾದರೂ ನಿಂದಾಂ=ನಿಂದನೆಯನ್ನು ಶ್ರುಣ್ವನ್=ಕೇಳಿಸಿಕೊಂಡವನು ತತಃ=ನಿಂದನೆ ನಡೆವ ಸ್ಥಳದಿಂದ ಯಃ= ಯಾರು ನಾಪೈತಿ=ದೂರಹೋಗುವುದಿಲ್ಲವೋ ಸೋಽಪಿ= ಅಂತಹವನೂ ಸುಕೃತಾತ್=ಪುಣ್ಯದಿಂದ ಚ್ಯುತಃ=ಭ್ರಷ್ಟನಾಗಿ ಅಧಃ ಯಾತಿ=ಅಧೋಗತಿಗೆ ಇಳಿಯುತ್ತಾನೆ.

ನಿಂದೆಯನ್ನು ಕೇಳಿದವನಿಗೇ ಅಧೋಗತಿಯಾದರೆ ಮಾಡಿದವನಿಗೆ ಅದಕ್ಕಿಂತಲೂ ಹೆಚ್ಚಿನ ಅನರ್ಥವು ನಿಶ್ಚಿತ.

4.ಮೂಢಾಃ=ಮೂರ್ಖರು ಯೇ=ಯಾರು ಮಾನುಷೀಂ=ಮನುಷ್ಯ ಸದೃಶವಾದ ತನುಂ=ದೇಹವನ್ನು ಆಶ್ರಿತಂ=ಹೊಂದಿರುವ ಮಾಂ=ನನ್ನನ್ನು ಮಮ=ನನ್ನ ಪರಂಭಾವಂ=ಸರ್ವೋತ್ತಮತ್ವವನ್ನು ಭೂತ–ಮಹೇಶ್ವರಂ= ಕಾಲತಃ, ದೇಶತಃ, ಗುಣತಃ ಅನಂತನನ್ನಾಗಿ ಅಜಾನಂತಃ=ತಿಳಿಯದವರಾಗಿ ಅವಜಾನಂತಿ=ನಿಂದಿಸುವರೋ ಅಂತಹವರು ಮೋಘಾಶಾಃ=ಅಭಿಲಾಷೆ ಯಿಂದ ಭ್ರಷ್ಟರಾಗಿ, ಮೋಘಕರ್ಮಾಣಃ=ಮಾಡಿದ ಕರ್ಮಗಳೆಲ್ಲ ವ್ಯರ್ಥ ವಾದವರಾಗಿ ಮೋಘಜ್ಞಾನಾಃ=ವಿಫಲಜ್ಞಾನರಾಗಿ ವಿಚೇತಸಃ=ದಿಕ್ಕಿಲ್ಲದವ ರಾಗಿ ಆಗುತ್ತಾರೆ. ಅವರು ಮೋಹಿನೀಂ=ಮೋಹಕವಾದ ರಾಕ್ಷಸೀಂ=ರಾಕ್ಷಸ ಸಂಬಂಧಿಯಾದ ಅಥವಾ ಆಸುರೀಂ=ಅಸುರಸಂಬಂಧಿಯಾದ ಪ್ರಕೃತಿಂ= ಸ್ವಭಾವವನ್ನು ಶ್ರಿತಾಃ=ಆಶ್ರಯಿಸಿದವರಾಗಿ ಇರುತ್ತಾರೆ. ಅಂತಹವರಿಗೆ ಸುಖಲೇಶವೂ ಇಲ್ಲ, ಎಂದರ್ಥ.

ಆತ್ಮ–ಪರದೇಹೇಷು=ತಮ್ಮ ಮತ್ತು ಇನ್ನೊಬ್ಬರ ದೇಹಗಳಲ್ಲಿ ಪ್ರೇರಕ ನಾಗಿರುವ ಮಾಂ=ನನ್ನನ್ನು ಪ್ರದ್ವಿಷಂತಃ=ದ್ವೇಷಮಾಡುತ್ತಾ, ಅಭ್ಯಸೂಯಕಾಃ=ಅಸೂಯೆಪಡುವವರೋ ಅಹಂ=ನಾನು ತಾನ್=ಅಂತಹ ದ್ವಿಷತಃ=ದ್ವೇಷಿಸುವ, ಕ್ರೂರಾನ್=ದಯೆ ಇಲ್ಲದ ಅಶುಭಾನ್=ಕೆಟ್ಟವರಾದ ನರಾಧಮಾನ್=ಅಧಮಜನರನ್ನು ಸಂಸಾರೇಷು=ದೇಹಗಳಲ್ಲಿ ಅಂದರೆ

ಆಸುರೀಷ್ವೇವ ಯೋನಿಷು=ಅಸುರ ಜನ್ಮದಲ್ಲಿಯೇ ಕ್ಷಿಪಾಮಿ=ಹಾಕುತ್ತೇನೆ. ಮೂಢಾಃ=ಅಂತಹ ಮೂರ್ಖರು ಜನ್ಮನಿ ಜನ್ಮನಿ=ಪ್ರತಿಜನ್ಮದಲ್ಲೂ ಆಸುರೀಂ ಯೋನಿಂ=ಅಸುರಜನ್ಮವನ್ನು ಆಪನ್ನಾಃ=ಹೊಂದಿದವರಾಗಿ ಮಾಂ=ನನ್ನನ್ನು ಅಪ್ರಾಪ್ಯೈವ=ಎಂದೂ ಹೊಂದದೆ, ಕೌಂತೇಯ=ಕುಂತೀಪುತ್ರನಾದ ಅರ್ಜುನನೇ, ತತಃ=ಆಮೇಲೆ ಅಧಮಾಂ ಗತಿಂ=ನೀಚಗತಿಯನ್ನು ಯಾಂತಿ= ಹೊಂದುತ್ತಾರೆ.

5. ಯಃ=ಯಾರು ವಿಬುಧಶ್ರೇಷ್ಠಂ=ದೇವತಾಶ್ರೇಷ್ಠನಾದ ದೇವಂ= ಕ್ರೀಡಾದಿಗುಣಶಾಲಿಯಾದ ಪ್ರಭುಂ=ಸ್ವಾಮಿಯಾದ ನಾರಾಯಣಂ= ಶ್ರೀಮನ್ನಾರಾಯಣನನ್ನು ದ್ವಿಷ್ಯಾತ್=ದ್ವೇಷಿಸುವನೋ ಸಃ=ಅಂತಹವನು ಕಸ್ಯಚಿತ್=ಯಾರೋ ಒಬ್ಬ ಆಲೋಕಾಂತಸ್ಯ=ಚಂಡಾಲನಿಗೂ (ಲೋಕಃ= ಜನಃ, ತಸ್ಯ ಅಂತಃ=ಚಂಡಾಲಾದಿಃ, ತತ್ಪರ್ಯಂತಸ್ಯ–ಸುಧಾ.) ದ್ವೇಷ್ಯಃ= ದ್ವೇಷಯೋಗ್ಯನು ಕಥಂ ನ ಭವೇತ್=ಹೇಗೆ ಆಗದಿದ್ದಾನು?

6. ಯಃ=ಯಾರು ವಿಬುಧಶ್ರೇಷ್ಠಂ, ದೇವಂ, ಪ್ರಭುಂ ನಾರಾಯಣಂ ಯೋ ದ್ವಿಷ್ಯಾತ್=ನಾರಾಯಣನನ್ನು ಯಾರು ದ್ವೇಷಿಸುವರೋ ತಸ್ಯ ಪಿತರಃ=ಅವನ ಪಿತೃಗಳು ನರಕೇ=ನರಕದಲ್ಲಿ ಶಾಶ್ವತೀಃ ಸಮಾಃ=ಶಾಶ್ವತ ಕಾಲಪರ್ಯಂತ ಮಜ್ಜಂತಿ=ಮುಳುಗುತ್ತಾರೆ.

**ಇತ್ಯಾದಿವಾಕ್ಯಸಂದೋಹಾದ್ ದ್ವೇಷಿಣಸ್ತಮ ಏವ ತು ॥ ೧೧೫ ॥**

ಇತ್ಯಾದಿವಾಕ್ಯಸಂದೋಹಾತ್=ಈ ಮೊದಲಾದ ವಾಕ್ಯಸಮೂಹ ದಿಂದಾಗಿ ದ್ವೇಷಿಣಃ=ವಿಷ್ಣುದ್ವೇಷಿಗಳಿಗೆ ತಮ ಏವ ತು=ತಮಸ್ಸೇ ಗತಿ, ಎಂದು ತಿಳಿಯುತ್ತದೆ.

**ಭಾವಾರ್ಥ**—ದ್ವೇಷದಿಂದ ಅನರ್ಥವಿದೆ, ಮೋಕ್ಷವಿಲ್ಲ, ಆದ್ದರಿಂದ ಮೋಕ್ಷಕ್ಕಾಗಿ ಶಮ–ದಮಾದಿ–ಅನುಷ್ಠಾನ, ಭಗವದ್ಭಕ್ತಿ, ಧ್ಯಾನಾದಿಗಳು ಅವಶ್ಯಕರ್ತವ್ಯಗಳು.

**ಇಲ್ಲಿಗೆ ಅನುಬಂಧಾದ್ಯಧಿಕರಣ ಮುಗಿಯಿತು.**

# ವಿದ್ಯಾಧಿಕರಣ

## 'ಓಂ ವಿದ್ಯೈವ ತು ನಿರ್ಧಾರಣಾತ್ ಓಂ'

ಈ ಅಧಿಕರಣ ಅನುಬಂಧಾದ್ಯಧಿಕರಣಕ್ಕಿಂತಲೂ ಮೊದಲಿದೆ. ಆದರೆ ಉಪಾಸನೆಯ ಸ್ವರೂಪವು ಅನುಬಂಧಾದ್ಯಧಿಕರಣದಲ್ಲಿ ಸಿದ್ಧವಾದರೆ ಮಾತ್ರ ಅದರ ಸಾರ್ಥಕ್ಯವನ್ನು ಸಮರ್ಥಿಸುವ ವಿದ್ಯಾಧಿಕರಣವು ಸಂಗತವಾಗುತ್ತದೆ. ಅದಕ್ಕಾಗಿ ಮೊದಲು ಬಂದ ವಿದ್ಯಾಧಿಕರಣವನ್ನು ಆಮೇಲೆ ವ್ಯಾಖ್ಯಾನಿಸಲಾಗಿದೆ.

ಮೋಕ್ಷವೇ ಇಲ್ಲವಾದುದರಿಂದ ಅದಕ್ಕಾಗಿ ಸಾಧನಾನುಷ್ಠಾನ ವ್ಯರ್ಥ, ಎನ್ನುವ ಚಾರ್ವಾಕಮತದ ಆಕ್ಷೇಪವನ್ನು ಅನುವ್ಯಾಖ್ಯಾನದಲ್ಲಿ ನಿರಾಕರಿಸಲಾಗಿದೆ.

**ಚಾರ್ವಾಕಮತನಿರಾಸ**

**ನೈವ ಮೋಕ್ಷ ಇತಿ ಪ್ರಾಹುರ್ಲೋಕಾಯತಮತೇ ಸ್ಥಿತಾಃ ।**
**ಭೋಗಃ ಶರೀರಪರ್ಯಂತಂ ಭಸ್ಮೀಭಾವಸ್ತತೋ ಭವೇತ್ ॥ ೧೧೬ ॥**

ನೈವ ಮೋಕ್ಷಃ=ಮೋಕ್ಷ ಎಂಬ ಪುರುಷಾರ್ಥವೇ ಇಲ್ಲ. ಇತಿ=ಹೀಗೆ ಲೋಕಾಯತಮತೇ ಸ್ಥಿತಾಃ=ಚಾರ್ವಾಕಮತಾವಲಂಬಿಗಳು ಪ್ರಾಹುಃ= ಹೇಳುತ್ತಾರೆ. ಭೋಗಃ=ವಿಷಯಭೋಗವೇ ಪುರುಷಾರ್ಥ. ಅದೂ ಶರೀರಪರ್ಯಂತಂ=ಶರೀರ ಇರುವವರೆಗೆ ಮಾತ್ರ. ತತಃ=ಶರೀರ ಪಾತವಾದರೆ ಭಸ್ಮೀಭಾವಃ ಭವೇತ್=ಭಸ್ಮವಾಗುತ್ತದೆ. ಇತಿ=ಹೀಗೆನ್ನುತ್ತಾರೆ. (ಮುಂದಿನ ಶ್ಲೋಕದಲ್ಲಿ ಇತಿಶಬ್ದವಿದೆ.) ಈ ಭೌತಿಕಶರೀರವು ನಾಶವಾದಮೇಲೆ ಆತ್ಮನಿಗೆ ಸ್ವರ್ಗ–ಮೋಕ್ಷಗಳು ಸಿಗಬೇಕು. ಆದರೆ ಶರೀರಬಿಟ್ಟು ಆತ್ಮ ಎನ್ನುವ ತತ್ತ್ವವಿಲ್ಲ. ಶರೀರ ನಾಶವಾಗಿದೆ. ಅಂದಮೇಲೆ ಸ್ವರ್ಗ–ಮೋಕ್ಷಗಳು ಯಾರಿಗೆ ಸಿಗಬೇಕು? ಎನ್ನುತ್ತಾರೆ ನಾಸ್ತಿಕರು.

**ಇತಿ ತತ್ ಕೇನ ಮಾನೇನ ದೃಷ್ಟಂ ಪ್ರತ್ಯಕ್ಷವಾದಿನಾ ।**
**ನಹಿ ಪ್ರತ್ಯಕ್ಷಮಾನೇನ ಮೋಕ್ಷಾಭಾವೋಽವಸೀಯತೇ ॥ ೧೧೭ ॥**

ಪ್ರತ್ಯಕ್ಷವಾದಿನಾ=ಪ್ರತ್ಯಕ್ಷ ಮಾತ್ರ ಪ್ರಮಾಣ ಎನ್ನುವ ನಾಸ್ತಿಕನಿಂದ ತತ್=ಮೋಕ್ಷವೇ ಇಲ್ಲ, ಎನ್ನುವ ವಿಷಯ ಕೇನ ಮಾನೇನ=ಯಾವ ಪ್ರಮಾಣ ದಿಂದ ದೃಷ್ಟಂ=ತಿಳಿಯಲ್ಪಟ್ಟಿತು?

**ಭಾವಾರ್ಥ**— ಚಾರ್ವಾಕ, ಸ್ವರ್ಗಾದಿಗಳು ಯಾವುದೂ ಇಲ್ಲ ಎನ್ನಬೇಕಾದರೂ ಅದಕ್ಕೊಂದು ಪ್ರಮಾಣವನ್ನು ಆಧಾರವನ್ನಾಗಿ ಕೊಡಬೇಕು. ಮೋಕ್ಷವಿದೆ ಎನ್ನಲು ಹೇಗೆ ಪ್ರಮಾಣ ಬೇಕೋ ಮೋಕ್ಷಾಭಾವನಿರ್ಣಯ ಮಾಡಬೇಕಾದರೂ ಒಂದು ಆಧಾರಬೇಕು. ಕಣ್ಣಿಗೆ ಕಾಣುವುದಿಲ್ಲ. ಆದ್ದರಿಂದ ಇಲ್ಲ ಎನ್ನುವಂತೆಯೂ ಇಲ್ಲ, ಕಣ್ಣಿಗೆ ಕಾಣದ ರುಚಿ ನಾಲಿಗೆಯಿಂದ ತಿಳಿದುಬರುವಂತೆ ಪಂಚೇಂದ್ರಿಯಗಳಿಗೆ ಗೋಚರವಾಗದ ಮೋಕ್ಷ, ದೇವರು ಮುಂತಾದ ಅಲೌಕಿಕತತ್ತ್ವಗಳು ಪ್ರಮಾಣಾಂತರಕ್ಕೆ ಗೋಚರವಾಗಿರಬಹುದು ಎಂಬ ಸಂದೇಹವೇ ಬರುತ್ತದೆ, ನಿರ್ಣಯವಾಗುವುದಿಲ್ಲ. ಏಕೆಂದರೆ, ದೇವರು, ಮೋಕ್ಷ ಮುಂತಾದ ಪ್ರಮೇಯಗಳು ಇವೆ, ಎಂದು ಅನೇಕ ವಾದಿಗಳು ಹೇಳುತ್ತಿದ್ದಾರೆ. ಅದಕ್ಕಾಗಿ ವ್ರತನಿಯಮಗಳನ್ನು ಮಾಡುತ್ತಾ ಕ್ಲೇಶಪಡುತ್ತಿದ್ದಾರೆ. ಇಷ್ಟಿದ್ದಮೇಲೆ, ಕಣ್ಣಿಗೆ ಕಾಣದ ಮಾತ್ರಕ್ಕೆ ಅವಾವುವೂ ಇಲ್ಲ, ಎಂದು ನಿರ್ಧರಿಸಲಾಗದು.

ಮೋಕ್ಷವೆಂದರೆ ದುಃಖ ಇಲ್ಲದ ಪೂರ್ಣಸುಖ. ಮತ್ತೊಬ್ಬರಲ್ಲಿರುವ ಇಂತಹ ಸುಖದ ಸಂವೇದನೆ ನಮಗೆ ಬರಲು ಸಾಧ್ಯವಿಲ್ಲ. ಆದ್ದರಿಂದ ಎಲ್ಲರಿಗೂ ದುಃಖವಿದೆ, ಪರಮಾನಂದ ಯಾರಿಗೂ ಇಲ್ಲ, ಎಂದು ಪ್ರತ್ಯಕ್ಷ ಮಾತ್ರದಿಂದ ನಿರ್ಧರಿಸಲಾಗದು.

**ಪೂರ್ವಪಕ್ಷ**— ಮೋಕ್ಷ ಇಲ್ಲ ಎನ್ನುವುದನ್ನು ಹೇಗೆ ನಿರ್ಧರಿಸಲಾಗದೋ ಮೋಕ್ಷವಿದೆ, ಎನ್ನುವುದನ್ನೂ ನಿಶ್ಚಯಮಾಡಲು ಸಾಧ್ಯವಿಲ್ಲ. ಪರಸುಖ ರೂಪವಾದ ಮೋಕ್ಷ ನಮ್ಮ ಅನುಭವಕ್ಕೆ ಬರಲು ಸಾಧ್ಯವಿಲ್ಲ. ಪ್ರತ್ಯಕ್ಷ ಬಿಟ್ಟು ಬೇರೆ ಪ್ರಮಾಣಗಳಿಲ್ಲ.

**ಸಿದ್ಧಾಂತ**— ಈ ಸಮಸ್ಯೆ ಇಲ್ಲ, ಪ್ರತ್ಯಕ್ಷ ಪ್ರಮಾಣದಿಂದಲೇ ಮೋಕ್ಷವಿದೆ, ಎಂದು ನಿರ್ಧರಿಸಬಹುದು—

**ಘಟತೇ ಮುಕ್ತಿದೃಷ್ಟಿಸ್ತು ಪುರುಷೇಣ ಮಹೀಯಸಾ ।**

**ನೇತಿ ವಕ್ತುರ್ಮಹತ್ತ್ವಂ ತು ಕಥಂಚನ ನ ವಿದ್ಯತೇ ॥ ೧೧೮ ॥**

ಮಹೀಯಸಾ=ಮಹಾತ್ಮನಾದ ಪುರುಷೇಣ=ಪುರುಷನಿಂದ ಅಂದರೆ ಅವನ ಪ್ರತ್ಯಕ್ಷದಿಂದಾಗಿ ಉಳಿದವರಿಗೆ ಮುಕ್ತಿದೃಷ್ಟಿಃ=ಮೋಕ್ಷ ಇದೆ ಎನ್ನುವ ನಿರ್ಧಾರವು ಘಟತೇ=ಉಂಟಾಗುತ್ತದೆ.

ಇದೇ ರೀತಿ ನಾಸ್ತಿಕವಾದಿ ಹೇಳಬಹುದು— ಸಾಮಾನ್ಯಜನರಿಗೆ ಮೋಕ್ಷಾಭಾವದ ಪ್ರತ್ಯಕ್ಷವು ಇಲ್ಲದಿದ್ದರೂ ಮಹಾತ್ಮನಾದ, ನಾಸ್ತಿಕಸಿದ್ಧಾಂತ ಪ್ರವರ್ತಕನಾದ ಆಚಾರ್ಯನಿಗೆ ಪ್ರತ್ಯಕ್ಷವಿದೆ. ಅವನ ಮಾತಿನಿಂದ ಉಳಿದವರಿಗೂ ಅದರ ನಿಶ್ಚಯವು ಬರುತ್ತದೆ, ಎಂದರೆ ಅದನ್ನು ನಿರಾಕರಿಸುತ್ತಾರೆ— ನೇತಿ ವಕ್ತುಃ=ಮೋಕ್ಷವೇ ಇಲ್ಲ, ಎನ್ನುವುದು ನನ್ನ ಪ್ರತ್ಯಕ್ಷಕ್ಕೆ ತಿಳಿದಿದೆ ಎಂದು ಹೇಳುವ ನಾಸ್ತಿಕಾಚಾರ್ಯನಿಗೆ ಕಥಂಚನ=ಯಾವುದೇ ರೀತಿಯ ಮಹತ್ವಂ= ನಮಗಿಂತ ಹೆಚ್ಚುಗಾರಿಕೆಯು ನವಿದ್ಯತೇ=ಇಲ್ಲ. ಅಂದಮೇಲೆ ಅವನು ಮಹಾತ್ಮನಂತೂ ಆಗಲಾರ.

**ಭಾವಾರ್ಥ—** ಮಹತ್ವ ಎಂದರೆ ಬೇರೆಯವರು ನೋಡಲಾಗದ ವಿಷಯಗಳನ್ನು ನೋಡುವ ಸಾಮರ್ಥ್ಯ, ಅದಕ್ಕೆ ಬೇಕಾದ ಅಸಾಧಾರಣ ಯೋಗ್ಯತೆ, ಸತ್ಯವಾದಿತ್ವ ಇವುಗಳು. ಇಂತಹ ಧರ್ಮಗಳು ನಾಸ್ತಿಕಾಚಾರ್ಯನಿಗೆ ಇದೆ, ಎನ್ನಲಾಗದು.

**ಸಾಧಯನ್ ಸರ್ವಸಾಮಾನ್ಯಂ ಕಥಮೇವ ವಿಶೇಷವಾನ್ ॥ ೧೧೯ ॥**

ಸರ್ವಸಾಮಾನ್ಯಂ=ಎಲ್ಲರೂ ಒಂದೇರೀತಿ, ಯಾರಿಗೂ ಅಲೌಕಿಕವಾದ ವಿಶೇಷಸಾಮರ್ಥ್ಯವೇ ಇಲ್ಲ ಎಂಬುದಾಗಿ ಸಾಧಯನ್=ಸಾಧಿಸುವ ನಾಸ್ತಿಕಾಚಾರ್ಯನು ಕಥಮೇವ=ಹೇಗೆ ತಾನೇ ವಿಶೇಷವಾನ್ ಸ್ಯಾತ್= ಉಳಿದವರಿಗಿಂತ ವಿಶೇಷಉಳ್ಳವನು ಆದಾನು?

**ಭಾವಾರ್ಥ—** ಉಳಿದವರಿಗೆ ಕಾಣದ ಮೋಕ್ಷಾಭಾವವು ನಾಸ್ತಿಕಾಚಾರ್ಯನಿಗೆ ತಿಳಿಯಬೇಕಾದರೆ ಅವನಲ್ಲಿ ಏನೋ ವಿಶೇಷಶಕ್ತಿ ಇದೆ, ಎನ್ನಬೇಕಾಗುತ್ತದೆ. ಆ ವಿಶೇಷಶಕ್ತಿ ತಪಸ್ಸಿನಿಂದಲೋ ಯೋಗಾನುಷ್ಠಾನ

ದಿಂದಲೋ ಬಂದಿರಬೇಕು. ಅಂತಹ ತಪ ಆದಿಗಳಲ್ಲಿ ನಾಸ್ತಿಕನಿಗೆ ನಂಬಿಕೆಯೇ ಇಲ್ಲ. ಆದ್ದರಿಂದ ಅವನಲ್ಲಿ, ಇತರರಲ್ಲಿ ಇಲ್ಲದ ಯಾವ ವಿಶೇಷವೂ ಇಲ್ಲ. ಎಲ್ಲರಂತೆ ಅವನೂ ಒಬ್ಬ. ಅಂದಮೇಲೆ ಅವನಿಗೆ ಇತರರಿಗೆ ಬಾರದ ಮೋಕ್ಷಾಭಾವದ ಪ್ರತ್ಯಕ್ಷ ಬರುವುದು ಸಾಧ್ಯವಿಲ್ಲ. ಅವನು ತನಗೆ ಅಂತಹ ಪ್ರತ್ಯಕ್ಷ ಇದೆ, ಎಂದು ಹೇಳಿದರೂ ನಂಬುವಂತಿಲ್ಲ.

ಈ ಸಮಸ್ಯೆ ಆಸ್ತಿಕವಾದಿಗಳಿಗಿಲ್ಲ. ಆಸ್ತಿಕವಾದದಲ್ಲಿ ಎಲ್ಲರೂ ಸಮಾನರಲ್ಲ.

**ದೃಶ್ಯಂತೇ ಪುರುಷಾ ಲೋಕೇ ಪರಾ(ವ)ಪರವಿದೋಽಪಿ ಚ ।**
**ಅಪರೋಕ್ಷದೃಶೋ ಯೋಗನಿಷ್ಠಾಶ್ಚಾಮಲಚಕ್ಷುಷಃ ॥ ೧೨೦ ॥**

**ಪ್ರತ್ಯಕ್ಷಂ ದೇವತಾಂ ದೃಷ್ಟ್ವಾ ತತ್ಪ್ರಸಾದಾಪ್ತಭೂತಯಃ ।**
**ಜ್ಞಾನವಿಜ್ಞಾನಪಾರಜ್ಞಾ ನಿಷಿದ್ಧ್ಯಂತೇ ಕಥಂ ನೃಭಿಃ ॥ ೧೨೧ ॥**

ಲೋಕೇ=ಈ ಭೂಮಂಡಲದಲ್ಲೇ ಪುರುಷಾಃ=ವಸಿಷ್ಠಾದಿಗಳಂತಹವರು ಪರಾವರವಿದಃ=ಪೂರ್ವಾಪರ ಕಾಲದಲ್ಲಿ ನಡೆಯಲಿರುವ, ನಡೆದ ಘಟನೆಗಳನ್ನು ತಿಳಿದಿರುವ ಅಪರೋಕ್ಷ ದೃಶಃ=ಭೂತ–ಭವಿಷ್ಯಗಳನ್ನು ಪ್ರತ್ಯಕ್ಷೀಕರಿಸಿಕೊಳ್ಳಬಲ್ಲ, ಯೋಗನಿಷ್ಠಾಃ=ಯೋಗನಿಷ್ಠೆಯಿಂದ ಬಂದ ವಿಶಿಷ್ಟವಾದ ಸಾಮರ್ಥ್ಯವನ್ನು ಪಡೆದ, ಅಮಲಚಕ್ಷುಷಃ= ದಿವ್ಯದೃಷ್ಟಿಯುಳ್ಳವರಾಗಿ ದೇವತಾಂ=ಪರದೇವತೆಯನ್ನು ಪ್ರತ್ಯಕ್ಷಂ ದೃಷ್ಟ್ವಾ=ಪ್ರತ್ಯಕ್ಷವಾಗಿ ಕಂಡು ತತ್‌ಪ್ರಸಾದಾಪ್ತಭೂತಯಃ=ಆ ದೇವತಾಪ್ರಸಾದದಿಂದ ಪಡೆದ ಐಶ್ವರ್ಯವುಳ್ಳವರಾಗಿ ಜ್ಞಾನ–ವಿಜ್ಞಾನ ಪಾರಜ್ಞಾಃ=ಸಕಲವಸ್ತುಗಳ ಸಾಮಾನ್ಯ–ವಿಶೇಷಜ್ಞಾನದ ದಡವನ್ನು ತಿಳಿದಿರುವವರಾಗಿ ದೃಶ್ಯಂತೇ=ಕಾಣಲ್ಪಡುತ್ತಾರೆ. ನೃಭಿಃ=ಮಂದಭಾಗ್ಯರಾದ ಜನರಿಂದ ಅಂತಹ ಮಹಾತ್ಮರು ಕಥಂ ನಿಷಿದ್ಧ್ಯಂತೇ=ಹೇಗೆ ತಾನೇ ಇಲ್ಲವೆಂದು ನಿರಾಕರಿಸಲ್ಪಟ್ಟಾರು.

**ಭಾವಾರ್ಥ**— ಆಸ್ತಿಕ್ಯವಾದದಲ್ಲಿ ಧರ್ಮ–ಕರ್ಮಾನುಷ್ಠಾನಗಳಿಗೆ ಬೆಲೆ ಇದೆ. ಅವುಗಳಿಂದಾಗಿ ಲೋಕಾತೀತವಾದ ಸಿದ್ಧಿಯನ್ನು ಪಡೆದ ವಸಿಷ್ಠ–ವಿಶ್ವಾಮಿತ್ರರಂತಹ ಮಹಾತ್ಮರಿದ್ದಾರೆ. ಅವರು ತ್ರಿಕಾಲಜ್ಞರು. ಯೋಗಸಿದ್ಧಿ

ಯನ್ನು ಸಂಪಾದಿಸಿದವರು. ಅದರಿಂದಾಗಿ ಅವರಲ್ಲಿ ದೇಶಾಂತರ–ಕಾಲಾಂತರದ ವಿಷಯಗಳನ್ನು ತಿಳಿಯುವ ಸಾಮರ್ಥ್ಯವಿದೆ. ದೇವರನ್ನು ಸಾಕ್ಷಾತ್ಕರಿಸಿಕೊಂಡು ಆ ದೇವತಾಪ್ರಸಾದದಿಂದ ಇತರರಲ್ಲಿ ಇಲ್ಲದ ಸಾಮರ್ಥ್ಯವನ್ನು ಅವರು ಗಳಿಸಿಕೊಂಡಿದ್ದಾರೆ. ಅಂತಹವರು ಬೀದಿಯಲ್ಲಿದ್ದು ಸಾಮಾನ್ಯರ ದೃಷ್ಟಿಗೆ ಬೀಳುವುದಿಲ್ಲ. ಆದ್ದರಿಂದ ನಾವು ನೋಡಿಲ್ಲ ಅನ್ನುವ ಮಾತ್ರದಿಂದ ಅವರನ್ನು ನಿರಾಕರಿಸುವಂತಿಲ್ಲ.

**ದೃಶ್ಯತೇ ಚಾತಿಮಾಹಾತ್ಮ್ಯಂ ತೇಷಾಮತಿಮಹೌಜಸಾಮ್ ।**
**ಯದಿ ತೇಽಪಿ ನಿಷಿದ್ಧ್ಯಂತೇ ಕಿಂ ನೋಕ್ತಿಸ್ತೇ ನಿಷಿದ್ಧ್ಯತೇ ॥ ೧೨ ॥**

ಅತಿಮಹೌಜಸಾಂ=ಲೋಕೋತ್ತರಪರಾಕ್ರಮವುಳ್ಳ ತೇಷಾಂ=ವಸಿಷ್ಠಾದಿಗಳ ಅತಿಮಾಹಾತ್ಮ್ಯಂ=ಶ್ರೇಷ್ಠವಾದ ಮಹತ್ವವು ದೃಶ್ಯತೇ=ತಿಳಿಯಲ್ಪಡುತ್ತದೆ. ಯದಿ=ಒಂದುವೇಳೆ ತೇಽಪಿ=ಅಂತಹವರೂ ನಿಷಿದ್ಧ್ಯಂತೇ=ಮೋಸಗಾರರು ಎಂದು ತಿರಸ್ಕರಿಸಲ್ಪಡುವುದಾದಲ್ಲಿ ತೇ ಉಕ್ತಿಃ=ನಿನ್ನ ಮಾತೂ ಕಿಂ ನ ನಿಷಿದ್ಧ್ಯತೇ=ಯಾಕೆ ಉಪೇಕ್ಷಿಸಲ್ಪಡಬಾರದು?

**ಭಾವಾರ್ಥ**—ವಸಿಷ್ಠಾದಿಗಳು ಇದ್ದಾರೆ, ಎನ್ನುವುದೇನೋ ಸರಿ. ಆದರೆ, ಅವರಲ್ಲಿ ಲೋಕೋತ್ತರವಾದ ಮಾಹಾತ್ಮ್ಯ ಇದೆ, ಎನ್ನುವುದನ್ನು ಹೇಗೆ ನಂಬುವುದು? ಈ ಆಕ್ಷೇಪಕ್ಕೆ ಸಮಾಧಾನ ಹೀಗೆ— ಅಗಸ್ತ್ಯರು ವಿಂಧ್ಯಪರ್ವತವು ಬೆಳೆಯುತ್ತಿರುವುದನ್ನು ನಿಲ್ಲಿಸಿದರು, ಸಮುದ್ರವನ್ನೇ ಆಪೋಷನ ಪಡೆದರು. ಇಂತಹ ಅದ್ಭುತವಾದ ಕ್ರಿಯೆಗಳಿಂದ ಋಷಿಗಳಲ್ಲಿ ಅಲೌಕಿಕವಾದ ಸಿದ್ಧಿ ಇದೆ, ಎಂದು ಊಹಿಸಬಹುದು. ಕಾರ್ಯವಿದ್ದ ಮೇಲೆ ಕಾರಣವೂ ಇರಲೇಬೇಕು ತಾನೆ?

ಇಂತಹವರು ಮೋಕ್ಷವನ್ನು (ಮತ್ತೊಬ್ಬರ ಪರಮಾನಂದವನ್ನು) ಪ್ರತ್ಯಕ್ಷವಾಗಿ ತಿಳಿಯಬಲ್ಲರು. ಅವರ ಮಾತಿನಿಂದ ಉಳಿದವರಿಗೂ ಮೋಕ್ಷದ ಬಗ್ಗೆ ಇರುವ ಸಂದೇಹ–ಅಪನಂಬಿಕೆಗಳು ಪರಿಹಾರವಾಗುತ್ತವೆ. ಅವರು ಸುಳ್ಳು ಹೇಳುತ್ತಾರೆ ಎಂದು ವಿನಾಕಾರಣ ನಿರಾಕರಿಸುವುದಾದಲ್ಲಿ 'ಮೋಕ್ಷವಿಲ್ಲ' ಎನ್ನುವ ನಾಸ್ತಿಕವಾಕ್ಯವನ್ನೂ ಏಕೆ ನಿರಾಕರಿಸಬಾರದು? ಮೋಸ

ಮಾಡುವುದಕ್ಕೆ ಒಂದು ಸ್ವಾರ್ಥಬೇಕು. ಸುಮ್ಮಸುಮ್ಮನೆ ಯಾರೂ ಮೋಸ ಮಾಡುವುದಿಲ್ಲ. ಋಷಿಗಳು ಬೇಕಾದುದನ್ನೆಲ್ಲ ಪಡೆದವರು. ಅವರಿಗೆ ಯಾರಿಂದಲೂ ಏನೂ ಆಗಬೇಕಿಲ್ಲ. ಆದ್ದರಿಂದ ಅವರು ಯಾವುದೇ ರೀತಿಯ ಮೋಸವನ್ನು ಮಾಡುವುದಿಲ್ಲ. ಅವರ ಮಾತನ್ನು ಸುಳ್ಳು ಎಂದು ನಿರಾಕರಿಸಲು ಕಾರಣ ಇಲ್ಲ.

**ಯದುಕ್ತವಾಕ್ಯಪ್ರಾಮಾಣ್ಯಂ ಪ್ರತ್ಯಕ್ಷೇಣೋಪಲಭ್ಯತೇ ।**
**ವರಾದಯೋಽಪಿ ತದ್ದತ್ತಾಃ ಸದಾ ಸತ್ಯಾ ಭವಂತಿ ಹಿ ॥ ೧೨೩ ॥**

ಯದುಕ್ತವಾಕ್ಯಪ್ರಾಮಾಣ್ಯಂ=ಯೋಗಿಗಳಿಂದ ಹೇಳಲ್ಪಟ್ಟ ವಾಕ್ಯಗಳು ಸತ್ಯವಾಗಿರುವುದು ಪ್ರತ್ಯಕ್ಷೇಣ=ಪ್ರತ್ಯಕ್ಷದಿಂದ ಉಪಲಭ್ಯತೇ=ಕಾಣಲ್ಪಡುತ್ತದೆ. ಹೇಗೆಂದರೆ— ತದ್ದತ್ತಾಃ=ಅವರಿಂದ ಕೊಡಲ್ಪಟ್ಟ ವರಾದಯಃ= ಶಾಪ–ವರಗಳು ಹಿ=ಯಾವ ಕಾರಣದಿಂದ ಸತ್ಯಾಃ ಭವಂತಿ=ಸತ್ಯವಾಗುತ್ತವೆ, ಅದ್ದರಿಂದ 'ತೇಽಪಿ ಕಥಂ ನಿಷಿದ್ಧ್ಯಂತೇ'।

**ಭಾವಾರ್ಥ—** ಚಾರ್ವಾಕನ ಮಾತಿಗೆ ಪ್ರತ್ಯಕ್ಷ ಸಂವಾದವಿರುವುದರಿಂದ ಅದನ್ನು ನಿರಾಕರಿಸುವುದು ಸಾಧ್ಯವಿಲ್ಲ ಎನ್ನುವುದಾದಲ್ಲಿ ವಸಿಷ್ಠಾದಿಗಳ ಮಾತಿಗೂ ಸಂವಾದ ಇದೆ. ಶೃಂಗಿ ಪರೀಕ್ಷಿದ್ರಾಜನಿಗೆ ಸರ್ಪಕಚ್ಚಿ ಸಾಯಬೇಕೆಂದು ಶಾಪಕೊಟ್ಟ. ಅದು ಸತ್ಯವಾಯಿತು. ಬ್ರಹ್ಮದೇವರು ಕುಂಭಕರ್ಣನಿಗೆ ನಿದ್ರೆಯ ವರ ನೀಡಿದರು. ಅದು ಸತ್ಯವಾಯಿತು. ಆದ್ದರಿಂದ ಋಷಿಗಳ ಮಾತುಗಳನ್ನು ಸುಳ್ಳು ಎಂದು ನಿರಾಕರಿಸುವಂತಿಲ್ಲ.

**ಅಪ್ರಾಮಾಣ್ಯಂ ತದುಕ್ತೇಶ್ಚ ವೃಥಾವಾಚಾಽವಸೀಯತೇ ।**
**ನಹಿ ಪ್ರಯೋಜನಂ ಕಿಂಚಿತ್ ಪರಲೋಕನಿವಾರಣಾತ್ ॥ ೧೨೪ ॥**

ತದುಕ್ತೇಃ=ನಾಸ್ತಿಕನ ಮಾತಿಗೆ ಅಪ್ರಾಮಾಣ್ಯಂ=ಅಪ್ರಾಮಾಣ್ಯವು ವೃಥಾವಾಚಾ=ವ್ಯರ್ಥವಾಕ್ತ್ವಹೇತುವಿನಿಂದ ಅವಸೀಯತೇ= ನಿರ್ಧರಿಸಲ್ಪಡುತ್ತದೆ. ಏಕೆಂದರೆ, ಪರಲೋಕನಿವಾರಣಾತ್= ಸ್ವರ್ಗಾದಿಪರಲೋಕಗಳ ನಿರಾಕರಣೆಯಿಂದ ಕಿಂಚಿತ್ ಪ್ರಯೋಜನಂ ನಹಿ=ಯಾವುದೇ ಪ್ರಯೋಜನವೂ ಇಲ್ಲ.

**ಭಾವಾರ್ಥ**– ಇನ್ನೊಂದು ಕಾರಣದಿಂದ ನಾಸ್ತಿಕವಾಕ್ಯಕ್ಕೆ ಅಪ್ರಾಮಾಣ್ಯ ವನ್ನು ಇಲ್ಲಿ ಸಾಧಿಸಲಾಗಿದೆ. ನಾಸ್ತಿಕದರ್ಶನವು ದೇವರು, ಸ್ವರ್ಗ, ನರಕಗಳನ್ನು ನಿರಾಕರಿಸುತ್ತದೆ. ಅದನ್ನು ನಿರಾಕರಿಸುವುದರಿಂದ ಪುಣ್ಯ ಬರುತ್ತದೆ ಎನ್ನುವಂತಿಲ್ಲ. ಏಕೆಂದರೆ, ಪುಣ್ಯಪಾಪಗಳನ್ನು ನಾಸ್ತಿಕನು ಅಂಗೀಕರಿಸುವು ದಿಲ್ಲ. ಅದನ್ನು ಬಿಟ್ಟು ಲೌಕಿಕವಾದ ಯಾವುದೇ ಪ್ರಯೋಜನವೂ ಇಲ್ಲ. ಆದ್ದರಿಂದ ನಾಸ್ತಿಕದರ್ಶನವು ಅಪ್ರಮಾಣ.

**ವೃಥಾವಾಚಂ ವೃಥಾ ಹನ್ಯಾದ್ ಯದಿ ತಸ್ಯ ಕಿಮುತ್ತರಮ್ ।**
**ಸ್ವಜೀವನವಿರೋಧಾಯ ವದನ್ ಕಿಂ ನಾಮ ಬುದ್ಧಿಮಾನ್ ॥ ೧೨೫ ॥**

ವೃಥಾವಾಚಂ=ಅಲೌಕಿಕ ಪ್ರಯೋಜನವಿಲ್ಲದ ಮಾತನ್ನಾಡುವ ನಾಸ್ತಿಕ ನನ್ನು ಯದಿ=ಒಂದುವೇಳೆ ವೃಥಾ=ಯಾವಪ್ರಯೋಜನದ ಉದ್ದೇಶವೂ ಇಲ್ಲದೆ ಹನ್ಯಾತ್=ಕೊಂದರೆ ತಸ್ಯ=ನಾಸ್ತಿಕನ ಉತ್ತರಂ ಕಿಂ= ಉತ್ತರವೇನು?

ಸ್ವಜೀವನವಿರೋಧಾಯ=ತನ್ನ ಮತ್ತು ಶಿಷ್ಯರ ಜೀವನಕ್ಕೆ ವಿರೋಧವಾಗುವುದಕ್ಕಾಗಿ ವದನ್=ಉಪದೇಶಿಸುವ ನಾಸ್ತಿಕನು ಕಿಂ ನಾಮ ಬುದ್ಧಿಮಾನ್=ಏನು ತಾನೇ ಬುದ್ಧಿವಂತ?

**ಭಾವಾರ್ಥ**— ನಾಸ್ತಿಕವಾದದ ಪ್ರತ್ಯುತ್ತರ ಹೀಗಿದೆ— ನಾಸ್ತಿಕದರ್ಶನ ವ್ಯರ್ಥವಲ್ಲ. ಅದನ್ನು ಬೋಧಿಸುವವರಿಗೂ ಪ್ರಯೋಜನವಿದೆ, ಕೇಳಿದವ ರಿಗೂ ಇದೆ. ಮುಗ್ಧಜನರು ನರಕದ ಭೀತಿಯಿಂದ ಸ್ವಚ್ಛಂದ ವಿಷಯಭೋಗ ದಿಂದ ವಂಚಿತರಾಗಿದ್ದಾರೆ. ಸ್ವರ್ಗದ ಆಸೆಯಿಂದ ವ್ರತೋಪವಾಸಗಳಿಂದ ಕ್ಲೇಶಪಡುತ್ತಾರೆ. ಅವರಿಗೆ, ನರಕದ ಭೀತಿ ಕಳೆದರೆ ನಿರಂಕುಶಕಾಮೋಪಭೋಗ ದಿಂದ ಸುಖ. ಸ್ವರ್ಗದ ಆಕರ್ಷಣೆ ಕಳಚಿದರೆ ವ್ರತೋಪವಾಸಗಳಿಂದಾಗುವ ಕ್ಲೇಶದಿಂದ ಬಿಡುಗಡೆ. ಹೀಗೆ ಸುಖಪ್ರಾಪ್ತಿ–ದುಃಖನಿವೃತ್ತಿ ಶ್ರೋತೃಗಳಿಗೆ ಪ್ರಯೋಜನ. ನಾಸ್ತಿಕ್ಯ ಬೋಧಕನಲ್ಲಿ ಇಂತಹ ಜನರ ಅನುರಾಗ ಹೆಚ್ಚುತ್ತದೆ. ಅದರಿಂದ ಅವನಿಗೂ ಸಂಪತ್ತು ವೃದ್ಧಿಯಾಗುತ್ತದೆ.

ಈ ವಾದ ಸರಿಯಲ್ಲ. ಗುರುವು ತನ್ನ ಶಿಷ್ಯನಿಗೆ ಪುಣ್ಯ–ಪಾಪಗಳ ಭೀತಿಯನ್ನು ನಿವಾರಿಸಿದರೆ, ಆ ಶಿಷ್ಯ ಗುರುಗಳ ಪತ್ನಿ–ಸಂಪತ್ತುಗಳಿಗೇ

ಕೈಹಾಕುತ್ತಾನೆ. ಉಪಕಾರ ಮಾಡದವನಿಗೆ ಅಪಕಾರ ಮಾಡಿದರೆ ಪಾಪ ಬರುತ್ತದೆ, ಎಂದಂತೂ ಗುರುಬುದ್ಧಿ ಹೇಳುವಂತಿಲ್ಲ. ಹೀಗೆ, ಗುರುವಿಗೆ ಪ್ರಯೋಜನದ ನಿರೀಕ್ಷೆ ಇಲ್ಲ. ಇನ್ನು ಪುಣ್ಯ-ಪಾಪಗಳ ಭೀತಿ ಇಲ್ಲದ ಶಿಷ್ಯ ಸಮಾಜದಲ್ಲೂ ಪರಸ್ಪರ ಹಿಂಸೆ, ಅನೀತಿಗೆ ಅವಕಾಶವಾಗುತ್ತದೆ. ಅವರಿಗೂ ಪ್ರಯೋಜನವಿಲ್ಲ. ಹೀಗೆ, ಎಲ್ಲರ ಜೀವನಕ್ಕೂ ಕುತ್ತು ತರುವ ದರ್ಶನವನ್ನು ರಚಿಸಿದ ಆಚಾರ್ಯ ಪ್ರೇಕ್ಷಾವಂತನಾಗಲಾರ. ಅವನ ವಾಕ್ಯವೂ ಪ್ರಮಾಣ ವಾಗಲಾರದು.

**ಪ್ರಾಮಾಣ್ಯೇ ಸಂಶಯಃ ಕಿಂ ಸ್ಯಾತ್ ತಯೋಃ ಪುರುಷಯೋರಪಿ ।**
**ಸ್ವಜೀವನವಿರುದ್ಧೋಕ್ತಿರಜ್ಞೋ ದೃಷ್ಟಸ್ಯ ಚಾಪಿ ಯಃ ॥ ೧೨೬ ॥**

**ಯಶ್ಚಾತೀಂದ್ರಿಯದೇವೋಕ್ತಿಶ್ರೋತಾ ದೃಷ್ಟಪರಾವರಃ ।**
**ಅತೀತಾನಾಗತಂ ಸರ್ವಂ ಲೋಕಾನುಭವಮಾಪಯನ್ ॥ ೧೨೭ ॥**

ಯಃ=ಯಾವ ನಾಸ್ತಿಕನು ಸ್ವಜೀವನವಿರುದ್ಧೋಕ್ತಿಃ=ತನ್ನ ಮತ್ತು ಸಮಾಜದ ಜೀವನಕ್ಕೆ ವಿರುದ್ಧವಾಗಿ ಆಡುವವನೋ, ದೃಷ್ಟಸ್ಯಚ=ಪ್ರತ್ಯಕ್ಷ ಸಿದ್ಧವಾದುದಕ್ಕೂ ವಿರುದ್ಧವನ್ನು ಆಡುವನೋ ಯಶ್ಚ=ಯಾರು ಅತೀಂದ್ರಿಯ-ದೇವೋಕ್ತಿಶ್ರೋತಾ=ಅತೀಂದ್ರಿಯವಾದ ಸ್ವರ್ಗ-ನರಕ ದೇವತೆಗಳ ಅಸ್ತಿತ್ವವನ್ನು ಹೇಳುವ ಶ್ರೋತೃವರ್ಗವುಳ್ಳವನೋ, ದೃಷ್ಟಪರಾವರಃ=ಭೂತ-ಭವಿಷ್ಯಗಳನ್ನು ನೋಡಬಲ್ಲನೋ, ಅತೀತಾನಾಗತಂ ಸರ್ವಂ=ತಾನು ಹೇಳಿದ ಅತೀತ ಮತ್ತು ಅನಾಗತವೆಲ್ಲವನ್ನೂ ಲೋಕಾನುಭವಂ=ಪ್ರತ್ಯಕ್ಷಸಂವಾದದಿಂದ ಜನರ ವಿಶ್ವಾಸವನ್ನು ಆಪಯನ್= ಬರುವಂತೆ ಮಾಡುವನೋ ತಯೋಃ ಪುರುಷಯೋಃ=ಇಂತಹ ಇಬ್ಬರು ವ್ಯಕ್ತಿಗಳಲ್ಲಿ ಪ್ರಾಮಾಣ್ಯೇ=ಆಪ್ತಿಯ ಬಗ್ಗೆ ಸಂಶಯಃ ಸ್ಯಾತ್‌ಕಿಂ=ಸಂದೇಹವು ಬಂದೀತೇನು!

**ಭಾವಾರ್ಥ**— ಒಂದೆಡೆ ತನ್ನ ಮತ್ತು ತಮ್ಮವರ ಜೀವನಕ್ಕೆ ಕುತ್ತುತರುವ ಸಿದ್ಧಾಂತವನ್ನು ಹೇಳುವ ನಾಸ್ತಿಕಾಚಾರ್ಯ, ಇನ್ನೊಂದೆಡೆ ಅತೀಂದ್ರಿಯ ವಿಷಯಗಳನ್ನು ನಂಬಿರುವ ಶ್ರೋತೃಗಳನ್ನು ಹೊಂದಿದ, ತಾನು ಹೇಳಿದ್ದೆಲ್ಲ

ವನ್ನು ಪ್ರತ್ಯಕ್ಷಸಂವಾದದಿಂದ ತೋರಿಸುವ ಯೋಗಿಗಳು. ಇವರಿಬ್ಬರಲ್ಲಿ ಯಾರು ಆಪ್ತರು, ಯಾರು ಅನಾಪ್ತರು ಎನ್ನುವ ಸಂದೇಹ ಬರುವುದೇನು?

ನಾಸ್ತಿಕಾಚಾರ್ಯನಿಗೆ ಅತೀಂದ್ರಿಯಜ್ಞಾನವಿದೆ ಎನ್ನಲು ನಿಮಿತ್ತಗಳಿಲ್ಲ. ಇದಕ್ಕೆ ಬದಲಾಗಿ ವಿಷಯಾಭಿಲಾಷೆಯ ನಿಮಿತ್ತದಿಂದ ಅವನಲ್ಲಿ ವಿಪ್ರಲಂಭಕತ್ವವು ಸಂಭಾವಿತ. ಆಸ್ತಿಕಾಚಾರ್ಯನಿಗೆ ಯೋಗಸಿದ್ಧಿ ಕಂಡಿದೆ. ಅದರಿಂದಾಗಿ ಅವನಿಗೆ ಅತೀಂದ್ರಿಯಜ್ಞಾನವು ಸಂಭಾವಿತವಾಗಿದೆ. ಅವನು ವಿಷಯಾಭಿಲಾಷೆ ಇಲ್ಲದ ಕೃತಕೃತ್ಯ. ಅದರಿಂದಾಗಿ ಪ್ರತಾರಕತ್ವವು ಅವನಲ್ಲಿ ಅಸಂಭಾವಿತ. ಹೀಗಾಗಿ, ಯೋಗಿಗೆ ನಾಸ್ತಿಕಾಚಾರ್ಯನು ಪ್ರತಿಪಕ್ಷಿಯೇ ಅಲ್ಲ. ಆದ್ದರಿಂದ ಆಸ್ತಿಕಾಚಾರ್ಯನ ಮಾತಿನಿಂದ ಮೋಕ್ಷವು ನಿಶ್ಚಿತವಾಗುತ್ತದೆ.

**ಅತಃ ಪ್ರತ್ಯಕ್ಷಗಮ್ಯತ್ವಾದ್ ವೇದಮಾತ್ವಸ್ಯ ಚ ಸ್ಫುಟಮ್ ।**
**ಯದ್ಯಾಗಮಸ್ಯ ನೋ ಮಾತ್ವಮಕ್ಷಜಸ್ಯ ತಥಾ ಭವೇತ್ ॥ ೧೨೮ ॥**

ಅತಃ=ವೈದಿಕಕರ್ಮಗಳನ್ನು ಅನುಷ್ಠಾನ ಮಾಡುವವರಿಗೆ ಫಲ ಸಿಗುವುದು ಕಂಡಿರುವುದರಿಂದ ವೇದಮಾತ್ವಸ್ಯ=ವೇದಪ್ರಾಮಾಣ್ಯಕ್ಕೆ ಸ್ಫುಟಂ=ನಿರ್ವಿವಾದವಾಗಿ ಪ್ರತ್ಯಕ್ಷಗಮ್ಯತ್ವಾತ್=ಪ್ರತ್ಯಕ್ಷಸಂವಾದ ಇರುವುದ ರಿಂದ ವೇದವು ಪ್ರಮಾಣ. ಅದರಿಂದಲೂ ಮೋಕ್ಷವು ಸಿದ್ಧವಾಗುತ್ತದೆ.

ಯದಿ=ಒಂದುವೇಳೆ, ಆಗಮಸ್ಯ=ಪ್ರತ್ಯಕ್ಷಸಂವಾದ ಇಲ್ಲದ ಆಗಮಕ್ಕೆ ಪ್ರಾಮಾಣ್ಯ ಇಲ್ಲದಿರುವುದರಿಂದ ಸಮಗ್ರವಾದ ಆಗಮಕ್ಕೂ ನೋ ಮಾತ್ವಂ= ಪ್ರಾಮಾಣ್ಯವು ಇಲ್ಲವೆನ್ನುವುದಾದಲ್ಲಿ ಅಕ್ಷಜಸ್ಯ=ಸಂವಾದ ಇಲ್ಲದ ಸುಖಾದಿ ಪ್ರತ್ಯಕ್ಷವೂ ಅಪ್ರಮಾಣವೆಂದಾಗಿ ಸಕಲಪ್ರತ್ಯಕ್ಷಗಳಿಗೂ ತಥಾ ಭವೇತ್= ಅಪ್ರಾಮಾಣ್ಯವು ಬಂದೀತು.

**ಭಾವಾರ್ಥ—** ವೇದವೂ ಮೋಕ್ಷಕ್ಕೆ ಇನ್ನೊಂದು ಪ್ರಮಾಣ. ಐಶ್ವರ್ಯಾದಿಫಲಕವಾದ ವೈದಿಕ ಕರ್ಮಗಳನ್ನು ಅನುಷ್ಠಾನ ಮಾಡಿದವರಿಗೆ ಫಲವು ದೊರಕಿರುವುದು ಕಂಡಿದೆ. ಕೆಲವೊಮ್ಮೆ ಫಲ ಸಿಗದಿರುವುದು ಕರ್ತೃಕರ್ಮವೈಗುಣ್ಯದಿಂದಾಗಿ. ಅಂತಹ ವೇದಭಾಗದ ದೃಷ್ಟಾಂತದಿಂದ

ಸಮಗ್ರವೇದವೂ ಪ್ರಮಾಣವೆಂದು ನಿರ್ಧರಿಸಬಹುದು. ಕೆಲವೊಮ್ಮೆ ವೈದಿಕಕರ್ಮಗಳಿಗೆ ಫಲಸಂವಾದ ಇಲ್ಲದಿರುವುದರಿಂದ ಸಮಗ್ರವೇದವೂ ಅಪ್ರಮಾಣವಾಗುವುದಾದಲ್ಲಿ ಸಾಕ್ಷಿರೂಪವಾದ ಸುಖಾದಿಜ್ಞಾನಗಳಿಗೂ ಸಂವಾದ ಇಲ್ಲದಿರುವುದರಿಂದ ಎಲ್ಲಾ ಪ್ರತ್ಯಕ್ಷಗಳೂ ಅಪ್ರಮಾಣಗಳಾಗಬೇಕಾದೀತು.

**ಯದ್ಯಕ್ಷಜಸ್ಯ ಮಾತ್ವಂ ಸ್ಯಾದಾಗಮಸ್ಯ ಕಥಂ ನ ತತ್ ।**
**ಲೋಕವಾಕ್ಯಾದ್ ವಿಶೇಷಶ್ಚಾವ್ಯಭಿಚಾರೇಣ ಸಿದ್ಧ್ಯತಿ ॥ ೧೨೯ ॥**

ಯದಿ=ಒಂದುವೇಳೆ ಅಕ್ಷಜಸ್ಯ=ಸುಖಾದಿಪ್ರತ್ಯಕ್ಷಗಳಿಗೆ ಸಂವಾದ ಇಲ್ಲದಿದ್ದರೂ ಮಾತ್ವಂ=ಪ್ರಾಮಾಣ್ಯವು ಸ್ಯಾತ್=ಇರುವುದಾದಲ್ಲಿ ಆಗಮಸ್ಯ=ಆಗಮಕ್ಕೂ ತತ್=ಪ್ರಾಮಾಣ್ಯವು ಕಥಂ ನ=ಹೇಗಿಲ್ಲ? ಲೋಕವಾಕ್ಯಾತ್=ಉನ್ಮತ್ತವಾಕ್ಯಕ್ಕಿಂತ ವೇದವಾಕ್ಯದಲ್ಲಿ ವಿಶೇಷಶ್ಚ= ವಿಶೇಷವಾದರೂ ಅವ್ಯಭಿಚಾರೇಣ=ಬಾಧಾಭಾವದಿಂದ ಸಿದ್ಧ್ಯತಿ= ಸಿದ್ಧವಾಗುತ್ತದೆ.

ಭಾವಾರ್ಥ— ಸುಖಾದಿ ಅನುಭವ ಒಬ್ಬೊಬ್ಬ ವ್ಯಕ್ತಿಗಳಿಗೆ ಮಾತ್ರ ಬರುವುದರಿಂದ ಅದಕ್ಕೆ ಸಂವಾದ ಇಲ್ಲ. ಆದರೂ ಅದಕ್ಕೆ ಬಾಧವಿಲ್ಲ. ಆದ್ದರಿಂದ ಅದು ಪ್ರಮಾಣವಾಗುವುದಾದಲ್ಲಿ ಅದೇ ನ್ಯಾಯದಿಂದ ವೇದವಾಕ್ಯವೂ ಪ್ರಮಾಣವಾಗಲಿ. ಹೀಗೆ, ಪ್ರಮಾಣವಾದ ವೇದ ಸಿದ್ಧವಾದುದರಿಂದ ಮೋಕ್ಷವೇ ಇಲ್ಲ, ಎನ್ನುವ ನಾಸ್ತಿಕದರ್ಶನ ಸರಿಯಲ್ಲ.

## ಜೈನೋಕ್ತಮೋಕ್ಷಸ್ವರೂಪವಿಮರ್ಶೆ

**ಅಸ್ತಿ ಮೋಕ್ಷೋಽಪಿ ಧರ್ಮೇಣ ಯಥಾರ್ಥಜ್ಞಾನತೋಽಪಿ ಚ ।**
**ಪ್ರಾಮಾಣ್ಯಮನುಮಾಯಾಶ್ಚ ಜಿನಸ್ಯಾಪ್ತತ್ವಸಾಧನೇ ॥ ೧೩೦ ॥**

**ತದ್ವಾಕ್ಯಾದ್ ಧರ್ಮಸಜ್ಜ್ಞಾನವಿಜ್ಞಪ್ತಿರ್ಭವತೀತಿ ಚ ।**
**ಧರ್ಮೋಽಹಿಂಸಾಪರೋ ನಾನ್ಯೋ ಜ್ಞಾನಂ**
**ಪುದ್ಗಲದರ್ಶನಮ್ ॥ ೧೩೧ ॥**

1. ಮೋಕ್ಷೋಽಪಿ ಅಸ್ತಿ=ಮೋಕ್ಷವೂ ಇದೆ, ಅದಕ್ಕೆ ಸಾಧನಗಳೂ ಇವೆ. ಧರ್ಮೇಣ=ಕರ್ಮದಿಂದ, ಯಥಾರ್ಥಜ್ಞಾನತೋಽಪಿ ಚ=ಯಥಾರ್ಥ ಜ್ಞಾನದಿಂದಲೂ ಮೋಕ್ಷವು ದೊರಕುತ್ತದೆ.

2. ಜಿನಸ್ಯ=ಜಿನನಿಗೆ ಆಪ್ತತ್ವಸಾಧನೇ=ಆಪ್ತತ್ವವನ್ನು ಸಾಧಿಸುವಲ್ಲಿ ಅನುಮಾಯಾಶ್ಚ=ಅನುಮಾನಕ್ಕೂ ಪ್ರಾಮಾಣ್ಯಂ=ಪ್ರಾಮಾಣ್ಯವನ್ನು ಜೈನರು ಅಂಗೀಕರಿಸುತ್ತಾರೆ. ತದ್ವಾಕ್ಯಾತ್=(ಜಿನನಿಗೆ ಆಪ್ತತ್ವ ಸಿದ್ಧವಾದಾಗ) ಅವನ ವಾಕ್ಯದಿಂದಲೇ ಧರ್ಮಜ್ಞಾನವಿಜ್ಞಪ್ತಿಃ=ಧರ್ಮ ಮತ್ತು ಜ್ಞಾನಗಳ ಸ್ವರೂಪಜ್ಞಾನವು ಬರುತ್ತದೆ. ಇತಿ ಚ ಜೈನಾಃ ಪ್ರಾಹುಃ=ಹೀಗೆಂದು ಜೈನರು ಹೇಳುತ್ತಾರೆ.

3. ಧರ್ಮಃ=ಧರ್ಮವು ಅಹಿಂಸಾಪರಃ=ಅಹಿಂಸೆಯೇ ಪ್ರಧಾನವಾಗಿ ಉಳ್ಳದ್ದು. ಯಜ್ಞ-ಯಾಗಗಳು ಹಿಂಸಾಯುಕ್ತವಾದುದರಿಂದ ಧರ್ಮಗಳಲ್ಲ. ಪುದ್ಗಲದರ್ಶನಂ=ಆತ್ಮನಿಗಿಂತ ವಿಭಿನ್ನವಾಗಿ ಶರೀರದರ್ಶನವೇ ಜ್ಞಾನ. ಅಥವಾ ಪುದ್ಗಲ ಎಂದರೆ ಆತ್ಮ. ಶರೀರಕ್ಕಿಂತ ಭಿನ್ನವಾಗಿ ಆತ್ಮನ ದರ್ಶನ ಜ್ಞಾನ, ಇತಿ ಜೈನಾಃ ಪ್ರಾಹುಃ=ಹೀಗೆ ಜೈನರು ಹೇಳುತ್ತಾರೆ.

**ಭಾವಾರ್ಥ**— ಜೈನರು ಮೋಕ್ಷವೂ ಇದೆ, ಅದಕ್ಕೆ ಬೇಕಾದ ಸಾಧನೆಗಳೂ ಇವೆ, ಎನ್ನುತ್ತಾರೆ. ಧರ್ಮ ಮತ್ತು ಜ್ಞಾನಗಳು ಮೋಕ್ಷಸಾಧನಗಳು. ಆದರೆ, ಧರ್ಮವೆಂದರೆ ಯಜ್ಞಯಾಗಾದಿಗಳಲ್ಲ. ಅವುಗಳಲ್ಲಿ ಹಿಂಸೆಗೆ ಅವಕಾಶವಿದೆ. ಹಿಂಸೆಗೆ ಆಸ್ಪದವಿಲ್ಲದ 'ಸಮ್ಯಕ್‌ಚಾರಿತ್ರ್ಯ'ವೇ ಧರ್ಮ. ಜ್ಞಾನವೆಂದರೂ ದೇವರ ಅಪರೋಕ್ಷಜ್ಞಾನವಲ್ಲ. ಪುದ್ಗಲ ಎನಿಸಿರುವ ಜೀವನು ಜಡಶರೀರಕ್ಕಿಂತ ವಿಭಿನ್ನ ಎಂಬ ಸಾಕ್ಷಾತ್ಕಾರವೇ ಜ್ಞಾನ. ಅಥವಾ ಪುದ್ಗಲ ಎಂದರೆ ದೇಹ. ಅದು ಆತ್ಮವಿವಿಕ್ತವಾದುದು, ಎಂದು ಸಾಕ್ಷಾತ್ಕಾರವಾಗುವುದೇ ಜ್ಞಾನ. ಇಂತಹ ಧರ್ಮ-ಜ್ಞಾನಸಮುಚ್ಚಯದಿಂದ ಮೋಕ್ಷವು ದೊರಕುತ್ತದೆ. ಇದು ಜೈನರ ವಾದ.

2. ನಾಸ್ತಿಕರು ಪ್ರತ್ಯಕ್ಷಮಾತ್ರ ಪ್ರಮಾಣ ಎಂದರೆ ಜೈನರು ಪ್ರತ್ಯಕ್ಷಾತಿರಿಕ್ತವಾದ ಅನುಮಾನವೂ ಪ್ರಮಾಣ ಎನ್ನುತ್ತಾರೆ. ಜಿನನು ಪರಮಾತ್ಮ ಎಂದು ಸಾಧಿಸಲು ಅನುಮಾನವೇ ಅವರಿಗೆ ಆಧಾರ. ಅಸ್ಖಲಿತವಾಣಿ ಇರುವುದ

ರಿಂದಾಗಿ ಜಿನ ಆಪ್ತ ಎಂದು ಅವರು ಅನುಮಾನ ಮಾಡುತ್ತಾರೆ. ಇದು ನಾಸ್ತಿಕರಿಗಿಂತ ಇನ್ನೊಂದು ವಿಶೇಷ.

ಈ ಜೈನ ಸಿದ್ಧಾಂತವೂ ಸರಿಯಲ್ಲ—

**ಇತಿ ಜೈನಾಃ, ಕಥಂ ತತ್ ಸ್ಯಾತ್ ಪ್ರಮಾಣಮನುಮಾನತಃ ।**
**ವಿಷಯಾನ್ ಪ್ರತಿ ಸ್ಥಿತಂ ಹ್ಯಕ್ಷಂ ಪ್ರತ್ಯಕ್ಷಮಿತಿ ಗೀಯತೇ ॥ ೧೩೨ ॥**

**ಪ್ರತ್ಯಕ್ಷಶಬ್ದಾನುಸಾರಾದನುಮೇತಿ ಪ್ರಕೀರ್ತಿತಾ ।**
**ಆ ಸಮಂತಾದ್ ಗಮಯತಿ ಧರ್ಮಾಧರ್ಮೌ ಪರಂ ಪದಮ್ ॥ ೧೩೩ ॥**

**ಯಚ್ಚಾಪ್ಯತೀಂದ್ರಿಯಂ ತ್ವನ್ಯತ್ ತೇನಾಸಾವಾಗಮಃ ಸ್ಮೃತಃ ।**
**ಏತೇನ ಕಾರಣೇನೈವ ತತ್ತನ್ಮಾನತ್ವಮಿಷ್ಯತೇ ॥ ೧೩೪ ॥**

**ಸ್ವರೂಪಂ ಹಿ ತದೇತೇಷಾಮನ್ಯಥಾಽಸಿದ್ಧಿಮಾನತಃ ।**
**ಅತೋಽನುಮಾ ಕಥಂ ಧರ್ಮಂ ಪುದ್ಗಲಂ ಚಾಪಿ ದರ್ಶಯೇತ್ ॥ ೧೩೫ ॥**

ತತ್=ಜಿನನ ವಾಕ್ಯವು ಅನುಮಾನತಃ=ಅನುಮಾನದಿಂದ ಪ್ರಮಾಣಂ=ಪ್ರಮಾಣವೆಂದು ತಿಳಿಯಲ್ಪಡಬೇಕು, ಎನ್ನುವುದು ಕಥಂ ಸ್ಯಾತ್=ಹೇಗಾದೀತು? ಅನುಮಾನಪ್ರಮಾಣದಿಂದ ಜಿನನಿಗೆ ಆಪ್ತತ್ವವನ್ನು ಸಾಧಿಸಿ ಆಪ್ತವಾಕ್ಯತ್ವಹೇತುವಿನಿಂದ ಅವನ ಉಪದೇಶವಾಕ್ಯಗಳಿಗೆ ಪ್ರಾಮಾಣ್ಯವನ್ನು ಸಾಧಿಸಿ ಧರ್ಮ ಮತ್ತು ಜ್ಞಾನಗಳು ಮೋಕ್ಷಸಾಧನಗಳು ಎಂದು ನಿರ್ಧರಿಸುವುದು ಸರಿಯಲ್ಲ. ಇದನ್ನು ಸರಿಯಾದ ಕಾರಣಕೊಟ್ಟು ನಿರಾಕರಿಸುವುದಕ್ಕಾಗಿ ಮೊದಲು ಪ್ರತ್ಯಕ್ಷಾದಿಸ್ವರೂಪಗಳನ್ನು ನಿರೂಪಿಸುತ್ತಾರೆ—

ವಿಷಯಾನ್ ಪ್ರತಿ=ನಿರ್ದುಷ್ಟವಾದ ವಿಷಯಗಳ ಕಡೆಗೆ ಸ್ಥಿತಂ=ಅಭಿಮುಖವಾದ ಅಕ್ಷಂ=ನಿರ್ದುಷ್ಟವಾದ ಇಂದ್ರಿಯಗಳು ಪ್ರತ್ಯಕ್ಷಮಿತಿ=ಪ್ರತ್ಯಕ್ಷವೆಂದು ಗೀಯತೇ=ಹೇಳಲ್ಪಡುತ್ತದೆ. ಪ್ರತ್ಯಕ್ಷಶಬ್ದಾನುಸಾರಾತ್=

ಪ್ರತ್ಯಕ್ಷ ಮತ್ತು ಆಗಮಗಳನ್ನು ಅನುಸರಿಸಿರುವುದರಿಂದ ಅನುಮಾನವು ಅನುಮೇತಿ=ಅನುಮಾನ ಎಂದು ಪ್ರಕೀರ್ತಿತಾ=ಹೇಳಲ್ಪಡುತ್ತದೆ. ಆ ಸಮಂತಾತ್=ಎಲ್ಲವಿಧದಿಂದಲೂ ಎಲ್ಲವನ್ನೂ ಗಮಯತಿ=ತಿಳಿಸಿ ಕೊಡುತ್ತದೆ, ಸರಿಯಾದ ಜ್ಞಾನಕ್ಕೆ ಸಾಧನ. ಆದುದರಿಂದ ಶಬ್ದವು ಆಗಮವೆನಿಸಿದೆ. ಧರ್ಮಾಧರ್ಮೌ=ಪುಣ್ಯ-ಪಾಪಗಳನ್ನು ಪರಂ ಪದಂ=ಮೋಕ್ಷವನ್ನು ಅನ್ಯತ್=ಪ್ರತ್ಯಕ್ಷ ಮತ್ತು ಅನುಮಾನಗಳು ತಿಳಿಸುವ ವಿಷಯಗಳಿಗಿಂತ ಭಿನ್ನವಾದ ಯಚ್ಚಾಪಿ ಅತೀಂದ್ರಿಯಂ=ಯಾವುದು ಅತೀಂದ್ರಿಯವಾದ ವಿಷಯವಿದೆಯೋ ಅವುಗಳನ್ನೆಲ್ಲ ಆ-ಗಮಯತಿ=ನಿಶ್ಚಿತವಾಗಿ ತಿಳಿಸಿ ಕೊಡುತ್ತದೆ. ತೇನ=ಈ ಕಾರಣದಿಂದ ಅಸೌ=ಆಗಮವು ಆಗಮಃ ಸ್ಮೃತಃ= ಆಗಮವೆನಿಸಿದೆ.

ಏತೇನ ಕಾರಣೇನೈವ=ಈ ಪ್ರವೃತ್ತಿನಿಮಿತ್ತದಿಂದಾಗಿಯೇ ತತ್ತನ್ನಾಮತ್ವಂ= ಪ್ರತ್ಯಕ್ಷಾದಿಕರಣಗಳಿಗೆ ಪ್ರತ್ಯಕ್ಷ, ಅನುಮಾನ, ಆಗಮ ಈ ಶಬ್ದಗಳಿಂದ ವಾಚ್ಯತ್ವವು ಪ್ರಾಮಾಣಿಕರಿಂದ ಇಷ್ಯತೇ=ಅಂಗೀಕರಿಸಲ್ಪಟ್ಟಿದೆ. ತತ್=ಹಿಂದೆ ಹೇಳಿರುವ ನಿರ್ದೋಷಾರ್ಥೇಂದ್ರಿಯಸನ್ನಿಕೃಷ್ಟತ್ವಾದಿಗಳು ಏತೇಷಾಂ=ಈ ಪ್ರತ್ಯಕ್ಷಾದಿಗಳ ಸ್ವರೂಪಂ=ಸ್ವರೂಪಲಕ್ಷಣವಾಗಿದೆ. ಏಕೆಂದರೆ, ಅನ್ಯಥಾ- ಸಿದ್ಧಿಮಾನತಃ=ಬೇರೆ ರೀತಿಯಿಂದ ಇವುಗಳ ಲಕ್ಷಣಗಳನ್ನು ಹೇಳಲಾಗುವುದಿಲ್ಲ. (ಇದನ್ನು ಯುಕ್ತಿಪಾದದಲ್ಲಿ 'ನಿರ್ದೋಷಾಕ್ಷೋದ್ಭವಂ ಹ್ಯತ್ರ' ಎಂದು ಅನುವ್ಯಾಖ್ಯಾನದಲ್ಲಿ ತಿಳಿಸಿಕೊಡಲಾಗಿದೆ.)

ಅತಃ=ಹೀಗಿರುವಾಗ ಅನುಮಾ=ಅನುಮಾನದಿಂದ ನಿರ್ಧರಿಸಲ್ಪಟ್ಟ ಪ್ರಾಮಾಣ್ಯವುಳ್ಳ ಜಿನವಾಕ್ಯವು ಧರ್ಮಂ=ಧರ್ಮವನ್ನಾಗಲೀ ಪುದ್ಗಲಂ ಚಾಪಿ=ದೇಹ ಅಥವಾ ಆತ್ಮನನ್ನಾಗಲೀ ಕಥಂ=ಹೇಗೆ ದರ್ಶಯೇತ್= ತಿಳಿಸಿಕೊಟ್ಟೀತು.

**ಭಾವಾರ್ಥ—** ನಿರ್ದುಷ್ಟವಾದ ವಿಷಯಗಳೊಂದಿಗೆ ಸನ್ನಿಕೃಷ್ಟವಾದ ಚಕ್ಷುರಾದಿ ಇಂದ್ರಿಯಗಳು ಪ್ರತ್ಯಕ್ಷ ಪ್ರಮಾಣಗಳು. ಪ್ರತಿ+ಅಕ್ಷ ಎಂದು ಎರಡು ಶಬ್ದಗಳು ಪ್ರತ್ಯಕ್ಷ ಎಂಬ ಒಂದು ಹೆಸರಿನಲ್ಲಿ ಸೇರಿವೆ. ಪ್ರತಿ ಎಂದರೆ ವಿಷಯಗಳ ಕಡೆಗಿರುವ ಎಂದು ಅರ್ಥ. ಅದರಂತೆ ಅನು+ಮಾನ=

ಅನುಮಾನ. ಅನು ಎಂದರೆ ಪ್ರತ್ಯಕ್ಷ ಅಥವಾ ಆಗಮಗಳನ್ನು ಅನುಸರಿಸಿ, ಎಂದರ್ಥ. ಅನುಮಾನ ಮಾಡಬೇಕಾದರೆ ಅದರ ಪಕ್ಷ, ಸಾಧ್ಯ, ಹೇತು, ವ್ಯಾಪ್ತಿಗಳು ಪ್ರತ್ಯಕ್ಷ ಅಥವಾ ಆಗಮಗಳಿಂದ ಸಿದ್ಧವಾಗಿರಬೇಕು. ಅವೆರಡನ್ನು ಅನುಸರಿಸಿ ಜ್ಞಾನಕ್ಕೆ ಜನಕವಾಗುವುದರಿಂದ ಅನುಮಾನಕ್ಕೆ ಅನುಮಾನ ಎಂಬ ಹೆಸರು ಬಂದಿದೆ.

ಪ್ರತ್ಯಕ್ಷ ಅಥವಾ ಅನುಮಾನಗಳಿಂದ ತಿಳಿಯಲಾಗದ ಪುಣ್ಯ-ಪಾಪ-ದೇವರು-ಸ್ವರ್ಗ-ಮೋಕ್ಷಗಳ ವಿವರವನ್ನು ತಿಳಿಸುವುದರಿಂದ ಶಬ್ದಪ್ರಮಾಣಕ್ಕೆ ಆಗಮ ಎಂಬ ಹೆಸರು.

ಜಿನನ ವಾಕ್ಯದಿಂದ ಧರ್ಮಾದಿಸಿದ್ಧಿಯಾಗಬೇಕಾದರೆ ಆ ವಾಕ್ಯವು ಆಗಮಪ್ರಮಾಣವಾಗಿ ಧರ್ಮಕ್ಕೆ ಸಾಧಕವಾಗಬೇಕು. ಆ ವಾಕ್ಯವನ್ನು ಉಚ್ಚರಿಸುವ ಜಿನನಿಗೆ ಧರ್ಮಾದಿಗಳ ಪ್ರತ್ಯಕ್ಷ ಇಲ್ಲದಿದ್ದರೆ ಅವನು ಧರ್ಮಾದಿಗಳ ಬಗ್ಗೆ ಹೇಳಿದ ವಿಷಯಗಳೆಲ್ಲವೂ ಅವನ ಕಪೋಲಕಲ್ಪಿತ ವೆಂದಂತಾಗುತ್ತದೆ. ಅದಕ್ಕಾಗಿ ಆ ವಿಷಯಗಳೆಲ್ಲ ಪ್ರತ್ಯಕ್ಷದಿಂದಲೋ, ಅನುಮಾನದಿಂದಲೋ ಸಿದ್ಧವಾಗಿವೆ, ಎನ್ನಬೇಕು. ಆಗ ಇತರರೂ ಅವುಗಳನ್ನು ಪ್ರತ್ಯಕ್ಷಾನುಮಾನಗಳಿಂದಲೇ ತಿಳಿಯಬಹುದಾದ್ದರಿಂದ ಜಿನನ, ಉಪದೇಶ ಅಧಿಗತಾರ್ಥಜ್ಞಾಪಕವಾಗುವುದರಿಂದ ಅಪ್ರಾಮಾಣಿಕವೆನಿಸುತ್ತದೆ. ಮತ್ತೊಬ್ಬರು ಹೇಳಿದ್ದನ್ನು ಕೇಳಿ ಅವನು ಉಪದೇಶಿ ಮಾಡಿದ್ದರೆ ಅದು ಅಂಧಪರಂಪರೆಯಾಗುತ್ತದೆ.

ಅಸ್ಖಲಿತವಾದ ಮಾತು ಜಿನನದು. ಸುಳ್ಳು ಹೇಳುವವರ ಮಾತು ಹಾಗಿರುವುದಿಲ್ಲ. ಒಂದು ವೇಳೆ ಹಾಕಿದ್ದರೂ ಅಂತಹವರು ಬೆವರುತ್ತಾರೆ. ಆದರೆ, ಜಿನ ಬೆವರದೇ ಅಸ್ಖಲಿತವಾಗಿ ಉಪದೇಶ ಮಾಡುತ್ತಾನೆ. ಆದ್ದರಿಂದ, ಅವನ ಮಾತು ಸತ್ಯ, ಎನ್ನುತ್ತಾರೆ, ಜಿನನ ಅನುಯಾಯಿಗಳು. ಆದರೆ ಪಳಗಿದ, ಔಷಧ ಸೇವಿಸಿದ ಕಳ್ಳರೂ ಬೆವರದೆ ಅಸ್ಖಲಿತವಾಗಿ ಸುಳ್ಳು ಹೇಳುತ್ತಾರೆ. ಆದ್ದರಿಂದ, ಇಷ್ಟರಿಂದಲೇ ಅಪೌರುಷೇಯವಾದ ಜಿನ ಸತ್ಯವಾದಿ, ಎಂದೇನೂ ನಿರ್ಧಾರವಾಗುವುದಿಲ್ಲ.

ಆದರೆ, ವೈದಿಕದರ್ಶನದಲ್ಲಿ ಅಪೌರುಷೇಯವಾದ ವೇದವು

ಅತೀಂದ್ರಿಯವಿಷಯಗಳಿಗೆ ಆಧಾರ. ಅದರ ಹಿನ್ನೆಲೆ ಇರುವುದರಿಂದ ಮನ್ವಾದಿವಾಕ್ಯಗಳೂ ಪ್ರಮಾಣವಾಗುತ್ತವೆ. ಆದ್ದರಿಂದ ಈ ಸಮಸ್ಯೆ ಇಲ್ಲ.

**ಸ್ವರೂಪೇ ಪುದ್ಗಲಸ್ಯೋಕ್ತಾ ದೋಷಾ ಆನಂದಮೇವ ಚ ।**
**ನ ಮನ್ಯತೇ ಪುದ್ಗಲಂ ಸ ದುಃಖಾಭಾವಃ ಸುಖಂ ತ್ವಿತಿ ॥ ೧೩೬ ॥**

ಪುದ್ಗಲಸ್ಯ ಸ್ವರೂಪೇ=ಜೀವನ ಸ್ವರೂಪದಲ್ಲಿ ದೋಷಾಃ=ದೋಷಗಳು ಉಕ್ತಾಃ='ಏವಂ ಚಾತ್ಮಾಕಾರ್ತ್ಸ್ನ್ಯಮ್'(2.2.34) ಎಂಬ ಸೂತ್ರದಲ್ಲಿ ಸೂತ್ರಕಾರರಿಂದ (ದೋಷಗಳು) ಹೇಳಲ್ಪಟ್ಟಿವೆ. ಸಃ=ಜಿನನು ಪುದ್ಗಲಂ= ಜೀವನನ್ನು ಆನಂದಂ=ಆನಂದರೂಪನೆಂದು ನ ಮನ್ಯತೇ=ಒಪ್ಪುವುದಿಲ್ಲ. ಸುಖಂ= ಸುಖವು ದುಃಖಾಭಾವಃ=ದುಃಖದ ಅಭಾವವೆಂದು ಹೇಳುತ್ತಾನೆ.

**ಭಾವಾರ್ಥ**— ಜಿನವಾಕ್ಯ ಪ್ರಮಾಣ ಎನ್ನಲು ಆಧಾರಗಳಿಲ್ಲ, ಎಂದು ಈವರೆಗೆ ಹೇಳಿ, ಇಲ್ಲಿ ಅದು ಕೆಲವೊಂದು ವಿಷಯದಲ್ಲಿ ಅಪ್ರಮಾಣವೂ ಆಗಿದೆ, ಎಂದು ಹೇಳಲಾಗಿದೆ– ಸಮಯಪಾದದಲ್ಲಿ, ಜೈನರ ಆತ್ಮಸ್ವರೂಪದ ಕಲ್ಪನೆ ಸರಿಯಲ್ಲ. ಏಕೆಂದರೆ, ಆತ್ಮನು ದೇಹಪರಿಮಾಣ ಎಂದು ಅವರು ಹೇಳುತ್ತಾರೆ. ಹಾಗೆ ಹೇಳಿದರೆ ಇರುವೆಯ ದೇಹದಲ್ಲಿದ್ದ ಆತ್ಮನಿಗೆ ಜನ್ಮಾಂತರದಲ್ಲಿ ಆನೆಯ ದೇಹ ಬಂದರೆ ಆ ದೇಹದ ತುಂಬ ಆತ್ಮನು ಇಲ್ಲದಾಗಬೇಕಾದೀತು, ಎಂಬ ದೋಷವನ್ನು ಅಲ್ಲಿ ಹೇಳಲಾಗಿದೆ. ಇದಲ್ಲದೆ, ಅವರು ಆತ್ಮನು ಸುಖರೂಪ, ಎಂದು ಒಪ್ಪುವುದಿಲ್ಲ. ಸುಖಕ್ಕಿಂತ ಆತ್ಮನು 'ಭಿನ್ನಃ ಸ್ಯಾತ್, ಅಭಿನ್ನಃ ಸ್ಯಾತ್' ಎಂದು ಸಪ್ತಭಂಗಿಯನ್ನು ಹೇಳುತ್ತಾರೆ. ಅದು ಆತ್ಮಸ್ವರೂಪ ಎನ್ನಲು ಬರುವುದೂ ಇಲ್ಲ. ಏಕೆಂದರೆ, ಅವರಲ್ಲಿ ಸುಖ ದುಃಖಾಭಾವರೂಪ. ಆತ್ಮ ಭಾವರೂಪ. ಅವೆರಡಕ್ಕೆ ಭಾವಾಭಾವವಿರೋಧ ವಿರುವುದರಿಂದ ಅವೆರಡೂ ಒಂದೇ ಆಗಲು ಸಾಧ್ಯವಿಲ್ಲ.

**ಮಾತ್ರಾಭೋಗಾತಿರೇಕೇಣ ಸುಖಾಧಿಕ್ಯಸ್ಯ ದರ್ಶನಾತ್ ।**
**ಸುಖಸ್ಯಾಭಾವತಾ ಕೇನ ನಚ ಸ್ಯಾತ್ ಕಿಂ ವಿಪರ್ಯಯಃ ॥ ೧೩೭ ॥**

ಮಾತ್ರಾಭೋಗಾತಿರೇಕೇಣ=(ಮಾತ್ರಾಃ=ವಿಷಯಪದಾರ್ಥಗಳು)

ವಿಷಯಪದಾರ್ಥಗಳ ಅನುಭವವು ಹೆಚ್ಚುಹೆಚ್ಚಾದಂತೆ ಸುಖಾಧಿಕ್ಯಸ್ಯ= ಸುಖವು ಹೆಚ್ಚು ಹೆಚ್ಚಾಗುವುದು ದರ್ಶನಾತ್=ಕಂಡಿರುವುದರಿಂದ ಸುಖವು ಅಭಾವರೂಪವಲ್ಲ. ಅಭಾವದಲ್ಲಿ ಹೆಚ್ಚು ಕಡಿಮೆ ಎಂಬ ಏರುಪೇರು ಇಲ್ಲ.

ಸುಖದಲ್ಲಿ ತಾರತಮ್ಯವಲ್ಲ. ದುಃಖದಲ್ಲಿ ತಾರತಮ್ಯವಿದೆ. ಅಲ್ಪವಿಷಯ ಭೋಗದಿಂದ ಅಲ್ಪದುಃಖನಿವೃತ್ತಿಯಾಗುತ್ತದೆ. ಇನ್ನೂ ಸ್ವಲ್ಪ ದುಃಖವಿರುತ್ತದೆ. ಪೂರ್ಣ ವಿಷಯಭೋಗಮಾಡಿದರೆ ದುಃಖವೂ ಪೂರ್ಣನಾಶವಾಗುತ್ತದೆ. ಹಸಿವು ಜಾಸ್ತಿಯಾದಾಗ ಒಬ್ಬ ಅರೆಹೊಟ್ಟೆ ಊಟ ಮಾಡುತ್ತಾನೆ. ಅವನಿಗೆ ಹಸಿವಿನ ದುಃಖವು ಪೂರ್ಣವಾಗಿ ನಾಶವಾಗುವುದಿಲ್ಲ. ಅಂತಹವನು ಅಲ್ಪಸುಖಿ. ಹೊಟ್ಟೆತುಂಬ ಉಂಡವನ ಹಸಿವೆಯ ದುಃಖ ಪೂರ್ಣನಾಶ ವಾಗುತ್ತದೆ. ಇಂತಹವನು ಅಧಿಕಸುಖಿ. ಹೀಗೆ ದುಃಖದಲ್ಲಿ ತಾರತಮ್ಯ ವಿರುವುದರಿಂದಾಗಿ ದುಃಖನಿವೃತ್ತಿಯಲ್ಲಿ ತಾರತಮ್ಯಜ್ಞಾನ ಬರುತ್ತದೆ. ವಸ್ತುತಃ ಅಭಾವರೂಪವಾದ ಸುಖದಲ್ಲಿ ತಾರತಮ್ಯ ಇಲ್ಲ. ಇದು ಜೈನರ ವಾದ.

ಇದು ಸರಿಯಲ್ಲ. ಸುಖಸ್ಯ=ಸುಖಕ್ಕೆ ಅಭಾವತಾ=ಅಭಾವರೂಪತ್ವವು ಕೇನ=ಯಾವ ಪ್ರಮಾಣದಿಂದ ಸಿದ್ಧವಾಗುತ್ತದೆ? ವಿಪರ್ಯಯಃ= ದುಃಖವೇ ಸುಖಾಭಾವರೂಪ ಎಂದು ವಿಪರೀತತೆಯು ಕಿಂ ನ ಸ್ಯಾತ್= ಯಾಕಾಗಬಾರದು?

**ಭಾವಾರ್ಥ—** ದುಃಖದ ಅಭಾವವೇ ಸುಖ, ಎನ್ನುವ ವಾದವೇ ಸರಿಯಲ್ಲ. ಸುಖದಲ್ಲಿ ಹೆಚ್ಚು, ಕಡಿಮೆ ಎಂಬ ತಾರತಮ್ಯವಿದೆ. ವಿಷಯ ಪದಾರ್ಥಗಳನ್ನು ಹೆಚ್ಚು ಭೋಗಿಸಿದರೆ ಸುಖ ಹೆಚ್ಚು, ಕಡಿಮೆಭೋಗಿಸಿದರೆ ಸುಖ ಅಲ್ಪ. ಇಂತಹ ತಾರತಮ್ಯ ಭಾವವಸ್ತುವಿನಲ್ಲಿ ಹೇಳಬಹುದು, ಅಭಾವದಲ್ಲಿ ಹೇಳಲಾಗದು. ಒಂದುವೇಳೆ, ಹಿಂದೆ ಹೇಳಿದಂತೆ ದುಃಖಾಲ್ಪತ್ವ-ಮಹತ್ವಪ್ರಯುಕ್ತವಾಗಿ ದುಃಖಾಭಾವದಲ್ಲಿ ತಾರತಮ್ಯ ಇದೆ, ಎಂದರೂ ಸುಖವೂ ದುಃಖದಂತೆ ಭಾವರೂಪವಾದ ಗುಣ ಎನ್ನುವ ಅನುಭವಕ್ಕೆ ಇದು ವಿರುದ್ಧ. ಅನುಭವವನ್ನು ಅಲ್ಲಗಳೆದರೆ ಇದಕ್ಕೆ ವಿರುದ್ಧವಾಗಿಯೂ ವಾದ ಮಾಡಬಹುದು-ಸುಖವು ಭಾವರೂಪ. ಅದರ ಅಭಾವವೇ ದುಃಖ, ಎಂದು.

ಯದಿ ಭಾವೋಽಪಿ ಕಶ್ಚಿತ್ ಸ್ಯಾತ್ ತಸ್ಯೈವಾಭಾವತಾ ಕುತಃ ।
ಯದಿ ಸರ್ವೇಽಪ್ಯಭಾವಾಃ ಸ್ಯುರನ್ಯೋನ್ಯಮಿತಿ ಭಾವತಾ ॥ ೧೩೮ ॥

ಅಭಾವಾಭಾವತೈವ (ತಾ ಯತ್) ಸ್ಯಾತ್ ಕಿಂ ನಶ್ಛಿನ್ನಂ ತದಾ ಭವೇತ್ ।
ಭಾವತ್ವಂ ವಿಧಿರೂಪತ್ವಂ ನಿಷೇಧತ್ವಮಭಾವತಾ ॥ ೧೩೯ ॥

ನಿಷೇಧಸ್ಯ ನಿಷೇಧೋಽಪಿ ಭಾವ ಏವ ಬಲಾದ್ ಭವೇತ್ ।
ಪ್ರಥಮಪ್ರತಿಪತ್ತಿಸ್ತು ಭಾವಾಭಾವನಿಯಾಮಿಕಾ ॥ ೧೪೦ ॥

ಸುಖವು ದುಃಖಾಭಾವರೂಪ ಎನ್ನುವ ಜೈನಮತದಲ್ಲಿ ಯದಿ ಭಾವೋಽಪಿ ಕಶ್ಚಿತ್ ಸ್ಯಾತ್ ಯಾವುದಾದರೊಂದು ಭಾವವಸ್ತು ಇರುವುದಾದಲ್ಲಿ ತಸ್ಯೈವ=ಸುಖಕ್ಕೆ ಮಾತ್ರ ಅಭಾವತಾ=ಅಭಾವರೂಪತ್ವವು ಕುತಃ=ಏಕೆ? ಭಾವರೂಪವೆಂದು ಅಂಗೀಕರಿಸಿರುವ ವಸ್ತುವೂ ಅಭಾವರೂಪ ಎಂದು ಹೇಳಬಹುದು.

ಯದಿ=ಒಂದುವೇಳೆ ಸರ್ವೇಽಪಿ=ಎಲ್ಲಾ ವಸ್ತುಗಳೂ ಅನ್ಯೋನ್ಯಂ ಅಭಾವಾಃ=ಅನ್ಯೋನ್ಯಾಭಾವರೂಪಗಳು ಸ್ಯುಃ=ಆಗುತ್ತವೆ ಎಂದು ನೀನು ಹೇಳುವುದಾದಲ್ಲಿ ಆಗ ಅಭಾವಾಭಾವತೈವ=ಅಭಾವದ ಅಭಾವತ್ವವೇ ಭಾವತಾ=ಭಾವತ್ವ ಎಂದು ಸ್ಯಾತ್=ಆದೀತು. ತದಾ=ಆಗ ನಃ ಕಿಂಛಿನ್ನಂ ಸ್ಯಾತ್=ನಮಗೇನು ನಷ್ಟವಾಯಿತು? ಏನೂ ಆಗಿಲ್ಲ.

**ಭಾವಾರ್ಥ—** ಸುಖವು ದುಃಖಾಭಾವ ಎನ್ನುವ ಜೈನರು ಯಾವುದಾದರೊಂದು ವಸ್ತುವು ಭಾವರೂಪ ಎಂದು ಒಪ್ಪಿರಲೇಬೇಕು. ಆಗ ಅಂತಹ ಭಾವವೂ ಅದಕ್ಕೆ ವಿರುದ್ಧವಾದ ಇನ್ನೊಂದರ ಅಭಾವರೂಪ ಏಕಾಗಿರಬಾರದು? ಜೈನರು ಹೀಗೆ ವಾದಮಾಡಬಹುದು—ಎಲ್ಲ ವಸ್ತುಗಳೂ ಅಭಾವರೂಪಗಳು ನೀರು ಅಂದರೆ ಬೆಂಕಿ ಅಲ್ಲದ್ದು. ಬೆಂಕಿಯ ಅನ್ಯೋನ್ಯಾಭಾವ ನೀರು. ನೀರಿನ ಅನ್ಯೋನ್ಯಾಭಾವ ಬೆಂಕಿ. ಹೀಗೆ ಪ್ರತಿಯೊಂದು ವಸ್ತು ಇನ್ನೊಂದು ವಸ್ತುವಿನ ಅನ್ಯೋನ್ಯಾಭಾವರೂಪ. ಆದ್ದರಿಂದ ಪ್ರತಿಯೊಂದು ವಸ್ತುಗಳೂ ಅಭಾವರೂಪಗಳು ಎಂದು.

ಇದು ಸರಿಯಲ್ಲ. ಇದರಿಂದ ಹೊಸವಾದವನ್ನೇನೂ ಮಂಡಿಸಿದಂತಾಗಿಲ್ಲ. ಈ ವಾದವನ್ನು ಎಲ್ಲರೂ ಒಪ್ಪಿದ್ದಾರೆ. ಸುಖವಲ್ಲದ್ದು ದುಃಖ, ದುಃಖವಲ್ಲದ್ದು ಸುಖ. ಅಂದರೆ, ಸುಖಾನ್ಯೋನ್ಯಾಭಾವ ದುಃಖ. ಅಂತಹ ದುಃಖದ ಅನ್ಯೋನ್ಯಾಭಾವ ಸುಖ. ಅಲ್ಲಿಗೆ ಸುಖಾನ್ಯೋನ್ಯಾಭಾವಾತ್ಮಕ ದುಃಖ. ಇದನ್ನು ಎಲ್ಲರೂ ಅಂಗೀಕರಿಸಿದ್ದಾರೆ. ಇಂತಹ ಅಭಾವರೂಪತ್ವವು ಆತ್ಮನಿಗೂ ಇದೆ. ಸುಖಕ್ಕೂ ಇದೆ. ಅಂದಮೇಲೆ ಆತ್ಮನು ಸುಖರೂಪ ಎನ್ನುವುದಕ್ಕೆ ಇದೇನೂ ಬಾಧಕವಲ್ಲ.

ಆದ್ದರಿಂದ ಭಾವತ್ವಂ=ಭಾವತ್ವ ಎಂದರೆ ವಿಧಿರೂಪತ್ವಂ=ವಿಧಿರೂಪತ್ವ. ಅಭಾವತಾ=ಅಭಾವತ್ವ ಎಂದರೆ ನಿಷೇಧತಾ=ನಿಷೇಧರೂಪತ್ವ. ನಿಷೇಧಸ್ಯ-ನಿಷೇಧೋಽಪಿ=ನಿಷೇಧಧ ನಿಷೇಧವೂ ಬಲಾತ್=ಅನುಭವಬಲದಿಂದ ಭಾವ ಏವ ಭವೇತ್=ಭಾವರೂಪವೇ ಆಗುತ್ತದೆ.

**ಭಾವಾರ್ಥ—** ಆದ್ದರಿಂದ ಭಾವಾಭಾವವ್ಯವಸ್ಥೆಯನ್ನು ಹೀಗೆ ಮಾಡಬೇಕು. ವಿಧಿರೂಪವಾದುದು ಭಾವ. ನೀರು, ಬೆಂಕಿ ಇವೆಲ್ಲ ಪ್ರಥಮದೃಷ್ಟಿಗೆ ಇವೆ, ಎಂದು ಗೋಚರವಾಗುತ್ತವೆ. ಅವುಗಳು ಭಾವವಸ್ತುಗಳು. ಮೊದಲ ದೃಷ್ಟಿಯಲ್ಲೇ ಇಲ್ಲವೆಂದು ತಿಳಿಯಲ್ಪಡುವ ವಸ್ತು ಅಭಾವ. ಇಲ್ಲಿ ಬೆಳಕಿಲ್ಲ, ಇಲ್ಲಿ ನೀರಿಲ್ಲ, ಹೀಗೆ ತೋರುವುದು ಬೆಳಕಿನ ಅಭಾವ, ನೀರಿನ ಅಭಾವ. ಅಭಾವವು ನಿಷೇಧಾತ್ಮಕವಾದುದರಿಂದಲೇ ಅಭಾವದ ಅಭಾವ ವಿಧಿ. ನೀರಿನ ಅಭಾವ ಇಲ್ಲ, ಎಂದರೆ ನೀರಿದೆ ಎಂದರ್ಥ.

ಭಾವವೂ ಅಭಾವದ ನಿಷೇಧರೂಪವಾದರೆ ಅದೂ ನಿಷೇಧರೂಪವಾದ ಅಭಾವವೇ ಆಯಿತು. ಮತ್ತೆ ಭಾವಾಭಾವ ವ್ಯವಸ್ಥೆ ಹೇಗೆ? ಎನ್ನುವ ಸಮಸ್ಯೆ ಬಂತು. ಇದನ್ನು ಹೀಗೆ ಪರಿಹರಿಸಿಕೊಳ್ಳಬೇಕು.

ಪ್ರಥಮಪ್ರತಿಪತ್ತಿಸ್ತು=ಮೊದಲು ಬರುವ ಜ್ಞಾನವು ಭಾವಾಭಾವ ನಿಯಾಮಿಕಾ=ಯಾವುದು ಭಾವ, ಯಾವುದು ಅಭಾವ ಎನ್ನುವುದಕ್ಕೆ ನಿಯಾಮಕವಾಗುತ್ತದೆ.

ಪ್ರಥಮಪ್ರತೀತಿಯಲ್ಲಿ 'ಇದೆ' ಎಂದು ತಿಳಿಯಲ್ಪಡುವ ವಸ್ತು ಭಾವ. ಉದಾಹರಣೆಗೆ–ನೀರಿದೆ. ಅದೂ ಎರಡನೆಯ ಪ್ರತೀತಿಯಲ್ಲಿ ನಿಷೇಧ

ರೂಪವಾಗಿ ಕಾಣಬಹುದು– ನೀರಿನ ಅಭಾವ ಇಲ್ಲ. ಆದರಂತೆ, ಪ್ರಥಮ ಪ್ರತೀತಿಯಲ್ಲಿ ಇಲ್ಲ ಎಂದು ತಿಳಿಯಲ್ಪಡುವ ವಸ್ತು ಅಭಾವ. ಮೋಕ್ಷದಲ್ಲಿ ದುಃಖವಿಲ್ಲ, ಸಂಸಾರದಲ್ಲಿ ಸುಖವಿಲ್ಲ. ಇವೆಲ್ಲ ಅಭಾವಗಳು. ಹೀಗೆ ಯಾವುದು ಭಾವ, ಯಾವುದು ಅಭಾವ ಎನ್ನುವ ವ್ಯವಸ್ಥೆಯನ್ನು ಮಾಡಬಹುದು.

**ಜಿನೋಕ್ತ ಸ್ವಾತ್ಮಜ್ಞಾನ ಮೋಕ್ಷಪ್ರದವಾಗದು**

**ನಚ ಪುದ್ಗಲವಿಜ್ಞಾನಂ ಮೋಕ್ಷದಂ ಭವತಿ ಕ್ವಚಿತ್ ।**
**ಅಸ್ವಾತಂತ್ರ್ಯಾತ್ ಪುದ್ಗಲಸ್ಯ ಜ್ಞಾತೋಽಪಿ ಸುಖದೋ ನಹಿ ॥ ೧೪೧ ॥**

ಜಿನನು ತಪ್ಪು ಹೇಳುತ್ತಾನಾದ್ದರಿಂದ ಅವನು ಹೇಳಿದ ಮೋಕ್ಷಸಾಧನ ಅಪ್ರಾಮಾಣಿಕ ಎಂದು ಇದುವರೆಗೆ ಹೇಳಿ ಅದು ಯುಕ್ತಿವಿರುದ್ಧವೂ ಆಗಿದೆ, ಎಂದು ಮುಂದೆ ಹೇಳಲಾಗಿದೆ. ಪುದ್ಗಲವಿಜ್ಞಾನಂ=ಜೀವಾತ್ಮನ ಜ್ಞಾನವು ಕ್ವಚಿತ್=ಎಂದೂ ಮೋಕ್ಷದಂ=ಮೋಕ್ಷಪ್ರದವಾಗಿ ನಚ ಭವತಿ=ಆಗುವುದಿಲ್ಲ. ಜಡವಾದ ಜ್ಞಾನವು ಮೋಕ್ಷಪ್ರದವಾಗದಿದ್ದರೂ ಜ್ಞಾನಕ್ಕೆ ವಿಷಯನಾದ ಪುದ್ಗಲನು ಚೇತನನಾದುದರಿಂದ ಮೋಕ್ಷವೀಯಬಹುದು ಎಂದರೆ, ಅದು ಸಾಧ್ಯವಿಲ್ಲ. ಪುದ್ಗಲಸ್ಯ=ಜೀವನಿಗೆ ಅಸ್ವಾತಂತ್ರ್ಯಾತ್=ಸ್ವಾತಂತ್ರ್ಯ ಇಲ್ಲದಿರುವುದರಿಂದ ಜ್ಞಾತೋಽಪಿ=ಪುದ್ಗಲನು ತಿಳಿಯಲ್ಪಟ್ಟರೂ ಸುಖದಃ ನಹಿ= ಸುಖಪ್ರದನಲ್ಲ.

ಭಾವಾರ್ಥ— ದೇಹಾತಿರಿಕ್ತತ್ವೇನ ಪುದ್ಗಲನ ಜ್ಞಾನವು ಮೋಕ್ಷಸಾಧನ ಎಂದು ಜೈನರು ಹೇಳುತ್ತಾರೆ. ಆದರೆ ಜ್ಞಾನವು ಜಡ. ಅದು ಹೇಗೆ ತಾನೇ ಮೋಕ್ಷವನ್ನು ಕೊಡಬಲ್ಲದು? ಇನ್ನು ಜ್ಞಾತನಾದ ಪುದ್ಗಲನು ಚೇತನನಾದ ಕಾರಣ ಮೋಕ್ಷಪ್ರದ ಎನ್ನಬೇಕು. ಆದರೆ, ಅವನು ಅಸ್ವತಂತ್ರ. ಅಂತಹವನು ಮೋಕ್ಷವನ್ನು ಕೊಡುವುದು ಹೇಗೆ?

**ನಹಿ ದುಃಖಿಪರಿಜ್ಞಾನಾದ್ ದುಃಖಿತ್ವಂ ವಿನಿವರ್ತತೇ ।**
**ಯದಿ ಪುದ್ಗಲವಿಜ್ಞಾನಾದದುಃಖೀ ಸ್ಯಾತ್ ಕಥಂಚನ ॥ ೧೪೨ ॥**

**ದೇಹವಾನಪಿ ನಾದುಃಖೀ ಕಿಂ ಜ್ಞಾನಾದುತ್ತರಂ ಸದಾ ।**
**ಈಶಕ್‌ಲೃಪ್ತ್ಯನುಸಾರೇಣ ಸ್ಯಾತ್ ಕಾಲಾದೀಶವಾದಿನಃ ॥ ೧೪೩ ॥**

ಇನ್ನೂ ಒಂದು ಕಾರಣವಿದೆ— ದುಃಖಿಪರಿಜ್ಞಾನಾತ್=ದುಃಖಿಯಾದ ಪುದ್ಗಲನ ಜ್ಞಾನದಿಂದ ದುಃಖಿತ್ವಂ=ದುಃಖಿತ್ವವು ನ ನಿವರ್ತತೇ=ನಿವೃತ್ತಿ ಯಾಗದು.

ಭಾವಾರ್ಥ— ಪುದ್ಗಲ ಸ್ವತಃ ದುಃಖದಲ್ಲಿ ಮುಳುಗಿದ್ದಾನೆ. ಅಂತಹವನ ಜ್ಞಾನದಿಂದ ಶಾಶ್ವತದುಃಖನಿವೃತ್ತಿರೂಪವಾದ ಮೋಕ್ಷವು ಸಿಗುವುದೆಂತು?

ಆಕ್ಷೇಪ—ಆತ್ಮಜ್ಞಾನವೇ ಮೋಕ್ಷಪ್ರದ. ಅದು ಜಡವಾದರೂ ಮೋಕ್ಷಪ್ರದವಾಗುತ್ತದೆ. ಯಜಮಾನ ಬ್ರಾಹ್ಮಣರಿಗೆ ಹಸುವನ್ನು ದಾನ ಕೊಡುವಂತೆ ಜ್ಞಾನವು ಮೋಕ್ಷವನ್ನು ಕೊಡುವುದಿಲ್ಲ. ಏಕೆಂದರೆ, ಮೋಕ್ಷ ವೆಂದರೆ ದುಃಖನಾಶ. ಬೆಳಕು ಬಂದಾಗ ಕತ್ತಲೆ ನಾಶವಾಗುವಂತೆ ಜ್ಞಾನ ಬಂದಾಗ ಅದಕ್ಕೆ ವಿರೋಧಿಯಾದ ದುಃಖವೂ ತಾನಾಗಿಯೇ ನಾಶವಾಗುತ್ತದೆ. ಇದು ಪೂರ್ವಪಕ್ಷ.

ಇದಕ್ಕೆ ಸಮಾಧಾನ ಹೀಗೆ— ಯದಿ=ಒಂದುವೇಳೆ ಪುದ್ಗಲ ವಿಜ್ಞಾನಾತ್=ಜೀವನ ಜ್ಞಾನದಿಂದಾಗಿ ಕಥಂಚನ=ದುಃಖ ಮತ್ತು ಸ್ವಾತ್ಮಜ್ಞಾನ ಗಳಿಗೆ ವಿರೋಧವಿರುವುದರಿಂದಾಗಿ ಅದುಃಖೀ ಸ್ಯಾತ್=ಜೀವನು ದುಃಖ ವಿಲ್ಲದವನು ಆಗುತ್ತಾನೆಂದಾದಲ್ಲಿ ದೇಹವಾನಪಿ=ಆತ್ಮಜ್ಞಾನಿಯು ದೇಹವುಳ್ಳವನಾದರೂ ಜ್ಞಾನಾದುತ್ತರಂ=ಜ್ಞಾನೋತ್ತರ ಕಾಲದಲ್ಲಿ ಸದಾ= ನಿರಂತರವಾಗಿ ಅದುಃಖೀ ಕಿಂ ನ=ಸರ್ವಥಾ ದುಃಖರಹಿತನು ಯಾಕಾಗಿಲ್ಲ?

ಬೆಳಕು ಕತ್ತಲೆಗೆ ವಿರೋಧಿಯಾದುದರಿಂದ ಅದು ಬಂದಕೂಡಲೇ ಕತ್ತಲು ನಾಶವಾಗುತ್ತದೆ. ಅದರಂತೆ ದುಃಖವಿರೋಧಿಯಾದ ಸ್ವಾತ್ಮಜ್ಞಾನ ಬಂದಕೂಡಲೇ ದುಃಖವು ಪರಿಹಾರವಾಗಬೇಕು. ಜಿನನಿಗೆ ಸ್ವಾತ್ಮಜ್ಞಾನವಿದೆ. ಆದರೂ ಅವನಿಗೆ ನಮ್ಮಂತಹ ದೇಹವಿರುವುದರಿಂದ ದುಃಖವೂ ಅನಿವಾರ್ಯ. ಆದ್ದರಿಂದ ಸ್ವಾತ್ಮಜ್ಞಾನವು ದುಃಖಕ್ಕೆ ವಿರೋಧಿಯಲ್ಲ. ಅಂದರೆ ಮೋಕ್ಷಕ್ಕೆ ಕಾರಣವಲ್ಲ.

ಹೀಗಾದರೆ, ಸಿದ್ಧಾಂತದಲ್ಲೂ ಈಶಜ್ಞಾನವು ಮೋಕ್ಷಕ್ಕೆ ಕಾರಣ ವಾಗಲಿಕ್ಕಿಲ್ಲ. ಅದು ಕಾರಣವಾದರೆ ಅಪರೋಕ್ಷಜ್ಞಾನ ಬಂದಕೂಡಲೇ ಮೋಕ್ಷ ವಾಗಬೇಕಾಗುತ್ತದೆ, ಎಂದರೆ ಈ ಆಕ್ಷೇಪ, ಸಿದ್ಧಾಂತದಲ್ಲಿ ಇಲ್ಲ ಎನ್ನುತ್ತಾರೆ—

ಈಶವಾದಿನಃ=ಪ್ರಸನ್ನನಾದ ಈಶನು ಮೋಕ್ಷಪ್ರದ ಎನ್ನುವ ಸಿದ್ಧಾಂತದಲ್ಲಿ ಈಶಕ್ಲೃಪ್ತ್ಯನುಸಾರೇಣ=ಈಶನ ಇಚ್ಛಾವಿಶೇಷಕ್ಕೆ ಅನುಗುಣ ವಾಗಿ ಕಾಲಾತ್=ಜ್ಞಾನ ಬಂದು ಸ್ವಲ್ಪಕಾಲ ಕಳೆದಮೇಲೆ ಮುಕ್ತಿಯಾಗುತ್ತದೆ.

**ಭಾವಾರ್ಥ—** ಸಿದ್ಧಾಂತದಲ್ಲಿ ಜ್ಞಾನ ಮೋಕ್ಷಪ್ರದವಲ್ಲ, ಪ್ರಸನ್ನನಾದ ಭಗವಂತನೇ ಮೋಕ್ಷಪ್ರದ. ಜೀವನಿಗೆ ಅಪರೋಕ್ಷಜ್ಞಾನ ಬಂದರೂ ಈಶನು 'ಇವನಿಗೆ ಈಗಲೇ ಮೋಕ್ಷವಾಗಲಿ' ಎನ್ನುವ ಇಚ್ಛೆಯನ್ನು ಮಾಡುವುದಿಲ್ಲ. ಬ್ರಾಹ್ಮಣನ ಆಚಾರವಿಚಾರಗಳಿಂದ ಪ್ರಸನ್ನನಾದರೂ ರಾಜ 'ಮುಂದಿನ ಸೂರ್ಯಗ್ರಹಣದಲ್ಲಿ ಇವನಿಗೆ ಗೋದಾನ ಮಾಡಬೇಕು' ಎಂದು ಸಂಕಲ್ಪ ಮಾಡುವಂತೆ ದೇವರೂ 'ಅಪರೋಕ್ಷಜ್ಞಾನಿಯಾದ ಇವನಿಗೆ ಇಂತಹ ಕಾಲವಿಶೇಷದಲ್ಲಿ ಮೋಕ್ಷವನ್ನು ಕೊಡಬೇಕು' ಎಂದು ಇಚ್ಛೆಮಾಡುತ್ತಾನೆ. ಆ ಕಾಲ ಬಂದಾಗಲೇ ಮೋಕ್ಷವಾಗುತ್ತದೆ, ಜ್ಞಾನ ಬಂದ ಕೂಡಲೇ ಆಗುವುದಿಲ್ಲ.

ಆದ್ದರಿಂದ ಜಿನೋಕ್ತವಾದ ಆತ್ಮಜ್ಞಾನದಿಂದ ಮೋಕ್ಷವಾಗುವುದಿಲ್ಲ.

**ಧರ್ಮವೂ ಮೋಕ್ಷಸಾಧನವಲ್ಲ**

**ಕರ್ಮಹೇತುತ್ವಮಪಿ ತು ನಿಶ್ಚಿತನ್ಯಾನ್ನಹಿ ಕ್ವಚಿತ್ ।**
**ಅಶೇಷದುಃಖವಿಲಯೇ ನೇದಾನೀಂ ಕಾರಣಂ ಯಥಾ ॥ ೧೪೪ ॥**

**ತಥೋತ್ತರಂ ಚ ನೈವ ಸ್ಯಾದ್ ದೃಷ್ಟಿಪೂರ್ವಾಽನುಮಾ ಯತಃ ।**
**ಶಕ್ತಸ್ಯಾನ್ಯಸ್ಯ ವಿಜ್ಞಾನಂ ತತ್ಪ್ರೀತಿಜನಕಂ ಯದಿ ॥ ೧೪೫ ॥**

**ತಥೈ(ಯ್ಯೆ)ವ ಬಂಧಹಾನಿಃ ಸ್ಯಾದಿತಿ ಕಿಂ ನಾಮ ದೂಷಣಮ್।**
**ಸ್ವಜ್ಞಾನಾದ್ ಬಂಧಹಾನಿಸ್ತು ದೃಶ್ಯತೇ ಕಸ್ಯ ಕುತ್ರಚಿತ್ ॥ ೧೪೬ ॥**

ಕರ್ಮಹೇತುತ್ವಮಪಿ=ಕರ್ಮಕ್ಕೆ ಮೋಕ್ಷಹೇತುತ್ವವೂ ನತು=ಯುಕ್ತ

ವಲ್ಲ. ಕ್ವಚಿತ್ ಎಲ್ಲೂ ನಿಶ್ಚೈತನ್ಯಾತ್=ಚೈತನ್ಯವಿಲ್ಲದ ಜಡವಾದ ಕರ್ಮದಿಂದ ನಹಿ=ಮೋಕ್ಷವು ಇಲ್ಲ.

ಕರ್ಮವು ಜಡ. ಜಡವು ಮೋಕ್ಷದಾತೃ ಎನ್ನುವುದು ಉಭಯವಾದಿ ಸಿದ್ಧವಲ್ಲ.

ಅಲ್ಲದೆ, ಯಥಾ=ಹೇಗೆ ಇದಾನೀಂ=ಕ್ರಿಯೋತ್ತರಕಾಲದಲ್ಲಿ ಹುಟ್ಟಿದ ಪುಣ್ಯವು ಅಶೇಷದುಃಖವಿಲಯೇ=ಸಕಲದುಃಖನಾಶರೂಪವಾದ ಮೋಕ್ಷದಲ್ಲಿ ನ ಕಾರಣಂ=ಕಾರಣವಲ್ಲವೋ ತಥಾ=ಅದರಂತೆ ಉತ್ತರಂ=ಉತ್ತರಕಾಲದಲ್ಲಿರುವ ಅದೇ ಕರ್ಮವೂ ನೈವ ಸ್ಯಾತ್=ಮೋಕ್ಷಕಾರಣವಾಗಲಿಕ್ಕಿಲ್ಲ.

ಒಂದುವೇಳೆ ಕರ್ಮವು ಮೋಕ್ಷಜನಕವಾದರೆ ಕ್ರಿಯೋತ್ತರಕಾಲದಲ್ಲಿ ಹುಟ್ಟಿದ ಕೂಡಲೇ ಕರ್ಮದಿಂದ (ಪುಣ್ಯದಿಂದ) ಮೋಕ್ಷವಾಗಬೇಕಾದೀತು. ಹಾಗಾದರೆ ಕೂಡಲೇ ದೇಹಪಾತವಾದೀತು. ಹುಟ್ಟಿದ ಕೂಡಲೇ ಪುಣ್ಯವು ಮೋಕ್ಷಹೇತುವಲ್ಲ ಎಂದಾದರೆ ಅದೇ ಕರ್ಮ ಮುಂದೆಯೂ ಮೋಕ್ಷಕ್ಕೆ ಕಾರಣವಾಗಲಿಕ್ಕಿಲ್ಲ.

ಕರ್ಮಗಳು ಅನೇಕ ಇವೆ. ಅವೆಲ್ಲ ಕರ್ಮಗಳು ಸೇರಿ ಮೋಕ್ಷಕಾರಣವೆಂದರೆ, ಇಂದು ಜನಿಸಿದ ಕರ್ಮದಿಂದ ಹೇಗೆ ಮೋಕ್ಷವಾಗಲಿಲ್ಲವೋ ಅದರಂತೆ ಮುಂದಿನ ಕರ್ಮದಿಂದಲೂ ಮೋಕ್ಷವಾಗದು. ಮೊದಲ ಕರ್ಮಸಹಿತ ಅಂತಿಮಕರ್ಮವು ಮೋಕ್ಷಕ್ಕೆ ಕಾರಣ, ಎನ್ನುವುದೂ ಸರಿಯಲ್ಲ. ಜ್ಞಾನೋತ್ತರದಲ್ಲಿ ಇಂತಿಷ್ಟೇ ಕರ್ಮಗಳನ್ನು ಮಾಡಬೇಕು, ಎಂಬ ನಿರ್ಬಂಧಕ್ಕೆ ಪ್ರಮಾಣವೂ ಇಲ್ಲ, ಜೈನರು ಅದನ್ನು ಅಂಗೀಕರಿಸುವುದೂ ಇಲ್ಲ.

ಯತಃ=ಯಾವಕಾರಣದಿಂದ ಹಿಂದೆ ಮಾಡಿದ ಅನುಮಾನವು ದೃಷ್ಟಿಪೂರ್ವಾ=ಪ್ರಮಾಣಸಿದ್ಧವಾದ ವ್ಯಾಪ್ತಿವುಳ್ಳದ್ದೋ ಅದರಿಂದಾಗಿ ಅದು ಅನುಮಾನಾಭಾಸವಲ್ಲ. ಕರ್ಮವು ಜಡವಾದ ಕಾರಣ ಮೋಕ್ಷಪ್ರದವಲ್ಲ, ಇತ್ಯಾದಿಯಾಗಿ ನಾವು ಮಾಡಿರುವ ಅನುಮಾನಗಳ ವ್ಯಾಪ್ತಿಯು ಪ್ರತ್ಯಕ್ಷಸಿದ್ಧವಾಗಿದೆ. ಆದ್ದರಿಂದ ಆ ಅನುಮಾನಗಳನ್ನು ಆಭಾಸಗಳೆಂದು ಉಪೇಕ್ಷೆಮಾಡುವಂತಿಲ್ಲ.

ಸಿದ್ಧಾಂತಪಕ್ಷಸಾಧಕವಾದ ಅನುಮಾನವೂ ಆಭಾಸವಲ್ಲ—ಶಕ್ತಸ್ಯ= ಮೋಕ್ಷಕೊಡಲು ಸಮರ್ಥನಾದ ಅನ್ಯಸ್ಯ=ಜೀವಭಿನ್ನನಾದ ಈಶನ ವಿಜ್ಞಾನಂ=ಗುಣೋತ್ಕರ್ಷಜ್ಞಾನವು ತತ್‌ಪ್ರೀತಿಜನಕಂ=ಅವನ ಪ್ರೀತಿಗೆ ಕಾರಣವಾಗುತ್ತದೆ ಎಂದು ಯದಿ=ಅನುಮಾನ ಮಾಡಿದಲ್ಲಿ ಯದಿಚ= ಒಂದುಪಕ್ಷ ತಯ್ಯೈವ=ಆ ಪ್ರೀತಿಯಿಂದಲೇ ಬಂಧಹಾನಿಃ ಸ್ಯಾತ್=ಬಂಧದ ನಾಶವಾಗುತ್ತದೆ ಎಂದು ಅನುಮಾನ ಮಾಡಿದರೆ ಕಿಂ ನಾಮ ದೂಷಣಂ=ಏನು ತಾನೇ ದೋಷವಿದೆ. ಏಕೆಂದರೆ, ಇದು ದೃಷ್ಟಿಪೂರ್ವಾನುಮಾ=ಪ್ರಮಾಣ ಸಿದ್ಧವ್ಯಾಪ್ತಿ ಇರುವ ಅನುಮಾನವಾಗಿದೆ.

ಜೀವಭಿನ್ನನಾದ ಸ್ವತಂತ್ರನಾದ ಈಶ್ವರನ ಗುಣೋತ್ಕರ್ಷಜ್ಞಾನದಿಂದ ಅವನ ಪ್ರಸಾದ, ಪ್ರಸಾದದಿಂದ ಬಂಧಮುಕ್ತಿ ಎಂದು ಅನುಮಾನದಿಂದ ಸಾಧಿಸಿದರೆ ಇದಕ್ಕೆ ನಿದರ್ಶನ ಲೋಕದಲ್ಲಿ ಕಂಡಿದೆ. ರಾಜನಲ್ಲಿ ಗೌರವದಿಂದ ಅವನು ಪ್ರಸನ್ನನಾಗುತ್ತಾನೆ. ಅದರಿಂದ ಬಂಧನದಿಂದ ಬಿಡುಗಡೆಯಾಗುತ್ತದೆ. ಆದ್ದರಿಂದ ಈ ಅನುಮಾನವೂ ನಿರ್ದುಷ್ಟವಾಗಿದೆ.

ಆದರೆ, ಸ್ವಜ್ಞಾನಾತ್=ಬದ್ಧನಾದವನ ಜ್ಞಾನದಿಂದಲೇ ಬಂಧಹಾನಿಃ= ಬಂಧದ ನಾಶವು ಕಸ್ಯ=ಯಾರಿಗಾದರೂ ಕುತ್ರಚಿತ್=ಎಲ್ಲಾದರೂ ದೃಶ್ಯತೇ=ಕಂಡಿದೆಯೇ?

ಜೈನರು, ಬದ್ಧನಾದ ಜೀವನ ಜ್ಞಾನದಿಂದ ಬಂಧನಿವೃತ್ತಿಯನ್ನು ಸಾಧಿಸುತ್ತಾರೆ. ಆದರೆ, ಇದಕ್ಕೊಂದು ನಿದರ್ಶನವಿಲ್ಲ, ಆದ್ದರಿಂದ ಅನುಮಾನಕ್ಕೆ ಅಗತ್ಯವಾದ ವ್ಯಾಪ್ತಿಯೇ ಇಲ್ಲ.

**ಅಹಿಂಸೆಯೇ ಪರಮಧರ್ಮವಲ್ಲ**

ಜೈನರು ಹೀಗೆ ಆಕ್ಷೇಪಿಸಬಹುದು–ಧರ್ಮ ಮತ್ತು ಜ್ಞಾನಗಳು ಮೋಕ್ಷಕ್ಕೆ ಸಾಧನಗಳಾದರೆ ಅಂತಹ ಧರ್ಮ–ಜ್ಞಾನಗಳು ಹುಟ್ಟಿದ ಕೂಡಲೇ ಮೋಕ್ಷವಾಗಲಿ, ಎಂದು ಹಿಂದೆ ಮಾಡಿರುವ ಆಕ್ಷೇಪ ಸರಿಯಲ್ಲ. ಕಾರಣವಿದ್ದರೂ ಪ್ರತಿಬಂಧಕವಿರುವುದರಿಂದ ಮೋಕ್ಷವಾಗುವುದಿಲ್ಲ.

ಜ್ಞಾನಿಯ ಆಯುಷ್ಯಕ್ಕೆ ಕಾರಣವಾದ ಅಘಾತಿಕರ್ಮವೇ ಪ್ರತಿಬಂಧಕ. ಅಂತಹ ಕರ್ಮವು ನಾಶವಾದ ಮೇಲೆ ಮೋಕ್ಷವಾಗುತ್ತದೆ.

ಇದು ಸರಿಯಲ್ಲ. ಧರ್ಮವೆಂದರೆ ಅಹಿಂಸೆ, ಜ್ಞಾನವೆಂದರೆ ಜೀವನು ದೇಹದಷ್ಟು ಪರಿಮಿತವಾಗಿದ್ದಾನೆ, ಎನ್ನುವ ಜ್ಞಾನ. ಇವೆರಡು ಮೋಕ್ಷಕ್ಕೆ ಕಾರಣ, ಎನ್ನಲು ಆಧಾರವಿದ್ದಲ್ಲಿ ಪ್ರತಿಬಂಧಕವನ್ನು ಕಲ್ಪಿಸಬಹುದಿತ್ತು. ಆದರೆ, ಅದಕ್ಕೆ ಆಧಾರವೇ ಇಲ್ಲ. ಈ ದೋಷವನ್ನು ಹೇಳುವುದಕ್ಕಾಗಿ ಮೊದಲು ಅಹಿಂಸೆಯು ಪರಮಧರ್ಮ, ಅದೇ ಮೋಕ್ಷಕಾರಣ ಎನ್ನುವುದಕ್ಕೆ ಪ್ರಮಾಣವಿಲ್ಲ ಎಂದು ತಿಳಿಸುತ್ತಾರೆ.

**ಅಹಿಂಸಾಯಾಶ್ಚ ಧರ್ಮತ್ವಂ ಕೇನ ಮಾನೇನ ಗಮ್ಯತೇ ।**
**ಹಿಂಸಾಯಾ ಏವ ಧರ್ಮತ್ವಮಿತ್ಯುಕ್ತೇ ಸ್ಯಾತ್ ಕಿಮುತ್ತರಮ್ ॥೧೪೭॥**

ಅಹಿಂಸಾಯಾಶ್ಚ=ಅಹಿಂಸೆ, ಸಪ್ತಘಟಿಕಾಭೋಜನ ಇವುಗಳಿಗೆ ಧರ್ಮತ್ವಂ=ಧರ್ಮತ್ವವು ಕೇನ ಮಾನೇನ=ಯಾವ ಪ್ರಮಾಣದಿಂದ ಗಮ್ಯತೇ=ತಿಳಿಯಲ್ಪಡುತ್ತದೆ? ಹಿಂಸಾಯಾಃ ಏವ=ಹಿಂಸೆಗೇ ಧರ್ಮತ್ವಂ= ಧರ್ಮತ್ವ ಇದೆ, ಇತ್ಯುಕ್ತೇ=ಹೀಗೆ ಪ್ರತಿಯಾಗಿ ಹೇಳಿದರೆ ಕಿಮುತ್ತರಮ್= ಉತ್ತರವೇನು?

**ಭಾವಾರ್ಥ—** ಅಹಿಂಸೆ ಮತ್ತು ಸೂರ್ಯಾಸ್ತಕ್ಕೆ ಏಳು ಘಳಿಗೆಯ ಮೊದಲೇ ಊಟಮಾಡಬೇಕು, ಇದಕ್ಕೆ ಏನು ಪ್ರಮಾಣ? ಜಿನವಾಕ್ಯವೇ ಪ್ರಮಾಣವೆಂದರೆ, ಇನ್ನೊಬ್ಬ ಆಚಾರ್ಯ ಹಿಂಸೆಯೇ ಧರ್ಮವೆಂದರೆ ಅದಕ್ಕೆ ಪ್ರತ್ಯುತ್ತರವೇನು? ಆದ್ದರಿಂದ, ಒಬ್ಬ ವ್ಯಕ್ತಿಯ ಮಾತಿನಿಂದ ಧರ್ಮಾಧರ್ಮ ಗಳ ನಿರ್ಧಾರವಾಗುವುದಿಲ್ಲ.

**ಧರ್ಮಸ್ಯ ಸುಖಹೇತುತ್ವಮಪಿ ಕೇನಾವಗಮ್ಯತೇ ।**
**ಹತ್ಯಾಯಾ ಮೋಕ್ಷಹೇತುತ್ವಂ ಕುತೋ ಮಾನಾನ್ನಿವಾರ್ಯತೇ ॥೧೪೮॥**

ಧರ್ಮಸ್ಯ=ಅಹಿಂಸಾದಿಧರ್ಮಗಳಿಗೆ ಸುಖಹೇತುತ್ವಮಪಿ=ಮೋಕ್ಷ ಸುಖಕಾರಣತ್ವವೂ ಕೂಡಾ ಕೇನ=ಯಾವಪ್ರಮಾಣದಿಂದ ಅವಗಮ್ಯತೇ=

ತಿಳಿಯಲ್ಪಡುತ್ತದೆ? ಹತ್ಯಾಯಾಃ=ಹಿಂಸೆಗೆ ಮೋಕ್ಷಹೇತುತ್ವಂ=ಮೋಕ್ಷ ಕಾರಣತ್ವವು ಕುತೋ ಮಾನಾತ್=ಯಾವ ಪ್ರಮಾಣದಿಂದ ನಿವಾರ್ಯತೇ= ನಿರಾಕರಿಸಲ್ಪಡುತ್ತದೆ?

**ಭಾವಾರ್ಥ—** ಅಹಿಂಸಾದಿಧರ್ಮಗಳು ಮೋಕ್ಷಕ್ಕೆ ಕಾರಣ ಎಂದು ಜೈನರು ಹೇಳುತ್ತಾರೆ. ಆದರೆ ಅದಕ್ಕೆ ಜಿನನ ವಾಕ್ಯ ಬಿಟ್ಟು ಬೇರೆ ಪ್ರಮಾಣಗಳು ಇಲ್ಲ, ಅವನ ವಾಕ್ಯದಿಂದ ಅಹಿಂಸೆಯು ಮೋಕ್ಷಕಾರಣ ಎಂದು ಒಪ್ಪಿದರೆ ಇನ್ನೊಬ್ಬನ ಮಾತಿನಿಂದ ಹಿಂಸೆಯು ಮೋಕ್ಷಕ್ಕೆ ಕಾರಣ, ಎಂದೂ ನಿರ್ಧರಿಸಬೇಕಾದೀತು.

## ಶೂನ್ಯವಾದಿಗಳ ಮೋಕ್ಷಸಾಧನವಿಮರ್ಶೆ

**ನಚ ಶೂನ್ಯಪರಿಜ್ಞಾನಾಚ್ಛೂನ್ಯಭಾವನಯಾಽಪಿ ಚ ।**
**ಮೋಕ್ಷಃ ಕಥಂಚನ ಭವೇದ್ ಯದೀದಾನೀಂ ಕಥಂ ನ ಸಃ ॥ ೧೪೯ ॥**

ಶೂನ್ಯಪರಿಜ್ಞಾನಾತ್=ಶೂನ್ಯವೇ ತತ್ತ್ವ, ಜಗತ್ತು ಶೂನ್ಯದಲ್ಲಿ ಅಧ್ಯಸ್ತ ಎನ್ನುವ ಜ್ಞಾನದಿಂದ ಶೂನ್ಯಭಾವನಯಾಽಪಿ ಚ=ಶೂನ್ಯದ ಧ್ಯಾನದಿಂದಲೂ ಮೋಕ್ಷಃ=ಮೋಕ್ಷವು ಕಥಂಚನ=ಯಾವುದೇ ರೀತಿಯಿಂದ ನ ಭವೇತ್= ಆಗುವುದಿಲ್ಲ. ಯದಿ=ಒಂದುವೇಳೆ ಶೂನ್ಯಪರಿಜ್ಞಾನಾತ್=ಶೂನ್ಯಜ್ಞಾನ ದಿಂದ, ಶೂನ್ಯಭಾವನಯಾಽಪಿ ಚ=ಶೂನ್ಯಧ್ಯಾನದಿಂದಾಗಿಯಾಗಲೀ ಮೋಕ್ಷಃ ಭವೇತ್=ಮೋಕ್ಷವಾಗುವುದಾದಲ್ಲಿ ಇದಾನೀಂ=ಶೂನ್ಯಜ್ಞಾನ ಬಂದ ಮರುಕ್ಷಣದಲ್ಲೇ ಕಥಂ ನ ಸಃ=ಮೋಕ್ಷ ಏಕಾಗಿಲ್ಲ?

**ಭಾವಾರ್ಥ—** ಬೌದ್ಧರು ಶೂನ್ಯತತ್ತ್ವಜ್ಞಾನ–ಧ್ಯಾನಗಳಿಂದ ಮೋಕ್ಷ ಎನ್ನುತ್ತಾರೆ. ಆದರೆ ಜ್ಞಾನ ಜಡ. ಅದು ಮೋಕ್ಷಪ್ರದವಲ್ಲ. ಇದಕ್ಕೆ ಬೌದ್ಧರ ಸಮಾಧಾನ–ಬಂಧವು, ಸಂವೃತಿ ಎಂಬ ಅಜ್ಞಾನದ ನಿಮಿತ್ತಕ ಅಧ್ಯಾಸ. ಸಂವೃತಿಗೆ ಶೂನ್ಯಜ್ಞಾನವು ವಿರೋಧಿ. ಅದು ಬಂದ ಕೂಡಲೇ ಬೆಳಕು ಬಂದಾಗ ಕತ್ತಲೆಯು ನಾಶವಾಗುವಂತೆ, ಸಂವೃತಿಯೂ ನಾಶವಾಗುತ್ತದೆ. ಅದರ ಕಾರ್ಯವಾದ ಬಂಧವೂ ನಾಶವಾಗುತ್ತದೆ. ಹೀಗೆ, ಜ್ಞಾನವು ಜಡವಾದರೂ ಬಂಧಕ್ಕೆ ನಿವರ್ತಕವಾಗುತ್ತದೆ, ಎಂದು.

ಇದು ಸರಿಯಲ್ಲ. ಬೆಳಕು ಬಂದ ಕೂಡಲೇ ಕತ್ತಲು ನಾಶವಾಗುತ್ತದೆ. ಆದರಂತೆ ಶೂನ್ಯಜ್ಞಾನ ಬಂದಕೂಡಲೇ ಸಂವೃತಿ ನಾಶವಾಗಿ ಬಂಧವು ನಿವೃತ್ತಿ ಯಾಗಬೇಕು. ಆದರೆ, ಬೌದ್ಧರು ಶೂನ್ಯಜ್ಞಾನ ಬಂದಮೇಲೂ ಸಂಸಾರದ ಅನುವೃತ್ತಿಯನ್ನು ಅಂಗೀಕರಿಸುತ್ತಾರೆ. ಅದನ್ನು ಸಮರ್ಥನೆಮಾಡಲು ಬರುವುದಿಲ್ಲ.

ಸಿದ್ಧಾಂತದಲ್ಲಿ ಬ್ರಹ್ಮಾಪರೋಕ್ಷಜ್ಞಾನ ಬಂದಮೇಲೂ ಬಂಧವು ಅನುವೃತ್ತಿಯಾಗುವಂತೆ ಬೌದ್ಧಮತದಲ್ಲೂ ಶೂನ್ಯಜ್ಞಾನ ಬಂದ ಮೇಲೂ ಸಂಸಾರವು ಇರಬಹುದು, ಎಂಬ ಆಕ್ಷೇಪಕ್ಕೆ ಸಮಾಧಾನ.

**ಪರಪ್ರಸಾದನೇಚ್ಛೋಽಸ್ತು ವಿಳಂಬೋ ನಾಮ ಯುಜ್ಯತೇ ।**
**ಪುಮಿಚ್ಛಾಧೀನತಾ ನೋ ಚೇದ್ ವಿಳಂಬಃ ಕಿಂಕೃತೋ ಭವೇತ್**
**॥ ೧೫೦ ॥**

**ಅನ್ಯತ್ರಾಪಿ ವಿಳಂಬಾಸ್ತು ಸ್ಯುರೀಶೇಚ್ಛಾನಿಮಿತ್ತತಃ ।**
**ಅನ್ಯಥಾ ಕಾರಣಂ ಚೇತ್ ಸ್ಯಾತ್ ಕಿಂ ಕಾರ್ಯಂ ನೋಪಜಾಯತೇ ।**
**ಕಾರಣೇ ಸತಿ ಕಾರ್ಯಸ್ಯ ಭಾವಃ ಸುನಿಯತೋಽಸ್ಯ ಹಿ ॥ ೧೫೧ ॥**

ಕರ್ಮಾನುಷ್ಠಾನಾದಿ ಸಾಧನಗಳನ್ನು ಮಾಡಿದ್ದರೂ ಪರಪ್ರಸಾದ-ನೇಚ್ಛೋಃ=ಪರಮಾತ್ಮನ ಪ್ರಸಾದವನ್ನು ಇಚ್ಛಿಸುವವನಿಗೆ ವಿಳಂಬಃ= ಫಲಪ್ರಾಪ್ತಿಯ ವಿಳಂಬವು ಯುಜ್ಯತೇ=ಕೂಡುತ್ತದೆ. ಪುಮಿಚ್ಛಾಧೀನತಾ ನೋ ಚೇತ್=ಫಲವು ಯಾವುದೇ ಪುರುಷನ ಇಚ್ಛೆಯ ಅಧೀನವಲ್ಲ ವೆಂದಾದಲ್ಲಿ ವಿಳಂಬಃ=ಕಾಲವಿಳಂಬವು ಕಿಂಕೃತಃ ಭವೇತ್=ಯಾವ ನಿಮಿತ್ತದಿಂದ?

ಪ್ರಸಾದದ ಅಪೇಕ್ಷೆ ಇಲ್ಲದ ಕಾರ್ಯಗಳಲ್ಲೂ ವಿಲಂಬವು ಕಂಡಿದೆ. ತ್ರಿವೃನ್ಮೂಲ ಎಂಬ ಔಷಧಿಯ ಭಕ್ಷಣೆಯು ರೇಚನಕ್ಕೆ ಕಾರಣ. ಆದರೆ ಅದರ ಭಕ್ಷಣೆ ಮಾಡಿದ ಕೂಡಲೇ ವಿರೇಚನವಾಗುವುದಿಲ್ಲ. (ಸನ್ನ್ಯಾಯ ರತ್ನಾವಲಿಯಲ್ಲಿ ಹರೀತಕೀಭಕ್ಷಣದ ಕಾರ್ಯ ವಿರೇಕ ಎಂದಿದೆ.) ಸ್ವಲ್ಪಕಾಲ ಬಿಟ್ಟು ಆಗುತ್ತದೆ. ಆದರಂತೆ ಪ್ರಸಾದಾನಪೇಕ್ಷವಾಗಿಯೂ ಶೂನ್ಯಜ್ಞಾನದಿಂದ

ಮೋಕ್ಷವಿಲಂಬವಾಗಬಹುದು, ಎನ್ನುವ ಆಕ್ಷೇಪಕ್ಕೆ ಉತ್ತರ– ಅನ್ಯತ್ರಾಪಿ= ಮೋಕ್ಷಾದ್ ಇತರತ್ರ ವಿರೇಚನಾದಿಕಾರ್ಯಗಳಲ್ಲಿಯೂ ವಿಲಂಬಾಸ್ತು= ಕಾರ್ಯವಿಲಂಬಗಳು ಈಶೇಚ್ಛಾನಿಮಿತ್ತತಃ=ಭಗವದಿಚ್ಛಾನಿಮಿತ್ತದಿಂದಾಗಿಯೇ ಸ್ಯುಃ=ಆಗುತ್ತವೆ. ಅನ್ಯಥಾ=ಇಚ್ಛೆಯನ್ನು ಕಲ್ಪನೆ ಮಾಡದೇಹೋದರೆ ಕಾರಣಂ ಸ್ಯಾತ್ ಚೇತ್=ಔಷಧಭಕ್ಷಣೆಯು ಕಾರಣವೆಂದಾದಲ್ಲಿ ಕಿಂ= ಏತಕ್ಕಾಗಿ ಕಾರ್ಯಂ=ಕಾರ್ಯವಾದ ರೇಚನಾದಿಗಳು ನೋಪಜಾಯತೇ= ಕೂಡಲೇ ಹುಟ್ಟುವುದಿಲ್ಲ? ಅಸ್ಯ=ಬೌದ್ಧನಿಗೆ ಕಾರಣೇ ಸತಿ ಕಾರ್ಯಸ್ಯ ಭಾವಃ ಸುನಿಯತಃ ಹಿ=ಕಾರಣವಿದ್ದಮೇಲೆ ಕಾರ್ಯವು ಆಗಲೇಬೇಕಲ್ಲವೇ? ಅದು ಬೌದ್ಧರೇ ಅಂಗೀಕರಿಸಿರುವ ನಿಯಮ. ತಿಂದ ಔಷಧವು ಶರೀರದ ಎಲ್ಲ ಭಾಗಗಳಲ್ಲೂ ಹರಡಬೇಕು. ಆಮೇಲೆ ರೇಚನವಾಗುತ್ತದೆ. ಅದಕ್ಕಾಗಿ ವಿಲಂಬ ಎಂದರೆ, ಹರಡಿದ ಮೇಲೆಯೇ ಕಾರ್ಯವಾಗಬೇಕೆಂಬ ಈಶ್ವರನ ಇಚ್ಛೆಯೇ ನಿಯಾಮಕ ಎಂದಂತಾಯಿತು.

**ವಿಜ್ಞಾನವಾದಿಗಳ ಮೋಕ್ಷಸಾಧನವಿಮರ್ಶೆ**

**ವಿಜ್ಞಾನವಾದಿನಶ್ಚೈವ ವಿಜ್ಞಾನಾದ್ವೈತವೇದನಾತ್ ।**
**ವಿಜ್ಞಾನಭಾವನಾಚ್ಚೈವ ಮೋಕ್ಷೋ ನ ಘಟತೇ ಕ್ವಚಿತ್ ॥ ೧೫೨ ॥**

ವಿಜ್ಞಾನವಾದಿನಃ=ವಿಜ್ಞಾನವಾದಿಯಾದ ಬೌದ್ಧನಿಂದ ಪ್ರತಿಪಾದಿತ ವಾದ–ವಿಜ್ಞಾನಾದ್ವೈತವೇದನಾತ್=ವಿಜ್ಞಾನತತ್ತ್ವದೊಂದಿಗೆ ಐಕ್ಯವನ್ನು ತಿಳಿಯುವುದರಿಂದ ಮತ್ತು ವಿಜ್ಞಾನಭಾವನಾಚ್ಚೈವ= ವಿಜ್ಞಾನತತ್ತ್ವದಿಂದ ಐಕ್ಯಧ್ಯಾನದಿಂದ ಮೋಕ್ಷಃ=ಮೋಕ್ಷವು ಉಂಟಾಗುತ್ತದೆ, ಎನ್ನುವುದೂ ನೈವ ಘಟತೇ=ಸರಿಯಾದುದಲ್ಲ. ಕ್ವಚಿತ್=ಎಂದೋ ಒಮ್ಮೆ ಈ ಮೋಕ್ಷ. ಜ್ಞಾನ ಬಂದಕೂಡಲೇ ಅಲ್ಲ. ಇದರಿಂದ ಹಿಂದೆ ಹೇಳಿರುವ ದೋಷಗಳನ್ನೆಲ್ಲ ಈ ಪಕ್ಷದಲ್ಲೂ ಹೇಳಬೇಕು, ಎಂದು ಸೂಚಿಸಿದಂತಾಗಿದೆ.

**ಕ್ಷಣಿಕತ್ವಜ್ಞಾನಕ್ಕೆ ಮೋಕ್ಷಸಾಧನತ್ವವಿಮರ್ಶೆ**

**ಅಂತರ್ಜ್ಞಾನಸ್ಯ ಬಾಹ್ಯೇ ಚ ಕ್ಷಣಿಕತ್ವಸ್ಯ ವೇದನಾತ್ ।**
**ಭಾವನಾಚ್ಚೋಕ್ತಮಾರ್ಗೇಣ ಮಾನಾಭಾವಾನ್ನ ಮುಚ್ಯತೇ ॥ ೧೫೩ ॥**

ಅಂತರ್ಜ್ಞಾನಸ್ಯ=ಶರೀರಾಂತಸ್ಥವಾದ ವಿಜ್ಞಾನ–ವೇದನಾ–ಸಂಜ್ಞಾ–ಸಂಸ್ಕಾರಗಳ ಹಾಗೂ ಬಾಹ್ಯೇ=ಹೊರಗಡೆಯಲ್ಲಿ ಇರುವ ರೂಪಸ್ಕಂಧ (ಬಾಹ್ಯವಸ್ತುಗಳು) ಇವುಗಳ ಕ್ಷಣಿಕತ್ವವೇದನಾತ್=ಕ್ಷಣಿಕತ್ವಜ್ಞಾನದಿಂದ ಮತ್ತು ಉಕ್ತಮಾರ್ಗೇಣ=ಕ್ಷಣಿಕತ್ವರೂಪದಿಂದ ಭಾವನಾಚ್ಚ=ಧ್ಯಾನದಿಂದಲೂ ಸಾಧಕನು ನ ಮುಚ್ಯತೇ=ಮುಕ್ತನಾಗುವುದಿಲ್ಲ, ಮಾನಾಭಾವಾತ್=ಪ್ರಮಾಣ ಇಲ್ಲದಿರುವುದರಿಂದ.

**ಸಾಂಖ್ಯೋಕ್ತ ಮೋಕ್ಷಸಾಧನವಿಮರ್ಶೆ**

ಇದುವರೆಗೆ ಅವೈದಿಕಗಳಾದ ನಾಸ್ತಿಕದರ್ಶನ, ಜೈನದರ್ಶನ, ಬೌದ್ಧ ದರ್ಶನಗಳನ್ನು ನಿರಾಕರಿಸಿ ಮುಂದೆ ವೈದಿಕದರ್ಶನಗಳ ವಿಮರ್ಶೆಯನ್ನು ಮಾಡಲಾಗಿದೆ.

**ಪ್ರಕೃತೇಃ ಪುರುಷಸ್ಯಾಪಿ ವಿವೇಕೋ ಮುಕ್ತಿಸಾಧನಮ್ ।**
**ಇತಿ ಸಾಂಖ್ಯಾ, ನಚ್ಚೈತಸ್ಮಿನ್ ಮಾನಮೀಶಾಪ್ರಸಾದತಃ ॥ ೧೫೪ ॥**

ಪ್ರಕೃತೇಃ=ಪ್ರಕೃತಿವಿಕಾರವಾದ ಅಂತಃಕರಣಕ್ಕೂ ಪುರುಷಸ್ಯಾಪಿ=ಪುರುಷನಿಗೂ ವಿವೇಕಃ=ವಿವೇಕಜ್ಞಾನವು ಮುಕ್ತಿಸಾಧನಂ=ಮೋಕ್ಷಕ್ಕೆ ಸಾಧನ ಇತಿ=ಹೀಗೆಂದು ಸಾಂಖ್ಯಾಃ=ಸಾಂಖ್ಯರು ಹೇಳುತ್ತಾರೆ.

**ಭಾವಾರ್ಥ—** ಜ್ಞಾನ–ಸುಖ–ದುಃಖಾದಿಗಳೆಲ್ಲವೂ ಪ್ರಕೃತಿಯ ಧರ್ಮಗಳು. ಅದು ಪ್ರತಿಯೊಬ್ಬರ ದೇಹದೊಳಗೆ ಅಂತಃಕರಣರೂಪದಿಂದ ಇದೆ. ಅದಕ್ಕೂ ಪುರುಷನಿಗೂ ಭೇದಜ್ಞಾನವಿಲ್ಲ. ಆದರಿಂದಾಗಿ ಅದರ ಧರ್ಮಗಳನ್ನು ಪುರುಷ ತನ್ನವುಗಳನ್ನಾಗಿ ಭ್ರಮಿಸುತ್ತಾನೆ. ತಾನು ಪ್ರಕೃತಿಯಿಂದ ಸ್ವರೂಪತಃ, ಧರ್ಮತಶ್ಚ ಭಿನ್ನ ಎಂದು ಪುರುಷ ತಿಳಿದಾಗ ಸುಖಾದಿ ಭ್ರಮೆ ನಿವೃತ್ತಿಯಾಗುತ್ತದೆ. ಅದೇ ಮೋಕ್ಷ, ಎಂದು ಸಾಂಖ್ಯರು ಹೇಳುತ್ತಾರೆ.

ಈಶಪ್ರಸಾದತಃ=ಈಶ್ವರನ ಪ್ರಸಾದದ ಹೊರತಾಗಿ ಕೇವಲ ಪ್ರಕೃತಿ ಪುರುಷವಿವೇಕದಿಂದಲೇ ಮೋಕ್ಷ ಎಂದು, ಏತಸ್ಮಿನ್=ಸಾಂಖ್ಯರು ಹೇಳುವ ಈ ವಿಷಯದಲ್ಲಿ ನ ಮಾನಂ=ಪ್ರಮಾಣವಿಲ್ಲ.

ಭಾವಾರ್ಥ— ಯ ಏನಂ ವೇತ್ತಿ ಪುರುಷಂ ಪ್ರಕೃತಿಂ ಚ ಗುಣೈಃ ಸಹ ।
ಸರ್ವಥಾ ವರ್ತಮಾನೋಽಪಿ ನ ಸ ಭೂಯೋಽಭಿಜಾಯತೇ ॥
(ಗೀ.13.23)

ಎಂಬ ಗೀತಾವಾಕ್ಯದಲ್ಲಿ ಪ್ರಕೃತಿಪುರುಷವಿವೇಕವು ಮೋಕ್ಷಕಾರಣವೆಂದು ಶ್ರುತವಾದರೂ ಅದೊಂದೇ ಕಾರಣವಲ್ಲ. ಭಗವಂತನ ಪ್ರಸಾದದ್ವಾರಾ ಅದು ಮೋಕ್ಷಕ್ಕೆ ಕಾರಣ. ಇದು ಸಿದ್ಧಾಂತ. ಆದರೆ, ಸಾಂಖ್ಯರು ಈಶಪ್ರಸಾದದ ಅಪೇಕ್ಷೆಯನ್ನು ಅಂಗೀಕರಿಸುವುದಿಲ್ಲ. ಆದ್ದರಿಂದ ಸಾಂಖ್ಯೋಕ್ತಮೋಕ್ಷ ಸಾಧನ ಸರಿಯಲ್ಲ.

**ಶ್ರುತಯಃ ಸ್ಮೃತಯಶ್ಚೈವ ಯದೇ (ದೀ) ಶಸ್ಯ ಪ್ರಸಾದತಃ ।**
**ವದಂತಿ ನಿಯಮಾನ್ಮುಕ್ತಿಂ ತಮೃತೇಽತಃ ಕುತೋ ಭವೇತ್ ॥ ೧೫೫ ॥**

ಶ್ರುತಯಃ=ಯಸ್ಯ ಪ್ರಸಾದಾತ್ ಪರಮಾರ್ತಿರೂಪಾತ್।
ಅಸ್ಮಾತ್ ಸಂಸಾರಾನ್ಮುಚ್ಯತೇ ನಾಪರೇಣ ॥ ಇತ್ಯಾದಿ ಶ್ರುತಿಗಳು,
ಸ್ಮೃತಯಶ್ಚೈವ=ಅಜ್ಞಾನಾಂ ಜ್ಞಾನದೋ ವಿಷ್ಣುಃ ಜ್ಞಾನಿನಾಂ ಮೋಕ್ಷದಶ್ಚ ಸಃ।
ಆನಂದದಶ್ಚ ಮುಕ್ತಾನಾಂ ಸ ಏವೈಕೋ ಜನಾರ್ದನಃ ॥

ಇತ್ಯಾದಿಸ್ಮೃತಿಗಳೂ (ಏವಶಬ್ದದಿಂದ ಈ ಪ್ರಮಾಣಗಳು ಪ್ರಾಕೃತ ಪುರುಷನ ಮಾತುಗಳಲ್ಲ, ಎಂದು ತಿಳಿಸುತ್ತದೆ.) ಯದಾ=ಯಸ್ಮಾತ್= ಯಾವಕಾರಣದಿಂದ ಈಶಪ್ರಸಾದತಃ=ಪರಮಾತ್ಮನ ಪ್ರಸಾದದಿಂದ ನಿಯಾಮಾತ್='ನಾಪರೇಣ' 'ಸ ಏವೈಕೋ' ಎಂದು ಸಾಧನಾಂತರಗಳನ್ನು ನಿರಾಕರಿಸಿ ಮುಕ್ತಿಂ ವದಂತಿ=ಮೋಕ್ಷವನ್ನು ಹೇಳುತ್ತವೆ, ಅತಃ=ಆದ್ದರಿಂದ ತಂ ಋತೇ=ಪ್ರಸಾದವಿಲ್ಲದೆ ಕುತಃ=ಬೇರಾವ ಕಾರಣದಿಂದ ಮುಕ್ತಿಃ ಭವೇತ್= ಮೋಕ್ಷವಾದೀತು? ಮೋಕ್ಷಕ್ಕೆ ಪ್ರಸಾದವೇ ಅವ್ಯವಹಿತಪೂರ್ವವೃತ್ತಿಯಾದ ಪ್ರಧಾನಕಾರಣ. ಜ್ಞಾನಾದಿಗಳು ಪರಂಪರಯಾ ಕಾರಣ.

**ಕಣಾದಾದ್ಯುಕ್ತಸಾಧನವಿಮರ್ಶೆ**

**ಕಣಾದಯೋಗಾಕ್ಷಪಾದಾ ಅಪೀಶಸ್ಯ ಪ್ರಸಾದತಃ ।**
**ಮುಕ್ತಿಂ ಬ್ರುವಾಣಾ ಅಪ್ಯಾಹುರ್ಭೋಗಾದೇವ ಚ ಕರ್ಮಣಾಮ್**
**॥ ೧೫೬ ॥**

ಕ್ಷಯಂ ಪ್ರಾಹುಃ ಕುತಶ್ಚೈತತ್ ಪ್ರಸನ್ನೇ ಜಗದೀಶ್ವರೇ ।
ಭಿದ್ಯತೇ ಹೃದಯಗ್ರಂಥಿಶ್ಛಿದ್ಯಂತೇ ಸರ್ವಸಂಶಯಾಃ ॥ ೧೫೭ ॥

ಕ್ಷೀಯಂತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ ।
ಭಿದ್ಯತೇ ಹೃದಯಗ್ರಂಥಿಚ್ಛಿದ್ಯಂತೇ ಸರ್ವಸಂಶಯಾಃ ॥ ೧೫೮ ॥

ಕ್ಷೀಯಂತೇ ಚಾಸ್ಯ ಕರ್ಮಾಣಿ ದೃಷ್ಟ ಏವಾತ್ಮನೀಶ್ವರೇ ।
ಇತಿ ಶ್ರುತಿಪುರಾಣಾದಿವಚನೇಭ್ಯೋಽನ್ಯಥಾಗತೇಃ ॥ ೧೫೯ ॥

ವೈಶೇಷಿಕದರ್ಶನಪ್ರವರ್ತಕನಾದ ಕಣಾದ=ಕಣಾದ ಋಷಿ ಯೋಗ= ಯೋಗದರ್ಶನಪ್ರವರ್ತಕನಾದ ಪತಂಜಲಿ, ನ್ಯಾಯದರ್ಶನಪ್ರವರ್ತಕನಾದ ಅಕ್ಷಪಾದ=ಗೌತಮ ಇವರೆಲ್ಲ ಹೇಳಿದ ಮೋಕ್ಷಸಾಧನಗಳೂ ಸರಿಯಲ್ಲ.

ವಸ್ತುತಃ ಈ ಮೂವರೂ ಈಶಪ್ರಸಾದವು ಮೋಕ್ಷಕಾರಣವೆಂದು ಹೇಳುತ್ತಾರೆ. ಕಣಾದಋಷಿಯು ದ್ರವ್ಯಾದಿ ಸಪ್ತಪದಾರ್ಥಗಳ ತತ್ತ್ವಜ್ಞಾನವು ಮೋಕ್ಷಕಾರಣ ಎಂದು ಹೇಳಿದರೂ ಆ ಜ್ಞಾನ ಸಾಕ್ಷಾತ್ ಮೋಕ್ಷಕ್ಕೆ ಕಾರಣವಲ್ಲ, ಧರ್ಮದ್ವಾರಾ ಎಂದಿರುತ್ತಾನೆ. ''ಯತೋಽಭ್ಯುದಯ–ನಿಃಶ್ರೇಯಸಸಿದ್ಧಿಃ ಸ ಧರ್ಮಃ'' ಎಂದು ಅವನು ರಚಿಸಿದ ಸೂತ್ರ. ಧರ್ಮದಿಂದ ಅಭ್ಯುದಯಸಿದ್ಧಿ ಎಂದರೆ ತತ್ವಜ್ಞಾನಸಿದ್ಧಿ. ನಿಃಶ್ರೇಯಸಸಿದ್ಧಿ, ಎಂದರೆ ದುಃಖನಿವೃತ್ತಿರೂಪವಾದ ಮೋಕ್ಷಸಿದ್ಧಿ. ಇಂತಹ ಧರ್ಮವು ಈಶ್ವರಪ್ರಸಾದಸಹಕೃತವಾಗಿಯೇ ಮೋಕ್ಷಹೇತು.

ತುಷ್ಟೇರ್ಮೋಚಯತೋ ಬದ್ಧಾನ್ ನ ತುಷ್ಟೇರ್ಬಧ್ನತಃ ಪುನಃ ।
ಕಾರಾಗಾರಮಿದಂ ವಿಶ್ವಂ ಯಸ್ಯ ವಂದೇ ತಮೀಶ್ವರಮ್ ॥

ಇದು ಕಣಾದವಚನ.

ಗೌತಮರು ನ್ಯಾಯಶಾಸ್ತ್ರಪ್ರವರ್ತಕರು. ಅವರೂ ಈಶಪ್ರಸಾದದ ಅಗತ್ಯವನ್ನು ಹೇಳಿದ್ದಾರೆ. ಒಟ್ಟು ಹದಿನಾರು ಪದಾರ್ಥಗಳು. ಅವುಗಳಲ್ಲಿ ಪ್ರಮಾಣಾದಿ ಹದಿನೈದು ಪದಾರ್ಥಗಳ ಜ್ಞಾನವು ಆತ್ಮಾದಿ 12 'ಪ್ರಮೇಯ'ಗಳ ತತ್ವಜ್ಞಾನಕ್ಕೆ ಕಾರಣ. ಅಲ್ಲೂ ಕೇವಲ ತತ್ವಜ್ಞಾನವಲ್ಲ, ಭಗವಂತನ ಪ್ರಸಾದಸಹಿತವಾದ ತತ್ವಜ್ಞಾನವೇ ಕಾರಣ.

ಸ್ವರ್ಗಾಪವರ್ಗಯೋರ್ಮಾರ್ಗಮಾಮನಂತಿ ಮನೀಷಿಣಃ ।
ಯದುಪಾಸ್ತಿಮಸಾವತ್ರ ಪರಮಾತ್ಮಾ ನಿರೂಪ್ಯತೇ ॥
ಎಂದು ಗೌತಮ ಸಾಂಪ್ರದಾಯಿಕವಚನ.

ಇನ್ನು ಪತಂಜಲಿಯಂತೂ ಸ್ಪಷ್ಟವಾಗಿ– ''ತಪಃ ಸ್ವಾಧ್ಯಾಯ–ಈಶ್ವರಪ್ರಣಿಧಾನಾದಿಕ್ರಿಯಾ ಯೋಗಃ'' ಎಂದಿರುತ್ತಾನೆ. ಇಲ್ಲಿ ಈಶ್ವರ ಪ್ರಣಿಧಾನ ಎಂದರೆ ಈಶ್ವರ ಪ್ರಸಾದಕ್ಕೆ ಕಾರಣವಾದ ಧ್ಯಾನ.

ಹೀಗೆ ಇವರೆಲ್ಲರೂ ಈಶ್ವರಪ್ರಸಾದವು ಮೋಕ್ಷಕಾರಣವೆಂದು ಹೇಳಿದ್ದಾರೆ. ಆದರೂ, ಈಶಸ್ಯ ಪ್ರಸಾದತಃ=ಭಗವಂತನ ಪ್ರಸಾದದಿಂದ ಮುಕ್ತಿಂ ಬ್ರುವಾಣಾ ಅಪಿ=ಮೋಕ್ಷವನ್ನು ಹೇಳುವವರಾದರೂ ಇವರೆಲ್ಲರೂ ಆಹುಃ=ಒಂದು ತಪ್ಪನ್ನೂ ಹೇಳಿದ್ದಾರೆ.

ಕಣಾದರು ಈಶಪ್ರಸಾದವು ಮೋಕ್ಷಕ್ಕೆ ಪ್ರಧಾನಸಾಧನವಾದ ಧರ್ಮಕ್ಕೆ ಸಹಕಾರಿ ಎನ್ನುತ್ತಾರೆ, ಈಶ್ವರಪ್ರಸಾದವೇ ಪ್ರಧಾನಸಾಧನವಲ್ಲ. ಅವನ ಸೂತ್ರ— ''ಈಶ್ವರಚೋದನಾಭಿವ್ಯಕ್ತಾತ್'' ಈಶ್ವರನ ಇಚ್ಛಾದಿಂದ ರಚಿತ ವಾದ ವೇದವಾಕ್ಯದಿಂದ ಬೋಧಿತವಾದ ಧರ್ಮದಿಂದ, ಎಂದು ಆ ಸೂತ್ರದ ಅರ್ಥ. ವೇದವು ಈಶ್ವರನ ಇಚ್ಛೆಯಿಂದ ರಚಿತವಾದುದರಿಂದ ವೇದೋಕ್ತ ಧರ್ಮಾನುಷ್ಠಾನದಿಂದ ಭಗವಂತನ ಇಚ್ಛಾವಿಶೇಷರೂಪವಾದ ಪ್ರಸಾದವು ಲಭಿಸುತ್ತದೆ. ಅಂತಹ ಪ್ರಸಾದ ಸಹಕೃತವಾದ ಧರ್ಮವೇ ಮೋಕ್ಷಕ್ಕೆ (ಆತ್ಯಂತಿಕ ದುಃಖನಿವೃತ್ತಿಗೆ) ಸಾಧನ.

ನೈಯಾಯಿಕರೂ ಆತ್ಮತತ್ತ್ವಜ್ಞಾನವೇ ಮೋಕ್ಷಸಾಧನ, ಈಶ್ವರಪ್ರಸಾದವು ಅದಕ್ಕೆ ಸಹಕಾರಿ ಎನ್ನುತ್ತಾರೆ. ''ದುಃಖ–ಜನ್ಮ–ದೋಷ'' ಇತ್ಯಾದಿ ದ್ವಿತೀಯನ್ಯಾಯಸೂತ್ರದಲ್ಲಿ ತತ್ತ್ವಜ್ಞಾನದಿಂದ ಬಂಧಕಾರಣವಾದ 'ದೇಹವೇ ಆತ್ಮ' ಎಂಬ ಮಿಥ್ಯಾಜ್ಞಾನನಾಶ, ಹೀಗೆ ಒಂದರ ನಂತರ ಇನ್ನೊಂದು ನಾಶವಾಗಿ ದುಃಖನಾಶರೂಪವಾದ ಮೋಕ್ಷವು ಸಿದ್ಧವಾಗುತ್ತದೆ, ಎಂದು ಹೇಳಲಾಗಿದೆ. ಇದರ ವ್ಯಾಖ್ಯಾನದಲ್ಲಿ ಹೀಗಿದೆ— ಯತ್ತು ಮೋಕ್ಷಸ್ಯ ಈಶ್ವರಾಧೀನತ್ವವಚನಂ ತತ್ ಜ್ಞಾನಾದಿಜನ್ಮನಿ ಈಶ್ವರಸ್ಯಾಪಿ ನಿಮಿತ್ತತಾಪರ–ಮಿತ್ಯವಿರುದ್ಧಮ್, ತದರ್ಥಂ ಚ ತದುಪಾಸ್ತ್ಯಾದೇರುಪಯೋಗಃ'' ಎಂದು.

ಪದಾರ್ಥತತ್ತ್ವಜ್ಞಾನದಿಂದ ಲಭಿಸುವ ಮೋಕ್ಷಕ್ಕೆ ಈಶ್ವರ ನಿಮಿತ್ತಮಾತ್ರ. ಹೇಗೆಂದರೆ ತತ್ತ್ವಜ್ಞಾನವು ಕಾರ್ಯವಾದುದರಿಂದ ಅದಕ್ಕೆ ಈಶ್ವರನು ನಿಮಿತ್ತ. ಅವನು ನಿಮಿತ್ತನಾಗಬೇಕಾದರೆ ಅವನ ಉಪಾಸನೆಯನ್ನು ಮಾಡಬೇಕು. ಹೀಗೆ ಮೋಕ್ಷಕ್ಕೆ ಪ್ರಧಾನಕಾರಣ ತತ್ತ್ವಜ್ಞಾನ ಮಾತ್ರ, ಈಶಪ್ರಸಾದ ಸಹಕಾರಿಕಾರಣ.

ಪತಂಜಲಿಗಳಂತೂ ತಪಸ್ಸು ಮೊದಲಾದ ಸಾಧನಗಳಲ್ಲಿ ಈಶ್ವರ ಪ್ರಸಾದವನ್ನೂ ಸೇರಿಸಿದ್ದಾರೆ. ಅದೇ ಪ್ರಧಾನವಲ್ಲ. ಆದ್ದರಿಂದ, ಇವೆಲ್ಲವೂ ಪ್ರಮಾಣಕ್ಕೆ ವಿರುದ್ಧವಾಗಿವೆ—

ಸರ್ವಂ ತದಂತರಾಧಾಯ ಮುಕ್ತಯೇ ಸಾಧನಂ ಭವೇತ್।
ನ ಕಿಂಚಿದಂತರಾಧಾಯ ವಿಮೋಕ್ಷಾಯಾಪರೋಕ್ಷದೃಕ್ ॥

ಎಲ್ಲ ಸಾಧನಗಳೂ ಪ್ರಸಾದದ ಮೂಲಕವೇ ಮೋಕ್ಷಕ್ಕೆ ಸಾಧನಗಳಾಗುತ್ತವೆ. ಆದರೆ ಭಗವತ್ಪ್ರಸಾದಕ್ಕೆ ಇನ್ನಾವುದರ ಅಗತ್ಯವೂ ಇಲ್ಲ. (ಅಪರೋಕ್ಷದೃಕ್=ತತ್ಸಾಧ್ಯಃ ಪ್ರಸಾದಃ ಲಕ್ಷಣೀಯಃ।) ಇಲ್ಲಿ ಭಗವತ್ ಪ್ರಸಾದವೇ ಪ್ರಧಾನಸಾಧನ, ಎಂದು ನಿರೂಪಿಸಲಾಗಿದೆ.

ಇದಲ್ಲದೆ, ಇನ್ನೊಂದು ಅಪ್ರಾಮಾಣಿಕವಾದ ವಿಷಯವನ್ನು ಅವರು ಹೇಳುತ್ತಾರೆ— ಕರ್ಮಣಾಂ=ಎಲ್ಲ ಕರ್ಮಗಳಿಗೂ ಭೋಗಾದೇವ= ಅನುಭವಿಸುವುದರಿಂದಲೇ ಕ್ಷಯಂ=ನಾಶವನ್ನು ಪ್ರಾಹುಃ=ಹೇಳುತ್ತಾರೆ.

ಜ್ಞಾನಕ್ಕಿಂತ ಮೊದಲು ಮಾಡಿರುವ ಪ್ರಾರಬ್ಧೇತರಕರ್ಮಗಳು ಜ್ಞಾನದಿಂದಲೇ ನಾಶವಾಗುತ್ತವೆ. ಪ್ರಾರಬ್ಧಕರ್ಮಕ್ಕೆ ಮಾತ್ರ ಭೋಗದಿಂದ ಕ್ಷಯ. ಅದನ್ನು ಅನುಭವಿಸಿಯೇ ತೀರಬೇಕು. ಇದು ಸಿದ್ಧಾಂತಿಗಳ ಪಕ್ಷ. ಆದರೆ, ವೈಶೇಷಿಕಾದಿಗಳೆಲ್ಲರೂ ಭೋಗದಿಂದಲೇ ಸರ್ವಕರ್ಮಕ್ಷಯ. ಜ್ಞಾನಿಗಳು ಸಮಾಧಿಮಹಿಮೆಯಿಂದ ಏಕಕಾಲದಲ್ಲಿ ಅನೇಕಶರೀರಗಳನ್ನು ಸ್ವೀಕರಿಸಿ ಎಲ್ಲ ಕರ್ಮಗಳನ್ನೂ ಅನುಭವಿಸಿಯೇ ಕ್ಷಯಿಸುತ್ತಾರೆ. ಕರ್ಮಕ್ಷಯವೂ ಮೋಕ್ಷವಾದುದರಿಂದ ಮೋಕ್ಷವಿಚಾರದಲ್ಲಿ ಇದೂ ಸೇರಿದೆ. ಆದ್ದರಿಂದ ಈ ವಿಷಯದ ವಿಮರ್ಶೆಯೂ ಪ್ರಕೃತಸಂಗತವೇ ಆಗಿದೆ.

ಏತತ್=ಭೋಗದಿಂದಲೇ ಕರ್ಮಕ್ಷಯ ಎನ್ನುವುದು ಕುತಃ=ಯಾವ

ಪ್ರಮಾಣದಿಂದ ತಿಳಿಯುತ್ತದೆ? ಪ್ರಸನ್ನೇ ಜಗದೀಶ್ವರೇ=ಜ್ಞಾನದಿಂದ ಪರಮಾತ್ಮನು ಪ್ರಸನ್ನನಾಗುತ್ತಿರಲು ಅವನೇ ಅಪ್ರಾರಬ್ಧಕರ್ಮಗಳನ್ನು ನಾಶಮಾಡುತ್ತಾನೆ, ಎಂದು ಹೇಳಲು ಬರುವಾಗ ಏತತ್ ಕುತಃ= ಕಾಯವ್ಯೂಹದಿಂದ ಕರ್ಮಕ್ಷಯವನ್ನು ಏಕೆ ಹೇಳಬೇಕು?

ಅದು ಹಾಗಿರಬಹುದು. ಆದರೆ, ಅದಕ್ಕೆ ಪ್ರಮಾಣ ಏನು? ಪ್ರಮಾಣವೂ ಇದೆ.

1. ಪರಾವರೇ=ಜಗುದುತ್ತಮರಾದ ಬ್ರಹ್ಮಾದಿಗಳು ಯಾರಿಗೆ ಕೆಳಗಿನ ಸ್ತರದವರೋ ಅಂತಹ ತಸ್ಮಿನ್=ಪರಮಾತ್ಮನು ದೃಷ್ಟೇ ಸತಿ=ನೋಡಲ್ಪಡುತ್ತಿರಲು ಹೃದಯಗ್ರಂಥಿಃ=ಅವಿದ್ಯೆಯು ಭಿದ್ಯತೇ=ನಾಶವಾಗುತ್ತದೆ. ಸರ್ವಸಂಶಯಾಃ=ಎಲ್ಲಾ ಸಂದೇಹಗಳೂ ಛಿದ್ಯಂತೇ=ನಾಶವಾಗುತ್ತವೆ. ಅಸ್ಯ=ಬ್ರಹ್ಮಜ್ಞಾನಿಯ ಕರ್ಮಾಣಿ=ಸಂಚಿತಕರ್ಮಗಳು ಕ್ಷೀಯಂತೇ= ನಾಶವಾಗುತ್ತವೆ. ಇದು ಕಾಠಕಶ್ರುತಿ.

2. ಭಾಗವತಸ್ಮೃತಿ— ಈಶ್ವರೇ ಆತ್ಮನಿ=ಸರ್ವೋತ್ತಮನಾದ ಪರಮಾತ್ಮನು ದೃಷ್ಟೇ ಏವ=ಕಂಡಕೂಡಲೇ ಹೃದಯಗ್ರಂಥಿಃ=ಅವಿದ್ಯೆಯು ಭಿದ್ಯತೇ=ನಾಶವಾಗುತ್ತದೆ. ಸರ್ವಸಂಶಯಾಃ=ಎಲ್ಲಾ ಸಂದೇಹಗಳೂ ಛಿದ್ಯಂತೇ=ನಾಶವಾಗುತ್ತವೆ. ಅಸ್ಯಕರ್ಮಾಣಿ ಕ್ಷೀಯಂತೆ=ಜ್ಞಾನಿಯ ಕರ್ಮಗಳೆಲ್ಲವೂ ನಾಶವಾಗುತ್ತವೆ.

ಇತಿ=ಈರೀತಿಯ ಶ್ರುತಿಪುರಾಣಾದಿವಚನೇಭ್ಯಃ=ಶ್ರುತಿ ಮತ್ತು ಪುರಾಣಗಳಿಂದ ಅನ್ಯಥಾ=ಫಲಭೋಗವಿಲ್ಲದೆಯೇ ಈಶಪ್ರಸಾದದಿಂದಲೇ, ಗತೇಃ=ಕರ್ಮಗಳ ನಾಶವಾಗುವುದು ನಿಶ್ಚಯವಾಗುವುದರಿಂದ ಕಾಯವ್ಯೂಹ ಇಲ್ಲದೆಯೂ ಕರ್ಮನಾಶವು ಉಪಪನ್ನವಾಗುತ್ತದೆ.

**ಭಾವಾರ್ಥ—** ಜ್ಞಾನಿಯು ಜ್ಞಾನಬರುವುದಕ್ಕಿಂತ ಪೂರ್ವದಲ್ಲಿ ಅನಾದಿಕಾಲದಿಂದ ಅನಂತಕರ್ಮಗಳನ್ನು ಮಾಡಿರುತ್ತಾನೆ. ಕರ್ಮಗಳು ಫಲನಾಶ್ಯಗಳು. ಅವುಗಳ ಫಲವಾದ ಸುಖ-ದುಃಖಗಳನ್ನು ಅನುಭವಿಸಿದರೆ ಮಾತ್ರ ಕರ್ಮಗಳು ನಾಶವಾಗುತ್ತವೆ. ಅದಕ್ಕಾಗಿ ಅನೇಕ ಜನ್ಮಗಳನ್ನೆತ್ತಲು

ಜ್ಞಾನಿಗಳು ಸಿದ್ಧರಿಲ್ಲ. ಅವರು, ದಿವ್ಯದೃಷ್ಟಿಯಿಂದ ತಾವು ಸಂಚಯ ಮಾಡಿದ ಕರ್ಮಗಳನ್ನು ನೋಡಿ ಅವುಗಳ ಫಲವಾದ ಅನೇಕ ದೇಹಗಳನ್ನು ಏಕಕಾಲದಲ್ಲಿ ಪಡೆದು ಕರ್ಮಕ್ಷಯವನ್ನು ಮಾಡಿಕೊಳ್ಳುತ್ತಾರೆ, ಎಂದು ಕಣಾದಾದಿಗಳ ಸಿದ್ಧಾಂತ. ಇದು ಅನ್ಯಥಾನುಪಪತ್ತಿಯಿಂದ ಕಲ್ಪಿಸಿದ ಸಿದ್ಧಾಂತ. ಇದಕ್ಕೆ ಶ್ರುತಿಯ ಆಧಾರವಿಲ್ಲ. ಆದರೆ ಭಗವತ್‌ಪ್ರಸಾದದಿಂದಲೇ ಸಂಚಿತಕರ್ಮವು ನಾಶವಾಗುತ್ತದೆ, ಎಂಬ ಸ್ಪಷ್ಟಶ್ರುತಿ ಇದೆ. ಆದ್ದರಿಂದ ಸಿದ್ಧಾಂತಪಕ್ಷವೇ ಪ್ರಾಮಾಣಿಕ.

ಪೂರ್ವಪಕ್ಷ—ಮೇಲಿನ ಶ್ರುತಿ-ಪುರಾಣಗಳು ಭಗವದ್ದರ್ಶನವಾದಾಗ ಕರ್ಮಕ್ಷಯವಾಗುತ್ತದೆ ಎಂದಿಷ್ಟೇ ಹೇಳುತ್ತವೆ. ಭಗವದ್ದರ್ಶನದಿಂದ ಕರ್ಮನಾಶ, ಎಂದೇನೂ ಹೇಳುತ್ತಿಲ್ಲ. ಆದ್ದರಿಂದ ಭಗವದ್ದರ್ಶನವಾದಾಗ ಕಾರ್ಯವ್ಯೂಹದಿಂದಲೇ ಕರ್ಮನಾಶ ಎಂದೇ ಆ ಶ್ರುತಿಯ ಅಭಿಪ್ರಾಯ.

ಸಿದ್ಧಾಂತ— ಹೀಗೆ ಹೇಳಿದರೆ ಅವಿದ್ಯಾನಾಶ, ಸಂದೇಹನಾಶಗಳೂ ಜ್ಞಾನದಿಂದಾಗುತ್ತವೆ, ಎನ್ನುವ ಅರ್ಥವಾಗಲಿಕ್ಕಿಲ್ಲ. ಭಗವದ್ದರ್ಶನವಾದಾಗ ಅವಿದ್ಯಾನಾಶ ಎಂದಿಷ್ಟೇ ಅಲ್ಲಿ ಹೇಳಿದೆ. ಭಗವದ್ದರ್ಶನದಿಂದ ನಾಶವೆಂದೇನೂ ಹೇಳುತ್ತಿಲ್ಲ. ಅಲ್ಲಿ ಭಗವದ್ದರ್ಶನದಿಂದ ನಾಶ ಎಂದು ಅಭಿಪ್ರಾಯವಾದರೆ ಅದೇ ಪ್ರಕರಣದಲ್ಲಿ ಪಠಿತವಾದುದರಿಂದ ದರ್ಶನದಿಂದ ಕರ್ಮನಾಶ, ಎಂದೇ ಅಭಿಪ್ರಾಯವನ್ನು ಹೇಳಬೇಕು.

ಅಲ್ಲದೆ, ಭೋಗದಿಂದ ಎಲ್ಲರ ಕರ್ಮಗಳೂ ಕ್ಷಯವಾಗುವುದರಿಂದ 'ಜ್ಞಾನಿಗೆ ಭೋಗದಿಂದ ಕ್ಷಯ' ಎನ್ನುವುದರಿಂದ ಜ್ಞಾನಿಗಳಿಗೆ ಮಹತ್ತ್ವವನ್ನೇನೂ ಹೇಳಿದಂತಾಗುವುದಿಲ್ಲ.

ಪೂರ್ವಪಕ್ಷ— ಅಜ್ಞಾನಿಗಳಿಗೆ ತಮ್ಮೆಲ್ಲ ಕರ್ಮಗಳನ್ನೂ ಏಕಕಾಲದಲ್ಲಿ ಕ್ಷಯಿಸಿಕೊಳ್ಳಲಾಗದು. ಜ್ಞಾನಿಗಳಿಗೆ ಆ ಸಾಮರ್ಥ್ಯ ಇದೆ. ಇದು ಜ್ಞಾನಿಗಳ ಮಹತ್ತ್ವ.

ಸಿದ್ಧಾಂತ— ''ಭಿನತ್ತಿ ಕರ್ಮಸಂಘಾತಂ ಪ್ರಸನ್ನೋ ಭಗವಾನ್ ಹರಿಃ'' ಎಂಬ ವಿಶೇಷವಚನದಿಂದ ಪ್ರಸನ್ನನಾದ ಭಗವಂತನೇ ಕರ್ಮನಾಶವನ್ನು

ಮಾಡುತ್ತಾನೆ. ಆದ್ದರಿಂದಲೇ 'ನಾಭುಕ್ತಂ ಕ್ಷೀಯತೇ ಕರ್ಮ–ಭೋಗದ ಹೊರತಾಗಿ ಕರ್ಮವು ನಾಶವಾಗುವುದಿಲ್ಲ' ಎನ್ನುವ ಪ್ರಮಾಣಕ್ಕೆ ಪ್ರಾರಬ್ಧ ಕರ್ಮವು ಭೋಗವಿಲ್ಲದೆ ನಾಶವಾಗುವುದಿಲ್ಲ ಎಂದು ಅರ್ಥ. ಅಂತೆಯೇ ಕಾಯವ್ಯೂಹವನ್ನು ಹೇಳುವ—

ಆತ್ಮನೋ ವೈ ಶರೀರಾಣಿ ಬಹೂನಿ ಮನುಜಾಧಿಪ ।
ಪ್ರಾಪ್ಯ ಯೋಗಬಲಂ ಕುರ್ಯಾತ್ ತೈಶ್ಚ ಸರ್ವಾಂ ಮಹೀಂ ಚರೇತ್॥
ಭುಂಜೀತ ವಿಷಯಾನ್ ಕೈಶ್ಚಿತ್ ಕೈಶ್ಚಿದುಗ್ರಂ ತಪಶ್ಚರೇತ್ ।
ಸಂಹರೇಚ್ಚ ಪುನಸ್ತಾನಿ ಸೂರ್ಯಸ್ತೇಜೋಗಣಾನಿವ ॥

ಈ ಪ್ರಮಾಣಕ್ಕೂ ಯೋಗಿಗಳು ಪ್ರಾರಬ್ಧಕರ್ಮವನ್ನು ಕಾಯವ್ಯೂಹ ದಿಂದ ಕಳೆದುಕೊಳ್ಳುತ್ತಾರೆ, ಎಂದಷ್ಟೇ ಅರ್ಥ. ಸಂಚಿತಕರ್ಮಗಳು ಜ್ಞಾನ ದಿಂದಲೇ ನಾಶವಾಗುತ್ತವೆ, ಎನ್ನುವುದಕ್ಕೆ ಇದು ವಿರುದ್ಧವಲ್ಲ.

ಭೋಗದಿಂದಲೇ ಕರ್ಮನಾಶ ಎನ್ನುವ ನಿಯಮವಿಲ್ಲ. ಸೇತುದರ್ಶನ ದಿಂದ, ಭಗನ್ನಾಮಸ್ಮರಣೆಯಿಂದ, ಪ್ರಾಯಶ್ಚಿತ್ತದಿಂದ ಪಾಪನಾಶವಾಗುತ್ತದೆ. ಮಹಾತ್ಮರ ತಿರಸ್ಕಾರದಿಂದ ಪುಣ್ಯವೂ ನಾಶವಾಗುತ್ತದೆ. ಇವೆಲ್ಲವನ್ನೂ ಪ್ರಮಾಣಗಳ ಆಧಾರದಿಂದ ಅಂಗೀಕರಿಸುವಂತೆ ಜ್ಞಾನದಿಂದ ಸಂಚಿತಕರ್ಮ ನಾಶವೂ ಪ್ರಮಾಣಪ್ರಮಿತವಾದುದರಿಂದ ಅದನ್ನೂ ಅಂಗೀಕರಿಸಬೇಕಾಗು ತ್ತದೆ. ಆದ್ದರಿಂದ ಸಂಚಿತಕರ್ಮವೂ ಭೋಗದಿಂದಲೇ ನಾಶವಾಗಬೇಕು, ಎನ್ನುವ ನಿರ್ಬಂಧವು ಸರಿಯಲ್ಲ.

**ಪಾಶುಪತಾದ್ಯುಕ್ತಮೋಕ್ಷೋಪಾಯವಿಮರ್ಶೆ**

**ನಚ ಪಾಶುಪತಾದ್ಯುಕ್ತಶಿವಾದೀನಾಮನುಗ್ರಹಾತ್ ।**
**ನಾನ್ಯಃ ಪಂಥಾ ಇತಿ ಹ್ಯುಕ್ತಂ ಪುರುಷಜ್ಞಾನತಃ ಶ್ರುತೌ ॥ ೧೬೦ ॥**

ಪಾಶುಪತಾದ್ಯುಕ್ತಶಿವಾದೀನಾಂ=ಪಾಶುಪತ–ಸ್ಕಾಂದ–ಸೌರಾದ್ಯಾಗಮಗಳಲ್ಲಿ ಹೇಳಲ್ಪಟ್ಟ ಶಿವ–ಸ್ಕಂದ–ಸೂರ್ಯಾದಿಗಳ ಅನುಗ್ರಹಾತ್=ಅನುಗ್ರಹದಿಂದ ಮೋಕ್ಷವು ದೊರಕುತ್ತದೆ, ಎನ್ನುವುದು ಸರಿಯಲ್ಲ. ಏಕೆಂದರೆ, ಶ್ರುತೌ= ಪುರುಷಸೂಕ್ತದಲ್ಲಿ 'ನಾನ್ಯಃ ಪಂಥಾಃ' ಇತಿ=

'ತಮೇವಂ ವಿದ್ವಾನಮೃತ ಇಹ ಭವತಿ ।
ನಾನ್ಯಃ ಪಂಥಾಃ ವಿದ್ಯತೇ ಅಯನಾಯ ॥

ಎಂಬ ಮಂತ್ರದಲ್ಲಿ ಪುರುಷಜ್ಞಾನತಃ=ಪುರುಷನೆನಿಸಿರುವ ವಿಷ್ಣುವಿನ ಜ್ಞಾನದಿಂದಲೇ ಮೋಕ್ಷವು ಹೇಳಲ್ಪಟ್ಟಿದೆ.

**ಭಾವಾರ್ಥ**— ಪಾಶುಪತದರ್ಶನದಲ್ಲಿ ಶಿವನ ಅನುಗ್ರಹದಿಂದ ಮೋಕ್ಷ, ಎಂದಿದೆ. ಸ್ಕಾಂದದಲ್ಲಿ ಸ್ಕಂದನ ಅನುಗ್ರಹದಿಂದ ಮೋಕ್ಷ ಎಂದಿದೆ. ಇವೆಲ್ಲವೂ ಅಪ್ರಾಮಾಣಿಕ. ಪುರುಷಸೂಕ್ತದಲ್ಲಿ ಸಹಸ್ರಶೀರ್ಷತ್ವಾದಿ ಗುಣಗಳಿಂದ ವಿಶಿಷ್ಟನಾದ ಪುರುಷನ ಜ್ಞಾನದಿಂದಲೇ ಮೋಕ್ಷ, ಅದು ಬಿಟ್ಟು ಬೇರೆ ದಾರಿ ಇಲ್ಲ, ಎನ್ನಲಾಗಿದೆ. ಇದಕ್ಕೆ ವಿರುದ್ಧವಾದುದರಿಂದ ಶಿವನ ಜ್ಞಾನವು ಮೋಕ್ಷಕಾರಣವಲ್ಲ.

ಅನುವ್ಯಾಖ್ಯಾನದಲ್ಲಿ ಪಾಶುಪತಾದ್ಯುಕ್ತಶಿವಾದೀನಾಂ, ಎಂದಿದೆ. 'ಶಿವಾದೀನಾಮನುಗ್ರಹಾತ್' ಎನ್ನುವುದನ್ನು ಬಿಟ್ಟು ಪಾಶುಪತಾದ್ಯುಕ್ತ ಎಂಬ ವಿಶೇಷಣವನ್ನು ಕೊಟ್ಟಿರುವ ಉದ್ದೇಶ ಇದು–ಪಾಶುಪತದಲ್ಲಿ ಶಿವನೇ ಸರ್ವೋತ್ತಮ, ಅವನೇ ಜಗತ್ಕರ್ತ, ಎಂದೆಲ್ಲ ಶಿವಪಾರಮ್ಯವನ್ನು ಹೇಳಲಾಗಿದೆ. ಸರ್ವೋತ್ತಮನಾದ ಶಿವನೇ ಪಾಶುಪತಾದ್ಯುಕ್ತ ಶಿವ. ಆದರೆ ಆ ರೀತಿಯಾಗಿ ಶಿವನ ಉಪಾಸನೆಯಿಂದ ಶಿವನಿಗೆ ಕೋಪವೇ ಬರುತ್ತದೆ. ಅವನ ಅನುಗ್ರಹ ದೂರತೋಽಪಾಸ್ತ. ಇದನ್ನು ತಿಳಿಸುವುದಕ್ಕಾಗಿ ಆ ವಿಶೇಷಣವಿದೆ.

ಸಿದ್ಧಾಂತದಲ್ಲೂ ಶಿವನ ಅನುಗ್ರಹ ಬೇಕು—
ಮೋಕ್ಷೋ ಜ್ಞಾನಂ ಚ ಕ್ರಮಶೋ ಮುಕ್ತಿಗೋ ಭೇದ ಏವ ಚ ।
ಉತ್ತರೇಷಾಂ ಪ್ರಸಾದೇನ ನೀಚಾನಾಂ ನಾನ್ಯಥಾ ಭವೇತ್ ॥

ಆದರೆ, ಶಿವಾನುಗ್ರಹವು ಸ್ವತಂತ್ರವಾದ ಸಾಧನವಲ್ಲ. ಭಗವದನುಗ್ರಹಕ್ಕೆ ಕಾರಣ. ಅನುವ್ಯಾಖ್ಯಾನದಲ್ಲಿ ಪುರುಷನೆಂದರೆ ಶ್ರೀಹರಿ.

**'ಸರ್ವೇ ನಿಮೇಷಾ ಜಜ್ಞಿರೇ ವಿದ್ಯುತಃ ಪುರುಷಾದಧಿ ।'**
**ಏವಂ ಪುರುಷಶಬ್ದಶ್ಚ ಪ್ರಯುಕ್ತೋಽಬ್ಧಿಶಯೇ ಹರೌ ॥ ೧೬೧ ॥**

''ಸರ್ವೇ ನಿಮೇಷಾಃ=ಎಲ್ಲಾ ಕಾಲಗಳೂ ವಿದ್ಯುತಃ ಪುರುಷಾದಧಿ=

ಜ್ಯೋತಿರೂಪನಾದ ಪುರುಷನಿಂದ ಜಜ್ಞಿರೇ=ಹುಟ್ಟಿದವು'' ಏವಂ=ಹೀಗೆ ಪುರುಷಶಬ್ದಶ್ಚ=ಪುರುಷ ಎಂಬ ಶಬ್ದವೂ ಕೂಡಾ (ಪುರುಷಜ್ಞಾನದಿಂದ ಅಮೃತತ್ವಮಾತ್ರವಲ್ಲದೆ) ಅಬ್ಧಿಶಯೇ=ಸಮುದ್ರಶಾಯಿಯಾದ ಶ್ರೀಹರಿಯಲ್ಲೇ ಪ್ರಯುಕ್ತಃ=ನಾರಾಯಣಾನುವಾಕದಲ್ಲಿ ಪ್ರಯೋಗಿಸಲ್ಪಟ್ಟಿದೆ.

**ಭಾವಾರ್ಥ—** ಪುರುಷಸೂಕ್ತದಲ್ಲಿ ಪ್ರತಿಪಾದ್ಯ ಶ್ರೀಹರಿಯಲ್ಲ, ಪಶುಪುರುಷ. ''ಅಬಧ್ನನ್ ಪುರುಷಂ ಪಶುಂ'' ಎಂದು ದೇವತೆಗಳು ಮಾಡಿದ ಯಜ್ಞದಲ್ಲಿ ಯಜ್ಞಪಶುವಾಗಿ ಯೂಪದಲ್ಲಿ ಬಂಧಿಸಲಾದ ಪಶುವನ್ನು ಪುರುಷ ಎಂದು ಕರೆದಿದೆ. ಅಂತಹ ಪಶುಪುರುಷನ ಜ್ಞಾನದಿಂದ ಪಶುಪತಿಯ ಜ್ಞಾನದ್ವಾರಾ ಅಮೃತತ್ವಪ್ರಾಪ್ತಿಯಾಗುತ್ತದೆ. ಹೀಗೆ ಪಶುಪುರುಷಜ್ಞಾನ ಮೋಕ್ಷಕ್ಕೆ ಸಾಧನ. ಅದಕ್ಕೆ ಸಾಧನ ಪಶುಜ್ಞಾನವೇ ಹೊರತು, ಬೇರೆ ಸಾಧನಗಳಲ್ಲ ಎನ್ನುತ್ತದೆ 'ನಾನ್ಯಃ ಪಂಥಾಃ' ಎಂಬ ಮಂತ್ರ. ಆದ್ದರಿಂದ ಈ ಮಂತ್ರವು ವಿಷ್ಣುಜ್ಞಾನದಿಂದ ಮೋಕ್ಷವನ್ನು ಹೇಳುತ್ತಿಲ್ಲ, ಎಂದು ಪೂರ್ವಪಕ್ಷ.

ಇದು ಪ್ರಮಾಣವಿಲ್ಲದ ಕಲ್ಪನೆ. ಸಹಸ್ರಶೀರ್ಷಾ ಪುರುಷಃ, ಎಂದು ಆರಂಭದಲ್ಲಿ ಪ್ರಸ್ತುತನಾದ ಪುರುಷ ಶ್ರೀಹರಿ. ನಾರಾಯಣಾನುವಾಕದಲ್ಲಿ ಆ ಸೃಷ್ಟಿಕರ್ತನಾದ ಶ್ರೀಹರಿಯಲ್ಲೂ ಪುರುಷನಾಮವನ್ನು ಪ್ರಯೋಗಿಸಲಾಗಿದೆ. ಆದ್ದರಿಂದ ಪುರುಷನೆಂದರೆ ಶ್ರೀಹರಿ, ಅವನೇ ಪುರುಷಸೂಕ್ತದಿಂದ ಪ್ರತಿಪಾದ್ಯ, ಎನ್ನಲು ಬಾಧಕಗಳೇನೂ ಇಲ್ಲ.

**'ನ ತಸ್ಯೇಶೇ ಕಶ್ಚನ ತಸ್ಯ ನಾಮ ಮಹದ್ ಯಶಃ ।'**
**ಇತಿ ಚಾಧಿಪತಿಸ್ತಸ್ಯ ಪ್ರತಿಷಿದ್ಧಃ ಸ್ವಯಂ ಶ್ರುತೌ ॥ ೧೬೨ ॥**

**'ವಿಶ್ವತಃ ಪರಮಾಂ ನಿತ್ಯಂ ವಿಶ್ವಂ ನಾರಾಯಣಂ ಹರಿಮ್' ।**
**ಇತಿ ಸರ್ವಾಧಿಕತ್ವೋಕ್ತ್ಯಾ ಸಮೋಽಪಿ ವಿನಿವಾರಿತಃ ॥ ೧೬೩ ॥**

'ತಸ್ಯ=ಅವನಿಗೆ (ನಾರಾಯಣನಿಗೆ) ಕಶ್ಚನ=ಯಾರೂ ನ ಈಶೇ= ಈಷ್ಟೇ=ಆಳಲು ಸಮರ್ಥರಲ್ಲ ತಸ್ಯ=ಅವನ ನಾಮ=ಹೆಸರು 'ಮಹತ್' ಮತ್ತು ''ಯಶಃ'' ಎಂದು, ಇತಿಚ=ಹೀಗೆ ಶ್ರುತೌ=ನಾರಾಯಣಾನು

ವಾಕದಲ್ಲಿಯೇ ತಸ್ಯ=ಪುರುಷನಿಗೆ ಅಧಿಪತಿಃ=ಒಡೆಯನು ಸ್ವಯಂ= ಮುಖತಃ ಪ್ರತಿಷಿದ್ಧಃ= ನಿರಾಕರಿಸಲ್ಪಟ್ಟಿದ್ದಾನೆ.

''ವಿಶ್ವತಃ=ಎಲ್ಲರಿಗಿಂತಲೂ ಪರಮಃ=ಶ್ರೇಷ್ಠನು, ಅಶ್ಚ=ಅಕಾರ ವಾಚ್ಯನು, (ಪರಮಾಂ, ಪರಮ+ಅ) ಆದ್ದರಿಂದ ನಿತ್ಯಂ= ನಾಶವಿಲ್ಲದ, ವಿಶ್ವಂ=ಪೂರ್ಣನಾದ ನಾರಾಯಣಂ ಹರಿಂ=ನಾರಾಯಣ ಎನಿಸಿರುವ ಹರಿಯನ್ನು''

ಇತಿ=ಹೀಗೆ ನಾರಾಯಣಾನುವಾಕದಲ್ಲೇ ಸರ್ವಾಧಿಕತ್ವೋಕ್ತ್ಯಾ= ನಾರಾಯಣನಿಗೆ ಸರ್ವಾಧಿಕತ್ವವನ್ನು ಹೇಳಿರುವುದರಿಂದ ಸಮೋಽಪಿ= ಸಮಾನನೂ ವಿನಿವಾರಿತಃ=ನಿರಾಕರಿಸಲ್ಪಟ್ಟಿದ್ದಾನೆ.

**ಸಮಾಧಿಕಸ್ಯ ರಾಹಿತ್ಯಾನ್ನೋಪಚಾರಪುಮಾನಸೌ ॥ ೧೬೪ ॥**

ಹೀಗೆ ಅಸೌ=ನಾರಾಯಣಾನುವಾಕದಲ್ಲಿ ಹೇಳಲ್ಪಟ್ಟವನು ಸಮಾಧಿ ಕಸ್ಯ=ಸಮಾನ ಮತ್ತು ಅಧಿಕರ ರಾಹಿತ್ಯಾತ್=ಅಭಾವ ಇರುವುದರಿಂದ ಉಪಚಾರಪುಮಾನ್=ಪ್ರಧಾನನಾದ ಮತ್ತೊಬ್ಬನಿಗೆ ಅಧೀನನಾದ ಪಶುಪುರುಷನು ನ=ಅಲ್ಲ.

ಭಾವಾರ್ಥ–ನಾರಾಯಣಾನುವಾಕದಲ್ಲಿ ಪ್ರತಿಪಾದ್ಯನಾದ ಪುರುಷನು ಪಶುಪುರುಷನಲ್ಲ, ಪ್ರಧಾನಪುರುಷನೇ. ಏಕೆಂದರೆ, ಅಲ್ಲಿ ಹೇಳಿರುವ ಪುರುಷನಿಗಿಂತ ಅಧಿಕರು ಯಾರೂ ಇಲ್ಲ, ಎನ್ನಲಾಗಿದೆ. ಅಷ್ಟೇ ಅಲ್ಲ, ಆ ಪುರುಷನನ್ನು ನಾರಾಯಣನೆಂದು ಕರೆಯಲಾಗಿದೆ. ಆದ್ದರಿಂದ ಸರ್ವೋತ್ತಮ ನಾದ ಪರಮಪುರುಷನೇ ಅವನು. ಹೀಗೆ ಪುರುಷಶಬ್ದದ ಮುಖ್ಯಪ್ರತಿಪಾದ್ಯ ವಿಷ್ಣು, ಎಂದು ನಾರಾಯಣಾನುವಾಕದಿಂದ ತಿಳಿಯುತ್ತದೆ.

**'ಪುರುಷ ಏವೇದಂ ಸರ್ವಂ ಯದ್ ಭೂತಂ ಯಚ್ಚ ಭವ್ಯಮ್ ।**
**ಉತಾಮೃತತ್ವಸ್ಯೇಶಾನೋ ಯದನ್ನೇನಾತಿರೋಹತಿ ।'**
**ಮುಕ್ತಾಮುಕ್ತಪರೇಶತ್ವಮಿತಿ ತಸ್ಯಾಹ ಸಾ ಶ್ರುತಿಃ ॥ ೧೬೫ ॥**

ಪುರುಷಸೂಕ್ತಪ್ರತಿಪಾದ್ಯನೂ ಅದೇ ಸರ್ವೋತ್ತಮಪುರುಷ. ಏಕೆಂದರೆ, ಅಲ್ಲಿ ಹೀಗಿದೆ— ಯತ್=ಯಾವುದು ಭೂತಂ=ಭೂತಕಾಲೀನವೋ ಯಚ್ಚ

ಭವ್ಯಂ=ಯಾವುದು ಭವಿಷ್ಯತ್ತೋ ಇದಂ ಸರ್ವಂ=ಇವೆಲ್ಲವೂ ಪುರುಷ ಏವ=ಪುರುಷಾಧೀನವಾದುದು. ಯತ್=ಯಾವಕಾರಣದಿಂದ ಅನ್ನೇನ-ಅದನೀಯೇನ=ಪ್ರಳಯಕಾಲದಲ್ಲಿ ಸಂಹಾರಕ್ಕೆ ಒಳಗಾಗುವ ಮರ್ತ್ಯ ವರ್ಗವನ್ನು ಅತಿರೋಹತಿ=ಮೀರಿ ನಿಂತಿದ್ದಾನೋ ಅರ್ಥಾತ್, ಅಮುಕ್ತಾಧಿ ಪತಿಯಾದ ಕಾರಣ ಅವನು ಅಮೃತತ್ವಸ್ಯ ಉತ=ಮುಕ್ತವರ್ಗಕ್ಕೂ ಈಶಾನಃ= ಒಡೆಯನು.

ಇತಿ=ಹೀಗೆ ಸಾ ಶ್ರುತಿಃ=ಪುರುಷಸೂಕ್ತದ ಮಂತ್ರವು ಮುಕ್ತಾಮುಕ್ತ ಪರೇಶತ್ವಂ=ಮುಕ್ತ ಮತ್ತು ಅಮುಕ್ತರಿಗೆ ಒಡೆತನವನ್ನು ತಸ್ಯ=ಪುರುಷನಿಗೆ ಆಹ=ಹೇಳುತ್ತದೆ.

**ಭಾವಾರ್ಥ—** ಪುರುಷಶಬ್ದದ ಮುಖ್ಯಾರ್ಥ ಸರ್ವೋತ್ತಮನಾದ ವಿಷ್ಣು. ಅವನೇ ಪುರುಷಸೂಕ್ತದಿಂದ ಪ್ರತಿಪಾದ್ಯನಾದ ಪುರುಷನು. ಏಕೆಂದರೆ ಆ ಪುರುಷನನ್ನು ಮುಕ್ತಾಮುಕ್ತನಿಯಾಮಕ ಎಂದು ಪುರುಷಸೂಕ್ತದಲ್ಲಿ ಬಣ್ಣಿಸಲಾಗಿದೆ. ಆ ಪುರುಷನು ಅಮುಕ್ತವರ್ಗದ ಒಡೆಯನಾದ ಕಾರಣ ಮುಕ್ತರಿಗೂ ಒಡೆಯ. ಅವನೇ ಮೋಕ್ಷಪ್ರದನಾದುದರಿಂದ ಮೋಕ್ಷದಲ್ಲಿ ಜೀವರು ತನಗೆ ಸಮರೋ ಅಧಿಕರೋ ಆಗುವುದಾದಲ್ಲಿ ಪ್ರೇಕ್ಷಾವಂತನಾದ ಅವನು ಮೋಕ್ಷವನ್ನೇ ಕೊಡುತ್ತಿರಲಿಲ್ಲ. ಹೀಗೆ ವಿಷ್ಣುವು ಅಮುಕ್ತರಿಗೆ ನಿಯಾಮಕನಾದರೆ ಮುಕ್ತರಿಗೂ ನಿಯಾಮಕನಾಗಿರಬೇಕು. ಮುಕ್ತ ನಿಯಾಮಕತ್ವ ವಿಷ್ಣುವಿನ ಅಸಾಧಾರಣಲಿಂಗ-ಮುಕ್ತಾನಾಂ ಪರಮಾಗತಿಃ ಎಂದು ವಿಷ್ಣುಸಹಸ್ರನಾಮದಲ್ಲಿ ಅದನ್ನು ಸೇರಿಸಲಾಗಿದೆ.

## ಪುರುಷನೇ ಜಗತ್ತಲ್ಲ

**ಅಮೃತೇಶಾನವಚನಾತ್ ಸರ್ವಸ್ಯೇಶಾನತೋದಿತಾ ।**
**ಯದಿ ಸರ್ವತ್ವಮುದಿತಮುತೇಶ ಇತಿ ತದ್ ವೃಥಾ ॥ ೧೬೬ ॥**

**ಉತಶಬ್ದೋ ವದೇದೇಷ ಹೀಶತ್ವಸ್ಯ ಸಮುಚ್ಚಯಮ್ ।**
**ಪುರುಷೇಣೈವೇದಂ ವ್ಯಾಪ್ತಮಿತಿ ಬ್ರಾಹ್ಮಣಂ ಚಾಹ ತಂ ಪ್ರತಿ ।**
**ಏತಾವಾನಸ್ಯ ಮಹಿಮೇತಿ ಮಹಿಮ್ನೋ ವಚೋ ಹಿ ತತ್ ॥ ೧೬೭ ॥**

ಅಮೃತೇಶಾನವಚನಾತ್=ಮುಕ್ತರಿಗೆ ಪುರುಷನು ಅಧಿಪತಿ ಎಂದಿರುವುದರಿಂದ ಸರ್ವಸ್ಯ=ಅಮುಕ್ತವಾದ ಎಲ್ಲದಕ್ಕೂ ಈಶಾನತಾ= ಒಡೆತನವು ಉದಿತಾ=ಹೇಳಲ್ಪಟ್ಟಿದೆ.

ಪುರುಷಸೂಕ್ತದಲ್ಲಿ 'ಪುರುಷ ಏವೇದಂ ಸರ್ವಂ' ಎಂದು ಪುರುಷನಿಗೆ ಸರ್ವಾತ್ಮಕತ್ವವನ್ನು ಹೇಳಲಾಗಿಲ್ಲ. ಉತ್ತರಾರ್ಧದಲ್ಲಿ ಮುಕ್ತೇಶಾನತ್ವವನ್ನು ಹೇಳಿರುವುದರಿಂದ ಪೂರ್ವಾರ್ಧದಲ್ಲಿ ಅಮುಕ್ತೇಶಾನತ್ವವನ್ನೇ ಹೇಳಬೇಕು. ಸರ್ವಾತ್ಮಕತ್ವವನ್ನು ಹೇಳಿದರೆ ಸಂಸಾರದಲ್ಲಿ ಅಭಿನ್ನರಾದ ಅಮುಕ್ತರು ಮೋಕ್ಷದಲ್ಲಿ ಭಿನ್ನರಾಗುತ್ತಾರೆ, ಎಂದಂತಾಗುತ್ತದೆ. ಇದನ್ನು ಯಾವ ವಾದಿಗಳೂ ಒಪ್ಪುವುದಿಲ್ಲ. ಆದ್ದರಿಂದ ಅಮುಕ್ತರಿಗೆ ನಿಯಾಮಕನಾದುದರಿಂದ ಮುಕ್ತರಿಗೂ ನಿಯಾಮಕ, ಎಂದೇ ಅದರ ಅರ್ಥ.

ಇನ್ನೊಂದು ಕಾರಣ— ಯದಿ ಸರ್ವತ್ವಮುದಿತಂ=ಒಂದುವೇಳೆ ಪೂರ್ವಾರ್ಧದಲ್ಲಿ ಸರ್ವಾತ್ಮಕತ್ವವನ್ನು ಹೇಳಿದ್ದಲ್ಲಿ ಉತ್ತರಾರ್ಧದ ಉತೇಶ ಇತಿ=ಉತಾಮೃತತ್ವಸ್ಯೇಶಾನಃ, ಎಂಬಲ್ಲಿ 'ಉತ' ಶಬ್ದವು ವ್ಯರ್ಥ. ಏಕೆಂದರೆ, ಏಷಃ ಉತಶಬ್ದಃ=ಈ ಉತ ಎಂಬ ಶಬ್ದವು ಈಶತ್ವಸ್ಯ=ಈಶತ್ವದ (ಒಡೆತನದ) ಸಮುಚ್ಚಯಂ=ಸಮುಚ್ಚಯವನ್ನು ವದೇತ್=ಹೇಳಬಹುದು.

ಇಲ್ಲಿ ಉತಶಬ್ದವಿದೆ. ಅದಕ್ಕೆ ಸಮುಚ್ಚಯ ಎಂದರ್ಥ. ಅಂದರೆ 'ಮುಕ್ತವರ್ಗಕ್ಕೂ ಅವನು ಒಡೆಯ' ಎನ್ನಬೇಕಾದರೆ ಅವನು ಇನ್ನಾವುದಕ್ಕೋ ಒಡೆಯನೆಂದು ಹಿಂದೆ ಹೇಳಿರಬೇಕು. 'ಪುರುಷ ಏವೇದಂ' ಎನ್ನುವ ಪೂರ್ವಾರ್ಧಕ್ಕೆ ಪುರುಷಾಧೀನ, ಎಂದು ಅರ್ಥಮಾಡಿದಾಗ 'ಅವನು ಅಮುಕ್ತವರ್ಗಕ್ಕೆ ಈಶಾನ, ಮುಕ್ತವರ್ಗಕ್ಕೂ ಈಶಾನ'' ಎಂದಂತಾಗಿ ಉತಶಬ್ದ ಸಂಗತವಾಗುತ್ತದೆ. ಇಲ್ಲದಿದ್ದಲ್ಲಿ ಅದು ಅಸಂಗತ.

ಇನ್ನೊಂದು ಕಾರಣ— ''ಪುರುಷೇಣೈವೇದಂ ವ್ಯಾಪ್ತಮಿತಿ='ಪುರುಷ ಏವೇದಂ ಸರ್ವಮಿತಿ–ಪುರುಷೇಣೈವೇದಂ ಸರ್ವಂ ವ್ಯಾಪ್ತಮ್, ಆತೃಣಾದಾಕರೀಷಾತ್ ಸರ್ವಂ ಭಗವಾನಿತಿ ಮಿಥ್ಯಾದೃಷ್ಟಿರೇಷಾ' ಎಂಬ ಈ ಬ್ರಾಹ್ಮಣಂ=ಬ್ರಾಹ್ಮಣವಾಕ್ಯವು ತಂ ಪ್ರತಿ=ಪುರುಷಸೂಕ್ತದ ಈ ಮಂತ್ರದ ಬಗ್ಗೆ ಆಹ=ಹೇಳುತ್ತದೆ.

**ಭಾವಾರ್ಥ**—ವೇದದ ಬ್ರಾಹ್ಮಣಭಾಗವು ಪುರುಷಸೂಕ್ತದ ಈ ಮಂತ್ರವನ್ನು ಇದೇ ಅರ್ಥದಲ್ಲಿ ವ್ಯಾಖ್ಯಾನ ಮಾಡಿ 'ಎಲ್ಲವೂ ಪುರುಷನೇ' ಎಂಬ ಅರ್ಥವನ್ನು ನಿರಾಕರಿಸುತ್ತದೆ— 'ಪುರುಷ ಏವೇದಂ ಎಂದರೆ ಇವೆಲ್ಲವೂ ಪುರುಷನಿಂದಲೇ ವ್ಯಾಪಿಸಿದೆ, ಎಂದರ್ಥ. ಹೊರತು, ಹುಲ್ಲುಕಡ್ಡಿಯಿಂದ ಹಿಡಿದು ಎಲ್ಲವೂ ಪುರುಷನೇ, ಎನ್ನುವುದು ಮಿಥ್ಯಾದೃಷ್ಟಿ' ಎನ್ನುತ್ತದೆ, ಬ್ರಾಹ್ಮಣ.

ಅಲ್ಲದೆ, 'ಏತಾವಾನಸ್ಯ ಮಹಿಮಾ=ಪುರುಷನ ಮಹಿಮೆ ಇಷ್ಟಿದೆ' ಇತಿ=ಹೀಗೆಂದು ತತ್=ಪುರುಷ ಏವೇದಂ ಎನ್ನುವ ವಚಃ=ಮಾತು, ಪುರುಷನ ಮಹಿಮ್ನಃ=ಮಹಿಮೆಯ ವಚಃ=ಮಾತು ಎಂದು ತಿಳಿಯುತ್ತದೆ.

**ಭಾವಾರ್ಥ**— ''ಏತಾವಾನಸ್ಯ ಮಹಿಮಾ'' ಎಂದು ಪುರುಷಸೂಕ್ತದ ಮುಂದಿನ ವಾಕ್ಯವು ಹಿಂದೆ ಹೇಳಿದ್ದೆಲ್ಲ ಪುರುಷನ ಮಹಿಮೆ, ಎಂದಿದೆ. ಅದಕ್ಕೆ ಅನುಗುಣವಾಗಿ ಪುರುಷನ ಮಹತ್ತ್ವವು ಸಿದ್ಧಿಯಾಗುವಂತೆ 'ಪುರುಷ ಏವೇದಂ' ಎನ್ನುವ ವಾಕ್ಯಕ್ಕೆ ಅರ್ಥ ಹೇಳಬೇಕು. ಜಡ ಚೇತನಗಳೆಲ್ಲವೂ ಪುರುಷ, ಎಂದು ಅರ್ಥ ಮಾಡಿದರೆ ಅದು ಪುರುಷನ ಮಹಿಮೆಯಲ್ಲ, ಪುರುಷನ ಅಧೀನ ಎಂದರೆ ಅದು ಮಹಿಮೆಯಾಗುತ್ತದೆ. ಆದ್ದರಿಂದ ಪುರುಷ ಏವೇದಂ, ಎನ್ನುವ ಮಂತ್ರಕ್ಕೆ ಪುರುಷಾಧೀನ, ಎಂದೇ ಅರ್ಥವನ್ನು ಹೇಳಬೇಕು. ಇದು ಇನ್ನೊಂದು ಯುಕ್ತಿ.

**'ಸೋಽಮೃತಸ್ಯಾಭಯಸ್ಯೇಶೋ ಮರ್ತ್ಯಮನ್ನಂ ಯದತ್ಯಗಾತ್ ।'**
**ಇತ್ಯಮುಕ್ತಾಧಿಪತ್ಯಂ ತು ಪೂರ್ವಾರ್ಧೋಕ್ತಮನೂದ್ಯ ಚ ।**
**ಉತಾಮೃತಸ್ಯೇಶ ಇತಿ ವಿಧತ್ತೇ ಮುಕ್ತಿಗೇಶತಾಮ್ ॥ ೧೬೮ ॥**

ಈ ಮಂತ್ರದ ಅರ್ಥವನ್ನು ಭಾಗವತವೇ ಹೇಳಿದೆ— ''ಸಃ=ಆ ಪುರುಷನು, ಅನ್ನಂ ಎಂಬ ಪುರುಷಸೂಕ್ತಪದದ ಅರ್ಥ– ಮರ್ತ್ಯಂ=ಅಮುಕ್ತ ವರ್ಗವನ್ನು ಯತ್=ಯಾವ ಕಾರಣದಿಂದ ಅತ್ಯಗಾತ್=ಮೀರಿದ್ದಾನೋ ಆದ್ದರಿಂದಲೇ ಅಮೃತಸ್ಯ=ಮುಕ್ತವರ್ಗಕ್ಕೆ ಈಶಃ=ಒಡೆಯನು'' ಇತಿ=ಹೀಗೆ ಪೂರ್ವಾರ್ಧೋಕ್ತಂ=ಪುರುಷಸೂಕ್ತಮಂತ್ರದ,

ಪುರುಷ ಏವೇದಂ ಸರ್ವಂ ಯದ್ಭೂತಂ ಯಚ್ಚ ಭವ್ಯಮ್ ।

ಎಂಬ ಪೂರ್ವಾರ್ಧದಲ್ಲಿ ಹೇಳಿದ್ದನ್ನು—

ಉತಾಮೃತತ್ವಸ್ಯೇಶಾನಃ ಯದನ್ನೇನಾತಿರೋಹತಿ ॥

'ಯದನ್ನೇನಾತಿರೋಹತಿ' ಎಂಬುದಾಗಿ ಅನೂದ್ಯ=ಅನುವಾದಿಸಿ ಉತಾಮೃತಸ್ಯೇಶ ಇತಿ='ಉತಾಮೃತತ್ವಸ್ಯೇಶಾನಃ' ಎಂಬುದಾಗಿ ಮುಕ್ತಿಗೇಶತಾಂ=ಮುಕ್ತರ ಆಧಿಪತ್ಯವನ್ನು ವಿಧತ್ತೇ=ವಿಧಿಸುತ್ತದೆ.

ಭಾವಾರ್ಥ— ಪುರುಷಸೂಕ್ತದ ಮಂತ್ರದಲ್ಲಿ 'ಯದನ್ನೇನಾತಿರೋಹತಿ' ಎಂದು ಪೂರ್ವಾರ್ಧದಲ್ಲಿ ಹೇಳಿರುವ ಮರ್ತ್ಯರ ಆಧಿಪತ್ಯವನ್ನು ಯತ್= ಯಾವಕಾರಣದಿಂದ ಎಂದು ಹೇತುವನ್ನಾಗಿ ಅನುವಾದಿಸಿ 'ಅಮೃತತ್ವ-ಸ್ಯೇಶಾನಃ' ಎಂದು ಮುಕ್ತವರ್ಗದ ಆಧಿಪತ್ಯವನ್ನು ವಿಧಿಸಲಾಗಿದೆ. ಪುರುಷನು ಅಮುಕ್ತರ ಅಧಿಪತಿಯಾಗಿರುವುದರಿಂದ ಮುಕ್ತರಿಗೂ ಅಧಿಪತಿ, ಎಂದು ಅದರ ಅರ್ಥ. ಹೀಗೆ, ಅನುವಾದ ಮಾಡಬೇಕಾದರೆ ಪೂರ್ವದಲ್ಲಿ ಪ್ರಸ್ತುತ ವಾಗಿರಬೇಕು. ಪೂರ್ವಮಂತ್ರ 'ಪುರುಷ ಏವೇದಂ ಸರ್ವಂ' ಎಂದಿದೆ. ಅದಕ್ಕೆ, ಇವೆಲ್ಲವೂ ಪುರುಷಾಧೀನ, ಎಂದು ಅರ್ಥಮಾಡಿದರೆ ಅಲ್ಲಿ ಪ್ರಸ್ತುತವಾದ ಅನ್ನಾಧಿಪತ್ಯವನ್ನು (ಅಮುಕ್ತರ ಒಡೆತನವನ್ನು) ಅನುವಾದ ಮಾಡಬಹುದು. ಆದ್ದರಿಂದ ಪುರುಷ ಏವೇದಂ, ಎನ್ನುವುದಕ್ಕೆ ಪುರುಷಾಧೀನ, ಎಂದೇ ಅರ್ಥವನ್ನು ಮಾಡಬೇಕು. ಭಾಗವತವು ಇದೇ ಅರ್ಥವನ್ನು ಹೇಳಿದೆ— ಮರ್ತ್ಯಮನ್ನಂ ಯದತ್ಯಗಾತ್- ಎಂದು.

ಆದರೆ, ಕೆಲವರು— ''ಅನ್ನೇನ ದಿವ್ಯಭೋಗೇನ ಯತ್ ಅತಿರೋಹತಿ-ಅಧಿರೋಹತಿ ಏಧತೇ ತಸ್ಯಾಮೃತತ್ವಸ್ಯ=ದೇವತ್ವಸ್ಯೇಶಾನಃ''

ಹೀಗೆ ವ್ಯಾಖ್ಯಾನ ಮಾಡುತ್ತಾರೆ. ಅದರರ್ಥ-ಯತ್=ಯಾವುದು ಅನ್ನೇನ=ಸ್ವರ್ಗಲೋಕದ ಭೋಗದಿಂದ ಅತಿರೋಹತಿ=ವೃದ್ಧಿ ಹೊಂದಿದೆಯೋ ಅಂತಹ ದೇವತ್ವದ ಈಶಾನಃ=ಒಡೆಯನು. ಸ್ವರ್ಗದ ಭೋಗದಿಂದ ವೃದ್ಧಿ ಹೊಂದಿದ ದೇವತಾವರ್ಗದ ಒಡೆಯ ಪುರುಷ, ಎಂದು ತಾತ್ಪರ್ಯ. ಇದು ಭಾಗವತಕ್ಕೆ ವಿರುದ್ಧ. ಅನ್ನೇನಾತಿರೋಹತಿ ಎನ್ನುವುದಕ್ಕೆ ಭಾಗವತದಲ್ಲಿ ''ಮರ್ತ್ಯಮನ್ನಂ ಯದತ್ಯಗಾತ್'' ಅನ್ನವೆನಿಸುವ ಅಮುಕ್ತವರ್ಗವನ್ನು

ಮೀರಿದೆ, ಎನ್ನುವ ಅರ್ಥವನ್ನು ಹೇಳಿ ಅನ್ನೇನ ಎಂಬ ತೃತೀಯಾಂತಪದವನ್ನು 'ಅನ್ನಂ' ಎಂಬುದಾಗಿ ಪರಿಗಣಿಸಲಾಗಿದೆ. ಅಮೃತಸ್ಯ ಎಂಬ ಶಬ್ದಕ್ಕೆ ಅಭಯಸ್ಯ ಎಂಬ ಅರ್ಥವನ್ನು ಮಾಡಿ ಮುಕ್ತವರ್ಗ ಎಂಬ ಅರ್ಥವನ್ನು ಹೇಳಿದೆ.

ಪರಕೀಯವ್ಯಾಖ್ಯಾನದಲ್ಲಿ 'ಪುರುಷ ಏವೇದಂ' ಎಂದು ಸರ್ವಾಭೇದ ವನ್ನು ಹೇಳಿ ಮುಕ್ತಾಮುಕ್ತರಿಗೆ ಒಡೆಯ ಎನ್ನುವುದು ವ್ಯಾಹತ.

**ಅತೋ ವಿಷ್ಣುಪರಿಜ್ಞಾನಾದೇವ ಮುಕ್ತಿರ್ನಚಾನ್ಯತಃ ॥ ೧೭೯ ॥**

ಅತಃ='ನಾನ್ಯಃ ಪಂಥಾಃ' ಎಂದು ಪುರುಷಸೂಕ್ತದಲ್ಲಿ ಹೇಳಿರುವಂತೆ ಪುರುಷನಾದ ವಿಷ್ಣುವಿನ ಜ್ಞಾನದ್ವಾರಾ ಅವನ ಪ್ರಸಾದದಿಂದಲೇ ಮೋಕ್ಷ.

**ಕರ್ಮವು ಜ್ಞಾನದಿಂದಲೂ ನಾಶವಾಗುತ್ತದೆ**

**ತದ್ ಯಥೇತಿ ಶ್ರುತೇಶ್ಚೈವ ತತಃ ಕರ್ಮಕ್ಷಯೋ ಭವೇತ್ ॥ ೧೮೦ ॥**

**'ಯಥೈಧಾಂಸಿ ಸಮಿದ್ಧೋಽಗ್ನಿರ್ಭಸ್ಮಸಾತ್ ಕುರುತೇಽರ್ಜುನ ।**
**ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ ಕುರುತೇ ತಥಾ ' ॥ ೧೮೧ ॥**

**'ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ।**
**ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ।'**
**ಇತ್ಯಾದಿಭಗವದ್ವಾಕ್ಯೈರುಕ್ತಾರ್ಥಶ್ಚಾವಸೀಯತೇ ॥ ೧೮೨ ॥**

ಪಾಶುಪತರೂ ಭೋಗದಿಂದಲೇ ಕರ್ಮಕ್ಷಯ ಎನ್ನುತ್ತಾರೆ. ಅದು ಶ್ರುತಿವಿರುದ್ಧ—

ತದ್ಯಥೇತಿ ಶ್ರುತೇಶ್ಚೈವ='ತದ್ಯಥೇಷೀಕಾತೂಲಮಗ್ನೌ ಪ್ರೋತಂ ಪ್ರದೂಯೇತ ಏವಂ ಹೈವಾಸ್ಯ ಸರ್ವೇ ಪಾಪ್ಮಾನಃ ಪ್ರದೂಯಂತೇ ॥'

ಈ ಶ್ರುತಿಯ ಆಧಾರದಿಂದ ತತಃ=ವಿಷ್ಣುವಿನ ಅಪರೋಕ್ಷಜ್ಞಾನದಿಂದ ಕರ್ಮಕ್ಷಯಃ=ಕರ್ಮನಾಶವು ಭವೇತ್=ಆಗುತ್ತದೆ.

ಶ್ರುತಿಯ ಅರ್ಥ—ಯಥಾ=ಹೇಗೆ ಇಷಿಕಾತೂಲಂ=ಹತ್ತಿಯ ಸಮೂಹವು ಅಗ್ನೌ=ಬೆಂಕಿಯಲ್ಲಿ ಪ್ರೋತಂ=ಹಾಕಲ್ಪಟ್ಟದ್ದಾಗಿ ಪ್ರದೂಯೇತ= ಸುಡುವುದೋ ಏವಂ=ಅದರಂತೆ ಅಸ್ಯ=ಜ್ಞಾನಿಯ ಸರ್ವೇ ಪಾಪ್ಮಾನಃ= ಪಾಪಗಳೂ ಪ್ರದೂಯಂತೇ=ನಾಶವಾಗುತ್ತವೆ.

ಭಗವದ್ಗೀತೆಯಲ್ಲಿ ಹೀಗಿದೆ— ಅರ್ಜುನ=ಅರ್ಜುನನೇ, ಸಮಿದ್ಧೋ ಅಗ್ನಿಃ=ಪ್ರಜ್ವಲಿಸುವ ಬೆಂಕಿಯು ಯಥಾ=ಹೇಗೆ ಏಧಾಂಸಿ=ಇಂಧನಗಳನ್ನು ಭಸ್ಮಸಾತ್ ಕುರುತೇ=ಸುಟ್ಟು ಹಾಕುತ್ತದೋ ತಥಾ=ಅದರಂತೆ, ಜ್ಞಾನಾಗ್ನಿಃ= ಭಗವಂತನ ಜ್ಞಾನವೆಂಬ ಬೆಂಕಿಯು ಸರ್ವಕರ್ಮಾಣಿ=ಎಲ್ಲ ಕರ್ಮಗಳನ್ನೂ ಭಸ್ಮಸಾತ್‌ಕುರುತೇ=ಬೂದಿ ಮಾಡುತ್ತದೆ. (ಗೀತಾ.4.37)

ಅದರಂತೆ, ಶ್ರೀಕೃಷ್ಣ ಅರ್ಜುನನಿಗೆ ಹೇಳುವ ಮಾತು- ಸರ್ವಧರ್ಮಾನ್=ಕಾಮ್ಯವಾದ ಎಲ್ಲಾ ಧರ್ಮಗಳನ್ನೂ ಪರಿತ್ಯಜ್ಯ= ಪರಿತ್ಯಾಗ ಮಾಡಿ ಮಾಮೇಕಂ=ನನ್ನೊಬ್ಬನನ್ನೇ ಶರಣಂ ವ್ರಜ=ಶರಣಾಗು. ಅಹಂ=ನಾನು ತ್ವಾ=ನಿನ್ನನ್ನು ಸರ್ವಪಾಪೇಭ್ಯಃ=ಎಲ್ಲ ಪಾಪಗಳಿಂದಲೂ ಮೋಕ್ಷಯಿಷ್ಯಾಮಿ=ಬಿಡುಗಡೆಗೊಳಿಸುತ್ತೇನೆ. ಮಾ ಶುಚಃ=(ನ ಶೋಚಿಷ್ಯಸಿ, ಮುಕ್ತೋ ಭವಿಷ್ಯಸಿ) ಮುಕ್ತನಾಗುವಿ. (ಗೀತಾ.18.66)

ಇತ್ಯಾದಿ ಭಗವದ್ವಾಕ್ಯೈಃ=ಈ ಮೊದಲಾದ ಶ್ರೀಕೃಷ್ಣನ ಮಾತುಗಳಿಂದ ಉಕ್ತಾರ್ಥಶ್ಚ=ಜ್ಞಾನದಿಂದಲೂ ಕರ್ಮವು ನಾಶವಾಗುತ್ತದೆ, ಎನ್ನುವ ಪೂರ್ವೋಕ್ತ ಶ್ರುತ್ಯರ್ಥವು ಅವಸೀಯತೇ=ನಿರ್ಧರಿಸಲ್ಪಡುತ್ತದೆ.

**ಬಾಟ್ಟಮೀಮಾಂಸಕಮತ**

**ನಿತ್ಯನೈಮಿತ್ತಿಕಂ ಕರ್ಮ ಕುರ್ವನ್ನನ್ಯತ್ ಪರಿತ್ಯಜನ್ ।**
**ಮುಚ್ಯತೇ ಸಂಸೃತೇಶ್ಚೈತದಪ್ಯೇತೇನ ನಿರಾಕೃತಮ್ ॥ ೧೭೩ ॥**

ನಿತ್ಯ–ನೈಮಿತ್ತಿಕಂ ಕರ್ಮ=ನಿತ್ಯವಾದ ಸಂಧ್ಯಾದಿಕರ್ಮಗಳು ನೈಮಿತ್ತಿಕ ವಾದ ಪಿತೃಶ್ರಾದ್ಧಾದಿಗಳು ಇಂತಹ ಕರ್ಮಗಳನ್ನು ಕುರ್ವನ್=ಮಾಡುತ್ತಾ ಅನ್ಯತ್=ಇದಕ್ಕಿಂತ ಭಿನ್ನವಾದ ಕಾಮ್ಯ ಮತ್ತು ನಿಷಿದ್ಧಗಳನ್ನು ಪರಿತ್ಯಜನ್=

ಬಿಡುತ್ತಾ ಸಂಸ್ಸೃತೇಃ=ಸಂಸಾರದಿಂದ ಮುಚ್ಯತೇ=ಬಿಡುಗಡೆ ಹೊಂದುತ್ತಾನೆ. ಹೀಗೆ ಭಾಟ್ಟಮೀಮಾಂಸಕರು ಹೇಳುತ್ತಾರೆ. ಏತದಪಿ=ಇದೂ ಏತೇನ= ಶ್ರುತಿಯಲ್ಲಿ ಮೋಕ್ಷಕ್ಕೆ ಭಗವಂತನ ಜ್ಞಾನ ಬಿಟ್ಟು ಬೇರೆ ಸಾಧನಗಳಿಲ್ಲ, ಎಂದಿರುವುದರಿಂದ ನಿರಾಕೃತಂ=ನಿರಾಕರಿಸಲ್ಪಟ್ಟಿದೆ.

**ಭಾವಾರ್ಥ**— ಭಾಟ್ಟರು ಹೀಗೆ ಹೇಳುತ್ತಾರೆ. ಸುಖ–ದುಃಖ–ಅದಕ್ಕೆ ಕಾರಣವಾದ ದೇಹೇಂದ್ರಿಯಾದಿಗಳೇ ಸಂಸಾರ. ಅದಕ್ಕೆ ಪುಣ್ಯ–ಪಾಪರೂಪ ವಾದ ಕರ್ಮವೇ ಕಾರಣ. ನಿತ್ಯ ನೈಮಿತ್ತಿಕಕರ್ಮಗಳನ್ನು ಮಾಡದಿರುವುದ ರಿಂದಾಗಿ ಪಾಪವು ಹುಟ್ಟುತ್ತದೆ. ನಿಷಿದ್ಧವಾದುದನ್ನು ಮಾಡುವುದರಿಂದಲೂ ಪಾಪ ಬರುತ್ತದೆ. ಕಾಮ್ಯಕರ್ಮವನ್ನು ಮಾಡಿದರೆ ಪುಣ್ಯಬರುತ್ತದೆ. ಪಾಪದಿಂದ ದುಃಖ, ಪುಣ್ಯದಿಂದ ಸುಖ. ಮೋಕ್ಷಾರ್ಥಿಯು ನಿತ್ಯ–ನೈಮಿತ್ತಿಕ ಕರ್ಮಗಳನ್ನು ತಪ್ಪದೇ ಮಾಡಬೇಕು. ನಿಷಿದ್ಧವಾದುದನ್ನು ಮಾಡಬಾರದು. ಇದರಿಂದ ಪಾಪವು ಹುಟ್ಟುವುದಿಲ್ಲ. ಕಾಮ್ಯಕರ್ಮಗಳನ್ನು ಬಿಡುವುದರಿಂದ ಪುಣ್ಯವೂ ಹುಟ್ಟುವುದಿಲ್ಲ. ಹೀಗೆ ಹೊಸ ಪುಣ್ಯ–ಪಾಪಗಳನ್ನು ಅವನು ಸಂಪಾದಿಸುವುದಿಲ್ಲ. ಹಿಂದೆ ಗಳಿಸಿದ ಪಾಪ–ಪುಣ್ಯಗಳನ್ನು ಅನುಭವಿಸಿ ಸವೆಸುತ್ತಾನೆ. ಕೊನೆಗೆ ಕರ್ಮಗಳೇ ಇಲ್ಲದಿರುವುದರಿಂದ ಮೋಕ್ಷವಾಗುತ್ತದೆ.

ಮೋಕ್ಷಾರ್ಥೀ ನ ಪ್ರವರ್ತೇತ ತತ್ರ ಕಾಮ್ಯನಿಷಿದ್ಧಯೋಃ ।
ನಿತ್ಯನೈಮಿತ್ತಿಕೇ ಕುರ್ಯಾತ್ ಪ್ರತ್ಯವಾಯಜಿಘಾಂಸಯಾ ॥

ಇದು ಅವರ ಸಿದ್ಧಾಂತ.

ಆದರೆ, ಭೋಗದಿಂದ ಸರ್ವಕರ್ಮಕ್ಷಯ ಅಸಂಭಾವಿತ. ನಿತ್ಯ–ನೈಮಿತ್ತಿಕಕರ್ಮಗಳನ್ನು ಬಿಟ್ಟರೆ ಹೇಗೆ ಪಾಪವು ಬರುವುದೋ ಅವುಗಳನ್ನು ಅನುಷ್ಠಾನ ಮಾಡಿದರೂ, ಸರಿಯಾಗಿ ಅನುಷ್ಠಾನ ಮಾಡದಿದ್ದರೆ ಪಾಪವು ಸಂಘಟಿಸುತ್ತದೆ. ಅವುಗಳನ್ನು ತಪ್ಪದೆ ಸರಿಯಾಗಿ ಅನುಷ್ಠಾನವನ್ನು ದೇವತೆ ಗಳಷ್ಟೇ ಮಾಡಬಲ್ಲರು, ಮನುಷ್ಯರಿಂದ ಸಾಧ್ಯವಿಲ್ಲ.

ಚರಂತಿ ದೇವಾ ವಿಹಿತಂ ಸಮಸ್ತಮರ್ಧಮೇವ
ಮುನಯೋ ದಶಾಂಶತಃ ಮನುಷ್ಯಾಃ ॥

''ದೇವತೆಗಳು ವಿಹಿತವನ್ನು ತಪ್ಪಿಲ್ಲದೆ ಸಮಗ್ರವಾಗಿ ಮಾಡುತ್ತಾರೆ,

ಮುನಿಗಳು ವಿಹಿತದಲ್ಲಿ ಅರ್ಧವನ್ನು ಸರಿಯಾಗಿ ಮಾಡುತ್ತಾರೆ. ಹತ್ತಂಶವನ್ನಷ್ಟೇ ಮನುಷ್ಯರು ಮಾಡುತ್ತಾರೆ.'' ಆದ್ದರಿಂದ ವಿಹಿತವನ್ನು ಸರಿಯಾಗಿ ಸಮಗ್ರವಾಗಿ ಮನುಷ್ಯರು ಮಾಡಲಾರರು. ಅವರಿಗೆ ವಿಹಿತಾಕರಣದಿಂದ ಪಾಪದ ನಂಟು ಅನಿವಾರ್ಯ.

ನಿಷಿದ್ಧವಾದುದನ್ನು ಮಾಡದಿರುವುದೂ ಸಾಧ್ಯವಿಲ್ಲ. ಪ್ರಾಮಾದಿಕವಾಗಿ ಮಾನಸಿಕ–ಕಾಯಿಕ–ವಾಚನಿಕ ಪಾಪಗಳು ಎಲ್ಲರಿಂದಲೂ ನಡೆಯುತ್ತದೆ. ಇದರಂತೆ ಬಂದ ಪಾಪಗಳನ್ನು ಪ್ರಾಯಶ್ಚಿತ್ತದಿಂದ ಪರಿಹರಿಸಿಕೊಳ್ಳಬಹುದು, ಎನ್ನುವುದೂ ಕನಸು. ಪ್ರಾಯಶ್ಚಿತ್ತಕರ್ಮದಲ್ಲಿ ಮತ್ತೆ ನ್ಯೂನಾತಿರೇಕಗಳು ನಡೆಯುತ್ತವೆ. ಹೀಗೆ ಜ್ಞಾನಿಯಾದರೂ ಪಾಪ ಅಂಟದಂತೆ ಇರುವುದು ಸಾಧ್ಯವಿಲ್ಲ.

ಇಷ್ಟೇ ಅಲ್ಲ. ಅನಂತಜನ್ಮಗಳಲ್ಲಿ ಸಂಪಾದಿಸಿದ ಕರ್ಮರಾಶಿಯನ್ನು ಅನುಭವಿಸಿ ಮುಗಿಸುವುದೂ ಸಾಧ್ಯವಾಗದ ವಿಷಯ. ಹೀಗೆ ಭಾಟ್ಟರ ಸಿದ್ಧಾಂತವೂ ಮೋಕ್ಷಸಾಧನವಿಷಯದಲ್ಲಿ ಸರಿಯಲ್ಲ.

**ವಿದ್ಯೈವೇತೀಮಮೇವಾರ್ಥಂ ಸ್ವಯಮೇವಾಽಹ ವೇದರಾಟ್ ॥೧೭೫॥**

ಇತೀಮಮೇವಾರ್ಥಂ=ಹೀಗೆ ಇದುವರೆಗೆ ಹೇಳಿದ ವಿಷಯಗಳನ್ನೇ ವೇದರಾಟ್=ವೇದವ್ಯಾಸರು ವಿದ್ಯೈವೇತಿ='ವಿದ್ಯೈವ ನಿರ್ಧಾರಣಾತ್' ಎಂಬ ಸೂತ್ರದಿಂದ ಸ್ವಯಮೇವಾಹ=ತಾವೇ ಹೇಳಿದ್ದಾರೆ.

ಸೂತ್ರಕಾರರು ''ವಿದ್ಯೆಯೇ ಮೋಕ್ಷಹೇತು'' ಎನ್ನುವ ಮೂಲಕ ವಿದ್ಯೆ ಬಿಟ್ಟು ಬೇರಾವುದೂ ಮೋಕ್ಷಸಾಧನವಲ್ಲ ಎಂದಿದ್ದಾರೆ. ಅದನ್ನೇ ಇದುವರೆಗೆ ಅನುವ್ಯಾಖ್ಯಾನದಲ್ಲಿ ವಿವರಿಸಿದ್ದಾರೆ.

**ವಿನಾ ಕರ್ಮ ನ ಮೋಕ್ಷಃ ಸ್ಯಾಜ್ಜ್ಞಾನೇನೇತ್ಯಪಿ ಸಾ ಶ್ರುತಿಃ ।**
**'ನಾನ್ಯಃ ಪಂಥಾ' ಇತಿ ಹ್ಯೇವ ನಿವಾರಯತಿ ಸಾದರಮ್ ॥ ೧೭೬ ॥**

ವಿನಾ ಕರ್ಮ=ಕರ್ಮದ ಸಹಾಯವಿಲ್ಲದ ಜ್ಞಾನೇನ=ಜ್ಞಾನದಿಂದ ನ ಮೋಕ್ಷಃ ಸ್ಯಾತ್=ಮೋಕ್ಷವಾಗುವುದಿಲ್ಲ. ಇತ್ಯಪಿ=ಇದನ್ನೂ ಸಾ ಶ್ರುತಿಃ=

'ತಮೇವಂ ವಿದಿತ್ವಾ' ಎಂಬ ಶ್ರುತಿಯು 'ನಾನ್ಯಃ ಪಂಥಾ' ಇತಿ ಹ್ಯೇವ= 'ನಾನ್ಯಃ ಪಂಥಾಃ' ಎಂದು ಹೇಳುವ ಮೂಲಕ ಸಾದರಂ=ತಾತ್ಪರ್ಯ ಪೂರ್ವಕವಾಗಿ ನಿವಾರಯತಿ=ನಿರಾಕರಿಸುತ್ತದೆ.

**ಭಾವಾರ್ಥ—** ಜ್ಞಾನ ಮತ್ತು ಕರ್ಮ ಇವೆರಡೂ ಸೇರಿ ಮೋಕ್ಷ ಎನ್ನುತ್ತಾರೆ ಭಾಸ್ಕರರು. ಮೋಕ್ಷವೆಂದರೆ ದುಃಖನಿವೃತ್ತಿ. ಅದಾಗಬೇಕಾದರೆ ಜ್ಞಾನದ ಜೊತೆಗೆ ಕರ್ಮವೂ ಬೇಕು, ಎಂದು ಅವರ ವಾದ. ಆದರೆ 'ತಮೇವಂ ವಿದಿತ್ವಾ' ಎನ್ನುವ ಶ್ರುತಿಯು ಜ್ಞಾನದಿಂದ ಮೋಕ್ಷ, ಎಂದಿಷ್ಟೇ ಹೇಳದೆ 'ನಾನ್ಯಃ ಪಂಥಾಃ ಅಯನಾಯ ವಿದ್ಯತೇ–ಅಯನಾಯ=ಮೋಕ್ಷಕ್ಕಾಗಿ ಅನ್ಯಃ ಪಂಥಾಃ=ಜ್ಞಾನ ಬಿಟ್ಟು ಬೇರೆ ಮಾರ್ಗ ನ ವಿದ್ಯತೇ=ಇಲ್ಲ' ಎನ್ನುತ್ತದೆ. ಜ್ಞಾನಕ್ಕೆ ಕರ್ಮದ ಸಹಾಯ ಬೇಕಿಲ್ಲ, ಅದೊಂದೇ ಮೋಕ್ಷಕ್ಕೆ ಕಾರಣವಾಗಬಲ್ಲದು, ಎಂದು ಶ್ರುತಿಯ ಅರ್ಥ.

ಆದರೆ ಸಂಸಾರನಿವೃತ್ತಿರೂಪವಾದ ಮೋಕ್ಷ ಕೇವಲ ಜ್ಞಾನದಿಂದ, ಮೋಕ್ಷದಲ್ಲಿ ಆನಂದವೃದ್ಧಿ ಜ್ಞಾನೋತ್ತರಕರ್ಮದಿಂದ. ಇದೂ ಒಂದು ರೀತಿಯ ಜ್ಞಾನಕರ್ಮಸಮುಚ್ಚಯವಾದ. ಈ ವಾದ ಸೂತ್ರಕಾರರ ಸಿದ್ಧಾಂತ. ಇದನ್ನು ತಾವು ನಿರಾಕರಿಸುತ್ತಿಲ್ಲ ಎನ್ನುವುದನ್ನು ಸ್ಪಷ್ಟಗೊಳಿಸಲು 'ವಿನಾ ಕರ್ಮ ನ ಮೋಕ್ಷಃ ಸ್ಯಾತ್' ಎಂದು ಆಚಾರ್ಯರು ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ.

**ಮಾಯಾವಾದಮತವಿಮರ್ಶೆ**

ಮಾಯಾವಾದಿಗಳು, ಅಪರಮೋಕ್ಷ(ಸಗುಣಮುಕ್ತಿ) ಪರಮೋಕ್ಷ (ನಿರ್ಗುಣಮುಕ್ತಿ) ಹೀಗೆ ಎರಡು ವಿಧದ ಮೋಕ್ಷವನ್ನು ಕಲ್ಪಿಸಿದ್ದಾರೆ. ಪರಮೋಕ್ಷವೆಂದರೆ ಅವಿದ್ಯಾನಾಶವಾದಾಗ ಆಗುವ ಬ್ರಹ್ಮಭಾವ. ಅಪರಮೋಕ್ಷವೆಂದರೆ ಸತ್ಯಲೋಕ–ವೈಕುಂಠಲೋಕಗಳ ಪ್ರಾಪ್ತಿ. ಪರಮೋಕ್ಷಕ್ಕೆ ಬ್ರಹ್ಮಾತ್ಮೈಕ್ಯಜ್ಞಾನವು ಕಾರಣ, ಅಪರಮೋಕ್ಷಕ್ಕೆ ಪ್ರತಿಮೆಯೇ ಬ್ರಹ್ಮ ಎನ್ನುವ ಅನ್ಯಥೋಪಾಸನೆಯು ಕಾರಣ. ಇದನ್ನು ಮುಂದೆ ನಿರಾಕರಿಸಲಾಗಿದೆ—

**ಅನ್ಯಥೋಪಾಸನಮಪಿ ತಮೇವಮಿತಿವಾದಿನೀ ।**
**ನಿವಾರಯತ್ಯಾದರೇಣ ನ ಪ್ರತೀಕ ಇತಿ ಪ್ರಭುಃ** ॥ ೧೭೬ ॥

'ತಮೇವಂ ವಿದ್ವಾನ್' ಎಂಬ ಶ್ರುತಿಯು ಏವಂ ಇತಿ ವಾದಿನೀ= ಬ್ರಹ್ಮಹೇಗಿದ್ದಾನೋ ಅದೇ ರೀತಿಯಲ್ಲಿ, ಬೇರೆ ರೀತಿಯಲ್ಲಿ ಅಲ್ಲ ಎನ್ನುವ ಮೂಲಕ ಅನ್ಯಥೋಪಾಸನಮಪಿ=ಅನ್ಯಥೋಪಾಸನೆಯೂ ಪುರುಷಾರ್ಥಕ್ಕೆ ಸಾಧನ ಎನ್ನುವುದನ್ನು ಆದರೇಣ=ತಾತ್ಪರ್ಯಪೂರ್ವಕವಾಗಿ ನಿವಾರಯತಿ= ನಿರಾಕರಿಸುತ್ತಿದೆ.

ಭಾವಾರ್ಥ— ಶ್ರುತಿಯಲ್ಲಿ 'ತಮೇವಂ ವಿದ್ವಾನ್ ಅಮೃತ ಇಹಭವತಿ– ಅವನನ್ನು ತಿಳಿದವರು ಮುಕ್ತರಾಗುತ್ತಾರೆ' ಎಂದಿದ್ದರೂ ಪುರುಷನ ಯಥಾರ್ಥಜ್ಞಾನವೇ ಮೋಕ್ಷಸಾಧನ ಎಂದು ತಿಳಿಯುತ್ತದೆ. ಏಕೆಂದರೆ, ಇದು ಪುರುಷಸೂಕ್ತದ ಮಂತ್ರ. ಮೊದಲು 'ಸಹಸ್ರಶೀರ್ಷಾ ಪುರುಷಃ' ಎಂದು ಪುರುಷನ ಗುಣಗಳನ್ನು ಹೇಳಿ 'ತಂ ಏವಂ ವಿದ್ವಾನ್' ಎಂದು ಪೂರ್ವೋಕ್ತ ಗುಣಗಳಿಂದ ವಿಶಿಷ್ಟನಾದ ಬ್ರಹ್ಮನನ್ನೇ ತಂ ಎಂದು ಪರಾಮರ್ಶೆ ಮಾಡುತ್ತದೆ. ಆದರೂ ಮತ್ತೆ 'ಏವಂ=ಹೀಗೆ' ಎನ್ನುವುದರ ಮೂಲಕ ಹೀಗೆಯೇ ಹೊರತು ಅನ್ಯಥಾಕಾರೇಣ ಅಲ್ಲ, ಎಂದು ತಿಳಿಸುತ್ತದೆ.

ಯಥಾರ್ಥೋಪಾಸನೆಯನ್ನು ಮಾಡಬೇಕೆಂದು ಆ ಮಂತ್ರ ಹೇಳುತ್ತದೆ, ಎನ್ನುವುದನ್ನು ಒಪ್ಪಿದರೂ ಆ ಉಪಾಸನೆ ಪರಮೋಕ್ಷಕ್ಕೆ ಸಾಧನ. ಅಪರಮೋಕ್ಷಕ್ಕೆ ಅನ್ಯಥೋಪಾಸನೆಯೂ ಕಾರಣವಾಗಬಹುದು, ಎಂದರೆ, ಇದೂ ಸೂತ್ರಕಾರರಿಗೆ ಸಮ್ಮತವಲ್ಲ. ಅವರು ''ನ ಪ್ರತೀಕೇ ನ ಹಿ ಸಃ' ಎಂಬ ಸೂತ್ರದಲ್ಲಿ ಕಲ್ಲು ಮುಂತಾದ ಪ್ರತೀಕಗಳೇ ಬ್ರಹ್ಮನೆಂದು ಉಪಾಸನೆ ಮಾಡಬಾರದು ಎಂದು ನಿಷೇಧಿಸಿದ್ದಾರೆ.

ನ ಪ್ರತೀಕ, ಇತಿ=ನ ಪ್ರತೀಕೇ ನ ಹಿ ಸಃ, ಎಂಬುದಾಗಿ ಪ್ರಭುಃ=ಸ್ವಾಮಿ ವೇದವ್ಯಾಸರು ನಿವಾರಯತಿ=ಅನ್ಯಥೋಪಾಸನೆಯನ್ನು ನಿರಾಕರಿಸಿದ್ದಾರೆ.

'ನ ಪ್ರತೀಕೇ' ಎಂಬ ಸೂತ್ರಕ್ಕೆ ಉಪಾಸಕನು ಪ್ರತಿಮೆಗಳಲ್ಲಿ 'ಸೋಽಹಂ' ಉಪಾಸನೆ ಮಾಡಬಾರದು, ಎಂದರ್ಥ. ಹೊರತು, 'ಪ್ರತೀಕವೇ ಬ್ರಹ್ಮ' ಎಂದು ಉಪಾಸನೆ ಮಾಡಲು ಆ ಸೂತ್ರದ ವಿರೋಧವಿಲ್ಲ, ಎನ್ನುವ ಆಕ್ಷೇಪಕ್ಕೆ ಉತ್ತರ—

**'ಅಂಧಂತಮಃ ಪ್ರವಿಶಂತಿ ಯೇ ತ್ವವಿದ್ಯಾಮುಪಾಸತೇ' ।**
**ಇತಿ ಶ್ರುತಿವಿರೋಧಾಚ್ಚ ನಾನ್ಯಥೋಪಾಸನಂ ಭವೇತ್ ॥ ೧೭೭ ॥**

''ಯೇ=ಯಾರು ಅವಿದ್ಯಾಮುಪಾಸತೇ=ಅನ್ಯಥೋಪಾಸನೆ ಮಾಡುವರೋ ಅವರು ಅಂಧಂತಮಃ ಪ್ರವಿಶಂತಿ=ಅಂಧಂತಮಸ್ಸನ್ನು ಪ್ರವೇಶಿಸುತ್ತಾರೆ.'' ಇತಿ ಶ್ರುತಿವಿರೋಧಾಚ್ಚ=ಈ ಶ್ರುತಿಯ ವಿರೋಧವಿರುವುದರಿಂದ ಅನ್ಯಥೋಪಾಸನಂ=ಮಿಥ್ಯೋಪಾಸನೆಯು ನ ಭವೇತ್=ಮೋಕ್ಷಸಾಧನ ಆಗುವುದಿಲ್ಲ. 'ಅಂಧಂತಮಃ ಪ್ರವಿಶಂತಿ' ಎಂಬ ಶ್ರುತಿಯನ್ನು ಇದೇ ಅರ್ಥದಲ್ಲಿ ಸ್ಮೃತಿಯಲ್ಲಿ ವ್ಯಾಖ್ಯಾನಿಸಲಾಗಿದೆ—

''ಅನ್ಯಥೋಪಾಸಕಾ ಯೇ ತು ತಮೋಽಂಧಂ ಯಾಂತ್ಯಸಂಶಯಮ್''

**ನಚಾಪ್ಯೇಕತ್ವವಿಜ್ಞಾನಾದುಕ್ತನ್ಯಾಯೇನ ಮುಚ್ಯತೇ ॥ ೧೭೮ ॥**

ಏಕತ್ವವಿಜ್ಞಾನಾದಪಿ=ಬ್ರಹ್ಮಾತ್ಮೈಕ್ಯಜ್ಞಾನದಿಂದಲೂ ಉಕ್ತನ್ಯಾಯೇನ= ಪುರುಷಸೂಕ್ತದಲ್ಲಿ ಸಹಸ್ರಶೀರ್ಷತ್ವಾದಿಮಹಿಮೆಗಳನ್ನು ಹೇಳಿ 'ತಮೇವಂ ವಿದ್ವಾನ್' 'ಇಂತಹ ಮಹಿಮೋಪೇತನಾದ ಪುರುಷನನ್ನು ತಿಳಿದು ಮುಕ್ತನಾಗುತ್ತಾನೆ' ಎಂದು ಹೇಳಿ ಮುಂದೆ ಸಗುಣ ಬ್ರಹ್ಮಜ್ಞಾನ ಬಿಟ್ಟು ಮೋಕ್ಷಕ್ಕೆ ಅನ್ಯಮಾರ್ಗವಿಲ್ಲ. 'ನಾನ್ಯಃ ಪಂಥಾಃ ಅಯನಾಯ ವಿದ್ಯತೇ' ಎಂದಿರುವುದರಿಂದ ಈ ಹಿಂದೆ ಹೇಳಿದ ನ್ಯಾಯದಿಂದಲೇ ನ ಮುಚ್ಯತೇ=ಐಕ್ಯಜ್ಞಾನದಿಂದ ಮುಕ್ತನಾಗುವುದಿಲ್ಲ.

ಭಾವಾರ್ಥ— ಐಕ್ಯಜ್ಞಾನವು ಅವಿದ್ಯೆಯನ್ನು ನಿವೃತ್ತಿಮಾಡುತ್ತದೆ. ಅವಿದ್ಯೆ ನಾಶವಾದರೆ ಅವಿದ್ಯಾಕಾರ್ಯವಾದ ಬಂಧವೂ ನಾಶವಾಗುತ್ತದೆ. ಆಗ ಅದ್ವೈತಸಾಕ್ಷಾತ್ಕಾರವನ್ನು ಪಡೆದ ಜ್ಞಾನಿಗೆ ಕೂಡಲೇ ಬ್ರಹ್ಮಭಾವ ಬರಬೇಕು. ಜೀವನ್ಮುಕ್ತ್ಯವಸ್ಥೆಯೇ ಇರಬಾರದು.

**ಇತಿ ಸರ್ವಂ ಪ್ರವಿಜ್ಞಾಯ ಸರ್ವೈಸ್ತರ್ಕೈಃ(ರ್ಕ) ಸದಾಗಮೈಃ ।**
**ಉಪಾಸೀತ ಹರಿಂ ನಿತ್ಯಂ ಗುಣೈರೇವ ಸ್ವಯೋಗ್ಯತಃ ॥ ೧೭೯ ॥**

ಇತಿ ಸರ್ವಂ ಪ್ರತಿಜ್ಞಾಯ=ಹೀಗೆ ಮೋಕ್ಷವಿದೆ, ಅದು ಜ್ಞಾನಜನ್ಯವಾದ

ಪ್ರಸಾದದಿಂದ ಮಾತ್ರ ಸಿಗುತ್ತದೆ, ಇತ್ಯಾದಿಗಳೆಲ್ಲವನ್ನೂ ಸೂತ್ರಕಾರರು ಪ್ರತಿಜ್ಞೆ ಮಾಡಿ ಸರ್ವೈಸ್ತರ್ಕೈಃ=ಎಲ್ಲಾ ಸನ್ನ್ಯಾಯಗಳಿಂದ ಸದಾಗಮೈಃ= ಸದಾಗಮಗಳಿಂದ ನಿತ್ಯಂ=ಸರ್ವದಾ ಹರಿಂ=ಶ್ರೀಹರಿಯನ್ನು ಸ್ವಯೋಗ್ಯತಃ ಗುಣೈರೇವ=ತಮತಮಗೆ ಯೋಗ್ಯವಾದ ಗುಣಗಳಿಂದಲೇ ಉಪಾಸೀತ= ಧ್ಯಾನಿಸಬೇಕು, ಎಂದಿರುತ್ತಾರೆ. ಇದು ಈ ಅಧಿಕರಣದ ಸಂಗ್ರಹಾರ್ಥ. ಇಂತಹ ಧ್ಯಾನದಿಂದ ಭಗವಂತನು ಪ್ರಸನ್ನನಾದರೂ ಜ್ಞಾನಿಗಳ ಉಪದೇಶ ಸಜ್ಜನರಿಗೆ ಆಗಬೇಕು, ಎನ್ನುವ ಕಾರಣದಿಂದ ಜ್ಞಾನಿಗಳ ಪ್ರಾರಬ್ಧಾವಸಾನ- ಪರ್ಯಂತ ಮೋಕ್ಷ ಕೊಡದೆ ಆಮೇಲೆ ಮೋಕ್ಷವನ್ನು ಕರುಣಿಸುತ್ತಾನೆ. (ಭಾಗವತಧರ್ಮಪ್ರವೃತ್ತಯೇ ಜ್ಞಾನಿನಂ ಕಮಪಿ ಕಾಲಂ ವ್ಯವಸ್ಥಾಪಯನ್- ಸುಧಾ)

**ಬ್ರಹ್ಮಾ ಸರ್ವೈರ್ಗುಣೈಶ್ಚೈವ ಕ್ರಿಯಾಸಾಮಾನ್ಯತಶ್ಚ ಗೀಃ ।**
**ಗುಣಸಾಮಾನ್ಯತೋ ರುದ್ರೋ ದ್ರವ್ಯಸಾಮಾನ್ಯತಃ ಪರೇ ॥ ೧೮೦ ॥**

ಸರ್ವೈಃ ಗುಣೈಶ್ಚೈವ=ವೇದೋಕ್ತಸಕಲಗುಣಗಳಿಂದಲೂ ಕ್ರಿಯಾವಿಶೇಷ ಗಳಿಂದಲೂ ಹರಿಮುಪಾಸಿತುಂ=ಅನಂತರೂಪನಾದ ಶ್ರೀಹರಿಯನ್ನು ಉಪಾಸನೆ ಮಾಡಲು ಬ್ರಹ್ಮೈವ=ಚತುರ್ಮುಖಬ್ರಹ್ಮದೇವನು ಮಾತ್ರ ಯೋಗ್ಯನು. ಗೀಃ=ಸರಸ್ವತಿಯಾದರೋ ಕ್ರಿಯಾಸಾಮಾನ್ಯತಃ=ಬ್ರಹ್ಮನ ಕೆಲವು ಕ್ರಿಯೆಗಳನ್ನು ವಿಶೇಷತಃ ಮಾಡದೆ ಕ್ರಿಯಾತ್ವೇನ ಮಾಡಿ ಸಕಲ ವೇದೋಕ್ತಗುಣೋಪೇತನಾದ ಅನಂತರೂಪವುಳ್ಳ ಹರಿಂ=ಹರಿಯನ್ನು ಉಪಾಸೀತ=ಧ್ಯಾನಿಸಬೇಕು. ರುದ್ರಃ=ರುದ್ರದೇವನು ಗುಣಸಾಮಾನ್ಯತಃ= ಗುಣಸಾಮಾನ್ಯಗಳಿಂದ ಎಲ್ಲಾ ರೂಪಗಳನ್ನೂ ಉಪಾಸಿಸುತ್ತಾನೆ. ಗುಣ- ಕ್ರಿಯೆಗಳಲ್ಲಿ ಸಂಕೋಚಮಾಡಿ ರುದ್ರನು ಉಪಾಸನೆ ಮಾಡುತ್ತಾನೆ. ಪರೇ=ಇಂದ್ರಾದಿಗಳು ದ್ರವ್ಯಾಣಿ=ಭಗವಂತನ ಕೆಲವು ರೂಪಗಳನ್ನೂ ಸಂಕೋಚಗೊಳಿಸಿ ಉಪಾಸನೆ ಮಾಡುತ್ತಾರೆ. ಗುಣ-ಕ್ರಿಯೆಗಳಲ್ಲದೆ ರೂಪಸಂಕೋಚವೂ ಅವರ ಉಪಾಸನೆಯಲ್ಲಿ ಇದೆ.

**ಇಲ್ಲಿಗೆ ವಿದ್ಯಾಧಿಕರಣ ಮುಗಿಯಿತು.**

# ಯಾವದಧಿಕರಣ

## 'ಓಂ ಯಾವದಧಿಕಾರಮವಸ್ಥಿತಿರಾಧಿಕಾರಿಕಾಣಾಮ್ ಓಂ'
## 'ಓಂ ಅಕ್ಷರಧಿಯಾಂ ತ್ವವಿರೋಧಃ ಸಾಮಾನ್ಯ-ತದ್ಭಾವಾಭ್ಯಾ-ಮೌಪಸದ ವತ್ತದುಕ್ತಮ್ ಓಂ'

**ಅಧಿಕಾರವಿಶೇಷೇಣ ಭಕ್ತಿಜ್ಞಾನಸುಖಾದಿಭಿಃ ।**
**ವಿಶೇಷೋ ದೇವತಾದೀನಾಂ ಮೋಕ್ಷೇ ಚೈವ ವಿಶೇಷತಃ ॥ ೧೮೧ ॥**

ಅಧಿಕಾರವಿಶೇಷಣ=ಯೋಗ್ಯತಾವಿಶೇಷದಿಂದಾಗಿ ಭಕ್ತಿಜ್ಞಾನ ಸುಖಾದಿಭಿಃ=ಭಕ್ತಿ-ಜ್ಞಾನ-ಸುಖವೇ ಮೊದಲಾದ ಗುಣಗಳಿಂದ ದೇವತಾದೀನಾಂ=ದೇವತೆಗಳು, ಪಿತೃಗಳು ಮೊದಲಾದವರಿಗೆ ವಿಶೇಷತಃ= ಒಬ್ಬರಿಂದ ಮತ್ತೊಬ್ಬರಿಗೆ ವಿಶೇಷವು ಇದೆ. ವಿಶೇಷಶ್ಚ=ಈ ವಿಶೇಷವಾದರೂ ಮೋಕ್ಷೇ ಏವ=ಮೋಕ್ಷದಲ್ಲಿ ಮಾತ್ರ.

ಭಾವಾರ್ಥ— ದೇವತೆಗಳಿಗೆ ಅವರವರ ಯೋಗ್ಯತಾನುಸಾರ ಭಕ್ತ್ಯಾದಿಗುಣಗಳಿಂದ ವಿಶೇಷವಿದೆ. ಸಂಸಾರದಲ್ಲಿ ಕೆಲವೊಮ್ಮೆ ಅಧಮರಲ್ಲಿ ಹೆಚ್ಚು ಗುಣಗಳು. ಉತ್ತಮರಲ್ಲಿ ಅಧಮರಿಗಿಂತ ಕಡಿಮೆಗುಣಗಳೂ ಕಾಣಬಹುದು. ಆದರೆ ಮೋಕ್ಷದಲ್ಲಿ ಭಕ್ತ್ಯಾದಿಗುಣಗಳು ಅವರವರ ಯೋಗ್ಯತಾನುಸಾರವಾಗಿಯೇ ಇರುತ್ತವೆ.

**ನ ತಾವತಾ ವಿರೋಧೋಽಸ್ತಿ ನಿರ್ದೋಷತ್ವಾತ್ ಸಮಸ್ತಶಃ ।**
**ಆಭಾಸತ್ವಾತ್ ಪರೇಷಾಂ ತದವರಾಣಾಂ ಚ ಸರ್ವಶಃ ॥ ೧೮೨ ॥**

ತಾವತಾ=ಮೋಕ್ಷದಲ್ಲಿ ಭಕ್ತಿಸುಖಾದಿಗುಣಗಳಲ್ಲಿ ವೈಷಮ್ಯ ಇರುವುದ ರಿಂದ ಸಮಸ್ತಶಃ=ಸಂಪೂರ್ಣವಾಗಿ ನಿರ್ದೋಷತ್ವಾತ್=ದೋಷರಹಿತ ರಾದುದರಿಂದ ನ ವಿರೋಧೋಽಸ್ತಿ=ದ್ವೇಷ-ಅಸೂಯೆಗಳಿಂದಾಗಿ ಮುಕ್ತತ್ವ ವಿರೋಧವಿಲ್ಲ. ತದವರಾಣಾಂ ಚ=ಉತ್ತಮರಿಂದ ಅವರರಾದ ಸರ್ವಶಃ= ಎಲ್ಲರಿಗೂ ಪರೇಷಾಂ=ಉತ್ತಮರ ಆಭಾಸತ್ವಾತ್=ಪ್ರತಿಬಿಂಬತ್ವ ವಿರುವುದರಿಂದ.

**ಯತೋಽವರಾಣಾಂ ಸರ್ವೇಽಪಿ ಗುಣಾಃ ಸರ್ವಾಃ ಕ್ರಿಯಾ ಅಪಿ ।**
**ನಿಯಮೇನ್ನೈವ ಪೂರ್ವೇಷಾಂ ಸುಪ್ರಸಾದನಿಬಂಧನಾಃ ।**
**ಅತಃ ಸಚ್ಛಿಷ್ಯವತ್ ತೇಷಾಂ ನೈವೇರ್ಷ್ಯಾದಿಃ ಕಥಂಚನ ॥ ೧೮೩ ॥**

ಯತಃ=ಯಾವ ಕಾರಣದಿಂದ ಅವರಾಣಾಂ=ಕೆಳಗಿನವರ ಸರ್ವೇಽಪಿ ಗುಣಾಃ=ಎಲ್ಲಾ ಗುಣಗಳೂ ಸರ್ವಾಃ ಕ್ರಿಯಾ ಅಪಿ=ಎಲ್ಲಾ ಕ್ರಿಯೆಗಳೂ ಪೂರ್ವೇಷಾಂ=ಉತ್ತಮರ ಸುಪ್ರಸಾದನಿಬಂಧನಾಃ=ಪ್ರಸಾದನಿಮಿತ್ತಕ ವಾಗಿವೆ. ಅತಃ=ಆದ್ದರಿಂದ ಸಚ್ಛಿಷ್ಯವತ್=ಒಳ್ಳೆಯ ಶಿಷ್ಯನಂತೆ ತೇಷಾಂ= ಕೆಳಗಿನವರಿಗೆ ಕಥಂಚನ=ಯಾವುದೇ ರೀತಿಯಿಂದ ಈರ್ಷ್ಯಾದಿಃ ನೈವ= ಅಸೂಯೆ ಮೊದಲಾದವು ಬರುವುದಿಲ್ಲ.

ಭಾವಾರ್ಥ— ಅಧಮರು ಉತ್ತಮರ ಪ್ರತಿಬಿಂಬರು ಎಂದರೆ, ಅಧಮರಲ್ಲಿ ಎಲ್ಲಾ ಗುಣಗಳೂ ಎಲ್ಲ ಕ್ರಿಯೆಗಳೂ ಉತ್ತಮರ ಪ್ರಸಾದದಿಂದ ಬರುತ್ತವೆ. ಶಿಷ್ಯನಿಗೆ ವಿದ್ಯೆಯ ಲಾಭ ಗುರುಗಳಿಂದ ಆಗಬೇಕು. ಆದ್ದರಿಂದ ಸಚ್ಛಿಷ್ಯನು ಎಂದೂ ಗುರುಗಳ ವಿದ್ಯೆಯ ಬಗ್ಗೆ ಅಸೂಯೆಗೆ ಒಳಗಾಗುವುದಿಲ್ಲ. ಆದರಂತೆ ಮೋಕ್ಷದಲ್ಲೂ ತಾರತಮ್ಯವಿದ್ದರೂ ಅಧಮರು ಉತ್ತಮರಲ್ಲಿ ಅಸೂಯೆಪಡುವುದಿಲ್ಲ. ಇದು ಎರಡನೆಯ ಸೂತ್ರದ 'ಔಪಸದವತ್' ಎಂಬ ಶಬ್ದದ ಅಭಿಪ್ರಾಯ.

### ವೃತ್ತಿಕಾರಮತನಿರಾಸ

**ನಚ ಸಂಸಾರಿದೇವಾನಾಂ ಕಾಲೇಯತ್ತಾಪರೇ ಇಮೇ ।**
**ಸೂತ್ರೇ ಹ್ಯಾರಬ್ಧಮಾತ್ರಸ್ಯ ಭೋಗೇನ್ನೈವ ಕ್ಷಯೋ ಧ್ರುವಃ ॥ ೧೮೪ ॥**

**ಅನಾರಬ್ಧಸ್ಯ (ಕಾರ್ಯೇ)ಭೋಗೇನ ತ್ವಿತರೇ ಇತಿ ಚೋದಿತಃ ॥**
**ಪೌನರುಕ್ತ್ಯೇನ ತೇನ್ನೈತೇ ಉಕ್ತಾರ್ಥೇ ಇತಿ ನಿಶ್ಚಯಃ ॥ ೧೮೫ ॥**

ಇಮೇ ಸೂತ್ರೇ=ಈ ಎರಡು ಸೂತ್ರಗಳು ಸಂಸಾರಿದೇವಾನಾಂ= ಮೋಕ್ಷವಾಗದೇ ಅಮುಕ್ತಾವಸ್ಥೆಯಲ್ಲಿರುವ ದೇವತೆಗಳ ಕಾಲೇ- ಯತ್ತಾಪರೇ=ಮೋಕ್ಷವಾಗುವ ಕಾಲದ ಅವಧಿಯನ್ನು ಅಂದರೆ ಅವರಿಗೆ

ಅಪರೋಕ್ಷಜ್ಞಾನವಾದರೂ ಪ್ರಾರಬ್ಧಕರ್ಮದ ಕ್ಷಯವಾಗುವವರೆಗೆ ಮೋಕ್ಷವಿಲ್ಲ, ಆಮೇಲೆ ಮೋಕ್ಷ ಎನ್ನುವ ಉದ್ದೇಶವಿರುವವುಗಳು ನಚ=ಅಲ್ಲ. ಏಕೆಂದರೆ, ಆರಬ್ಧಮಾತ್ರಸ್ಯ=ಕೇವಲ ಪ್ರಾರಬ್ಧಕರ್ಮದ ಕ್ಷಯಃ=ನಾಶವು ಭೋಗೇನೈವ=ಭೋಗದಿಂದಲೇ ಎನ್ನುವುದು ಧ್ರುವಃ=ನಿಶ್ಚಿತ. ಅನಾರಬ್ಧಸ್ಯ= ಸಂಚಿತಕರ್ಮದ ಕ್ಷಯಃ=ನಾಶವು ಜ್ಞಾನೇನ=ಜ್ಞಾನದಿಂದ ಎನ್ನುವುದು 'ಅನಾರಬ್ಧಕಾರ್ಯೇ ಏವ ತು ಪೂರ್ವೇ ತದವಧೇಃ' 'ಭೋಗೇನ ತ್ವಿತರೇ ಕ್ಷಪಯಿತ್ವಾಥ ಸಂಪತ್ಸ್ಯತೇ' ಈ ಎರಡು ಸೂತ್ರಗಳಿಂದ ಹೇಳಲ್ಪಟ್ಟಿದೆ. ತೇನ=ಆದ್ದರಿಂದ ಪೌನರುಕ್ತ್ಯೇನ=ಅದೇ ಅರ್ಥವನ್ನು ಈ ಎರಡು ಅಧಿಕರಣದ ಸೂತ್ರಗಳೂ ಹೇಳುತ್ತಿದ್ದು ಪೌನರುಕ್ತ್ಯ ಇರುವ ಕಾರಣದಿಂದ ಏತೇ=ಈ ಎರಡು ಸೂತ್ರಗಳು ಉಕ್ತಾರ್ಥೇ=ಪುನರುಕ್ತಗಳು, ಇತಿ=ಎಂಬುದು ನಿಶ್ಚಯಃ= ನಿಶ್ಚಯ.

**ಭಾವಾರ್ಥ**— ಪ್ರಾಚೀನವೃತ್ತಿಕಾರರು ಈ ಎರಡು ಸೂತ್ರಗಳಿಗೆ ಬೇರೆ ಅರ್ಥವನ್ನು ಹೇಳಿದ್ದಾರೆ— ಜ್ಞಾನಿಗಳಿಗೆ ಬ್ರಹ್ಮಜ್ಞಾನ ಬಂದಕೂಡಲೇ ಮೋಕ್ಷವೋ, ಸಮಯದ ಅನಂತರವೋ ಎಂದು ಸಂದೇಹ. ಆಧಿಕಾರಿಕರಿಗೆ ಅಂದರೆ ಪರಮಾತ್ಮನಿಂದ ದೇವತಾಪದವಿಯಲ್ಲಿ ಅಧಿಕಾರವನ್ನು ಪಡೆದಿರುವ ಜ್ಞಾನಿಗಳಿಗೆ ಬ್ರಹ್ಮಾಪರೋಕ್ಷವಾದರೂ ಅಧಿಕಾರಸಮಾಪ್ತಿತಪರ್ಯಂತವೂ ಸಂಸಾರದಲ್ಲೇ ಸ್ಥಿತಿ, ಕೂಡಲೇ ಮೋಕ್ಷವಲ್ಲ.

ಮೋಕ್ಷಕ್ಕೆ ಕಾರಣವಾದ ಸಾಧನ ಸಂಪತ್ತಿ ಇದ್ದರೂ ಆಧಿಕಾರಿಕರಿಗೆ ಈಗ ಮೋಕ್ಷವಾಗುವುದಿಲ್ಲವಾದರೆ ಮುಂದೆಯೂ ಆಗಬಾರದು. ಈ ಆಕ್ಷೇಪದ ಪರಿಹಾರಕ್ಕಾಗಿ ಎರಡನೇ ಸೂತ್ರ–ಅಕ್ಷರಧಿಯಾಂ ತ್ವವಿರೋಧಃ ॥ ಬ್ರಹ್ಮಜ್ಞಾನಿಗಳಿಗೆ ಮೋಕ್ಷಾಭಾವ ಎಂಬ ವಿರೋಧ ಇಲ್ಲ. ಏಕೆಂದರೆ, ಸಾಮಾನ್ಯ–ವಿಶೇಷಭಾವಾಭ್ಯಾಂ=ಕ್ಷೀಯಂತೇ ಚಾಸ್ಯ ಕರ್ಮಾಣಿ–ಜ್ಞಾನಿಯ ಕರ್ಮಗಳೆಲ್ಲವೂ ನಾಶವಾಗುತ್ತವೆ, ಎನ್ನುವುದು ಸಾಮಾನ್ಯವಚನ. 'ತಸ್ಯ ತಾವದೇವ ಚಿರಂ–ಜ್ಞಾನಿಯ ಪ್ರಾರಬ್ಧನಾಶವಾಗುವುದಷ್ಟೇ ತಡ' ಅದಾದ ಕೂಡಲೇ 'ಅಥ ಸಂಪತ್ಸ್ಯತೇ=ಬ್ರಹ್ಮಸಂಪತ್ತಿಯಾಗುತ್ತದೆ' ಇದು ವಿಶೇಷ ವಚನ. ಈ ವಿಶೇಷವಚನದಂತೆ ಪ್ರಾರಬ್ಧದ ಫಲವಾಗಿ ಅಧಿಕಾರದಲ್ಲಿದ್ದು

ಆಮೇಲೆ ಅಪರೋಕ್ಷಿಗಳು ಮುಕ್ತರಾಗುತ್ತಾರೆ. ಇದು ಪ್ರಾಚೀನ ವೃತ್ತಿಕಾರರ ವ್ಯಾಖ್ಯಾನ.

ಇದನ್ನು ಆಚಾರ್ಯರು ನಿರಾಕರಿಸಿದ್ದಾರೆ. ಈ ಅಂಶಗಳೆರಡೂ 'ಅನಾರಬ್ಧಕಾರ್ಯೇ'(4-1-15) ಇತ್ಯಾದಿ ಸೂತ್ರ ಹಾಗೂ 'ಭೋಗೇನ ತ್ವಿತರೇ...'(4-1-19) ಎಂಬ ಸೂತ್ರ ಇವೆರಡರಲ್ಲಿ ಸ್ಫುಟವಾಗಿ ಬಂದಿವೆ. ಮತ್ತೆ ಇಲ್ಲಿ ಅದನ್ನೇ ಹೇಳುವುದು ಪುನರುಕ್ತಿ, ಎಂದು.

ಶಾಂಕರಭಾಷ್ಯದಲ್ಲಿ ಈ ಎರಡಂಶಗಳನ್ನೂ ಪ್ರಥಮಸೂತ್ರದ ಅರ್ಥವೆಂದು ತಿಳಿಸಿ ಎರಡನೆಯ ಸೂತ್ರವನ್ನು ಅಧಿಕರಣಾಂತರವೆಂದು ಪರಿಗಣಿಸಲಾಗಿದೆ. ಮೊದಲ ಸೂತ್ರದ ಅರ್ಥ— ಬ್ರಹ್ಮವಿದ್ಯೆಯ ಫಲ ಮೋಕ್ಷವಲ್ಲ. ಏಕೆಂದರೆ, ಬ್ರಹ್ಮವಿದ್ಯೆಯನ್ನು ಗಳಿಸಿದ ಅಪಾಂತರತಮರೆಂಬ ಋಷಿಗಳು, ಸಶರೀರರಾಗಿದ್ದು ಮುಂದೆ ವ್ಯಾಸರಾಗುತ್ತಾರೆ. ಇದರಿಂದ ಬ್ರಹ್ಮಜ್ಞಾನಿಗಳಿಗೂ ಸಂಸಾರವಿದೆ, ಎಂದೇ ತಿಳಿಯುತ್ತದೆ, ಎಂದು ಪೂರ್ವ ಪಕ್ಷ. ಬ್ರಹ್ಮಜ್ಞಾನದ ಫಲ ಮೋಕ್ಷ. ಅಪಾಂತರತಮರ ಪ್ರಾರಬ್ಧ ಕ್ಷಯವಾಗಿಲ್ಲದ ಕಾರಣ ಅವರಿಗೆ ಮೋಕ್ಷವಾಗಿಲ್ಲ, ಎಂದು ಪ್ರಥಮಸೂತ್ರದ ಸಿದ್ಧಾಂತ. ಈ ವ್ಯಾಖ್ಯಾನದಲ್ಲೂ ಹಿಂದೆ ಹೇಳಿದಂತೆ ಪುನರುಕ್ತಿ ಇರುವುದರಿಂದ ಸರಿಯಲ್ಲ.

ಇಲ್ಲಿಗೆ ಯಾವದಧಿಕರಣ ಮುಗಿಯಿತು.

# ಇಯದಾಮನನಾಧಿಕರಣ

## 'ಓಂ ಇಯದಾಮನನಾತ್ ಓಂ'

**ಉಷಾಃ ಸ್ವಾಹಾ ಚ ಪರ್ಜನ್ಯೋ ಮಿತ್ರೋऽಗ್ನಿರ್ವರುಣೋ ವಿಧುಃ ।**
**ಪ್ರವಹೋऽನಿರುದ್ಧ ಇಂದ್ರೋ ರುದ್ರೋ ವಾಣೀ ಚ ಮಾರುತಃ।**
**ಉತ್ತರೋತ್ತರತಸ್ತ್ವೇತೇ ಗುಣೈಃ ಸರ್ವೈಶ್ಚ ಮುಕ್ತಿಗಾಃ ॥ ೧೮೬ ॥**

ವಾಯುದೇವ ಸಾಧಕೋತ್ತಮ. ತಾವತ್‌ಪರ್ಯಂತ ಸಾಧಕರು ಹೀಗಿದ್ದಾರೆ— ಉಷಾದೇವೀ–ಅಶ್ವಿನೀದೇವತೆಗಳ ಪತ್ನಿ, ಅಗ್ನಿಪತ್ನಿ–ಸ್ವಾಹಾ,

ಪರ್ಜನ್ಯ, ಮಿತ್ರ (ಇವರಿಬ್ಬರು ದ್ವಾದಶಾದಿತ್ಯರಲ್ಲಿ ಸೇರಿದ್ದಾರೆ) ವರುಣ, ಚಂದ್ರ, ಪ್ರವಹನಾಮಕ ಮರುತ್, ಕಾಮಸುತ ಅನಿರುದ್ಧ, ಇಂದ್ರ, ತೈಜಸಾಹಂಕಾರದಿಂದ ಉತ್ಪನ್ನನಾದ ಪ್ರಾಣ (ಆಹಂಕಾರಿಕಪ್ರಾಣ), ರುದ್ರಪತ್ನಿ ಉಮಾ, (ಸೌಪರ್ಣೀ, ವಾರುಣೀ) ರುದ್ರ(ಗರುಡ, ಶೇಷರು) ವಾಣೀ (ಭಾರತೀ) ವಾಯುದೇವ(ಬ್ರಹ್ಮ), ಇವರೆಲ್ಲರೂ (ಒಟ್ಟು 15 ದೇವತೆಗಳು) ಸಂಸಾರ ಮೋಕ್ಷಗಳಲ್ಲಿ ಉತ್ತರೋತ್ತರ ಅಧಿಕಗುಣವುಳ್ಳವರು.

ಸೂರ್ಯಾಧರ್ಮೌ ಯಥಾ ಸೋಮೋ ಮನುರ್ದಕ್ಷೋ ಬೃಹಸ್ಪತಿಃ ।
ಶಚೀ ರತಿಶ್ಚಾನಿರುದ್ಧಸಮಾಸ್ತಾರಾ ಚ ಮಿತ್ರವತ್ ॥ ೧೮೭ ॥

ಸೋಮವಚ್ಛತರೂಪಾ ತು ಪ್ರಸೂತಿರ್ವಹ್ನಿವದ್ ವಿರಾಟ್ ।
ಪರ್ಜನ್ಯವದ್ ವಾರುಣೀ ಚ ತಥಾ ಸಂಜ್ಞಾ ಚ ರೋಹಿಣೀ ॥ ೧೮೮ ॥

ಧಾರ್ಮೀ ಚ ಮಿತ್ರವತ್ಸೈವ ಪ್ರಾವಹೀ ಪರಿಕೀರ್ತಿತಾ ।
ಮಿತ್ರಪರ್ಜನ್ಯಮಧ್ಯಸ್ಥಾವಶ್ವಿನೌ ವಿಘ್ನವಿತ್ತಪೌ ॥ ೧೮೯ ॥

ಭೃಗುರಗ್ನಿಸಮೋ ಮಿತ್ರತನ್ಮಧ್ಯೇ ಬ್ರಹ್ಮಪುತ್ರಕಾಃ ।
ವರುಣಾಗ್ನ್ಯಂತರಾ ತತ್ರ ನಾರದಃ, ಪ್ರಾಯ ಇಂದ್ರವತ್ ॥ ೧೯೦ ॥

ಕಾಮಃ, ಸುಪರ್ಣೀ ಚೋಮಾವದ್ ವೀಂದ್ರೋ ರುದ್ರವದೀರಿತಃ ।
ನಿರ್ಋತಿರ್ಮಿತ್ರಸದೃಶೋ ವಿಶ್ವಾಮಿತ್ರಃ ಕಸೂನುವತ್ ॥ ೧೯೧ ॥

ವೈವಸ್ವತೋ ಮನುಶ್ಚಾಶ್ವಿಪಶ್ಚಾದನ್ಯೇ ತತೋಽವರಾಃ ।
ಚ್ಯವನೋಚಥ್ಯವೈನ್ಯಾಶ್ಚ ಶಶಬಿಂದುಶ್ಚ ಹೈಹಯಃ ॥ ೧೯೨ ॥

ತದ್ವಚ್ಚ ವಿಪ್ರರಾಜನ್ಯವಿಶೇಷೋಽತ್ರಾಪಿ ಕಶ್ಚನ ।
ತದ್ವತ್ ಪ್ರಿಯವ್ರತಶ್ಚಾಪಿ ತದನ್ಯಾಃ ಶತದೇವತಾಃ ।
ಪರ್ಜನ್ಯಮಿತ್ರಾಂತರಾಳೇ ತದನ್ಯೇ ತು ತತೋಽವರಾಃ ॥ ೧೯೩ ॥

1. ಸೂರ್ಯ-ಧರ್ಮೌ ಯಥಾ ಸೋಮಃ=ಸೂರ್ಯ ಮತ್ತು ಯಮ ಧರ್ಮ ಇವರಿಬ್ಬರು ಹಿಂದೆ ಹೇಳಿರುವ ಚಂದ್ರನಿಗೆ ಸಮಾನರು.

2. ಮನುಃ ದಕ್ಷಃ, ಬೃಹಸ್ಪತಿಃ, ಶಚೀ, ರತಿಶ್ಚ ಅನಿರುದ್ಧಸಮಾಃ= ಸ್ವಾಯಂಭುವ ಎಂಬ ಮೊದಲ ಮನು, ದಕ್ಷಪ್ರಜಾಪತಿ, ದೇವಗುರು ಬೃಹಸ್ಪತ್ಯಾಚಾರ್ಯರು, ಇಂದ್ರಪತ್ನಿ ಶಚೀದೇವಿ, ಕಾಮಪತ್ನಿ ರತಿ ಇವರು ಅನಿರುದ್ಧನಿಗೆ ಸಮರು.

3. ತಾರಾ ಚ ಮಿತ್ರವತ್=ಬೃಹಸ್ಪತಿಪತ್ನಿ ತಾರಾದೇವಿ ಮಿತ್ರನಾಮಕ ಆದಿತ್ಯನಿಗೆ ಸಮಾನಳು.

4. ಶತರೂಪಾ ಸೋಮವತ್=ಸ್ವಾಯಂಭುವಮನುವಿನ ಪತ್ನಿ ಶತರೂಪಾದೇವಿಯು ಚಂದ್ರನಿಗೆ ಸಮ. (ಸೂರ್ಯಧರ್ಮರ ಸಮಕಕ್ಷ್ಯಳು)

5. ಪ್ರಸೂತಿಃ ವಹ್ನಿವತ್=ದಕ್ಷನ ಪತ್ನಿಯಾದ ಪ್ರಸೂತಿಯು ಅಗ್ನಿಗೆ ಸಮಳು.

6. ವಿರಾಟ್ ಪರ್ಜನ್ಯವತ್=ಅನಿರುದ್ಧ ಪತ್ನಿಯಾದ ವಿರಾಟ್ ಪರ್ಜನ್ಯ ಸಮಳು. ತಥಾ=ಅದರಂತೆ ವಾರುಣೀ ಸಂಜ್ಞಾ ಚ ರೋಹಿಣೀ, ಧಾರ್ಮಿ ಪ್ರಾವಹೀ ಚ ಮಿತ್ರವತ್ತ್ವೇವ=ವರುಣನ ಪತ್ನಿ, ಸೂರ್ಯಪತ್ನಿ ಸಂಜ್ಞಾ, ಚಂದ್ರಪತ್ನಿ ರೋಹಿಣೀ, ಧರ್ಮಪತ್ನಿ, ಪ್ರವಹವಾಯುಪತ್ನಿ ಇವರೂ ಮಿತ್ರ ಸಮರು.

7. ವಿಘ್ನ-ವಿತ್ತಪೌ, ಅಶ್ವಿನೌ ಮಿತ್ರ-ಪರ್ಜನ್ಯಮಧ್ಯಸ್ಥೌ=ಗಣಪತಿ, ಕುಬೇರ, ಅಶ್ವಿನೀ ದೇವತೆಗಳು ಮಿತ್ರ ಮತ್ತು ಪರ್ಜನ್ಯರ ಮಧ್ಯದಲ್ಲಿ ಬರುತ್ತಾರೆ. ಅಂದರೆ ಮಿತ್ರನಿಗಿಂತ ಅಧಮರು ಪರ್ಜನ್ಯನಿಗಿಂತ ಉತ್ತಮರು.

8. ಭೃಗುಃ ಅಗ್ನಿಸಮಃ=ಭೃಗುಋಷಿ ಅಗ್ನಿಗೆ ಸಮಾನ.

9. ಬ್ರಹ್ಮಪುತ್ರಕಾಃ ಮಿತ್ರ-ತನ್ಮಧ್ಯೇ=ಬ್ರಹ್ಮನ ಮಕ್ಕಳಾದ ಮರೀಚ್ಯಾದಿಗಳು ಮಿತ್ರ ಮತ್ತು ಅಗ್ನಿಗಳ ಮಧ್ಯದ ಕಕ್ಷ್ಯೆಯಲ್ಲಿ ಬರುತ್ತಾರೆ. ಮಿತ್ರನಿಗಿಂತ ಉತ್ತಮರು ಅಗ್ನಿಗಿಂತ ಅಧಮರು. ಬ್ರಹ್ಮಪುತ್ರರಾದ ದಕ್ಷ ಮತ್ತು

ಭೃಗುಋಷಿಗಳ ಕಕ್ಷ್ಯೆಯನ್ನು ಹೇಳಲಾಗಿದೆ. ನಾರದರ ಕಕ್ಷ್ಯೆಯನ್ನು ಮುಂದೆ ಹೇಳುತ್ತಾರೆ. ಅಲ್ಲಿಗೆ ಬ್ರಹ್ಮಪುತ್ರರಾದ ಮರೀಚಿ, ಅತ್ರಿ, ಅಂಗಿರಸ, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠ ಈ ಏಳುಮಂದಿ ಮಾತ್ರ ಮಿತ್ರಾಗ್ನಿಯರ ಮಧ್ಯದಲ್ಲಿ ಬರುತ್ತಾರೆ.

10. ವರುಣಾಗ್ನ್ಯಂತರಾ ತತ್ರ ನಾರದಃ=ವರುಣ ಮತ್ತು ಅಗ್ನಿಯರ ಮಧ್ಯದಲ್ಲಿ ನಾರದ ಋಷಿ ಬರುತ್ತಾನೆ. ಅಗ್ನಿಗಿಂತ ಉತ್ತಮ, ವರುಣನಿಗಿಂತ ಕಡಿಮೆ. ಕಾಮಃ=ಮನ್ಮಥನು ಪ್ರಾಯ ಇಂದ್ರವತ್=ದೇವೇಂದ್ರನಿಗಿಂತ ಸ್ವಲ್ಪ ಕಡಿಮೆ. ಸುಪರ್ಣೀ ಚ=ಗರುಡಪತ್ನಿ ಸುಪರ್ಣಿಯಾದರೂ ಉಮಾವತ್= ಪಾರ್ವತಿಗೆ ಸಮಾನಳು. ವೀಂದ್ರಃ=ಪಕ್ಷಿರಾಜ ಗರುಡನಾದರೂ ರುದ್ರವದೀರಿತಃ=ಮಹರುದ್ರನಿಗಿಂತ ಕಿಂಚಿದಧಿಕನೆಂದು ಖ್ಯಾತನಾಗಿದ್ದಾನೆ.

11. ನಿರ್ಋತಿಃ=ಘಟೋತ್ಕಚನೆಂದು ಪ್ರಸಿದ್ಧನಾದ ನಿರ್ಋತಿಯು ಮಿತ್ರಸದೃಶಃ=ಮಿತ್ರನಾಮಕಸೂರ್ಯಸದೃಶನು.

12. ವಿಶ್ವಾಮಿತ್ರಃ ವೈವಸ್ವತೋ ಮನುಶ್ಚ ಕಸೂನುವತ್=ವಿಶ್ವಾಮಿತ್ರ ಋಷಿಯು ಮತ್ತು ವೈವಸ್ವತಮನು ಬ್ರಹ್ಮಪುತ್ರರಾದ ಮರೀಚ್ಯಾದಿಗಳಿಗೆ ಸಮರು.

13. ಅನ್ಯೇ=ಸ್ವಾಯಂಭುವಮನು, ವೈವಸ್ವತಮನು, ಭಗವಂತನ ಅವತಾರನಾದ ತಾಪಸಮನು ಈ ಮೂವರಿಗಿಂತ ಭಿನ್ನರಾದ ಮನುಗಳು ತತಃ ಪಶ್ಚಾತ್=ವೈವಸ್ವತಮನುವಿಗಿಂತ ಅವರರು. ತೇ=ಅವರು ಅಶ್ವಿಪಶ್ಚಾತ್= ಅಶ್ವಿನೀದೇವತೆಗಳಿಗಿಂತ ಅವರರು, ಪರ್ಜನ್ಯನಿಗಿಂತ ಉತ್ತಮರು.

14. ಚ್ಯವನ–ಉಚಥ್ಯ–ವೈನ್ಯಾಶ್ಚ, ಶಶಬಿಂದುಶ್ಚ, ಹೈಹಯಃ=ಚ್ಯವನ ಋಷಿ, ಉಚಥ್ಯಋಷಿ, ವೇನಪುತ್ರಪೃಥು, ಶಶಬಿಂದುರಾಜ, ಕಾರ್ತವೀರ್ಯಾರ್ಜುನ ಇವರೆಲ್ಲರೂ ತದ್ವತ್=ಹನ್ನೊಂದು ಮಂದಿ ಮನುಗಳಿಗೆ ಸಮಾನರು. ಅತ್ರಾಪಿ=ಈ ಚ್ಯವನಾದಿಗಳಲ್ಲೂ ಕಶ್ಚನ=ಒಂದು ವಿಧದ ವಿಪ್ರ–ರಾಜನ್ಯವಿಶೇಷಃ=ಬ್ರಾಹ್ಮಣ–ಕ್ಷತ್ರಿಯ ಎಂಬ ವಿಶೇಷ ಇದೆ. ಉಚಥ್ಯ–ಚ್ಯವನರು ಬ್ರಾಹ್ಮಣರು, ಉಳಿದವರು ಕ್ಷತ್ರಿಯರು.

15. ತದ್ವತ್ ಪ್ರಿಯವ್ರತಶ್ಚಾಪಿ=ಪ್ರಿಯವ್ರತನೂ ಅವರರಾದ ಹನ್ನೊಂದು ಮನುಗಳಿಗೆ ಸಮಾನ.

16. ತದನ್ಯೇ=ಈವರೆಗೆ ಹೇಳಿರುವ ದೇವತೆಗಳೆಲ್ಲರೂ ಶತಸ್ಥ ಸೋಮಾರ್ಹದೇವತೆಗಳು, ಇವರಿಗಿಂತ ಭಿನ್ನರಾದ ಶತಸ್ಥದೇವತೆಗಳು ಪರ್ಜನ್ಯ–ಮಿತ್ರಾಂತರಾಳೇ=ಪರ್ಜನ್ಯನಿಗಿಂತ ಉತ್ತಮರು ಮಿತ್ರನಿಗಿಂತ ಅಧಮರು, ಅಶ್ವಿನಿಗಳಿಗೆ ಸಮಾನರು.

17. ತದನ್ಯೇ=ಈ ಶತಸ್ಥದೇವತೆಗಳಿಂದ ಭಿನ್ನರಾದ ದೇವತೆಗಳು ತತೋऽವರಾಃ=ಶತಸ್ಥದೇವತೆಗಳಿಗಿಂತ ಕಡಿಮೆಯವರು. ಹನ್ನೊಂದು ಮನುಗಳಿಗೆ ಸಮರು.

**ಭಾವಾರ್ಥ**— ನವಕೋಟ್ಯೋ ಹಿ ದೇವಾನಾಂ ತೇಷಾಂ ಮಧ್ಯೇ ಶತಸ್ಯ ತು । ಸೋಮಾಧಿಕಾರಃ । ಒಟ್ಟು ಒಂಭತ್ತು ಕೋಟಿ ದೇವತೆಗಳಲ್ಲಿ ನೂರು ದೇವತೆಗಳು ಮಾತ್ರ ಸೋಮಪಾನಕ್ಕೆ ಅರ್ಹರು. ಅವರನ್ನು ಶತಸ್ಥದೇವತೆಗಳು ಎನ್ನಲಾಗುತ್ತದೆ. ಶೇಷವಾಕ್ಯಾರ್ಥಚಂದ್ರಿಕೆಯಲ್ಲಿ ಶತಸ್ಥದೇವತೆಗಳನ್ನು ಈ ರೀತಿ ತಿಳಿಸಲಾಗಿದೆ.

ಪ್ರಧಾನವಾಯುರ್ವಸವೋ ರುದ್ರಾದಿತ್ಯಾ ಮರುದ್ಗಣಾಃ ।
ಬೃಹಸ್ಪತಿರ್ಋಭುರ್ದ್ಯಾವಾಪೃಥಿವ್ಯಾವಶ್ವಿನೌ ತಥಾ ॥
ವಿಶ್ವೇದೇವಾಶ್ಚ ಪಿತರಃ ಶತಸ್ಥಾ ದೇವತಾ ಮತಾಃ ॥

ಪ್ರಧಾನವಾಯು–1, ವಸುಗಳು–8, ರುದ್ರರು–11, ಆದಿತ್ಯರು–12, ಮರುದ್ದೇವತೆಗಳು–49, ಬೃಹಸ್ಪತಿ–1, ಋಭು–1, ದ್ಯಾವಾಪೃಥಿವೀ–2, ಅಶ್ವಿನೀದೇವತೆಗಳು–2. ವಿಶ್ವೇದೇವತೆಗಳು–10, ಪಿತೃಪತಿಗಳು–3.

ಈ ಶತಸ್ಥದೇವತೆಗಳಲ್ಲಿ ಪ್ರಧಾನವಾಯು, ವಸುಗಳಲ್ಲಿ ಒಬ್ಬನಾದ ಅಗ್ನಿ, ಏಕಾದಶರುದ್ರರಲ್ಲಿ ರುದ್ರ, ಆದಿತ್ಯರಲ್ಲಿ ವಿಷ್ಣು ಇಂದ್ರ, ಸೂರ್ಯ, ವರುಣ, ಪರ್ಜನ್ಯ, ಮಿತ್ರರು, ಮರುದ್ದೇವತೆಗಳಲ್ಲಿ ಪ್ರವಹ ಇವಿಷ್ಟು ದೇವತೆಗಳ ಕಕ್ಷೆಯನ್ನು ಮೊದಲ ಅನುವ್ಯಾಖ್ಯಾನಶ್ಲೋಕದಲ್ಲಿ ನಿರೂಪಿಸಲಾಗಿದೆ. ಆದ್ದರಿಂದ 'ತದನ್ಯಾ ಶತದೇವತಾಃ' ಎಂದರೆ ಇವರನ್ನುಳಿದು (10 ಮಂದಿ) ಇತರ 90 ಮಂದಿ ಶತಸ್ಥ ದೇವತೆಗಳು ಎಂದರ್ಥ.

**ಏತೇಭ್ಯೋಽಭ್ಯಧಿಕಾ ಶ್ರೀಸ್ತು ಸದಾ ಮುಕ್ತಾ ವಿಶೇಷತಃ ।**
**ತತ್ಸಮೋ ನಾಸ್ತಿ ಪರಮೋ ಹರಿರೇವ ನಚಾಪರಃ ।**
**ಸಂಹಿತಾಯಾಂ ಬೃಹತ್ಯಾಂ ತು ಸ್ವಯಂ ಭಗವತೋದಿತಮ್ ॥ ೧೯೪ ॥**

ಏತೇಭ್ಯಃ=ಈ ಎಲ್ಲ ದೇವತೆಗಳಿಂದಲೂ ಶ್ರೀಸ್ತು=ಲಕ್ಷ್ಮೀದೇವಿಯು ವಿಶೇಷತಃ ಅಭ್ಯಧಿಕಾ=ವಿಶೇಷವಾಗಿ ಅಧಿಕಳು. ಸದಾ ಮುಕ್ತಾ=ನಿತ್ಯ ಮುಕ್ತಳು. ತತ್ಸಮೋ ನಾಸ್ತಿ=ಅವಳಿಗೆ ಸಮಾನರಾದವರು ಮತ್ತೊಬ್ಬರಿಲ್ಲ, ಪರಮಃ=ಉತ್ತಮನಾದವನು ಹರಿರೇವ=ಶ್ರೀಹರಿ ಒಬ್ಬನೇ, ನಚ ಅಪರಃ= ಮತ್ತೊಬ್ಬನಿಲ್ಲ. ತದೇತದಖಿಲಂ=ಇವೆಲ್ಲವೂ ಸ್ವಯಂ ಭಗವತಾ=ಸ್ವತಃ ಭಗವಾನ್ ವ್ಯಾಸರಿಂದ ಬೃಹತ್ಯಾಂ ಸಂಹಿತಾಯಾಂ=ಬೃಹತ್ಸಂಹಿತೆಯಲ್ಲಿ ಉದಿತಂ=ಹೇಳಲ್ಪಟ್ಟಿದೆ.

**ಭಾವಾರ್ಥ**— ಲಕ್ಷ್ಮೀದೇವಿ ಇತರೆಲ್ಲ ದೇವತೆಗಳಿಂದ ಉತ್ತಮಳಾದರೂ ಸದಾ ಮುಕ್ತಳಾದುದರಿಂದ ಅವಳು ಸಾಧಕವರ್ಗದಲ್ಲಿ ಸೇರಿಲ್ಲ.

ಒಟ್ಟಿನಲ್ಲಿ ಬೃಹತ್ ಸಂಹಿತೆಯಲ್ಲಿ ಹೇಳಿದ ತಾರತಮ್ಯಕಕ್ಷ್ಯೆಯನ್ನು ಸುಧಾದಲ್ಲಿ ಹೀಗೆ ಸಂಗ್ರಹಿಸಲಾಗಿದೆ—

1. ಕರ್ಮಾಭಿಮಾನಿ ಪುಷ್ಕರ 2.ಶನೈಶ್ಚರ 3.ಉಷಾದೇವಿ 4.ಬುಧ 5.ಅಗ್ನಿಪತ್ನಿ ಸ್ವಾಹಾ 6.ಪರ್ಜನ್ಯ, ವರುಣನ ಪತ್ನಿ ಗಂಗೆ, ಸೂರ್ಯಪತ್ನಿ ಸಂಜ್ಞಾ, ಚಂದ್ರಪತ್ನಿ ರೋಹಿಣೀ, ಯಮಧರ್ಮಪತ್ನೀ ಶ್ಯಾಮಲಾ, ಅನಿರುದ್ಧಪತ್ನೀ ವಿರಾಟ್ 7.ಸ್ವಾಯಂಭುವ, ವೈವಸ್ವತ, ತಾಪಸ(ಹರಿ) ಮನುಗಳನ್ನು ಬಿಟ್ಟು 14 ಮನುಗಳಲ್ಲಿ 11 ಮನುಗಳು, ಚ್ಯವನಋಷಿ, ಉಚಥ್ಯಋಷಿ, ಪೃಥುರಾಜ, ಶಶಬಿಂದು, ಹೈಹಯ (ಕಾರ್ತವೀರ್ಯ) ಪ್ರಿಯವ್ರತ, ಗಯ ಈ ಕ್ಷತ್ರಿಯರು. ಹಾಗೂ ಶತಸ್ಥರಲ್ಲಿ ಪೃಥಕ್ಕಾಗಿ ಇಲ್ಲಿ ಉಲ್ಲೇಖಿಸಲ್ಪಡದಿರುವ ದೇವತೆಗಳು. 8.ಅಶ್ವಿನೀದೇವತೆಗಳು, ಗಣಪತಿ, ಕುಬೇರ, ವಿಶ್ವಕ್‌ಸೇನ 9.ಮಿತ್ರ, ನಿರ್ಋತಿ, ಬೃಹಸ್ಪತಿಪತ್ನಿ ತಾರಾ, ಪ್ರವಹವಾಯುಪತ್ನಿ 10.ಮರೀಚಿ, ಅತ್ರಿ, ಅಂಗಿರಸರು, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠ, ವಿಶ್ವಾಮಿತ್ರ, ವೈವಸ್ವತಮನು, 11.ಅಗ್ನಿ, ವರುಣಪುತ್ರ ಭೃಗು,

ದಕ್ಷಪತ್ನಿ ಪ್ರಸೂತಿ 12.ನಾರದ, 13.ವರುಣ, 14.ಚಂದ್ರ(ಸೋಮ), ಸೂರ್ಯ, ಯಮಧರ್ಮ, ಸ್ವಾಯಂಭುವಮನುಪತ್ನಿ ಶತರೂಪಾದೇವಿ, 15 ಪ್ರವಹವಾಯು 16. ಅನಿರುದ್ಧ (ಕಾಮಪುತ್ರ) ಸ್ವಾಯಂಭುವಮನು, ಬೃಹಸ್ಪತ್ಯಾಚಾರ್ಯ, ದಕ್ಷಪ್ರಜಾಪತಿ, ಶಚೀದೇವಿ, ಕಾಮಪತ್ನಿ ರತೀದೇವಿ, 17.ಆಹಂಕಾರಿಕ ಪ್ರಾಣ, 18.ಇಂದ್ರ ಮತ್ತು ಕಾಮ 19.ಉಮಾ, ಗರುಡಪತ್ನಿ ಸುಪರ್ಣೀ, ಉಮಾತ್ಮಕಳಾದ ಶೇಷಪತ್ನಿ ವಾರುಣೀ 20.ಜಾಂಬವತೀ, ಕಾಲಿಂದೀ, ಭದ್ರಾ, ಮಿತ್ರವಿಂದಾ, ನೀಲಾ, ಲಕ್ಷಣಾ ಈ ಆರುಮಂದಿ ಕೃಷ್ಣಪತ್ನಿಯರು, 21 ರುದ್ರಾತ್ಮಕನಾದ ಶೇಷದೇವ, ಗರುಡ 22.ಭಾರತೀ–ಸರಸ್ವತಿಯರು, 23.ಮುಖ್ಯವಾಯು–ಬ್ರಹ್ಮದೇವ, 24.ಮಹಾಲಕ್ಷ್ಮೀದೇವಿ 25.ಭಗವಾನ್ ವಿಷ್ಣು.

**ತದೇತದಖಿಲಂ ಪ್ರಾಣ ಆಹಂಕಾರಿಕ ಏವ ಚ ।**
**ಇಂದ್ರಾದನಂತರೋ (ದೃಷ್ಟಿರಪಿ ಯೋಗ್ಯಾನುಸಾರತಃ) ॥ ೧೯೫ ॥**

ಆಹಂಕಾರಿಕ ಪ್ರಾಣ ಏವ=ತೈಜಸ–ಅಹಂಕಾರದಿಂದ ಉತ್ಪನ್ನವಾದ ಪ್ರಾಣನೇ ಇಂದ್ರಾದನಂತರಃ=ಅನಿರುದ್ಧನಿಂದ ಉತ್ತಮನಾಗಿ ಇಂದ್ರನ ಪೂರ್ವದಲ್ಲಿ ಬರುವವನು. (ಬುದ್ಧಿಃ ಪ್ರಾಣಶ್ಚ ತೈಜಸೌ–ಎಂಬಲ್ಲಿ.)

**ಇಲ್ಲಿಗೆ ಇಯದಾಮನನಾಧಿಕರಣ ಮುಗಿಯಿತು.**

# ದರ್ಶನಭೇದಾಧಿಕರಣ

**'ಓಂ ಪ್ರಜ್ಞಾಂತರಪೃಥಕ್ತ್ವವದ್ದೃಷ್ಟಿಶ್ಚ ತದುಕ್ತಂ ಓಂ'**

**(ಇಂದ್ರಾದನಂತರೋ)ದೃಷ್ಟಿರಪಿ ಯೋಗ್ಯಾನುಸಾರತಃ ।**

ದೃಷ್ಟಿರಪಿ=ಅಪರೋಕ್ಷಜ್ಞಾನವೂ ಯೋಗ್ಯಾನುಸಾರತಃ=ಅವರವರ ಯೋಗ್ಯತೆಗೆ ಅನುಸಾರವಾಗಿ ನಾನಾವಿಧವಾಗಿದೆ.

**ಇಲ್ಲಿಗೆ ದರ್ಶನಭೇದಾಧಿಕರಣ ಮುಗಿಯಿತು.**

# ಪ್ರದಾನಾಧಿಕರಣ

## 'ಓಂ ಪ್ರದಾನವದೇವ ಹಿ ತದುಕ್ತಂ ಓಂ'

## 'ಓಂ ಲಿಂಗಭೂಯಸ್ತ್ವಾತ್ ತದ್ಧಿ ಬಲೀಯಸ್ತದಪಿ ಓಂ'

**ಸಮ್ಯಗ್ ಗುರುಪ್ರಸಾದಶ್ಚ ಮುಖ್ಯತೋ ದೃಷ್ಟಿಕಾರಣಮ್ ।**
**ಶ್ರವಣಾದಿ ಚ ಕರ್ತವ್ಯಂ ನಾನ್ಯಥಾ ದರ್ಶನಂ ಕ್ವಚಿತ್ ॥ ೧೯೬ ॥**

ಸಮ್ಯಗ್ ಗುರುಪ್ರಸಾದಶ್ಚ=ಶ್ರವಣಾದಿಗಳು ಮಾತ್ರವಲ್ಲದೆ ಗುರುಗಳು ಪ್ರಸನ್ನರಾಗಿ ವಿದ್ಯಾದಾನವನ್ನು ಮಾಡುವುದೂ ಮುಖ್ಯತಃ=ಶ್ರವಣಾದಿ ಗಳಿಗಿಂತಲೂ ಮುಖ್ಯವಾಗಿ ದೃಷ್ಟಿಕಾರಣಮ್=ಅಪರೋಕ್ಷಕ್ಕೆ ಕಾರಣ. ಶ್ರವಣಾದಿ ಚ ಕರ್ತವ್ಯಂ=ಗುರುಪ್ರಸಾದದ ಜೊತೆಗೆ ಶ್ರವಣಾದಿಗಳನ್ನೂ ಮಾಡಬೇಕು. ಅನ್ಯಥಾ=ಶ್ರವಣಾದಿಗಳಿಲ್ಲದೆ, ಕ್ವಚಿತ್=ಎಂದೂ ನ ದರ್ಶನಂ=ಅಪರೋಕ್ಷವಾಗುವುದಿಲ್ಲ.

ಇಲ್ಲಿಗೆ ಪ್ರದಾನಾಧಿಕರಣ–ಗುರುಪ್ರಸಾದಾಧಿಕರಣಗಳು ಮುಗಿಯಿತು.

# ಪೂರ್ವವಿಕಲ್ಪಾಧಿಕರಣ

## 'ಓಂ ಪೂರ್ವವಿಕಲ್ಪಃ ಪ್ರಕರಣಾತ್ ಸ್ಯಾತ್ ಕ್ರಿಯಾ ಮಾನಸವತ್ ಓಂ'

**ಗುಣಾಧಿಕಂ ಗುರುಂ ಪ್ರಾಪ್ಯ ತದ್ಧೀನಂ ನಾಪ್ನುಯಾತ್ ಕ್ವಚಿತ್ ।**
**ವಿಪರ್ಯಯಸ್ತು ಕರ್ತವ್ಯಃ ಸರ್ವಥಾ(ಮುಕ್ತಿ)ಶುಭಮಿಚ್ಛತಾ ॥ ೧೯೭ ॥**

**ಸಮೇ ವಿಕಲ್ಪ ಏವ ಸ್ಯಾತ್ ಪೂರ್ವಾನುಜ್ಞಾ ಚ ಸರ್ವಥಾ ।**
**ತದುತ್ತಮಗುರುಪ್ರಾಪ್ತ್ಯೈ ಪೂರ್ವಾನುಜ್ಞಾ ನ ಮೃಗ್ಯತೇ ॥ ೧೯೮ ॥**

ಗುಣಾಧಿಕಂ ಗುರುಂ ಪ್ರಾಪ್ಯ=ಅಧಿಕಗುಣವುಳ್ಳ ಗುರುಗಳನ್ನು ಹೊಂದಿ ತದ್ಧೀನಂ=ಅವನಿಗಿಂತ ಕಡಿಮೆಗುಣವುಳ್ಳವನನ್ನು ಕ್ವಚಿತ್=ಎಂದೂ,

ಯಾವುದೇ ಲಾಭವಿದ್ದರೂ ನಾಪ್ನುಯಾತ್=ಅರಸಬಾರದು. ಸಮೇ=ಪೂರ್ವ ಗುರುಗಳಿಗೆ ಸಮಸ್ಕಂಧದ ಮತ್ತೊಬ್ಬ ಗುರುಗಳು ತಾವಾಗಿಯೇ ಸಿಕ್ಕಿದರೆ ವಿಕಲ್ಪ ಏವ ಸ್ಯಾತ್=ಅವರನ್ನೂ ಅರಸಬಹುದು. ಅಥವಾ ಮೊದಲ ಗುರುಗಳನ್ನೇ ಮುಂದುವರಿಸಬಹುದು. ಪೂರ್ವಾನುಜ್ಞಾ ಚ ಸರ್ವಥಾ= ಇಂತಹ ಸಂದರ್ಭದಲ್ಲಿ ಮೊದಲ ಗುರುಗಳ ಸಮ್ಮತಿ ಖಡ್ಡಾಯವಾಗಿ ಬೇಕು. ಅವರ ಸಮ್ಮತಿ ಇಲ್ಲದೆ ಪರಿತ್ಯಾಗ ಮಾಡಿದರೆ ದೋಷವಿದೆ. ತದುತ್ತಮ ಗುರುಪ್ರಾಪ್ತೌ=ಉತ್ತಮ ಗುರುಗಳ ಬಳಿ ಹೋಗಬೇಕಾದಲ್ಲಿ ಪೂರ್ವಾನುಜ್ಞಾ=ಮೊದಲ ಗುರುಗಳ ಅನುಜ್ಞೆಯು ನ ಮೃಗ್ಯತೇ= ಅರಸಲ್ಪಡಬೇಕಿಲ್ಲ.

**ಗುರುರ್ಬ್ರಹ್ಮಾಽಖಿಲಾನಾಂ ಚ ವಿದ್ಯಾ ಚೈವ ಸರಸ್ವತೀ ।**
**ದೇವತಾ ಭಗವಾನ್ ವಿಷ್ಣುಃ ಸರ್ವೇಷಾಮವಿಶೇಷತಃ ।**
**ತತ್ಪ್ರಸಾದೇನ ಮುಕ್ತಿಃ ಸ್ಯಾನ್ನಾನ್ಯಥಾ ತು ಕಥಂಚನ ॥ ೧೯೯ ॥**

ಅಖಿಲಾನಾಂ ಚ=ಎಲ್ಲರಿಗೂ ಬ್ರಹ್ಮಾ=ಚತುರ್ಮುಖಬ್ರಹ್ಮದೇವ ಗುರುಃ=ಗುರುವು. ಸರಸ್ವತೀ=ಸರಸ್ವತೀದೇವಿಯು ವಿದ್ಯಾ= ವಿದ್ಯಾಭಿ ಮಾನಿನೀ. ಭಗವಾನ್ ವಿಷ್ಣುಃ=ಪೂಜ್ಯವಿಷ್ಣುವು ಅವಿಶೇಷತಃ ಸರ್ವೇಷಾಂ= ಇದಕ್ಕೆ, ಅದಕ್ಕೆನ್ನುವ ಭೇದವಿಲ್ಲದೆ ಎಲ್ಲ ವಿದ್ಯೆಗೂ ದೇವತಾ=ಪ್ರತಿಪಾದ್ಯನು ತತ್‌ಪ್ರಸಾದೇನ=ವಿಷ್ಣುವಿನ ಪ್ರಸಾದದಿಂದ ಮುಕ್ತಿಃ ಸ್ಯಾತ್=ಮೋಕ್ಷ ವಾಗುತ್ತದೆ. ಅನ್ಯಥಾತು ಕಥಂಚನ ನ=ಇಲ್ಲದಿದ್ದರೆ ಎಂದಿಗೂ ಜ್ಞಾನವೂ ಆಗುವುದಿಲ್ಲ, ಮೋಕ್ಷವೂ ಸಿಗುವುದಿಲ್ಲ.

**ಸ್ವೋತ್ತಮಾಸ್ತು ಕ್ರಮೇಣೈವ ಸರ್ವೇಷಾಂ ಗುರುವಃ(ಶ್ರುತಾಃ) ಸ್ಮೃತಾಃ ।**
**ಉಪದೇಶೋ ಬ್ರಹ್ಮಣಸ್ತು ಸರ್ವೇಷಾಮೇವ ಮುಕ್ತಯೇ ॥ ೨೦೦॥**

ಸ್ವೋತ್ತಮಾಸ್ತು=ತಮಗಿಂತ ಉತ್ತಮರೆಲ್ಲರೂ ಕ್ರಮೇಣೈವ=ಕ್ರಮವಾಗಿ ಸರ್ವೇಷಾಂ=ಎಲ್ಲರಿಗೂ ಗುರವಃ=ಗುರುಗಳೆಂದು ಸ್ಮೃತಾಃ=ತಿಳಿಯಲ್ಪಟ್ಟಿ ದ್ದಾರೆ. ಸರ್ವೇಷಾಮೇವ=ಎಲ್ಲರಿಗೂ ಮುಕ್ತಯೇ=ಮೋಕ್ಷಕ್ಕಾಗಿ ಬ್ರಹ್ಮಣಃ= ಬ್ರಹ್ಮದೇವರ ಉಪದೇಶಃ=ಉಪದೇಶವು ಆವಶ್ಯಕ.

ಭಾವಾರ್ಥ— ನಮಗಿಂತ ಹಿರಿಯರು ದೇವತೆಗಳು ಎಲ್ಲರೂ ನಮ್ಮ ಗುರುಗಳು. ಮೋಕ್ಷವಾಗಬೇಕಾದರೆ, ಸತ್ಯಲೋಕದಲ್ಲಿ ಬ್ರಹ್ಮದೇವರ ಉಪದೇಶ ಎಲ್ಲರಿಗೂ ಆಗಬೇಕು.

## ಪರೇಣಾಧಿಕರಣ

### 'ಓಂ ಪರೇಣ ಚ ಶಬ್ದಸ್ಯ ತಾದ್ವಿಧ್ಯಂ ಭೂಯಸ್ತ್ವಾತ್ತ್ವನುಬಂಧಃ ಓಂ'

ಸಾಧನೇಭ್ಯೋಽಧಿಕಾ ಭಕ್ತಿರ್ನೈವಾನ್ಯತ್ ತಾದೃಶಂ ಕ್ವಚಿತ್ ।
ಭಕ್ತಿಶ್ಚೈವ ಹರಾವೇವ ಮುಖ್ಯಾಽನ್ಯತ್ರ ಯಥಾಕ್ರಮಮ್ ।
ಸ್ವಾಧಿಕತ್ವೇನ(ಕಾ ತ್ವೇವ) ಸರ್ವತ್ರ ಸ್ವೋತ್ತಮೇಷು ಕ್ರಮೇಣ ಚ
॥ ೨೦೧ ॥

ಅನುವರ್ತತೇ ಚ ಸಾ ಭಕ್ತಿರ್ಮುಕ್ತಾವಾನಂದರೂಪಿಣೀ ।
ತತ್ಪೂರ್ವಿ (ರ್ವ)ಕೋಪಾಸನೈವಂ ಕರ್ತವ್ಯಾ ಮುಕ್ತಯೇ ಗುಣ್ಯೈಃ
॥ ೨೦೨ ॥

ಭಾವಾರ್ಥ— ಮೋಕ್ಷಸಾಧನವಾದ ಜ್ಞಾನಾದಿಗಳಲ್ಲಿ ಶ್ರೇಷ್ಠವಾದುದು ಭಕ್ತಿ. ಭಗವಂತನನ್ನು ಬಿಟ್ಟು (ಅನ್ಯತ್) ಭಕ್ತಿಯಂತಹ ಸಾಧನ ಮತ್ತೊಂದು ಇಲ್ಲ. ಶ್ರೀಹರಿಯಲ್ಲಿ ಎಲ್ಲರಿಗಿಂತಲೂ ಹೆಚ್ಚಿನ ಭಕ್ತಿ ಮಾಡಬೇಕು. ಇತರರಲ್ಲಿ ಅವರವರ ತಾರತಮ್ಯಕ್ಕೆ ಅನುಗುಣವಾಗಿ ಹೆಚ್ಚುಹೆಚ್ಚು ಭಕ್ತಿ ಇರಬೇಕು. ಸಾಕ್ಷಾತ್ ಸ್ವೋತ್ತಮರಲ್ಲಿ ತನ್ನಲ್ಲಿರುವ ಪ್ರೇಮಕ್ಕಿಂತಲೂ ಹೆಚ್ಚು ಮತ್ತು ಸ್ವೋತ್ತಮೋತ್ತರಲ್ಲಿ ಕ್ರಮವಾಗಿ ಹೆಚ್ಚುಹೆಚ್ಚು ಭಕ್ತಿ ಇರಬೇಕು.

ಇಂತಹ ಭಕ್ತಿಯು ಮೋಕ್ಷದಲ್ಲೂ ಅನುವೃತ್ತವಾಗುತ್ತದೆ. ಅಲ್ಲಿ ಅದು ಸಾಧನರೂಪವಾಗಿರದೆ ಆನಂದರೂಪವಾಗಿರುತ್ತದೆ. ಇಂತಹ ಭಕ್ತಿಪೂರ್ವಕವಾದ ಉಪಾಸನೆಯನ್ನು ಮೋಕ್ಷಸಿದ್ಧಿಗಾಗಿ ಗುಣೋಪೇತನಾದ ವಿಷ್ಣುವಿನಲ್ಲಿ ಮಾಡಬೇಕು.

ಇಲ್ಲಿಗೆ ಮೂರನೆಯ ಅಧ್ಯಾಯದ ಮೂರನೆಯ ಪಾದ ಮುಗಿಯಿತು.

॥ ಶ್ರೀವೇದವ್ಯಾಸೋ ವಿಜಯತೇ ॥

ಶ್ರೀಮದಾನಂದತೀರ್ಥಭಗವತ್ಪಾದರು ರಚಿಸಿದ

# ಶ್ರೀಮದನುವ್ಯಾಖ್ಯಾನ

## ಮೂರನೆಯ ಅಧ್ಯಾಯದ ನಾಲ್ಕನೇ ಪಾದ

## ಜ್ಞಾನಪಾದ

## ಪುರುಷಾರ್ಥಾಧಿಕರಣ

**'ಓಂ ಪುರುಷಾರ್ಥೋಽತಃ ಶಬ್ದಾದಿತಿ ಬಾದರಾಯಣಃ ಓಂ'**

ಈ ಪಾದದಲ್ಲಿ ಜ್ಞಾನದ ಸಾಮರ್ಥ್ಯವನ್ನು ಹೇಳುತ್ತಾರೆ. ಜ್ಞಾನವು ಸ್ವತಂತ್ರವಾಗಿ ಅಂದರೆ ಕರ್ಮನಿರಪೇಕ್ಷವಾಗಿ ಮೋಕ್ಷಕ್ಕೆ ಸಾಧನ, ಎನ್ನುವುದನ್ನು ಹಿಂದೆ 'ವಿದ್ಯೈವ ತು ನಿರ್ಧಾರಣಾತ್' ಎಂಬ ಸೂತ್ರದಲ್ಲಿ ಹೇಳಲಾಗಿದೆ. ಇಷ್ಟಲ್ಲದೆ ಅದರಲ್ಲಿರುವ ಇತರಸಾಮರ್ಥ್ಯವನ್ನು ಇಲ್ಲಿ ಹೇಳಲಾಗಿದೆ. ಸಾಧಕನು ಮೋಕ್ಷಕ್ಕಾಗಿ ಜ್ಞಾನಸಂಪಾದನೆಯನ್ನು ಮಾಡಿದ್ದರೂ ಅಡಿಗೆಗಾಗಿ ಹಚ್ಚಿದ ಬೆಂಕಿಯು ಬೆಳಕನ್ನೂ ನೀಡುವಂತೆ, ಅದು ಇತರಾಭೀಷ್ಟಗಳಿಗೂ ಸಾಧನವಾಗುತ್ತದೆ. ಅದನ್ನು ಇಲ್ಲಿ ಹೇಳಲಾಗಿದೆ.

**ಏವಮುತ್ಪನ್ನನಿರ್ದೋಷಭಗವದ್ದರ್ಶನಾತ್ ಸದಾ ।**
**ಅಪೇಕ್ಷಿತಫಲಪ್ರಾಪ್ತಿರಾರಬ್ಧಸ್ಯಾನತಿಕ್ರಮಾತ್ ॥ ೧ ॥**

ಏವಂ=ಹಿಂದೆ ಹೇಳಿದ ಉಪಾಸನೆಯಿಂದ ಉತ್ಪನ್ನ–ನಿರ್ದೋಷ–ಭಗವದ್ದರ್ಶನಾತ್=ಹುಟ್ಟಿರುವ ಪರಮಾತ್ಮನ ದೋಷರಹಿತ–ಅಪರೋಕ್ಷ ಜ್ಞಾನದಿಂದ (ಇದು ಸೂತ್ರದ ಅತಃ ಶಬ್ದದ ಅರ್ಥ) ಸದಾ=ಜ್ಞಾನವು ಹುಟ್ಟಿದ ಕ್ಷಣದಿಂದ ಆರಬ್ಧಸ್ಯ ಅನತಿಕ್ರಮಾತ್=ಪ್ರಾರಬ್ಧ ಕರ್ಮವನ್ನು ಅತಿಕ್ರಮಿಸದೆ ಅಪೇಕ್ಷಿತಫಲಪ್ರಾಪ್ತಿಃ=ಜ್ಞಾನಿಯು ಬಯಸುವ ಫಲದ ಪ್ರಾಪ್ತಿಯು ಆಗುತ್ತದೆ.

**ಭಾವಾರ್ಥ**— ಸಾಧಕರಿಗೆ ಅಪರೋಕ್ಷಜ್ಞಾನ ಬಂದರೆ ಮೋಕ್ಷವಾಗುವುದು ಖಚಿತ. ಮೋಕ್ಷವು ಪ್ರಾರಬ್ಧಕರ್ಮಾವಸಾನದಲ್ಲಿ ಆಗುತ್ತದೆ. ಅದುವರೆಗೆ ಜ್ಞಾನಿಯು ಏನನ್ನು ಬಯಸುತ್ತಾನೋ ಅವೆಲ್ಲವೂ ಪ್ರಾರಬ್ಧಕ್ಕೆ ವಿರೋಧವಾಗದಂತೆ ಜ್ಞಾನದಿಂದ ಸಿಗುತ್ತದೆ. ಪ್ರಾರಬ್ಧಕರ್ಮಕ್ಕೆ ಮೀರಿ ಜ್ಞಾನಿಯು ಅಭಿಲಾಷೆಪಟ್ಟರೆ ಅದು ನಿರಾಶೆಗೆ ಕಾರಣವಾಗುತ್ತದೆ. ಅದು ಅವನಿಗೆ ದೊರಕುವುದಿಲ್ಲ.

**ದೇವರ್ಷಿಮಾನುಷಾದೀನಾಂ ತತ್ತಜ್ಜಾತ್ಯನುಸಾರತಃ ।**
**ಜೈಮಿನ್ಯುಕ್ತಂ ಮಾನುಷಾಣಾಂ ತದ್ವಿಶೇಷಾಶ್ಚ ಕೇಚನ ॥ ೨ ॥**

ದೇವರ್ಷಿ–ಮಾನುಷಾದೀನಾಂ=ದೇವತೆಗಳು, ಋಷಿಗಳು, ಮನುಷ್ಯರೇ ಮೊದಲಾದ ಜ್ಞಾನಿಗಳ ತತ್ತಜ್ಜಾತ್ಯನುಸಾರತಃ=ಅವರವರ ಯೋಗ್ಯತೆಗೆ ಅನುಗುಣವಾಗಿ ಅಪೇಕ್ಷಿತ–ಫಲದ ಪ್ರಾಪ್ತಿಯಾಗುತ್ತದೆ. ಜೈಮಿನ್ಯುಕ್ತಂ= ಕರ್ಮವೇ ಸ್ವರ್ಗಾದಿಪುರುಷಾರ್ಥಗಳಿಗೆ ಕಾರಣ, ಜ್ಞಾನದಿಂದ ಅತಿಶಯಸಿದ್ಧಿ ಮಾತ್ರ ಆಗುತ್ತದೆ, ಎಂದು ಜೈಮಿನಿಗಳು ಹೇಳಿದ್ದು ಮಾನುಷಾಣಾಂ= ಮನುಷ್ಯರಿಗಷ್ಟೇ ಅನ್ವಯಿಸುತ್ತದೆ, ಇತರರಿಗಲ್ಲ. ತದ್ವಿಶೇಷಾಶ್ಚ ಕೇಚನ= ಜೈಮಿನಿಯ ಸಿದ್ಧಾಂತವನ್ನು ಅನುಸರಿಸುವ ಇನ್ನೂ ಕೆಲವರು ಹೇಳಿದ ಅಭಿಪ್ರಾಯಗಳೂ ಮನುಷ್ಯರಿಗೇ ಅನ್ವಯಿಸುತ್ತವೆ.

**ಭಾವಾರ್ಥ**— 13ನೇ ಸೂತ್ರ 'ನಾವಿಶೇಷಾತ್' ಎಂಬುದರ ಅರ್ಥ– ದೇವರ್ಷಿ ಇತ್ಯಾದಿ ಅನುವ್ಯಾಖ್ಯಾನ. ಅಪರೋಕ್ಷಜ್ಞಾನಿಗಳಲ್ಲಿ ದೇವತೆಗಳು– ಪಿತೃಗಳು–ಮನುಷ್ಯರೂ ಸೇರಿದ್ದಾರೆ. ಅವರೆಲ್ಲರಿಗೂ ಜ್ಞಾನದಿಂದ ಲಭಿಸುವ ಇತರಪುರುಷಾರ್ಥಗಳು ಏಕವಿಧವಾದುದಲ್ಲ. ಅವರವರ ಯೋಗ್ಯತೆಗೆ ಅನುಗುಣವಾಗಿ ಅದು ಭಿನ್ನವಾಗುತ್ತದೆ.

ಈ ಅಧಿಕರಣದಲ್ಲಿ'ಶೇಷತ್ವಾತ್ ಪುರುಷಾರ್ಥವಾದೋ ಯಥಾಽನ್ಯೇಷ್ವಿತಿ ಜೈಮಿನಿಃ' ಎಂಬ ಸೂತ್ರವಿದೆ. 'ವ್ಯಾಸರ ಶಿಷ್ಯರಾದ ಜೈಮಿನಿಗಳು ಸ್ವರ್ಗಾದಿ ಪುರುಷಾರ್ಥಗಳಿಗೆ ಕರ್ಮವೇ ಕಾರಣ. ಕರ್ಮದಿಂದಾದ ಸ್ವರ್ಗಾದಿ ಫಲಗಳಲ್ಲಿ ಅತಿಶಯವನ್ನಷ್ಟೇ ಜ್ಞಾನವು ಮಾಡುತ್ತದೆ, ಎಂದು ಹೇಳುತ್ತಾರೆ'

ಇದು ಆ ಸೂತ್ರದ ಅರ್ಥ. 'ಅಧಿಕೋಪದೇಶಾತ್ತು ಬಾದರಾಯಣಸ್ಯೈವಂ ತದ್ದರ್ಶನಾತ್' ಎಂಬ ಇನ್ನೊಂದು ಸೂತ್ರದಲ್ಲಿ ಸ್ವತಂತ್ರವಾದ ಜ್ಞಾನದಿಂದಲೇ ಪುರುಷಾರ್ಥಪ್ರಾಪ್ತಿ ಎಂದು ವೇದವ್ಯಾಸರ ಸಿದ್ಧಾಂತವನ್ನು ಹೇಳಲಾಗಿದೆ. ಈ ಗುರುಶಿಷ್ಯರ ಅಭಿಪ್ರಾಯದಲ್ಲಿ ಕಾಣುವ ವಿರೋಧವನ್ನು ಮುಂದಿನ ಅನುವ್ಯಾಖ್ಯಾನಾರ್ಧದಲ್ಲಿ ಪರಿಹರಿಸಲಾಗಿದೆ—ಅಪರೋಕ್ಷಜ್ಞಾನಿಗಳಾದ ಮನುಷ್ಯರ ಬಗ್ಗೆ ಜೈಮಿನಿಗಳು ಹೇಳಿದ್ದನ್ನು ಅನ್ವಯಿಸಬೇಕು.

ಜೈಮಿನಿಯ ಮತವನ್ನು ಅವಲಂಬಿಸುವ ಆದರೆ, ಅಲ್ಪ ವ್ಯತ್ಯಾಸವಿರುವ ಜೈಮಿನ್ಯೇಕದೇಶಿಮತಗಳೂ ಇವೆ. ಕರ್ಮ ಅಭೀಷ್ಟಸಾಧನ, ಜ್ಞಾನದಿಂದ ಅತಿಶಯನಸಿದ್ಧಿ–ಇದು ಜೈಮಿನಿಗಳ ಮತ್ತು ತದೇಕದೇಶಿಗಳೊಬ್ಬರ ಮತ. ಇದನ್ನು ಮನುಷ್ಯೋತ್ತಮಜ್ಞಾನಿಗಳಿಗೆ ಅನ್ವಯಿಸಬೇಕು. ಅದೃಷ್ಟವಾದ ಸ್ವರ್ಗಾದಿಗಳೇ ಜ್ಞಾನಸಾಧ್ಯ. ದೃಷ್ಟವಾದ ಸಂತತಿ–ಸೌಭಾಗ್ಯಗಳು ಜ್ಞಾನದಿಂದ ಆಗುವುದಿಲ್ಲ, ಕರ್ಮದಿಂದಲೇ ಸಿಗುತ್ತವೆ. ಇದು ಮತ್ತೊಂದು ಜೈಮಿನ್ಯೇಕದೇಶಿಮತ. ಅದು ಮಧ್ಯಮಮನುಷ್ಯರಿಗೆ ಅನ್ವಯಿಸುತ್ತದೆ. ಮೋಕ್ಷೇತರವಾದ ದೃಷ್ಟಾದೃಷ್ಟ ಎಲ್ಲ ಪುರುಷಾರ್ಥಗಳಿಗೂ ಕರ್ಮ ಮಾತ್ರ ಕಾರಣ, ಜ್ಞಾನವಲ್ಲ. ಈ ಏಕದೇಶಿಮತ ಮನುಷ್ಯಾಧಮರಾದ ಅಪರೋಕ್ಷಿಗಳಿಗೆ. ಬಾದರಾಯಣರ ಮತ, ಋಷಿ–ಗಂಧರ್ವ–ದೇವತೆಗಳಿಗೆ. ಹೀಗೆ, ವ್ಯವಸ್ಥೆ ಮಾಡಿ ವಿರೋಧವನ್ನು ಪರಿಹರಿಸಬೇಕು.

**ಸಾಮಾನ್ಯಂ ಭಗವತ್ಪ್ರೋಕ್ತಂ ದೇವಾದೀನಾಂ ವಿಶೇಷತಃ ।**
**ಬಲವದ್ವಿರೋಧಿಸದ್ಭಾವೇ ಜೈಮಿನ್ಯಾದ್ಯುಕ್ತಿರಿಷ್ಯತೇ ॥ ೩ ॥**

ಭಗವತ್ಪ್ರೋಕ್ತಂ=ಭಗವಾನ್ ವೇದವ್ಯಾಸರು 'ಜ್ಞಾನವೇ ಸಕಲ ಪುರುಷಾರ್ಥ ಸಾಧನ' ಎಂದು ಹೇಳಿರುವುದು ಸಾಮಾನ್ಯಂ=ಅಪರೋಕ್ಷ ಜ್ಞಾನಿಸಾಮಾನ್ಯರಿಗೆ ಅನ್ವಯಿಸುತ್ತದೆ. ಅಂದರೆ ದೇವಾದೀನಾಂ=ದೇವತೆಗಳೇ ಮೊದಲಾದವರಿಗೆ ವಿಶೇಷತಃ=ಅಪವಾದವಿಲ್ಲದೆ (ಅಪವಾದ ವಿಷಯರಾದ ಮನುಷ್ಯರನ್ನು ಬಿಟ್ಟು) ಅನ್ವಯಿಸುತ್ತದೆ.

ಭಗವತ್ಪ್ರೋಕ್ತಂ ಸಾಮಾನ್ಯಂ=ವೇದವ್ಯಾಸರು ಅಪರೋಕ್ಷಜ್ಞಾನಿ

ಸಾಮಾನ್ಯರಿಗೆ ಈ ವಿಷಯವನ್ನು ಹೇಳಿದ್ದಾರೆ. ಬಲವದ್ವಿರೋಧಿಸದ್ಭಾವೇ= ವ್ಯಾಸರು ಹೇಳಿದ ಈ ಸಾಮಾನ್ಯನಿಯಮಕ್ಕೆ ಪ್ರಬಲವಾದ ವಿರೋಧವು ಇದ್ದಲ್ಲಿ ಜೈಮಿನ್ಯಾದ್ಯುಕ್ತಿರಿಷ್ಯತೇ=ಜೈಮಿನ್ಯಾದಿಗಳ ಸಿದ್ಧಾಂತವು ಅನುಸರಿಸಲ್ಪಡಬೇಕು.

**ಭಾವಾರ್ಥ—** ಇಲ್ಲಿ ಸೂತ್ರಕಾರರ ಸಿದ್ಧಾಂತವು ಯಾರಿಗೆ ಅನ್ವಯಿಸುತ್ತದೆ, ಎನ್ನುವುದನ್ನು ಪೂರ್ವಾರ್ಧದಲ್ಲಿ ಹೇಳಲಾಗಿದೆ. ವೇದ ವ್ಯಾಸರು ಅಪರೋಕ್ಷಜ್ಞಾನಿಗಳಿಗೆ ಜ್ಞಾನದಿಂದಲೇ ಸಕಲಪುರುಷಾರ್ಥಗಳು ಸಿದ್ಧಿಸುತ್ತವೆ, ಎಂದು ಹೇಳಿದ್ದಾರೆ. ಆ ಸಾಮಾನ್ಯನಿಯಮವು ಮನುಷ್ಯರನ್ನು ಬಿಟ್ಟು ದೇವಾದಿಗಳಿಗೆ ಮಾತ್ರ ಅನ್ವಯಿಸುತ್ತದೆ.

ಅಥವಾ, ವೇದವ್ಯಾಸರು ಜ್ಞಾನವು ಸಕಲಪುರುಷಾರ್ಥಸಾಧನ, ಎಂದು ಸಾಮಾನ್ಯನಿಯಮವನ್ನು ಹೇಳಿದ್ದಾರೆ. ಜೈಮಿನ್ಯಾದಿಗಳು ಪ್ರಬಲವಾದ ಪ್ರಾರಬ್ಧಕರ್ಮವು ಪ್ರತಿಬಂಧಕವಿದ್ದಾಗ ಈ ಸಾಮಾನ್ಯನಿಯಮವು ಅನ್ವಯಿಸುವುದಿಲ್ಲ. ಅಂದರೆ, ಸ್ವತಂತ್ರವಾದ ಜ್ಞಾನಮಾತ್ರದಿಂದ ಸ್ವರ್ಗಾದಿ ಪ್ರಾಪ್ತಿಯಾಗುವುದಿಲ್ಲ ಎಂದಿದ್ದಾರೆ. ಇದನ್ನೇ ಹಿಂದೆ–ಆರಬ್ಧಸ್ಯಾನತಿಕ್ರಮಾತ್ –ಎಂದು ಹೇಳಲಾಗಿದೆ.

ಪ್ರಾರಬ್ಧಕರ್ಮವು ಜ್ಞಾನಕ್ಕೆ ಪ್ರತಿಬಂಧಕವಾದಂತೆ ಸ್ವರ್ಗಕಾರಣವಾದ ಕರ್ಮಕ್ಕೂ ಪ್ರತಿಬಂಧಕವಾಗಬೇಕಲ್ಲವೆ? ಇಲ್ಲ. ಜ್ಞಾನಪ್ರತಿಬಂಧಕವಾದುದು ಕರ್ಮಕ್ಕೂ ಪ್ರತಿಬಂಧಕವಾಗಬೇಕೆಂಬ ನಿಯಮವಿಲ್ಲ. ಆದ್ದರಿಂದ ಜ್ಞಾನಿಗೆ ಪ್ರಾರಬ್ಧಫಲವಾದ ಸ್ವರ್ಗವು ಸಿಗುತ್ತದೆ.

ಸ್ವರ್ಗರೂಪವಾದ ಫಲಕ್ಕೇ ನೇರವಾಗಿ ಪ್ರಾರಬ್ಧವು ಪ್ರತಿಬಂಧಕವಾಗಿದ್ದರೆ ಸ್ವರ್ಗಹೇತು ಕರ್ಮವೇ ಹುಟ್ಟುವುದಿಲ್ಲ. ಹುಟ್ಟಿದರೂ ಫಲಜನಕವಾಗುವುದಿಲ್ಲ.

ಈ ವ್ಯವಸ್ಥೆಯಲ್ಲಿ ಪ್ರತಿಬದ್ಧಜ್ಞಾನರಾದ ದೇವತೆಗಳು ಜೈಮಿನಿಮತಕ್ಕೆ ವಿಷಯರಾಗುತ್ತಾರೆ. (ಯಾದುಪತ್ಯ)

**ಇಲ್ಲಿಗೆ ಪುರುಷಾರ್ಥಾಧಿಕರಣ ಮುಗಿಯಿತು.**

## ಕಾಮಚಾರಾಧಿಕರಣ

### 'ಓಂ ಸ್ತುತಯೇಽನುಮತಿರ್ವಾ ಓಂ'

**ವಿಕರ್ಮಲೇಪೋ ನೈವಾಸ್ತಿ ಸಮ್ಯಗ್ದೃಷ್ಟಿಮತಾಂ ಕ್ವಚಿತ್ ।**
**ಗುಣಹಾನಿಶ್ಚ ನೈವಾಸ್ತಿ ಬ್ರಹ್ಮಣಸ್ತ್ವವಿಕರ್ಮತಃ ॥ ೪ ॥**

**ದೇವಾನಾಮಪಿ ನ ಪ್ರಾಯಃ ಕ್ಲೃಪ್ತಸ್ಯ ತು ಕಥಂಚನ ।**
**ಪ್ರಾಪ್ತಹ್ರಾಸೋ ಭವೇತ್ ಕ್ವಾಪಿ ಮಹತಾ ತು ವಿಕರ್ಮಣಾ ।**
**ತಥಾಪಿ ತತ್ ಕ್ಲೃಪ್ತಮೇವ ತಸ್ಮಾನ್ನ ನಿಯಮೋಜ್ಝಿತಿಃ ॥ ೫ ॥**

ಸಮ್ಯಗ್‌ದೃಷ್ಟಿಮತಾಂ=ಅಪರೋಕ್ಷಜ್ಞಾನವುಳ್ಳವರಿಗೆ ಕ್ವಚಿತ್=ಎಂದೂ ವಿಕರ್ಮಲೇಪಃ=ಕೆಟ್ಟಕರ್ಮದ ಲೇಪವು ನೈವಾಸ್ತಿ=ಇಲ್ಲವೇ ಇಲ್ಲ.

ಭಾವಾರ್ಥ— ವಸ್ತುತಃ ಈ ಅಧಿಕರಣದಲ್ಲಿ ಜ್ಞಾನಿಗಳಿಗೂ ಸದಸತ್ ಪ್ರವೃತ್ತಿಗಳಿಂದ ಲೇಪವಿದೆ ಎಂದೇ ಹೇಳಲಾಗಿದೆ. ಅದಕ್ಕೆ ಭಿನ್ನವಾಗಿ ಅನುವ್ಯಾಖ್ಯಾನ ಹೇಳುತ್ತಿದೆ. ಆದರೂ ಜ್ಞಾನಿಗಳಿಗೆ ಕರ್ಮದಿಂದ ಕ್ಲೃಪ್ತವಾದ ಆನಂದಹ್ರಾಸ, ಅಶುಚಿತ್ವ, ಮೋಕ್ಷಪ್ರತಿಬಂಧಕತ್ವರೂಪವಾದ ಲೇಪವಿಶೇಷ ಇಲ್ಲ. ಬೇರೆ ವಿಧದ ಲೇಪವಿದೆ, ಎಂದೇ ಅನುವ್ಯಾಖ್ಯಾನದ ಅಭಿಪ್ರಾಯ.

ಬ್ರಹ್ಮಣಸ್ತು=ಬ್ರಹ್ಮದೇವರಿಗಾದರೋ ವಿಕರ್ಮತಃ=ವಿಕರ್ಮವೇ ಇಲ್ಲ, ಇದ್ದರೂ ಅದರಿಂದ ಗುಣಹಾನಿಶ್ಚ=ಮೋಕ್ಷದಲ್ಲಿ ಆನಂದಾದಿಗುಣಹಾನಿಯು ನೈವಾಸ್ತಿ=ಇಲ್ಲವೇ ಇಲ್ಲ. ದೇವಾನಾಮಪಿ=ಬ್ರಹ್ಮೇತರದೇವತೆಗಳಿಗೂ ಪ್ರಾಯಃ=ಹೆಚ್ಚಿನ ಸಂದರ್ಭದಲ್ಲಿ ನ=ವಿಕರ್ಮ ಮತ್ತು ಗುಣಹಾನಿಯು ಇಲ್ಲ. ಕ್ಲೃಪ್ತಸ್ಯತು=ಯಾವ ದೇವತೆಗೆ ಎಷ್ಟು ಆನಂದವು ಸ್ವಭಾವಸಿದ್ಧವೋ ಅದಕ್ಕೆ ಕಥಂಚನ=ಯಾವುದೇ ವಿಕರ್ಮದಿಂದ ಹಾನಿ ಇಲ್ಲ.

ಭಾವಾರ್ಥ— ಬ್ರಹ್ಮದೇವರು ಎಂದೂ ನಿಷಿದ್ಧಕರ್ಮವನ್ನು ಮಾಡುವುದಿಲ್ಲವೆಂದು ಭಾಗವತ ಹೇಳುತ್ತದೆ—

ನ ಭಾರತೀ ಮೇಽಂಗ ಮೃಷೋಪಲಕ್ಷ್ಯತೇ
ನ ಕರ್ಹಿಚಿನ್ಮೇ ಮನಸೋ ಮೃಷಾ ಗತಿಃ ।

ನ ಮೇ ಹೃಷೀಕಾಣಿ ಪತಂತ್ಯಸತ್‌ಪಥೇ
ಯನ್ಮೇ ಹೃದೌತ್ಕಂಠ್ಯವತಾ ಧೃತೋ ಹರಿಃ ॥

ಇದು ಭಾಗವತದಲ್ಲಿ ಬ್ರಹ್ಮವಚನ— ''ನಾನೆಂದೂ ಸುಳ್ಳಾಡುವುದಿಲ್ಲ, ನನ್ನ ಮನಸ್ಸು ವ್ಯರ್ಥವಾದ ಯೋಚನೆಗಳನ್ನು ಮಾಡುವುದಿಲ್ಲ. ಏಕೆಂದರೆ, ನಾನು ಸದಾ ಹೃದಯದಲ್ಲಿ ಹರಿಯನ್ನು ಧ್ಯಾನಿಸುತ್ತಿರುತ್ತೇನೆ. ಆದರಿಂದಾಗಿಯೇ ನನ್ನ ಇಂದ್ರಿಯಗಳು ಕೆಟ್ಟ ದಾರಿಯಲ್ಲಿ ಹೋಗುವುದಿಲ್ಲ''

ದೇವತೆಗಳಿಗೂ ವಿಕರ್ಮದಿಂದ ಗುಣಹಾನಿಯಾದಲ್ಲಿ ಮೋಕ್ಷದಲ್ಲಿ ಅವರ ಕಕ್ಷ್ಯಾತಾರತಮ್ಯಕ್ಕೆ ಹಾನಿಯಾಗುತ್ತದೆ. ಆದ್ದರಿಂದ ವಿಕರ್ಮದಿಂದ ಅವರಿಗೆ ಕ್ಲೃಪ್ತಹಾನಿ ಇಲ್ಲ. ಯೋಗ್ಯತೆಯನ್ನು ಮೀರಿಮಾಡಿದ ಕರ್ಮದಿಂದ ಪ್ರಾಪ್ತವಾದ ಆನಂದಕ್ಕೆ ಮಾತ್ರ ಹಾನಿ. ಇದು ಪ್ರಾಪ್ತಹಾನಿ.

ಕ್ವಾಪಿ ಮಹತಾ ವಿಕರ್ಮಣಾ=ದೇವತೆಗಳು ಅಕಸ್ಮಾತ್ತಾಗಿ ಮಾಡಿದ ದೊಡ್ಡ ದುಷ್ಕರ್ಮದಿಂದ ಪ್ರಾಪ್ತಹ್ರಾಸಃ=ಪ್ರಸಕ್ತವಾದ ಆನಂದಾದಿಗಳ ಹ್ರಾಸವು ಭವೇತ್=ಆಗುತ್ತದೆ. ದೇವತೆಗಳು ತಮ್ಮ ಯೋಗ್ಯತೆಗೆ ಮೀರಿ ಮಾಡಿದ ಸಾಧನೆಗಳಿಂದ ಪ್ರಸಕ್ತವಾದ ಮೋಕ್ಷಾನಂದದ ಹ್ರಾಸವು ಅವರು ಮಾಡಿದ ವಿಕರ್ಮದಿಂದ ಆಗುವುದು.

ಅವರು ಒಂದುವೇಳೆ ವಿಕರ್ಮವನ್ನು ಮಾಡದಿದ್ದರೆ ಯೋಗ್ಯತೆಗೆ ಮೀರಿದ ಆನಂದವನ್ನು ಅನುಭವಿಸುತ್ತಾರೆ. ಆಗ ಶಾಸ್ತ್ರಕ್ಕೆ ಅಪ್ರಾಮಾಣ್ಯವು ಬರಬೇಕಾದೀತು, ಎಂದರೆ, ತಥಾಪಿ=ಯೋಗ್ಯತೆಗೆ ಮೀರಿ ಸಾಧನೆಯನ್ನು ಮಾಡಿದರೂ ತತ್=ಅದಕ್ಕೆ ವಿಘಾತಕವಾದ ದುಷ್ಕರ್ಮವು ಕ್ಲೃಪ್ತಮೇವ= ನಿಯತವಾದುದು. ಅಂತಹವರು ದುಷ್ಕರ್ಮವನ್ನು ಮಾಡಿಯೇ ತೀರುತ್ತಾರೆ. ಅದಕ್ಕೆ ಪ್ರಮಾಣ ಹೀಗಿದೆ—

ಸ್ವಾಧಿಕಾರಾಧಿಕೋ ಯತ್ನಃ ಕಥಂಚಿನ್ನೋಪಪದ್ಯತೇ ।
ಕಥಂಚಿದಧಿಕೇ ಯತ್ನೇ ದೋಷಃ ಕಶ್ಚಿತ್ ಸಮಾಪತೇತ್ ॥

ತಸ್ಮಾತ್=ಆದಕಾರಣ ನ ನಿಯಮೋಜ್ಝಿತಿಃ=ಶ್ರುತ್ಯುಕ್ತ ತಾರತಮ್ಯ ನಿಯಮದ ಭಂಗವಾಗುವುದಿಲ್ಲ.

**ಚಂದ್ರಸುಗ್ರೀವಯೋಶ್ಚೈವ ಸ್ವೋಚ್ಚದಾರಪರಿಗ್ರಹಾತ್ ।**
**ಪ್ರಾಪ್ತಹಾನಿರಭೂನ್ನೈವ ಕ್ಲೃಪ್ತಹಾನಿಃ ಕಥಂಚನ ॥ ೬ ॥**

ಚ=ಹೇಗೆಂದರೆ, ಚಂದ್ರ-ಸುಗ್ರೀವಯೋಶ್ಚೈವ=ಚಂದ್ರ ಮತ್ತು ಸುಗ್ರೀವನಿಗೆ ಸ್ವೋಚ್ಚದಾರಪರಿಗ್ರಹಾತ್=ತಮಗಿಂತ ಕಕ್ಷ್ಯೆಯಲ್ಲಿ ಉತ್ತಮ ರಾದವರ ಸ್ತ್ರೀಸಂಗದಿಂದ ಪ್ರಾಪ್ತಹಾನಿರೇವ ಅಭೂತ್=ಯೋಗ್ಯತೆ ಮೀರಿ ಗಳಿಸಿದ ಆನಂದದ ಹಾನಿಯು ಆಯಿತು. ಕಥಂಚನ=ಯಾವುದೇ ರೀತಿಯಿಂದ ಕ್ಲೃಪ್ತಹಾನಿಃ ನೈವ=ಯೋಗ್ಯತೆಗೆ ಅನುರೂಪವಾದ ಆನಂದದ ಹಾನಿಯು ಆಗಲಿಲ್ಲ.

ಚಂದ್ರನು ಬೃಹಸ್ಪತ್ಯಾಚಾರ್ಯರ ಪತ್ನಿಯಾದ ತಾರೆಯನ್ನು ಪರಿಗ್ರಹಿಸಿದ. ಸುಗ್ರೀವನು(ಸೂರ್ಯ) ಇಂದ್ರಾವತಾರಿಯಾದ ವಾಲಿಯ ಪತ್ನಿ ತಾರೆಯನ್ನು ಪರಿಗ್ರಹಿಸಿದ. ಇದರಿಂದ ಅವರಿಗೆ ಪ್ರಾಪ್ತಹಾನಿ ಯಾಯಿತು.

**ಹ್ರಾಸೋಽಪಿ ಮಾನುಷಾದೀನಾಮಾನಂದಸ್ಯ ವಿಕರ್ಮಣಾ ॥**
**ಭವೇನ್ಮುಕ್ತೌ ವಿಶೇಷೇಣ ಸ್ವೋಚ್ಚಾನಾಮಪರಾಧತಃ ॥ ೭ ॥**

ವಿಕರ್ಮಣಾ=ನಿಷಿದ್ಧಕರ್ಮದಿಂದ ಮಾನುಷಾದೀನಾಂ=ಮನುಷ್ಯ-ಋಷ್ಯಾದಿಗಳ ಆನಂದಸ್ಯ=ಆನಂದಕ್ಕೆ ಮುಕ್ತಿಯಲ್ಲಿ ಹ್ರಾಸೋಽಪಿ= ಕ್ಲೃಪ್ತ ವಾದ ಆನಂದದ ಅನಭಿವ್ಯಕ್ತಿಯೂ ಭವೇತ್=ಆಗುತ್ತದೆ. ಸ್ವೋತ್ತಮಾನಾಂ= ತನಗಿಂತ ಉತ್ತಮರಾದವರಿಗೆ ಅಪರಾಧಾತ್=ಅಪರಾಧ ಮಾಡುವ ಕಾರಣದಿಂದ ವಿಶೇಷೇಣ=ವಿಶೇಷವಾಗಿ ಆನಂದದ ಹ್ರಾಸವಾಗುತ್ತದೆ.

ಭಾವಾರ್ಥ— ಮನುಷ್ಯಾದಿಗಳಿಗೆ ದುಷ್ಕರ್ಮದಿಂದಾಗಿ ಕ್ಲೃಪ್ತವಾದ ಆನಂದಕ್ಕೇ ಹ್ರಾಸವಿದೆ. ಅಂದರೆ, ಅವನಿಗೆ ಎಷ್ಟು ಆನಂದವನ್ನು ಅನುಭವಿಸುವ ಯೋಗ್ಯತೆ ಇದೆಯೋ ಅದೂ ಪೂರ್ಣವಾಗಿ ಸಿಗುವುದಿಲ್ಲ. ಸಿಗುವುದಿಲ್ಲವೆಂದರೆ ಅಭಿವ್ಯಕ್ತಿಯಾಗುವುದಿಲ್ಲ. ಸ್ವರೂಪಕ್ಕೆ ಪ್ರಕೃತಿಯ ಆವರಣವು ನಾಶವಾಗಿದ್ದರೂ ಈಶ್ವರೇಚ್ಛಾರೂಪವಾದ ಆವರಣವು ಇರುವುದರಿಂದ ಅದರಿಂದಾಗಿ ಆನಂದದ ಅನಭಿವ್ಯಕ್ತಿ ಇದೆ. ಅದರಲ್ಲೂ

ಸ್ವೋತ್ತಮಾಪರಾಧವನ್ನು ಮಾಡಿದರೆ ಆನಂದದ ಅಧಿಕಾಂಶವು ವ್ಯಕ್ತವಾಗದೇ ಉಳಿಯುತ್ತದೆ.

**ಜ್ಞಾನೋತ್ತರಸ್ಯ ಪಾಪಸ್ಯ ಚತುರ್ಥೇऽಲೇಪ ಉಚ್ಯತೇ ॥ ೮ ॥**
**ಅಶುಚಿತ್ವಾದಿಕಂ ಚಾ(ತ)ಸ್ಯ ನ ಭವೇದಿತಿ ತತ್ಫಲಮ್ ।**
**ಅತ್ರ ಜ್ಞಾನಫಲಸ್ಯೈವ ಮುಕ್ತೇರ್ನಿಯತತೋಚ್ಯತೇ ॥ ೯ ॥**

ಚತುರ್ಥೇ=ನಾಲ್ಕನೆಯ ಅಧ್ಯಾಯದ ತದಧಿಗಮಾಧಿಕರಣದಲ್ಲಿ (4-1-8) ಜ್ಞಾನೋತ್ತರಸ್ಯ ಪಾಪಸ್ಯ=ಜ್ಞಾನಬಂದಮೇಲೆ ಮಾಡಿದ ಪಾಪದ ಅಲೇಪಃ=ಲೇಪಾಭಾವವು ಉಚ್ಯತೇ=ಹೇಳಲ್ಪಟ್ಟಿದೆ. ಅಂದರೆ, ಅಸ್ಯ=ಜ್ಞಾನಿಗೆ ತತ್‌ಫಲಂ=ಪಾಪದ ಫಲವಾದ ಅಶುಚಿತ್ವಾದಿಕಂ=ಅಶುದ್ಧಿ-ಅಸಂಭಾಷಣಾದಿಗಳು ನ ಭವೇದಿತಿ=ಆಗುವುದಿಲ್ಲ, ಎಂದರ್ಥ. ಅತ್ರ=ಕಾಮಕಾರಾಧಿಕರಣದಲ್ಲಿ ಜ್ಞಾನಫಲಸ್ಯೈವ=ಜ್ಞಾನಫಲವಾದ ಮುಕ್ತೇಃ=ಮೋಕ್ಷಕ್ಕೆ ನಿಯತತಾ=ನಿಯಮವು ಅಂದರೆ ಜ್ಞಾನಿ ಮಾಡಿದ ಯಾವುದೇ ಕರ್ಮಗಳು ಮೋಕ್ಷಕ್ಕೆ ಪ್ರತಿಬಂಧಕಗಳಾಗುವುದಿಲ್ಲ ಎಂದು ಹೇಳಲಾಗಿದೆ.

**ಭಾವಾರ್ಥ**— ಈ ಅಧಿಕರಣದ 'ಕಾಮಕಾರೇಣ ಚೈಕೇ' ಎಂಬ ಸೂತ್ರದಲ್ಲಿ ಜ್ಞಾನೋತ್ತರದಲ್ಲಿ ಮಾಡಿದ ಕರ್ಮದ ನಂಟು ಜ್ಞಾನಿಗೆ ಇಲ್ಲ, ಎನ್ನಲಾಗಿದೆ. ''ಉಪಮರ್ದಂ ಚ'' ಎಂಬ ಸೂತ್ರದಲ್ಲಿ ಜ್ಞಾನಕ್ಕಿಂತ ಮೊದಲು ಮಾಡಿದ ಕರ್ಮಕ್ಕೆ ಜ್ಞಾನದಿಂದ ವಿನಾಶವನ್ನು ಹೇಳಲಾಗಿದೆ. ಈ ಎರಡೂ ವಿಷಯಗಳು ಚತುರ್ಥಾಧ್ಯಾಯದ ''ತದಧಿಗಮೇ ಉತ್ತರ ಪೂರ್ವಾಘಯೋಃ ಅಶ್ಲೇಷವಿನಾಶೌ'' ಎಂಬ ಸೂತ್ರದಲ್ಲಿ ಹೇಳಲಾಗುತ್ತದೆ. ಆದ್ದರಿಂದ ಪೌನರುಕ್ತ್ಯ, ಎಂದು ಆಕ್ಷೇಪ.

ಕೆಲವು ದುಷ್ಕರ್ಮಗಳನ್ನು ಮಾಡಿದವರೊಂದಿಗೆ ಮಾತನಾಡಬಾರದು, ಸಹಪಂಕ್ತಿಯಲ್ಲಿ ಊಟಮಾಡಬಾರದು ಎಂದೆಲ್ಲ ನಿಷೇಧಗಳಿವೆ. ಆದರೆ, ಜ್ಞಾನಿಗಳು ಅಂತಹ ಅಪರಾಧ ಮಾಡಿದರೂ ಈ ದೋಷಗಳು ಅವರಿಗೆ ಅಂಟುವುದಿಲ್ಲ. ಇದು ಚತುರ್ಥಾಧ್ಯಾಯದ ತಾತ್ಪರ್ಯ.

ಇಲ್ಲಿ ಅಪರೋಕ್ಷಜ್ಞಾನಿಗೆ ಯಾವುದೇ ರೀತಿಯ ಕರ್ಮಗಳು ಮೋಕ್ಷಕ್ಕೆ

ವಿಘಾತಕಗಳಾಗುವುದಿಲ್ಲ. ಅವನಿಗೆ ಮೋಕ್ಷವು ನಿಶ್ಚಿತ, ಎಂದು ಹೇಳುವುದೇ ತಾತ್ಪರ್ಯ. ಆದ್ದರಿಂದ ಪುನರುಕ್ತಿ ಇಲ್ಲ.

**ಪ್ರಾರಬ್ಧಕರ್ಮಜಸ್ಯೈವ ವಿಷಭಕ್ಷಾನ್ಮೃತೇರಿವ ।**
**ಪ್ರಾಪ್ತಸ್ಯಾಪ್ಯನಿವರ್ತ್ಯಸ್ಯ ಕಿಂಚಿದ್ ಭುಕ್ತಸ್ಯ ಸಂವಿದಾ ।**
**ಉಪಮರ್ದ ಇಹ ಪ್ರೋಕ್ತೋ ದೇವಾದೀನಾಂ ಯಥಾಕ್ರಮಮ್॥೧೦॥**

ಪ್ರಾರಬ್ಧಕರ್ಮಜಸ್ಯೈವ=ಪ್ರಾರಬ್ಧಕರ್ಮದಿಂದಲೇ ಹುಟ್ಟಿರುವ ಅನಿವರ್ತ್ಯಸ್ಯ ಪ್ರಾಪ್ತಸ್ಯಾಪಿ=ಅಪರಿಹಾರ್ಯವಾಗಿ ಪ್ರಸಕ್ತಿ ಇದ್ದರೂ ಕಿಂಚಿತ್ ಭುಕ್ತಸ್ಯ=ಅಲ್ಪ ಅನುಭವಿಸಿರುವ ಪಾಪಕ್ಕೆ ಸಂವಿದಾ=ಜ್ಞಾನದಿಂದ ವಿಷಭಕ್ಷಾತ್ ಮೃತೇರಿವ=ವಿಷಭಕ್ಷಣದಿಂದ ಪ್ರಸಕ್ತವಾದ ಮರಣದಂತೇ ಉಪಮರ್ದಃ=ಫಲದ ವಿನಾಶವು ಇಹ ಪ್ರೋಕ್ತಃ='ಉಪಮರ್ದಂ ಚ' ಎಂಬ ಸೂತ್ರದಲ್ಲಿ ಹೇಳಲ್ಪಟ್ಟಿದೆ. ಈ ಉಪಮರ್ದವು ದೇವಾದೀನಾಂ=ದೇವತೆಗಳು ಮನುಷ್ಯರು ಮುಂತಾದವರಿಗೆ ಯಥಾಕ್ರಮಮ್=ಅವರವರ ಯೋಗ್ಯತಾನುಸಾರವಾಗಿ ಆಗುವುದು.

ಭಾವಾರ್ಥ— ತದಧಿಗಮಾಧಿಕರಣಕ್ಕೂ 'ಉಪಮರ್ದಂ ಚ' ಎಂಬ ಸೂತ್ರಕ್ಕೂ ಪುನರುಕ್ತಿ ಇಲ್ಲ, ಎಂದು ಇಲ್ಲಿ ತೋರಿಸಲಾಗಿದೆ— ತದಧಿಗಮಾಧಿ ಕರಣದಲ್ಲಿ ಜ್ಞಾನದಿಂದ ಸಂಚಿತಕರ್ಮದ ನಾಶವನ್ನು ಹೇಳಲಾಗಿದೆ. ಇಲ್ಲಿ ಪ್ರಾರಬ್ಧಕರ್ಮದ ಫಲಭೋಗದ ಅಭಾವವನ್ನು ಹೇಳಲಾಗಿದೆ.

ಅವಶ್ಯಮನುಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಮ್ ॥

ಎಂದು ಪ್ರಮಾಣವು ಹೇಳುವಂತೆ ಪ್ರಾರಬ್ಧಕರ್ಮದ ಫಲವನ್ನು ಅನುಭವಿಸಿಯೇ ತೀರಬೇಕು. ಆದರೂ ಅಪರೋಕ್ಷಜ್ಞಾನಿಗಳು ಪ್ರಾರಬ್ಧ ಕರ್ಮದ ಫಲವನ್ನು ಅಜ್ಞಾನಿಗಳಂತೆ ಪೂರ್ಣವಾಗಿ ಅನುಭವಿಸುವುದಿಲ್ಲ. ಸ್ವಲ್ಪ ಅನುಭವಿಸಿದ ಕೂಡಲೇ ಭಗವಂತ ಅವರ ಕರ್ಮವನ್ನು ನಾಶಮಾಡುತ್ತಾನೆ.

ನ ವೈ ಜನೋ ಜಾತು ಕಥಂಚನಾವ್ರಜೇತ್
ಮುಕುಂದಸೇವ್ಯನ್ಯವದಂಗ ಸಂಸೃತಿಮ್ ॥ (ಭಾಗ-1-5-19)

ಎಂದು ಭಾಗವತವು ಇದನ್ನು ನಿರೂಪಿಸಿದೆ. 'ಅವಶ್ಯಂ ಅನುಭೋಕ್ತವ್ಯಂ' ಎಂಬ ನಿಯಮವು 'ವಿಷಕುಡಿದವನು ಸಾಯಲೇಬೇಕು' ಎಂದಂತೆ. ಅದರ ಅರ್ಥ— ವಿಷಕುಡಿದವನಿಗೆ ಮರಣವು ಅನಿವಾರ್ಯ ವಾಗಿ ಪ್ರಸಕ್ತವಾಗುತ್ತದೆ, ಎಂದಿಷ್ಟೇ. ಅವನು ಸಾಯಲೇಬೇಕು ಎಂದು ಅರ್ಥವಲ್ಲ. ಮಂತ್ರ-ಔಷಧಗಳಿಂದ ಸಾವನ್ನು ತಪ್ಪಿಸಬಹುದು. ಅದರಂತೆ ಪ್ರಾರಬ್ಧ ಕರ್ಮದ ಫಲಭೋಗವು ಅವಶ್ಯಪ್ರಸಕ್ತ ಎಂದು 'ಅವಶ್ಯಂ ಅನುಭೋಕ್ತವ್ಯಂ' ಎನ್ನುವ ನಿಯಮದ ಅರ್ಥ. ಪ್ರಸಕ್ತವಾದ ಅಂತಹ ದುಃಖವನ್ನು ಜ್ಞಾನವು ಪರಿಹರಿಸುತ್ತದೆ. ಇದು ಉಪಮರ್ದ. ಉಪಮರ್ದ ಎಂದರೆ ಕರ್ಮದ ಒಂದಂಶಕ್ಕೆ ನಾಶ ಎಂದು ತಿಳಿಯಬಾರದು. ಅದಕ್ಕೆ ಅಂಶಗಳಿಲ್ಲ. ಕರ್ಮದ ಫಲಭೋಗವು ಅತಿಯಾಗಿದ್ದರೆ ಜ್ಞಾನಿಗಳಿಗೆ ಅಲ್ಪವೇ ಅನುಭವ ಬರುವಂತೆ ಮಾಡಿ ಅದರಿಂದ ಕರ್ಮದ ನಾಶವನ್ನು ಭಗವಂತ ಮಾಡುತ್ತಾನೆ, ಎಂದರ್ಥ. ಈ ರೀತಿಯ ಉಪಮರ್ದವು ಜ್ಞಾನಿಗಳ ಅಪರೋಕ್ಷಜ್ಞಾನಕ್ಕೆ ಅನುಗುಣವಾಗಿ ಆಗುತ್ತದೆ. ಅಪರೋಕ್ಷಜ್ಞಾನ ಅಧಿಕ ವಾಗಿದ್ದರೆ ಅಧಿಕೋಪಮರ್ದ, ಕಡಿಮೆ ಇದ್ದರೆ ಅಲ್ಪೋಪಮರ್ದ.

**ಸರ್ವಾತ್ಮನಾ ತ್ವಭೋಗೋ ಹಿ ಪ್ರಾರಬ್ಧಸ್ಯೈವ ಕರ್ಮಣಃ ।**
**ನ ಬ್ರಹ್ಮದರ್ಶಿನೋಽಪಿ ಸ್ಯಾತ್ ಫಲಹ್ರಾಸಸ್ತು ವಿದ್ಯತೇ ॥ ೧೧ ॥**

ಬ್ರಹ್ಮದರ್ಶಿನೋಽಪಿ=ಬ್ರಹ್ಮಜ್ಞಾನಿಗಳಿಗೂ ಪ್ರಾರಬ್ಧಸ್ಯ ಕರ್ಮಣಃ= ಪ್ರಾರಬ್ಧಕರ್ಮದ ಸರ್ವಾತ್ಮನಾ=ಪೂರ್ಣವಾಗಿ ಅಭೋಗಃ=ಭೋಗವಾಗ ದಿರುವುದು ನ ಸ್ಯಾದೇವ=ಆಗುವುದೇ ಇಲ್ಲ, ಆದರೂ ಫಲಹ್ರಾಸಸ್ತು ವಿದ್ಯತೇ=ಫಲದ ಹ್ರಾಸವು ಇದೆ.

ಭಾವಾರ್ಥ— ಕೆಲವರು, ಪ್ರಾರಬ್ಧಕರ್ಮವೂ ಸಂಚಿತಕರ್ಮದಂತೆ ಜ್ಞಾನದಿಂದಲೇ ನಾಶವಾಗುತ್ತದೆ. ಬ್ರಹ್ಮಜ್ಞಾನದ ಮಹಿಮೆ ಅಚಿಂತ್ಯವಾದುದ ರಿಂದ ಇದು ಸಾಧ್ಯ. ಇದರಿಂದ 'ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ ಕುರುತೇ' ಎಂಬ ಗೀತಾವಾಕ್ಯದಲ್ಲಿರುವ ಸರ್ವಶಬ್ದಕ್ಕೆ 'ಪ್ರಾರಬ್ಧಬಿಟ್ಟು ಉಳಿದೆಲ್ಲ ಕರ್ಮಗಳು' ಎಂದು ಸಂಕುಚಿತಾರ್ಥವನ್ನು ಮಾಡುವ ಅಗತ್ಯವಿಲ್ಲ.

ಪ್ರಾರಬ್ಧವೂ ಸೇರಿದಂತೆ ಎಲ್ಲ ಕರ್ಮಗಳೂ ಜ್ಞಾನದಿಂದ ನಾಶವಾಗುತ್ತವೆ. 'ನಾಭುಕ್ತಂ ಕ್ಷೀಯತೇ ಕರ್ಮ—ಭೋಗವಿಲ್ಲದೆ ಕರ್ಮನಾಶ ಇಲ್ಲ' ಎನ್ನುವ ನಿಯಮ ಅಜ್ಞಾನಿಗಳಿಗೆ ಮಾತ್ರ ಅನ್ವಯಿಸುತ್ತದೆ, ಎನ್ನುತ್ತಾರೆ. ಇದು ಸರಿಯಲ್ಲ. ಹೀಗಾದರೆ ಬ್ರಹ್ಮಜ್ಞಾನ ಬಂದಕೂಡಲೇ ಪ್ರಾರಬ್ಧದ ಫಲವಾದ ಶರೀರವೂ ನಾಶವಾಗಿ ಜ್ಞಾನಿಗಳಿಗೆ ಕೂಡಲೇ ಮೋಕ್ಷವಾಗಬೇಕು. ಆದರೆ, ಜ್ಞಾನಿಗಳೂ ಸಂಸಾರದಲ್ಲಿ ಇರುವುದು ಕಂಡಿದೆ. ಜ್ಞಾನಿಗಳು ಜನರನ್ನು ಅನುಗ್ರಹಿಸುವುದಕ್ಕಾಗಿ ಪ್ರಾರಬ್ಧಕರ್ಮ ನಾಶವಾಗಿದ್ದರೂ ಸ್ವೇಚ್ಛೆಯಿಂದ ಸಂಸಾರದಲ್ಲಿ ಉಳಿಯುತ್ತಾರೆ, ಎನ್ನುವುದೂ ಸರಿಯಲ್ಲ. ಅಪರೋಕ್ಷ ಜ್ಞಾನಿಯಾದ ಇಂದ್ರ, ದುರ್ವಾಸರ ಶಾಪದಿಂದ ಐಶ್ವರ್ಯವನ್ನು ಕಳೆದುಕೊಂಡ. ಇದನ್ನು ಪ್ರಾರಬ್ಧಫಲ ಎಂದೇ ಹೇಳಬೇಕು, ಸ್ವೇಚ್ಛೆಯಲ್ಲ. ಅಣಿಮಾಂಡವ್ಯ ಋಷಿಗಳಿಗೆ ವಸಿಷ್ಠರು ಶಪಿಸಿದ್ದರಿಂದ ಅವರಿಗೆ ಶೂಲಕ್ಕೇರಿದ ದುಃಖ ಬಂತು. ಇದೂ ಪ್ರಾರಬ್ಧಫಲ. ಇದಲ್ಲದೆ 'ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇ' ಎಂಬ ಶ್ರುತಿಯು ಪ್ರಾರಬ್ಧಕರ್ಮವಿರುವುದ ರಿಂದಾಗಿಯೇ ಮೋಕ್ಷವಾಗಿಲ್ಲ ಎನ್ನುತ್ತದೆ. ಆದ್ದರಿಂದ ಪ್ರಾರಬ್ಧಕರ್ಮಕ್ಕೆ ಜ್ಞಾನದಿಂದ ನಾಶವಿಲ್ಲ. ಭೋಗದಿಂದಲೇ ನಾಶ.

ಇನ್ನು ಕೆಲವರು ಪ್ರಾರಬ್ಧವನ್ನು ಪೂರ್ಣವಾಗಿ ಅನುಭವಿಸಿಯೇ ಮುಗಿಸಬೇಕೆನ್ನುತ್ತಾರೆ. ಇದೂ ಸರಿಯಲ್ಲ. ಪ್ರಾರಬ್ಧಕ್ಕೆ ಉಪಮರ್ದವನ್ನು ಪ್ರಮಾಣಗಳಲ್ಲಿ ಹೇಳಲಾಗಿದೆ—

ಓಮಿತ್ಯುಚ್ಚಾರ್ಯ ಅಂತರಿಮಮಾತ್ಮಾನಮ್ ಅಭಿಪಶ್ಯ
ಉಪಮೃದ್ಯ ಪುಣ್ಯಂ ಚ ಪಾಪಂ ಚ
ಕಾಮಮಾಚರಂತ ಬ್ರಹ್ಮಾನುವ್ರಜಂತಿ ॥

**ಸರ್ವಾತ್ಮನಾ ಫಲಹ್ರಾಸೋ ಯದಿ ನಾರಬ್ಧಕರ್ಮಣಃ ।**
**ಸ್ಯಾತ್ ಕಾಮ್ಯವಿಧಿವೈಯರ್ಥ್ಯಮಿತ್ಯುಕ್ತನಿಯಮೋ ಭವೇತ್ ।**
**ಏವಮಾದ್ಯಪಿ ಸಂಪ್ರೋಕ್ತಂ ತಂತ್ರಭಾಗವತೇ ಸ್ಫುಟಮ್ ॥ ೧೨ ॥**

ಆರಬ್ಧಕರ್ಮಣಃ=ಪ್ರಾರಬ್ಧಕರ್ಮಕ್ಕೆ ಯದಿ=ಒಂದುವೇಳೆ

ಸರ್ವಾತ್ಮನಾ=ಯಾವುದೇ ರೀತಿಯಿಂದ ಫಲಹ್ರಾಸಃ ನ=ಫಲದ ಹ್ರಾಸವು ಇಲ್ಲವೆಂದಾದಲ್ಲಿ ಕಾಮ್ಯವಿಧಿವೈಯರ್ಥ್ಯಂ ಸ್ಯಾತ್=ಬ್ರಹ್ಮಹತ್ಯಾದಿ ಪಾಪ ದಿಂದ ಬಂದ ರೋಗಕ್ಕೆ ಪ್ರಾಯಶ್ಚಿತ್ತವನ್ನು ಹೇಳುವ ವಿಧಿವಾಕ್ಯಗಳು ವ್ಯರ್ಥವಾದಾವು. ಇತಿ=ಈ ಕಾರಣದಿಂದ ಉಕ್ತನಿಯಮಃ ಭವೇತ್= ಪ್ರಾರಬ್ಧಕರ್ಮಕ್ಕೂ ಹ್ರಾಸವಿದೆ, ಎನ್ನುವ ನಿಯಮವು ಸರಿಯಾಗಿದೆ. ತಂತ್ರಭಾಗವತದಲ್ಲಿ ಈ ವಿಷಯವನ್ನು ಹೇಳಲಾಗಿದೆ.

**ವಿವರಣೆ—** ಬ್ರಹ್ಮಹತ್ಯೆಯ ಫಲ ಕ್ಷಯರೋಗ. ಪ್ರಾಯಶ್ಚಿತ್ತದಿಂದ ಈ ರೋಗವು ಪರಿಹಾರವಾಗುತ್ತದೆ. ಇದರಿಂದ ಪ್ರಾರಬ್ಧಕರ್ಮಕ್ಕೂ ನಾಶವಿದೆ, ಎಂದು ತಿಳಿಯುತ್ತದೆ.

**ಆಕ್ಷೇಪ—** ಪ್ರಾಯಶ್ಚಿತ್ತಮಾಡುವುದರಿಂದ ಬ್ರಹ್ಮಹತ್ಯೆಯ ಫಲವಾದ ಕ್ಷಯ–ರೋಗದ ನಿವೃತ್ತಿಯಾಗುವುದಿಲ್ಲ. ಅದನ್ನು ಅನುಭವಿಸಲೇಬೇಕು. ಆದರೆ, ಅದರಿಂದಾಗಿ ಬ್ರಹ್ಮಹತ್ಯೆಯಿಂದ ಬಂದಿರುವ ಪಾಪವು ಪರಿಹಾರ ವಾಗುತ್ತದೆ. ಆದ್ದರಿಂದ ಪ್ರಾಯಶ್ಚಿತ್ತ ವ್ಯರ್ಥವಲ್ಲ.

**ಸಮಾಧಾನ—** ಪ್ರಾಯಶ್ಚಿತ್ತ ಮಾಡಿದರೆ, ಪಾಪ ಪರಿಹಾರವಾದರೂ ಪಾಪದ ಫಲವಾದ ಕ್ಷಯರೋಗವು ಪರಿಹಾರವಾಗದಿದ್ದಲ್ಲಿ ಪ್ರಾಯಶ್ಚಿತ್ತವು ವ್ಯರ್ಥವಾದಂತೆ. ಆದ್ದರಿಂದ ಪಾಪದ ಫಲವಾದ ರೋಗ ನಿವೃತ್ತಿಯಾದರೆ ಮಾತ್ರ ಪ್ರಾಯಶ್ಚಿತ್ತವು ಸಾರ್ಥಕವಾಗುತ್ತದೆ, ಇಲ್ಲದಿದ್ದರೆ ವ್ಯರ್ಥ.

**ಪೂರ್ವಪಕ್ಷ—** ದುಷ್ಕರ್ಮಗಳಲ್ಲಿ ಎರಡು ವಿಧವಾದ ಶಕ್ತಿಗಳಿವೆ— ರೋಗಾದಿ ಫಲ ಜನನಶಕ್ತಿ ಮತ್ತು ಕ್ಷಯದಂತಹ ರೋಗಗಳು ಬಂದಾಗ ಅಂತಹವನೊಂದಿಗೆ ಸಹಪಂಕ್ತಿ ಭೋಜನವೇ ಮೊದಲಾದ ವ್ಯವಹಾರವನ್ನು ತಡೆಯುವ ಶಕ್ತಿ. ಪ್ರಾಯಶ್ಚಿತ್ತಮಾಡಿಕೊಂಡಾಗ ರೋಗವು ನಿವೃತ್ತಿಯಾಗ ದಿದ್ದರೂ ಆ ರೋಗಿಯ ಜೊತೆಗೆ ವ್ಯವಹಾರಗಳನ್ನು ನಡೆಸಬಹುದಾಗಿದೆ. ಇದರಿಂದಾಗಿ ಪ್ರಾಯಶ್ಚಿತ್ತವು ಸಾರ್ಥಕ.

**ಸಮಾಧಾನ—** ಅಂತೂ ಏನಾದರೊಂದು ಪಾಪಫಲದ ಪರಿಹಾರ ವಂತೂ ಪ್ರಾಯಶ್ಚಿತ್ತದಿಂದ ಆಗುತ್ತದೆ. ಇದರಿಂದ ಕರ್ಮಫಲಕ್ಕೆ 'ಉಪಮರ್ದ'ವನ್ನು ಹೇಳಿದಂತೆಯೇ ಆಗುತ್ತದೆ.

ವಸ್ತುತಃ ಹೀಗೆ ಹೇಳುವುದು ಸರಿಯಲ್ಲ. ಏಕೆಂದರೆ, ಎಲ್ಲ ಪಾಪಗಳಿಗೂ ಮತ್ತೊಬ್ಬರೊಂದಿಗೆ ವ್ಯವಹಾರ ನಡೆಸಬಾರದಂತಹ ಫಲವಿಲ್ಲ. ಸಣ್ಣಪುಟ್ಟ ರೋಗಗಳು ಅಥವಾ ದಾರಿದ್ರ್ಯಾದಿಗಳು ಫಲವಾಗಿರುತ್ತವೆ. ಅಂತಹ ತೊಂದರೆಗಳಿದ್ದಾಗ ಪ್ರಾಯಶ್ಚಿತ್ತ ಮಾಡಿಕೊಂಡರೆ ರೋಗನಿವೃತ್ತಿಯಾಗು ತ್ತದೆ. ಆದ್ದರಿಂದ ಪ್ರಾರಬ್ಧಫಲವೂ ಪ್ರಾಯಶ್ಚಿತ್ತದಿಂದ ನಾಶವಾಗುತ್ತದೆ, ಎಂದು ಹೇಳಲೇಬೇಕು. ಅಲ್ಲದೆ ಕೆಲವು ಪಾಪಗಳಿಗೆ ಮರಣಾಂತ ಪ್ರಾಯಶ್ಚಿತ್ತವಿದೆ. ಅಂತಹ ಪ್ರಾಯಶ್ಚಿತ್ತಕ್ಕೆ ವ್ಯವಹಾರಯೋಗ್ಯತ್ವಸಿದ್ಧಿಯು ಫಲವಾಗಲು ಸಾಧ್ಯವಿಲ್ಲ. ಆದ್ದರಿಂದ ಜನ್ಮಾಂತರದಲ್ಲಿ ಅಂತಹ ಪಾಪಫಲದ ಉಪಮರ್ದವೇ ಫಲ.

ಆಕ್ಷೇಪ— ಮರಣಾಂತಪ್ರಾಯಶ್ಚಿತ್ತ ಸಂದರ್ಭದಲ್ಲೂ ಪಿತೃಕಾರ್ಯ ದಲ್ಲಿ ಅಧಿಕಾರ ಸಿದ್ಧಿಯೇ ಫಲ.

ಸಮಾಧಾನ— ಅಂತಹ ಪ್ರಾಯಶ್ಚಿತ್ತವನ್ನು ಯತಿಗಳು ಮಾಡಿದಾಗ ಅದು ವ್ಯರ್ಥವಾಗಬೇಕಾದೀತು. ಅವರಿಗೆ ಶ್ರಾದ್ಧಾಧಿಕಾರವಿಲ್ಲ. ಆದ್ದರಿಂದ ಪ್ರಾಯಶ್ಚಿತ್ತದಿಂದ ಕರ್ಮಫಲದ ಹ್ರಾಸವನ್ನೇ ಹೇಳಬೇಕಾಗುತ್ತದೆ.

**ಮುಕ್ತಾನಂದತಾರತಮ್ಯ**

**ತಾರತಮ್ಯಂ ಫಲೇ ನೋ ಚೇದ್ ಬ್ರಹ್ಮಾದೀನಾಂ ಕಥಂ ಶ್ರುತಿಃ ।**
**ಅವೃಜಿನೋಽಕಾಮಹತ ಇತಿ ಮುಕ್ತಿಂ ನಿಗದ್ಯ ಚ ।**
**ಆನಂದತಾರತಮ್ಯಂ ಚ ತೇಷಾಂ ಬ್ರೂಯಾತ್ ಪೃಥಕ್ಪೃಥಕ್ ॥೧೩॥**

ಬ್ರಹ್ಮಾದೀನಾಂ=ಬ್ರಹ್ಮಾದಿಗಳಿಗೆ ಫಲೇ=ಮೋಕ್ಷಫಲದಲ್ಲಿ ತಾರ ತಮ್ಯಂ=ತರತಮಭಾವವು ನೋ ಚೇತ್=ಇಲ್ಲವೆಂದಾದರೆ ಶ್ರುತಿಃ= ವಾಜಸನೇಯಶ್ರುತಿ ಮತ್ತು ತೈತ್ತಿರೀಯ ಶ್ರುತಿಯು 'ಅವೃಜಿನಃ=ಪಾಪ ರಹಿತನು ಅಕಾಮಹತಃ=ಅಮೋಘವಾದ ಇಚ್ಛೆ ಇರುವವನು' ಎಂದು ಮುಕ್ತಿಂ ನಿಗದ್ಯ ಚ=ಮೋಕ್ಷವನ್ನು ಹೇಳಿ ಪೃಥಕ್ ಪೃಥಕ್= ಮನುಷ್ಯೋತ್ತಮರು, ಗಂಧರ್ವರು ಇವರನ್ನು ಪ್ರತ್ಯೇಕ ಪ್ರತ್ಯೇಕವಾಗಿ ಉಲ್ಲೇಖಿಸಿ ತೇಷಾಂ=ಅವರಿಗೆ ಆನಂದತಾರತಮ್ಯಂ=ಆನಂದದಲ್ಲಿ ತಾರತಮ್ಯವನ್ನು ಕಥಂ ಬ್ರೂಯಾತ್=ಹೇಗೆ ಹೇಳೀತು!

ಭಾವಾರ್ಥ— ಬೃಹದಾರಣ್ಯಕೋಪನಿಷತ್ತಿನಲ್ಲಿ, ತೈತ್ತಿರೀಯೋಪನಿಷತ್ತಿನಲ್ಲಿ ಅವೃಜಿನಃ, ಅಕಾಮಹತಃ, ಶ್ರೋತ್ರಿಯಃ ಇಂತಹ ಮುಕ್ತ ಲಕ್ಷಣಗಳನ್ನು ಹೇಳಿ ಮನುಷ್ಯಾಂತಬ್ರಹ್ಮಪರ್ಯಂತ ಜೀವರಿಗೆ ಆನಂದದಲ್ಲಿ ತಾರತಮ್ಯವನ್ನು ಹೇಳಲಾಗಿದೆ. ಅದೂ 'ಮುಕ್ತರಲ್ಲಿ ತಾರತಮ್ಯವಿದೆ' ಎಂದು ಸಾಮಾನ್ಯವಾಗಿ ಹೇಳದೆ ಮನುಷ್ಯೋತ್ತಮರು, ಗಂಧರ್ವರು ಹೀಗೆ ವರ್ಗೀಕರಿಸಿ ಒಬ್ಬರಿಂದ ಮತ್ತೊಬ್ಬರಿಗೆ ಶತಗುಣೋತ್ತರಾನಂದವನ್ನು ಹೇಳಲಾಗಿದೆ. ಇದರಿಂದ ಶ್ರುತಿಗೆ ತಾರತಮ್ಯದ ವಿಷಯದಲ್ಲಿ ತಾತ್ಪರ್ಯವಿದೆ, ಎಂದು ಸಿದ್ಧವಾಗುತ್ತದೆ.

**ಸಂಸಾರ ಏವ ಚೇದೇತತ್ ತಾರತಮ್ಯಂ ನ ಮುಖ್ಯತಃ ।**
**ಅಕಾಮಹತಶಬ್ದಾರ್ಥೋಽವೃಜಿನತ್ವಂ ಚ ನೋ ಭವೇತ್ ॥ ೧೪ ॥**

ಏತತ್ತಾರತಮ್ಯಂ=ಶ್ರುತಿಯಲ್ಲಿ ಹೇಳಿರುವ ಈ ತಾರತಮ್ಯವು ಸಂಸಾರೇ ಏವ=ಸಂಸಾರಾವಸ್ಥೆಯಲ್ಲಿ ಮಾತ್ರ, ನ ಮುಖ್ಯತಃ=ಮುಖ್ಯವಾದ ಮೋಕ್ಷಾಖ್ಯಪುರುಷಾರ್ಥದಲ್ಲಿ ಅಲ್ಲ, ಇತಿ ಚೇತ್=ಹೀಗೆಂದರೆ, ಅಕಾಮಹತ ಶಬ್ದಾರ್ಥಃ=ಅಕಾಮಹತಃ ಎಂದು ಉಪನಿಷತ್ತಿನಲ್ಲಿ ಮನುಷ್ಯಾದಿಗಳಿಗೆ ಹೇಳಿರುವ ವಿಶೇಷಣ, ಅವೃಜಿನತ್ವಂ ಚ=ನಿಷ್ಪಾಪತ್ವವಿಶೇಷಣವೂ ನೋ ಭವೇತ್=ಯುಕ್ತವಾಗಲಿಕ್ಕಿಲ್ಲ.

ಭಾವಾರ್ಥ— ಈ ತಾರತಮ್ಯ ಅಮುಕ್ತಾವಸ್ಥೆಯಲ್ಲಿ ಮಾತ್ರ. ಮೋಕ್ಷದಶಾದಲ್ಲಿ ಅಲ್ಲ, ಎನ್ನುವುದು ಯುಕ್ತವಲ್ಲ. ಏಕೆಂದರೆ, ಶ್ರುತಿಯಲ್ಲಿ ಮನುಷ್ಯರು, ಗಂಧರ್ವರು, ಹೀಗೆ ಒಂದೊಂದು ವರ್ಗಕ್ಕೂ ಅವೃಜಿನ, ಅಕಾಮಹತ ಎಂಬ ವಿಶೇಷಣಗಳನ್ನು ಕೊಡಲಾಗಿದೆ. ಈ ವಿಶೇಷಣಗಳು ಮುಕ್ತರಿಗೆ ಮಾತ್ರ ಅನ್ವಯಿಸುತ್ತವೆ. ಅಮುಕ್ತರಿಗಲ್ಲ. ಆದ್ದರಿಂದ ಇಲ್ಲಿ ಮುಕ್ತವರ್ಗದ ಆನಂದ ತಾರತಮ್ಯವನ್ನೇ ಹೇಳಲಾಗಿದೆ.

**'ಕಾಮಸ್ಯ ಯತ್ರಾಪ್ತಾಃ ಕಾಮಾಸ್ತತ್ರ ಮಾಮಮೃತಂ ಕೃಧಿ ' ॥ ೧೫ ॥**

**ಇತಿ ಯಲ್ಲಕ್ಷಣಂ ಮುಕ್ತೇಃ ಶ್ರುತಿರಾಹ ಬಲೀಯಸೀ ।**
**ಕಾಮಾಹತಿಃ ಕುತೋಽನ್ಯತ್ರ ಪ್ರಾಪ್ತಕಾಮಸ್ಯ ಸಾ ಭವೇತ್ ॥ ೧೬ ॥**

**ಅಪ್ರಯತ್ನೇನ ಕಾಮಾನಾಮವಾಪ್ತಿಃ ಸಾ ಯದಾ ಭವೇತ್ ।**
**ತದೈವಾಕಾಮಹತತಾ ಕುತ ಏವಾನ್ಯಥಾ ಭವೇತ್ ।**
**ಚೇತನಸ್ಯ ತ್ವಸುಪ್ತಸ್ಯ ಕುತ್ರ ದೃಷ್ಟಾ ಹ್ಯಕಾಮತಾ ॥ ೧೭ ॥**

''ಯತ್ರ=ಯಾವ ಲೋಕದಲ್ಲಿ ಕಾಮಸ್ಯ=ಇಚ್ಛೆಯ ಕಾಮಾಃ= ವಿಷಯಗಳು ಆಪ್ತಾಃ=ಪೂರ್ಣವಾಗುತ್ತವೋ ತತ್ರ=ಅಂತಹ ಲೋಕದಲ್ಲಿ ಮಾಂ=ನನ್ನನ್ನು ಅಮೃತಂ=ಮುಕ್ತನನ್ನಾಗಿ ಕೃಧಿ=ಮಾಡು'' ಇತಿ=ಹೀಗೆ ವಾಯುದೇವನಲ್ಲಿ ಮಾಡುವ ಪ್ರಾರ್ಥನಾಮಂತ್ರದಲ್ಲಿ ಯತ್=ಯಾವ ಕಾರಣದಿಂದ ಬಲೀಯಸೀ ಶ್ರುತಿಃ=ಈ ಪ್ರಬಲವಾದ ಶ್ರುತಿಯು ಆಪ್ತಕಾಮತ್ವವನ್ನು ಮುಕ್ತೇಃ=ಮೋಕ್ಷದ ಲಕ್ಷಣಂ=ಲಕ್ಷಣವನ್ನಾಗಿ ಆಹ= ಹೇಳುತ್ತದೆಯೋ ಆದ್ದರಿಂದ ಅನ್ಯತ್ರ=ಮುಕ್ತರಲ್ಲದವರಲ್ಲಿ ಕಾಮಾಹತಿಃ= ಅಕಾಮಹತತ್ವವು ಕುತಃ=ಹೇಗೆ ಇದ್ದೀತು? ಸಾ=ಆ ಅಕಾಮಹತಿಯು= (ಕಾಮದಿಂದ ಪೀಡೆ ಇಲ್ಲದಿರುವುದು) ಆಪ್ತಕಾಮಸ್ಯ=ಬಯಸಿದ್ದೆಲ್ಲ ಇಡೇರಿದವನಲ್ಲಿ ಭವೇತ್=ಇದ್ದೀತು. ಅಪ್ರಯತ್ನೇನ=ಪ್ರಯತ್ನ ಇಲ್ಲದೆಯೇ ಕಾಮಾನಾಂ=ಬಯಸಿದ ವಸ್ತುಗಳ ಅವಾಪ್ತಿಃ=ಪ್ರಾಪ್ತಿಯು ಯದಾ ಭವೇತ್=ಯಾವಾಗ ಆಗುವುದೋ ತದೈವ=ಆಗಲೇ ಸಾ ಅಕಾಮಹತತಾ= ಅಕಾಮಹತಶಬ್ದವಾಚ್ಯವಾದ ಕಾಮಹತತ್ವಾಭಾವವು ಭವೇತ್=ಆದೀತು. ಅನ್ಯಥಾ=ಅದಿಲ್ಲದಿದ್ದರೆ ಕುತ ಏವ ಭವೇತ್=ಹೇಗೆ ತಾನೇ ಬಂದೀತು. ಅಸುಪ್ತಸ್ಯಚೇತನಸ್ಯ= ನಿದ್ದೆ ಮಾಡದಿರುವ ಚೇತನನಿಗೆ ಅಕಾಮತಾ=ಆಪ್ತ ಕಾಮತ್ವವು ಕುತ್ರ ದೃಷ್ಟಾ=ಎಲ್ಲಿ ಕಂಡಿದೆ?

ಭಾವಾರ್ಥ— ಆನಂದತಾರತಮ್ಯವನ್ನು ಹೇಳುವ ಶ್ರುತಿಯಲ್ಲಿ 'ಅಕಾಮಹತಃ' ಎಂಬ ವಿಶೇಷಣವು ಮನುಷ್ಯಾದಿಗಳಿಗೆ ಇದೆ. ಆ ವಿಶೇಷವು ಮುಕ್ತರಿಗೆ ಮಾತ್ರ ಅನ್ವಯಿಸುತ್ತದೆ, ಅಮುಕ್ತರಿಗಲ್ಲ. ಶ್ರುತಿಯೇ ಆ ವಿಶೇಷಣದ ಅರ್ಥವನ್ನು ಹೇಳುತ್ತದೆ. ಇದು ಭಕ್ತನು ವಾಯುದೇವನಲ್ಲಿ ಮಾಡುವ ಪ್ರಾರ್ಥನೆ—

ಕಾಮಸ್ಯ ಯತ್ರಾಪ್ತಾಃ ಕಾಮಾಃ ತತ್ರ ಮಾಮೃತಂ ಕೃಧಿ ।

ಇದರರ್ಥ—ಯಾವ ಸ್ಥಾನದಲ್ಲಿ ಬಯಸಿದ್ದೆಲ್ಲ ಅಪ್ರಯತ್ನವಾಗಿ ಈಡೇರುವುದೋ ಅಂತಹ ಲೋಕದಲ್ಲಿ ನನ್ನನ್ನು ಅಮೃತನನ್ನಾಗಿ ಮಾಡು, ಎಂದು. ಇಂತಹ ಅಕಾಮಹತಿಯನ್ನು ಆನಂದತಾರತಮ್ಯಶ್ರುತಿಯಲ್ಲಿ ಹೇಳಿರುವುದರಿಂದ ಅದು ಅಮುಕ್ತತಾರತಮ್ಯವಲ್ಲ, ಮುಕ್ತರ ತಾರತಮ್ಯ.

ಕಾಮದಿಂದಾಗುವ ತೊಂದರೆ ಕಾಮಹತಿ. ಬಯಕೆ ನೂರಾರಿದ್ದು ಅದು ಇಡೇರದಿರುವುದು ಕಾಮಹತಿ. ಬಯಸಿದ್ದೆಲ್ಲ ನಿರಾಯಾಸವಾಗಿ ಈಡೇರು ವುದೇ ಅಕಾಮಹತಿ. ಸಂಸಾರದಲ್ಲಿ ನಿದ್ರೆಯಲ್ಲಿರುವಾಗ ಕಾಮಗಳೇ ಇಲ್ಲದಿರುವುದರಿಂದ ಅಕಾಮಹತಿ ಇರಬಹುದು. ಆದರೆ, ಆಗಲೂ ಕಾಮಗಳು ಸುಪ್ತವಾಗಿರುತ್ತವೆ. ಎದ್ದಕೂಡಲೇ ಮತ್ತೆ ಚಿಗುರುತ್ತವೆ. ಆದರೆ, ಸದಾ ಅಕಾಮಹತಿ ಮೋಕ್ಷದಲ್ಲಿ ಮಾತ್ರ.

**ಅವ್ಯಕ್ತಿರೇವ ಕಾಮಾನಾಂ ನ ನಾಶೋ ಮೋಹಸುಪ್ತಯೋಃ ।**
**ಯತ್ಕಾಮಃ ಸ್ವಾಪಮಾಪ್ನೋತಿ ತದೇವೋತ್ಥಾಪಿತಃ ಪುನಃ ।**
**ಅವಶೋಽಪಿ ವ್ಯಾಹರತಿ ಕುತಃ ಸುಪ್ತಾವಕಾಮತಾ ॥ ೧೮ ॥**

ಮೋಹ–ಸುಪ್ತಯೋಃ=ಮೂರ್ಛೆ ಮತ್ತು ಸುಪ್ತಿದಶಾಗಳಲ್ಲಿ ಕಾಮಾನಾಂ=ಇಚ್ಛೆಗಳ ಅವ್ಯಕ್ತಿರೇವ=ಅನಭಿವ್ಯಕ್ತಿ ಮಾತ್ರ ಇರುತ್ತದೆ, ನ ನಾಶಃ=ಸರ್ವಥಾ ಅಭಾವವು ಇರುವುದಿಲ್ಲ. ಏಕೆಂದರೆ, ಯಾವ ವ್ಯಕ್ತಿಯು ಯತ್ಕಾಮಃ=ಯಾವ ಭೋಜನಾದಿ ಇಚ್ಛೆ ಉಳ್ಳವನಾಗಿ ಸ್ವಾಪಮಾಪ್ನೋತಿ= ನಿದ್ದೆ ಹೋಗುತ್ತಾನೋ ಅವನು ಪುನಃ ವ್ಯಾಹರತಿ=ಎದ್ದಮೇಲೆ ಹಸಿವಾಗಿದೆ ಎಂದು, ಹೇಳುತ್ತಾನೆ. ಆದ್ದರಿಂದ ಸುಪ್ತೌ=ನಿದ್ರೆಯಲ್ಲಿ ಅಕಾಮತಾ= ಕಾಮರಹಿತತ್ವವು ಕುತಃ=ಹೇಗೆ ಸಾಧ್ಯ?

ಭಾವಾರ್ಥ— ನಿದ್ರಾವಸ್ಥೆಯಲ್ಲೂ ಕಾಮವು ಸುಪ್ತವಾಗಿರುತ್ತದೆ. ಮಲಗುವ ಮೊದಲು ಹಸಿದಿದ್ದರೆ ಎದ್ದಕೂಡಲೇ ಊಟ ಕೇಳುತ್ತಾನೆ. ಇದರಿಂದ ನಿದ್ರಾಕಾಲದಲ್ಲಿ ಭೋಜನೇಚ್ಛೆಯು ಸುಪ್ತವಾಗಿತ್ತು ಎಂದು ತಿಳಿಯುತ್ತದೆ. ಇದನ್ನು ಯೋಗಸೂತ್ರದಲ್ಲಿ ಪತಂಜಲಿಗಳೂ ಹೇಳುತ್ತಾರೆ— ''ಅವಿದ್ಯಾಕ್ಷೇತ್ರತ್ವಮುತ್ತರೇಷಾಂ ಪ್ರಸುಪ್ತ–ತನು–ವಿಚ್ಛಿನ್ನ–ಉದಾ–

ರಾಣಾಮ್'' ಕಾಮ–ಮೋಹಾದಿಗಳಿಗೆ ಅವಿದ್ಯೆಯೇ ಮೂಲ. ಅವುಗಳು ಅವ್ಯಕ್ತವಾಗಿ, ಸೂಕ್ಷ್ಮತಮವಾಗಿ, ಸುಂದರವಾದ ಅನೇಕ ವಸ್ತುಗಳಲ್ಲಿ ಚದುರಿದವುಗಳಾಗಿ, ಕೆಲವೊಮ್ಮೆ ಅತ್ಯಂತಾಭಿವ್ಯಕ್ತವಾಗಿಯೂ ಹೀಗೆ ನಾಲ್ಕು ಅವಸ್ಥೆಗಳಲ್ಲಿ ಇರುತ್ತವೆ, ಎಂದು.

**ಸರ್ವಕಾಮಾನವಾಪ್ನೋತಿ ಬ್ರಹ್ಮಣಾ ಸಹ ಮುಕ್ತಿಗಃ ।**
**ಪರ್ಯೇತಿ ತತ್ರ ಜಕ್ಷಂಶ್ಚ ಕ್ರೀಡನ್ ರತಿಮವಾಪ್ನುಯಾತ್(ವನ್)**
**॥ ೧೯ ॥**

**ಕಾಮಾನ್ನೀ ಕಾಮರೂಪೀ ಸನ್ನಿಮಾನ್ ಲೋಕಾಂಶ್ಚ ಸಂಚರನ್ ।**
**ಆಸ್ತೇ ಗಾಯನ್ ಸಾಮ ಮುಕ್ತ ಇತ್ಯಾದಿಶ್ರುತಿಸದ್ಬಲಾತ್ ॥ ೨೦ ॥**

**ಅಕಾಮಃ ಸ್ಯಾತ್ ಕಥಂ ಮುಕ್ತಃ 'ಕಾಮಾ ಯೇಽಸ್ಯ ಹೃದಿ ಶ್ರಿತಾಃ' ।**
**ಇತ್ಯಂತಃಕರಣಸ್ಥಾನಾಂ ಕಾಮಾನಾಂ ಮೋಕ್ಷಮೇವ ಹಿ ।**
**ಆಹ ಶ್ರುತಿರ್ಹೃದೀತ್ಯೇವ ನ ಚೇದ್ ವ್ಯರ್ಥಂ ವಿಶೇಷಣಮ್ ॥ ೨೧ ॥**

ಮುಕ್ತಿಗಃ=ಮುಕ್ತಿಯಲ್ಲಿರುವವನು ಬ್ರಹ್ಮಣಾ ಸಹ=ಚತುರ್ಮುಖ ಬ್ರಹ್ಮನೊಂದಿಗೆ ಸರ್ವಾನ್ ಕಾಮಾನ್=ಎಲ್ಲ ಅಭೀಷ್ಟಗಳನ್ನೂ ಆಪ್ನೋತಿ= ಹೊಂದುತ್ತಾನೆ. ಇದು—

ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ।
ಬ್ರಹ್ಮಣಾ ವಿಪಶ್ಚಿತೇತಿ ॥ ಎಂಬ ತೈತ್ತಿರೀಯ ಶ್ರುತಿಯ ಅರ್ಥ.

ತತ್ರ=ಮೋಕ್ಷದಲ್ಲಿ ಸಃ=ಮುಕ್ತನು ಜಕ್ಷನ್=ತಿನ್ನುತ್ತಾ ಕ್ರೀಡನ್=ಆಡುತ್ತಾ ಪರ್ಯೇತಿ=ಸುತ್ತಾಡುತ್ತಾನೆ. ರತಿಂ=ಸುಖವನ್ನು ಅವಾಪ್ನುಯಾತ್= ಹೊಂದುತ್ತಾನೆ. ಇದು,

'ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ'' ಎಂಬ ಶ್ರುತಿಯ ಅರ್ಥ. ಕಾಮಾನ್ನೀ=ಬೇಕಾದ್ದನ್ನು ತಿನ್ನುತ್ತಾ, ಕಾಮರೂಪೀ ಸನ್=ಬಯಸಿದ ರೂಪವನ್ನು ಧರಿಸುತ್ತಾ ಇಮಾನ್ ಲೋಕಾಂಶ್ಚ ಸಂಚರನ್=ಮುಕ್ತ

ಲೋಕಗಳಲ್ಲಿ ಸಂಚರಿಸುತ್ತಾ ಮುಕ್ತಃ=ಮುಕ್ತನು ಸಾಮ ಗಾಯನ್= ಸಾಮವನ್ನು ಹಾಡುತ್ತಾ ಆಸ್ತೇ=ಇರುತ್ತಾನೆ. ಇದರಿಂದ,

ಸ ಇಮಾನ್ ಲೋಕಾನ್ ಕಾಮಾನ್ನೀ ಕಾಮರೂಪ್ಯನುಸಂಚರನ್ ।
ಏತತ್ ಸಾಮ ಗಾಯನ್ನಾಸ್ತೇ ॥

ಎಂಬ ತೈತ್ತಿರೀಯ ಶ್ರುತಿಯು ಸೂಚಿತವಾಗಿದೆ.

ಇತ್ಯಾದಿಶ್ರುತಿಬಲಾತ್=ಈ ಮೊದಲಾದ ಶ್ರುತಿಗಳ ಆಧಾರದಿಂದ ಮುಕ್ತನೂ ಸಕಾಮನೆಂದು ತಿಳಿಯುವುದರಿಂದ ಮುಕ್ತಃ=ಮುಕ್ತನು ಅಕಾಮಃ=ನಿಷ್ಕಾಮನು ಕಥಂ ಸ್ಯಾತ್=ಹೇಗಾದಾನು? ಅವನಿಗೂ ಕಾಮನೆ ಗಳಿವೆ.

ಈ ಶ್ರುತಿಗಳಿಂದ ಮುಕ್ತನಿಗೂ ವಿಷಯಭೋಗಗಳು ತಿಳಿದು ಬರುವುದ ರಿಂದ ಅವನು ನಾವು ನಿದ್ದೆಯಲ್ಲಿದ್ದಂತೆ ಸರ್ವಥಾ ಕಾಮರಹಿತನಲ್ಲ, ಕಿಂತು, ಅವನ ಕಾಮಿತಗಳೆಲ್ಲವೂ ದೊರಕುವುದರಿಂದ ಅವನು ಆಪ್ತಕಾಮ. ಹಾಗಾದರೆ,

''ಯದಾ ಸರ್ವೇ ಪ್ರಮುಚ್ಯಂತೇ ಕಾಮಾ ಯೇಽಸ್ಯ ಹೃದಿ ಶ್ರಿತಾಃ ॥''

ಎಂಬ ಶ್ರುತಿಯಲ್ಲಿ ಸಕಲಕಾಮಗಳ ವಿನಾಶವೇ ಮೋಕ್ಷ ಎಂದಿರುವುದು ಹೇಗೆ? ಅದಕ್ಕೆ ಉತ್ತರ—

ಕಾಮಾ ಯೇಽಸ್ಯ ಹೃದಿ ಶ್ರಿತಾಃ, ಇತಿ='ಕಾಮಾ ಯೇಽಸ್ಯ' ಎಂಬ ಶ್ರುತಿಯಲ್ಲಿ ಅಂತಃಕರಣಸ್ಥ ಕಾಮಾನಾಂ=ಅಂತಃಕರಣದಲ್ಲಿರುವ ಕಾಮನೆಗಳ ಮೋಕ್ಷಮೇವ=ವಿನಾಶವನ್ನೇ ಶ್ರುತಿಃ ಆಹ=ಶ್ರುತಿಯು ಹೇಳುತ್ತದೆ. ನಚೇತ್= ಇಲ್ಲವಾದರೆ ಹೃದಿ ಇತಿ ವಿಶೇಷಣಮೇವ=ಶ್ರುತಿಯಲ್ಲಿ ಕಾಮಕ್ಕೆ ಕೊಟ್ಟಿರುವ ಹೃದಿ ಎಂಬ ವಿಶೇಷಣವೇ ವ್ಯರ್ಥಂ=ನಿರರ್ಥಕ.

ಭಾವಾರ್ಥ— ಕಾಮಗಳು ಎರಡುವಿಧ–ಅಂತಃಕರಣವಿಕಾರರೂಪ ವಾದ ಕಾಮ, ಸ್ವರೂಪಭೂತವಾದ ಕಾಮ, ಎಂದು. ಜ್ಞಾನ ಬಂದಾಗ ಸಂಸಾರದಲ್ಲಿದ್ದ ಅಂತಃಕರಣಗತವಾದ ಕಾಮವು ನಾಶವಾಗುತ್ತದೆ. ಆದ್ದರಿಂದ ಶ್ರುತಿಯಲ್ಲಿ 'ಕಾಮಾ ಯೇಽಸ್ಯ ಹೃದಿ ಶ್ರಿತಾಃ' ಎಂದು ಕಾಮಕ್ಕೆ 'ಹೃದಿ ಶ್ರಿತಾಃ' ಎಂಬ ವಿಶೇಷಣವು ಸಾರ್ಥಕ. ಎಲ್ಲಾ ಕಾಮಗಳೂ ನಾಶವಾಗುವುದಾದಲ್ಲಿ

'ಕಾಮಾಃ ಪ್ರಮುಚ್ಯಂತೇ' ಎಂದಿಷ್ಟೇ ಹೇಳಿದರೆ ಸಾಕಿತ್ತು. ಹೃದಿ ಎಂಬ ವಿಶೇಷಣವು ವ್ಯರ್ಥ. ಹೃದಿ ಎಂಬ ವಿಶೇಷಣದಿಂದಾಗಿ ಮನೋಗತ ಕಾಮನೆಗಳು ಮಾತ್ರ ನಾಶವಾಗುತ್ತವೆ, ಎಂದು ತಿಳಿಯುತ್ತದೆ.

**ಹೃದ್ಯೇವ ತೇಷಾಂ ಶ್ರಯಣಮಿತಿ ಪಕ್ಷೋ ನ ಭಾಸತೇ ।**
**ಮುಕ್ತಾನಾಂ ಕಾಮಿತಾಮಾಹ ಪೃಥಕ್‌ಛಾಖಾಸು ಯಚ್ಛ್ರುತಿಃ ॥ ೨೨ ॥**

**ಅತೋಽಕಾಮಹತತ್ವಂ ತು ಮುಕ್ತಾನಾಮೇವ ಮುಖ್ಯತಃ ।**
**ಮುಖ್ಯಾರ್ಥಸ್ಯ ವೃಥಾ ತ್ಯಾಗೋ ಮಾಯಿನಾಮೇವ ಭೂಷಣಮ್ ॥ ೨೩ ॥**

ತೇಷಾಂ=ಇಚ್ಛಾದಿಗುಣಗಳಿಗೆ ಹೃದ್ಯೇವ=ಅಂತಃಕರಣದಲ್ಲೇ ಶ್ರಯಣಂ=ಆಶ್ರಯತ್ವ ಇತಿ=ಹೀಗೆಂಬ ಪಕ್ಷಃ=ಸಿದ್ಧಾಂತವು ನ ಶೋಭತೇ= ಉಚಿತವಾದುದಲ್ಲ. ಯತ್=ಏಕೆಂದರೆ, ಶ್ರುತಿಃ=ವೇದವು ಪೃಥಕ್ ಶಾಖಾಸು=ವಿಭಿನ್ನ ಶಾಖೆಗಳಲ್ಲಿ ಮುಕ್ತಾನಾಂ=ಮುಕ್ತರಿಗೆ ಕಾಮಿತಾಂ=ಇಚ್ಛೆ ಇರುವಿಕೆಯನ್ನು ಆಹ=ಹೇಳುತ್ತದೆ.

ಅತಃ=ಆದ್ದರಿಂದ ಅಕಾಮಹತತ್ವಂ=ಕಾಮಪ್ರಯುಕ್ತ ತೊಂದರೆಗಳಿಲ್ಲದಿರುವಿಕೆಯು ಮುಖ್ಯತಃ=ನಿರುಪಚರಿತವಾಗಿ ಮುಕ್ತಾನಾಮೇವ=ಮುಕ್ತರಿಗೆ ಮಾತ್ರ. ಮುಖ್ಯಾರ್ಥಸ್ಯ=ಶ್ರುತಿಯ ಮುಖ್ಯಾರ್ಥದ ವೃಥಾ ತ್ಯಾಗಃ= ಕಾರಣವಿಲ್ಲದೆ ಪರಿತ್ಯಾಗವು ಮಾಯಿನಾಮೇವ=ಮಾಯಾವಾದಿಗಳಿಗೆ ಮಾತ್ರವೇ ಭೂಷಣಂ=ಶೋಭೆಯು.

ಭಾವಾರ್ಥ— ಇಚ್ಛಾದಿಗುಣಗಳು ಅಂತಃಕರಣಧರ್ಮಗಳು ಎಂದು 'ಕಾಮಃ ಸಂಕಲ್ಪೋ ವಿಚಿಕಿತ್ಸಾ ಹ್ರೀರ್ಧೀರ್ಭೀಃ...ಸರ್ವಂ ಮನ ಏವ' ಎಂಬ ಶ್ರುತಿ ಹೇಳುತ್ತದೆ. ಅವುಗಳು ಆತ್ಮಸ್ವರೂಪಭೂತವಾದ ಗುಣಗಳು, ಎನ್ನುವುದಕ್ಕೆ ಆಧಾರಗಳಿಲ್ಲ. ಆದ್ದರಿಂದ 'ಕಾಮಾ ಯೇಽಸ್ಯ ಹೃದಿ ಶ್ರಿತಾಃ' ಎಂಬ ಶ್ರುತಿಯಲ್ಲಿ 'ಹೃದಿ ಶ್ರಿತಾಃ' ಎಂಬ ವಿಶೇಷದಿಂದ ಕಾಮಗಳಿರುವ ಆಶ್ರಯವನ್ನು ತಿಳಿಸಲಾಗಿದೆ. ಅದು ಇತರ ವ್ಯಾವರ್ತಕವಿಶೇಷಣವಲ್ಲ,

ಎಂದು ಆಕ್ಷೇಪ. ಆದ್ದರಿಂದ ಮನೋಗತವಾದ ಕಾಮನೆಗಳನ್ನು ಬಿಟ್ಟು ಬೇರೆ ಕಾಮನೆಗಳೇ ಇಲ್ಲ.

ಈ ಆಕ್ಷೇಪವು ಸರಿಯಲ್ಲ. 'ಸ ಯದಿ ಪಿತೃಲೋಕಕಾಮೋ ಭವತಿ' ಇತ್ಯಾದಿಯಾಗಿ ಮುಕ್ತರಿಗೆ ಕಾಮಾದಿಗಳಿವೆ, ಎನ್ನುವ ಶ್ರುತಿಗಳು ಅನೇಕ ಶಾಖೆಗಳಲ್ಲಿ ಇವೆ. ಇವು ನಿರವಕಾಶಶ್ರುತಿಗಳು. ಇದರಂತೆ, ಕಾಮಾದಿಗಳು ಅಂತಃಕರಣಧರ್ಮಗಳು ಎನ್ನುವ ಶ್ರುತಿಯೂ ಇದೆ. ಆದರೆ, ಅಂತಃಕರಣ ಮೋಕ್ಷದಲ್ಲಿ ಇಲ್ಲ. ಆದ್ದರಿಂದ ಅಂತಃಕರಣಧರ್ಮವಲ್ಲದೆ ಸ್ವರೂಪಭೂತ ವಾದ ಇಚ್ಛಾದಿಗಳೂ ಇವೆ, ಎನ್ನುವುದು ಅನಿವಾರ್ಯ. ಅಂತಹ ಇಚ್ಛಾದಿಗಳು ಮುಕ್ತರಿಗೂ ಇವೆ. ಅವರು ಇಚ್ಛೆಮಾಡಿದ ಎಲ್ಲಾ ವಿಷಯಗಳೂ ಅವರಿಗೆ ದೊರಕುತ್ತವೆ. ಆದ್ದರಿಂದ ಅವರು ಅಕಾಮಹತರು. ಅಂತಹ ವಿಶೇಷಣಗಳನ್ನು ಕೊಟ್ಟಿರುವುದರಿಂದ ಆನಂದತಾರತಮ್ಯಶ್ರುತಿ ಮುಕ್ತರನ್ನೇ ಹೇಳುತ್ತದೆ. ಮುಕ್ತರಲ್ಲಿ ಆನಂದ ತಾರತಮ್ಯಕ್ಕೆ ಆ ಶ್ರುತಿಯು ಪ್ರಮಾಣವಾಗುತ್ತದೆ.

ಅಕಾಮಹತತ್ವವು ಮುಖ್ಯವಾದುದು ಮುಕ್ತರಿಗೆ ಮಾತ್ರ. ಆದರೂ ಅಮುಕ್ತಬ್ರಹ್ಮಾದಿಗಳೂ ಕಾಮನಿಮಿತ್ತಕವಾದ ಹೆಚ್ಚಿನ ಪೀಡೆಯಿಂದ ಮುಕ್ತ ರಾಗಿದ್ದಾರೆ. ಇದರಿಂದಾಗಿ ಅವರೂ ಅಮುಖ್ಯತಃ ಅಕಾಮಹತರು. ಆದ್ದರಿಂದ ಅಮುಕ್ತರಾದ ಬ್ರಹ್ಮಾದಿಗಳ ತಾರತಮ್ಯವನ್ನೇ ಈ ಶ್ರುತಿ ಹೇಳುತ್ತದೆ, ಎನ್ನುವುದು ಸರಿಯಲ್ಲ. ಅಕಾಮಹತಪದದ ಮುಖ್ಯಾರ್ಥರಾದ ಮುಕ್ತರ ತಾರತಮ್ಯವನ್ನೇ ಶ್ರುತಿಯು ಹೇಳುತ್ತದೆ ಎನ್ನಲು ಬರುವಾಗ ನ್ಯಾಯವಿದರು, ಅಮುಖ್ಯವಾದ ಅಕಾಮಹತತ್ವವನ್ನು ಅಂಗೀಕರಿಸಿ ಅಮುಕ್ತರ ತಾರತಮ್ಯ ವನ್ನು ಹೇಳಲಾಗಿದೆ, ಎಂದು ವೃಥಾ ಕಲ್ಪಿಸಬಾರದು. ಮುಖ್ಯಾರ್ಥವಾದ ಸಗುಣಬ್ರಹ್ಮನನ್ನು ಪರಿತ್ಯಜಿಸಿ ನಿರ್ಗುಣಬ್ರಹ್ಮನೇ ವೇದವೇದ್ಯ ಎನ್ನುವ ಮಾಯಾವಾದಿಗಳು ಮಾತ್ರ ಹೀಗೆ ಹೇಳಬಹುದು.

**ಅಪಾಪತ್ವಮದುಃಖತ್ವಂ ಚಾವೃಜಿನತ್ವಮಿಹೋದಿತಮ್ ।**
**ಅಪ್ರಿಯಂ ವೃಜಿನಂ ದುಃಖಮಕಂ ತೋದ ಇತೀರ್ಯತೇ ॥ ೨೪ ॥**

**ತತ್ಕಾರಣತ್ವಾತ್ ಪಾಪಂ ವಾ ವೃಜಿನಂ ನಾಮ ಕಥ್ಯತೇ ।**
**ಇತ್ಯುಕ್ತಃ ಸ್ವಯಮೀಶೇನ ನಾಮಾರ್ಥಃ ಶಬ್ದನಿರ್ಣಯೇ ॥ ೨೫ ॥**

ಇದುವರೆಗೆ 'ಅಕಾಮಹತತ್ವ' ಎಂಬ ಶ್ರುತ್ಯುಕ್ತವಾದ ವಿಶೇಷಣವು ಮುಕ್ತರಿಗೆ ಮುಖ್ಯವಾಗಿ ಅನ್ವಯಿಸುತ್ತದೆ, ಎಂದು ಪ್ರತಿಪಾದಿಸಿ ಶ್ರುತ್ಯುಕ್ತವಾದ 'ಅವೃಜಿನತ್ವ' ವಿಶೇಷಣವೂ ಮುಕ್ತರಿಗೇ ಮುಖ್ಯವಾಗಿ ಅನ್ವಯಿಸುತ್ತದೆ, ಎಂದು ತೋರಿಸುತ್ತಾರೆ—

'ಏಕಂ=ಒಂದೇ ದುಃಖಂ=ದುಃಖವು ಅಪ್ರಿಯಂ ಇತಿ=ಅಪ್ರಿಯವೆಂದೂ ವೃಜಿನಂ ಇತಿ=ವೃಜಿನ ಎಂದೂ, ತೋದಃ ಇತಿ=ತೋದ, ಎಂದೂ ಈರ್ಯತೇ=ಹೇಳಲ್ಪಡುತ್ತದೆ. ತತ್ಕಾರಣತ್ವಾತ್=ಅಂತಹ ದುಃಖಕ್ಕೆ ಕಾರಣವಾದ ಪ್ರಯುಕ್ತ ಪಾಪಂ ವಾ=ಪಾಪವೂ ವೃಜಿನಂ ನಾಮ=ವೃಜಿನ ಎಂದು ಕಥ್ಯತೇ=ಹೇಳಲ್ಪಡುತ್ತದೆ.

ಇತಿ=ಹೀಗೆ ಸ್ವಯಂ ಈಶೇನ=ಸಾಕ್ಷಾತ್ ಈಶರಾದ ವ್ಯಾಸರಿಂದ ಶಬ್ದನಿರ್ಣಯೇ=ಶಬ್ದನಿರ್ಣಯ ಎಂಬ ಗ್ರಂಥದಲ್ಲಿ ನಾಮಾರ್ಥಃ=ವೃಜಿನ ಎಂಬ ನಾಮದ ಅರ್ಥವು ಉಕ್ತಃ=ಹೇಳಲ್ಪಟ್ಟಿದೆ.

**ಭಾವಾರ್ಥ—** ಆನಂದತಾರತಮ್ಯವನ್ನು ಹೇಳುವ ಬೃಹದಾರಣ್ಯಕ ಶ್ರುತಿಯಲ್ಲಿ 'ಯಶ್ಚ ಶ್ರೋತ್ರಿಯೋಽವೃಜಿನೋಽಕಾಮಹತಃ' ಎಂಬ ವಿಶೇಷಣಗಳಿವೆ. ಅವುಗಳಲ್ಲಿ ಅವೃಜಿನ ಎಂದರೆ ಪಾಪರಹಿತ ಎಂದರ್ಥ. ವೃಜಿನಶಬ್ದಕ್ಕೆ ದುಃಖ ಎನ್ನುವ ಅರ್ಥವನ್ನು ವೇದವ್ಯಾಸರೇ ಶಬ್ದನಿರ್ಣಯ ಎಂಬ ಗ್ರಂಥದಲ್ಲಿ ಹೇಳಿದ್ದಾರೆ. ದುಃಖಕ್ಕೆ ಕಾರಣ ಪಾಪ. ಅದೂ ಲಕ್ಷಣಯಾ ವೃಜಿನಶಬ್ದಾರ್ಥ. ಇದೂ ಶಬ್ದನಿರ್ಣಯದಲ್ಲಿದೆ. ಅವೃಜಿನ ಎಂದರೆ ಸರ್ವಥಾ ಪಾಪರಹಿತ ಎಂದರ್ಥ. ಇಂಥಹವನು ಮುಕ್ತನೇ ಆಗಿರಬೇಕು. ಆದ್ದರಿಂದಲೂ ಇಲ್ಲಿ ಮುಕ್ತಾನಂದತಾರತಮ್ಯವನ್ನೇ ಹೇಳಲಾಗಿದೆ.

**ಅಪಾಪತ್ವಂ ಚ ನೈವಾಸ್ತಿ ಯಾವತ್ಸಂಸಾರಮಸ್ಯ ಹಿ ।**
**ಆರಬ್ಧಪಾಪಮಸ್ತ್ಯೇವ ದುಃಖಂ ಚ ಜ್ಞಾನಿನೋಽಪಿ ಹಿ ॥ ೨೬ ॥**

ಯಾವತ್‌ಸಂಸಾರಂ=ಸಂಸಾರ ಇರುವವರೆಗೂ ಅಸ್ಯ=ಜೀವನಿಗೆ ಅಪಾಪತ್ವಂ=ಪಾಪರಾಹಿತ್ಯವು ಹಿ=ಸಂಸಾರಿಯಾಗಿರುವ ಕಾರಣದಿಂದಾ

ಗಿಯೇ, ನೈವಾಸ್ತಿ=ಇಲ್ಲವೇ ಇಲ್ಲ. ಜ್ಞಾನಿನೋಽಪಿ=ಅಪರೋಕ್ಷಜ್ಞಾನಿಗೂ ಆರಬ್ಧಪಾಪಂ=ಪ್ರಾರಬ್ಧರೂಪವಾದ ಪಾಪವು ದುಃಖಂ ಚ=ಆ ಪಾಪದ ಫಲವಾದ ದುಃಖವೂ ಅಸ್ತ್ಯೇವ=ಇದ್ದೇ ಇದೆ.

**ಭಾವಾರ್ಥ—** ಸಂಸಾರದಲ್ಲಿ ಇರುವವರೆಗೆ ಅಪಾಪತ್ವವು ಇರಲಾರದು. ಅಪರೋಕ್ಷಜ್ಞಾನಿಗಳಿಗೂ ಪ್ರಾರಬ್ಧಪಾಪವು ಇದ್ದೇ ಇದೆ. ಆದ್ದರಿಂದ ಅವೃಜಿನಃ=ಪಾಪರಹಿತನು ಮುಕ್ತನಾದವನು ಮಾತ್ರ.

ಕೆಲವರು ಶ್ರೋತ್ರಿಯ – ಅವೃಜಿನ – ಅಕಾಮಹತ ಈ ವಿಶೇಷಣಗಳು ಅಮುಕ್ತವರ್ಗಕ್ಕೇ ಅನ್ವಯಿಸುತ್ತವೆ. ಶ್ರೋತ್ರಿಯನೆಂದರೆ ವೇದಾಧ್ಯಯನ ಸಂಪನ್ನರು. ಮೋಕ್ಷಾಧಿಕಾರಿಗಳು ವೈರಾಗ್ಯಶಾಲಿಗಳಾಗಿರುವುದರಿಂದಾಗಿ ಅಕಾಮರು. ಅಂತಹವರು ಪಾಪಕರ್ಮಗಳನ್ನು ಮಾಡುವುದಿಲ್ಲವಾದುದ ರಿಂದ ಅವೃಜಿನರು. ಈ ವಿಶೇಷಣಗಳು ಮನುಷ್ಯರಿಗಿಂತ ಮನುಷ್ಯ ಗಂಧರ್ವರಲ್ಲಿ ಅಧಿಕವಾದುದರಿಂದ ಮನುಷ್ಯರಿಗಿಂತಲೂ ಗಂಧರ್ವರಿಗೆ ನೂರುಪಟ್ಟು ಹೆಚ್ಚು ಆನಂದ. ಹೀಗೆ, ಅಮುಕ್ತಸಾಧಕರ ಆನಂದದಲ್ಲೇ ತಾರತಮ್ಯವನ್ನು ಈ ಶ್ರುತಿಯಲ್ಲಿ ಹೇಳಲಾಗಿದೆ, ಎನ್ನುತ್ತಾರೆ. ಇದನ್ನು ಮುಂದಿನ ಅನುವ್ಯಾಖ್ಯಾನದಲ್ಲಿ ನಿರಾಕರಿಸಲಾಗಿದೆ—

**ತಸ್ಮಾತ್ತಸ್ಮಾದಕಾಮತ್ವಮಿತಿ ಚಾಶ್ರುತಕಲ್ಪನಾ ।**
**ಅಕಾಮಹತ ಇತ್ಯುಕ್ತೇಃ ಶ್ರುತಹಾನಿರಪಿ ಸ್ಫುಟಾ ॥ ೨೭ ॥**

ತಸ್ಮಾತ್‌ತಸ್ಮಾತ್=ಪೂರ್ವ–ಪೂರ್ವದಲ್ಲಿ ಹೇಳಿದವರಿಗಿಂತಲೂ ಉತ್ತರೋತ್ತರದಲ್ಲಿ ಹೇಳಲ್ಪಟ್ಟವರಿಗೆ ಹೆಚ್ಚುಹೆಚ್ಚು ಅಕಾಮತ್ವಂ=ಅಕಾಮತ್ವ– ಅವೃಜಿನತ್ವ–ಶ್ರೋತ್ರಿಯತ್ವಗುಣಗಳು ಇರುತ್ತವೆ. ಇತಿ=ಹೀಗೆ ಹೇಳುವುದು ಅಶ್ರುತಕಲ್ಪನಾ=ಶ್ರುತಿಯಲ್ಲಿ ಹೇಳದಿರುವ ಕಲ್ಪನೆ, ಎನಿಸುತ್ತದೆ. ಅಕಾಮಹತ ಇತ್ಯುಕ್ತೇಃ=ಶ್ರುತಿಯ 'ಅಕಾಮಹತಃ' ಎಂಬ ಮಾತಿಗೆ ಬದಲಾಗಿ 'ಅಕಾಮ' ಎಂದು ಅಭಿಪ್ರಾಯ ಹೇಳುವುದು ಸ್ಫುಟಾ=ಸ್ಪಷ್ಟವಾದ ಶ್ರುತಹಾನಿಃ= ಶ್ರುತಹಾನಿ ಎಂಬ ದೋಷ.

**ಭಾವಾರ್ಥ—** "ತೇ ಯೇ ಶತಂ ಮಾನುಷಾ ಆನಂದಾಃ ಸ ಏಕೋ

ಮನುಷ್ಯಗಂಧರ್ವಾಣಾಮಾನಂದಃ। ತೇ ಯೇ ಶತಂ ಮನುಷ್ಯ ಗಂಧರ್ವಾಣಾಮಾನಂದಾಃ। ಸ ಏಕೋ ದೇವಗಂಧರ್ವಾಣಾಮಾನಂದಃ, ಶ್ರೋತ್ರಿಯಸ್ಯ ಚಾಕಾಮಹತಸ್ಯ'' ಹೀಗೆ ಉಪನಿಷತ್ತುಗಳು ಮನುಷ್ಯೋತ್ತಮ ರಿಂದ ಆರಂಭಿಸಿ ಬ್ರಹ್ಮದೇವನವರೆಗೆ ಎಲ್ಲರಿಗೂ 'ಶ್ರೋತ್ರಿಯ, ಅಕಾಮಹತ' ಎಂಬ (ಬೃಹದಾರಣ್ಯಕದಲ್ಲಿ ಅವೃಜಿನ) ವಿಶೇಷಣಗಳನ್ನು ಹೇಳಿದೆ. ಆ ವಿಶೇಷಣಗಳು ಒಬ್ಬರಲ್ಲಿ ಹೆಚ್ಚು, ಇನ್ನೊಬ್ಬರಲ್ಲಿ ಕಡಿಮೆ ಎಂದೇನೂ ಅಲ್ಲಿ ಹೇಳಲಾಗಿಲ್ಲ. ಆದರೂ ಅದನ್ನು ಕಲ್ಪನೆ ಮಾಡುವುದು ಅಶ್ರುತಕಲ್ಪನಾದೋಷ.

ಅಷ್ಟೇ ಅಲ್ಲ, ಅಪರೋಕ್ಷಜ್ಞಾನಿಗಳು 'ಅಕಾಮಹತರು' ಎಂದು ಶ್ರುತಿ ಯಲ್ಲಿ ಹೇಳಿದ್ದರೆ ಹತಶಬ್ದವನ್ನು ಬಿಟ್ಟು 'ಅಕಾಮರು' ಎಂದು ಅರ್ಥವನ್ನು ಹೇಳುವುದರಿಂದ ಶ್ರುತಹಾನಿದೋಷ. ಈ ಎರಡು ದೋಷಗಳಿರುವುದರಿಂದ ಪರೋಕ್ತಾರ್ಥವು ಶ್ರುತಿಸಮ್ಮತವಲ್ಲ.

ಮತ್ತೆ ಕೆಲವರು, ಅಕಾಮಹತ ಶಬ್ದಕ್ಕೆ ಹೀಗೆ ಅರ್ಥ ಹೇಳುತ್ತಾರೆ— ಮಾನುಷಾನಂದಕ್ಕಿಂತ ಮನುಷ್ಯಗಂಧರ್ವರ ಆನಂದ ನೂರುಪಟ್ಟು ಹೆಚ್ಚು. ಶ್ರೋತ್ರಿಯಸ್ಯ ಚಾಕಮಹತಸ್ಯ=ಆ ಮನುಷ್ಯಗಂಧರ್ವಪದವಿಯ ಕಾಮನೆ ಇಲ್ಲದ ಅದಕ್ಕಿಂತಲೂ ಉತ್ತಮಪದವಿಯಲ್ಲಿ ಕಾಮನೆ ಇರುವ ಶ್ರೋತ್ರಿಯನಿಗೂ ಮನುಷ್ಯಾನಂದಕ್ಕಿಂತ ಮಿಗಿಲಾದ ಆನಂದವಿದೆ. ಹೀಗೆ ತತ್ತತ್‌ಪದವಿಯಲ್ಲಿರುವವರಿಗೆ ಇರುವ ಆನಂದವು ಆ ಪದವಿಯಲ್ಲಿ ವಿರಕ್ತನಾದ ಶ್ರೋತ್ರಿಯನಿಗೂ ಇದೆ, ಎಂದು ಅರ್ಥ, ಎನ್ನುತ್ತಾರೆ. ಇದನ್ನೂ ಮುಂದಿನ ಅನುವ್ಯಾಖ್ಯಾನದಲ್ಲಿ ನಿರಾಕರಿಸಲಾಗಿದೆ.

**ಕುತ್ರಚಿತ್ ಕಾಮಿನಃ ಪುಂಸಃ ಕಾಮಾಭಾವಾತ್ ಕ್ವಚಿತ್ಕ್ವಚಿತ್ ।**
**ಇಂದ್ರಾದಿಸುಖಭೋಗೋಽಸ್ತೀತ್ಯನುಭೂತಿರ್ಹಿ ಕುಪ್ಯತಿ ॥ ೨೮ ॥**

ಕುತ್ರಚಿತ್=ಯಾವುದೊ ಒಂದು ಇಂದ್ರಾದಿಪದವಿಗಿಂತ ಇತರ ಪದವಿ ಯಲ್ಲಿ ಕಾಮಿನಃ=ಅಭಿಲಾಷೆ ಇರುವವನಿಗೆ ಕ್ವಚಿತ್‌ಕ್ವಚಿತ್=ಇಂದ್ರಾದಿ ಪದವಿಗಳಲ್ಲಿ ಕಾಮಾಭಾವಾತ್=ಕಾಮನೆಯು ಇಲ್ಲದ ಮಾತ್ರದಿಂದ ಇಂದ್ರಾದಿಸುಖಭೋಗೋಽಸ್ತಿ=ಇಂದ್ರಾದಿಗಳಿಗೆ ಸಮಾನವಾದ ಸುಖಾನು

ಭವವು ಇದೆ. ಇತಿ=ಹೀಗೆನ್ನುವುದಕ್ಕೆ ಅನುಭೂತಿರ್ಹಿ ಕುಪ್ಯತಿ=ನಮ್ಮ ಅನುಭವದ ವಿರೋಧ ಇದೆ. ಅಧಿಕಾರವನ್ನು ಬಯಸದವನಿಗೂ ಅಧಿಕಾರಿಯಷ್ಟೇ ಸುಖವಿದೆ, ಎನ್ನುವುದು ಅನುಭವಕ್ಕೆ ವಿರುದ್ಧವಾದ ಸಂಗತಿ. (ಅಲ್ಲದೆ ದೇವತಾಪದವಿಯಲ್ಲಿ ಅಭಿಲಾಷೆ ಇಲ್ಲದವನಿಗಿಂತ ಇಂದ್ರಪದವಿಯಲ್ಲಿ ಅಭಿಲಾಷೆ ಇಲ್ಲದವನ ಆನಂದವು ಹೆಚ್ಚು ಎನ್ನುವುದೂ ಅನುಭವ ವಿರುದ್ಧ.) ಆದ್ದರಿಂದ ಹೀಗೆ ಆನಂದತಾರತಮ್ಯವನ್ನು ಸಮರ್ಥನೆ ಮಾಡುವುದು ಸರಿಯಲ್ಲ.

**ತಸ್ಮಾದಮುಕ್ತಸುಖಗಂ ತಾರತಮ್ಯಂ ಪೃಥಕ್‌ಪೃಥಕ್ ।**
**ಉಕ್ತ್ವಾ ಯಶ್ಚೇತಿ ಮುಕ್ತಾನಾಂ ತಾರತಮ್ಯಂ ಸುಖೇ ಶ್ರುತಿಃ ।**
**ಆಹೇತಿ ಪೇಶಲಂ ತಚ್ಚ ಚ ಶಬ್ದಾದೇವ ಗಮ್ಯತೇ ॥ ೨೯ ॥**

ತಸ್ಮಾತ್=ಆದ್ದರಿಂದ ಅಮುಕ್ತಸುಖಗಂ=ಅಮುಕ್ತರಾದ ಮನುಷ್ಯ-ಗಂಧರ್ವಾದಿಗಳ ಸುಖದಲ್ಲಿರುವ ತಾರತಮ್ಯವನ್ನು ಪೃಥಕ್‌ಪೃಥಕ್= ಅವರವರ ಪಂಗಡಗಳನ್ನು ಉಲ್ಲೇಖಿಸಿ ಉಕ್ತ್ವಾ=ಹೇಳಿ ಯಶ್ಚೇತಿ= ಒಂದೊಂದು ಪ್ರಕರಣದಲ್ಲೂ ಯಶ್ಚ ಎಂದೂ ಶ್ರೋತ್ರಿಯಸ್ಯ ಚಾಕಾಮಹತಸ್ಯ ಎಂಬುದಾಗಿಯೂ ಮುಕ್ತಾನಾಂ=ಮುಕ್ತರಾದ ಮನುಷ್ಯ-ಗಂಧರ್ವಾದಿಗಳ ಸುಖೇ=ಸುಖದಲ್ಲಿ ತಾರತಮ್ಯಂ=ತಾರತಮ್ಯವನ್ನು ಶ್ರುತಿಃ=ಉಪನಿಷತ್ತು ಆಹ=ಹೇಳುತ್ತದೆ ಎನ್ನುವ ವ್ಯಾಖ್ಯಾನವೇ ಪೇಶಲಂ= ಸಮಂಜಸವಾದುದು. ತಚ್ಚ=ಈ ರೀತಿಯ ವ್ಯಾಖ್ಯಾನವಾದರೋ ಚಶಬ್ದಾದೇವ=ಶ್ರುತಿಯ ಆ ಆ ಪ್ರಕರಣದಲ್ಲಿರುವ ಚಶಬ್ದದಿಂದಲೇ ಗಮ್ಯತೇ=ತಿಳಿಯುತ್ತದೆ.

ಭಾವಾರ್ಥ— ತೈತ್ತಿರೀಯದಲ್ಲಿ ತಾರತಮ್ಯಪ್ರಕರಣ ಹೀಗೆ ಬಂದಿದೆ— ಸ ಏಕೋ ಮಾನುಷ ಆನಂದಃ । ತೇ ಯೇ ಶತಂ ಮಾನುಷಾ ಆನಂದಾಃ । ಸ ಏಕೋ ಮನುಷ್ಯಗಂಧಾರ್ವಾಣಾಮಾನಂದಃ, ಶ್ರೋತ್ರಿಯಸ್ಯ ಚಾಕಾಮಹತಸ್ಯ । ತೇ ಯೇ ಶತಂ ಮನುಷ್ಯಗಂಧರ್ವಾಣಾಮಾನಂದಾಃ । ಸ ಏಕೋ ದೇವಗಂಧರ್ವಾಣಾಮಾನಂದಃ । ಶ್ರೋತ್ರಿಯಸ್ಯ ಚಾಕಾಮಹತಸ್ಯ ।

ಹೀಗೆ ಕರ್ಮಜದೇವತೆಗಳು, ಆಜಾನಜದೇವತೆಗಳು, ಬ್ರಹ್ಮದೇವರ ಪರ್ಯಂತ ಆನಂದತಾರತಮ್ಯವನ್ನು ಹೇಳಲಾಗಿದೆ. ಒಂದೊಂದು ಪ್ರಕರಣದಲ್ಲೂ ''ಶ್ರೋತ್ರಿಯಸ್ಯ ಚ ಅಕಾಮಹತಸ್ಯ'' ಎನ್ನುವ ವಿಶೇಷಣ ವಾಚಕಪದಗಳೊಂದಿಗೆ 'ಚ' ಎಂಬ ಶಬ್ದವಿದೆ. ಚಶಬ್ದವು ಸಮುಚ್ಚಯ ದ್ಯೋತಕ. ಸಮುಚ್ಚಯ ಮಾಡುವಾಗ ಭೇದವಿರಬೇಕು. 'ದೇವದತ್ತೋ ಧನಿಕಃ ಯಜ್ಞದತ್ತಶ್ಚ-ದೇವದತ್ತನು ಶ್ರೀಮಂತ, ಯಜ್ಞದತ್ತನೂ ಶ್ರೀಮಂತ'. ಇಲ್ಲಿ ದೇವದತ್ತ ಯಜ್ಞದತ್ತ ಎಂಬ ಇಬ್ಬರು ವಿಭಿನ್ನ ವ್ಯಕ್ತಿಗಳಿಗೆ ಶ್ರೀಮಂತಿಕೆಯನ್ನು ಹೇಳಲಾಗಿದೆ. ಒಬ್ಬನೇ ಇದ್ದಾಗ ಇಂತಹ ಸಮುಚ್ಚಯ ಮಾಡಲಾಗದು— 'ವಸಿಷ್ಠೋ ಬ್ರಹ್ಮಿಷ್ಠಃ, ಅರುಂಧತೀಪತಿಶ್ಚ'' ಇಲ್ಲಿ ವಸಿಷ್ಠನೂ ಅರುಂಧತೀಪತಿಯೂ ಇಬ್ಬರೂ ಅಭಿನ್ನರು. ಆದ್ದರಿಂದ ಚಶಬ್ದವಿರುವ ಈ ವಾಕ್ಯ ತಪ್ಪು. ಇದರಂತೆ ಪ್ರಕೃತ ಉಪನಿಷದ್ವಾಕ್ಯ— ''ಸ ಏಕೋ ಮನುಷ್ಯಗಂಧರ್ವಾಣಾಮಾನಂದಃ, ಶ್ರೋತ್ರಿಯಸ್ಯ ಚಾಕಾಮಹತಸ್ಯ'' ಎಂದಿದೆ. ಶ್ರೋತ್ರಿಯ-ಅಕಾಮಹತ ಎಂಬುದು ಗಂಧರ್ವರಿಗೆ ವಿಶೇಷಣವಾಗಿದ್ದಲ್ಲಿ 'ಯೇ ಶ್ರೋತ್ರಿಯಾ ಅಕಾಮಹತಾಃ' ಎಂದಿರಬೇಕು. ಹಾಗಿರದೆ 'ಚ' ಶಬ್ದವಿರುವುದರಿಂದ ಸಂಸಾರಿಗಂಧರ್ವರಿಗಿಂತ ಭಿನ್ನರಾದ ಮುಕ್ತಗಂಧರ್ವರು ಈ ವಾಕ್ಯದಿಂದ ಪ್ರತಿಪಾದ್ಯರು. ಅಮುಕ್ತಗಂಧರ್ವರಿಗೂ ಶತಗುಣೋತ್ತರಾನಂದ, ಮುಕ್ತಗಂಧರ್ವರಿಗೂ ಶತಗುಣೋತ್ತರಾನಂದ ಎಂದು ಚಶಬ್ದದಿಂದ ತಿಳಿಯುತ್ತದೆ. ಬೃಹದಾರಣ್ಯ ಕೋಪನಿಷತ್ತಿನ ನಾಲ್ಕನೆಯ ಅಧ್ಯಾಯದಲ್ಲಿ ಮುಕ್ತರ ಆನಂದತಾರತಮ್ಯವನ್ನು ಹೇಳುವ ವಾಕ್ಯಗಳು ಹೀಗಿವೆ—

''ಅಥ ಯೇ ಶತಂ ಕರ್ಮದೇವಾನಾಮಾನಂದಾಃ, ಸ ಏಕ ಆಜಾನಜ ದೇವಾನಾಮಾನಂದೋ ಯಶ್ಚ ಶ್ರೋತ್ರಿಯೋಽವೃಜಿನೋಽಕಾಮಹತಃ॥''

ಇಲ್ಲಿಯೂ 'ಯಶ್ಚ' ಎಂಬ ಚಶಬ್ದದಿಂದ ಅಮುಕ್ತ ಆಜಾನಜದೇವತೆ ಗಳಿಗಿಂತ ಭಿನ್ನರಾದ ಮುಕ್ತ ಆಜಾನಜದೇವತೆಗಳ ಸಮುಚ್ಚಯವನ್ನು ಮಾಡಲಾಗಿದೆ. ಹೀಗೆ, ಇಲ್ಲಿರುವ ಚಶಬ್ದದಿಂದ ಅಮುಕ್ತ-ಕರ್ಮಜ ದೇವತೆಗಳ ಆನಂದದ ಜೊತೆಗೆ 'ಶ್ರೋತ್ರಿಯಃ ಅವೃಜಿನಃ ಅಕಾಮಹತಃ'

ಎಂದು ಮುಕ್ತದೇವತೆಗಳ ಆನಂದತಾರತಮ್ಯವನ್ನೂ ಹೇಳಲಾಗಿದೆ.

ಬೃಹದಾರಣ್ಯಕಭಾಷ್ಯದಲ್ಲಿ ಈ ತಾರತಮ್ಯಬೋಧಕವಾಕ್ಯಗಳನ್ನು ಮೇಲೆ ಹೇಳಿದಂತೆ ಮುಕ್ತಾಮುಕ್ತಪರವಾಗಿ ವ್ಯಾಖ್ಯಾನಿಸದೆ ಕೇವಲ ಮುಕ್ತಪರವಾಗಿ ವ್ಯಾಖ್ಯಾನಿಸಲಾಗಿದೆ— ''ಯಶ್ಚ ಶ್ರೋತ್ರಿಯ'' ಇತಿ ವಚನಂ ತೇಷಾಮಾಜಾನಾದಿದೇವಾನಾಮಪಿ ಮುಕ್ತಾನಾಮೇವಾಯಂ ನಿಯಮೇನ ಆನಂದಶತಗುಣೋದ್ರೇಕಃ। ಅನ್ಯದಾ ತು ಕದಾಚಿದ್ ಭವತಿ ಕದಾಚಿದ್ ವ್ಯಾಕುಲತಯಾ ನ ಭವತೀತಿ ದರ್ಶಯಿತುಂ। ಚಶಬ್ದಸ್ತು ಶ್ರೋತ್ರಿಯತ್ವ-ಅವೃಜಿನತ್ವ-ಅಕಾಮಹತತ್ವಾದೀನಾಂ ಗುಣಾನಾಂ ಮುಕ್ತೌ ಸಮುಚ್ಚಯಾರ್ಥಃ॥

ಇದರ ಅಭಿಪ್ರಾಯ ಹೀಗೆ— ಚಶಬ್ದಸ್ವಾರಸ್ಯದಿಂದ ಈ ವಾಕ್ಯವನ್ನು ಎರಡು ವಾಕ್ಯಗಳನ್ನಾಗಿ ವಿಂಗಡಿಸಿ ಮುಕ್ತಾಮುಕ್ತಪರವಾಗಿ ವ್ಯಾಖ್ಯಾನಿಸ ಬೇಕು. ಏಕವಾಕ್ಯತೆಯನ್ನು ಹೇಳುವುದಾದರೂ ಅಮುಕ್ತಪರವಾಗಿ ವ್ಯಾಖ್ಯಾ ನಿಸಬಾರದು, ಮುಕ್ತಪರವಾಗಿಯೇ ವ್ಯಾಖ್ಯಾನಮಾಡಬೇಕು, ಎಂದು.

**ರಾದ್ಧಃ ಸಂಸಿದ್ಧ ಇತ್ಯೇವ ಮುಕ್ತ ಏವಾವಗಮ್ಯತೇ।**
**ಸಾಧುನಾ ವಿಷ್ಣುನಾ ಯುಕ್ತೋ ಮುಕ್ತಃ ಸಾಧುಯುವಾ ಮತಃ ॥ ೩೦ ॥**

**ಯೌವನಂ ನಿತ್ಯಮೇತಸ್ಯ ಮುಕ್ತಸ್ಯೇತಿ ಯುವಾ ಸ ಚ ।**
**ಫಲಮಧ್ಯಯನಸ್ಯಾಪ್ತಂ ತೇನಾಧ್ಯಾಯಕ ಈರಿತಃ ॥ ೩೧ ॥**

**ನಿಹ್ರಾಸಾನಂದಸಂಪ್ರಾಪ್ತ್ಯಾ ಚಾಶಿಷ್ಠ ಇತಿ ಗೀಯತೇ ।**
**ಸ್ಥಿತಸ್ಯಾನನ್ಯಥಾಪ್ರಾಪ್ತೇರ್ದೃಢಿಷ್ಠ ಇತಿ ಚೋದಿತಃ ॥ ೩೨ ॥**

**ಬಲಿಷ್ಠಶ್ಚ ಸ್ವಭಾವೇನ ಮುಕ್ತೋ ಭವತಿ ಕೇವಲಮ್ ।**
**ತಸ್ಯೇಯಂ ಪೃಥಿವೀತ್ಯಾದಿ ಪೂರ್ವಭಾವವ್ಯಪೇಕ್ಷಯಾ ॥ ೩೩ ॥**

ಬೃಹದಾರಣ್ಯಕದಲ್ಲಿ ಮುಕ್ತಾನಂದತಾರತಮ್ಯವನ್ನು ಹೇಳುವ ಪ್ರಕರಣದ ಆರಂಭದಲ್ಲಿ 'ಸ ಯೋ ಮನುಷ್ಯಾಣಾಂ ರಾದ್ಧಃ ಸಮೃದ್ಧೋ

ಭವತಿ' ಎಂಬ ವಾಕ್ಯದ ರಾದ್ಧಃ ಇತಿ=ರಾದ್ಧಃ ಎಂಬ ಪದದಿಂದ ಸಂಸಿದ್ಧಃ ಏವ=ಸಿದ್ಧಿಯನ್ನು ಪಡೆದವನೇ ಅರ್ಥಾತ್ ಮುಕ್ತ ಏವ=ಮುಕ್ತನೇ ಅವಗಮ್ಯತೇ=ತಿಳಿಯಲ್ಪಡುತ್ತಾನೆ.

ಭಾವಾರ್ಥ— ಬೃಹದಾರಣ್ಯಕದಲ್ಲಿ ಮನುಷ್ಯವರ್ಗಕ್ಕೆ 'ರಾದ್ಧಃ' ಎಂಬ ವಿಶೇಷಣವಿದೆ. ರಾದ್ಧ ಎಂದರೆ ಪೂರ್ಣವಾಗಿ ಸಿದ್ಧಿಯನ್ನು ಪಡೆದವ ಎಂದು ಅರ್ಥ. ಅಂತಹ ಸಿದ್ಧಿ ಮೋಕ್ಷ. ಹೀಗೆ 'ರಾದ್ಧಃ' ಎಂಬ ವಿಶೇಷಣದ ಮೂಲಕ ಮುಕ್ತಮನುಷ್ಯವರ್ಗದ ತಾರತಮ್ಯವನ್ನೇ ಅಲ್ಲಿ ಹೇಳಲಾಗಿದೆ.

ತೈತ್ತಿರೀಯದಲ್ಲಿ ಮನುಷ್ಯವರ್ಗಕ್ಕೆ 'ಯುವಾ ಸ್ಯಾತ್ ಸಾಧುಯುವಾಽಧ್ಯಾಯಕಃ। ಆಶಿಷ್ಠೋ ದ್ರಢಿಷ್ಠೋ ಬಲಿಷ್ಠಃ' ಎಂಬ ವಿಶೇಷಣಗಳಿವೆ. ಅವುಗಳ ಅರ್ಥ ಹೀಗೆ— ಸಾಧುಯುವಾ ಎಂಬಲ್ಲಿ ಸಾಧುನಾ=ಸಾಧುನಾ ಎಂದರೆ ವಿಷ್ಣುನಾ=ವಿಷ್ಣುವಿನಿಂದ ಯುಕ್ತಃ=ಕೂಡಿದ ಮುಕ್ತಃ=ಮುಕ್ತನು ಸಾಧುಯುವಾ=ಸಾಧುಯುವಾ ಎಂಬುದಾಗಿ ಮತಃ= ತಿಳಿಯಲ್ಪಟ್ಟಿದ್ದಾನೆ. 'ಸಾಧುಯುವಾ' ಎಂದರೆ 'ಸಾಧುನಾ ಯುಕ್ತಃ ಯುವಾ' ಎಂದರ್ಥ. ಪರಮಾತ್ಮನೊಂದಿಗಿರುವ ಮುಕ್ತ, ಎಂದು ಭಾವ.

2. ಯುವಾ ಎಂದರೆ ಮುಕ್ತ ಏಕೆ— ಏತಸ್ಯ ಮುಕ್ತಸ್ಯ=ಮುಕ್ತನಿಗೆ ಯೌವನಂ=ತಾರುಣ್ಯವು ನಿತ್ಯಂ=ಸರ್ವದಾ ಇರುತ್ತದೆ ಇತಿ=ಈ ಕಾರಣದಿಂದ ಸಚ=ಆ ಮುಕ್ತನಾದರೋ ಯುವಾ=ಯುವಾ(ಯುವಕನು) ಎನಿಸಿದ್ದಾನೆ.

3. ಅಧ್ಯಯನಸ್ಯ=ಸ್ವಾಧ್ಯಾಯಾಧ್ಯಯನದ ಫಲಂ=ಫಲವಾದ ಮೋಕ್ಷವು ಆಪ್ತಂ=ಹೊಂದಲ್ಪಟ್ಟಿದೆ. ತೇನ=ಆ ಕಾರಣದಿಂದ ಮುಕ್ತನು ಆಧ್ಯಾಯಕ ಇತಿ=ಆಧ್ಯಾಯಕನೆಂದು ಈರಿತಃ=ಹೇಳಲ್ಪಟ್ಟಿದ್ದಾನೆ.

4. ನಿಹ್ರ್ರಾಸಾನಂದಸಂಪ್ರಾಪ್ತ್ಯಾ=ತನ್ನ ಯೋಗ್ಯತೆಗೆ ಅನುಗುಣವಾಗಿ ಪೂರ್ಣವಾದ ಆನಂದದ ಪ್ರಾಪ್ತಿಯಿಂದ ಮುಕ್ತನು ಆಶಿಷ್ಠ ಇತಿ=ಆ ಶಿಷ್ಠನೆಂದು ಗೀಯತೇ=ಹೇಳಲ್ಪಡುತ್ತಾನೆ. (ಆಶಿಷ್ಠಃ ಆ=ಚೆನ್ನಾಗಿ ಶಂ= ಸುಖವು ಅಸ್ಯ=ಇವನಿಗೆ ಇದೆ. ಆದ್ದರಿಂದ ಆಶಃ। ಅತಿಶಯೇನ ಆಶಃ=ಆಶಿಷ್ಠಃ। ನಿರತಿಶಯವಾದ ಆನಂದ ಇರುವವನು ಆಶಿಷ್ಠ)

5. ಸ್ಥಿತಸ್ಯ=ಇರುವ ಧರ್ಮಗಳಿಗೆ ಅನ್ಯಥಾ ಅಪ್ರಾಪ್ತೇಃ=ವಿಕಾರ ವಿಲ್ಲದಿರುವುದರಿಂದ ಮುಕ್ತನು ದ್ರಢಿಷ್ಠಃ ಇತಿ=ದ್ರಢಿಷ್ಠನೆಂದೂ ಉದಿತಃ= ಹೇಳಲ್ಪಟ್ಟಿದ್ದಾನೆ. (ದೃಢ ಎಂದರೆ ವಿಕಾರವಿಲ್ಲದ್ದು. ಅತ್ಯಂತ ದೃಢವಾದುದು ದ್ರಢಿಷ್ಠ)

6. ಸ್ವಭಾವೇನ=ಸ್ವಾಭಾವಿಕವಾಗಿ ಬಲಿಷ್ಠಃ=ಬಲಿಷ್ಠನಾದರೋ ಕೇವಲಂ ಮುಕ್ತಃ ಭವೇತ್=ಮುಕ್ತಾತ್ಮ ಮಾತ್ರ ಆಗುತ್ತಾನೆ.

ತಸ್ಯೇಯಂ ಪೃಥಿವೀತ್ಯಾದಿ='ತಸ್ಯೇಯಂ ಪೃಥಿವೀ ಸರ್ವಾ ವಿತ್ತಸ್ಯ ಪೂರ್ಣಾ ಸ್ಯಾತ್' (ಮುಕ್ತಚಕ್ರವರ್ತಿಯ ರಾಜ್ಯವು ಸಕಲಸಮೃದ್ಧವಾಗಿದ್ದರೆ) ಈ ವಿಶೇಷಣ ಮುಕ್ತಮನುಷ್ಯನ ಪೂರ್ವಭಾವವ್ಯಪೇಕ್ಷಯಾ=ಮೋಕ್ಷಕ್ಕಿಂತ ಪೂರ್ವಸ್ಥಿತಿಯ ದೃಷ್ಟಿಯಿಂದ. ಯುವಾ, ಸಾಧುಯುವಾ ಇತ್ಯಾದಿ ವಿಶೇಷಣಗಳು ಮುಕ್ತನಲ್ಲಿ ಸಮಂಜಸವಾದರೂ 'ತಸ್ಯೇಯಂ ಪೃಥಿವೀ' ಎಂಬ ವಿಶೇಷಣವು ಅವನಿಗೆ ಅನ್ವಯಿಸುವುದಿಲ್ಲ. ಆದರೂ ಮುಕ್ತಿಯಾಗುವ ಮೊದಲು ಅಂತಹ ವಿಶೇಷಣ ಅವನಲ್ಲಿದೆ. ಈ ವಾಕ್ಯವು ಒಬ್ಬನೇ ವ್ಯಕ್ತಿಯನ್ನು ಮುಕ್ತಾವಸ್ಥೆಯಲ್ಲಿ ಮತ್ತು ಅಮುಕ್ತಾವಸ್ಥೆಯಲ್ಲಿ ಹೇಗಿರಬೇಕು ಎನ್ನುವುದನ್ನು ತಿಳಿಸಿ ಆ ಎರಡೂ ಅವಸ್ಥೆಗಳಲ್ಲಿ ಅವನಿಗಿರುವ ಆನಂದ ಒಂದು ಮಾನುಷ ಆನಂದ. ಅದರ ನೂರುಪಟ್ಟು ಆನಂದವು ಅಮುಕ್ತಗಂಧರ್ವರಿಗೆ, ಮುಕ್ತಗಂಧರ್ವರಿಗೆ ಇದೆ ಎಂದು ಉಪನಿಷತ್ತಿನ ಅಭಿಪ್ರಾಯ. ಹೀಗೆ ಬೃಹದಾರಣ್ಯಕದಲ್ಲಿ ಒಂದೊಂದು ಸ್ತರದಲ್ಲೂ ಮುಕ್ತರಿಗೆ ಇರುವ ಆನಂದ ವನ್ನು ಹೇಳಿ ತಾರತಮ್ಯದಲ್ಲಿ ಉಚ್ಚವರ್ಗದಲ್ಲಿರುವವರಿಗೆ ನೀಚಕಕ್ಷೆಯಲ್ಲಿರು ವವರಿಗಿಂತ ಮೋಕ್ಷದಲ್ಲಿ ನೂರುಪಟ್ಟು ಹೆಚ್ಚು ಆನಂದ ಎಂದು ಹೇಳಲಾಗಿದೆ. ಒಂದೊಂದು ಸ್ತರದಲ್ಲೂ ಒಬ್ಬನೇ ವ್ಯಕ್ತಿಯು ಮೋಕ್ಷ-ಸಂಸಾರ ಎಂಬ ಎರಡು ಅವಸ್ಥೆಗಳಲ್ಲಿ ಬೇರೆ ಬೇರೆ ವಿಶೇಷಣಗಳಿಂದ ಉಪನಿಷತ್ತಿನಿಂದ ಪ್ರತಿಪಾದ್ಯನಾಗಿದ್ದಾನೆ.

**ಸ ಏಕ ಇತಿ ಸಂಸಾರಗತಮುಕ್ತಾ್ವ ಸುಖಂ ಪುನಃ ।**
**ಶ್ರೋತ್ರಿಯಸ್ಯೇತಿ ವದತಿ ಮುಕ್ತಾಚ್ಛತಗುಣಾತ್ಮತಾಮ್ ॥ ೩೪ ॥**

ತೈತ್ತಿರೀಯಶ್ರುತಿಯು ಸ ಏಕಃ ಇತಿ='ಸ ಏಕಃ ಮಾನುಷ ಆನಂದಃ' (ಅದು ಒಂದು ಮಾನುಷ ಆನಂದ) ಎಂದು ಸಂಸಾರಗತಂ ಸುಖಂ ಉಕ್ತ್ವಾ=ಸಂಸಾರದಲ್ಲಿರುವ ಮನುಷ್ಯಸುಖವನ್ನು ಹೇಳಿ ಆ ಸುಖಕ್ಕಿಂತಲೂ ಸಂಸಾರಗತನಾದ ಮನುಷ್ಯಗಂಧರ್ವನ ಸುಖ ನೂರುಪಟ್ಟು ಹೆಚ್ಚು ಎಂದು ಹೇಳಿ ಪುನಃ=ಮತ್ತೆ ಶ್ರೋತ್ರಿಯಸ್ಯೇತಿ='ಶ್ರೋತಿಯಸ್ಯ ಚಾಕಾಮಹತಸ್ಯ' ಎಂಬುದಾಗಿ ಮುಕ್ತಾತ್=ಮುಕ್ತನಾದ ಮನುಷ್ಯನಿಗಿಂತಲೂ ಮುಕ್ತಮನುಷ್ಯ ಗಂಧರ್ವನಿಗೆ ಶತಗುಣಾತ್ಮತಾಮ್=ನೂರುಪಟ್ಟು ಹೆಚ್ಚು ಆನಂದ ಸ್ವರೂಪತ್ವವನ್ನು ವದತಿ=ಹೇಳುತ್ತದೆ.

**ಭಾವಾರ್ಥ—** ಸೈಷಾನಂದಸ್ಯ ಮೀಮಾಂಸಾ ಭವತಿ । ಯುವಾ ಸ್ಯಾತ್ ಸಾಧುಯುವಾಽಧ್ಯಾಯಕಃ । ಆಶಿಷ್ಠೋ ದ್ರಢಿಷ್ಠೋ ಬಲಿಷ್ಠಃ । ತಸ್ಯೇಯಂ ಪೃಥಿವೀ ಸರ್ವಾ ವಿತ್ತಸ್ಯ ಪೂರ್ಣಾ ಸ್ಯಾತ್ । ಸ ಏಕೋ ಮಾನುಷ ಆನಂದಃ । ತೇ ಯೇ ಶತಂ ಮಾನುಷಾ ಆನಂದಾಃ । ಸ ಏಕೋ ಮನುಷ್ಯ-ಗಂಧರ್ವಾಣಾಮಾನಂದಃ । ಶ್ರೋತ್ರಿಯಸ್ಯ ಚಾಕಾಮಹತಸ್ಯ ॥

ಇದು ತೈತ್ತಿರೀಯೋಪನಿಷತ್ತಿನಲ್ಲಿ ಆನಂದಮೀಮಾಂಸಾಪ್ರಕರಣದ ವಾಕ್ಯವಿನ್ಯಾಸಕ್ರಮ. ಇಲ್ಲಿ ಯುವಾ, ಸಾಧುಯುವಾ ಮುಂತಾದ ವಿಶೇಷಣ ಗಳನ್ನು ಮನುಷ್ಯಚಕ್ರವರ್ತಿಗೆ ಕೊಟ್ಟು ಅಂತಹವನಿಗೆ ಇರುವ ಸುಖದ ನೂರುಪಟ್ಟು ಹೆಚ್ಚುಸುಖ ಸಂಸಾರಿಮನುಷ್ಯಗಂಧರ್ವರಿಗೆ ಎಂದು ಹೇಳಿ 'ಶ್ರೋತ್ರಿಯಸ್ಯ ಚಾಕಾಮಹತಸ್ಯ' ಎಂಬ ವಾಕ್ಯದಿಂದ ಮುಕ್ತಗಂಧರ್ವರಿಗೂ ಮುಕ್ತನಾದ ಮನುಷ್ಯನಿಗೆ ಇರುವ ಆನಂದದ ನೂರುಪಟ್ಟು ಹೆಚ್ಚು ಆನಂದ ವನ್ನು ಹೇಳಲಾಗಿದೆ. ಹೀಗೆ ಇಲ್ಲಿ ಮುಕ್ತಾಮುಕ್ತರ ಆನಂದತಾರತಮ್ಯವನ್ನು ಹೇಳಲಾಗಿದೆ.

**ಸಂಸಾರಗಾಚ್ಚ ಸಂಸಾರಗತಸ್ಯೈವ ಶತಾಧಿಕಮ್ ।**
**ಮುಕ್ತಾನ್ಮುಕ್ತಸ್ಯ ಯುಕ್ತಂ ಸ್ಯಾಚ್ಛ್ರುತ್ಯುಕ್ತಮಭಿವೀಕ್ಷತಃ ॥ ೩೫ ॥**

ಸಂಸಾರಗಾಚ್ಚ=ಅಮುಕ್ತಮನುಷ್ಯಗಂಧರ್ವಾದಿಗಳ ಸುಖಕ್ಕಿಂತ ಸಂಸಾರಗತಸ್ಯ=ಅಮುಕ್ತದೇವಗಂಧರ್ವರಿಗೆ ಶತಾಧಿಕಂ=ನೂರುಪಟ್ಟು ಹೆಚ್ಚು

ಆನಂದವನ್ನು ಹೇಳಿ ಮುಕ್ತಾತ್=ಮುಕ್ತಮನುಷ್ಯಗಂಧರ್ವರಿಗಿಂತ ಮುಕ್ತಸ್ಯ=ಮುಕ್ತದೇವಗಂಧರ್ವರಿಗೆ ಅಧಿಕಸುಖವನ್ನು ಹೇಳಲಾಗಿದೆ.

ಹೀಗೆ ಶ್ರುತ್ಯುಕ್ತಮ್=ಶ್ರುತಿಯಲ್ಲಿ ಹೇಳಿರುವುದನ್ನು ಅಭಿವೀಕ್ಷತಃ= ಸರಿಯಾಗಿ ವಿಚಾರಮಾಡುವವನಿಗೆ ಇದೇ ವ್ಯಾಖ್ಯಾನವು ಯುಕ್ತಂ=ಯುಕ್ತ ವಾದುದು.

**ಸಾಧನತಾರತಮ್ಯದಿಂದ ಆನಂದತಾರತಮ್ಯ**

**ಯುಕ್ತಂ ಚ ಸಾಧನಾಧಿಕ್ಯಾತ್ ಸಾಧ್ಯಾಧಿಕ್ಯಂ ಸುರಾದಿಷು ।**
**ನಾಧಿಕ್ಯಂ ಯದಿ ಸಾಧ್ಯೇ ಸ್ಯಾತ್ ಪ್ರಯತ್ನಃ ಸಾಧನೇ ಕುತಃ ॥ ೩೬ ॥**

ಸುರಾದಿಷು ಸಾಧನಾಧಿಕ್ಯಾತ್=ದೇವತೆಗಳಲ್ಲಿ ಸಾಧನೆಯು, ಮನುಷ್ಯರ ಸಾಧನೆಗಿಂತಲೂ ಅಧಿಕವಾದುದರಿಂದ ಸಾಧ್ಯಾಧಿಕ್ಯಂ=ಸಾಧ್ಯ ವಾದ ಆನಂದದಲ್ಲಿಯೂ ಆಧಿಕ್ಯವು ಇದೆ. ಯದಿ=ಒಂದುವೇಳೆ ಸಾಧ್ಯೇ= ಸಾಧ್ಯವಾದ ಸುಖದಲ್ಲಿ ಸುರಾದಿಷು=ದೇವತಾದಿಗಳಲ್ಲಿ(ಮಾನುಷಾದಿಭ್ಯಃ= ಮನುಷ್ಯರೇ ಮೊದಲಾದವರಿಗಿಂತ) ನಾಧಿಕ್ಯಂ ಸ್ಯಾತ್=ಆಧಿಕ್ಯವು ಇಲ್ಲದೇ ಹೋದಲ್ಲಿ ಸಾಧನೇ=ಹೆಚ್ಚಿನ ಮೋಕ್ಷಸಾಧನೆಯಲ್ಲಿ ಪ್ರಯತ್ನಃ=ಪ್ರಯಾಸವು ಕುತಃ=ಏಕೆ ?

**ಭಾವಾರ್ಥ—** ಇಲ್ಲಿ ಆನಂದತಾರತಮ್ಯಕ್ಕೆ ಯುಕ್ತಿಯನ್ನು ಹೇಳ ಲಾಗಿದೆ. ಮನುಷ್ಯ ಅಥವಾ ಗಂಧರ್ವರ ಸಾಧನಾನುಷ್ಠಾನಕ್ಕೂ ದೇವತೆಗಳ ಸಾಧನಾನುಷ್ಠಾನಕ್ಕೂ ಬಹಳಷ್ಟು ಅಂತರವಿದೆ. ದೇವತೆಗಳು ಮನುಷ್ಯಾದಿ ಗಳಿಗಿಂತಲೂ ಹೆಚ್ಚು ಸಾಧನೆಯನ್ನು ಮಾಡುತ್ತಾರೆ. ಒಂದುವೇಳೆ ಆ ಸಾಧನೆಗೆ ಹೆಚ್ಚಿನ ಫಲವಿಲ್ಲವೆಂದಾದರೆ ವಿವೇಕಿಗಳಾದ ದೇವತೆಗಳು ಹೆಚ್ಚಿನ ಸಾಧನೆ ಯನ್ನೇ ಮಾಡಲಾರರು. ಅವರು ಅಧಿಕಸಾಧನೆಯನ್ನು ಮಾಡುವುದರಿಂದ ಅವರಿಗೆ ಮೋಕ್ಷದಲ್ಲಿ ಸುಖಾಧಿಕ್ಯವೂ ಇದೆ, ಎಂದು ತಿಳಿಯುತ್ತದೆ.

**ಯತ್ನಶ್ಚ ದೃಶ್ಯತೇ ತೇಷಾಂ ಮಹಾನೇವ ಮಹಾತ್ಮನಾಮ್ ।**
**ಯತ್ರ ಸಾಧನಬಾಹುಲ್ಯಂ ಸಾಧ್ಯಬಾಹುಲ್ಯಮತ್ರ ಚ ॥ ೩೭ ॥**

**ದೃಷ್ಟಂ ನಿಯಮತೋ ನೋ ಚೇನ್ನ ಯತ್ನಂ ಕುರ್ಯುರಂಜಸಾ ।**
**ಕೃಚ್ಛ್ರೇಣ ಸಾಧನಾದೇವ ನ ಮುಕ್ತವದುದೀರ್ಯತೇ ॥ ೩೮ ॥**

ಮಹಾತ್ಮಾನಾಂ=ಹೆಚ್ಚಿನ ಫಲಕ್ಕೆ ಅರ್ಹರಾದ ತೇಷಾಂ=ದೇವತಾದಿಗಳಿಗೆ ಮನುಷ್ಯಾದಿಗಳಿಗಿಂತಲೂ ಮಹಾನ್ ಯತ್ನಃ=ಹೆಚ್ಚಿನ ಮೋಕ್ಷಸಾಧನೆಯು ದೃಶ್ಯತೇ ಏವ=ಪ್ರಮಾಣಗಳಿಂದ ನಿಶ್ಚಿತವೇ ಆಗಿದೆ.

ವ್ಯಾಪ್ತಿಯೂ ಇದೆ— ಯತ್ರ ಸಾಧನಬಾಹುಲ್ಯಂ=ಯಾವ ಪುರುಷನಲ್ಲಿ ಸಾಧನೆಯು ಹೆಚ್ಚಾಗಿ ಇರುವುದೋ ಅತ್ರ=ಅಂತಹವನಲ್ಲಿ ಸಾಧ್ಯಬಾಹುಲ್ಯಂ ಚ=ಫಲದಲ್ಲೂ ಆಧಿಕ್ಯವು ಇರುತ್ತದೆ. ಇದು ಪ್ರಮಾಣದಿಂದ ಸಿದ್ಧವಾಗಿದೆ. ನೋ ಚೇತ್=ಲೋಕದಲ್ಲಿಯಾಗಲೀ ವೈದಿಕಕರ್ಮದಲ್ಲಿಯಾಗಲೀ ಸಾಧನಾಧಿಕ್ಯದಿಂದ ಫಲಾಧಿಕ್ಯವು ಇಲ್ಲದಿದ್ದಲ್ಲಿ ಯಾರೂ ಅಂಜಸಾ=ಚೆನ್ನಾಗಿ ಯತ್ನಂ=ಪ್ರಯತ್ನವನ್ನು ನ ಕುರ್ಯುಃ=ಮಾಡಲಿಕ್ಕಿಲ್ಲ.

ಭಾವಾರ್ಥ— ಒಬ್ಬ ರೈತ ಸ್ವಲ್ಪ ಜಾಗದಲ್ಲಿ ಹೆಚ್ಚು ಪ್ರಯಾಸಪಡದೆ ಕೃಷಿಯನ್ನು ಮಾಡುತ್ತಾನೆ. ಮತ್ತೊಬ್ಬ ವಿಶಾಲಪ್ರದೇಶದಲ್ಲಿ ಶ್ರಮಪಟ್ಟು ಕೃಷಿ ಮಾಡುತ್ತಾನೆ. ಇಬ್ಬರಿಗೂ ಸಿಗುವ ಧಾನ್ಯ ಒಂದೇ ರೀತಿಯಾದರೆ ಹೆಚ್ಚು ಪ್ರಯತ್ನ ಮಾಡಿದ್ದೇ ವ್ಯರ್ಥವಾಗುತ್ತದೆ. ಆದ್ದರಿಂದ ಪ್ರಯತ್ನ ಹೆಚ್ಚಾದಂತೆ ಫಲವೂ ಅಧಿಕವಾಗಿ ದೊರಕುತ್ತದೆ, ಎಂದು ಹೇಳಲೇಬೇಕು. ದೇವತೆಗಳ ಸಾಧನೆ ಮನುಷ್ಯರ ಸಾಧನೆಗಿಂತ ಅಧಿಕವಾದುದರಿಂದ ಅವರ ಮೋಕ್ಷಫಲವೂ ಅಧಿಕವೇ ಆಗಬೇಕು.

**ದಶಕಲ್ಪಂ ತಪಶ್ಚೀರ್ಣಂ ರುದ್ರೇಣ ಲವಣಾರ್ಣವೇ ।**
**ತ್ಯಕ್ತ್ವಾ ಸುಖಾನಿ ಸರ್ವಾಣಿ ಕ್ಲಿಷ್ಟೇನ ಲವಣಾಂಭಸಾ ॥ ೩೯ ॥**

**ಶಕ್ರೇಣ ವರ್ಷಕೋಟೀಶ್ಚ ಧೂಮಃ ಪೀತೋಽತಿದುಃಖಿತಃ ।**
**ವರ್ಷಾಯುತಂ ಚ ಸೂರ್ಯೇಣ ತಪೋಽವಾಕ್‌ಛಿರಸಾ ಕೃತಮ್ ॥ ೪೦ ॥**

**ಸುದುಃಖೇನ ಸುಖಂ ತ್ಯಕ್ತ್ವಾ ಧರ್ಮೇಣಾಕಾಶಶಾಯಿನಾ ।**
**ಪೀತಾ ಮರೀಚಯೋ ವರ್ಷಸಾಹಸ್ರಮತಿಸಾದರಮ್ ॥ ೪೧ ॥**

**ಅತಿಕೃಚ್ಛ್ರೇಣ ಕುರ್ವಂತಿ ಯತ್ನಂ ಬ್ರಹ್ಮವಿದೋಽಪಿ ಚ (ಹಿ) ।**
**ಇತ್ಯೇತದಖಿಲಂ ಮೋಕ್ಷವಿಶೇಷಾಭಾವತಃ ಕಥಮ್ ॥ ೪೨ ॥**

ರುದ್ರೇಣ=ರುದ್ರನಿಂದ ಸರ್ವಾಣಿ ಸುಖಾನಿ ತ್ಯಕ್ತ್ವಾ=ಎಲ್ಲ ಸುಖಗಳನ್ನು ಪರಿತ್ಯಾಗ ಮಾಡಿ ಲವಣಾಂಭಸಾ=ಉಪ್ಪುನೀರಿನಿಂದ ಕ್ಲಿಷ್ಟೇನ=ಕ್ಲೇಶಗೊಂಡವನಾಗಿ ಲವಣಾರ್ಣವೇ=ಉಪ್ಪುಸಮುದ್ರದಲ್ಲಿ ದಶಕಲ್ಪಂ=ಬ್ರಹ್ಮದೇವರ ಹತ್ತು ದಿನಕಲ್ಪಪರ್ಯಂತ ತಪಃ=ತಪಸ್ಸು ಚೀರ್ಣಂ=ಮಾಡಲ್ಪಟ್ಟಿದೆ.

ಶಕ್ರೇಣ=ಇಂದ್ರನಿಂದ ಅತಿದುಃಖತಃ=ಅತ್ಯಂತಕ್ಲೇಶದಿಂದ ವರ್ಷ-ಕೋಟೀಃ=ಕೋಟಿ ವರ್ಷಗಳು ಧೂಮಃ=ಹೋಮದ ಹೊಗೆಯು ಪೀತಃ=ಕುಡಿಯಲ್ಪಟ್ಟಿತು. ಸೂರ್ಯೇಣ=ಸೂರ್ಯನಿಂದ ವರ್ಷಾಯುತಂ=ಹತ್ತು ಸಾವಿರವರ್ಷಗಳ ಪರ್ಯಂತ ಅರ್ವಾಕ್‌ಶಿರಸಾ=ತಲೆಕೆಳಗಾದವನಾಗಿ ತಪಃ ಕೃತಂ=ತಪಸ್ಸು ಮಾಡಲ್ಪಟ್ಟಿದೆ.

ಧರ್ಮೇಣ=ಯಮಧರ್ಮನಿಂದ ಸುಖಂ ತ್ಯಕ್ತ್ವಾ=ಸುಖವನ್ನು ಪರಿತ್ಯಾಗ ಮಾಡಿ ಸುದುಃಖೇನ=ಅತ್ಯಂತ ದುಃಖವುಳ್ಳವನಾಗಿ ಆಕಾಶಶಾಯಿನಾ=ಆಕಾಶದಲ್ಲಿ ಮಲಗಿದವನಾಗಿ ವರ್ಷಸಾಹಸ್ರಂ=ಸಾವಿರ ವರ್ಷಪರ್ಯಂತ ಮರೀಚಯಃ=ಸೂರ್ಯಕಿರಣಗಳು ಪೀತಾಃ= ಕುಡಿಯಲ್ಪಟ್ಟಿವೆ.

ಹೀಗೆ, ಬ್ರಹ್ಮವಿದೋಽಪಿ=ಬ್ರಹ್ಮಜ್ಞಾನಿಗಳೂ ಸಾದರಂ=ಆಸಕ್ತಿಪೂರ್ವಕವಾಗಿ ಅತಿಕೃಚ್ಛ್ರೇಣ=ಅತ್ಯಂತ ಕ್ಲೇಶದಿಂದ ಯತ್ನಂ ಕುರ್ವಂತಿ=ಸಾಧನೆಯನ್ನು ಮಾಡುತ್ತಾರೆ. ಇತ್ಯೇತದಖಿಲಂ=ಇವೆಲ್ಲವೂ ಮೋಕ್ಷ ವಿಶೇಷಾ-ಭಾವತಃ=ಮೋಕ್ಷದಲ್ಲಿ ವೈಚಿತ್ರ್ಯವು ಇಲ್ಲದಿದ್ದಲ್ಲಿ ಕಥಂ ಯುಜ್ಯತೇ= ಹೇಗೆ ಯುಕ್ತವಾಗುತ್ತದೆ?

**ಭಾವಾರ್ಥ**— ಬ್ರಹ್ಮದೇವರ ಆಯುಷ್ಯ ನೂರುವರ್ಷ. 1,000 ಯುಗಚಕ್ರಗಳು ಅವರಿಗೆ ಒಂದು ಹಗಲು. ಇದನ್ನು ದಿನಕಲ್ಪ ಎನ್ನಲಾಗುತ್ತದೆ.

ಇಂತಹ ಹತ್ತುದಿನ ಕಲ್ಪ ಪರ್ಯಂತವಾಗಿ ರುದ್ರದೇವ ಅಪರೋಕ್ಷಪಡೆದು ತನ್ನ ಪದವಿಗೆ ಬಂದ ಮೇಲೆ ತಪಸ್ಸು ಮಾಡಿದ್ದಾನೆ. ಇದೇ ರೀತಿ ಇಂದ್ರ, ಸೂರ್ಯ, ಯಮಧರ್ಮರೂ ಕ್ಲಿಷ್ಟವಾದ ಸಾಧನೆಗಳನ್ನು ಮಾಡಿದ್ದಾರೆ. ಇವೆಲ್ಲ ಮೋಕ್ಷಾನಂದವೃದ್ಧಿಗಾಗಿ. ಒಂದುವೇಳೆ ಮೋಕ್ಷದಲ್ಲಿ ಆನಂದವು ಎಲ್ಲರಿಗೂ ಸಮಾನವಾದರೆ ಇವರು ಏಕೆ ಇಷ್ಟೊಂದು ಕಷ್ಟಪಡಬೇಕಿತ್ತು?

**ಮೋಕ್ಷತಾರತಮ್ಯಕ್ಕೆ ಪ್ರಮಾಣಗಳು**

**'ದೈವೀ ಸಂಪದ್ ವಿಮೋಕ್ಷಾಯ ನಿಬಂಧಾಯಾಸುರೀ ಮತಾ ।'**
**ಇತಿ ಮೋಕ್ಷವಿಶೇಷಶ್ಚ ಸ್ವಯಂ ಭಗವತೋದಿತಃ ॥ ೪೩ ॥**

'ದೈವೀ ಸಂಪತ್=ದೇವತೆಗಳ ಯೋಗ್ಯತೆಯು ವಿಮೋಕ್ಷಾಯ=ವಿಶೇಷ ಮೋಕ್ಷಕ್ಕಾಗಿ ಇದೆ. ಆಸುರೀ=ಅಸುರ ಯೋಗ್ಯತೆಯು ನಿಬಂಧಾಯ= ನೀಚ ಸ್ಥಾನದಲ್ಲಿ ಬಂಧನಕ್ಕಾಗಿ ಅಂದರೆ ಅಂಧಂತಮಸ್ಸಿಗಾಗಿ ಮತಾ=ಶಾಸ್ತ್ರಾಭಿ ಮತ ವಾಗಿದೆ.' ಇತಿ=ಹೀಗೆ ಮೋಕ್ಷವಿಶೇಷಶ್ಚ=ಮೋಕ್ಷದಲ್ಲಿ ವೈಚಿತ್ರ್ಯವು ಸ್ವಯಂ ಭಗವತಾ=ಸಾಕ್ಷಾತ್ ಶ್ರೀಕೃಷ್ಣನಿಂದ ಗೀತೆಯಲ್ಲಿ ಉದಿತಾ=ಹೇಳಲ್ಪಟ್ಟಿದೆ.

**'ತಮೇವ ಯೂಯಂ ಭಜತಾತ್ಮವೃತ್ತಿಭಿ-**
**ರ್ಮನೋವಚಃಕಾಯಗುಣೈಃ ಸ್ವಕರ್ಮಭಿಃ ।**
**ಅಮಾಯಿನಃ ಕಾಮದುಘಾಂಘ್ರಿಪಂಕಜಂ**
**ಯಥಾಧಿಕಾರಾವಸಿತಾರ್ಥಸಿದ್ಧಯೇ' ॥ ೪೪ ॥**

ಇದು ಪೃಥುಮಹಾರಾಜ ಪ್ರಜೆಗಳನ್ನು ಕುರಿತು ಹೇಳಿದ ಮಾತು— ಯೂಯಂ=ನೀವು ಆತ್ಮವೃತ್ತಿಭಿಃ=ಆತ್ಮಸ್ವಾಮಿಕವೃತ್ತಿಗಳೆನಿಸಿರುವ ಮನೋ- ವಾಕ್-ಕಾಯಗುಣೈಃ=ಮನಸ್ಸು, ವಾಗಿಂದ್ರಿಯ, ದೇಹ ಇವುಗಳ ಗುಣಗಳಾದ ಸ್ವಕರ್ಮಭಿಃ=ಮನಸ್ಸಿನ ಕಾರ್ಯ ಧ್ಯಾನ, ವಾಗಿಂದ್ರಿಯದ ಕರ್ಮ ಸ್ತೋತ್ರ, ದೇಹದ ಕರ್ಮ ವಿಹಿತಕರ್ಮಾಚರಣೆ ಇವುಗಳಿಂದ ಅಮಾಯಿನಃ ಸಂತಃ=ಕಪಟವಿಲ್ಲದವರಾಗಿ ಕಾಮದುಘಾಂಘ್ರಿಪಂಕಜಂ= ಅಭೀಷ್ಟದಾಯಕವಾದ ಭಗವಂತನ ಪಾದಕಮಲಗಳನ್ನು ಯಥಾಧಿಕಾರಾವ-

ಸಿತಾರ್ಥಸಿದ್ಧಯೇ=ಯೋಗ್ಯತೆಗೆ ಅನುಗುಣವಾಗಿ ಕ್ಲೃಪ್ತವಾಗಿರುವ ಮೋಕ್ಷಾನಂದಪ್ರಾಪ್ತಿಗಾಗಿ ಭಜತ=ಭಜಿಸಿರಿ.

ಇಲ್ಲಿ ಜ್ಞಾನಿಗಳ ಕರ್ಮವು ಅವರವರ ಯೋಗ್ಯತಾನುಗುಣವಾದ ಆನಂದವೃದ್ಧಿಗೆ ಕಾರಣ ಎಂದುದರಿಂದ ಮೋಕ್ಷದಲ್ಲೂ ಆನಂದತಾರತಮ್ಯ ವಿದೆ, ಎಂದಂತಾಗಿದೆ.

**'ಅಕ್ಷಣ್ವಂತಃ ಕರ್ಣವಂತಃ ಸಖಾಯೋ**
**ಮನೋಜವೇಷ್ವಸಮಾ ಬಭೂವುಃ ।**
**ಆದಘ್ನಾಸ ಉಪಕಕ್ಷಾಸ ಉ ತ್ವೇ-**
**ಹ್ರದಾ ಇವ ಸ್ನಾತ್ವಾ ಉ ತ್ವೇ ದದೃಶ್ರೇ** '(ಋ.೧೦.೭೧.೦೭) ॥ ೪೫ ॥

ಅಕ್ಷಣ್ವಂತಃ=ಕಣ್ಣಿನ ಸಾರ್ಥಕತೆಯನ್ನು ಪಡೆದಿರುವ, ಕರ್ಣವಂತಃ= ಕಿವಿಯನ್ನೂ ಉಪಲಕ್ಷಣಯಾ ಎಲ್ಲ ಇಂದ್ರಿಯಗಳನ್ನು ಸಾರ್ಥಕಪಡಿಸಿ ಕೊಂಡಿರುವ ಸಖಾಯಃ=ಒಬ್ಬರಿಂದೊಬ್ಬರಿಗೆ ಸ್ನೇಹವುಳ್ಳ ಮುಕ್ತರು ಮನೋಜವೇಷು=ಜ್ಞಾನಾತಿಶಯಲ್ಲಿ ಉಪಲಕ್ಷಣಯಾ ಜ್ಞಾನಾದಿಗುಣಗಳಲ್ಲಿ ಅಸಮಾಃ=ಅಸಮಾನತೆ ಉಳ್ಳವರು, ಅರ್ಥಾತ್ ತಾರತಮ್ಯವುಳ್ಳವರು ಬಭೂವುಃ=ಆದರು. ಅವರಲ್ಲಿ ಕೆಲವರು ಆದಘ್ನಾಸಃ=ಬಾಯಿಯವರೆಗೂ ಅಮೃತಸಮುದ್ರದಲ್ಲಿ ಮುಳುಗಿರುವವರು (ಆ=ಆಸ್ಯಂ ಪರಿಮಾಣಂ ಅಸ್ಯ ಇತಿ—ಆದಘ್ನಾಸಃ। ಪರಿಮಾಣಾರ್ಥದಲ್ಲಿ ದಘ್ನಇಕ್ ಪ್ರತ್ಯಯ. ಆಸ್ಯಶಬ್ದಕ್ಕೆ ಛಾಂದಸ ಆ ಎಂಬ ಆದೇಶ. ಆಸ್ಯಪರಿಮಿತ ಅಮೃತಸಮುದ್ರಉಳ್ಳವರು.) ತ್ವೇ=ಮತ್ತೆ ಕೆಲವರು ಉಪಕಕ್ಷಾಸಃ=ಶ್ವೇತದ್ವೀಪದಲ್ಲಿರುವ ಉಪವನದಲ್ಲಿ ವಿಹರಿಸುವವರು. (ಉಪ=ಉಪಗತಾಃ ಕಕ್ಷಂ=ಉಪವನಂ–ಉಪಕಕ್ಷಾಸಃ ತ್ವೇ=ಮತ್ತೆ ಕೆಲವರು ಸ್ನಾತ್ವಾ–ಸ್ನಾತವ್ಯಾಃ=ಸ್ನಾನ ಮಾಡಲು ಯೋಗ್ಯವಾದ ಹ್ರದಾ ಇವ=ಕೆರೆಯಂತೆ ಗಂಭೀರಭಾವವುಳ್ಳವರಾಗಿ ದದೃಶ್ರೇ=ಪರಮಾತ್ಮ ನನ್ನು ನೋಡುತ್ತಾರೆ.''

ಇದು ಋಗ್ವೇದದ ಮಂತ್ರ. ಇದರಲ್ಲಿ ಹೇಳಲ್ಪಟ್ಟ ಮೊದಲ ಗುಂಪಿನ ಮುಕ್ತರು ಪರಮಾತ್ಮನಿಂದ ದೂರದಲ್ಲಿರುವವರು, ಅಧಮರು. ಎರಡನೆಯವರು ಮಧ್ಯಮರು. ಮೂರನೆಯವರು ಉತ್ತಮರು.

**ಇತ್ಯಾದೀನಿ ಚ ವಾಕ್ಯಾನಿ ತಾರತಮ್ಯಂ ವಿಮುಕ್ತಿಗಮ್ ।**
**ವ್ಯಕ್ತಂ ವದಂತಿ ತತ್ ಕೇನ ಸಾಮ್ಯಂ ಮುಕ್ತೇಷು ಗಮ್ಯತೇ ॥ ೪೬ ॥**

ಇತ್ಯಾದೀನಿ=ಇವೇ ಮೊದಲಾದ ವಾಕ್ಯಾನಿ ಚ=ಪ್ರಮಾಣವಚನಗಳೂ ವಿಮುಕ್ತಿಗಂ=ಮೋಕ್ಷದಲ್ಲಿರುವ ತಾರತಮ್ಯಂ=ತಾರತಮ್ಯವನ್ನು ವ್ಯಕ್ತಂ= ಸ್ಪಷ್ಟವಾಗಿ ವದಂತಿ=ಹೇಳುತ್ತವೆ. ತತ್=ಹೀಗೆ ಶ್ರುತಿ-ಸ್ಮೃತಿಗಳ ವಿರೋಧ ವಿರುವುದರಿಂದ ಕೇನ=ಯಾವ ಆಧಾರದಿಂದ ಮುಕ್ತೇಷು=ಮುಕ್ತರಲ್ಲಿ ಸಾಮ್ಯಂ=ಸಾಮ್ಯವು ಅವಗಮ್ಯತೇ=ತಿಳಿಯಲ್ಪಡುವುದು?

**ದುಃಖಾದ್ಯಭಾವಸಾಮ್ಯಂ ಚ ಸಾಮ್ಯವಾಕ್ಯಾರ್ಥ ಈಯತೇ ।**
**ಭಕ್ತ್ಯಾದಿಗುಣಸದ್ಭಾವೇ ಹ್ಯತುಲ್ಯತ್ವಂ ಚ ಭಾರತೇ ।**
**ಉಕ್ತಂ ಸಾಧನವೈ(ಶೇಷ್ಯ)ಚಿತ್ರ್ಯಮಪಿ ಸರ್ವತ್ರ ಕಥ್ಯತೇ ॥ ೪೭ ॥**

ಸಾಮ್ಯವಾಕ್ಯಾರ್ಥಃ='ಪರಮಂ ಸಾಮ್ಯಮುಪೈತಿ' ಎಂಬ ಸಾಮ್ಯ ವನ್ನು ಹೇಳುವ ವಾಕ್ಯಗಳ ಅರ್ಥ-ದುಃಖಾದ್ಯಭಾವಸಾಮ್ಯಂ= ದುಃಖಾಭಾವ, ಅಲಂಬುದ್ಧಿ, ಲಿಂಗಭೇದ ಇವುಗಳಲ್ಲಿ ಮಾತ್ರ ಸಾಮ್ಯವು ಈಯತೇ= ಹೇಳಲ್ಪಡುತ್ತದೆ. ಹೊರತು ಸರ್ವಥಾ ಸಾಮ್ಯವಲ್ಲ.

ಹಿಂದೆ ಸಾಧನದಲ್ಲಿ ತಾರತಮ್ಯವಿರುವುದರಿಂದ ಮೋಕ್ಷಾನಂದ ದಲ್ಲಿಯೂ ತಾರತಮ್ಯವಿದೆ ಎಂದು ಅನುಮಾನ ಮಾಡಲಾಗಿದೆ. ಆ ಅನುಮಾನ ಮಹಾಭಾರತ ಸಮ್ಮತವಾಗಿದೆ—ಭಾರತೇ ಚ=ಮಹಾಭಾರತ ದಲ್ಲಿಯೂ ಭಕ್ತ್ಯಾದಿಗುಣಸದ್ಭಾವೇ=ಭಕ್ತಿಯೇ ಮೊದಲಾದ ಗುಣಗಳಲ್ಲಿ ತಾರತಮ್ಯವಿರುವುದರಿಂದ ಅತುಲ್ಯತ್ವಂ=ಮೋಕ್ಷಫಲದ ಅಸಮಾನತೆಯು ಉಕ್ತಂ=ಹೇಳಲ್ಪಟ್ಟಿದೆ.

ಮಹಾಭಾರತ ಶಾಂತಿಪರ್ವದಲ್ಲಿ ಹೀಗಿದೆ.

ನ ಭವತಿ ಹಿ ವಿದುಷಾಂ ಮಹದ್ಭಯಂ ।
ನಹಿ ಗತಿರಧಿಕಾಸ್ತಿ ಕಸ್ಯಚಿತ್
ಸತಿ ಹಿ ಗುಣೇ ಪ್ರವದಂತ್ಯತುಲ್ಯತಾಮ್ ॥

ಇದರ ಅಂತಿಮಚರಣದ ಅರ್ಥ-ಸತಿ ಗುಣೇ=ಭಕ್ತ್ಯಾದಿ ಸದ್ಗುಣಗಳು

ಅತುಲ್ಯೇ ಸತಿ=ಅಸಮಾನಗಳಾಗುತ್ತಿರಲು ಫಲಕ್ಕೆ ಅತುಲ್ಯತಾಂ= ಅಸಮಾನತೆಯನ್ನು ಪ್ರವದಂತಿ=ಹೇಳುತ್ತಾರೆ. ಭಕ್ತ್ಯಾದಿಗುಣಗಳಲ್ಲಿ ತಾರತಮ್ಯವಿದ್ದಮೇಲೆ ಅದರ ಫಲವಾದ ಆನಂದದಲ್ಲಿಯೂ ತಾರತಮ್ಯವು ಇರಲೇ ಬೇಕು.

ಭಕ್ತ್ಯಾದಿಸಾಧನಗಳಲ್ಲಿ ವೈಚಿತ್ರ್ಯವನ್ನು ಹೇಳುವ ವಾಕ್ಯಗಳನ್ನು 'ದಶಕಲ್ಪಂ...' ಇತ್ಯಾದಿಯಾಗಿ ಹಿಂದೆ ಹೇಳಲಾಗಿದೆ. ಇದಲ್ಲದೆ, ಸಾಧನವೈಚಿತ್ರ್ಯಂ=ಮೋಕ್ಷಸಾಧನಗಳಲ್ಲಿ ವೈಚಿತ್ರ್ಯವು ಸರ್ವತ್ರಾಪಿ=ಎಲ್ಲಾ ಗ್ರಂಥಗಳಲ್ಲೂ ಕಥ್ಯತೇ=ಹೇಳಲ್ಪಡುತ್ತದೆ. ಅಂತಹ ಕೆಲವು ವಾಕ್ಯಗಳು ಹೀಗಿವೆ—

**ದುರ್ಜ್ಞೇಯಂ ಘೋರರೂಪಸ್ಯ ತ್ರೈಲೋಕ್ಯಧ್ವಂಸಿನಃ ಪ್ರಭೋಃ ।**
**ದೈವತೈರ್ಮುನಿಭಿಃ ಸಿದ್ಧೈರ್ಮಹಾಯೋಗಿಭಿರೇವ ಚ ॥ ೪೮ ॥**

**ನಿತ್ಯಯುಕ್ತೈರ್ಮಹಾಭಾಗ್ಯೈರ್ವಿಮೋಹ (ವಿಮುಕ್ತ) ಕ್ಲೇಶಸಾಧ್ವಸೈಃ ।**
**ಮಹೋತ್ಸಾಹೈರ್ಮಹಾಧೈರ್ಯೈಃ ಸತ್ವಸ್ಥೈರ್ವ್ಯವಸಾಯಿಭಿಃ ॥ ೪೯ ॥**

**ಅತೀತಾನಾಗತಜ್ಞಾನಪ್ರಭವಾಪ್ಯಯವೇದಿಭಿಃ ।**
**ಶೌಚಸ್ವಾಧ್ಯಾಯಸಂತೋಷತಪಃಸತ್ಯದಯಾನ್ವಿತೈಃ ॥ ೫೦ ॥**

**ಕಿಮು ಮರ್ತ್ಯೈರ್ಭಯಭ್ರಾಂತಿಧ್ವಂಸಮೋಹರುಜಾನ್ವಿತೈಃ ।**
**ಅಲ್ಪಾಯುರ್ವೀರ್ಯಧೀಸತ್ತ್ವವ್ಯವಸಾಯಶ್ರುತಿವ್ರತೈಃ ॥ ೫೧ ॥**

ಘೋರರೂಪಸ್ಯ=ಭಯಂಕರರೂಪವಾದ ತ್ರೈಲೋಕ್ಯಧ್ವಂಸಿನಃ= ಮೂರುಲೋಕಗಳನ್ನೂ ಧ್ವಂಸಮಾಡುವ ಸಾಮರ್ಥ್ಯವುಳ್ಳ(ಅದಕ್ಕಾಗಿಯೇ ಅವನು ಘೋರರೂಪ) ಪ್ರಭೋಃ=ನರಸಿಂಹಸ್ವಾಮಿಯ ಧ್ಯಾನಚಕ್ರಂ= ಧ್ಯಾನದ ಆವೃತ್ತಿಯು (ಅಥಾತಃ ಸಂಪ್ರವಕ್ಷಾಮಿ ಧ್ಯಾನಚಕ್ರಂ–ಎಂದು ವೈಹಾಯಸಸಂಹಿತೆಯ ಈ ಪ್ರಕರಣವು ಪ್ರಾರಂಭವಾಗಿದೆ. ಆದ್ದರಿಂದ ಧ್ಯಾನಚಕ್ರಂ ಎಂಬ ಪದವನ್ನು ಅಧ್ಯಾಹಾರ ಮಾಡಬೇಕು. ಧ್ಯಾನಚಕ್ರಶಬ್ದಕ್ಕೆ

ರಾ.ಟಿ. ಮೇಲಿನ ಅರ್ಥವನ್ನು ಹೇಳಿದೆ. ಶೇ.ವಾ.ಚಂ. ಧ್ಯಾನವಿಷಯೀಭೂತಂ ರೂಪಮಿತ್ಯರ್ಥಃ। 'ನೃಸಿಂಹರೂಪಮಿತಿ ಸನ್ನ್ಯಾಯರತ್ನಾವಲ್ಲ್ಯನುರೋಧಾತ್' ಎಂದಿದೆ.)

ದೇವತೈಃ=ದೇವತೆಗಳಿಂದಲೂ ಮುನಿಭಿಃ=ಮುನಿಗಳಿಂದಲೂ ಸಿದ್ಧೈಃ= ಸಿದ್ಧರಿಂದಲೂ ಮಹಾಯೋಗಿಭಿರೇವ ಚ=ಮಹಾಯೋಗಿಗಳಿಂದಲೂ ದುರ್ಜ್ಞೇಯಂ=ತಿಳಿಯಲು ಅಸಾಧ್ಯವಾದುದು.

ಅವರು ಹೆಸರಿಗಷ್ಟೇ ಯೋಗಿಗಳಲ್ಲ, ನಿತ್ಯಯುಕ್ತೈಃ=ಸದಾ ಧ್ಯಾನೋದ್ಯೋಗವಿರುವ, ಮಹಾಭಾಗ್ಯೈಃ=ಇಂದ್ರಿಯ ಜಯಾದಿಗಳುಳ್ಳ, ವಿಮೋಹಕ್ಲೇಶ–ಸಾಧ್ವಸೈಃ=ಮಿಥ್ಯಾಜ್ಞಾನ–ಅವಿದ್ಯಾದಿ ದೋಷಗಳು, ವಿಘ್ನಾದಿಭಯ ಇವುಗಳಿಂದ ರಹಿತರಾದ ಮಹೋತ್ಸಾಹೈಃ=ಅತಿಯಾದ ಪ್ರಯತ್ನಶೀಲರಾದ, ಮಹಾಧೈರ್ಯೈಃ=ಅತಿಧೈರ್ಯವುಳ್ಳ ಸತ್ವಸ್ಥೈಃ= ಸತ್ವಗುಣಪ್ರಚುರರಾದ ವ್ಯವಸಾಯಿಭಿಃ=ನಿಶ್ಚಿತಮನೋಭಾವವುಳ್ಳ ಅತೀತಾನಾಗತಜ್ಞಾನ–ಪ್ರಭವಾಪ್ಯಯವೇದಿಭಿಃ=ಭೂತ–ಭವಿಷ್ಯದ್ ವಸ್ತುಗಳನ್ನು (ಜ್ಞಾನ=ಜ್ಞೇಯ) ಹಾಗೂ ಸೃಷ್ಟಿ–ಸಂಹಾರಗಳನ್ನು ತಿಳಿಯಲು ಸಮರ್ಥರಾದ ಶೌಚ–ಸ್ವಾಧ್ಯಾಯ–ಸಂತೋಷ–ತಪಃ–ಸತ್ವ–ದಯಾನ್ವಿತೈಃ= ಶೌಚ, ಸ್ವಾಧ್ಯಾಯಾಧ್ಯಯನ – ತೃಪ್ತಿ – ತಪಸ್ಸು – ಬಲ – ದಯೆಗಳಿಂದ ಕೂಡಿರುವ ಯೋಗಿಗಳಿಂದಲೂ ದುರ್ಜ್ಞೇಯವಾದುದು. ಹೀಗಿರುವಾಗ, ಭಯ–ಭ್ರಾಂತಿ–ಧ್ವಂಸ–ಮೋಹ–ರುಜಾನ್ವಿತೈಃ=ಭಯ, ಭ್ರಾಂತಿ, ಮನಸ್ಸಿನ ಚಾಂಚಲ್ಯ, ಅಜ್ಞಾನ, ರೋಗಗಳಿಂದ ಕೂಡಿರುವ, ಅಲ್ಪಾಯು–ವೀರ್ಯ– ಧೀ–ಸತ್ವ–ವ್ಯವಸಾಯ–ಶ್ರುತಿ–ವ್ರತೈಃ=ಅಲ್ಪವಾದ ಆಯುಷ್ಯ, ಶಕ್ತಿ, ಜ್ಞಾನ, ಸತ್ವಗುಣ, ಪ್ರಯತ್ನ, ಶ್ರವಣ, ವ್ರತಗಳಿರುವ ಮರ್ತ್ಯೈಃ=ಮನುಷ್ಯರಿಂದ ದುರ್ಜ್ಞೇಯಮಿತಿ ಕಿಮು ವಕ್ತವ್ಯಂ=ತಿಳಿಯಲು ಅಸಾಧ್ಯವೆಂದು ಏನು ಹೇಳಬೇಕು?

ಈ ಸಂಹಿತಾವಾಕ್ಯದಿಂದ ದೇವತೆಗಳಿಗಿಂತ ಮನುಷ್ಯರ ಸಾಧನೆಯು ಕಡಿಮೆ ಎಂದು ಸ್ಪಷ್ಟವಾಗಿ ತಿಳಿಯುತ್ತದೆ.

**‘ಕಸ್ತಂ ಮದಾಮದಂ ದೇವಂ ಮದನ್ಯೋ ಜ್ಞಾತುಮರ್ಹತಿ’ ।**
**‘ಬ್ರಹ್ಮೈವ ಕಿಂಚಿಜ್ಜಾನಾತಿ ನ ತದನ್ಯೋ ಹಿ ಕಶ್ಚನ’ ॥ ೫೨ ॥**

ಪೂರ್ವಾರ್ಧ ಕಾಠಕೋಪನಿಷತ್ತಿನಲ್ಲಿದೆ. ಯಮದೇವರು ನಚಿಕೇತನಿಗೆ ಹೇಳುತ್ತಾರೆ— ‘‘ಮದಾಮದಂ=ದೇವಾಸುರರಿಗೆ ಸುಖ-ದುಃಖಗಳನ್ನು ಕೊಡುವ ತಂ ದೇವಂ=ಆ ದೇವನನ್ನು ಮದನ್ಯಃ=ನನಗಿಂತ ಭಿನ್ನನಾದ ಕಃ= ಯಾರು ಜ್ಞಾತುಂ=ತಿಳಿಯಲು ಅರ್ಹತಿ=ಯೋಗ್ಯನಾದಾನು?’’ ಇದರಿಂದ ಯಮದೇವನಿಗೆ ಜ್ಞಾನಾಧಿಕ್ಯವು ತಿಳಿಯುತ್ತದೆ.

‘‘ಬ್ರಹ್ಮೈವ=ಚತುರ್ಮುಖಬ್ರಹ್ಮನೇ ಕಿಂಚಿತ್ ಜಾನಾತಿ=ಸ್ವಲ್ಪ ತಿಳಿಯುತ್ತಾನೆ. ತದನ್ಯಃ=ಅವನಿಗಿಂತ ಬೇರೆಯವರಾದ ಕಶ್ಚನ=ಯಾರೊಬ್ಬರೂ ನ ಜಾನಾತಿ=ಪರಮಾತ್ಮನನ್ನು ತಿಳಿಯಲಾರರು’’ ಇದರಿಂದ ಚತುರ್ಮುಖನ ಸಾಧನೆಯ ಮಟ್ಟ ಶ್ರೇಷ್ಠವಾದುದು, ಎಂದು ತಿಳಿಯುತ್ತದೆ.

**ಮುಕ್ತಾನಾಮಪಿ ಸಿದ್ಧಾನಾಂ ನಾರಾಯಣಪರಾಯಣಃ ।**
**ಸುದುರ್ಲಭಃ ಪ್ರಶಾಂತಾತ್ಮಾ ಕೋಟಿಷ್ವಪಿ ಮಹಾಮತೇ ॥ ೫೩ ॥**

ಮುಕ್ತಾನಾಂ=ಶರೀರಾಭಿಮಾನರಹಿತರಾದ ಸಿದ್ಧಾನಾಂ=ಜ್ಞಾನಿಗಳ ಕೋಟಿಷ್ವಪಿ=ಒಂದು ಕೋಟಿ ಜನರಲ್ಲಿ ನಾರಾಯಣಪರಾಯಣಃ= ನಾರಾಯಣನನ್ನೇ ಸರ್ವಥಾ ಆಶ್ರಯಿಸಿ ವಿಷಯಸಮೂಹದ ಬಗ್ಗೆ ಗಮನ ಕೊಡದವನು, ಪ್ರಶಾಂತಾತ್ಮಾ=ಅತ್ಯಂತ ಶಮಪ್ರಧಾನನು ಪ್ರಕರ್ಷೇಣ ಶಾಂತಃಆತ್ಮಾ=ಮಾಹಾತ್ಮ್ಯಜ್ಞಾನದಿಂದ ಸ್ನಿಗ್ಧವಾದ ಮನಸ್ಸುಳ್ಳವರು ಸುದುರ್ಲಭಃ=ಕೆಲವರು ಮಾತ್ರ. ಉಳಿದವರು, ನಾರಾಯಣಾಯನರು, ಶಾಂತಾತ್ಮರು’’.

**ಇಯಂ ವಿಸೃಷ್ಟಿರ್ಯತ ಆಬಭೂವ**
**ಯದಿ ವಾ ದಧೇ ಯದಿ ವಾ ನ ।**
**ಯೋ ಅಸ್ಯಾಧ್ಯಕ್ಷಃ ಪರಮೇ ವ್ಯೋಮನ್**
**ಸೋ ಅಂಗ ವೇದ ಯದಿ ವಾ ನ ವೇದ ॥ ೫೪ ॥**

ಇಯಂ=ಪ್ರತ್ಯಕ್ಷಕಾಣುವ ಈ ವಿಸೃಷ್ಟಿಃ=ಆದಿ ಸೃಷ್ಟಿಯು ಯತಃ= ಯಾವ ಚತುರ್ಮುಖನಿಂದ ಆಬಭೂವ=ಆಯಿತೋ ಯಶ್ಚ= ಯಾರು ಅಸ್ಯ ಅಧ್ಯಕ್ಷಃ=ಇದಕ್ಕೆ ಅಧಿಪತಿಯೋ ಅವನೂ ಪರಮಾತ್ಮನನ್ನು ಪರಮೇ ವ್ಯೋಮನ್=ಶ್ರೇಷ್ಠವಾದ ಹೃದಯಾಕಾಶದಲ್ಲಿ ಯದಿ ವಾ ದಧೇ= ಧ್ಯಾನಿಸುತ್ತಾನೆ. ಯದಿವಾ ನ=ತನ್ನ ಹೃದಯಲ್ಲಿ ಧ್ಯಾನಿಸುತ್ತಿಲ್ಲ. ಅಥವಾ ಯದಿವಾ ವೇದ ಯದಿವಾ ನ=ತಿಳಿಯುತ್ತಾನೆ. ತಿಳಿಯದಿರುತ್ತಾನೆ, ಅಂದರೆ ಪರಮಾತ್ಮನನ್ನು ಇತರರಿಗಿಂತ ಹೆಚ್ಚು ಸರ್ವೋತ್ತಮನನ್ನಾಗಿ ತಿಳಿದರೂ ಪೂರ್ಣವಾಗಿ ತಿಳಿಯಲಾರ, ಧ್ಯಾನಿಸಲಾರ.

(ಇತರಾಪೇಕ್ಷಯಾ ಆಧಿಕ್ಯೇನ ಧ್ಯಾಯತಿ, ಜಾನಾತಿ ಚ । ಕಾರ್ತ್ಸ್ನ್ಯೇನ ತು ನ ಧ್ಯಾಯತಿ ಜಾನಾತಿ ಚ-ಸುಧಾ.) ಇದರಿಂದ ಬ್ರಹ್ಮದೇವ ಅನ್ಯರಿಗಿಂತ ಹೆಚ್ಚು ಧ್ಯಾನಿಸುತ್ತಾನೆ, ತಿಳಿಯುತ್ತಾನೆ ಎಂದು ಸಿದ್ಧವಾಗುತ್ತದೆ. ಈ ಮಂತ್ರ 'ಆನೀದವಾತಂ ಸ್ವಧಯಾ ತದೇಕಂ-ಎಂಬ ವಿಶ್ವಕರ್ಮ ಸೂಕ್ತದಲ್ಲಿದೆ.

**''ಯಃ ಸ್ವಾತ್ಮಮಾಯಾವಿಭವಂ ಸ್ವಯಂ ಗತೋ**
**ನಾಹಂ ನಭಸ್ವಾಂಸ್ತಮಥಾಪರೇ ಕುತಃ ।''**
**'ಬ್ರಹ್ಮಾಪಿ ಯಂ ವೇತ್ತಿ ನ ಚೇಹ ಸಮ್ಯಗ್(ನೈವೇಹ)**
**ಅನ್ಯೇ ಕುತೋ ದೇವಮುನೀಂದ್ರಮರ್ತ್ಯಾಃ ' ॥ ೫೫ ॥**

(ಕಿಂ ಸ್ಕಂಧಗತಂ ವಾಕ್ಯಮಿತಿ ಶೋಧ್ಯಮ್-ವಾಕ್ಯಾರ್ಥರತ್ನಮಾಲಾ)

ಬ್ರಹ್ಮದೇವನ ಮಾತಿದು— ಯಃ=ಯಾವ ಪರಮಾತ್ಮನು ಸ್ವಾತ್ಮಮಾಯಾವಿಭವಂ=ತನ್ನ ಮಹಿಮೆಯ ವಿಸ್ತಾರವನ್ನು ಸ್ವಯಂಗತಃ= ತಾನೇ ತಿಳಿದಿರುವನೋ ನ ಅಹಂ=ನಾನೂ ತಿಳಿದಿಲ್ಲ. ನ ನಭಸ್ವಾನ್= ವಾಯುದೇವನೂ ತಿಳಿದಿಲ್ಲ. ಅಥ ಅಪರೇ=ಇನ್ನೂ ಉಳಿದವರು ತಂ= ಅವನನ್ನು ಕುತಃ=ಹೇಗೆ ತಿಳಿದಾರು? (ಇದು ಭಾಗ.2.6 ಅಧ್ಯಾಯದ 35ನೇ ಶ್ಲೋಕದ ಉತ್ತರಾರ್ಧ.)

'ಇಹ=ಜೀವರ ಮಧ್ಯದಲ್ಲಿ ಬ್ರಹ್ಮಾಪಿ=ಬ್ರಹ್ಮದೇವನೂ ಯಂ=ಯಾವ ಪರಮಾತ್ಮನನ್ನು ನ ವೇತ್ತಿ=ಪೂರ್ಣವಾಗಿ ತಿಳಿದಿಲ್ಲ. ಅನ್ಯೇ=ಉಳಿದ

ದೇವ–ಮುನೀಂದ್ರಮರ್ತ್ಯಾಃ=ದೇವತೆಗಳು, ಮುನಿಶ್ರೇಷ್ಠರು, ಮನುಷ್ಯರು ಕುತಃ=ಹೇಗೆ ತಿಳಿದಾರು?'

**'ನಮಸ್ತೇಽಮಿತತತ್ತ್ವಾಯ ಬ್ರಹ್ಮಾ(ಧರ್ಮಾ) ದೀನಾಂ ಚ ಸೂತಯೇ।**
**ನಿರ್ಗುಣಾಯ ಚ ಸತ್ಕಾಷ್ಠಾಂ ನಾಹಂ ವೇದಾಪರೇ ಕುತಃ' ॥ ೫೬ ॥**

ಬ್ರಹ್ಮದೇವನ ವಾಕ್ಯ ಇದು(ಬ್ರಹ್ಮವಾಕ್ಯಮಿದಂ–ಸುಧಾ)— ಅಮಿತ-ತತ್ತ್ವಾಯ (ತತ್ತ್ವಂಸ್ವರೂಪಂ)= ಅನಂತರೂಪನಾದ, ಬ್ರಹ್ಮಾದೀನಾಂ ಚ ಸೂತಯೇ=ಬ್ರಹ್ಮಾದಿದೇವತೆಗಳಿಗೂ ಕಾರಣನಾದ ನಿರ್ಗುಣಾಯ=ಪ್ರಾಕೃತ ಗುಣರಹಿತನಾದ ತೇ=ನಿನಗೆ ನಮಃ=ನಮಸ್ಕಾರ. ಸತ್ಕಾಷ್ಠಾಂ=ಯಾರ ಏಕದೇಶವನ್ನೂ (ಸತ್‌ಕಾಷ್ಠಾಂ=ದಿಙ್ ಮಾತ್ರಂ–ಸುಧಾ. ಯಸ್ಯೈಕದೇಶ-ಮಪೀತ್ಯರ್ಥಃ–ರಾ.ಟಿ.) ಅಹಂ=ನಾನೂ ನ ವೇದ=ತಿಳಿದಿಲ್ಲ. ಅಪರೇ ಕುತಃ=ಉಳಿದವರೆಲ್ಲಿ.

**'ನಾಹಂ ಪರಾಯುರ್ ಋಷಯೋ ನ ಮರೀಚಿಮುಖ್ಯಾ**
**ಜಾನಂತಿ ಯದ್ವಿರಚಿತಂ ಖಲು ಸತ್ತ್ವಸಂಘಾಃ (ಗಾಃ) ।**
**ಯನ್ಮಾಯಯಾ ಮುಷಿತಚೇತಸ ಈಶದೈತ್ಯ-**
**ಮರ್ತ್ಯಾದಯಃ ಕಿಮುತ ಶಶ್ವದಭದ್ರವೃತ್ತಾಃ' ॥ ೫೭ ॥**

ಇದು ಶಿವನಾಡಿದ ಮಾತು— ಪರಾಯುಃ ಅಹಂ=ದೀರ್ಘಾಯುಷ್ಯ ಇರುವ ನಾನೂ ಯದ್ವಿರಚಿತಂ=ಯಾರ ಚರಿತ್ರೆಯನ್ನು ನ ಜಾನಾಮಿ= ತಿಳಿದಿಲ್ಲ. ಮರೀಚಿಮುಖ್ಯಾಃ=ಮರೀಚಿಯೇ ಮೊದಲಾದ ಋಷಯಃ= ಋಷಿಗಳೂ ಸತ್ತ್ವಸಂಘಾಃ=ಜೀವಸಮೂಹಗಳೂ ನ ಜಾನಂತಿ=ತಿಳಿದಿಲ್ಲ. ಈಶ=ಒಡೆಯನೇ, ಯನ್ಮಾಯಯಾ=ಯಾರ ಇಚ್ಛಾಶಕ್ತಿಯಿಂದ ದೈತ್ಯ-ಮರ್ತ್ಯಾದಯಃ=ದೈತ್ಯರು, ಮನುಷ್ಯರೇ ಮೊದಲಾದವರು ಮುಷಿತ ಚೇತಸಃ=ಮಿಥ್ಯಾಜ್ಞಾನಕ್ಕೆ ಒಳಗಾದ ಮನಸ್ಸುಳ್ಳವರೂ ಅದಭ್ರವೃತ್ತಯಃ= ಚಲವ್ಯಾಪಾರವುಳ್ಳವರು ಕಿಮುತ=ನಿನ್ನನ್ನು ತಿಳಿದಿಲ್ಲವೆಂದು ಹೇಳಬೇಕಾ ಗಿದೆಯೆ?

'ಅಹಂ ಮಹೇಂದ್ರೋ ನಿರ್ಋತಿಃ ಪ್ರಚೇತಾಃ
ಸೋಮೋಽಗ್ನಿರೀಶಃ ಪವನೋಽರ್ಕೋ ವಿರಿಂಚಃ ।
ಆದಿತ್ಯವಿಶ್ವೇ ವಸವೋಽಥ ಸಾಧ್ಯಾ
ಮರುದ್ಗಣಾ ರುದ್ರಗಣಾಃ ಸಸಿದ್ಧಾಃ ॥ ೫೮ ॥
ಅನ್ಯೇ ಚ ಯೇ ವಿಶ್ವಸೃಜೋಽಮರೇಶಾ
ಭೃಗ್ವಾದಯೋಽಸ್ಪೃಷ್ಟರಜಸ್ತಮಸ್ಕಾಃ ।
ಯಸ್ಯೇಹಿತಂ ನ ವಿದುಃ ಸ್ಪೃಷ್ಟಮಾಯಾಃ
ಸತ್ತ್ವಪ್ರಧಾನಾ ಅಪಿ ಕಿಂ ತತೋಽನ್ಯೇ ' ॥ ೫೯ ॥

ಇದು ಯಮನ ಮಾತು— ಅಹಂ=ನಾನು ಮಹೇಂದ್ರಃ=ಇಂದ್ರನು, ನಿರ್ಋತಿಃ=ನಿರ್ಋತಿದೇವತೆ, ಪ್ರಚೇತಾಃ=ವರುಣ, ಸೋಮಃ=ಚಂದ್ರ, ಅಗ್ನಿಃ=ಅಗ್ನಿಯು, ಈಶಃ=ರುದ್ರ, ಪವನಃ=ವಾಯು, ಅರ್ಕಃ=ಸೂರ್ಯ, ವಿರಿಂಚಃ=ಬ್ರಹ್ಮನು, ಆದಿತ್ಯ–ವಿಶ್ವೇವಸವಃ=ದ್ವಾದಶಾದಿತ್ಯರು, ಹತ್ತು ವಿಶ್ವೇ ದೇವತೆಗಳು, ಅಷ್ಟವಸುಗಳು ಸಾಧ್ಯಾಃ=ಸಾಧ್ಯರು, ಮರುದ್‌ಗಣಾಃ=49 ಮರುದ್ದೇವತೆಗಳು, ಸಸಿದ್ಧಾಃ='ಸಿದ್ಧ'ರಿಂದ ಸಹಿತರಾದ ರುದ್ರಗಣಾಃ= ಏಕಾದಶರುದ್ರರು ಅನ್ಯೇ ಚ=ಇತರರಾದ ಯೇ ವಿಶ್ವಸೃಜಃ ಅಮರೇಶಾಃ= ವಿಶ್ವಕರ್ತರಾದ ದೇವತಾಶ್ರೇಷ್ಠರು ಅಸ್ಪಷ್ಟರಜಸ್ತಮಸ್ಕಾಃ=ರಜೋಗುಣ– ತಮೋಗುಣಗಳ ಪ್ರಭಾವಕ್ಕೆ ಒಳಗಾಗದ ಭೃಗ್ವಾದಯಃ=ಭೃಗು ಮೊದಲಾದ ಋಷಿಗಳು ಸ್ಪಷ್ಟಮಾಯಾಃ=ಮಾಯಾಖ್ಯಅವಿದ್ಯೆಯ ಸ್ಫುಟತಿಳುವಳಿಕೆ ಉಳ್ಳವರೂ ಸತ್ವಪ್ರಧಾನಾ ಅಪಿ=ಸತ್ವಗುಣವೇ ಪ್ರಧಾನವಾಗಿರುವವರೂ ಆದರೂ ಯಸ್ಯ=ಯಾರ ಈಹಿತಂ=ನಡೆಯನ್ನೂ ನ ವಿದುಃ=ತಿಳಿಯ ಲಾರರೋ ಕಿಂ ತತೋಽನ್ಯೇ=ಹೀಗಿರುವಾಗ ಇತರರು ತಿಳಿಯಲಾರರು ಎಂದೇನು ಹೇಳಬೇಕು?

'ಸರ್ವಸ್ಯಾದೌ ಸ್ಮೃತೋ ಬ್ರಹ್ಮಾ ತಸ್ಮಾದ್ ದೇವಾದನಂತರಃ ।
ಜಾನಾತಿ ದೇವಪ್ರವರಂ ಭೂಯಶ್ಚಾತೋಽಧಿಕಂ ನೃಪ' ॥ ೬೦ ॥

ನೃಪ=ಎಲೈ ರಾಜನೆ! ಸರ್ವಸ್ಯ=ಸಕಲಪ್ರಪಂಚದ ಆದೌ ಸ್ಮೃತಃ=

ಆರಂಭದಲ್ಲಿದ್ದವನೆಂದು ಹೇಳಲ್ಪಡುವ ಬ್ರಹ್ಮಾ=ಚತುರ್ಮುಖನು, ತಸ್ಮಾದ್ದೇವಾತ್ ಅನಂತರಃ=ಆ ಪರಮಾತ್ಮನಿಗಿಂತ ಅನಂತರದವನಾಗಿ ಅತಃಅಧಿಕಂ=ಸಕಲ ಪ್ರಾಣಿವರ್ಗಕ್ಕಿಂತ ಹೆಚ್ಚಿನವನು, ಭೂಯಃ=ಹೆಚ್ಚಾಗಿ ದೇವಪ್ರವರಂ ಜಾನಾತಿ=ದೇವಶ್ರೇಷ್ಠನನ್ನು ತಿಳಿದಿರುತ್ತಾನೆ.

**'ನ ತ್ವಾಮತಿಶಯಿಶ್ಯಂತಿ ಮುಕ್ತಾವಪಿ ಕಥಂಚನ ।**
**ಮದ್ಭಕ್ತಿಯೋಗಾಜ್ಜ್ಞಾನಾಚ್ಚ ಸರ್ವಾನತಿಶಯಿಷ್ಯಸಿ' ॥ ೬೧ ॥**

ಭಗವಂತ ಬ್ರಹ್ಮನಿಗೆ ಹೇಳುವ ಪ್ರಶಂಸಾವಚನ–ತ್ವಾಂ=ನಿನ್ನನ್ನು ಮುಕ್ತಾವಪಿ ಮೋಕ್ಷದಲ್ಲಿ ಕಥಂಚನ=ಯಾವುದೇ ರೀತಿಯಿಂದ, ಯಾರೂ ನ ಅತಿಶಯಿಷ್ಯಂತಿ=ಮೀರಿ ನಿಲ್ಲಲಾರರು. ನೀನು ಮಾತ್ರ, ಮದ್ಭಕ್ತಿ-ಯೋಗಾತ್=ನನ್ನ ಭಕ್ತಿರೂಪವಾದ ಸಾಧನೆಯಿಂದ ಹಾಗೂ ಜ್ಞಾನಾಚ್ಚ= ಜ್ಞಾನದಿಂದಲೂ ಸರ್ವಾನ್=ಎಲ್ಲ ಮುಕ್ತರನ್ನೂ ಅತಿಶಯಿಷ್ಯಸಿ=ಮೀರಿ ನಿಲ್ಲುವಿ.

**'ಯಥಾ ಭಕ್ತಿವಿಶೇಷೋಽತ್ರ ದೃಶ್ಯತೇ ಪುರುಷೋತ್ತಮೇ ।**
**ತಥಾ ಮುಕ್ತಿವಿಶೇಷೋಽಪಿ ಜ್ಞಾನಿನಾಂ ಲಿಂಗಭೇದನೇ ' ॥ ೬೨ ॥**

ಅತ್ರ=ಸಂಸಾರದಲ್ಲಿ ಯಥಾ=ಹೇಗೆ ಭಕ್ತಿವಿಶೇಷಃ=ಸಾಧಕರ ಭಕ್ತಿಯಲ್ಲಿ ಹೆಚ್ಚು ಕಡಿಮೆ ಇದೆಯೋ ತಥಾ=ಅದಕ್ಕೆ ಅನುಗುಣವಾಗಿ ಜ್ಞಾನಿನಾಂ=ಜ್ಞಾನಿಗಳಿಗೆ ಲಿಂಗಭೇದನೇ=ಲಿಂಗಶರೀರವು ಭಂಗವಾಗುತ್ತಿರಲು ಮುಕ್ತಿ-ವಿಶೇಷೋಽಪಿ=ಮೋಕ್ಷದಲ್ಲಿ ತಾರತಮ್ಯವೂ ಇರುತ್ತದೆ.

**'ಸಾಯುಜ್ಯಂ ಸಮನುಪ್ರಾಪ್ತಾ ಅಪಿ ದೇವಾದಯೋಽಖಿಲಾಃ ।**
**ತಾರತಮ್ಯಾದ್ಧಿ ತಿಷ್ಠಂತಿ ತಾರತಮ್ಯಂ ಹಿ ಸಾಧನೇ' ॥ ೬೩ ॥**

ಅಖಿಲಾಃ ದೇವಾದಯಃ=ಎಲ್ಲಾ ದೇವತೆಗಳೇ ಮೊದಲಾದವರು ಸಾಯುಜ್ಯಂ ಸಮನುಪ್ರಾಪ್ತಾ ಅಪಿ=ಮೋಕ್ಷವನ್ನು ಹೊಂದಿದ್ದರೂ ತಾರತಮ್ಯಾದ್ಧಿ=ತಾರತಮ್ಯದಿಂದಲೇ ತಿಷ್ಠಂತಿ=ಇರುತ್ತಾರೆ. ಹಿ=ಏಕೆಂದರೆ, ಸಾಧನೇ=ಅವರ ಮೋಕ್ಷಸಾಧನೆಯಲ್ಲಿ ತಾರತಮ್ಯಂ=ತಾರತಮ್ಯವಿದೆ.

**'ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ ಯತತಿ ಸಿದ್ಧಯೇ ।**
**ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ವತಃ ' ॥ ೬೪ ॥**

ಮನುಷ್ಯಾಣಾಂ ಸಹಸ್ರೇಷು ಸಾವಿರ ಮನುಷ್ಯರಲ್ಲಿ ಕಶ್ಚಿತ್=ಒಬ್ಬನು ಸಿದ್ಧಯೇ=ಮೋಕ್ಷಪ್ರಾಪ್ತಿಗಾಗಿ ಯತತಿ=ಪ್ರಯತ್ನಿಸುತ್ತಾನೆ. ಯತತಾಂ ಸಿದ್ಧಾನಾಮಪಿ=ಪ್ರಯತ್ನ ಮಾಡುವ ಸಾಧಕರ ಮಧ್ಯದಲ್ಲಿಯೂ ಕಶ್ಚಿತ್=ಒಬ್ಬನು ಮಾಂ=ನನ್ನನ್ನು ತತ್ತ್ವತಃ=ಚೆನ್ನಾಗಿ ವೇತ್ತಿ=ತಿಳಿಯುತ್ತಾನೆ. (ಇದು ಗೀತಾವಚನ)

ಏಕಂ ಚ ತತ್ತ್ವತೋ ಜ್ಞಾತುಂ ವಿನಾ ಸರ್ವಜ್ಞತಾಂ ನರಃ ॥

ಒಂದು ವಿಷಯವನ್ನು ಸ್ಫುಟವಾಗಿ ತಿಳಿಯಬೇಕಾದರೂ ಆವರವರ ಯೋಗ್ಯತೆಗೆ ಅನುಗುಣವಾದ ಸರ್ವಜ್ಞತ್ವ ಇಲ್ಲದೆ ಸಾಧ್ಯವಿಲ್ಲ, ಎಂದಿರುವುದರಿಂದ ತತ್ತ್ವತಃ ಎಂದರೆ ಚೆನ್ನಾಗಿ ಎಂದರ್ಥ.

**'ಯ ಇಮಂ (ದಂ) ಪರಮಂ ಗುಹ್ಯಂ ಮದ್ಭಕ್ತೇಷ್ವಭಿಧಾಸ್ಯತಿ ।**
**ಭಕ್ತಿಂ ಮಯಿ ಪರಾಂ ಕೃತ್ವಾ ಮಾಮೇವೈಷ್ಯತ್ಯಸಂಶಯಃ' ॥ ೬೫ ॥**

**ನಚ ತಸ್ಮಾನ್ಮನುಷ್ಯೇಷು ಕಶ್ಚಿನ್ಮೇ ಪ್ರಿಯಕೃತ್ತಮಃ ।**
**ಭವಿತಾ ನಚ ಮೇ ತಸ್ಮಾದನ್ಯಃ ಪ್ರಿಯತರೋ ಭುವಿ ॥ ೬೬ ॥**

**ಅಧ್ಯೇಷ್ಯತೇ ಚ ಯ ಇಮಂ ಧರ್ಮ್ಯಂ ಸಂವಾದಮಾವಯೋಃ ।**
**ಜ್ಞಾನಯಜ್ಞೇನ ತೇನಾಹಮಿಷ್ಟಃ ಸ್ಯಾಮಿತಿ ಮೇ ಮತಿಃ ॥ ೬೭ ॥**

**ಶ್ರದ್ಧಾವಾನನಸೂಯ(ಯು)ಶ್ಚ ಶೃಣುಯಾದಪಿ ಯೋ ನರಃ ।**
**ಸೋಽಪಿ ಮುಕ್ತಃ ಶುಭಾನ್ಲ್ಲೋಕಾನ್ ಪ್ರಾಪ್ನುಯಾತ್**
**ಪುಣ್ಯಕರ್ಮಣಾಮ್**(ಗೀತಾ.೧೮.೬೮) **॥ ೬೮ ॥**

ಭಗವದ್ಗೀತೆಯ ಕೊನೆಯಲ್ಲಿ ಶ್ರೀಕೃಷ್ಣ ಅರ್ಜುನನಿಗೆ ಹೇಳಿದ ಮಾತು— ಯಃ=ಯಾರು ಪರಮಂ ಗುಹ್ಯಂ ಇಮಂ=ಶ್ರೇಷ್ಠ-ರಹಸ್ಯವಾದ ಇದುವರೆಗೆ ಹೇಳಿರುವ ವಿಷಯಗಳನ್ನು ಮದ್ಭಕ್ತೇಷು=ನನ್ನ ಭಕ್ತರಲ್ಲಿ

ಅಭಿಧಾಸ್ಯತಿ=ಹೇಳುವನೋ ಮಯಿ=ನನ್ನಲ್ಲಿ ಪರಾಂ ಭಕ್ತಿಂ ಕೃತ್ವಾ= ಪರಮ ಭಕ್ತಿಯನ್ನು ಮಾಡಿ ಅವನು ಮಾಮೇವ=ನನ್ನನ್ನೇ ಏಷ್ಯತಿ= ಹೊಂದುತ್ತಾನೆ, ಅಸಂಶಯಃ=ಸಂದೇಹಬೇಡ. ಮನುಷ್ಯೇಷು=ಮನುಷ್ಯರಲ್ಲಿ ತಸ್ಮಾತ್= ಅಂತಹವನಿಗಿಂತ ಮೇ=ನನಗೆ ಪ್ರಿಯಕೃತ್ತಮಃ=ಪ್ರಿಯವಾದುದನ್ನು ಮಾಡಿದವರಲ್ಲಿ ಉತ್ತಮನು ನಚ=ಮತ್ತೊಬ್ಬನಿಲ್ಲ. ತಸ್ಮಾದನ್ಯಃ=ಅವನಿಗಿಂತ ಬೇರೆಯ ಪ್ರಿಯತರಃ=ಅತಿಪ್ರಿಯನು ಭುವಿ= ಭೂಮಿಯಲ್ಲಿ ಮೇ=ನನಗೆ ನ ಭವಿತಾ=ಇರಲಾರ.

2. ಯಃ=ಯಾರು, ಆವಯೋಃ=ನಮ್ಮಿಬ್ಬರಲ್ಲಿ ನಡೆದ ಇಮಂ ಧರ್ಮ್ಯಂ ಸಂವಾದಂ=ಈ ಭಗವದ್ವಿಷಯಕವಾದ ಸಂವಾದವನ್ನು ಯಶ್ಚ= ಯಾರಾದರೋ ಅಧ್ಯೇಷ್ಯತೇ=ಅಧ್ಯಯನ ಮಾಡುವನೋ (ಓದುವನೋ) ತೇನ=ಅಂತಹವನಿಂದ ಜ್ಞಾನಯಜ್ಞೇನ=ಜ್ಞಾನ ಎಂಬ ಯಜ್ಞದಿಂದ ಅಹಂ= ನಾನು ಇಷ್ಟಃ ಸ್ಯಾಂ=ಆರಾಧಿಸಲ್ಪಟ್ಟವನಾಗುವೆನು ಇತಿ ಮೇ ಮತಿಃ=ಇದು ನನ್ನ ನಿರ್ಧಾರ.

3. ಯಃ ನರಃ=ಯಾವ ಮನುಷ್ಯನು ಶ್ರದ್ಧಾವಾನ್=ಶ್ರದ್ಧಾವಂತ ನಾಗಿಯೂ ಅನಸೂಯಶ್ಚ=ಅಸೂಯೆಯೇ ಮುಂತಾದ ದೋಷಗಳಿಂದ ರಹಿತನಾಗಿಯೂ ಶೃಣುಯಾದಪಿ=ಕೇಳಿದರೂ ಸೋಽಪಿ=ಅಂತಹವನೂ ಮುಕ್ತಃ=ಮುಕ್ತನಾದವನಾಗಿ ಪುಣ್ಯಕರ್ಮಣಾಂ=ಪುಣ್ಯಕರ್ಮಗಳಿಂದ ಲಭಿಸುವ ಶುಭಾನ್ ಲೋಕಾನ್=ಶುಭಸ್ಥಾನಗಳನ್ನು ಪ್ರಾಪ್ನುಯಾತ್= ಹೊಂದುತ್ತಾನೆ.

ಇಲ್ಲಿ ಶ್ರವಣ, ಅಧ್ಯಯನ, ಅಧ್ಯಾಪನ ಇವು ಮೂರೂ ಮೋಕ್ಷಸಾಧನ ಎನ್ನಲಾಗಿದೆ. ಅದು ಅಧಿಕಾರಿಭೇದೇನ ಮೋಕ್ಷಸಾಧನವಾಗುತ್ತದೆ. ಅದನ್ನು ಗೀತಾತಾತ್ಪರ್ಯದಲ್ಲಿ ಆಚಾರ್ಯರು ಸ್ಪಷ್ಟಪಡಿಸಿದ್ದಾರೆ—

ಅನಾದಿಯೋಗ್ಯತಾಭೇದಾತ್ ಪುಂಸಾಂ ದರ್ಶನಸಾಧನಮ್ ।
ನಾನ್ಯೈವ, ತತ್ರ ವಿಷ್ಣೋಸ್ತು ಪ್ರಸಾದಾತ್ ವೈಷ್ಣವಂ ವಪುಃ ॥

**'ಧ್ಯಾನೇನಾತ್ಮನಿ ಪಶ್ಯಂತಿ ಕೇಚಿದಾತ್ಮಾನಮಾತ್ಮನಾ ।**
**ಅನ್ಯೇ ಸಾಂಖ್ಯೇನ ಯೋಗೇನ ಕರ್ಮಯೋಗೇನ ಚಾಪರೇ' ॥ ೬೯ ॥**

**ಅನ್ಯೇ ತ್ವೇವಮಜಾನಂತಃ ಶ್ರುತ್ವಾಽನ್ಯೇಭ್ಯ ಉಪಾಸತೇ ।**
**ತೇಽಪಿ ಚಾತಿತರಂತ್ಯೇವ ಮೃತ್ಯುಂ ಶ್ರುತಿಪರಾಯಣಾಃ ॥ ೭೦ ॥**

ಕೇಚಿತ್=ಕೆಲವರು ಆತ್ಮಾನಂ=ಪರಮಾತ್ಮನನ್ನು ಧ್ಯಾನೇನ ಆತ್ಮನಾ=ಧ್ಯಾನಬುದ್ಧಿಯಿಂದ ಆತ್ಮನಿ=ತಮ್ಮೊಳಗೆ ಪಶ್ಯಂತಿ=ಕಾಣುತ್ತಾರೆ. ಅನ್ಯೇ=ದೇವತೆಗಳು ಸಾಂಖ್ಯೇನ ಯೋಗೇನ=ಪ್ರಾತಿಭಜ್ಞಾನ ಮತ್ತು ಧ್ಯಾನದಿಂದಲೂ ಅರ್ಥಾತ್ ಸಾಂಖ್ಯಯೋಗದಿಂದ ಪಶ್ಯಂತಿ=ಕಾಣುತ್ತಾರೆ. ಅಪರೇ ಕ್ಷತ್ರಿಯೋತ್ತಮರು ಕರ್ಮಯೋಗೇನ=ಕರ್ಮಪ್ರಧಾನವಾದ ಜ್ಞಾನದಿಂದ ಪಶ್ಯಂತಿ=ಕಾಣುತ್ತಾರೆ.

1. ಋಷಿಗಳು ತಾವಾಗಿಯೇ ಮತ್ತು ಮತ್ತೊಬ್ಬರಿಂದ ಜ್ಞಾನವನ್ನು ಗಳಿಸಿ, ಧ್ಯಾನಿಸಿ ದೇಹದೊಳಗೇ ಬಿಂಬಾಪರೋಕ್ಷವನ್ನು ಪಡೆಯುತ್ತಾರೆ.

2. ದೇವತೆಗಳು ವಿಷ್ಣುಪ್ರಸಾದಲಬ್ಧವಾದ ತಮ್ಮ ಪ್ರತಿಭಾಸಾಮರ್ಥ್ಯದಿಂದ ಕ್ರಮೇಣ ತಮ್ಮ ಯೋಗ್ಯತೆಗೆ ಅನುಗುಣವಾದ ಜ್ಞಾನವನ್ನು ಗಳಿಸಿ ಪ್ರಾತಿಭಜ್ಞಾನವು ಸ್ಪಷ್ಟವಾದಾಗ ಧ್ಯಾನವಿಲ್ಲದೆಯೂ ಒಳ-ಹೊರಗೆ ಭಗವಂತನನ್ನು ಕಾಣುತ್ತಾರೆ.

3. ಕ್ಷತ್ರಿಯೋತ್ತಮರು ಶ್ರವಣ ಮತ್ತು ಪ್ರತಿಭೆಗಳಿಂದ ಭಗವಂತನ ಸ್ಮರಣೆ ಮಾಡುತ್ತಾ ತಾವು ನಡೆಸಿದ ಯಜ್ಞಭಾಗದ ಸ್ವೀಕಾರಕ್ಕಾಗಿ ಬಂದ ಭಗವಂತನನ್ನು ಕಾಣುತ್ತಾರೆ.

4. ಮತ್ತೆ ಕೆಲವರು ಎಲ್ಲವನ್ನೂ ಗುರುಗಳಿಂದ ಕೇಳಿ ತಿಳಿದು ಮನನ-ಧ್ಯಾನಗಳನ್ನು ಮಾಡಿಯೇ ಭಗವಂತನನ್ನು ನೋಡುತ್ತಾರೆ.

ಬ್ರಹ್ಮದೇವರಿಗೆ ಸ್ವಪ್ರತಿಭೆಯಿಂದಲೇ ಸ್ವಯೋಗ್ಯಜ್ಞಾನ ಬರುತ್ತದೆ. ಅದಕ್ಕಾಗಿ ಅವರು ಶ್ರವಣ ಮಾಡಬೇಕಾಗಿಲ್ಲ. ಆದರೂ—

ವಿಷ್ಣೋಃ ಪ್ರೀತ್ಯರ್ಥಮೇವಾಸ್ಯ ಶ್ರೋತವ್ಯಂ ಪ್ರಾಯಶೋ ಭವೇತ್॥

ಮನುಷ್ಯರು ಶ್ರವಣದಿಂದಲೇ ಸ್ವಯೋಗ್ಯಜ್ಞಾನವನ್ನು ಗಳಿಸುತ್ತಾರೆ. ಅವರ ಪ್ರತಿಭಾಶಕ್ತಿ ಕಡಿಮೆ.

ಅತ್ಯಲ್ಪಪ್ರತಿಭಾನತ್ವಾತ್ ಮನುಷ್ಯಾಃ ಶ್ರುತವೇದಿನಃ ।

ಸುಸೂಕ್ಷ್ಮೈರಪ್ಯಶೇಷೈಶ್ಚ ವಿಶೇಷೈಃ ಸಹ ಪಶ್ಯತಿ ।
ಸ್ವಾತ್ಮಾನಂ ಭಗವಾನ್ ವಿಷ್ಣುಃ ಸರ್ವರೂಪೋಽಪಿ ಸರ್ವದಾ ।
ಸರ್ವತ್ರ ಚಾನ್ಯದಪ್ಯೇವಂ ತೇನಾದೃಷ್ಟಂ ನಹಿ ಕ್ವಚಿತ್ ॥ ೭೧ ॥

ಸರ್ವತ್ರ ಸರ್ವದೈವೇಶಂ ಪಶ್ಯತ್ಯೇವ ರಮಾಽಪಿ ತು ।
ನತು ಸರ್ವೈರ್ವಿಶೇಷೈಸ್ತಂ ಪಶ್ಯಂತ್ಯಪ್ಯನ್ಯತೋಽಧಿಕಮ್ ॥ ೭೨ ॥

ಸ್ವಾತ್ಮಾನಮನ್ಯಚ್ಚಾಶೇಷಂ ಪಶ್ಯತ್ಯೇವ ಹಿ ಸರ್ವದಾ ।
ಬ್ರಹ್ಮಾ ತು ಸರ್ವಗಂ ಪಶ್ಯೇದ್ ಗುಣಾನಪ್ಯನ್ಯತೋಽಧಿಕಮ್ ॥ ೭೩ ॥

ನತು ಸರ್ವೇಷು ಕಾಲೇಷು ತಥಾ ಪಶ್ಯತ್ಯಮುಕ್ತಿಗಃ ॥
ಮುಕ್ತಸ್ತು ಸರ್ವದಾ ಪಶ್ಯೇತ್ ಸರ್ವಗತ್ವೇನ ಚಾಪಿ ತು ॥ ೭೪ ॥

ನ ರಮಾವದ್ ವಿಶೇಷಾಣಾಂ ದರ್ಶನಂ ಶಕ್ನುಯಾತ್ ಕ್ವಚಿತ್ ॥
ಸ್ವಾತ್ಮಾನಮನ್ಯಚ್ಚ ಸದಾ ವಿಶೇಷೈರಖಿಲೈರಪಿ ॥ ೭೫ ॥

ಪ(ಶ್ಯ)ಶ್ಯಂತ್ಯಂಜಸ್ತಥಾ ವಾಣೀ ವಿಶೇಷಾಂಸ್ತಾವತೋ ನತು ॥
ತ್ರೈಗುಣ್ಯಾತ್ ಪರತಃ ಪಶ್ಯೇದ್ ವ್ಯಾಪ್ತಂ ಶತಗುಣಂ ಹರಿಮ್ ॥ ೭೬ ॥

ಇಲ್ಲಿ ಎಲ್ಲಾ ಸಾಧಕರಲ್ಲಿ ಇರುವ ಜ್ಞಾನತಾರತಮ್ಯವನ್ನು ಹೇಳಲಾಗಿದೆ—

1. ಭಗವಾನ್ ವಿಷ್ಣುವು ತನ್ನನ್ನೂ ಪ್ರಪಂಚವನ್ನೂ ಅವುಗಳಲ್ಲಿರುವ ಎಲ್ಲಾ ವಿಶೇಷಗಳೊಂದಿಗೆ ಸರ್ವದಾ ಸರ್ವತ್ರ ನೋಡುತ್ತಾನೆ. ಅವನ ಎಲ್ಲ ರೂಪಗಳೂ ಹೀಗೆಯೇ. ಅವನಿಗೆ ಕಾಣದ ವಿಷಯಗಳೇ ಇಲ್ಲ.

2. ರಮೆಯು ಕೂಡಾ ಎಲ್ಲೆಡೆಯೂ ಯಾವಾಗಲೂ ಪರಮಾತ್ಮನನ್ನು ಪಶ್ಯತ್ಯೇವ=ನೋಡಿಯೇ ತೀರುತ್ತಾಳೆ. ಆದರೂ ಅವನ ಸಕಲ ಸೂಕ್ಷ್ಮ

ವಿಶೇಷಗಳನ್ನು ತಿಳಿಯಲಾರಳು. ಆದರೆ ಉಳಿದವರಿಗಿಂತ ಹೆಚ್ಚು ತಿಳಿದಿದ್ದಾಳೆ. ಸ್ವಾತ್ಮಾನಂ=ತನ್ನನ್ನೂ ಅನ್ಯಚ್ಚ=ಭಗವಂತನನ್ನು ಬಿಟ್ಟು ಉಳಿದುದೆಲ್ಲವನ್ನೂ ಸರ್ವದಾ ನೋಡುತ್ತಾಳೆ.

3. ಬ್ರಹ್ಮಾ ತು=ಚತುರ್ಮುಖನಾದರೋ ಪರಮಾತ್ಮನನ್ನು ಸರ್ವವ್ಯಾಪ್ತನನ್ನಾಗಿಯೂ, ಇತರ ಜ್ಞಾನಿಗಳಿಗಿಂತಲೂ ಹೆಚ್ಚು ಭಗವದ್ಗುಣಗಳನ್ನು ನೋಡುವನಾದರೂ ಸರ್ವಕಾಲದಲ್ಲೂ ಆ ಗುಣಗಳನ್ನು ಅಮುಕ್ತಿದಶಾದಲ್ಲಿ ನೋಡಲಾರ. ಮುಕ್ತನಾದ ಮೇಲೆ ಸರ್ವತ್ರ ಸರ್ವದಾ ಭಗವಂತನ ದರ್ಶನ ಮತ್ತು ಅವನ ಗುಣದರ್ಶನ ಬ್ರಹ್ಮನಿಗಿದೆ. ಆದರೆ, ರಮಾದೇವಿಯಂತೆ ಸರ್ವವಿಶೇಷಗಳನ್ನು ತಿಳಿಯಲಾರ.

4. ಸರಸ್ವತೀದೇವಿಯು ಎಲ್ಲಾ ವಿಶೇಷಗಳಿಂದ ಕೂಡಿದ ಸ್ವಾತ್ಮಾನಂ=ಶ್ರೀಹರಿಯನ್ನು ಯಾವಾಗಲೂ, ಚೆನ್ನಾಗಿ ಅನ್ಯಚ್ಚ=ಬೇರೆಯದನ್ನು ನೋಡುವಳಾದರೂ ಬ್ರಹ್ಮದೇವರಿಗೆ ಕಾಣುವಷ್ಟು ವಿಶೇಷಗಳು ಅವಳಿಗೆ ಕಾಣುವುದಿಲ್ಲ.

ಬ್ರಹ್ಮದೇವರಿಗೆ ಜಗತ್ತಿನ ಒಳಗೂ ಹೊರಗೂ ವ್ಯಾಪ್ತನಾದ ಭಗವಂತನ ಅಮಿತಪರಿಮಾಣದ ದರ್ಶನವಿದೆ. ಸರಸ್ವತೀದೇವಿಗೆ 50 ಕೋಟಿಯೋಜನ ವಿಸ್ತಾರವಾದ ಬ್ರಹ್ಮಾಂಡದಿಂದಾರಂಭಿಸಿ ಬ್ರಹ್ಮಾಂಡಕ್ಕೆ ಆವರಣವಾದ ಮಹತ್ತತ್ವವೇ ಮೊದಲಾದ ತ್ರಿಗುಣಗಳ ಆಚೆಗೆ ಶತಯೋಜನ ಪರ್ಯಂತವ್ಯಾಪಿಸಿರುವ ಭಗವದ್ರೂಪದ ದರ್ಶನವಿದೆ.

**ಗಿರಿಶೋ ಗರುಡಶ್ಚೈವ ತಮೋಮಾತ್ರಗತಂ ಹರಿಮ್ ।**
**ಪಶ್ಯೇದ್ ವಿಶೇಷಾನಪಿ ಹಿ ವಾಣೀದೃಷ್ಟಾನ್ ನ ಪಶ್ಯತಿ ॥ ೭೭ ॥**

**ಉಮಾ ಸುಪರ್ಣೀ ಚ ಮಹತ್ತತ್ವಂ ಯಾವತ್ ಪ್ರಪಶ್ಯತಿ ।**
**ರುದ್ರದೃಷ್ಟಾನ್ ವಿಶೇಷಾಂಶ್ಚ ನೈವ ಪಶ್ಯೇತ್ ಕದಾಚನ ॥ ೭೮ ॥**

**ಸ್ವರೂಪಮನ್ಯರೂಪಂ ಚ ಮುಕ್ತಾ ದೇವಾಃ ಸಮಸ್ತಶಃ ।**
**ಜಾನಂತೀಂದ್ರಶ್ಚ ಕಾಮಶ್ಚ ಬ್ರಹ್ಮ ಯಾವದಹಂಕೃತಿಃ ॥ ೭೯ ॥**

ಪಶ್ಯಂ(ಶ್ಯ)ತೋ ಮನುದಕ್ಷಾದ್ಯಾ ಬುದ್ಧಿತತ್ತ್ವಸ್ಥಿತಂ ಹರಿಮ್ ।
ಪಶ್ಯಂತಿ ಸೋಮಸೂರ್ಯೌ ತು ಮನಸ್ಥಂ ಪರಮೇಶ್ವರಮ್ ॥ ೮೦ ॥

ಅನ್ಯೇ ಭೂತಸ್ಥಿತಂ ವಿಷ್ಣುಂ ದೇವಾಃ ಪಶ್ಯಂತಿ ಸರ್ವದಾ ।
ಬಹುಸಾಹಸ್ರವರ್ಷೇಣ ಮಹತ್ತತ್ವೇ ಕ್ವಚಿತ್ಕ್ವಚಿತ್ ॥ ೮೧ ॥

ಅನ್ಯೇ ಚೈವ ಯಥಾಯೋಗ(ಗ್ಯ)ಮಂಡಾಂತರ್ವರ್ತಿನಂ ಹರಿಮ್ ।
ಶ್ವೇತದ್ವೀಪಪತಿಂ ಚೈವ ಹೃದ್ಯೇವಾನ್ಯೇ ತು ಕೇಚನ ।
ಕದಾಚಿದೇವ ತತ್ರಾಪಿ ಕೇಚಿತ್ ಪಶ್ಯಂತಿ ಕೇಶವಮ್ ॥ ೮೨ ॥

5. ರುದ್ರದೇವ ಮತ್ತು ಗರುಡದೇವರಿಗೆ ತ್ರೈಗುಣ್ಯಗಳಲ್ಲಿ ತಮೋಗುಣ ರೂಪವಾದ ಬ್ರಹ್ಮಾಂಡಾವರಣದವರೆಗೆ ವ್ಯಾಪ್ತವಾದ ಭಗವದ್ರೂಪದ ದರ್ಶನವಾಗುತ್ತದೆ. ಭಗವಂತನ ವಿಶೇಷಗಳನ್ನೂ ನೋಡುವರಾದರೂ ಸರಸ್ವತೀದೇವಿಗೆ ಕಾಣುವಷ್ಟು ವಿಶೇಷಗಳು ಇವರಿಗೆ ಕಾಣುವುದಿಲ್ಲ.

6. ಪಾರ್ವತೀದೇವಿ ಮತ್ತು ಗರುಡಪತ್ನಿಯಾದ ಸುಪರ್ಣೀ ಮಹತ್ತತ್ವ ಪರ್ಯಂತವ್ಯಾಪ್ತವಾದ ಭಗವದ್ರೂಪವನ್ನು ನೋಡುತ್ತಾರೆ. ರುದ್ರದೇವರಿಗೆ ಕಾಣುವ ವಿಶೇಷಗಳೆಲ್ಲವೂ ಇವರಿಗೆ ಕಾಣುವುದಿಲ್ಲ.

7. ಮುಕ್ತರಾದ ಎಲ್ಲಾ ದೇವತೆಗಳೂ ತಮ್ಮ ಸ್ವರೂಪವನ್ನೂ ಸ್ವಾಧಮರ ಸ್ವರೂಪವನ್ನೂ ನೋಡುತ್ತಾರೆ.

8. ಇಂದ್ರ ಮತ್ತು ಕಾಮರು ಬ್ರಹ್ಮಾಂಡಕ್ಕೆ ಹೊರಾವರಣವಾದ ಅಹಂಕಾರ ತತ್ತ್ವ ಪರ್ಯಂತ ವ್ಯಾಪ್ತವಾದ ಭಗವದ್ರೂಪವನ್ನು ನೋಡುತ್ತಾರೆ.

9. ಮನು-ದಕ್ಷಾದಿಗಳು ಬುದ್ಧಿತತ್ತ್ವದವರೆಗೆ ವ್ಯಾಪ್ತವಾದ ಭಗವದ್ರೂಪವನ್ನು ನೋಡುತ್ತಾರೆ.

10. ಚಂದ್ರ-ಸೂರ್ಯರು ಬುದ್ಧಿತತ್ತ್ವಕ್ಕಿಂತ ಕೆಳಗಿನ ಮನಸ್ತತ್ವ ಪರ್ಯಂತ ವ್ಯಾಪ್ತವಾದ ಭಗವದ್ರೂಪವನ್ನು ನೋಡುತ್ತಾರೆ.

11. ಇತರದೇವತೆಗಳು ಪಂಚಭೂತಪರ್ಯಂತ ವ್ಯಾಪ್ತವಾದ

ಭಗವದ್ರೂಪವನ್ನು ನೋಡುತ್ತಾರೆ. ಸಹಸ್ರಾರುವರ್ಷಗಳ ಸಾಧನೆ ಮಾಡಿದಾಗ ಇಂದ್ರಾದಿ ದೇವತೆಗಳು ಒಮ್ಮೊಮ್ಮೆ ಮಹತ್ತತ್ವದ ಭಾಗಪರ್ಯಂತ ವ್ಯಾಪ್ತವಾದ ರೂಪವನ್ನೂ ನೋಡುತ್ತಾರೆ.

12. ಅನ್ಯೇ ಚೈವ=ದೇವತೆಗಳಿಗಿಂತ ಭಿನ್ನರಾದವರು ತಮ್ಮ ಯೋಗ್ಯತೆಗೆ ಅನುಗುಣವಾಗಿ ಬ್ರಹ್ಮಾಂಡದೊಳಗಿರುವ ಭಗವದ್ರೂಪವನ್ನು ಕಾಣುತ್ತಾರೆ, ಶ್ವೇತದ್ವೀಪಾಧಿಪತಿಯನ್ನಷ್ಟೇ ಕೆಲವರು ಕಾಣುತ್ತಾರೆ. ಮತ್ತೆ ಕೆಲವರು, ಹೃದಯದೊಳಗಷ್ಟೇ ಭಗವದ್ರೂಪದ ದರ್ಶನವನ್ನು ಸರ್ವದಾ ಪಡೆಯುತ್ತಾರೆ. ಇನ್ನೂ ಕೆಲವರು ಹೃದಯಸ್ಥಭಗವದ್ರೂಪವನ್ನು ಒಮ್ಮೆಯಷ್ಟೇ ನೋಡುತ್ತಾರೆ.

**ವಿವರಣೆ—** ಈ ಬ್ರಹ್ಮಾಂಡದ ವಿಸ್ತಾರ 50 ಕೋಟಿ ಯೋಜನ. ಅದರ ಹೊರಗೆ ಪೃಥಿವೀಯೇ ಮೊದಲಾದ ಶುದ್ಧ ಪಂಚಭೂತಗಳು ಅಹಂಕಾರ, ಮಹತ್ತತ್ವ, ತ್ರಿಗುಣಾತ್ಮಕಪ್ರಕೃತಿ ಹೀಗೆ ಹತ್ತು ಆವರಣಗಳಿವೆ. ಈ ಆವರಣಗಳಲ್ಲಿ ಒಂದಕ್ಕಿಂತ ಇನ್ನೊಂದು ಹತ್ತು ಪಟ್ಟು ಅಧಿಕವಾಗಿವೆ.

ವಿಕಾರೈಃ ಷೋಡಶೈರ್ಯುಕ್ತೋ ವಿಶೇಷಾದಿಭಿರಾವೃತಃ ।
ಅಂಡಕೋಶೋ ಬಹಿರಯಂ ಪಂಚಾಶತ್ಕೋಟಿವಿಸ್ತೃತಃ ॥

ಭಾ.3.12.39

ಬ್ರಹ್ಮಾಂಡ ನಿರ್ಮಾಣ 16 ವಿಕಾರಗಳಿಂದಾಗಿದೆ. ಮನೋ–ಬುದ್ಧಿ ಸಹಿತ ಹನ್ನೊಂದು ಇಂದ್ರಿಯಗಳು ಮತ್ತು ಪಂಚಭೂತಗಳು ಇವೇ 16 ವಿಕಾರಗಳು.

**ಉಮಾ ಯಾವದನಂತಾಂಶಾನ್ ಪೂರ್ವದೃಷ್ಟೇಭ್ಯ ಏವ ತು ।**
**ವಿಶೇಷಾನ್ ವಾಸುದೇವಸ್ಯ ಪಶ್ಚಾದುಕ್ತಾ ವಿಚಕ್ಷತೇ ॥ ೮೩ ॥**

**ಶಕ್ರಕಾಮಾದಯಶ್ಚೈವ ವಿಶೇಷಾನ್ ಬ್ರಹ್ಮಣಿ ಸ್ಥಿತಾನ್ ।**
**ಉಮಾದಿಭಿಃ ಪ್ರಬುದ್ಧೇಭ್ಯಃ ಶತಾಂಶಾನೇವ ಚಕ್ಷತೇ ॥ ೮೪ ॥**

ಹಿಂದೆ ಭಗವದ್ರೂಪದ ಪರಿಮಾಣದರ್ಶನಲ್ಲಿ ಮೇಲಿಂದ ಕೆಳಗಿನವರೆಗೂ ತಾರತಮ್ಯವನ್ನು ಹೇಳಲಾಯಿತು. ಭಗವಂತನಲ್ಲಿರುವ ವಿಶೇಷಗಳ

ದರ್ಶನದಲ್ಲೂ ಸರಸ್ವತೀಪರ್ಯಂತ ತಾರತಮ್ಯವನ್ನು ಹೇಳಲಾಗಿದೆ. ಅದರ ಮುಂದಿನ ಸಾಧಕರಲ್ಲಿ ತಾರತಮ್ಯಾನುಗುಣವಾಗಿ ವಿಶೇಷದರ್ಶನವನ್ನು ಮುಂದೆ ಹೇಳಲಾಗಿದೆ.

ಉಮಾಯಾವತ್=ಪಾರ್ವತೀಪರ್ಯಂತವಾಗಿ ಪೂರ್ವದೃಷ್ಟೇಭ್ಯಃ= ಮೊದಮೊದಲಿನವರು ಕಂಡಿರುವ ಭಗವದ್ಗುಣಗಳ ಮಧ್ಯದಲ್ಲಿ ಪಶ್ಚಾದುಕ್ತಾಃ=ಆಮೇಲೆ ಹೇಳಲ್ಪಟ್ಟವರು ವಾಸುದೇವಸ್ಯ=ಭಗವಂತನ ಅನಂತಾಂಶಾನ್ ವಿಶೇಷಾನೇವ=ಅನಂತಾಂಶ ಕಡಿಮೆ ವಿಶೇಷಗಳನ್ನಷ್ಟೇ ವಿಚಕ್ಷತೇ=ಕಾಣುತ್ತಾರೆ. ಶಕ್ರಕಾಮಾದಯಃ=ಇಂದ್ರ–ಕಾಮಾದಿಗಳು ಉಮಾದಿಭಿಃ=ತಮ್ಮ ಮೇಲಿನ ಕಕ್ಷೆಯಲ್ಲಿರುವ ಉಮಾದಿಗಳಿಂದ ಪ್ರಬುದ್ಧೇಭ್ಯಃ=ನೋಡಲ್ಪಟ್ಟ ಗುಣಗಳ ಮಧ್ಯದಲ್ಲಿ (ಚತುರ್ಥೀ ಷಷ್ಠ್ಯರ್ಥೇ) ಶತಾಂಶಾನೇವ=ನೂರನೇ ಒಂದಂಶಗುಣಗಳನ್ನು ಚಕ್ಷತೇ=ನೋಡುತ್ತಾರೆ.

ಭಾವಾರ್ಥ— ಪರಮಾತ್ಮ, ಲಕ್ಷ್ಮೀದೇವಿ, ಬ್ರಹ್ಮದೇವ, ಸರಸ್ವತೀ ಭಾರತೀಯರು, ಗರುಡಶೇಷರುದ್ರರು, ಅವರ ಪತ್ನಿಯರು–ಇದು ತಾರತಮ್ಯಕ್ರಮ. ಲಕ್ಷ್ಮೀದೇವಿಯಿಂದ ಆರಂಭಿಸಿ ಗರುಡ–ಶೇಷ–ರುದ್ರರ ಪತ್ನಿಯರವರೆಗೆ ಉತ್ತಮ ಕಕ್ಷೆಯವರು ಕಂಡ ಭಗವದ್ಗುಣಗಳ ಮಧ್ಯದಲ್ಲಿ ಅನಂತಾಂಶ ಕಡಿಮೆ ಈಶನ ಗುಣಗಳನ್ನು ನೀಚಕಕ್ಷೆಯಲ್ಲಿ ಬರುವವರು ನೋಡುತ್ತಾರೆ. ಉಮಾದಿದೇವಿಯರಿಂದಾರಂಭಿಸಿ ಪುಷ್ಕರಪರ್ಯಂತವಾದ ದೇವತೆಗಳ ಮಧ್ಯದಲ್ಲಿ ಉತ್ತಮಕಕ್ಷೆಯಲ್ಲಿರುವ ದೇವತೆಗಳು ಕಾಣುವ ಭಗವದ್ಗುಣಗಳ ನೂರಂಶ ಕಡಿಮೆ ಗುಣಗಳನ್ನು ಅಧಮಕಕ್ಷೆಯವರು ನೋಡುತ್ತಾರೆ. ಇಲ್ಲಿ ಪ್ರಾಚೀನ ಟೀಕಾಕಾರರಲ್ಲಿ ಅಭಿಪ್ರಾಯಭೇದವಿದೆ—

ಯಥಾನಂದೇ ತಥಾ ಜ್ಞಾನೇ ವಿಷ್ಣುಭಕ್ತೌ ಬಲಾಧಿಕೇ ।
ಸರ್ವೈರ್ಗುಣೈಃ ಶತಗುಣಾಃ ಕ್ರಮೇಣೋಕ್ತೇನ ತೇಽಖಿಲಾಃ ॥

ಎಂದು ತೈತ್ತಿರೀಯಭಾಷ್ಯದಲ್ಲಿ ಎಲ್ಲರ ಉಪಾಸನೆಯಲ್ಲೂ ಉತ್ತಮರಿಗಿಂತ ಅಧಮರಲ್ಲಿ ನೂರುಗುಣಗಳು ಮಾತ್ರ ಕಡಿಮೆಯಾಗಿರುತ್ತವೆ, ಎನ್ನಲಾಗಿದೆ. ಇಲ್ಲಿ ಉಮಾಪರ್ಯಂತ ಅನಂತಾಂಶ ಕಡಿಮೆ, ಉಮೆಯನಂತರ ನೂರು ಅಂಶ ಕಡಿಮೆ ಎಂದು ವಿಭಾಗವನ್ನು ಮಾಡಲಾಗಿದೆ. ಆದ್ದರಿಂದ

ತೈತ್ತಿರೀಯದಲ್ಲಿ ಹೇಳಿದ ವಿಷಯವನ್ನು ಗುಣಗಳ ಬಗ್ಗೆ ಎಂದು ತಿಳಿದು ಇಲ್ಲಿ ಹೇಳಿದ್ದನ್ನು ಸ್ಪಷ್ಟತೆಯ ಬಗ್ಗೆ ಎಂದು ಪರಿಗಣಿಸಬೇಕು. ಇದು ಯಾದುಪತ್ಯ, ಶೇಷವಾಕ್ಯಾರ್ಥ ಚಂದ್ರಿಕಾಗಳ ಅಭಿಪ್ರಾಯ.

**ಇತ್ಯಾದಿವೇದಸ್ಮೃತಿಗವಚನೇಭ್ಯೋ ಯಥಾರ್ಥತಃ ।**
**ತಾರತಮ್ಯಂ ಚ(ವಿ)ಮುಕ್ತಾನಾಂ ಸಾಧನಾನಾಂ ಚ ದೃಶ್ಯತೇ ॥ ೮೫ ॥**

ಇತ್ಯಾದಿವೇದ–ಸ್ಮೃತಿಗವಚನೇಭ್ಯಃ=ಇವೇ ಮೊದಲಾದ ವೇದ ಮತ್ತು ಸ್ಮೃತಿಗಳಲ್ಲಿರುವ ವಚನಗಳಿಂದ ಮುಕ್ತಾನಾಂ ಸಾಧನಾನಾಂ ಚ=ಮುಕ್ತರ ಹಾಗೂ ಮೋಕ್ಷಸಾಧನೆಯ ಯಥಾರ್ಥತಃ ತಾರತಮ್ಯಂ=ವಾಸ್ತವವಾದ ತಾರತಮ್ಯವು ದೃಶ್ಯತೇ=ತಿಳಿಯಲ್ಪಡುತ್ತದೆ.

**ಸಾಧ್ಯಸಾಧನವೈರೂಪ್ಯಮದೃಷ್ಟಂ ಕೇನ ಕಲ್ಪ್ಯತೇ ।**
**ವೈಷಮ್ಯಂ ನಿರ್ಘೃಣತ್ವಂ ಚ ತೇನ ಸ್ಯಾತಾಂ ಪರಸ್ಯ ಚ ।**
**ಸಾಪೇಕ್ಷತ್ವಾದಿತಿ ಚ ತೌ ವಿದ್ಯಾಧೀಶೇನ ವಾರಿತೌ ॥ ೮೬ ॥**

ಸಾಧ್ಯ–ಸಾಧನ–ವೈರೂಪ್ಯಂ=ಫಲ ಮತ್ತು ಫಲಸಾಧನಗಳಲ್ಲಿ ವ್ಯತ್ಯಾಸವು ಅದೃಷ್ಟಂ=ಬೇರೆಲ್ಲೂ ಕಾಣದಿರುವುದನ್ನು ಪ್ರಕೃತಮೋಕ್ಷದಲ್ಲಿ ಮಾತ್ರ ಕೇನ ಕಲ್ಪ್ಯತೇ=ಯಾರಿಂದ ತಾನೇ ಕಲ್ಪಿಸಲ್ಪಡುತ್ತದೆ? ತೇನ= ಅದರಿಂದ ಪರಸ್ಯ=ಪರಮಾತ್ಮನಿಗೆ ವೈಷಮ್ಯಂ ನಿರ್ಘೃಣತ್ವಂ ಚ ಸ್ಯಾತಾಂ=ವೈಷಮ್ಯ ನೈರ್ಘೃಣ್ಯದೋಷವು ಬಂದೀತು.

ತೌ=ಇಂತಹ ವೈಷಮ್ಯ ಮತ್ತು ನೈರ್ಘೃಣ್ಯಗಳು ಸಾಪೇಕ್ಷತ್ವಾದಿತಿ ಚ= ''ವೈಷಮ್ಯ ನೈರ್ಘೃಣ್ಯೇ ನ ಸಾಪೇಕ್ಷತ್ವಾತ್'' (2.1.35) ಎಂಬ ಸೂತ್ರದಲ್ಲಿ 'ಸಾಪೇಕ್ಷತ್ವಾತ್=ಕರ್ಮಸಾಪೇಕ್ಷವಾಗಿ ಫಲನೀಡುವ ಕಾರಣದಿಂದ' ಎಂದು ಹೇಳಿ ವಿದ್ಯಾಧೀಶೇನ=ವೇದವ್ಯಾಸರಿಂದ ವಾರಿತೌ=ಪರಿಹರಿಸಲ್ಪಟ್ಟಿವೆ.

ಭಾವಾರ್ಥ— ಹಿಂದೆ ಹೇಳಿದಂತೆ ಮೋಕ್ಷಸಾಧಕರ ಸಾಧನಾನುಷ್ಠಾನಾದಿಗಳಲ್ಲಿ ವ್ಯತ್ಯಾಸವಿದೆ. ಆದರೂ ಮೋಕ್ಷ ಎಲ್ಲರಿಗೂ ಸಮಾನವಾದರೆ ಸಾಧನತಾರತಮ್ಯವಿದ್ದರೂ ಫಲವು ಸಮಾನ ಎಂದಂತಾಗುತ್ತದೆ. ಇದು ಎಲ್ಲರ

ಅನುಭವಕ್ಕೆ ವಿರುದ್ಧ. ಮಾತ್ರವಲ್ಲ, ಹಾಗಾದರೆ ಭಗವಂತ ಅಧಿಕಸಾಧನ ಮಾಡಿದವರಿಗೆ ಅಲ್ಪಫಲವನ್ನೂ ಅಲ್ಪಸಾಧನೆ ಮಾಡಿದವರಿಗೆ ಹೆಚ್ಚು ಫಲವನ್ನೂ ಕೊಟ್ಟಂತಾಗುವುದರಿಂದ ಪಕ್ಷಪಾತ ಮಾಡಿದಂತಾಗುತ್ತದೆ. ಹೆಚ್ಚು ಸಾಧನೆ ಮಾಡಿದರೂ ಉಳಿದವರಿಗೆ ಕೊಡುವಷ್ಟೇ ಫಲವನ್ನು ಕೊಟ್ಟರೆ ಅವನು ನಿರ್ದಯನಾಗುತ್ತಾನೆ. ಇಂತಹ ವೈಷಮ್ಯ ಮತ್ತು ನಿರ್ದಯತೆಗಳೆರಡೂ ಭಗವಂತನಿಗೆ ಇಲ್ಲ, ಎಂದು ಹಿಂದೆಯೇ ಸೂತ್ರದಲ್ಲಿ ನಿರಾಕರಿಸಲಾಗಿದೆ. ಅದರ ಅರ್ಥ— ಭಗವಂತನು ಜೀವಮಾಡಿರುವ ಪುಣ್ಯ-ಪಾಪಗಳಿಗೆ ಅನುಗುಣವಾಗಿ ಸುಖದುಃಖಗಳನ್ನು ಕೊಡುವುದರಿಂದಾಗಿ ಅವನಿಗೆ ವೈಷಮ್ಯ ಅಥವಾ ನೈರ್ಘೃಣ್ಯ ಎಂಬ ದೋಷಗಳು ಇಲ್ಲ, ಎಂದು.

ಹಿಂದೆ 'ವೈಷಮ್ಯಂ ನಿರ್ಘೃಣತ್ವಂ ಚ' ಎಂದು ಪ್ರಸ್ತುತವಾದುದರಿಂದ 'ತೇ ವಾರಿತೇ' ಎನ್ನಬೇಕಾಗಿತ್ತು 'ತೌ ವಾರಿತೌ' ಎಂದು ಇಲ್ಲಿ ಹೇಳಿದುದರಿಂದ 'ತೌ ದೋಷೌ ವಾರಿತೌ' ಎಂದು ದೋಷಶಬ್ದವನ್ನು ಅಧ್ಯಾಹಾರ ಮಾಡಿ ಪ್ರಯೋಗವನ್ನು ಸರಿಪಡಿಸಬೇಕು. ಇದರಿಂದಾಗಿ ಸೂತ್ರಪ್ರಾಮಾಣ್ಯವನ್ನು ಒಪ್ಪದವರೂ ವೇದವಿರುದ್ಧವಾದುದರಿಂದ ಈ ಎರಡನ್ನೂ ಒಪ್ಪುವುದು ಉಚಿತವಲ್ಲ, ಎಂದು ಸೂಚಿಸಲಾಗಿದೆ.

**ತಾರತಮ್ಯಾತ್ ಸಾಧನಾನಾಂ ಸಾಧ್ಯತಾದೃಕ್ತ್ವಮೀಶತಃ ।**
**ಅವೈಷಮ್ಯಾದಿಹೇತುಃ ಸ್ಯಾತ್ ಸದೈವ ಪರಮೇಶ್ವರೇ ॥ ೮೭ ॥**

ಸಾಧನಾನಾಂ ತಾರತಮ್ಯಾತ್=ಮುಮುಕ್ಷುಗಳ ಸಾಧನಾನುಷ್ಠಾನದಲ್ಲಿ ತಾರತಮ್ಯವಿರುವುದರಿಂದ ಈಶತಃ=ಪರಮಾತ್ಮನಿಂದ ಸಾಧ್ಯತಾದೃಕ್ತ್ವಂ= ಸಾಧ್ಯವಾದ ಮೋಕ್ಷಫಲದಲ್ಲೂ ತಾರತಮ್ಯವು ಸದೈವ=ಸರ್ವದಾ ಪರಮೇಶ್ವರೇ=ಪರಮಾತ್ಮನಲ್ಲಿ ಅವೈಷಮ್ಯಾದಿಹೇತುಃ ಸ್ಯಾತ್=ವೈಷಮ್ಯಾದಿ ದೋಷಾಭಾವಕ್ಕೆ ಕಾರಣವಾಗುತ್ತದೆ.

ಭಾವಾರ್ಥ— ಸಾಧನದಲ್ಲಿ ತಾರತಮ್ಯವಿದ್ದರೆ ಆಗ ಮೋಕ್ಷ ತಾರತಮ್ಯವು ಭಗವಂತನಿಗೆ ದೋಷಹೇತುವಾಗುವುದಿಲ್ಲ. ಮುಮುಕ್ಷುಗಳು ಮಾಡುವ ಭಕ್ತ್ಯಾದಿಸಾಧನಗಳಿಗೆ ಅನುಗುಣವಾಗಿ ಭಗವಂತನು ಅವರಿಗೆ ಮೋಕ್ಷಾನಂದವನ್ನು ನೀಡುತ್ತಾನೆ. ಅದರಿಂದ ಅವನಿಗೆ ಯಾವ ದೋಷದ ಪ್ರಸಕ್ತಿಯೂ ಇಲ್ಲ.

**ಸ್ವಾತಂತ್ರ್ಯೇ ವಿದ್ಯಮಾನೇಽಪಿ ಸಾಧನಾದೌ ಪರೇಶಿತುಃ ।**
**ಅಪೇಕ್ಷ್ಯಾನಾದಿವೈಚಿತ್ರ್ಯಂ ನ ದೋಷ ಇತಿ ತದ್ವಚಃ ।**
**ನಾನಾದಿತ್ವಾದಿತಿ ಹ್ಯುಕ್ತಮುಪಪದ್ಯತ ಇತ್ಯಪಿ ॥ ೮೮ ॥**

ಸ್ವಾತಂತ್ರ್ಯೇ=ಮುಮುಕ್ಷುಗಳ ಸಾಧನಾನುಷ್ಠಾನದಲ್ಲಿ ಭಗವಂತನಿಗೆ ಪ್ರಯೋಜಕಕರ್ತೃತ್ವವು ವಿದ್ಯಮಾನೇಽಪಿ=ಇದ್ದರೂ ಸಾಧನಾದೌ= ಸಾಧನಾನುಷ್ಠಾನಾದಿಗಳಲ್ಲಿ ಅಪೇಕ್ಷ್ಯ=ಅನಾದಿಯೋಗ್ಯತೆಯನ್ನು ಅಪೇಕ್ಷಿಸಿ ಅದಕ್ಕನುಗುಣವಾಗಿ ಪ್ರೇರಣಾತ್=ಮುಮುಕ್ಷುಗಳ ಪ್ರೇರಣೆಯನ್ನು ಮಾಡುವುದರಿಂದಾಗಿ ನ ದೋಷಃ=ಭಗವಂತನಿಗೆ ದೋಷವಿಲ್ಲ ಎಂದು ತದ್ವಚಃ=ಸೂತ್ರಕಾರರ ವಚನವಿದೆ.

ಭಾವಾರ್ಥ— 'ಪೂರ್ವಕರ್ಮ-ಪ್ರಯತ್ನಂ ಚ ಸಂಸ್ಕಾರಂ ಚಾಪ್ಯಪೇಕ್ಷ್ಯ ತು' ಎಂದು ಆಚಾರ್ಯರು ವೈಷಮ್ಯಾಧಿಕರಣದ ಅಭಿಪ್ರಾಯ ವನ್ನು ಹೇಳಿದ್ದಾರೆ. ಮುಮುಕ್ಷುಗಳು ಮಾಡುವ ಸಾಧನೆಗಳಿಗೆ ಪ್ರಯೋಜಕಕರ್ತೃ (ಮಾಡಿಸುವವನು) ಪರಮಾತ್ಮನೇ ಆದರೂ, ಅವನು ಜೀವರು ಮಾಡಿರುವ ಪೂರ್ವಕರ್ಮ, ಯೋಗ್ಯತೆ ಮುಂತಾದವುಗಳನ್ನು ಅವಲಂಬಿಸಿಯೇ ಮುಮುಕ್ಷುಗಳಿಗೆ ಸಾಧನಾನುಷ್ಠಾನದಲ್ಲಿ ಪ್ರೇರಣೆಯನ್ನು ನೀಡುತ್ತಾನೆ. ಆದ್ದರಿಂದ ಅವನಿಗೆ ವೈಷಮ್ಯಾದಿದೋಷಗಳು ಬರುವುದಿಲ್ಲ. ಪೂರ್ವಕರ್ಮವನ್ನೂ ಸ್ವೇಚ್ಛಯಾ ಅವಲಂಬಿಸುವುದರಿಂದ ಅವನ ಸ್ವಾತಂತ್ರ್ಯಕ್ಕೆ ಚ್ಯುತಿಯೂ ಇಲ್ಲ. ಪೂರ್ವಕರ್ಮವನ್ನೂ ಅವನೇ ಮಾಡಿಸಿರುವು ದರಿಂದ ಅದನ್ನು ಅವಲಂಬಿಸಿ ಈ ಕರ್ಮವನ್ನು ಮಾಡಿಸುತ್ತಾನೆಂದರೂ ಪಕ್ಷಪಾತವು ತಪ್ಪಿದ್ದಲ್ಲ.

ಅನಾದಿಯಾದ ಕರ್ಮಪರಂಪರೆಯೂ ಅವನ ಅಧೀನವಾದುದುದ ರಿಂದ ಮತ್ತೆ ವೈಷಮ್ಯದೋಷ ಬಂತು, ಇದು ಮೊದಲನೆಯ ಆಕ್ಷೇಪ

ಎರಡನೆಯ ಆಕ್ಷೇಪ-ಅನಾದಿಯಾದ ಕರ್ಮವೂ ಅವನ ಅಧೀನವೇ ಆದುದರಿಂದ ಅಂತಹ ಕರ್ಮವನ್ನು ಅವಲಂಬಿಸಿದರೂ ಪಕ್ಷಪಾತ ತಪ್ಪಿದ್ದಲ್ಲ. ಇದು ಇನ್ನೊಂದು ಆಕ್ಷೇಪ.

ಈ ಎರಡೂ ಆಕ್ಷೇಪಗಳಿಗೂ ಅಲ್ಲಿರುವ ಎರಡು ಸೂತ್ರಗಳು ಸಮಾಧಾನ ಕೊಟ್ಟಿವೆ. ಅದನ್ನು ಅನುವ್ಯಾಖ್ಯಾನದಲ್ಲಿ ಹೀಗೆ ಹೇಳಲಾಗಿದೆ—

'ನ ಅನಾದಿತ್ವಾತ್' ಇತಿ=ಪೂರ್ವಕರ್ಮವೂ ಭಗವದಧೀನವಾದ ಕಾರಣ ಪಕ್ಷಪಾತ ಇದೆ ಎನ್ನುವುದು ನ=ಸರಿಯಲ್ಲ, ಅನಾದಿತ್ವಾತ್=ಕರ್ಮವು ಅನಾದಿಯಾದುದರಿಂದ ಪಕ್ಷಪಾತವಾಗುವುದಿಲ್ಲ. ಪೂರ್ವಕರ್ಮ ಅದಕ್ಕಿಂತಲೂ ಪೂರ್ವಕರ್ಮಾಧೀನ. ಹೀಗೆ ಭಗವಂತ ಅನಾದಿಯಾದ ಕರ್ಮವನ್ನು ಅವಲಂಬಿಸುತ್ತಾನೆ. ಇದು ಒಂದು ಆಕ್ಷೇಪಕ್ಕೆ ಸಮಾಧಾನ.

ಎರಡನೆ ಆಕ್ಷೇಪಕ್ಕೆ—ಉಪಪದ್ಯತೇ='ಉಪಪದ್ಯತೇ ಚಾಪ್ಯುಪಲಭ್ಯತೇ ಚ' ಎಂದು ಸೂತ್ರದ ಉತ್ತರ. ಅನಾದಿಕರ್ಮವನ್ನು ಅವಲಂಬಿಸಿದರೆ ಪಕ್ಷಪಾತ ಹೇಗೆ? ಪೂರ್ವಕರ್ಮ ಕೆಟ್ಟದಾದರೂ ಅದನ್ನು ಮೀರಿ ಸುಖವನ್ನೇ ಕೊಡಲಿ, ಅಥವಾ ಶುಭಕರ್ಮವನ್ನೇ ಮಾಡಿಸಲಿ. ಮಾಡಸದಿದ್ದರೆ ಪಕ್ಷಪಾತ ಎಂದು ಆಕ್ಷೇಪವಾದರೆ ಅದು ಸರಿಯಲ್ಲ. ವೇದವು ಅಶುಭಕರ್ಮದ ಫಲ ದುಃಖವೆಂದೂ, ಶುಭಕರ್ಮದ ಫಲ ಸುಖವೆಂದೂ ಹೇಳುತ್ತದೆ. ಭಗವಂತ, ಅದನ್ನು ಮೀರಿದರೆ ವೇದವು ಅಪ್ರಮಾಣವಾಗುತ್ತದೆ. ಆದ್ದರಿಂದ ವೇದಾನುಸಾರವಾಗಿ ಕರ್ಮಫಲವನ್ನು ಕೊಟ್ಟಾಗ ಪಕ್ಷಪಾತವು ದೋಷವಲ್ಲ. ಇಂತಹ ಪಕ್ಷಪಾತವು ಉಪಪದ್ಯತೇ, ಎಂದು ಆ ಸೂತ್ರದ ಅರ್ಥ.

**ಅಪೇಕ್ಷ್ಯೋಪಾಯವೈಷಮ್ಯಮುಪೇಯಸ್ಯ ತಥಾ ಸ್ಥಿತಿಃ ।**
**ಮಯಾ ಕಯಾ ವಿರುದ್ಧಾ ಸ್ಯಾದ್ ರಾಜಾದಾವಪಿ ದೃಶ್ಯತೇ ॥ ೮೯ ॥**

ಉಪಾಯವೈಷಮ್ಯಂ=ಮುಮುಕ್ಷುಗಳು ನಡೆಸುವ ಸಾಧನೆಗಳ ವಿಷಮತೆಯನ್ನು ಅಪೇಕ್ಷ್ಯ=ಅವಲಂಬಿಸಿ ಉಪೇಯಸ್ಯ=ಆ ಸಾಧನೆಗಳಿಂದ ಲಭ್ಯವಾಗುವ ಮೋಕ್ಷಾನಂದದ ತಥಾಸ್ಥಿತಿಃ=ವೈಷಮ್ಯವು ಈಶನಿಂದ ಮಾಡಲ್ಪಡುತ್ತದೆ ಎನ್ನುವುದು ಕಯಾ ಮಯಾ=ಯಾವ ಪ್ರಮಾಣದಿಂದ ವಿರುದ್ಧಾ ಸ್ಯಾತ್=ವಿರುದ್ಧವೆನಿಸೀತು? ಇಂತಹ ಫಲವೈಷಮ್ಯವನ್ನು ಮಾಡು ವುದು ರಾಜಾದೌ ಅಪಿ=ಪ್ರೇಕ್ಷಾವಂತರಾದ ರಾಜ ಮೊದಲಾದವರಲ್ಲೂ ದೃಶ್ಯತೇ=ಕಾಣಲ್ಪಡುತ್ತದೆ.

ಭಾವಾರ್ಥ— ಸಾಧಕರು ಮಾಡುವ ಸಾಧನೆಯಲ್ಲಿ ವೈಷಮ್ಯವು ಇದೆ ಎಂದಾದಮೇಲೆ ಆದರ ಫಲವಾದ ಮೋಕ್ಷಾನಂದದಲ್ಲೂ ವೈಷಮ್ಯವಿದೆ, ಎನ್ನುವುದಕ್ಕೆ ಯಾವ ಪ್ರಮಾಣದ ವಿರೋಧವೂ ಇಲ್ಲ. ಸಕಲ ಪ್ರಮಾಣ ಸಮ್ಮತ. ಲೋಕದಲ್ಲಿ ನೌಕರರು ಮಾಡುವ ಕೆಲಸಕ್ಕೆ ಅನುಗುಣವಾಗಿಯೇ ವೇತನವು ಲಭ್ಯವಾಗುತ್ತದೆ.

**ತ್ಯಾಗೋ ದೃಷ್ಟಸ್ಯ ಚಾದೃಷ್ಟಕಲ್ಪನೇತಿ ಸುದುಷ್ಕರೌ ।**
**ಮಾಯಿಭ್ಯೋಽನ್ಯೇನ ಕೇನಾಪಿ ತತ್ ಕಿಮನ್ಯೈಶ್ಚ ವಾದಿಭಿಃ ॥ ೯೦ ॥**

**ಮಾಯಿನೋಽತ್ರಾನುಗಮ್ಯಂತೇ ಶ್ರುತಹಾನ್ಯಶ್ರುತಗ್ರಹೌ ।**
**ಅಪ್ಯತ್ರ ಮಾಯಿನಾಂ ಲಿಂಗೇ ತತ್ ಕೇ ದೋಷಾಸ್ತತೋಽಧಿಕಾಃ ॥೯೧॥**

ದೃಷ್ಟಸ್ಯ ತ್ಯಾಗಃ=ಲೋಕದೃಷ್ಟವಾದುದನ್ನು ನಿರಾಕರಿಸುವುದು, ಅದೃಷ್ಟಕಲ್ಪನಾ=ಅದೃಷ್ಟವಾದುದನ್ನು ಕಲ್ಪನೆ ಮಾಡುವುದು ಇತಿಚ= ಇವೆರಡೂ ಮಾಯಿಭ್ಯಃ ಅನ್ಯೇನ ಕೇನಾಪಿ=ಮಾಯಾವಾದಿಗಳಿಗಿಂತ ಭಿನ್ನರಾದ ಮತ್ತಾರಿಂದಲೂ ಸುದುಷ್ಕರೌ=ಒಪ್ಪಲು ಕಷ್ಟಸಾಧ್ಯವಾದುದು. ಅದು ಮಾಯಾವಾದಿಗಳಿಗೆ ಮಾತ್ರ ಸಾಧ್ಯ. ಏಕೆಂದರೆ, ಅವರು ಎಲ್ಲರೂ ಅಂಗೀಕರಿಸಿರುವ ಪ್ರಪಂಚಸತ್ಯತ್ವವನ್ನು ನಿರಾಕರಿಸುತ್ತಾರೆ, ಯಾರೂ ಒಪ್ಪದ ಅನಿರ್ವಚನೀಯತ್ವವನ್ನು ಅಂಗೀಕರಿಸುತ್ತಾರೆ.

ತತ್=ಇತರರೂ ಹಾಗೆ ಮಾಡುವುದಾದಲ್ಲಿ ಅನ್ಯೈಶ್ಚ ವಾದಿಭಿಃ= ಇತರವಾದಿಗಳಿಂದಲೂ ಅತ್ರ=ಈ ವಿಷಯದಲ್ಲಿ, ದೃಷ್ಟತ್ಯಾಗಾದಿವಿಷಯ ದಲ್ಲಿ ಮಾಯಿನಃ=ಮಾಯಾವಾದಿಗಳು ಅನುಗಮ್ಯಂತೇ=ಅನುಸರಿಸಲ್ಪಡು ತ್ತಾರೇನು?

ನೈಯಾಯಿಕಾದಿಗಳು ಮಾಯಾವಾದಿಗಳಿಗೆ ದೃಷ್ಟ-ಹಾನಿ ಅದೃಷ್ಟ ಕಲ್ಪನಾದೋಷಗಳನ್ನು ಹೇಳುತ್ತಾರೆ. ಮೋಕ್ಷತಾರತಮ್ಯದ ವಿಷಯದಲ್ಲಿ ಅದೇ ದೋಷಗಳನ್ನು ಅವರೇ ಒಪ್ಪಿಕೊಂಡರೆ ಸ್ವವ್ಯಾಹತಿ.

ಅತ್ರ=ಪ್ರಕೃತದೋಷಗಳಲ್ಲಿ ಶ್ರುತಹಾನಿ-ಅಶ್ರುತಗ್ರಹೌ ಅಪಿ=ಬ್ರಹ್ಮ ನಲ್ಲಿ ಶ್ರುತ್ಯುಕ್ತವಾದ ಗುಣಗಳ ತ್ಯಾಗ, ಅಶ್ರುತವಾದ ನಿರ್ಗುಣತ್ವಸ್ವೀಕಾರಗಳೂ

ಮಾಯಿನಾಂ=ಮಾಯಾವಾದಿಗಳ ಲಿಂಗೇ=ಲಕ್ಷಣಗಳು, ತತ್=ಆದ್ದರಿಂದ ತತೋऽಧಿಕಾಃ=ಈ ನಾಲ್ಕು ದೋಷಗಳಿಗಿಂತಲೂ ಅಧಿಕವಾದ ದೋಷಾಃ= ದೋಷಗಳು ಕೇ=ಯಾವುವು?

**ಭಾವಾರ್ಥ**— ಹಿಂದಿನ ಎರಡು ದೋಷಗಳು ಮಾತ್ರವಲ್ಲ, ಶ್ರುತಹಾನಿ, ಅದೃಷ್ಟಕಲ್ಪನಾದೋಷಗಳೆರಡೂ ಮೋಕ್ಷತಾರತಮ್ಯವನ್ನು ನಿರಾಕರಿಸುವವರಿಗೆ ಇದೆ. ಹಿಂದೆ ಹೇಳಿರುವ ಅನೇಕಪ್ರಮಾಣಗಳಿಂದ ಆನಂದತಾರತಮ್ಯವು ಶ್ರುತವಾಗಿದೆ. ಅದನ್ನು ಒಪ್ಪದಿರುವುದು ಶ್ರುತಹಾನಿ. ತಾರತಮ್ಯಾಭಾವವು ಅಶ್ರುತ. ಅದನ್ನು ಕಲ್ಪನೆ ಮಾಡಬೇಕು.

**ಮುಕ್ತರಿಗೆ ಅಸೂಯೆ ಇಲ್ಲ**

**ನಿಃಶೇಷಗತದೋಷಾಣಾಂ ಬಹುಭಿರ್ಜನ್ಮಭಿಃ ಪುನಃ ।**
**ಸ್ಯಾದಾಪರೋಕ್ಷ್ಯಂ ಹಿ ಹರೇರ್ದ್ವೇಷೇರ್ಷ್ಯಾದಿಸ್ತತಃ ಕುತಃ ॥ ೯೨ ॥**

ಬಹುಭಿಃ ಜನ್ಮಭಿಃ=ಬಹಳಜನ್ಮಗಳಿಂದ ನಿಃಶೇಷಗತದೋಷಾಣಾಂ= ಸಕಲದೋಷಗಳನ್ನೂ ಕಳೆದುಕೊಂಡಿರುವ ಪುನಃ=ಮತ್ತೆ ಶ್ರವಣಾದಿಸಾಧನ ಸಂಪನ್ನರಾದವರಿಗೆ ಹರೇಃ ಆಪರೋಕ್ಷ್ಯಂ ಸ್ಯಾತ್=ಭಗವಂತನ ಅಪರೋಕ್ಷವು ಆಗುತ್ತದೆ. ತತಃ=ಹೀಗಿದ್ದಮೇಲೆ ದ್ವೇಷ–ಈರ್ಷ್ಯಾದಿಃ ಕುತಃ= ಮುಕ್ತರಿಗೆ ದ್ವೇಷಾಸೂಯೆಗಳು ಹೇಗೆ ಬರಬೇಕು.

**ಭಾವಾರ್ಥ**— ಮೋಕ್ಷದಲ್ಲಿ ತಾರತಮ್ಯವಿದ್ದರೆ ಅವನಂತೆ ನಾನಿಲ್ಲ, ಎನ್ನುವ ಕೊರತೆಯಿಂದ ಅಸೂಯೆ, ದ್ವೇಷಗಳೂ ಬರುತ್ತವೆ. ಸಾಮ್ಯವಿದ್ದರೆ ಈ ದೋಷಗಳಿಗೆ ಅವಕಾಶವಿಲ್ಲ. ಈ ಆಕ್ಷೇಪವಿಲ್ಲ. ಮುಕ್ತರು ಸಕಲದೋಷ ಗಳಿಂದ ಮುಕ್ತರು. ಅಂತಹವರಿಗೆ ದ್ವೇಷಾಸೂಯೆಗಳು ಬರುವ ಸಂಭವವೇ ಇಲ್ಲ. ಏಕೆಂದರೆ ಜ್ಞಾನಾನಂದಸ್ವರೂಪರಾದ ಅವರ ಸ್ವಾಭಾವಿಕಗುಣ ದೋಷಗಳಾಗಿರಲು ಸಾಧ್ಯವಿಲ್ಲ. ಔಪಾಧಿಕವಾದ ದೋಷಗಳೆಲ್ಲವೂ ಭಗವಂತನ ಅಪರೋಕ್ಷದಿಂದ ಸಮೂಲವಾಗಿ ನಾಶವಾಗಿವೆ. ಆದ್ದರಿಂದ ಮುಕ್ತರಲ್ಲಿ ದ್ವೇಷಾಸೂಯೆಗಳಿಗೆ ಅವಕಾಶವಿಲ್ಲ.

**ಭವೇಯುರ್ಯದಿ ಚೇರ್ಷ್ಯಾದ್ಯಾಃ ಸಮೇಷ್ವಪಿ ಕುತೋ ನ ತೇ ।**
**ತಪ್ಯಮಾನಾಃ ಸಮಾನ್ ದೃಷ್ಟ್ವಾ ದ್ವೇಷೇರ್ಷ್ಯಾದಿಯುತಾ ಅಪಿ ॥೯೩**

**ದೃಶ್ಯಂತೇ ಬಹವೋ ಲೋಕೇ ದೋಷಾ ಏವಾತ್ರ ಕಾರಣಮ್ ।**
**ಯದಿ ನಿರ್ದೋಷತಾ ತತ್ರ ಕಿಮಾಧಿಕ್ಯೇನ ದೂಷ್ಯತೇ ॥ ೯೪ ॥**

ಯದಿ ಚ=ಒಂದುವೇಳೆ ಈರ್ಷ್ಯಾದ್ಯಾಃ=ದ್ವೇಷಾಸೂಯಾದಿಗಳು ಭವೇಯುಃ=ಮುಕ್ತರಲ್ಲೂ ಇರುವವುಗಳಾದಲ್ಲಿ ತೇ=ಅವುಗಳು ಸಮೇಷ್ವಪಿ= ಸಮಾನರಲ್ಲೂ ಕುತೋ ನ=ಏಕೆ ಬರಬಾರದು? ಸಮಾನ್ ದೃಷ್ಟ್ವಾಽಪಿ= ಸಮಸ್ಕಂಧರನ್ನು ನೋಡಿಯೂ ದ್ವೇಷೇರ್ಷ್ಯಾದಿಯುತಾಃ=ದ್ವೇಷ–ಅಸೂಯೆ ಗಳಿಂದ ಕೂಡಿದವರಾಗಿ ತಪ್ಯಮಾನಾಃ=ಬೇಯುತ್ತಿರುವವರು ಲೋಕೇ= ಲೋಕದಲ್ಲಿ ಬಹವಃ=ಬಹಳಷ್ಟು ಮಂದಿ ದೃಶ್ಯಂತೇ=ಕಾಣಸಿಗುತ್ತಾರೆ. ಆದ್ದರಿಂದ ಅತ್ರ=ಈ ಬಗ್ಗೆ ದೋಷಾ ಏವ ಕಾರಣಮ್=ದೋಷಗಳಿರುವುದೇ ಕಾರಣವು.

ಯದಿ ತತ್ರ ನಿರ್ದೋಷತಾ (ಅಂಗೀಕೃತಾ)=ಒಂದುವೇಳೆ ಮುಕ್ತರಲ್ಲಿ ನಿರ್ದೋಷತ್ವವು ಅಂಗೀಕರಿಸಲ್ಪಡುವುದಾದಲ್ಲಿ ಆಧಿಕ್ಯೇನ=ನ್ಯೂನಾಧಿಕ ಭಾವದಿಂದ (ತಾರತಮ್ಯವನ್ನು ಅಂಗೀಕರಿಸುವುದರಿಂದ) ಕಿಂ ದೂಷ್ಯತೇ= ಏನು ತಾನೇ ದೂಷಿಸಲ್ಪಡುತ್ತದೆ?

ಭಾವಾರ್ಥ— ದೋಷಗಳೇ ದ್ವೇಷಾಸೂಯೆಗಳಿಗೆ ಕಾರಣವೆಂದು ಸಾಮ್ಯವಾದಿಗಳೂ ಅಂಗೀಕರಿಸಬೇಕಾಗುತ್ತದೆ. ಏಕೆಂದರೆ, ಲೋಕದಲ್ಲಿ ಸುಖ–ಸಂಪತ್ತುಗಳಲ್ಲಿ ವೈಷಮ್ಯವಿದ್ದಾಗ ದ್ವೇಷಾಸೂಯೆಗಳಿರುವಂತೆ ಸಾಧನೆಯಲ್ಲಿ ವೈಷಮ್ಯವಿದ್ದು ಸುಖ–ಸಂಪತ್ತುಗಳಲ್ಲಿ ಸಾಮ್ಯವಿದ್ದರೂ ದ್ವೇಷಾಸೂಯೆಗಳು ಬರುವುದು ಕಂಡಿದೆ. ಆದ್ದರಿಂದ ದೋಷಗಳೇ ದ್ವೇಷಾದಿ ಗಳಿಗೆ ಕಾರಣ, ಮೋಕ್ಷದಲ್ಲಿ ದೋಷಗಳಿಲ್ಲ, ಎಂದೇ ಸಮಾಧಾನವನ್ನು ಹೇಳಬೇಕು. ಹೀಗಿದ್ದಮೇಲೆ ಮೋಕ್ಷದಲ್ಲಿ ತಾರತಮ್ಯವಿದ್ದರೂ ಇದೇ ಸಮಾಧಾನವನ್ನು ಹೇಳಬಹುದಾದ್ದರಿಂದ ವೈಷಮ್ಯವಿದ್ದರೇನು?

**ಯದ್ಯನ್ಯದರ್ಶನಾಭಾವಾದೀರ್ಷ್ಯಾದಿರ್ವಿನಿವಾರ್ಯತೇ ।**
**ಅದರ್ಶನಾದರತ್ಯಾದಿಃ ಕಥಂ ತೇನ ನಿವಾರ್ಯತೇ ॥ ೯೫ ॥**

ಯದಿ=ಒಂದುವೇಳೆ ಅನ್ಯದರ್ಶನಾಭಾವಾತ್=ಸಮಾನಸುಖರಾದ ಇನ್ನೊಬ್ಬರ ದರ್ಶನವೇ ಇಲ್ಲದಿರುವುದರಿಂದ ಈರ್ಷ್ಯಾದಿಃ=ದ್ವೇಷಾಸೂಯಾದಿಗಳು ನಿವಾರ್ಯತೆ=ಪರಿಹರಿಸಲ್ಪಡುವುದಾದಲ್ಲಿ ವೈಷಮ್ಯವಿದ್ದಾಗಲೂ ಅಸೂಯಾದಿಗಳನ್ನು ಹೀಗೇ ಪರಿಹರಿಸಬಹುದು. ಪ್ರಮಾಣಸಿದ್ಧವಾದ ವೈಷಮ್ಯವನ್ನು ಬಿಡುವ ಅಗತ್ಯವಿಲ್ಲ.

**ಭಾವಾರ್ಥ—** ಸಮಾನರು ಇರುವುದೇ ಅಸೂಯೆಗೆ ಕಾರಣವಲ್ಲ. ಅಂತಹವರನ್ನು ನೋಡುವುದು ಕಾರಣ. ಮೋಕ್ಷದಲ್ಲಿ ಒಬ್ಬರಿಗೆ ಮತ್ತೊಬ್ಬರು ಕಾಣುವುದೇ ಇಲ್ಲ. ಆದ್ದರಿಂದ ಅಸೂಯೆಗೆ ಅವಕಾಶವಿಲ್ಲ, ಎನ್ನುವುದಾದರೆ ಮೋಕ್ಷದಲ್ಲಿ ವೈಷಮ್ಯವನ್ನು ಅಂಗೀಕರಿಸಿದರೂ ಇದೇ ಪರಿಹಾರವನ್ನು ಹೇಳಬಹುದು.

ವಸ್ತುತಃ ಇದು ಪ್ರತಿಬಂದಿ ಉತ್ತರ ಮಾತ್ರ. ವಸ್ತುತಸ್ತು ಮತ್ತೊಬ್ಬರ ದರ್ಶನವಿಲ್ಲದಿರುವುದೇ ಒಂದು ದೊಡ್ಡ ದುಃಖ. ಯಾರೂ ಕಾಣದಿದ್ದರೆ ಭಯ, ದುಃಖ, ಬೇಸರಗಳು ಉಂಟಾಗಿ ಮೋಕ್ಷವು ಪುರುಷಾರ್ಥವೇ ಆಗಲಿಕ್ಕಿಲ್ಲ.

**ಬ್ರಹ್ಮಣೋಽಪ್ಯರತಿರ್ದೃಷ್ಟಾ ಪೂರ್ವಮೇಕಾಕಿನಃ ಶ್ರುತೌ ।**
**ನೈವ ರೇಮೇ ಸ ಚೈಕಾಕೀ ತಸ್ಮಾನ್ನ ರಮತೇ ಕ್ವಚಿತ್ ।**
**ದ್ವಿತೀಯಮೈಚ್ಛತ್ ತೇನಾಸಾವಿತಿ ಶ್ರುತಯ ಊದಿರೇ ॥ ೯೬ ॥**

ಬ್ರಹ್ಮಣೋಽಪಿ=ಪರಮವೈರಾಗ್ಯಶಾಲಿಯಾದ ಚತುರ್ಮುಖಬ್ರಹ್ಮದೇವನಿಗೂ ಪೂರ್ವಂ=ಸೃಷ್ಟಿಯ ಆದಿಕಾಲದಲ್ಲಿ ಏಕಾಕಿನಃ=ಏಕಾಕಿಯಾಗಿದ್ದವನಿಗೆ ಅರತಿಃ=ಸುಖಾಭಾವವು ಶ್ರುತೌ=ಬೃಹದಾರಣ್ಯಕ ಶ್ರುತಿಯಲ್ಲಿ ದೃಷ್ಟಾ=ಕಂಡಿದೆ. ಆ ಶ್ರುತಿಯ ಅಭಿಪ್ರಾಯ— ''ಸಃ=ಚತುರ್ಮುಖನು ಏಕಾಕೀ=ಒಬ್ಬಂಟಿಗನಾಗಿ ನೈವ ರೇಮೇ=ಸುಖಪಡಲಿಲ್ಲ. ತಸ್ಮಾತ್=ಆದ್ದರಿಂದ ಏಕಾಕೀ=ಒಬ್ಬಂಟಿಗನು ಕ್ವಚಿತ್=ಎಂದೂ ನ ರಮತೇ=

ಸುಖಿಸುವುದಿಲ್ಲ. ತೇನ=ಆದಕಾರಣ ಅಸೌ=ಬ್ರಹ್ಮದೇವನು ದ್ವಿತೀಯಂ= ಜೊತೆಗಾರನನ್ನು ಐಚ್ಛತ್=ಬಯಸಿದನು'' ಇತಿ=ಹೀಗೆ ಶ್ರುತಯಃ=ಶ್ರುತಿ ವಚನಗಳು ಊದಿರೇ=ಹೇಳುತ್ತವೆ.

ಭಾವಾರ್ಥ— ಬಹಿರ್ಮುಖರಾದವರು ಏಕಾಕಿಗಳಾದರೆ ಕೊರಗುತ್ತಾರೆ. ಮುಕ್ತರು ಅಂತರ್ಮುಖಿಗಳು. ಆದ್ದರಿಂದ ಒಂಟಿತನ ಅವರಿಗೆ ಬಾಧಕವಲ್ಲ ಎನ್ನುವವರಿಗೆ ಇಲ್ಲಿ ಉತ್ತರವಿದೆ— ಬೃಹದಾರಣ್ಯಕದಲ್ಲಿ ಹೀಗೊಂದು ವಾಕ್ಯವಿದೆ— ''ಸ ವೈ ನೈವ ರೇಮೇ। ತಸ್ಮಾದೇಕಾಕೀ ನ ರಮತೇ। ಸ ದ್ವಿತೀಯಮೈಚ್ಛತ್'' ಎಂದು. ಸೃಷ್ಟಿಯ ಆರಂಭದಲ್ಲಿ ಬ್ರಹ್ಮದೇವನೊಬ್ಬನೇ ಇದ್ದ. ಅದರಿಂದ ಅವನು ಸುಖಕಾಣಲಿಲ್ಲ. ಆದ್ದರಿಂದ ಒಬ್ಬಂಟಿಗರಾರೂ ಸುಖವಾಗಿರುವುದಿಲ್ಲ. ಅದಕ್ಕಾಗಿ ಬ್ರಹ್ಮದೇವ ಜೊತೆಯನ್ನು ಬಯಸಿದ''.

ಚತುರ್ಮುಖಬ್ರಹ್ಮ ಪರಮವೈರಾಗ್ಯಶಾಲಿ-
ಜ್ಞಾನಮಪ್ರತಿಘಂ ಯಸ್ಯ ವೈರಾಗ್ಯಂ ಚ ಜಗತ್ಪತೇಃ।
ಐಶ್ವರ್ಯಂ ಚೈವ ಧರ್ಮಶ್ಚ ಸಹಸಿದ್ಧಂ ಚತುಷ್ಟಯಮ್ ॥
(ಬೃಹದ್‌ಭಾಷ್ಯ)

ಇಂತಹ ಅಂತರ್ಮುಖಿಯಾದ ಬ್ರಹ್ಮದೇವನಿಗೂ ಏಕಾಕಿತನ ಬೇಡವಾಯಿತು, ಎಂದ ಮೇಲೆ ಉಳಿದವರ ಪಾಡೇನು?

**ಯದೀಚ್ಛಾ ತತ್ರ ನೈವಾಸ್ತೀತ್ಯೇವ ತತ್ ಕಲ್ಪ್ಯತೇ ಮೃಷಾ।**
**ಶ್ರುತ್ಯುಕ್ತನಿರ್ದೋಷತ್ವೈವ ಕಿಂ ನಾಂಗೀಕ್ರಿಯತೇ ಸ್ವಯಮ್ ॥ ೯೭ ॥**

ತತ್-ತತ್ರ=ಮೋಕ್ಷದಲ್ಲಿ ತತ್ರ=ಅನ್ಯದರ್ಶನವಿಷಯದಲ್ಲಿ ಇಚ್ಛಾ= ಇಚ್ಛೆಯು ನೈವಾಸ್ತೀತಿ=ಇಲ್ಲವೇ ಇಲ್ಲವೆಂದು ಯದಿ=ಒಂದುವೇಳೆ ಮೃಷೈವ ಕಲ್ಪ್ಯತೇ=ಆಧಾರವೇ ಇಲ್ಲದೆ ಕಲ್ಪಿಸುವುದಾದಲ್ಲಿ ತರ್ಹಿ=ಆಗ ಸ್ವಯಂ ಶ್ರುತ್ಯುಕ್ತನಿರ್ದೋಷತ್ವೈವ='ಭಿದ್ಯತೇ ಹೃದಯಗ್ರಂಥಿಃ' ಎಂಬ ಶ್ರುತಿಯಲ್ಲಿ ಸಾಕ್ಷಾತ್ ಹೇಳಲ್ಪಟ್ಟ ನಿರ್ದೋಷತ್ವವೇ ಕಿಂ ನಾಂಗೀಕ್ರಿಯತೇ=ಏಕೆ ಅಂಗೀಕರಿಸಲ್ಪಡಬಾರದು?

ಭಾವಾರ್ಥ— ಮೋಕ್ಷದಲ್ಲಿ ಮತ್ತೊಬ್ಬರ ದರ್ಶನದ ಇಚ್ಛೆ ಇದ್ದು

ದರ್ಶನವಾಗದಿದ್ದರೆ ದುಃಖವೆನಿಸಬಹುದು. ಆದರೆ, ಮುಕ್ತರಿಗೆ ಅಂತಹ ಇಚ್ಛೆಯೇ ಬರುವುದಿಲ್ಲ. ಅಂದಮೇಲೆ ಅನ್ಯರ ದರ್ಶನವಾಗದಿರುವುದರಿಂದ ಅವರಿಗೆ ದುಃಖವು ಇಲ್ಲ, ತಮ್ಮ ಸಮಾನವಾದ ಆನಂದವು ಮತ್ತೊಬ್ಬರಿಗೆ ಆಗುವುದರಿಂದ ದ್ವೇಷಾಸೂಯೆಗಳೂ ಆಗುವುದಿಲ್ಲ, ಎಂದು ಪೂರ್ವಪಕ್ಷ. ಅದಕ್ಕೆ ಸಮಾಧಾನ— ಅಂತಹ ಇಚ್ಛೆ ಇಲ್ಲ ಎನ್ನುವುದಕ್ಕೆ ಆಧಾರವಿಲ್ಲ. ಆದರೆ, ಮುಕ್ತರಿಗೆ ದೋಷಗಳಿಲ್ಲ ಎನ್ನುವುದಕ್ಕೆ 'ಭಿದ್ಯತೇ ಹೃದಯಗ್ರಂಥಿಃ' ಎನ್ನುವ ಶ್ರುತಿಯು ಪ್ರಮಾಣವಾಗಿದೆ. ಹೀಗಿರುವಾಗ ಪ್ರಾಮಾಣಿಕವಾದ ನಿರ್ದೋಷತ್ವವನ್ನು ಬಿಟ್ಟು ಪ್ರಮಾಣವಿಲ್ಲದ ಅನ್ಯದರ್ಶನೇಚ್ಛಾಭಾವವನ್ನು ಹೇಳುವುದು ಸರಿಯಲ್ಲ. ಇದರಿಂದ ಪ್ರಾಮಾಣಿಕಪರಿತ್ಯಾಗ, ಅಪ್ರಾಮಾಣಿಕ ಕಲ್ಪನೆ ಎಂಬ ದೋಷವು ಬರುತ್ತದೆ.

**ತಾರತಮ್ಯಂ ಚ ಕಾಮಂ ಚ ಶ್ರುತಮೇವಾತಿಹಾಯ ತು ।**
**ಅಶ್ರುತಾ ಸಮತಾ ಕೇನ ಕಲ್ಪ್ಯತೇ ಯುಕ್ತಿಮಾನಿನಾ ॥ ೯೮ ॥**

ಶ್ರುತಮೇವ=ಶ್ರುತಿಗಳಿಂದಲೇ ಹೇಳಲ್ಪಟ್ಟಿರುವ ತಾರತಮ್ಯಂ ಚ= ಮುಕ್ತರ ತಾರತಮ್ಯವನ್ನು ಕಾಮಂ ಚ=ಪರದರ್ಶನಾದಿ ಇಚ್ಛೆಯನ್ನೂ ಅತಿಹಾಯ=ಬಿಟ್ಟು ಯುಕ್ತಿಮಾನಿನಾ=ಯುಕ್ತಿಯ ಮೇಲೆ ನಂಬಿಕೆ ಇರುವ (ಸಾಮ್ಯವಾದಿಯಿಂದ) ಕೇನ=ಯಾರಿಂದ ತಾನೇ ಅಶ್ರುತಾ=ಶ್ರುತಿಯಲ್ಲಿ ಹೇಳಲ್ಪಡದಿರುವ ಸಮತಾ=ಮುಕ್ತರಲ್ಲಿ ಸಾಮ್ಯವು ಕಲ್ಪ್ಯತೇ=ಕಲ್ಪಿಸಲ್ಪಡು ತ್ತದೆ?

ಭಾವಾರ್ಥ— 'ಸ ಯೋ ಮನುಷ್ಯಾಣಾಂ ರಾದ್ಧಃ' ಇತ್ಯಾದಿ ಶ್ರುತಿಗಳಿಂದ ಮೋಕ್ಷದಲ್ಲಿ ತಾರತಮ್ಯವು ತಿಳಿಯಲ್ಪಡುತ್ತದೆ. 'ಅಕ್ಷಣ್ವಂತಃ ಕರ್ಣವಂತಃ ಸಖಾಯಃ' ಎಂಬ ಶ್ರುತಿಯು ಮೋಕ್ಷದಲ್ಲಿ ಒಬ್ಬರು ಮತ್ತೊಬ್ಬರಿಗೆ ಸ್ನೇಹಿತರಾಗಿರುತ್ತಾರೆ, ಎಂದು ಹೇಳುತ್ತದೆ. ಸ್ನೇಹಿತರಾಗಿರ ಬೇಕಾದರೆ ಒಬ್ಬರಿಗೆ ಮತ್ತೊಬ್ಬರು ಕಾಣಬೇಕು. ಹೀಗೆ ತಾರತಮ್ಯ ಮತ್ತು ಅನ್ಯದರ್ಶನವು ಶ್ರುತಿಪ್ರಮಾಣಸಿದ್ಧವಾಗಿದೆ. ಸಾಮ್ಯವಿದೆ ಎನ್ನಲು ಶ್ರುತಿಯ ಆಧಾರವಿಲ್ಲ. ಯುಕ್ತಿಯಿಂದಲೇ ಅದನ್ನು ಕಲ್ಪಿಸಬೇಕು. ಆದ್ದರಿಂದ ಶ್ರುತ್ಯುಕ್ತ ವಾದ ತಾರತಮ್ಯಕ್ಕೆ ವಿರುದ್ಧವಾದ ಸಾಮ್ಯವನ್ನು ಅಂಗೀಕರಿಸಬಾರದು.

**ಕಿಂ ತನ್ಮಾನಂ ಸಮತ್ವೇ ತೇ ಮುಕ್ತಾನಾಮುಪಲಭ್ಯತೇ ।**
**ವೃಥಾಽಯಮಾಗ್ರಹಃ ಕೇನ ಶ್ರುತಹಾನ್ಯಶ್ರುತಗ್ರಹೇ ॥ ೯೯ ॥**

ತೇ=ನಿನಗೆ ಮುಕ್ತಾನಾಂ ಸಮತ್ವೇ=ಮುಕ್ತರಲ್ಲಿ ಸಾಮ್ಯ ಇದೆ, ಎನ್ನುವ ವಿಷಯದಲ್ಲಿ ಕಿಂ ತನ್ಮಾನಮ್ ಉಪಲಭ್ಯತೇ=ಯಾವ ಪ್ರಮಾಣವು ಕಂಡಿದೆ? ಶ್ರುತಹಾನ್ಯಶ್ರುತಗ್ರಹೇ=ಶ್ರುತ್ಯುಕ್ತವಾದುದನ್ನು ತ್ಯಾಗಮಾಡುವುದು, ಹೇಳದುದನ್ನು ಒಪ್ಪಿಕೊಳ್ಳುವುದು ಈ ವಿಷಯದಲ್ಲಿ ವೃಥಾ ಅಯಂ ಆಗ್ರಹಃ=ವ್ಯರ್ಥವಾದ ಈ ಹಠವು ಕೇನ=ಯಾವ ಕಾರಣದಿಂದ?

**ಮೋಕ್ಷೇಽಪಿ ತಾರತಮ್ಯೇತಶ್ಚೇತನತ್ವಾದ್ ಯಥಾ ಪುರಾ(ತ್ ಪುರಾ ಯಥಾ) ।**
**ಇತ್ಯುಕ್ತ ಉತ್ತರಂ ಕಿಂ ತೇ ಕಲ್ಪನಾಮಾತ್ರವಾದಿನಃ ॥ ೧೦೦ ॥**

ಚೇತನನು ಮೋಕ್ಷೇಽಪಿ=ಮೋಕ್ಷದಲ್ಲೂ ತಾರತಮ್ಯೇತಃ=ತಾರತಮ್ಯದಿಂದ ಸಹಿತನಾಗಿರುತ್ತಾನೆ, ಚೇತನತ್ವಾತ್=ಚೇತನನಾದುದರಿಂದ, ಪುರಾ ಯಥಾ=ಮೋಕ್ಷವಾಗುವುದಕ್ಕಿಂತ ಮೊದಲು ಸಂಸಾರದಲ್ಲಿ ಹೇಗೋ ಹಾಗೆ, ಇತ್ಯುಕ್ತೇ=ಹೀಗೆ ಹೇಳಿದರೆ ಕಲ್ಪನಾಮಾತ್ರವಾದಿನಃ=ಆಧಾರವಿಲ್ಲದೆ ಕೇವಲ ಕಲ್ಪನೆಯಿಂದ ಮಾತನಾಡುವ ತೇ=ಸಾಮ್ಯವಾದಿಯಾದ ನಿನ್ನ ಉತ್ತರಂ ಕಿಂ=ಉತ್ತರವೇನು?

**ಭಾವಾರ್ಥ—** ಸಂಸಾರದಲ್ಲಿ ತಾರತಮ್ಯವಿರುವಂತೆ ಮೋಕ್ಷದಲ್ಲೂ ಜೀವರಿಗೆ ತಾರತಮ್ಯವಿದೆ, ಎಂದು ಅನುಮಾನದಿಂದಲೂ ಮೋಕ್ಷದಲ್ಲಿ ಆನಂದತಾರತಮ್ಯವನ್ನು ಸಾಧಿಸಬಹುದು. ಆದರೆ ಸಾಮ್ಯವಾದಕ್ಕೆ ಇಂತಹ ಅನುಮಾನದ ಆಧಾರವೂ ಇಲ್ಲ.

**ನಚ ದುಃಖಾದಿಕಂ ಕಲ್ಪ್ಯಂ ನಿರ್ದುಃಖತ್ವಶ್ರುತೇರ್ಬಲಾತ್ ॥ ೧೦೧ ॥**

ಇದೇ ರೀತಿಯ ಅನುಮಾನದಿಂದ ದುಃಖಾದಿಕಂ=ಸಂಸಾರದಲ್ಲಿರುವ ದುಃಖಾದಿದೋಷಗಳೂ ನ ಕಲ್ಪ್ಯಂ=ಕಲ್ಪಿಸಲ್ಪಡಬಾರದು. ಏಕೆಂದರೆ, ನಿರ್ದುಃಖತ್ವಶ್ರುತೇಃ ಬಲಾತ್=ಮೋಕ್ಷದಲ್ಲಿ ದುಃಖವಿಲ್ಲ, ಎನ್ನುವ ಶ್ರುತಿಯ ಆಧಾರವಿರುವುದರಿಂದ.

ಭಾವಾರ್ಥ— ಸಂಸಾರದಲ್ಲಿ ತಾರತಮ್ಯವಿರುವುದರಿಂದ ಮೋಕ್ಷದಲ್ಲೂ ತಾರತಮ್ಯವನ್ನು ಸಾಧನೆ ಮಾಡಿದರೆ ಸಂಸಾರದಲ್ಲಿ ದುಃಖವಿರುವುದರಿಂದ ಮೋಕ್ಷದಲ್ಲೂ ದುಃಖವಿದೆ, ಎಂದೇಕೆ ಸಾಧನೆ ಮಾಡಬಾರದು? ಹಾಗೆ ಸಾಧನೆ ಮಾಡಲಾಗದು. ಅದು ಶ್ರುತಿಗೆ ವಿರುದ್ಧ. ಶ್ರುತಿಯು ಮೋಕ್ಷದಲ್ಲಿ ದುಃಖವಿಲ್ಲ ಎನ್ನುತ್ತದೆ.

**'ಶೋಕಂ ತರತ್ಯಾತ್ಮವೇತ್ತಾ, ತೀರ್ಣಃ ಸರ್ವಾನದುಃಖಭಾಕ್ ।**
**ಯೇನಾಽನಂದ್ಯೇವ ಭವತಿ ನ ಶೋಚತಿ ಕದಾಚನ ॥ ೧೦೨ ॥**

**ಕಿಲ್ಬಿಷಸ್ಪೃತ್ ಪಿತುಷಣಿರರಂ ಹಿತ ಇಹೇಶ್ವರಃ ।**
**ಯಂ ಯಮಂತಮಭಿಪ್ರೇಪ್ಸುಃ ಸ ಸಂಕಲ್ಪಾದ್ ಭವೇದಿಹ ।'**
**ಇತ್ಯಾದಿಶ್ರುತಯೋ ಮಾನಂ ನಿರ್ದುಃಖತ್ವಾದಿಸಂಪದಿ ॥ ೧೦೩ ॥**

1. ಮೋಕ್ಷದಲ್ಲಿ ದುಃಖವಿಲ್ಲ ಎನ್ನುವ ಶ್ರುತಿಗಳು— ಆತ್ಮವೇತ್ತಾ=ಆತ್ಮ ಜ್ಞಾನಿಯು ಶೋಕಂ ತರತಿ=ದುಃಖವನ್ನು ದಾಟುತ್ತಾನೆ ಎನ್ನುವ 'ತರತಿ ಶೋಕಮಾತ್ಮವಿತ್' ಎಂಬ ಶ್ರುತಿ.

2. ಸರ್ವಾನ್ ತೀರ್ಣಃ=ಎಲ್ಲದುಃಖಗಳನ್ನು ದಾಟಿದವನು— 'ತೀರ್ಣೋ ಹಿ ತದಾ ಸರ್ವಾನ್ ಶೋಕಾನ್' ಎಂಬ ಶ್ರುತಿ.

3. ಅದುಃಖಭಾಕ್=ದುಃಖಭಾಜನನಲ್ಲ–'ನಾನಾನಂದಂ ಕಿಂಚಿ-ದುಪಸ್ಪೃಶತಿ'–ಎಂಬ ಶ್ರುತಿ.

4. ಕದಾಚನ=ಎಂದೂ ನ ಶೋಚತಿ=ದುಃಖಕ್ಕೀಡಾಗುವುದಿಲ್ಲ, ಯೇನ=ಭಗವಂತನಿಂದ ಆನಂದ್ಯೇವ ಭವತಿ=ಆನಂದವುಳ್ಳವನೇ ಆಗುತ್ತಾನೆ—'ತದ್ವೈ ಜೈವಂ ಮನಃ, ಯೇನ ಆನಂದ್ಯೇವ ಭವತಿ ಅಥೋ ನ ಶೋಚತಿ' ಎಂಬ ಶ್ರುತಿ.

5. ಇಹ=ಮೋಕ್ಷದಲ್ಲಿ ಈಶ್ವರಃ=ಪರಮಾತ್ಮನು ಕಿಲ್ಬಿಷಸ್ಪೃತ್= ಮುಕ್ತರಿಗೆ ದುಃಖವನ್ನು ಸಹಿಸುವುದಿಲ್ಲ. (ಸ್ಪರ್ಧಾರ್ಥದಲ್ಲಿ ಸ್ಪೃಧ್ ಎಂಬ ಧಾತು) ಪಿತುಷಣಿಃ=ಅನ್ನದಾತಾ (ಅನ್ನಂ ವೈ ಪಿತುಃ–ಶ್ರುತಿ. ಷಣು

ದಾನೇ–ಧಾತು) ಅರಂ=ಚೆನ್ನಾಗಿ ಹಿತಃ=ಇಂದ್ರಿಯಗಳಿಗೆ ಹಿತಪ್ರದ. ಶ್ರುತಿಯ ಪೂರ್ಣಪಾಠ ಹೀಗಿದೆ.

''ಕಿಲ್ಬಿಷಸ್ಪೃತ್ ಪಿತುಷಣಿಃ ಹ್ಯೇಷಾಮರಂ ಹಿತೋ ಭವತಿ ವಾಜಿನಾಯ ।''

6. ಯಂ ಯಂ ಅಂತಂ=ಮುಕ್ತನು ಯಾವ ಯಾವ ಸ್ಥಾನವನ್ನು ಅಭಿಪ್ರೇಪ್ಸುಃ=ಬಯಸುವನೋ ಸಃ=ಅದೆಲ್ಲವೂ ಇಹ=ಮೋಕ್ಷದಲ್ಲಿ ಸಂಕಲ್ಪಾತ್=ಸಂಕಲ್ಪಮಾತ್ರದಿಂದಲೇ ಭವೇತ್=ಸಿಗುತ್ತದೆ. ಶ್ರುತಿ— ''ಯಮಂತಮಭಿಕಾಮೋ ಭವತಿ । ಸೋಽಸ್ಯ ಸಂಕಲ್ಪಾದೇವ ಭವತಿ ।''

ಇತ್ಯಾದಿಶ್ರುತಯಃ=ಈ ಮೊದಲಾದ ಶ್ರುತಿಗಳು ನಿರ್ದುಃಖತ್ವಾದಿ ಸಂಪದಿ=ನಿರ್ದುಃಖವೇ ಮೊದಲಾದ ಸಂಪತ್ತುಗಳು ಇವೆ, ಎನ್ನುವ ಬಗ್ಗೆ ಮಾನಂ=ಪ್ರಮಾಣವು.

**ಅತೋ ದುಃಖಾದ್ಯನುಮಾಯಾ ನಾವಕಾಶೋಽತ್ರ ಲಭ್ಯತೇ ।**
**ತಾರತಮ್ಯಾನುಮಾ ತೇನ ಭವೇನ್ನಾತಿಪ್ರಸಂಗಿನೀ ॥ ೧೦೪ ॥**

ಅತಃ=ಬಾಧಕವಿರುವುದರಿಂದ ಅತ್ರ=ಮೋಕ್ಷದಲ್ಲಿ ದುಃಖಾದ್ಯನು-ಮಾಯಾಃ=ಮುಕ್ತರೂ ದುಃಖಿಗಳು ಎನ್ನುವ ಅನುಮಾನಕ್ಕೆ ನಾವಕಾಶಃ ಲಭ್ಯತೇ=ಅವಕಾಶವಿಲ್ಲ. ತಸ್ಮಾತ್=ಬಾಧಕವಿಲ್ಲದುದರಿಂದ ತಾರತಮ್ಯಾ-ನುಮಾ=ಮೋಕ್ಷದಲ್ಲಿ ತಾರತಮ್ಯವನ್ನು ಸಾಧಿಸುವ ಅನುಮಾನವು ನಾತಿಪ್ರಸಂಗಿನೀ=ಅತಿಪ್ರಸಂಗದೋಷವುಳ್ಳದ್ದಲ್ಲ.

**ಶ್ರುತಿಯುಕ್ತಿಬಲಾದೇವ(ವಂ) ತಾರತಮ್ಯಂ ವಿಭಾವ್ಯತೇ ॥**
**ಮುಕ್ತಾವಪಿ ತತಃ ಕೇಽತ್ರ ವಿರೋಧಂ ಕರ್ತುಮೀಶತೇ ॥ ೧೦೫ ॥**

ಶ್ರುತಿ–ಯುಕ್ತಿಬಲಾದೇವ=ಹಿಂದೆ ಹೇಳಿರುವ ಶ್ರುತಿ ಮತ್ತು ಯುಕ್ತಿಗಳ ಆಧಾರದಿಂದ ಮುಕ್ತಾವಪಿ=ಮೋಕ್ಷದಲ್ಲಿಯೂ ತಾರತಮ್ಯಂ=ತಾರತಮ್ಯವು ವಿಭಾವ್ಯತೇ=ಸರಿಯಾಗಿ ತಿಳಿಯಲ್ಪಡುತ್ತದೆ. ತತಃ=ಆದ್ದರಿಂದ ಅತ್ರ=ಈ ವಿಷಯದಲ್ಲಿ ಕೇ ವಾದಿನಃ=ಯಾವ ವಾದಿಗಳು ವಿರೋಧಂ=ವಿರೋಧವನ್ನು ಕರ್ತುಂ=ಮಾಡಲು ಈಶತೇ=ಸಮರ್ಥರು?

ಇಲ್ಲಿಗೆ ಕಾಮಚಾರಾಧಿಕರಣ ಮುಗಿಯಿತು.

# ಉಭಯಲಿಂಗಾಧಿಕರಣ

# ಆಧಿಕಾರಿಕಾಧಿಕರಣಗಳು

## 'ಓಂ ಸರ್ವಥಾऽಪಿ ತು ತ ಏವೋಭಯಲಿಂಗಾತ್ ಓಂ'

## 'ಓಂ ನಚಾಧಿಕಾರಿಕಮಪಿ ಪತನಾನುಮಾನಾತ್ ತದಯೋಗಾತ್ ಓಂ'

**ಅನಾದಿಯೋಗ್ಯತಾಂ ಚೈವ ಕಲಿವಾಣೇಶ್ವರಾವಧಿಮ್ ।**
**ಕೋ ನಿವಾರಯಿತುಂ ಶಕ್ತೋ ಯುಕ್ತ್ಯಾಗಮಬಲೋದ್ಧತಾಮ್ ॥೧೦೬॥**

ಕಲಿ–ವಾಣೇಶ್ವರಾವಧಿಂ=ಅಪಕರ್ಷದಲ್ಲಿ ಕಲಿಯೇ ಅವಧಿಯಾಗಿರುವ ಉತ್ಕರ್ಷದಲ್ಲಿ ವಾಣೀಪತಿಯಾದ ಬ್ರಹ್ಮದೇವನೇ ಅವಧಿಯಾಗಿರುವ ಯುಕ್ತ್ಯಾಗಮಬಲೋದ್ಧತಾಂ=ಅನುಮಾನ ಮತ್ತು ಆಗಮಗಳ ಆಧಾರದಿಂದ ಅಪ್ರತಿರುದ್ಧವಾದ ಅನಾದಿಯೋಗ್ಯತಾಂ ಚೈವ=ಅನಾದಿಯಾಗಿರುವ ಯೋಗ್ಯತೆಯನ್ನೂ ನಿವಾರಯಿತುಂ=ತಡೆಯಲು (ನಿರಾಕರಿಸಲು) ಕಃ ಶಕ್ತಃ=ಯಾರು ಸಮರ್ಥರು?

**ಭಾವಾರ್ಥ**— ಮುಂದೆ ಎರಡು ಅಧಿಕರಣಗಳ ತಾತ್ಪರ್ಯವನ್ನು ಸಂಗ್ರಹಿಸಲಾಗಿದೆ. ಮೊದಲನೆಯ ಅಧಿಕರಣದಲ್ಲಿ ಅನಾದಿಯೋಗ್ಯತಾ ಸಂಪನ್ನರು ಮಾತ್ರ ಜ್ಞಾನದಲ್ಲಿ ಅಧಿಕಾರಿಗಳು ಎಂದು ಸಾಧಿಸಲಾಗಿದೆ. ಎರಡನೆಯ ಅಧಿಕರಣದಲ್ಲಿ ಯೋಗ್ಯತಾಸಂಪನ್ನರಿಗೆ ಮಾತ್ರ ದೇವತಾ ಪದಪ್ರಾಪ್ತಿ, ಎಂದು ಸಾಧಿಸಲಾಗಿದೆ. ಅದಕ್ಕೆ ಪೂರಕವಾಗಿ ಅನಾದಿ ಯೋಗ್ಯತೆಯನ್ನು ನಿರೂಪಿಸಲಾಗಿದೆ. ಕಲಿ ಅತ್ಯಂತನೀಚ. ಬ್ರಹ್ಮದೇವರ ಯೋಗ್ಯತೆ ಎಲ್ಲ ಜೀವರಿಗಿಂತಲೂ ಉಚ್ಚಮಟ್ಟದ್ದು. ಅಂತಹ ಯೋಗ್ಯತಾ ಸಂಪನ್ನರೇ ಆ ಸ್ಥಾನಕ್ಕೆ ಬರುತ್ತಾರೆ. ಆ ಯೋಗ್ಯತೆ ಅನಾದಿಯಾದುದು. ಅದಕ್ಕೆ ಯುಕ್ತಿಗಳು ಮತ್ತು ಆಗಮಗಳೇ ಆಧಾರ. ಆದ್ದರಿಂದ ಅದನ್ನು ಯಾರೂ ನಿರಾಕರಿಸುವಂತಿಲ್ಲ. ಇಂದ್ರಾದಿದೇವತಾಸ್ಥಾನಗಳಿಗೆ ಅದಕ್ಕೆ ಯೋಗ್ಯರಾದ ಜೀವರೇ ಬರುತ್ತಾರೆ, ಅಯೋಗ್ಯರು ಅಂತಹ ಸ್ಥಾನಕ್ಕೆ ಬರಲು ಅವಕಾಶವಿಲ್ಲ.

**ಬ್ರಹ್ಮಣೋಽನ್ಯತ ಆಧಿಕ್ಯಯುಕ್ತಃ ಕಾಲೋ ವಿವಾದವಾನ್ ।**
**ಕಾಲೋ ಹ್ಯಯಂ ಯಥೇತ್ಯಾದಿ ಮಾಽನುಮಾಮಾನಿನೋ**
**ಭವೇತ್ ॥ ೧೦೭ ॥**

ವಿವಾದವಾನ್ ಕಾಲಃ=ಬ್ರಹ್ಮದೇವನಿಗಿಂತಲೂ ಅಧಿಕರಾದ ಜೀವರು ಇದ್ದಾರೋ ಇಲ್ಲವೋ ಎಂದು ವಿವಾದಾಸ್ಪದವಾದ ಭೂತ ಮತ್ತು ಭವಿಷ್ಯತ್ ಕಾಲಗಳು (ಪಕ್ಷ ಇದು). ಬ್ರಹ್ಮಣಃ=ಆ ಕಾಲದ ಬ್ರಹ್ಮನ ಅನ್ಯತಃ ಆಧಿಕ್ಯಯುಕ್ತಃ=ಇತರ ಎಲ್ಲರಿಗಿಂತ ಆಧಿಕ್ಯದಿಂದ ಕೂಡಿವೆ(ಸಾಧ್ಯ). ಯಥಾ ಅಯಂ ಕಾಲಃ=ಈ ಕಾಲದಂತೆ (ದೃಷ್ಟಾಂತ). ಅನುಮಾನಿನಃ=ಅನುಮಾನದಲ್ಲಿ ಹೆಚ್ಚು ಗೌರವವಿರುವವನಿಗೆ ಇತ್ಯಾದಿ ಮಾ=ಇಂತಹ ಪ್ರಮಾಣವು ಅನಾದಿಯೋಗ್ಯತೆಗೆ ಪ್ರಮಾಣವಾಗುತ್ತದೆ.

**ಭಾವಾರ್ಥ—** ಅನಾದಿಯೋಗ್ಯತೆಯ ಬಗ್ಗೆ ಆಗಮಗಳು ಇದ್ದರೂ ಅಂತಹ ಆಗಮಗಳಿಗೆ ಅನ್ಯಾರ್ಥವನ್ನು ಹೇಳುವ ಅವಕಾಶವಿದೆ. ಅದಕ್ಕಾಗಿ, ಅನುಮಾನವನ್ನು ಆಧಾರವನ್ನಾಗಿ ಹೇಳಲಾಗಿದೆ. ಈಗಿರುವ ಮಹಾಕಲ್ಪದಲ್ಲಿ ಚತುರ್ಮುಖಬ್ರಹ್ಮನೇ ಜೀವೋತ್ತಮ. ಅದರಂತೆ ಹಿಂದಿನ ಮತ್ತು ಮುಂದಿನ ಮಹಾಕಲ್ಪಗಳಲ್ಲೂ ಆ ಕಾಲದ ಬ್ರಹ್ಮರೇ ಸರ್ವೋತ್ತಮರಾಗಿರುತ್ತಾರೆ, ಎಂದು ಅನುಮಾನದ ಅಭಿಪ್ರಾಯ. ಹಿಂದೆ ಮತ್ತು ಮುಂದೆ ಬ್ರಹ್ಮಪದವಿಗೆ ಬರುವವರೆಲ್ಲರೂ ಉಳಿದವರಿಗಿಂತ ಅಧಿಕರಾಗಬೇಕಾದರೆ, ಅವರ ಯೋಗ್ಯತೆ ಅನಾದಿಯಾಗಿರ ಬೇಕು.

**ಅನ್ಯಶಬ್ದೋ ಹರಿಶ್ರೀಸ್ವಸಮೇಭ್ಯೋಽನ್ಯವಿವಕ್ಷಯಾ ।**
**ಪ್ರಯುಕ್ತೋ ನೈವ ದೋಷಾಯ ರುದ್ರಾದಿಷು ಚ ಯುಕ್ತಿತಃ ॥ ೧೦೮ ॥**

ಹಿಂದೆ ಸಾಧ್ಯದಲ್ಲಿ ಸೇರಿರುವ 'ಅನ್ಯತಃ' ಎಂಬ ಶಬ್ದದಲ್ಲಿ ಸೇರಿರುವ ಅನ್ಯಶಬ್ದಃ=ಅನ್ಯ ಎಂಬ ಶಬ್ದವು ಹರಿ–ಶ್ರೀ–ಸ್ವಸಮೇಭ್ಯಃ=ವಿಷ್ಣು, ಲಕ್ಷ್ಮೀದೇವಿ ಮತ್ತು ಬ್ರಹ್ಮಸಮಕಕ್ಷೆಯಲ್ಲಿ ಬರುವ ಋಜುಯೋಗಿಗಳಿಗಿಂತ ಅನ್ಯವಿವಕ್ಷಯಾ=ಭಿನ್ನರಾದ ಜೀವಾಪೇಕ್ಷೆಯಿಂದ ಪ್ರಯುಕ್ತಃ=ಪ್ರಯೋಗಿಸಲ್ಪಟ್ಟಿದೆ. ಆದ್ದರಿಂದ ನೈವ ದೋಷಾಯ=ದೋಷಕ್ಕೆ ಕಾರಣವಾಗುವುದಿಲ್ಲ.

ಏವಂ=ಇದೇ ರೀತಿಯಲ್ಲಿ ರುದ್ರಾದಿಷು=ರುದ್ರಾದಿದೇವತೆಗಳಲ್ಲೂ ಯುಕ್ತಿತಃ=ಯುಕ್ತಿಯಿಂದ ಅನಾದಿಯೋಗ್ಯತೆಯನ್ನು ಸಾಧಿಸಬೇಕು.

**ಭಾವಾರ್ಥ—** ಹಿಂದಿನ ಅನುಮಾನದಲ್ಲಿ ಬ್ರಹ್ಮನು ಇತರ ಎಲ್ಲರಿಗಿಂತಲೂ ಉತ್ತಮ, ಎಂದು ಸಾಧಿಸಲಾಗಿದೆ. ಆದರೆ ಇತರ ಎಲ್ಲರಿಗಿಂತಲೂ ಎಂದರೆ ವಿಷ್ಣು, ಲಕ್ಷ್ಮೀದೇವಿ, ಋಜುಯೋಗಿಗಳು (ಬ್ರಹ್ಮಪದವಿಗೆ ಯೋಗ್ಯರಾದವರು) ಇವರೆಲ್ಲರಿಗಿಂತಲೂ ಉತ್ತಮರು ಎಂದಂತೆ ಆದೀತು. ಆದರೆ, ಅದು ಪ್ರಮಾಣವಿರುದ್ಧ. ಅದಕ್ಕಾಗಿ ಇತರರು ಎಂದರೆ ವಿಷ್ಣು, ಲಕ್ಷ್ಮೀ, ಋಜುಯೋಗಿಗಳು ಇವರನ್ನು ಬಿಟ್ಟು ಉಳಿದವರಿಗಿಂತ ಋಜುಯೋಗಿಗಳು ಉತ್ತಮರು, ಎಂದಿಷ್ಟೇ ಅರ್ಥವನ್ನು ತಿಳಿಯಬೇಕು. ಋಜುಯೋಗಿಗಳು ಯೋಗ್ಯತೆಯಲ್ಲಿ ಬ್ರಹ್ಮನಿಗೆ ಸಮಾನರು, ಲಕ್ಷ್ಮೀ-ನಾರಾಯಣರು ಉತ್ತಮರು.

ಇದರಂತೆಯೇ ರುದ್ರ ಮತ್ತು ಆ ಪದವಿಗೆ ಬರಲಿರುವ ಜೀವರ ಯೋಗ್ಯತೆಯೂ ಅನಾದಿಯಾಗಿದೆ, ಎಂದು ಸಾಧನೆ ಮಾಡಬೇಕು.

**ಉತ್ತಮತ್ವಂ ತು ಮುಕ್ತಾನಾಮಪಿ ನ ಬ್ರಹ್ಮಣೋ ಭವೇತ್ ।**
**ವ್ಯಕ್ತಿಃ ಸುಖಸ್ಯ ತು ಭವೇನ್ನತ್ವಾಧಿಕ್ಯಂ ಸುಖಸ್ಯ ಚ ॥ ೧೦೯ ॥**

ಮುಕ್ತಾನಾಮಪಿ=ಮುಕ್ತರಿಗೂ ಬ್ರಹ್ಮಣಃ=ಬ್ರಹ್ಮನ ದೆಸೆಯಿಂದ ಉತ್ತಮತ್ವಂ=ಉತ್ತಮತ್ವವು ನ ಭವೇತ್=ಬರುವುದಿಲ್ಲ. ಏಕೆಂದರೆ, ಮೋಕ್ಷದಲ್ಲಿ ಸುಖಸ್ಯ=ಸ್ವರೂಪದಲ್ಲಿರುವ ಸುಖದ ವ್ಯಕ್ತಿರೇವ ಭವೇತ್=ಅನುಭವ ವಿಷಯತ್ವರೂಪವಾದ ಅಭಿವ್ಯಕ್ತಿಮಾತ್ರವಷ್ಟೇ ಆಗುತ್ತದೆ. ನತು ಸುಖಸ್ಯ ಆಧಿಕ್ಯಂ=ಅಧಿಕವಾದ ಸುಖವು ಹುಟ್ಟುವುದಿಲ್ಲ.

**ಭಾವಾರ್ಥ—** ಹಿಂದಿನ ಕಲ್ಪದಲ್ಲಿ ಅನೇಕರಿಗೆ ಮೋಕ್ಷವಾಗಿದೆ. ಅವರು ಈ ಬ್ರಹ್ಮಕಲ್ಪದಲ್ಲಿ ಮುಕ್ತರು. ಬ್ರಹ್ಮದೇವ ಈಗ ಸಂಸಾರಿ. ಆದ್ದರಿಂದ ಬ್ರಹ್ಮನಿಗಿಂತಲೂ ಮುಕ್ತರು ಉತ್ತಮರು. ಅಂದಮೇಲೆ ಬ್ರಹ್ಮ ಸರ್ವಜೀವೋತ್ತಮ ಹೇಗೆ? ಇದಕ್ಕೆ ಸಮಾಧಾನ— ಮೋಕ್ಷದಲ್ಲಿ ಮೊದಲಿದ್ದ ಸುಖವೇ ಅಭಿವ್ಯಕ್ತಿಯಾಗುತ್ತದೆ, ಇಲ್ಲದ ಸುಖ ಹುಟ್ಟುವುದಿಲ್ಲ. ಈ ಕಲ್ಪದಲ್ಲಿ ಬ್ರಹ್ಮ

ಪದವಿಯಲ್ಲಿರುವ ಋಜುಯೋಗಿಯ ಸ್ವರೂಪಸುಖ ಮುಕ್ತರ ಸ್ವರೂಪ ಸುಖಕ್ಕಿಂತ ಹೆಚ್ಚಿನದು. ಹೀಗೆ, ಸ್ವರೂಪಯೋಗ್ಯತೆಯಲ್ಲಿ ಮುಕ್ತರಿಗಿಂತಲೂ ಸಂಸಾರಿ ಬ್ರಹ್ಮದೇವರೇ ಅಧಿಕರು.

**ಬಲಜ್ಞಾನಾಧಿಕತ್ವಂ ತು(ಚ)ತೇಭ್ಯೋ ಹಿ ಬ್ರಹ್ಮಣಃ ಸದಾ ।**
**ಆಧಿಕ್ಯಸ್ಯ ತ್ವನಿತ್ಯತ್ವೇ ನ ಕಿಂಚನ್ಮಾನಮೀಯತೇ ॥ ೧೧೦ ॥**

ಅಷ್ಟೇ ಅಲ್ಲ, ತೇಭ್ಯಃ=ಮುಕ್ತರಿಗಿಂತಲೂ ಬ್ರಹ್ಮಣಃ=ಬ್ರಹ್ಮದೇವನಿಗೆ ಬಲಜ್ಞಾನಾಧಿಕ್ಯಂ=ಬಲ, ಜ್ಞಾನಾದಿಗುಣಗಳ ಆಧಿಕ್ಯವು ಸದಾ=ಮೋಕ್ಷ ದಲ್ಲೂ ಸಂಸಾರದಲ್ಲೂ ಇರುತ್ತದೆ.

ಆಧಿಕ್ಯಸ್ಯ=ಬ್ರಹ್ಮನ ಸ್ವರೂಪಭೂತವಾದ ಉತ್ತಮತ್ವಕ್ಕೆ ಅನಿತ್ಯತ್ವೇ= ಅನಿತ್ಯತ್ವ ಇದೆ ಎನ್ನುವಲ್ಲಿ ಕಿಂಚಿತ್ ಮಾನಂ ನ ಈಯತೇ=ಯಾವುದೇ ಪ್ರಮಾಣವು ಇಲ್ಲ.

ಭಾವಾರ್ಥ– ಸ್ವರೂಪಾಧಿಕ್ಯವು ಬ್ರಹ್ಮನಿಗೆ ಮುಕ್ತರಿಗಿಂತಲೂ ಹೆಚ್ಚಿನದು. ಮಾತ್ರವಲ್ಲದೆ, ಅವನು ಅಮುಕ್ತಾವಸ್ಥೆಯಲ್ಲಿ ಇರುವಾಗಲೂ ಮುಕ್ತರಿಗಿಂತ ಹೆಚ್ಚು ಜ್ಞಾನಾನಂದಾದಿಗಳು ಅವನಿಗಿವೆ.

ಬ್ರಹ್ಮದೇವನ ಸ್ವರೂಪಯೋಗ್ಯತೆ ಅನಾದಿ ಎನ್ನಲು ಹಿಂದೆ ಹೇಳಿರುವ ಕಾಲಪಕ್ಷಕಾನುಮಾನದಂತೆ ಈ ಕಾಲದಲ್ಲಿ ಶ್ರೇಷ್ಠನಾದ ಒಬ್ಬ ರಾಜನ ಯೋಗ್ಯತೆಯೂ ಅನಾದಿ ಎಂದು ಸಾಧನೆ ಮಾಡುವಂತಿಲ್ಲ. ಏಕೆಂದರೆ, ಬ್ರಹ್ಮದೇವರ ಯೋಗ್ಯತೆಯು ಅನಾದಿಯಲ್ಲ, ಎನ್ನಲು ಪ್ರಮಾಣಗಳಿಲ್ಲ.

**‘ಶೃಣ್ವೇ ವೀರ ಉಗ್ರಮುಗ್ರಂ ದಮಾಯನ್ನ-**
**ನ್ಯಮನ್ಯಮತಿನೇನೀಯಮಾನಃ ।**
**ಏಧಮಾನದ್ವಿಳುಭಯಸ್ಯ ರಾಜಾ-**
**ಚೋಷ್ಕೂಯತೇ ವಿಶ ಇಂದ್ರೋ ಮನುಷ್ಯಾನ್’ ॥ ೧೧೧ ॥**

ವೀರಃ=ಹಿಡಿದ ಕೆಲಸವನ್ನು ಕೊನೆಗಾಣಿಸುವ ಇಂದ್ರಃ=ಪರಮಾತ್ಮನು ಉಗ್ರಂ ಉಗ್ರಂ=ಪ್ರತಿಯೊಬ್ಬ ದುಷ್ಟರನ್ನೂ ದಮಾಯನ್=ನರಕಕ್ಕೆ

ಬೀಳಿಸುತ್ತಾ ಅನ್ಯಮ್‌ಅನ್ಯಂ=ಎಲ್ಲ ಸಜ್ಜನರನ್ನೂ ಅತಿನೇನೀಯಮಾನಃ= ಸಂಸಾರವನ್ನು ದಾಟಿಸುತ್ತಾ, ಏಧಮಾನದ್ವಿಟ್=ಯೋಗ್ಯತೆಗೆ ಮೀರಿ ವರ್ತಿಸು ವವರಿಗೆ ಶತ್ರುವಾದವನಾಗಿ ಶೃಣ್ವೇ=ಕೇಳಲ್ಪಡುತ್ತಾನೆ(ಶ್ರುತಿಯಿಂದ). ಯತಃ=ಯಾವ ಕಾರಣದಿಂದ ಅವನು ಉಭಯಸ್ಯ=ದೇವತಾವರ್ಗಕ್ಕೆ ಮತ್ತು ಅಸುರವರ್ಗಕ್ಕೆ ರಾಜಾ=ಒಡೆಯನು. ಮನುಷ್ಯಾನ್=ಮನುಷ್ಯರಾದ (ರಾಜಸರಾದ) ವಿಶಃ=ಜನರನ್ನು ಚೋಷ್ಕೂಯತೇ=ಸದಾ ಸ್ವರ್ಗ-ನರಕ ಭೂಲೋಕಗಳಲ್ಲಿ ಸುತ್ತಿಸುತ್ತಾನೆ.

**'ಪರಾ ಪೂರ್ವೇಷಾಂ ಸಖ್ಯಾ ವೃಣಕ್ತಿ**
**ವಿತರ್ತುರಾಣೋ ಅಪರೇಭಿರೇತಿ ।**
**ಅನಾನುಭೂತೀರವಧೂನ್ವಾನಃ**
**ಪೂರ್ವೀರಿಂದ್ರಃ ಶರದಸ್ತರ್ತರೀತಿ' ॥ ೧೧೨ ॥**

ಪೂರ್ವೇಷಾಂ=ಹಿಂದಿನ ಮಂತ್ರದಲ್ಲಿ 'ಉಗ್ರ' ಪದದಿಂದ ಪ್ರಸ್ತುತ ರಾದ ಅಸುರರ ಸಖ್ಯಾ=ಸ್ನೇಹವನ್ನು ಪರಾ ವೃಣಕ್ತಿ=ಪರಿತ್ಯಾಗ ಮಾಡುತ್ತಾನೆ. ಅಪರೇಭಿಃ-ಅಪರೈಃ ಸಹ=ದುಷ್ಟರಿಗಿಂತ ಬೇರೆಯವರಾದ ಸಜ್ಜನರೊಂದಿಗೆ ವಿತರ್ತುರಾಣಃ=ಸ್ನೇಹಕ್ಕಾಗಿ ಅವಸರ ಮಾಡುತ್ತಾ ಏತ್ಯ=ಬಳಿಬಂದು ಅನಾನುಭೂತೀಃ=ಸರಿಯಾದ ಅನುಭವ ಇಲ್ಲದವರನ್ನು ಅವಧೂನ್ವಾನಃ= ಕೆಳಗಿನದಾದ ಸಂಸಾರದಲ್ಲಿ ಬೀಳಿಸುತ್ತಾ ಪೂರ್ವೀಃ ಶರದಃ=ಕಳೆದ ಸಂವತ್ಸರಗಳನ್ನು ಕಳೆದಿರುತ್ತಾನೆ, ವರ್ತಮಾನ ಸಂವತ್ಸರಗಳನ್ನು ತರ್ತರೀತಿ= ದಾಟುತ್ತಾನೆ, ಮುಂದೆ ಬರುವ ಸಂವತ್ಸರಗಳನ್ನೂ ದಾಟುವನು.

**ಭಾವಾರ್ಥ**— ಈ ಶ್ರುತಿಯಲ್ಲಿ ದುಷ್ಟರು, ಸಜ್ಜನರು, ಮಧ್ಯಮರು ಇವರಿಗೆ ಭಗವಂತನು ಉಚ್ಚ-ನೀಚ-ಮಧ್ಯಮಗತಿಗಳನ್ನು ಕೊಡುತ್ತಾನೆ, ಎಂದಿರುವುದರಿಂದ ಅವರವರ ಯೋಗ್ಯತೆಯು ಅನಾದಿಯಾದುದೆಂದು ತಿಳಿಯುತ್ತದೆ.

**'ದಿವೇದಿವೇ ಸದೃಶೀರನ್ಯಮರ್ಧಂ**
**ಕೃಷ್ಣಾ ಅಸೇಧದಪ ಸದ್ಮನೋ ಜಾಃ ।**

**ಅಹನ್ ದಾಸಾ ವೃಷಭೋ ವಸ್ನಯಂತೋ-**
**ದವ್ರಜೇ ವರ್ಚಿನಂ ಶಂಬರಂ ಚ'** ॥ ೧೧೩ ॥

ವೃಷಭಃ=ಅಭೀಷ್ಟಗಳನ್ನು ಸುರಿಸುವ ವಿಷ್ಣುವು ದಿವೇದಿವೇ= ಪ್ರತಿದಿನವೂ ಸದೃಶೀಃ=ಚೇತನತ್ವೇನ ದೇವತೆಗಳಿಗೆ ಸದೃಶರಾದ ಅನ್ಯಮ್ ಅರ್ಧಂ=ದೇವತಾ ಇತರರಲ್ಲಿ ಅರ್ಧಭಾಗದಷ್ಟಿರುವ ಕೃಷ್ಣಾಃ ಜಾಃ=ತಮೋ ಗುಣಪ್ರಚುರರಾದ ಅಸುರಜನರನ್ನು ಸದ್ಮನಃ=ತನ್ನ ಧಾಮದಿಂದ ಅಪಾಸೇದತ್=ಬರದಂತೆ ತಡೆದನು. ಅವರಿಗೆ ಎಂದೂ ಮೋಕ್ಷವನ್ನು ಕೊಡಲಾರ. ಅದರಿಂದಾಗಿಯೇ ದಾಸೌ=(ದಸು ಉಪಕ್ಷಯೇ) ಶತ್ರುಗಳಾದ ವಸ್ನಯಂತೌ=ಜಗತ್ತನ್ನೇ ಆವರಿಸಿದ (ವಸ ಆಚ್ಛಾದನೇ) ವರ್ಚಿನಂ ಶಂಬರಂ ಚ=ವರ್ಚಿ ಮತ್ತು ಶಂಬರರೆಂಬ ಅಸುರರನ್ನು ಉದವ್ರಜೇ=ಸಮುದ್ರ ತೀರದಲ್ಲಿ ಅಹನ್=ಕೊಂದನು.

ಭಾವಾರ್ಥ— ಇವು ಮೂರು ಋಗ್ವೇದ ಮಂತ್ರಗಳು. ಮೊದಲ ಎರಡು ಮಂತ್ರಗಳಲ್ಲಿ, ಅಸುರರಿಗೆ ಅನಾದಿಕಾಲದಿಂದಲೂ ಭಗವದ್ಭಕ್ತಿ ಇಲ್ಲ, ನಿತ್ಯನರಕವೆಂದೂ ದೇವತೆಗಳಿಗೆ ಭಕ್ತಿ ಮತ್ತು ಅದರಿಂದಾಗಿ ಮೋಕ್ಷ ಎಂದೂ ದೇವಾಸುರರ ಯೋಗ್ಯತೆಯನ್ನು ಹೇಳಲಾಗಿದೆ. ಕೊನೆಯಮಂತ್ರದಲ್ಲಿ ದೈತ್ಯರಿಗೆ ಎಂದೂ ಮೋಕ್ಷವಿಲ್ಲ, ಎನ್ನಲಾಗಿದೆ.

**'ತಂ ಭೂತಿರಿತಿ ದೇವಾ ಉಪಾಸಾಂಚಕ್ರಿರೇ**
**ತೇ ಬಭೂವುಸ್ತಸ್ಮಾದ್ಧಾಪ್ಯೇತರ್ಹಿ**
**ಸುಪ್ತೋ ಭೂರ್ಭೂರಿತ್ಯೇವ ಪ್ರಶ್ವಸಿತ್ಯ-**
**ಭೂತಿರಿತ್ಯಸುರಾಸ್ತೇ ಹ ಪರಾಬಭೂವುಃ'** (ಐತರೇಯಶ್ರುತಿ) ॥ ೧೧೪ ॥

ತಂ=ಆ ಬ್ರಹ್ಮನನ್ನು ದೇವಾಃ=ದೇವತೆಗಳು ಭೂತಿರಿತಿ= ಪರಮೈಶ್ವರ್ಯ ರೂಪನೆಂದು ಉಪಾಸಾಂಚಕ್ರಿರೇ=ಉಪಾಸನೆ ಮಾಡಿದರು. ತೇ ಬಭೂವುಃ= ಅವರು ಮುಕ್ತರಾದರು. ತಸ್ಮಾತ್=ಆದ್ದರಿಂದ ಇದಾನೀಂ= ಈಗಲೂ ಸುಪ್ತಃ=ಮಲಗಿದವರಲ್ಲಿರುವ ವಾಯುದೇವನು ಭೂರ್ಭೂರಿತ್ಯೇವ= ಭೂರ್‌ಭೂರ್ ಎಂದೇ ಪ್ರಶ್ವಸಿತಿ=ಉಸಿರಾಡುತ್ತಾನೆ. ಅಭೂತಿರಿ=ಐಶ್ವರ್ಯ

ರೂಪನಲ್ಲವೆಂದು ಅಸುರಾಃ=ಅಸುರರು ಉಪಾಸಿಸಿದರು. ತೇ ಹ=ಅವರು ಪರಾಬಭೂವುಃ=ನಿತ್ಯನರಕವನ್ನು ಹೊಂದಿದರು.

ಇಲ್ಲಿ ದೇವತೆಗಳು ಸರಿಯಾದ ಉಪಾಸನೆ ಮಾಡುತ್ತಾರೆ, ಆದರಿಂದ ಅವರಿಗೆ ಮೋಕ್ಷವಾಗುತ್ತದೆ. ಅಸುರರು ಅನ್ಯಥೋಪಾಸನೆ ಮಾಡುತ್ತಾರೆ, ಆದರಿಂದಾಗಿ ಅವರಿಗೆ ನಿತ್ಯನರಕ. ಹೀಗೆ, ದೇವತ್ವ ಮತ್ತು ಅಸುರತ್ವ ಅವರ ಸ್ವಭಾವ, ಎಂದು ತಿಳಿಯುತ್ತದೆ.

**'ತದ್ ಯಥಾ ಪೇಶಸ್ಕರೀ ಪೇಶಸೋ ಮಾತ್ರಾ-**
**(ಮ)ಮುಪಾದಾಯಾನ್ಯನ್ನವತರಂ**
**ಕಲ್ಯಾಣತರಂ ರೂಪಂ ತನುತೇ ।**
**ಏವಮೇವಾಯಮಾತ್ಮೇದಂ ಶರೀರಂ ನಿಹತ್ಯಾ-**
**ವಿದ್ಯಾಂ ಗಮಯಿತ್ವಾಽನ್ಯನ್ನವತರಂ ಕಲ್ಯಾಣತರಂ ರೂಪಂ ಕುರುತೇ ।**
**ಪಿತ್ರ್ಯಂ ವಾ ಗಾಂಧರ್ವಂ ವಾ ದೈವಂ ವಾ**
**ಪ್ರಾಜಾಪತ್ಯಂ ವಾ ಬ್ರಾಹ್ಮಂ ವಾನ್ಯೇಷಾಂ ವಾ ಭೂತಾನಾಮ್'॥೧೧೫॥**

(ಬೃ.ಉ.4.4.4)

ಯಥಾ=ಹೇಗೆ, ಪೇಶಸ್ಕರೀ=ಚಿನಿವಾರನು ಪೇಶಸಃ=ಬಂಗಾರದ ಮಾತ್ರಾಂ=ಒಂದಂಶವನ್ನು ಅನ್ಯದಿವ=ಮೊದಲಿದ್ದದ್ದಕ್ಕಿಂತಲೂ ಬೇರೆಯೇ ಎಂದು ಕಾಣುವಂತೆ ನವತರಂ=ಹೊಸದಾದ ಕಲ್ಯಾಣತರಂ=ಬೆಂಕಿಗೆ ಹಾಕಿ ಅದರಲ್ಲಿ ಸೇರಿರುವ ಕಶ್ಮಲಗಳನ್ನು ತೆಗೆದು ಮನೋಹರವಾದ ರೂಪಂ=ಸರ ಮುಂತಾದ ಆಕಾರವನ್ನು ಮಾಡುತ್ತಾನೆ. ಏವಮೇವ=ಇದೇರೀತಿ ಅಯಂ ಆತ್ಮಾ=ಈ ಪರಮಾತ್ಮನು ಶರೀರಂ=ಶರೀರವನ್ನು ನಿಹತ್ಯ=ನಾಶಮಾಡಿ ಅವಿದ್ಯಾಂ=ಅವಿದ್ಯೆಯನ್ನು ಗಮಯಿತ್ವಾ=ಹೋಗಲಾಡಿಸಿ ಜೀವನಿಗೆ ಅನ್ಯನ್ನವತರಂ ರೂಪಂ=ಬೇರೆಯಾದ ಆನಂದರೂಪವನ್ನು ಕುರುತೇ= ಮಾಡುತ್ತಾನೆ. ಆ ರೂಪವು ಪಿತ್ರ್ಯಂ ವಾ=ಪಿತೃದೇವತೆಗಳದ್ದೋ, ಗಾಂಧರ್ವಂ ವಾ=ಗಂಧರ್ವರಿಗೆ ಸಂಬಂಧಿಸಿದ್ದೋ, ದೈವಂ ವಾ=ದೇವತೆಗಳಿಗೆ

ಸಂಬಂಧಿಸಿದ್ದೋ, ಪ್ರಾಜಾಪತ್ಯಂ ವಾ=ಪ್ರಜಾಪತಿಗಳಿಗೆ ಸಂಬಂಧಿಸಿದ್ದೋ, ಬ್ರಾಹ್ಮಂ ವಾ=ಬ್ರಹ್ಮದೇವನಿಗೆ ಸಂಬಂಧಿಸಿದ್ದೋ, ಅನ್ಯೇಷಾಂ ಭೂತಾನಾಂ ವಾ=ಅಥವಾ ಮನುಷ್ಯೋತ್ತಮರಿಗೆ ಸಂಬಂಧಿಸಿದ್ದೋ ಆಗಿರಬಹುದು.

ಭಾವಾರ್ಥ— ಸುವರ್ಣದಿಂದ ಮಾತ್ರ ಬಳೆ ಮುಂತಾದ ಆಭರಣಗಳನ್ನು ಮಾಡಬಹುದು. ಬೇರಾವುದೋ ದ್ರವ್ಯಗಳಿಂದ ಮಾಡಲಾಗದು. ಅದರಂತೆ, ಮೋಕ್ಷಯೋಗ್ಯರಷ್ಟೇ ಮುಕ್ತರಾಗುತ್ತಾರೆ, ಎಂದು ಈ ಉಪನಿಷತ್ ಪ್ರಮಾಣದಿಂದ ತಿಳಿಯುತ್ತದೆ.

**'ಪ್ರಯಾಂತಿ ಪರಮಾಂ ಸಿದ್ಧಿಮೈಹಿಕಾಮುಷ್ಮಿಕೀಂ ದ್ರುತಮ್ ।**
**ಯಾ ನ ಪ್ರಾಪ್ಯಾಽಸುರೈಃ ಸರ್ವೈರಕ್ಷಯಾ ಕ್ಲೇಶವರ್ಜಿತಾ ।**
**ನ ತಾಂ ಗತಿಂ ಪ್ರಪದ್ಯಂತೇ ವಿನಾ ಭಾಗವತಾನ್ ನರಾನ್' ॥ ೧೧೬ ॥**

ಪುರಾ ಸತ್ಯೇ ಯಗೇ ದೇವಾಃ ವಿಶುದ್ಧಮತಯೋಽಖಿಲಾಃ ।
ಯಜಂತಿ ವಿಷ್ಣುಮೇವೈಕಂ ಜ್ಞಾತ್ವಾ ಸರ್ವೇಶ್ವರೇಶ್ವರಮ್ ॥

ಇದು ಪದ್ಮಪುರಾಣದಲ್ಲಿರುವ, ಅನುವ್ಯಾಖ್ಯಾನದಲ್ಲಿ ಉಲ್ಲೇಖಿಸಿರುವ ಶ್ಲೋಕದ ಹಿಂದಿನ ಶ್ಲೋಕ. ಇವೆರಡರ ಅಭಿಪ್ರಾಯ—ಹಿಂದೆ ಕೃತಯುಗದಲ್ಲಿ ಶುದ್ಧಮನಸ್ಸಿನ ಎಲ್ಲ ದೇವತೆಗಳೂ ವಿಷ್ಣುವೇ ಸರ್ವೋತ್ತಮನೆಂದು ತಿಳಿದು ಅವನನ್ನು ಮಾತ್ರ ಆರಾಧಿಸುತ್ತಿದ್ದರು. ಅದರಿಂದ ಬಹುಬೇಗನೆ ಐಹಿಕ ಮತ್ತು ಪಾರತ್ರಿಕ ಫಲಗಳನ್ನು ಪಡೆಯುತ್ತಲಿದ್ದರು. ಯಾವ ಸ್ಥಾನವು ಅಸುರರಿಂದ ಹೊಂದಲು ಸಾಧ್ಯವಿಲ್ಲವೋ ಅಂತಹ ನಾಶವಿಲ್ಲದ, ದುಃಖರಹಿತವಾದ ಸ್ಥಾನವನ್ನು ಭಗವದ್ಭಕ್ತರಾದ ಜೀವಿಗಳನ್ನು ಬಿಟ್ಟು ಉಳಿದವರು ಹೊಂದುವುದಿಲ್ಲ.

ಇಲ್ಲಿ ದೇವತೆಗಳಿಗೆ ಮೋಕ್ಷವಿದೆ, ಮನುಷ್ಯರಲ್ಲಿ ಭಾಗವತರಿಗಿದೆ, ಅಸುರರಿಗೆ ಸರ್ವಥಾ ಇಲ್ಲ, ಎಂದು ಹೇಳುವ ಮೂಲಕ ಅನಾದಿಯೋಗ್ಯತಾ ಭೇದವನ್ನು ತಿಳಿಸಲಾಗಿದೆ.

**ಅವಜಾನಂತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಮ್ ।**
**ಪರಂ ಭಾವಮಜಾನಂತೋ ಮಮ ಭೂತಮಹೇಶ್ವರಮ್ ॥ ೧೧೭ ॥**

**ಮೋಘಾಶಾ ಮೋಘಕರ್ಮಾಣೋ ಮೋಘಜ್ಞಾನಾ ವಿಚೇತಸಃ ।**
**ರಾಕ್ಷಸೀಮಾಸುರೀಂ ಚೈವ ಪ್ರಕೃತಿಂ ಮೋಹಿನೀಂ ಶ್ರಿತಾಃ ॥ ೧೧೮ ॥**

**ಮಹಾತ್ಮನಸ್ತು ಮಾಂ ಪಾರ್ಥ ದೈವೀಂ ಪ್ರಕೃತಿಮಾಶ್ರಿತಾಃ ।**
**ಭಜಂತ್ಯನನ್ಯಮನಸೋ ಜ್ಞಾತ್ವಾ ಭೂತಾದಿಮವ್ಯಯಮ್ ॥ ೧೧೯ ॥**

ಭಗವದ್ಗೀತೆಯಲ್ಲಿ ಬರುವ ಈ ಶ್ಲೋಕಗಳ ಭಾವಾರ್ಥ—ಮೂಢಾಃ= ಮೂರ್ಖರು ಮಮ=ನನ್ನ ಪರಂ ಭಾವಂ=ಪರಮೋತ್ಕರ್ಷವನ್ನು ಅಜಾನಂತಃ=ತಿಳಿಯದವರಾಗಿ ಭೂತ–ಮಹೇಶ್ವರಂ=ಸರ್ವಕಾಲದಲ್ಲೂ ಇರುವ ಮಹೇಶ್ವರನಾದ ಮಾನುಷೀಂ ತನುಂ ಆಶ್ರಿತಂ=ಮನುಷ್ಯರ ಪಾಂಚಭೌತಿಕ ಶರೀರದಂತೆ ಕಾಣುವ ಶರೀರವುಳ್ಳ ಮಾಂ=ನನ್ನನ್ನು ಅವಜಾನಂತಿ=ಅವಮನನ್ನಾಗಿ ತಿಳಿಯುತ್ತಾರೆ. ಅಂದರೆ ಬ್ರಹ್ಮಾದಿದೇವತೆ ಗಳಿಗಿಂತಲೂ ನಾನು ಕಡಿಮೆ ಎಂದೋ ಅವರಿಗೆ ಸಮನೆಂದೋ ತಿಳಿಯುತ್ತಾರೆ. ಅಂತಹವರು ಮೋಘಾಶಾಃ=ಆಮುಷ್ಮಿಕಸಂಪತ್ತಿನಿಂದ ವಂಚಿತರಾಗಿ, ಮೋಘ ಕರ್ಮಾಣಃ=ವ್ಯರ್ಥವಾದ ಯಜ್ಞಾದಿಕರ್ಮವುಳ್ಳವರಾಗಿ (ಅಂತಹವರು ಮಾಡಿದ ಧಾರ್ಮಿಕಕಾರ್ಯಗಳು, ಪಡೆದ ಜ್ಞಾನ ಎಲ್ಲವೂ ವ್ಯರ್ಥ.) ಮೋಘಜ್ಞಾನಾಃ=ವ್ಯರ್ಥವಾದ ಜ್ಞಾನವುಳ್ಳವರಾಗಿ (ಅಂತಹವರಿಗೆ ತತ್ತ್ವ ಜ್ಞಾನವೇ ಬರುವುದಿಲ್ಲ.) ವಿಚೇತಸಃ=ವಿರುದ್ಧಮನೋಭಾವವುಳ್ಳವರಾಗಿ (ಅಂತಹವರಿಗೆ ಯಾವುದೇ ಆಮುಷ್ಮಿಕ ಪುರುಷಾರ್ಥಗಳು ಇಲ್ಲ.) ಏಕೆಂದರೆ, ಅವರು ಮೋಹಿನೀಂ=ಸದ್ಬುದ್ಧಿಯನ್ನು ನಾಶಮಾಡುವ ಆಸುರೀಂ= ಅಸುರ ರಿಗೆ ಸಂಬಂಧಿಸಿದ ಪ್ರಕೃತಿಂ=ಸ್ವರೂಪವನ್ನು ಆಶ್ರಿತಾಃ=ಹೊಂದಿರುತ್ತಾರೆ.

ಮಹಾತ್ಮಾನಸ್ತು=ಉನ್ನತಮಟ್ಟದ ಮನೋಭಾವವನ್ನು ಹೊಂದಿರು ವವರಾದರೋ ದೈವೀಂ=ಮುಕ್ತಿಯೋಗ್ಯರಾದ ಉತ್ತಮಜೀವರಿಗೆ ಸಂಬಂಧಿ ಸಿದ ಪ್ರಕೃತಿಂ=ಸ್ವಭಾವವನ್ನು ಆಶ್ರಿತಾಃ=ಹೊಂದಿದವರಾಗಿ ಭೂತಾದಿಂ= ಭೂತಗಳಿಗೆ ಕಾರಣನಾದ ಅವ್ಯಯಂ=ಚತುರ್ವಿಧ ನಾಶರಹಿತನಾದ ಮಾಂ= ಜ್ಞಾತ್ವಾ=ನನ್ನನ್ನು ತಿಳಿದು ಅನನ್ಯಮನಸ್ಕಾಃ=ಇತರ ಪದಾರ್ಥಗಳಲ್ಲಿ ಮನಸ್ಸಿಡದೆ ನನ್ನಲ್ಲೇ ಮನಸ್ಸುಳ್ಳವರಾಗಿ ಭಜಂತಿ=ನನ್ನನ್ನು ಸೇವಿಸುತ್ತಾರೆ.

ಈ ಗೀತಾಶ್ಲೋಕಗಳಲ್ಲಿ ಆಸುರತ್ವ-ದೇವತ್ವಗಳು ಜೀವರ ಸ್ವಭಾವ, ಎಂದು ಹೇಳಲಾಗಿದೆ.

**ಅಭಯಂ ಸತ್ವಸಂಶುದ್ಧಿರ್ಜ್ಞಾನಯೋಗವ್ಯವಸ್ಥಿತಿಃ ।**
**ದಾನಂ ದಮಶ್ಚ ಯಜ್ಞಶ್ಚ ಸ್ವಾಧ್ಯಾಯಸ್ತಪ ಆರ್ಜವಮ್ ॥ ೧೨೦ ॥**

**ಅಹಿಂಸಾ ಸತ್ಯಮಕ್ರೋಧಸ್ತ್ಯಾಗಃ ಶಾಂತಿರಪೈಶುನಮ್ ।**
**ದಯಾ ಭೂತೇಷ್ವಲೋಲುತ್ವಂ ಮಾರ್ದವಂ ಹ್ರೀರಚಾಪಲಮ್ ॥ ೧೨೧ ॥**

**ತೇಜಃ ಕ್ಷಮಾ ಧೃತಿಃ ಶೌಚಮದ್ರೋಹೋ ನಾತಿಮಾನಿತಾ ।**
**ಭವಂತಿ ಸಂಪದಂ ದೈವೀಮಭಿಜಾತಸ್ಯ ಭಾರತ ॥ ೧೨೨ ॥**

**ಡಂಭೋ ದರ್ಪೋಽ(ತಿ)ಭಿಮಾನಶ್ಚ ಕ್ರೋಧಃ ಪಾರುಷ್ಯಮೇವ ಚ ।**
**ಅಜ್ಞಾನಂ ಚಾಭಿಜಾತಸ್ಯ ಪಾರ್ಥ ಸಂಪದಮಾಸುರೀಮ್ ॥ ೧೨೩ ॥**

ಅಭಯಂ=ಯಾವುದರಿಂದಲೂ ಭಯ ಇಲ್ಲದಿರುವುದು, ಸತ್ವ ಸಂಶುದ್ಧಿಃ=ಮನಸ್ಸಿನ ಪ್ರಸನ್ನತೆ, ಜ್ಞಾನಯೋಗ-ವ್ಯವಸ್ಥಿತಿಃ=ತತ್ತ್ವಜ್ಞಾನ ಸಾಧನದಲ್ಲಿ ಆಸಕ್ತಿ, ದಾನಂ=ಸತ್ಪಾತ್ರರಲ್ಲಿ ದಾನ, ದಮಃ=ಇಂದ್ರಿಯನಿಗ್ರಹ, ಯಜ್ಞಃ=ದೇವ, ಪಿತೃಯಜ್ಞಗಳು ಸ್ವಾಧ್ಯಾಯಃ-ವೇದಾಧ್ಯಯನ ತಪಃ= ಬ್ರಹ್ಮಚರ್ಯಾದಿಗಳು, ಆರ್ಜವಂ=ನೇರವಾದ ನಡೆ-ನುಡಿ-ಮನಸ್ಸು, ಅಹಿಂಸಾ=ಪರಹಿಂಸಾ ಅಕರಣ, ಸತ್ಯಂ=ಯಥಾರ್ಥವಾದ ಮಾತು, ಅಕ್ರೋಧಃ=ಇನ್ನೊಬ್ಬರಿಗೆ ತೊಂದರೆಯಾಗುವ ಮನಃಕ್ಷೋಭೆ ಇಲ್ಲದಿರುವುದು ತ್ಯಾಗಃ=ಔದಾರ್ಯ ಶಾಂತಿಃ=ಭಗವನ್ನಿಷ್ಠೆ ಅಪೈಶುನಂ=ಚಾಡಿಕೋರತನ ಇಲ್ಲದಿರುವುದು. (ಮತ್ತೊಬ್ಬರಿಂದ ತನಗಾಗುವ ತೊಂದರೆಗಳಿಗೆ ಕಾರಣವಾದ ದೋಷಗಳನ್ನು ಅಧಿಕಾರಿಗಳಿಗೆ ಹೇಳದಿರುವುದು) ಭೂತೇಷು=ಪ್ರಾಣಿಗಳಲ್ಲಿ ದಯಾ=ಹಿತವನ್ನು ಮಾಡುವ ಮನೋಭಾವ. ಅಲೋಲುತ್ವಂ=ವಿಷಯ ಪದಾರ್ಥಗಳಲ್ಲಿ ಅನಾಸಕ್ತಿ, ಮಾರ್ದವಂ=ತನಗೆ ಕೆಡುಕು ಮಾಡಿದವರಲ್ಲೂ ವಿರೋಧಮಾಡದಿರುವುದು ಹ್ರೀಃ=ಕೆಟ್ಟ ಕೆಲಸ ಮಾಡಲು ನಾಚಿಕೆ

ಅಚಾಪಲಂ=ಸ್ಥಿರವಾದ ಮನೋಭಾವ ತೇಜಃ=ಮತ್ತೊಬ್ಬರಿಗೆ ಸೋಲದಿರು ವುದು ಕ್ಷಮಾ=ಅಪಕಾರ ಮಾಡಿದವರಿಗೆ ಪ್ರತ್ಯಪಕಾರ ಮಾಡದಿರುವುದು ಧೃತಿಃ=ಆತಂಕಕ್ಕೆ ಒಳಗಾಗದಿರುವುದು ಶೌಚಂ=ಮೃತ್ತಿಕಾ–ಸ್ನಾನಾದಿ ಬಾಹ್ಯ ಶುದ್ಧಿ ಹಾಗೂ ಭಗವಂತನ ಸ್ಮರಣೆಯಿಂದ ಆಂತರಶುದ್ಧಿ ಅದ್ರೋಹಃ= ಮತ್ತೊಬ್ಬರ ಜೀವನಕ್ಕೆ ಘಾಸಿಮಾಡದಿರುವುದು ನಾತಿಮಾನಿತಾ= ಅಹಂಕಾರರಾಹಿತ್ಯ ಈ ಗುಣಗಳು ದೈವೀಂ ಸಂಪದಂ ಅಭಿಜಾತಸ್ಯ= ದೈವೀಸಂಪತ್ತನ್ನು ಹೊಂದಿದವನಿಗೆ ಭವಂತಿ=ಬರುತ್ತವೆ.

ದಂಭಃ=ತಾನು ಚಿಕ್ಕವನೆಂದು ತಿಳಿದೂ ದೊಡಸ್ತಿಕೆಯ ಪ್ರದರ್ಶನ ದರ್ಪಃ=ಹೆದರುವ ಕಾರಣವಿದ್ದರೂ ದುರಹಂಕಾರದಿಂದ ಅದನ್ನು ಕಡೆಗಣಿಸು ವುದು ಅಭಿಮಾನಃ=ಪ್ರಮಾಣಗಳನ್ನು ಮೀರುವುದು ಕ್ರೋಧಃ=ಸಿಟ್ಟು ಪಾರುಷ್ಯಂ=ನಿಷ್ಠುರತೆ ಅಜ್ಞಾನ=ಮಿಥ್ಯಾಜ್ಞಾನ ಇವೆಲ್ಲವೂ ಆಸುರೀಂ ಸಂಪದಂ ಅಭಿಜಾತಸ್ಯ=ಆಸುರಸ್ವಭಾವವನ್ನು ಹೊಂದಿದವನಿಗೆ ಬರುತ್ತವೆ.

ಈ ಗೀತಾಶ್ಲೋಕಗಳಲ್ಲಿ ದೇವಸ್ವಭಾವ ಮತ್ತು ಆಸುರಸ್ವಭಾವಗಳನ್ನು ಹೇಳಲಾಗಿವೆ.

**ಮಾಮಾತ್ಮಪರದೇಹೇಷು ಪ್ರದ್ವಿಷಂತೋಽಭ್ಯಸೂಯಕಾಃ ।**
**ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ ॥ ೧೨೪ ॥**

**ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವ ಯೋನಿಷು ।**
**ಆಸುರೀಂ ಯೋನಿಮಾಪನ್ನಾ ಮೂಢಾ ಜನ್ಮನಿಜನ್ಮನಿ ।**
**ಮಾಮಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂ**
**ಗತಿಮ್ ॥ ೧೨೫ ॥**

ಆತ್ಮ–ಪರದೇಹೇಷು=ತನ್ನ ಮತ್ತು ಇತರರ ದೇಹಗಳಲ್ಲಿ ಇರುವ ಮಾಂ=ನನ್ನನ್ನು (ಶ್ರೀಕೃಷ್ಣನನ್ನು) ಪ್ರದ್ವಿಷಂತಃ=ದೇವರೇ ಎಲ್ಲವನ್ನೂ ಮಾಡಿಸುವುದಾದಲ್ಲಿ ಸುಮ್ಮನೆ ಕುಳಿತಿರುವ ನನ್ನಿಂದ ಕೆಲಸವನ್ನು ಮಾಡಿಸಲಿ, ಮಾಡುತ್ತಿರುವ ನನ್ನನ್ನು ತಡೆಯಲಿ, ಎಂದು ದ್ವೇಷಿಸುತ್ತಾ ಅಭ್ಯ ಸೂಯಕಾಃ=ನಿರ್ದೋಷನಾದ ದೇವನಲ್ಲಿ ದೋಷಗಳನ್ನು ಹೊರಿಸುತ್ತಾ

ಯಜಂತೇ=ಅಹಂಕಾರದಿಂದ ಧರ್ಮಕಾರ್ಯಗಳನ್ನು ಮಾಡುತ್ತಾರೆ. ತಾನ್=ಅಂತಹ ಕ್ರೂರಾನ್=ಕ್ರೂರಿಗಳಾದ ನರಾಧಮಾನ್=ಮನುಷ್ಯಾಧಮರನ್ನು ಸಂಸಾರೇಷು=ಸಂಸಾರದಲ್ಲಿ ಅದರಲ್ಲೂ ಆಸುರೀಷ್ವೇವ ಯೋನಿಷು=ಅಸುರ ಜಾತಿಯಲ್ಲೇ ಅಜಸ್ರಂ=ಮತ್ತೆ ಮತ್ತೆ ಕ್ಷಿಪಾಮಿ= ಹಾಕುತ್ತೇನೆ. ಮೂಢಾಃ=ಅಂತಹ ಮೂರ್ಖರು ಜನ್ಮನಿ ಜನ್ಮನಿ=ಪ್ರತಿಯೊಂದು ಜನ್ಮದಲ್ಲೂ ಆಸುರೀಂ ಯೋನಿಂ=ಅಸುರಜನ್ಮವನ್ನು ಆಪನ್ನಾಃ=ಹೊಂದಿದವರಾಗಿ ಮಾಂ=ನನ್ನನ್ನು ಅಪ್ರಾಪ್ಯೈ ್ಯವ=ಹೊಂದದೆಯೇ ಅಧಮಾಂ ಗತಿಂ= ನಿತ್ಯನರಕವನ್ನು ಯಾಂತಿ= ಹೊಂದುತ್ತಾರೆ.

ಈ ಗೀತಾಶ್ಲೋಕದಲ್ಲಿ ಅಸುರಸ್ವಭಾವದವರಿಗೆ ನಿತ್ಯನರಕಪ್ರಾಪ್ತಿಯೇ ಆಗುತ್ತದೆ, ಎಂದು ಹೇಳಲಾಗಿದೆ.

'ದ್ವಿವಿಧೋ ಭೂತ (ಪ) ಸರ್ಗೋಽತ್ರ ದೈವ ಆಸುರ ಏವ ಚ ।
ವಿಷ್ಣುಭಕ್ತಿಪರೋ ದೈವೋ ವಿಪರೀತಸ್ತಥಾಽಽಸುರಃ' ॥ ೧೨೬ ॥

'ದೇವಾನಾಂ ಪರಮೋ ಧರ್ಮಃ ಸದಾ ಯಜ್ಞಾದಿಕಾಃ ಕ್ರಿಯಾಃ ।
ಸ್ವಾಧ್ಯಾಯಸ್ತತ್ವವೇದಿತ್ವಂ ವಿಷ್ಣುಪೂಜಾರತಿಃ ಸ್ಮೃತಿಃ ' ॥ ೧೨೭ ॥

ದೈತ್ಯಾನಾಂ ಬಾಹುಷಾಳಿ(ಶಾಲಿ)ತ್ವಂ ಮಾತ್ಸರ್ಯಂ ಯುದ್ಧಸತ್ಕ್ರಿಯಾ ।
ನೀತಿಶಾಸ್ತ್ರಪ್ರವೇದಿತ್ವಂ ಶಿವಪೂಜಾರತಿಃ ಸ್ಮೃತಿಃ' ॥ ೧೨೮ ॥

'ವರ್ಣಾಶ್ರಮಾಚಾರವತ್ತ್ವಂ ಸ್ವಾಧ್ಯಾಯೋ ಭಕ್ತಿರಚ್ಯುತೇ ।
ಶಿವೇ ಸೂರ್ಯೇ ತಥಾ ದೇವ್ಯಾಂ ಸ್ವಭಾವೋ ಮಾನುಷಃ
ಸ್ಮೃತಃ' ॥ ೧೨೯ ॥

'ಅನಾದಿವೈಷ್ಣವಾ ಏವ ದೇವತಾಸ್ತು ಸ್ವಭಾವತಃ ।
ವಿಪರೀತಾಃ ಸ್ಮೃತಾ (ತತೋ) ದೈತ್ಯಾಃ ಸದೈವಾನಾದಿಕಾಲತಃ ।
ಮಾನುಷಾ ಮಿಶ್ರಮತಯೋ ವಿಮಿಶ್ರಗತಯೋಽಪಿ ಚ' ॥ ೧೩೦ ॥

ಅತ್ರ=ಈ ಬ್ರಹ್ಮಾಂಡದಲ್ಲಿ ದೈವಃ=ದೇವತೆಗಳಿಗೆ ಸಂಬಂಧಿಸಿರುವುದು ಹಾಗೂ ಆಸುರಃ=ಅಸುರರಿಗೆ ಸಂಬಂಧಿಸಿದುದು ಎಂದು ಭೂತಸರ್ಗಃ= ಚೇತನಸ್ವಭಾವವು ದ್ವಿವಿಧಃ ಏವ=ಎರಡೇ ವಿಧವಾದುದು. ದೇವತಾಸ್ವಭಾವ ಅಸುರಸ್ವಭಾವ ಎಂದು ಎರಡು ಸ್ವಭಾವದ ಜೀವರಿದ್ದಾರೆ. ವಿಷ್ಣುಭಕ್ತಿಪರಃ= ವಿಷ್ಣುಭಕ್ತಿಯಲ್ಲಿ ಆಸಕ್ತಿ ಇರುವ ಸೃಷ್ಟಿಯು ದೈವಃ=ದೈವೀಸೃಷ್ಟಿ, ವಿಪರೀತಃ= ಇದಕ್ಕೆ ವಿರುದ್ಧವಾದ ಸೃಷ್ಟಿಯು ಆಸುರಃ=ಆಸುರೀ ಸೃಷ್ಟಿ, ಇನ್ನೂ ಅನೇಕ ಸ್ವಭಾವಗಳಿದ್ದರೂ ಶುಭಫಲ–ಅಶುಭ ಫಲಗಳ ಅಂತಿಮಸ್ಥಿತಿಗಳೆರಡನ್ನು ಮಾತ್ರ ದೃಷ್ಟಿಯಲ್ಲಿಟ್ಟುಕೊಂಡಾಗ, ಚೇತನರಲ್ಲಿ ಎರಡೇ ಸ್ವಭಾವಗಳು.

ದೇವಾದೀನಾಂ=ದೇವತೆಗಳ ಪರಮೋ ಧರ್ಮಃ=ಭಗವದರ್ಪಣ ದಿಂದಾಗಿ ಪರಮಧರ್ಮವೆನಿಸಿರುವವುಗಳು— ಯಜ್ಞಾದಿಕಾಃ ಕ್ರಿಯಾಃ= ಯಜ್ಞಾದಿ ಸತ್ಕರ್ಮಗಳು, ಸ್ವಾಧ್ಯಾಯಃ=ವೇದಾಧ್ಯಯನ ತತ್ತ್ವವೇದಿತ್ವಂ= ತತ್ತ್ವಜ್ಞಾನ, ವಿಷ್ಣುಪೂಜಾರತಿಃ=ವಿಷ್ಣು ಮತ್ತು ಶಿವನ ಆರಾಧನೆಯಲ್ಲಿ ಆಸಕ್ತಿ ಮತ್ತು ಸ್ಮೃತಿಃ=ಅವರಿಬ್ಬರ ಸ್ಮರಣೆಯು.

ದೈತ್ಯಾನಾಂ=ದೈತ್ಯರಿಗೆ ಬಾಹುಶಾಲಿತ್ವಂ=ಸಂದರ್ಭವಿಲ್ಲದೆ ಬಲ ಪ್ರದರ್ಶನ ಮಾತ್ಸರ್ಯಂ=ಪರೋತ್ಕರ್ಷದಲ್ಲಿ ಅಸಹನೆ ಯುದ್ಧಸಕ್ತಿಯಾ= ಯುದ್ಧಕೌಶಲ, ನೀತಿಶಾಸ್ತ್ರಪ್ರವೇದಿತ್ವಂ=ನೀತಿಶಾಸ್ತ್ರದ ಜ್ಞಾನ, ಶಿವಪೂಜಾರತಿಃ ಸ್ಮೃತಿಃ=ಶಿವನ ಪೂಜೆಯಲ್ಲಿ ಆಸಕ್ತಿ, ಅವನ ಸ್ಮರಣೆ.

ವರ್ಣಾಶ್ರಮಾಚಾರವತ್ವಂ=ವರ್ಣಾಶ್ರಮಧರ್ಮಗಳ ಆಚರಣೆ ಸ್ವಾಧ್ಯಾಯಃ=ವೇದಾಧ್ಯಯನ ಅಚ್ಯುತೇ, ಶಿವೇ, ಸೂರ್ಯೇ, ದೇವ್ಯಾಂ ಚ ಭಕ್ತಿಃ=ವಿಷ್ಣು, ಸೂರ್ಯ, ಶಿವ, ಲಕ್ಷ್ಮೀದೇವಿಯರಲ್ಲಿ (ಸಮಾನವಾದ) ಭಕ್ತಿ ಇವು ಮಾನುಷಃ ಸ್ವಭಾವಃ ಸ್ಮೃತಃ=ಮನುಷ್ಯರ ಸ್ವಭಾವವು.

ದೇವತಾಸ್ತು=ದೇವತೆಗಳಾದರೋ ಸ್ವಭಾವತಃ ಅನಾದಿವೈಷ್ಣವಾಃ= ಸ್ವಾಭಾವಿಕವಾಗಿ ಅನಾದಿಕಾಲದಿಂದ ವೈಷ್ಣವರು. ಸದೈವ=ಯಾವಾಗಲೂ ವಿಪರೀತಾಃ=ದೇವತೆಗಳಿಗೆ ವಿರುದ್ಧಸ್ವಭಾವದವರು ದೈತ್ಯಾಃ ಸ್ಮೃತಾಃ= ದೈತ್ಯ ರೆಂದು ಹೇಳಲ್ಪಟ್ಟಿದ್ದಾರೆ.

ಅನಾದಿಕಾಲತಃ=ಅನಾದಿಕಾಲದಿಂದಲೂ ಮಿಶ್ರಮತಯಃ=ತತ್ತ್ವ ಜ್ಞಾನಮಿಥ್ಯಾಜ್ಞಾನವುಳ್ಳವರು, ವಿಮಿಶ್ರಗತಯಃ=ಸುಖದುಃಖಮಿಶ್ರವಾದ ಸಂಸಾರವೇ ಫಲವಾಗಿ ಉಳ್ಳವರು ಮಾನುಷಾಃ=ಮನುಷ್ಯರು.

**ಇತ್ಯಾದಿವಾಕ್ಯಸಂದ(ರ್ಭೇ)ರ್ಭೈರ್ಜ್ಞಾಯತೇಽನಾದಿಯೋಗ್ಯತಾ**
**॥ ೧೩೧ ॥**

ಇತ್ಯಾದಿವಾಕ್ಯಸಂದರ್ಭೈಃ=ಇವೇ ಮೊದಲಾದ ವಾಕ್ಯಸಮೂಹಗಳಿಂದ ಅನಾದಿಯೋಗ್ಯತಾ=ಚೇತನರ ದೇವತ್ವಾದಿ ಅನಾದಿಯೋಗ್ಯತೆಯು ಜ್ಞಾಯತೇ=ತಿಳಿಯಲ್ಪಡುತ್ತದೆ.

**ಯದ್ಯನಾದಿವಿಶೇಷೋ ನ ಸಾಂಪ್ರತಂ ಕಥಮೇವ ಸಃ ।**
**ಅದೃಷ್ಟಾದೇವ ಚಾದೃಷ್ಟಂ ಸ್ವೀಕೃತಂ ಸರ್ವವಾದಿಭಿಃ ॥ ೧೩೨ ॥**

ಯದಿ=ಒಂದುವೇಳೆ ಅನಾದಿವಿಶೇಷಃ=ಅನಾದಿಯಾದ ಯೋಗ್ಯತಾ ವಿಶೇಷವು ನ=ಇಲ್ಲವೆಂದಾದಲ್ಲಿ ಸಃ=ಆ ವಿಶೇಷವು ಸಾಂಪ್ರತಂ=ಈಗ ಕಥಮೇವ=ಹೇಗೆ ತಾನೇ ಇದ್ದೀತು?

ಸರ್ವವಾದಿಭಿಃ=ಎಲ್ಲವಾದಿಗಳಿಂದ ಅದೃಷ್ಟಾದೇವ=ಪೂರ್ವಾದೃಷ್ಟ ದಿಂದಲೇ ಅದೃಷ್ಟಂ=ಉತ್ತರಾದೃಷ್ಟವು ಸ್ವೀಕೃತಂ=ಸ್ವೀಕರಿಸಲ್ಪಟ್ಟಿದೆ.

**ಭಾವಾರ್ಥ**— ಅನಾದಿಯೋಗ್ಯತಾವಿಶೇಷವು ಅಂಗೀಕರಿಸಲ್ಪಡಬೇಕು ಎನ್ನುವುದಕ್ಕೆ ಸಮರ್ಥನೆಯನ್ನು ಇಲ್ಲಿ ಕೊಡಲಾಗಿದೆ—ಚತುರ್ಮುಖ ಬ್ರಹ್ಮನು ಈ ಕಲ್ಪದಲ್ಲಿ ಸರ್ವಜೀವೋತ್ತಮನಾಗಿದ್ದಾನೆ. ಅದು ಅವನ ಅನಾದಿಯೋಗ್ಯತೆ ಎಂದು ಹೇಳದಿದ್ದಲ್ಲಿ, ಆ ಜೀವೋತ್ತಮತ್ವವು ಇದ್ದಕ್ಕಿದ್ದಂತೆ ಈಗ ಹೇಗೆ ಬಂತು? ಯಾವ ಕಾರಣವೂ ಇಲ್ಲದೆ ಅದು ಬರುವುದಾದಲ್ಲಿ ಎಲ್ಲರಿಗೂ ಅದು ಏಕೆ ಬರಲಿಲ್ಲ?

ಅಂತಹ ಸರ್ವಜೀವೋತ್ತಮತ್ವವು ಬರಬೇಕಾದರೆ ಪುಣ್ಯವಿಶೇಷವಿರ ಬೇಕು. ಉಳಿದವರಿಗೆ ಅಂತಹ ಪುಣ್ಯ ಇಲ್ಲ, ವಿರಿಂಚನಿಗೆ ಇತ್ತು. ಆದ್ದರಿಂದ ಅವನು ಜೀವೋತ್ತಮನಾದ. ಹೀಗೆ ಹೇಳುವುದು ಸರಿಯಲ್ಲ. ಅಂತಹ

ಅದೃಷ್ಟವಾದರೂ ಅವನೊಬ್ಬನಿಗೇ ಏಕೆ ಬಂತು? ಉತ್ತರೋತ್ತರಾದೃಷ್ಟಕ್ಕೆ ಪೂರ್ವ-ಪೂರ್ವಾದೃಷ್ಟವು ಕಾರಣ. ಅದೃಷ್ಟಪರಂಪರೆ ಅನಾದಿ ಎಂದೇ ಹೇಳಬೇಕು. ಇದರಿಂದ ಅಂತಹ ಅದೃಷ್ಟವಿಶೇಷಪರಂಪರೆ ಆ ವ್ಯಕ್ತಿಯಲ್ಲೇ ಹರಿದುಬರಬೇಕಾದರೆ ಅವನ ಯೋಗ್ಯತೆಯೇ ಅದಕ್ಕೆ ಕಾರಣ ಎಂದು ಹೇಳಬೇಕು. ಇದನ್ನು ಮುಂದೆ ಹೇಳಲಾಗುವುದು.

**ಆಕಸ್ಮಿಕೋ ವಿಶೇಷಶ್ಚೇದದೃಷ್ಟೇ ಕ್ವಚಿದಿಷ್ಯತೇ ।**
**ಸರ್ವತ್ರಾಕಸ್ಮಿಕತ್ವಂ ಸ್ಯಾನ್ನಾದೃಷ್ಟಾಪೇಕ್ಷತಾ ಭವೇತ್ ॥ ೧೩೩ ॥**

ಕ್ವಚಿದೃಷ್ಟೇ=ಉತ್ಕರ್ಷಕ್ಕೆ ಕಾರಣವಾದ ಅದೃಷ್ಟದಲ್ಲಿ ಆಕಸ್ಮಿಕಃ= ಕಾರಣವಿಲ್ಲದ ವಿಶೇಷಃ=ವಿಶೇಷವು ಇಷ್ಯತೇ ಚೇತ್=ಅಂಗೀಕರಿಸಲ್ಪಡುವು ದಾದಲ್ಲಿ ಸರ್ವತ್ರ=ಅಂತಹ ಅದೃಷ್ಟದಿಂದಾಗುವ ಫಲದಲ್ಲೇ ಆಕಸ್ಮಿಕತ್ವಂ= ಅದೃಷ್ಟರೂಪಕಾರಣವಿಲ್ಲದೆಯೇ ವಿಶೇಷವು (ಅಂಗೀಕಾರ್ಯಂ) ಸ್ಯಾತ್= ಅಂಗೀಕರಿಸಲ್ಪಡಬೇಕಾದೀತು.

ಭಾವಾರ್ಥ— ಬ್ರಹ್ಮನ ಜೀವೋತ್ತಮತ್ವಕ್ಕೆ ಅದೃಷ್ಟವಿಶೇಷವು ಕಾರಣ. ಆ ಅದೃಷ್ಟಕ್ಕೆ ಪೂರ್ವಾದೃಷ್ಟವು ಕಾರಣವಲ್ಲ. ಅದು ಆಕಸ್ಮಿಕವಾಗಿ ಬರುತ್ತದೆ. ಆದ್ದರಿಂದ ಅನಾದಿ ಅದೃಷ್ಟ ಪ್ರವಾಹದ ಅಗತ್ಯವಿಲ್ಲ. ಹೀಗೆ ಹೇಳುವುದು ಸರಿಯಲ್ಲ. ಬ್ರಹ್ಮನ ಸರ್ವೋತ್ಕರ್ಷಕ್ಕೆ ಕಾರಣವಾದ ಆ ಅದೃಷ್ಟದಲ್ಲಿ ಇತರರಲ್ಲಿ ಇಲ್ಲದ ವಿಶೇಷವು ನಿಷ್ಕಾರಣವಾಗಿ ಇದ್ದಕ್ಕಿದ್ದಂತೆ ಬಂತು ಎಂದು ಹೇಳಬೇಕಾಗುತ್ತದೆ. ಹೀಗೆ ಹೇಳುವುದಕ್ಕಿಂತಲೂ ಉತ್ಕರ್ಷಕ್ಕೆ ಕಾರಣವಾದ ಅದೃಷ್ಟವನ್ನೇ ಬಿಟ್ಟು ಬ್ರಹ್ಮನಿಗೆ ಬಂದಿರುವ ಉತ್ಕರ್ಷವೇ ಆಕಸ್ಮಿಕ ಎಂದು ಹೇಳಬಹುದು. ಅದು ಅದೃಷ್ಟಾಧೀನವಾಗಿ ಬಂದಿದೆ ಎನ್ನುವುದೇ ಬೇಕಾಗಿಲ್ಲ. ಹಾಗೆ ಆಕಸ್ಮಿಕವಾಗಿ ಸರ್ವೋತ್ಕರ್ಷವು ಬರುವುದಾದರೆ ಇತರರಿಗೇಕೆ ಅದು ಬರಬಾರದು, ಎನ್ನುವ ಹಿಂದಿನ ಆಕ್ಷೇಪ ಮತ್ತೆ ಬರುತ್ತದೆ.

**ಅದೃಷ್ಟಾಚ್ಚೇದ್ ವಿ(ಚ್ಚವಿ) ಶೇಷೋಽಯಮನಾದಿತ್ವಂ ಕುತೋ ನ ತತ್ ॥ ೧೩೪ ॥**

ಅಯಂ=ಬ್ರಹ್ಮನ ಸರ್ವೋತ್ಕರ್ಷಕ್ಕೆ ಕಾರಣವಾದ ವಿಶೇಷಃ=ಅದೃಷ್ಟವು ಅದೃಷ್ಟಾಚ್ಚೇತ್=ಹಿಂದಿನ ಮತ್ತೊಂದು ಅದೃಷ್ಟದಿಂದ ಬಂದಿದೆ ಎನ್ನುವುದಾದರೆ ತತ್=ಹಾಗಾದರೆ ಅನಾದಿತ್ವಂ=ಅದೃಷ್ಟ ಪರಂಪರೆಗೆ ಅನಾದಿತ್ವವು ಹಾಗೂ ಅನಾದಿಯೋಗ್ಯತೆಯು ಕುತೋ ನ=ಏಕಿಲ್ಲ?

ಭಾವಾರ್ಥ— ಬ್ರಹ್ಮನ ಉತ್ಕರ್ಷವೂ ಆಕಸ್ಮಿಕವಲ್ಲ, ಅವನ ಅದೃಷ್ಟದಿಂದ ಅದು ಬಂದಿದೆ. ಆ ಅದೃಷ್ಟವೂ ಆಕಸ್ಮಿಕವಲ್ಲ, ಅದು ಮತ್ತೊಂದು ಪೂರ್ವಾದೃಷ್ಟದಿಂದ ಬಂದಿದೆ. ಹೀಗೆ ಹೇಳಿದರೆ ಅದೃಷ್ಟವು ಅನಾದಿಯಾಯಿತು. ಇಂತಹ ಅನಾದಿ ಅದೃಷ್ಟಪ್ರವಾಹವು ಬ್ರಹ್ಮನಲ್ಲೇ ಏಕೆ ಬಂತು? ಇತರರಲ್ಲಿ ಏಕೆ ಬರಲಿಲ್ಲ? ಅದು ಅವನ ಯೋಗ್ಯತಾಧೀನ. ಆದ್ದರಿಂದ ಅನಾದಿಯೋಗ್ಯತೆಯನ್ನು ಅಂಗೀಕರಿಸಬೇಕು. ಬ್ರಹ್ಮನಿಂದ ಕಲಿಯವರೆಗೆ ಇಂತಹ ಯೋಗ್ಯತೆಯು ಅನಾದಿಯಾಗಿದ್ದು ಅದನ್ನು ಬದಲಿಸಲಾಗದು. ಆಚಾರ್ಯರು ತಾತ್ಪರ್ಯನಿರ್ಣಯದಲ್ಲಿ ಹೇಳಿರುವ ಮಾತನ್ನು ಈ ವಿಷಯದಲ್ಲಿ ಆಧಾರವನ್ನಾಗಿ ಸುಧಾದಲ್ಲಿ ಉದಾಹರಿಸಲಾಗಿದೆ—

ಸ್ವಭಾವಾಖ್ಯಾ ಯೋಗ್ಯತಾ ಯಾ ಹಠಾಖ್ಯಾ
ಯಾನಾದಿಸಿದ್ಧಾ ಸರ್ವಜೀವೇಷು ನಿತ್ಯಾ ।
ಸಾ ಕಾರಣಂ ಪ್ರಥಮಂ ತು, ದ್ವಿತೀಯಮ್
ಅನಾದಿಕರ್ಮೈವ, ತಥಾ ತೃತೀಯಮ್ ॥
ಜೀವಪ್ರಯತ್ನಃ ಪೌರುಷಾಖ್ಯಃ...॥ (22.ತಾ.ನಿ.)

## ಭಗವಂತನ ನಿರ್ದೋಷತ್ವ ಸಮರ್ಥನೆ

ರಾಮ-ಕೃಷ್ಣ ಮೊದಲಾದ ರೂಪಗಳನ್ನು ನೋಡಿರುವವರು ಆ ರೂಪಗಳಿಗೆ ಭೇದವನ್ನೂ ನೋಡಿದ್ದಾರೆ. ದೇವರಿಗೆ ಪ್ರಾಕೃತಶರೀರವು ಇಲ್ಲದಿರುವುದರಿಂದ ರೂಪಗಳಲ್ಲಿ ಕಂಡ ಭೇದವು ಶರೀರಭೇದವಲ್ಲ, ಆತ್ಮಭೇದ. ರಾಮ ಮತ್ತು ಕೃಷ್ಣ ಇವರಿಬ್ಬರು ಬೇರೆಬೇರೆಯಾದರೆ ಅವರಿಬ್ಬರೂ ಸ್ವತಂತ್ರರಾಗಿರಲು ಸಾಧ್ಯವಿಲ್ಲವಾದ ಕಾರಣ ಒಬ್ಬರು ಅಸ್ವತಂತ್ರರೇ ಆಗಿರಬೇಕು. ಹೀಗೆ ದೇವರಿಗೆ ಅಸ್ವಾತಂತ್ರ್ಯದೋಷವಿದೆ.

ಅಷ್ಟೇ ಅಲ್ಲದೆ, ರಾಮಾದಿಗಳಲ್ಲಿ ಯುದ್ಧದಿಂದಾಗಿ ಗಾಯಗಳಾಗಿವೆ, ಸೀತಾಪಹರಣದಿಂದ ದುಃಖವೂ ಕಂಡಿದೆ. ಆದ್ದರಿಂದ ಭಗವಂತನಲ್ಲೂ ಪ್ರತ್ಯಕ್ಷದಿಂದ ದೋಷಗಳು ಇವೆ, ಎಂದು ಸಿದ್ಧವಾಗುತ್ತದೆ, ಎಂದು ಆಕ್ಷೇಪ. ಅದಕ್ಕೆ ಸಮಾಧಾನ—

**ನಚಾನ್ಯಭೇದವದ್ ವಿಷ್ಣೌ ಭೇದಸ್ತದ್ದರ್ಶಿನಾಮಪಿ ।**
**ದೃಶ್ಯತೇ ಪ್ರತ್ಯಭಿಜ್ಞೈವ ಬಹುರೂಪೇಷು ದೃಶ್ಯತೇ ॥ ೧೩೫ ॥**

ತದ್ದರ್ಶಿನಾಂ=ಅವತಾರರೂಪದರ್ಶಿಗಳಿಂದ (ತೃತೀಯಾರ್ಥೇ ಷಷ್ಠೀ) ಅನ್ಯಭೇದವತ್=ಭಗವಂತನಲ್ಲಿ ತೋರುವ ಇತರಭೇದಗಳಂತೆ ವಿಷ್ಣೌ ಭೇದಃ=ಅವತಾರರೂಪಗಳಲ್ಲಿ ಪರಸ್ಪರ ಭೇದವು ನ ದೃಶ್ಯತೇ=ಕಾಣಲ್ಪಡುವುದಿಲ್ಲ. ಬಹುರೂಪೇಷು=ಭಗವಂತನ ಅನೇಕ ರೂಪಗಳಲ್ಲಿ ಪ್ರತ್ಯಭಿಜ್ಞೈವ= ಅದೇ ರೂಪ ಇದು ಎನ್ನುವ ಅಭೇದಜ್ಞಾನವೇ ದೃಶ್ಯತೇ=ಕಾಣಲ್ಪಡುತ್ತದೆ. (ಪುರಾಣಾದಿಗಳಲ್ಲಿ)

**ಭಾವಾರ್ಥ—** ದೇವತೆಗಳು–ದಾನವರು–ಮನುಷ್ಯರು ಎಂದು ತ್ರಿವಿಧ ಜೀವರಲ್ಲಿ ದೇವತೆಗಳು ಭಗವಂತನ ಅವತಾರಗಳಲ್ಲಿ ಪರಸ್ಪರಭೇದವನ್ನು ಕಾಣುವುದಿಲ್ಲ. ಅಷ್ಟೇ ಅಲ್ಲ, ಅದೇ ರಾಮ ಈ ಕೃಷ್ಣ ಎಂದು ಅಭೇದವನ್ನೇ ಕಾಣುತ್ತಾರೆ. ಹೀಗೆಂದು ಪುರಾಣಗಳಲ್ಲಿದೆ. ಹೀಗೆ ಜ್ಞಾನಿಗಳ ದೃಷ್ಟಿಗೆ ಭೇದವು ಕಾಣುವುದಿಲ್ಲವಾದ ಕಾರಣ ಅವತಾರರೂಪಗಳಲ್ಲಿ ಭೇದವಿಲ್ಲ. ಜ್ಞಾನಿಗಳು ಭಗವದ್ರೂಪಗಳಲ್ಲಿ ಜೀವ–ಜಡಗಳಿಂದ ಭೇದವನ್ನು ನೋಡುತ್ತಾರೆ. ಅದರಂತೆ ಅವತಾರಗಳಲ್ಲಿ ಪರಸ್ಪರಭೇದವನ್ನು ನೋಡುವುದಿಲ್ಲ.

**ಬಹುತ್ವಂ ಚ ವಿಶೇಷೇಣ ನ ಭೇದೇನ ಕಥಂಚನ ।**
**ಪ್ರತ್ಯಭಿಜ್ಞಾ ಚ ಯೇಷಾಂ ನ ತೇಽಪಿ ತನ್ಮೃಷ್ಟದೃಷ್ಟಯಃ ॥ ೧೩೬ ॥**

ಬಹುತ್ವಂ ಚ=ಭಗವದ್ರೂಪಗಳಲ್ಲಿ ಬಹುತ್ವವಾದರೋ ವಿಶೇಷೇಣ= ವಿಶೇಷದಿಂದಾಗಿ ಇದೆ. ಕಥಂಚನ=ಯಾವುದೇ ಕಾರಣದಿಂದ ಭೇದೇನ ನ=ಭೇದವಿರುವುದರಿಂದಾಗಿ ಅಲ್ಲ.

ಯೇಷಾಂ=ಯಾವ ಮಧ್ಯಮಜೀವರಿಗೆ ನ ಪ್ರತ್ಯಭಿಜ್ಞಾ=ಅಭೇದ ಪ್ರತ್ಯಭಿಜ್ಞೆಯು ಇಲ್ಲವೋ ತೇಽಪಿ=ಅವರೂ ಭಗವದ್ರೂಪಗಳಲ್ಲಿ ಭೇದವನ್ನು ನೋಡುವುದಿಲ್ಲ. ತನ್ಮೃಷ್ಟದೃಷ್ಟಯಃ=ಆ ಪರಮಾತ್ಮನ ಮೋಹಕ್ಕೆ ಒಳಗಾದ ದೃಷ್ಟಿವುಳ್ಳವರಾಗಿರುವುದರಿಂದ ಅಭೇದಪ್ರತ್ಯಭಿಜ್ಞೆಯು ಬರುವುದಿಲ್ಲ.

ಭಾವಾರ್ಥ— ಉತ್ತಮಜೀವರಿಗೆ ಅಭೇದಪ್ರತ್ಯಭಿಜ್ಞಾ ಇರುವುದರಿಂದ ಭೇದಪ್ರತ್ಯಕ್ಷವು ಬರುವುದಿಲ್ಲ. ಆದರೆ ಮಧ್ಯಮಜೀವರಿಗೆ ಭಗವದ್ರೂಪ ಗಳಲ್ಲಿ ಅಭೇದಪ್ರತ್ಯಭಿಜ್ಞಾ ಇಲ್ಲ. ಆದ್ದರಿಂದ ಅವರಿಗೆ ಭೇದಜ್ಞಾನ ಮಾತ್ರ ಇದೆ. ಅವರ ಭೇದಪ್ರತ್ಯಕ್ಷವು ಭಗವದ್ರೂಪಭೇದಕ್ಕೆ ಪ್ರಮಾಣವಾಗಬಹುದು, ಎನ್ನುವ ಆಕ್ಷೇಪಕ್ಕೆ ಇಲ್ಲಿ ಸಮಾಧಾನವನ್ನು ಕೊಡಲಾಗಿದೆ. ಮಧ್ಯಮ ಜೀವರಿಗೂ ಭಗವದ್ರೂಪಗಳಲ್ಲಿ ಭೇದಜ್ಞಾನವು ಇಲ್ಲ. ಅವರಿಗೆ ರೂಪಗಳಲ್ಲಿ ಬಹುತ್ವಜ್ಞಾನ ಇರುವುದರಿಂದ ಅಥವಾ ಭಗವಂತನ ಮಾಯೆಯಿಂದ ಭಗವಂತನ ರೂಪಗಳಲ್ಲಿ ಅಭೇದವಿದ್ದರೂ ಅದು ತೋರುವುದಿಲ್ಲ.

**ಭೇದಂ ನೈವ ಪ್ರಪಶ್ಯಂತಿ ಭೇದಮನ್ಯೇಭ್ಯ ಏವ ಚ ।**
**ಪಶ್ಯಂತ್ಯೇವಂ ಹರಿಸ್ತೇಷಾಂ ಸಂದರ್ಶಯತಿ ನಾನ್ಯಥಾ ॥ ೧೩೭ ॥**

ಹೀಗೆ ಉತ್ತಮ–ಮಧ್ಯಮರು ಭೇದಂ=ಭಗವದ್ರೂಪಗಳಲ್ಲಿ ಭೇದ ವನ್ನು ನೈವ ಪಶ್ಯಂತಿ=ನೋಡುವುದೇ ಇಲ್ಲ. ಅನ್ಯೇಭ್ಯಃ=ಜಡ–ಚೇತನಗಳಿಂದ ಭೇದಂ=ಭೇದವನ್ನು ಪಶ್ಯಂತ್ಯೇವ=ನೋಡೇ ನೋಡುತ್ತಾರೆ. ಏವಂ=ಈ ರೀತಿಯಾಗಿ ಅಂದರೆ ರೂಪಗಳಲ್ಲಿ ಭೇದವೂ ತೋರದೆ ಅಭೇದವೂ ತೋರದೆ ಭೇದಾಭೇದ ಉದಾಸೀನವಾಗಿ ಹರಿಃ=ಭಗವಂತನು ತೇಷಾಂ=ಮಧ್ಯಮರಿಗೆ ಸಂದರ್ಶಯತಿ=ತನ್ನ ರೂಪಗಳನ್ನು ತೋರಿಸುತ್ತಾನೆ. ನಾನ್ಯಥಾ=ಅನ್ಯಥಾ ಜ್ಞಾನ ಬರುವಂತೆ ತೋರಿಸುವುದಿಲ್ಲ.

**ಏವಂ ಬೃಹತ್ಸಂಹಿತಾಯಾಂ ವಚನಂ ನ ಪುರಾಣಗಮ್ ।**
**ಲೋಕದರ್ಶನವಾದ್ಯೇವ ವೇದರೋಧಾಯ ಶಕ್ನುಯಾತ್ ॥ ೧೩೮ ॥**

ಏವಂ=ಈ ರೀತಿಯಾಗಿರುವುದು ಬೃಹತ್ಸಂಹಿತಾವಚನಂ=

ಬೃಹತ್ಸಂಹಿತೆಯ ಮಾತು, ನ ಪುರಾಣಗಂ=ಪುರಾಣದಲ್ಲಿರುವ ಮಾತಲ್ಲ ಇದು. ಪುರಾಣಗಂ=ಪುರಾಣದಲ್ಲಿರುವ ಭೇದವಚನವೂ ಲೋಕದರ್ಶನ-ವಾದ್ಯೇವ=ಸಾಮಾನ್ಯಜನರು ಕಂಡಿರುವುದನ್ನು ಅನುವಾದ ಮಾಡುತ್ತದೆ. ಅದು ವೇದರೋಧಾಯ=ವೇದವಾಕ್ಯವನ್ನು ವಿರೋಧಿಸಲು ನ ಶಕ್ನುಯಾತ್=ಸಮರ್ಥವಲ್ಲ.

ಭಾವಾರ್ಥ— ಜ್ಞಾನಿಗಳಿಗೆ ಭಗವದ್ರೂಪಗಳು ಅಭಿನ್ನಗಳಾಗಿಯೇ ಕಾಣುತ್ತವೆ. ಜ್ಞಾನಿಗಳಾದ ಭೀಷ್ಮಾಚಾರ್ಯರು ಕೃಷ್ಣನ ಮುಂದೆ ಮಾಡಿರುವ ಪ್ರಾರ್ಥನೆಯಲ್ಲಿ ತಮ್ಮ ಅನುಭವವನ್ನು ಹೀಗೆ ಹೇಳಿಕೊಂಡಿದ್ದಾರೆ—

ತಮಿಮಮಹಂ ಶರೀರಭಾಜಾಂ
ಹೃದಿ ಹೃದಿ ವಿಷ್ಠಿತ ಮಾತ್ಮಕಲ್ಪಿತಾನಾಮ್ ।
ಪ್ರತಿದೃಶಮಿವ ನೈಕಧಾರ್ಕಮೇಕಂ
ಸಮಧಿಗತೋಽಸ್ಮಿ ವಿಧೂತಭೇದಮೋಹಃ ॥

'ತಾನೇ ಸೃಷ್ಟಿಮಾಡಿರುವ (ಆತ್ಮಕಲ್ಪಿತಾನಾಂ) ಅನೇಕ ಚೇತನಗಳ ಹೃದಯಗಳಲ್ಲಿ ಪ್ರೇರಕವಾಗಿ ಅನೇಕವಿಧದಿಂದ ಇರುವ ಈ ಶ್ರೀಕೃಷ್ಣನನ್ನು ಭೇದಭ್ರಾಂತಿರಹಿತನಾಗಿ ಕಾಣುತ್ತಿದ್ದೇನೆ.' ಅಜ್ಞಾನಿಗಳಿಗೆ ಭೇದವು ಕಂಡರೂ ಅದು ಜ್ಞಾನಿಗಳ ಪ್ರತ್ಯಕ್ಷಕ್ಕೆ ವಿರುದ್ಧವಾದುದರಿಂದ ಅಪ್ರಮಾಣ. ಹೀಗೆ ಬೃಹತ್ಸಂಹಿತಾವೇದಭಾಗದಲ್ಲಿದೆ. ಇದಕ್ಕೆ ವಿರುದ್ಧವಾಗಿ ಭಗವದ್ರೂಪಗಳಲ್ಲಿ ಭೇದವನ್ನು ಪುರಾಣವು ಹೇಳಿದರೂ ಅದು ವಾಸ್ತವಸಂಗತಿಯನ್ನು ಹೇಳುತ್ತದೆ ಎಂದು ತಿಳಿಯಬಾರದು. ಅದು ಲೋಕದೃಷ್ಟಿಯ ಅನುವಾದ ಮಾತ್ರ. ವಸ್ತುಸ್ಥಿತಿಯಲ್ಲ.

**ಅಪರೀಕ್ಷಿತದೃಷ್ಟಿಶ್ಚ ಪರೀಕ್ಷಾಪೂರ್ವದರ್ಶನಮ್ ।**
**ನಿಷೇದ್ಧುಂ ಶಕ್ನುಯಾತ್ ಕ್ವಾಪಿ ದೇವದತ್ತಾದಿದೃಷ್ಟಿವತ್ ॥ ೧೩೯ ॥**

ಕ್ವಾಪಿ=ಎಂದೂ ಅಪರೀಕ್ಷಿತದೃಷ್ಟಿಃ=ಪರೀಕ್ಷೆ ಮಾಡಿ ಪ್ರಮಾಣ ಎಂದು ನಿರ್ಧಾರವಾಗದ ಪ್ರತ್ಯಕ್ಷವು ಪರೀಕ್ಷಾಪೂರ್ವದರ್ಶನಮ್=ಪರೀಕ್ಷಾ ಪೂರ್ವಕವಾಗಿ ಪ್ರಾಮಾಣ್ಯವು ನಿರ್ಧಾರಿತವಾಗಿರುವ ಪ್ರತ್ಯಕ್ಷವನ್ನು

ನಿಷೇದ್ಧುಂ=ಬಾಧಿಸಲು ನ ಶಕ್ನುಯಾತ್=ಸಮರ್ಥವಾಗುವುದಿಲ್ಲ. ದೇವದತ್ತಾದಿದೃಷ್ಟಿವತ್=ನಿರ್ಧಾರಿತ ಪ್ರಾಮಾಣ್ಯವುಳ್ಳ ಯಜ್ಞದತ್ತನ ಪ್ರತ್ಯಕ್ಷವನ್ನು ಅನಿರ್ಧಾರಿತ ಪ್ರಾಮಾಣ್ಯವುಳ್ಳ ದೇವದತ್ತನ ಪ್ರತ್ಯಕ್ಷವು ಹೇಗೆ ಬಾಧಿಸುವುದಿಲ್ಲವೋ ಹಾಗೆ.

ಭಾವಾರ್ಥ— ಅವತಾರರೂಪಗಳಲ್ಲಿ ಭೇದವನ್ನು ಸಾಮಾನ್ಯಜನರ ಪ್ರತ್ಯಕ್ಷವು ಗ್ರಹಿಸುತ್ತವೆ. ಅದು ಸರಿಯೋ ತಪ್ಪೋ ಎಂದು ವಿಮರ್ಶೆಯಿಂದ ನಿರ್ಧಾರಿತವಾಗಿಲ್ಲ. ಆದರೆ ಜ್ಞಾನಿಗಳ ಪ್ರತ್ಯಕ್ಷವು ಅವುಗಳಲ್ಲಿ ಅಭೇದವನ್ನು ಗ್ರಹಿಸುತ್ತದೆ. ದೋಷವಿಲ್ಲದ ಕಾರಣ ಹಾಗೂ ಶ್ರುತಿಸಂವಾದವಿರುವ ಕಾರಣ ಅದು ಪ್ರಮಾಣವೆಂದು ನಿರ್ಧಾರಿತವಾಗಿದೆ. ಅಂತಹ ಪ್ರತ್ಯಕ್ಷವನ್ನು ಸಾಮಾನ್ಯ ಜನರ ಪ್ರತ್ಯಕ್ಷವು ಬಾಧಿಸಲು ಸಾಧ್ಯವಿಲ್ಲ. ಲೋಕದಲ್ಲಿ ಇದು ಕಂಡಿದೆ.

**ನಚ ನಿಶ್ಚಿತಭೇದಸ್ಯ ದರ್ಶನೇಽಸ್ತಿ ಪುರಾಣಗಮ್ ।**
**ವಾಕ್ಯಂ ಕ್ವಚಿದ್ಧಿ ಸಂಮುಗ್ಧಂ (ಗ್ಧ) ದರ್ಶನಂ ತತ್ರ ಗಮ್ಯತೇ ॥ ೧೪೦ ॥**

ನಿಶ್ಚಿತಭೇದಸ್ಯ ದರ್ಶನೇ=ಪರೀಕ್ಷಿತವಾದ ಭೇದದರ್ಶನದಲ್ಲಿ ಪುರಾಣಗಂ ವಾಕ್ಯಂ=ಪುರಾಣದಲ್ಲಿರುವ ವಾಕ್ಯವು ಕ್ವಚಿತ್=ಎಲ್ಲೂ ನ ಚ= ಇಲ್ಲ. ಸಮ್ಮುಗ್ಧಂ=ಪ್ರಾಮಾಣ್ಯಾಪ್ರಾಮಾಣ್ಯವಿಷಯದಲ್ಲಿ ಸಂದೇಹಾಸ್ಪದವಾದ ದರ್ಶನಂ=ಪ್ರತ್ಯಕ್ಷವು ತತ್ರ=ಪುರಾಣದ ವಾಕ್ಯದಲ್ಲಿ ಗಮ್ಯತೇ= ತಿಳಿಯಲ್ಪಡುತ್ತದೆ.

ಭಾವಾರ್ಥ—ರಾಮ-ಕೃಷ್ಣಾದಿಗಳು ಇದ್ದ ಕಾಲದಲ್ಲಿ ಯಾರಿದ್ದರೊ ಅವರಿಗೆ ಆ ರೂಪಗಳಲ್ಲಿ ಭೇದದ ಪ್ರತ್ಯಕ್ಷವು ಬಂದಿರಬಹುದು. ಅವರಿಗೆ ಭೇದಪ್ರತ್ಯಕ್ಷ ಇತ್ತು ಎಂದು ನಮಗೆ ತಿಳಿಸುವುದು ಪುರಾಣಗಳು. ಆ ಪುರಾಣಗಳು ಅವರಿಗಿರುವ ಪ್ರತ್ಯಕ್ಷವನ್ನು ಯಥಾವತ್ತಾಗಿ ತಿಳಿಸುತ್ತದೆ. ಹೊರತು ಆ ಪ್ರತ್ಯಕ್ಷದ ಸತ್ಯಾಸತ್ಯತೆಯ ಬಗ್ಗೆ ಅದು ಮೌನವಹಿಸುತ್ತದೆ. ಆದ್ದರಿಂದ ಆ ಭೇದಪ್ರತ್ಯಕ್ಷದ ಪ್ರಾಮಾಣ್ಯವು ಸಂದಿಗ್ಧವಾಯಿತು. ಆದರೆ ಅಭೇದದರ್ಶನವನ್ನು ಭಾಗವತ ತಿಳಿಸುವಾಗ 'ಸಂ-ಅಧಿಗತೋಽಸ್ಮಿ' 'ವಿಧೂತಭೇದಮೋಹಃ' ಎಂದು ಅಭೇದದರ್ಶನವು ಪ್ರಮಾಣ ಎಂದೇ

ತಿಳಿಸುತ್ತದೆ. ಹೀಗೆ ಪ್ರಮಾಣತ್ವೇನ ನಿಶ್ಚಿತವಾದ ಅಭೇದಪ್ರತ್ಯಕ್ಷದಿಂದ ಸಂದಿಗ್ಧ ಪ್ರಾಮಾಣ್ಯವುಳ್ಳ ಭೇದದರ್ಶನವು ಅಪ್ರಮಾಣವೆಂದೇ ನಿರ್ಧಾರಿತ ವಾಗುತ್ತದೆ.

**ಅಪರೀಕ್ಷಿತಮೇವಾತ್ರ ವೇಧಾದಿಕಮಧೀಶಿತುಃ ।**
**ಪರೀಕ್ಷಾದರ್ಶನೇ ನೈವ ದೃಶ್ಯತೇ ಕೇನಚಿತ್ ಕ್ವಚಿತ್ ॥ ೧೪೧ ॥**

ಅತ್ರ=ಅವತಾರರೂಪಗಳಲ್ಲಿ ಅಧೀಶಿತುಃ=ಪರಮಾತ್ಮನಿಗೆ ವೇಧಾ-ದಿಕಂ=ಗಾಯ ಮೊದಲಾದ ಪ್ರತ್ಯಕ್ಷವು ಅಪರೀಕ್ಷಿತಮೇವ=ಸತ್ಯಾಸತ್ಯತೆಗಳ ಪರೀಕ್ಷೆಯಿಂದ ರಹಿತವಾದುದೇ ಆಗಿದೆ. ಪರೀಕ್ಷಾದರ್ಶನೇ=ಪರೀಕ್ಷೆಯಿಂದ (ವಿಮರ್ಶೆಯಿಂದ) ಕೂಡಿದ ಪ್ರತ್ಯಕ್ಷದಲ್ಲಿ ವೇಧಾದಿಕಂ=ಗಾಯ ಮೊದಲಾದ ದೋಷಗಳು ಕೇನಚಿತ್=ಯಾರಿಂದಲೂ ಕ್ವಚಿತ್=ಎಂದೂ ನೈವ ದೃಶ್ಯತೇ= ಕಾಣಲ್ಪಡುವುದಿಲ್ಲ.

ಭಾವಾರ್ಥ— ಕೃಷ್ಣನ ದೇಹಕ್ಕೆ ಭೀಷ್ಮಾಚಾರ್ಯರ ಬಾಣವು ಚುಚ್ಚಿ ದಾಗ ಗಾಯವಾಗಿ ರಕ್ತಸೋರಿದ್ದನ್ನು ಅನೇಕ ಯೋಧರು ನೋಡಿದ್ದಾರೆ. (ಶಿತವಿಶಿಖಹತಃ, ವಿಶೀರ್ಣದಂಸಃ, ಕ್ಷತಜಪರಿಪ್ಲುತಃ...ಭಾಗ.) ಆದರೂ ಅದು ಆಪಾತತಃ ಕಂಡ ದೃಶ್ಯ. ಅದು ಸರಿಯೋ ತಪ್ಪೋ ಎಂದು ವಿಚಾರಕ್ಕೆ ಒಳಪಡದ ಪ್ರತ್ಯಕ್ಷ. ವಿಚಾರಕ್ಕೆ ಒಳಪಟ್ಟ, ಜ್ಞಾನಿಗಳಾದ ಭೀಷ್ಮರ ಪ್ರತ್ಯಕ್ಷವು ಎಂದೂ ಅಂತಹ ದೋಷಗಳನ್ನು ಗ್ರಹಿಸುವುದಿಲ್ಲ.

**'ನಿರ್ದೋಷಮೇವ ತಂ ಬ್ರಹ್ಮಾ ದದರ್ಶಾಶೇಷರೂಪಿಣಮ್ ।**
**ನಿರ್ದೋಷಮೇವ ರುದ್ರೋಽದ್ರಾಕ್ಷ್ ನಿರ್ದೋಷಂ ತಂ ಪುರಂದರಃ ॥ ೧೪೨ ॥**

**ನಿರ್ದೋಷಾಣ್ಯಸ್ಯ ರೂಪಾಣಿ ದೃಷ್ಟಾನ್ಯೇವಂ ಸುರೋತ್ತಮೈಃ ।**
**ಅನ್ಯೇ ಸದೋಷಾಃ ಸರ್ವೇಽಪಿ ನಿರ್ದೋಷೋ ಹರಿರೇಕಲಃ ॥ ೧೪೩ ॥**

**ಇತಿ ಬರ್ಕ(ರ್ಕು)ಶ್ರುತೇಶ್ಚೈವ ಸದೋಷಂ ನಾಸ್ಯ ದರ್ಶನಮ್ ॥೧೪೪॥**

ಬ್ರಹ್ಮಾ=ಚತುರ್ಮುಖಬ್ರಹ್ಮನು ಅಶೇಷರೂಪಿಣಂ ತಂ= ಅನಂತ ರೂಪನಾದ ವಿಷ್ಣುವನ್ನು=ನಿರ್ದೋಷಮೇವ=ದೋಷರಹಿತನನ್ನಾಗಿಯೇ ದದರ್ಶ=ಕಂಡನು. ರುದ್ರಃ=ಮಹಾರುದ್ರದೇವನೂ ನಿರ್ದೋಷಮೇವ ಅದ್ರಾಕ್=ದೋಷರಹಿತನನ್ನಾಗಿಯೇ ಕಂಡನು. ಪುರಂದರಃ=ಇಂದ್ರನೂ ಹಾಗೆಯೇ. ಸುರೋತ್ತಮೈಃ=ದೇವತಾಶ್ರೇಷ್ಠರಿಂದ ಅಸ್ಯ ರೂಪಾಣಿ= ಮಹಾ ವಿಷ್ಣುವಿನ ರೂಪಗಳು ನಿರ್ದೋಷಾಣಿ ದೃಷ್ಟಾನಿ=ದೋಷರಹಿತ ಗಳಾಗಿಯೇ ಕಾಣಲ್ಪಟ್ಟಿವೆ.

ಅನ್ಯೇ ಸರ್ವೇಽಪಿ ಸದೋಷಾಃ=ಉಳಿದವರೆಲ್ಲರೂ ದೋಷ ಪೂರ್ಣರು. ನಿರ್ದೋಷಃ=ದೋಷವಿಲ್ಲದವನು ಹರಿಃ ಏಕಲಃ=ಹರಿ ಯೊಬ್ಬನೆ.

ಇತಿ=ಹೀಗೆ ಬರ್ಕಶ್ರುತೇಶ್ಚ=ಬರ್ಕಶ್ರುತಿಯಿರುವುದರಿಂದಲೂ ಅಸ್ಯ-ದರ್ಶನಂ=ಪರಮೇಶ್ವರವಿಷಯಕವಾದ ಜ್ಞಾನಿಗಳ ಪ್ರತ್ಯಕ್ಷವು ನ ಸದೋಷಂ= ದೋಷಯುಕ್ತವಾದುದಲ್ಲ.

**'ಅವಿದ್ಧೋ ವಿದ್ಧವದ್ ವಿಷ್ಣುರಜಾತೋ ಜಾತವನ್ಮೃಷಾ ।**
**ಅಬದ್ಧೋ ಬದ್ಧವಚ್ಚೈವ ದರ್ಶಯತ್ಯಮಿತದ್ಯುತಿಃ' ॥ ೧೪೫ ॥**

**ಇತಿ ಪೈಂಗಿಶ್ರುತಿಶ್ಚೈವ ಪ್ರಾಹ ನಿರ್ದೋಷತಾಂ ಹರೇಃ ॥ ೧೪೬ ॥**

**ಅಪರೀಕ್ಷಿತದೃಷ್ಟ್ಯೈವ ಸದೋಷೋ ದೃಶ್ಯತೇ ಹರಿಃ ।**
**ಪರೀಕ್ಷಾದರ್ಶನೇ ನೈವ ದೋಷೋ ದೃಶ್ಯೋ ಹರೇಃ ಕ್ವಚಿತ್ ॥ ೧೪೭ ॥**

**ಇತಿ ಪೈಂಗಿಶ್ರುತಿಶ್ಚಾಹ, ಪ್ರಮಾಣಂ ಹಿ ಪರೀಕ್ಷಿತಮ್ ॥ ೧೪೮ ॥**

ಇದು ಪೈಂಗಿಶ್ರುತಿಯ ವಾಕ್ಯದ ಅರ್ಥ—

''ಅಮಿತದ್ಯುತಿಃ=ಅಪರಿಮಿತಕಾಂತಿಯುಳ್ಳ ವಿಷ್ಣುಃ=ಶ್ರೀಮನ್ನಾ ರಾಯಣನು ಅವಿದ್ಧಃ=ಛೇದವಿಲ್ಲದವನಾದರೂ ವಿದ್ಧವತ್=ಛೇದ ಇರುವವ ನಂತೆ, ಅಜಾತಃ=ಹುಟ್ಟದವನಾದರೂ ಜಾತವತ್=ಹುಟ್ಟಿದವನಂತೆ,

ಅಬದ್ಧಃ=ಬಂಧನಕ್ಕೆ ಒಳಗಾದವನಾದರೂ ಬದ್ಧವಚ್ಚೈವ=ಬಂಧನಕ್ಕೆ ಒಳಗಾದವನಂತೆಯೂ ಮೃಷಾ ದರ್ಶಯತಿ=ಅನ್ಯಥಾ ತೋರಿಸಿಕೊಳ್ಳುತ್ತಾನೆ.'' ಇತಿ=ಹೀಗೆ ಪೈಂಗಿಶ್ರುತಿಶ್ಚೈವ=ಪೈಂಗಿಶ್ರುತಿಯೂ ಹರೇಃ=ವಿಷ್ಣುವಿಗೆ ನಿರ್ದೋಷತಾಂ=ದೋಷರಾಹಿತ್ಯವನ್ನು ಪ್ರಾಹ=ಹೇಳುತ್ತದೆ.

''ಹರಿಃ=ವಿಷ್ಣುವು ಅಪರೀಕ್ಷಿತದೃಷ್ಟ್ಯೈವ=ವಿಮರ್ಶೆಗೆ ಒಳಪಡದ ಪ್ರತ್ಯಕ್ಷದಿಂದ ಸದೋಷೋ ದೃಶ್ಯತೇ=ದೋಷವುಳ್ಳವನಾಗಿ ಕಾಣುತ್ತಾನೆ. ಪರೀಕ್ಷಾದರ್ಶನೇ=ವಿಮರ್ಶೆಗೆ ಒಳಪಟ್ಟ ಪ್ರತ್ಯಕ್ಷದಲ್ಲಿ ಹರೇಃ=ವಿಷ್ಣುವಿಗೆ ಕ್ವಚಿತ್=ಎಂದೂ ದೋಷಃ ನ ದೃಶ್ಯತೇ=ದೋಷವು ಕಾಣುವುದಿಲ್ಲ''. ಇತಿ=ಹೀಗೆಂದು ಪೈಂಗಿಶ್ರುತಿಶ್ಚಾಹ=ಪೈಂಗಿಶ್ರುತಿಯೂ ಹೇಳುತ್ತದೆ.

ಆದ್ದರಿಂದ ಪರೀಕ್ಷಿತಂ ಹಿ ಪ್ರಮಾಣಂ=ಪರೀಕ್ಷಿತವಾದ ಪ್ರತ್ಯಕ್ಷವೇ ಪ್ರಮಾಣ. ಅಪರೀಕ್ಷಿತವಾದುದು ಮೊದಲು ಸಂದಿಗ್ಧವಾಗಿದ್ದು ಆಮೇಲೆ ವಿರುದ್ಧಪ್ರಮಾಣದಿಂದ ಬಾಧಿತವಾಗುತ್ತದೆ.

**ಸಾಕ್ಷಿಪ್ರಾಮಾಣ್ಯನಿಯತ**

**ನ ಪರೀಕ್ಷಾನವಸ್ಥಾ ಸ್ಯಾತ್ ಸಾಕ್ಷಿಸಿದ್ಧೇ ತ್ವಸಂಶಯಾತ್ ।**
**ಮಾನಸೇ ದರ್ಶನೇ ದೋಷಾಃ ಸ್ಯುರ್ನವೈ ಸಾಕ್ಷಿದರ್ಶನೇ ॥ ೧೪೯ ॥**

ಪ್ರಾಮಾಣ್ಯವು ಪರೀಕ್ಷಾಧೀನವಾದರೂ ಸಾಕ್ಷಿಸಿದ್ಧೇ ತು=ಸಾಕ್ಷೀಂದ್ರಿಯದಿಂದ ಸಿದ್ಧವಾದ ಸುಖಾದಿಗಳಲ್ಲಿ ಅಸಂಶಯಾತ್=ಸಂದೇಹವು ಬರುವುದಿಲ್ಲವಾದಕಾರಣ ಪರೀಕ್ಷಾನವಸ್ಥಾ ನ ಸ್ಯಾತ್=ಪರೀಕ್ಷಾನವಸ್ಥಾ ಬರುವುದಿಲ್ಲ. ಏಕೆಂದರೆ, ಮಾನಸೇ ದರ್ಶನೇ=ಮನೋವೃತ್ತಿರೂಪವಾದ ಜ್ಞಾನಗಳಲ್ಲಿ ದೋಷಾಃ ವೈ ಸ್ಯುಃ=ದೋಷಗಳು ಇರಬಹುದು. ಸಾಕ್ಷಿದರ್ಶನೇ ವೈ=ಸಾಕ್ಷಿಜ್ಞಾನದಲ್ಲಾದರೋ ನ ದೋಷಾಃ=ದೋಷಗಳು ಇಲ್ಲ.

**ಭಾವಾರ್ಥ—** ಹಿಂದೆ ಪ್ರಮಾಣಗಳಲ್ಲಿ ಪ್ರಾಮಾಣ್ಯವು ಪರೀಕ್ಷಾಸಹಾಯದಿಂದ ನಿರ್ಧಾರಿತವಾಗುತ್ತದೆ, ಎಂದು ಹೇಳಲಾಗಿದೆ. ಪರೀಕ್ಷಾ ಎಂದರೆ ಸಂವಾದ. ಸಜಾತೀಯ ಸಂವಾದ ಅಥವಾ ವಿಜಾತೀಯ ಸಂವಾದ. ''ಇದಂ ಜಲಂ'' ಎಂಬ ಜ್ಞಾನವು ದೂರದಿಂದ ಬಂದರೆ ಹತ್ತಿರ ಹೋಗಿ

ನೋಡುತ್ತೇವೆ. ಆಗಲೂ 'ಇದಂ ಜಲಂ' ಎನ್ನುವ ಜ್ಞಾನವು ಬಂದರೆ ಅದು ಸಜಾತೀಯ ಸಂವಾದ. ನೀರನ್ನು ಕುಡಿದ ಮೇಲೆ 'ಇದಂ ಜಲಂ, ಉದನ್ಯಾನಿವೃತ್ತಿಹೇತುತ್ವಾತ್' (ನೀರಡಿಗೆ ತಣಿದಿರುವುದರಿಂದ) ಎಂದು ಅನುಮಾನ ಮಾಡಿದರೆ ಅದು ವಿಜಾತೀಯಸಂವಾದ. ಇವೆರಡೂ ವಿಧದ ಸಂವಾದಗಳಿಂದ ಜಲಜ್ಞಾನದ ಪ್ರಾಮಾಣ್ಯವು ನಿರ್ಧಾರಿತವಾಗುತ್ತದೆ. ಆದರೆ ಈ ಸಂವಾದಗಳ ಬಗ್ಗೆಯೇ ಸಂದೇಹ ಬಂದಾಗ ಅದರ ಪರಿಹಾರಕ್ಕೆ ಮತ್ತೊಂದು ಪರೀಕ್ಷೆಯ ಸಹಕಾರ ಬೇಕು. ಹೀಗೆ ಅನವಸ್ಥಾ. ಇದು ಆಕ್ಷೇಪ. ಅದರ ಪರಿಹಾರ ಹೀಗೆ— ಜ್ಞಾನ ಎರಡು ವಿಧ, ವೃತ್ತಿರೂಪವಾದ ಜ್ಞಾನ, ಚೈತನ್ಯರೂಪವಾದ ಜ್ಞಾನ. ಹೊರಪ್ರಪಂಚದ ಜ್ಞಾನ ಅಂತಃಕರಣವೃತ್ತಿ ರೂಪವಾದುದು. ಇದು ಕೆಲವೊಮ್ಮೆ ಪ್ರಮಾವಾಗುತ್ತದೆ, ಮತ್ತೆ ಕೆಲವೊಮ್ಮೆ ಭ್ರಮೆಯಾಗುತ್ತದೆ. ಆದರೆ ಸಾಕ್ಷಿಜ್ಞಾನವು ಎಂದೂ ಭ್ರಮೆಯಾಗುವುದಿಲ್ಲ. ದುಃಖವಿದೆ ಎನ್ನುವ ಜ್ಞಾನ ಬಂದರೆ, ದುಃಖವು ಇದ್ದೇ ಇರುತ್ತದೆ. ದುಃಖವಿಲ್ಲದೆ ದುಃಖವಿದೆ ಎನ್ನುವ ಜ್ಞಾನವು ಬರುವುದಿಲ್ಲ. ಆದ್ದರಿಂದ ಸಾಕ್ಷಿಜ್ಞಾನದಲ್ಲಿ ಸಂದೇಹವಿಲ್ಲ. ಅದುವರೆಗಿನ ಜ್ಞಾನದ ಸತ್ಯಾಸತ್ಯತೆಗೆ ಪರೀಕ್ಷೆಯ ಅಗತ್ಯವಿದೆ. ಸಾಕ್ಷಿಜ್ಞಾನದಲ್ಲಿ ಅದರ ಅಗತ್ಯವಿಲ್ಲ. ಅಲ್ಲಿ ಪರೀಕ್ಷಾಪೇಕ್ಷೆ ಇಲ್ಲ. ಅನವಸ್ಥಾ ಪರಿಹಾರವಾಗುತ್ತದೆ.

ದೂರದಿಂದ ಜಲಜ್ಞಾನ ಬಂದಾಗ ಸಂದೇಹ ಬರಬಹುದು. ಹತ್ತಿರ ಹೋಗಿ ನೋಡಿದಾಗಲೂ ಸಂದೇಹ ಬರಬಹುದು. ಕುಡಿದಾಗ ನೀರಿನಿಂದ ಆಗುವ ಸುಖದ ಅನುಭವ ಬಂದಾಗ ಆ ಅನುಭವದಲ್ಲಿ ಸಂದೇಹವಿಲ್ಲ. ಪರೀಕ್ಷೆಯ ಅಪೇಕ್ಷೆಯೂ ಇಲ್ಲ. ಆದ್ದರಿಂದ ಪರೀಕ್ಷಾನವಸ್ಥಾ ಇಲ್ಲ.

**ಸುದೃಢೋ ನಿರ್ಣಯೋ ಯತ್ರ ಜ್ಞೇಯಂ ತತ್ ಸಾಕ್ಷಿದರ್ಶನಮ್ ।**
**ಇಚ್ಛಾ ಜ್ಞಾನಂ ಸುಖಂ ದುಃಖಂ(ಖ)ಭಯಾಭಯಕೃಪಾದಯಃ**
**॥ ೧೫೦ ॥**

**ಸಾಕ್ಷಿಸಿದ್ಧಾ ನ ಕಶ್ಚಿದ್ಧಿ ತತ್ರ ಸಂಶಯವಾನ್ ಕ್ವಚಿತ್ ।**
**ಯತ್ ಕ್ವಚಿದ್ ವ್ಯಭಿಚಾರೀ ಸ್ಯಾದ್ ದರ್ಶನಂ ಮಾನಸಂ**
**ಹಿ ತತ್ ॥ ೧೫೧ ॥**

ಯತ್ರಃ(ಯಃ)=ಯಾವುದು ಸುದೃಢಃ=ಬಾಧವಿಲ್ಲದ ನಿರ್ಣಯಃ= ನಿರ್ಧಾರಾತ್ಮಕವಾದ ಜ್ಞಾನವೋ ತತ್=ಅದು ಸಾಕ್ಷಿದರ್ಶನಂ=ಸಾಕ್ಷಿ ಜ್ಞಾನವೆಂದು ಜ್ಞೇಯಂ=ತಿಳಿಯಲ್ಪಡಬೇಕು. ಇಚ್ಛಾ, ಜ್ಞಾನ, ಸುಖ, ದುಃಖ, ಭಯ, ಕೃಪೆ ಇವೇ ಮೊದಲಾದವುಗಳು, ಸಾಕ್ಷಿಜ್ಞಾನದಿಂದ ನಿರ್ಣಯಿಸ ಲ್ಪಡುತ್ತವೆ. ತತ್ರ=ಈ ವಿಷಯಗಳಲ್ಲಿ ಕಶ್ಚಿತ್=ಯಾರು ಸಂಶಯವಾನ್ ನ=ನನ್ನ ಅನುಭವಕ್ಕೆ ಬಂದ ಇದು ಸುಖ ಹೌದೋ ಅಲ್ಲವೋ, ಎನ್ನುವ ಸಂದೇಹವುಳ್ಳವನು ಆಗುವುದಿಲ್ಲ. ಯತ್=ಯಾವ ಜ್ಞಾನವು ಕ್ವಚಿತ್=ಯಾವು ದಾದರೊಂದು ವಿಷಯದಲ್ಲಿ ವ್ಯಭಿಚಾರೀ ಸ್ಯಾತ್=ಅರ್ಥವ್ಯಭಿಚಾರಿ ಯಾದಲ್ಲಿ ಅರ್ಥಾತ್ ಬಾಧಿತವಾದಲ್ಲಿ ತತ್ ದರ್ಶನಂ=ಆ ಜ್ಞಾನವು ಮಾನಸಂ=ಮನೋವೃತ್ತಿರೂಪವಾದುದು, ಸಾಕ್ಷಿರೂಪವಲ್ಲ.

ಭಾವಾರ್ಥ— ಹಗ್ಗವನ್ನು ನೋಡಿ ''ಇದು ಹಾವು'' ಎನ್ನುವ ಮಾನಸಜ್ಞಾನ ಬರುತ್ತದೆ. ವಿಮರ್ಶೆಮಾಡಿ ನೋಡಿದ ಮೇಲೆ ಈ ಜ್ಞಾನವು ತಪ್ಪು, ಇದು ಹಾವಲ್ಲ, ಹಗ್ಗ ಎಂದು ಮೊದಲು ಬಂದ ಜ್ಞಾನವು ಬಾಧಿತ ವಾಗುತ್ತದೆ. ಆದರೆ ಸಾಕ್ಷಿಜ್ಞಾನವು ಹೀಗೆ ಬಾಧಿತವಾಗುವುದೇ ಇಲ್ಲ. ಅದು ಹೇಗೆ ಬಂತೋ ವಸ್ತುಸ್ಥಿತಿಯೂ ಹಾಗೇ ಇರುತ್ತದೆ. ಆ ಜ್ಞಾನಕ್ಕೆ ತಿದ್ದುಪಡಿ ಇಲ್ಲ. ಮನೋವೃತ್ತಿಗಳಾದ ಜ್ಞಾನ, ಇಚ್ಛೆ, ಕೋಪ–ತಾಪಗಳೆಲ್ಲವೂ ಸಾಕ್ಷಿಯಿಂದ ತಿಳಿಯಲ್ಪಡುತ್ತವೆ. ಅವುಗಳು ಇಲ್ಲದೆಯೇ ಅವುಗಳನ್ನು ಸಾಕ್ಷಿಯು ಗ್ರಹಿಸುವು ದಿಲ್ಲ. ಅಥವಾ ಸುಖವನ್ನು ದುಃಖವೆಂದೋ ದುಃಖವನ್ನು ಸುಖವೆಂದೋ ಸಾಕ್ಷಿಯು ತಪ್ಪಾಗಿ ಗ್ರಹಿಸುವುದಿಲ್ಲ. ಯಾವುದು ಹೇಗಿರುತ್ತದೋ ಅದನ್ನು ಹಾಗೆಯೇ ಗ್ರಹಿಸುತ್ತದೆ. ಆದ್ದರಿಂದ ಸಾಕ್ಷಿಜ್ಞಾನದ ಮೇಲೆ ಎಂದೂ ಸಂದೇಹ ಬರುವುದಿಲ್ಲ. ಅದನ್ನು ಪೂರ್ಣವಾಗಿ ನಂಬಬಹುದು.

ಕಣ್ಣಿನಿಂದ ಹಗ್ಗದಲ್ಲಿ ಹಾವಿನ ಭ್ರಮೆಯು ಬಂದು ಅದು ಬಾಧಿತವಾದರೆ ಅಂತಹ ಜ್ಞಾನಗಳೆಲ್ಲವೂ ಮಾನಸಜ್ಞಾನಗಳು. ಮಾನಸಜ್ಞಾನವು ತಪ್ಪಾದರೂ ತೊಂದರೆ ಇಲ್ಲ, ಆದರೆ ಸಾಕ್ಷಿಜ್ಞಾನ ಒಂದೊಮ್ಮೆ ಬಾಧಿತವಾದರೆ ಅದರಲ್ಲಿ ನಂಬಿಕೆಯೇ ಕಳಚಿ ಬೀಳುತ್ತದೆ. ಇದರಿಂದ ನಮಗೆ ಬಂದಿರುವ ಯಾವ ಜ್ಞಾನ ಸರಿ, ಯಾವುದು ತಪ್ಪು ಎನ್ನುವ ನಿರ್ಧಾರವೇ ಆಗದೆ ಜ್ಞಾನ ಬಂದಮೇಲೆ ವಿಶ್ವಾಸದಿಂದ ಪ್ರವೃತ್ತಿಯೇ ಆಗಲಿಕ್ಕಿಲ್ಲ.

**ಮನಶ್ಚಕ್ಷುರ್ದರ್ಶನಾದೇರಪಿ ಯತ್ರೈವ ಸಾಕ್ಷಿಣಾ ।**
**ಪ್ರಾಮಾಣ್ಯಂ ಸುಗೃಹೀತಂ ಸ್ಯಾತ್ ತತ್ ಪರೀಕ್ಷಿತದರ್ಶನಮ್ ॥೧೫೨॥**

ಮನಶ್ಚಕ್ಷುರ್ದರ್ಶನಾದೇಃ ಅಪಿ=ಮನಸ್ಸು ಹಾಗೂ ಚಕ್ಷುರಾದಿ ಇಂದ್ರಿಯಗಳಿಂದಾಗಲೀ ಅನುಮಾನದಿಂದಾಗಲೀ ಶಬ್ದದಿಂದಾಗಲೀ ಬಂದಿರುವ ಜ್ಞಾನಗಳ ಮಧ್ಯದಲ್ಲಿ ಯತ್ರೈವ=ಯಾವ ಜ್ಞಾನದಲ್ಲಿ ಸಾಕ್ಷಿಣಾ ಪ್ರಾಮಾಣ್ಯಂ ಸುಗೃಹೀತಂ=ಪರೀಕ್ಷಾಸಹಕಾರದಿಂದಾಗಿ ಸಾಕ್ಷಿಯಿಂದ ಪ್ರಾಮಾಣ್ಯವು ನಿಶ್ಚಿತವಾಗುವುದೋ ತತ್ ಪರೀಕ್ಷಿತದರ್ಶನಂ=ಅಂತಹ ಪರೀಕ್ಷಿತಜ್ಞಾನವು ಪ್ರಮಾಣವಾಗುತ್ತದೆ.

**ನ ಜ್ಞಾನದೃಷ್ಟಿಮಾತ್ರೇಣ ಪ್ರಾಮಾಣ್ಯಂ ತಸ್ಯ ದೃಶ್ಯತೇ ।**
**ನಿಯಮೇನ ಸುಖಾದ್ಯೇಷು ಪ್ರಾಮಾಣ್ಯಂ ಸಾಕ್ಷಿಗೋಚರಮ್ ॥೧೫೩॥**

ಜ್ಞಾನದೃಷ್ಟಿಮಾತ್ರೇಣ=ಜ್ಞಾನದ ಪ್ರತ್ಯಕ್ಷಬಂದ ಮಾತ್ರಕ್ಕೆ ತಸ್ಯ ಪ್ರಾಮಾಣ್ಯಂ=ಆ ಜ್ಞಾನಗತವಾದ ಪ್ರಾಮಾಣ್ಯವೂ ನ ದೃಶ್ಯತೇ= ಗ್ರಹಿಸಲ್ಪಡುವುದಿಲ್ಲ. ಆದರೆ, ಸುಖಾದ್ಯೇಷು=ಸುಖಾದಿಗಳ ಬಗ್ಗೆ ಬರುವ ಸಾಕ್ಷಿಗೋಚರಂ=ಸಾಕ್ಷಿಜ್ಞಾನದಲ್ಲಿ ವಿಷಯವಾದ ಪ್ರಾಮಾಣ್ಯಂ= ಪ್ರಾಮಾಣ್ಯವು ನಿಯಮೇನ ಗ್ರಹಿಸಲ್ಪಡುತ್ತದೆ.

**ಭಾವಾರ್ಥ—** ಜ್ಞಾನವು ಮನೋವೃತ್ತಿರೂಪ, ಜಡ. ಆದರಿಂದಾಗಿಯೇ ಅದು ಸ್ವಪ್ರಕಾಶವಲ್ಲ. ಅದರ ಪ್ರಕಾಶ ಸಾಕ್ಷಿಯಿಂದಾಗುತ್ತದೆ. ಅಂದರೆ ಜ್ಞಾನ ಬಂದಿದೆ, ಎಂದು ತಿಳಿಯುವುದು ಸಾಕ್ಷಿಯಿಂದ. ಆ ಸಾಕ್ಷಿಯು ಜ್ಞಾನವನ್ನು ಗ್ರಹಿಸಿದಾಗ ಅದರಲ್ಲಿರುವ ಪ್ರಾಮಾಣ್ಯವನ್ನೂ ತಿಳಿಸುತ್ತದೆ. ಆದರೆ, ಕೆಲವೊಮ್ಮೆ ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ. ಉದಾಹರಣೆಗೆ— ವೇದದಿಂದ ಜ್ಞಾನವು ವೈದಿಕರಿಗೂ ಬರುತ್ತದೆ, ಅವೈದಿಕರಾದ ಬೌದ್ಧರಿಗೂ ಬರುತ್ತದೆ. ವೈದಿಕರ ಸಾಕ್ಷಿಯು ಅಜ್ಞಾನವನ್ನು ಗ್ರಹಿಸುವಾಗ ಅದರಲ್ಲಿರುವ ಪ್ರಾಮಾಣ್ಯವನ್ನೂ ಗ್ರಹಿಸುತ್ತದೆ. ಬೌದ್ಧರ ಸಾಕ್ಷಿಯು ಜ್ಞಾನವನ್ನಷ್ಟೇ ಗ್ರಹಿಸುತ್ತದೆ, ತದ್ಗತವಾದ ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ. ವೇದ ಹೇಳುವುದೇ

ಸುಳ್ಳು ಎನ್ನುವ ತಪ್ಪುಕಲ್ಪನೆ ಅವರಲ್ಲಿದೆ. ಇದು ಪ್ರಾಮಾಣ್ಯವನ್ನು ಗ್ರಹಿಸದಂತೆ ಮಾಡುತ್ತದೆ. ಆ ತಪ್ಪುಗ್ರಹಿಕೆಯು ಹೋದರೆ ಅವರ ಸಾಕ್ಷಿಯೂ ಪ್ರಾಮಾಣ್ಯ ವನ್ನು ಗ್ರಹಿಸುತ್ತದೆ. ಇದರಿಂದ ತಿಳಿದುಬರುವ ವಿಷಯ— ಜ್ಞಾನವು ಸ್ವಪ್ರಕಾಶವಲ್ಲ, ಸಾಕ್ಷಿಗ್ರಾಹ್ಯ. ಸಾಕ್ಷಿಯು ಪ್ರತಿಬಂಧಕವಿದ್ದಾಗ ಜ್ಞಾನವನ್ನು ಮಾತ್ರ ಗ್ರಹಿಸಿ ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ. ಪ್ರತಿಬಂಧಕವು ಪರೀಕ್ಷೆ ಯಿಂದ ಪರಿಹಾರವಾದಾಗ ಅದೇ ಸಾಕ್ಷಿಯು ಪ್ರಾಮಾಣ್ಯವನ್ನು ಗ್ರಹಿಸುತ್ತದೆ.

ಮನೋವೃತ್ತಿರೂಪಜ್ಞಾನದಲ್ಲಿರುವ ಪ್ರಾಮಾಣ್ಯದ ಜ್ಞಾನವು ಪರೀಕ್ಷಾ ಸಹಕೃತವಾದ ಸಾಕ್ಷಿಯಿಂದ ಸಿದ್ಧವಾಗುವಂತೆ ಸಾಕ್ಷಿಜ್ಞಾನದ ಪ್ರಾಮಾಣ್ಯ ಗ್ರಹಕ್ಕೂ ಪರೀಕ್ಷಾಸಹಕಾರ ಬೇಕಿಲ್ಲ. ಸಾಕ್ಷಿಯಿಂದ ದುಃಖಾದಿಗಳ ಜ್ಞಾನ ಬರುತ್ತದೆ. ಅದು ಎಂದೂ ಅಪ್ರಮಾಣವಾಗಿ ಕಂಡಿಲ್ಲ. ಆದ್ದರಿಂದ ಅದರಲ್ಲಿ ಸರಿಯೋ ತಪ್ಪೋ ಎಂಬ ಸಂದೇಹವೇ ಇಲ್ಲ. ಪರೀಕ್ಷೆಯ ಅಗತ್ಯ ವಿಲ್ಲ.

**ಸ್ವಪ್ರಾಮಾಣ್ಯಂ ಸದಾ ಸಾಕ್ಷೀ ಪಶ್ಯತ್ಯೇವ ಸುನಿಶ್ಚಯಾತ್ ।**
**ಜ್ಞಾನಸ್ಯ ಗ್ರಾಹಕೇಣೈವ ಸಾಕ್ಷಿಣಾ ಮಾನತಾಮಿತೇಃ ॥ ೧೫೪ ॥**

ಸಾಕ್ಷೀ=ಸಾಕ್ಷಿಯು ಸ್ವಪ್ರಾಮಾಣ್ಯಂ=ತನ್ನ ಪ್ರಾಮಾಣ್ಯವನ್ನು ಸುನಿಶ್ಚಯಾತ್ ಸದಾ ಪಶ್ಯತ್ಯೇವ=ನಿಶ್ಚಯರೂಪವಾಗಿ ಸದಾ ಗ್ರಹಿಸಿಯೇ ತೀರುತ್ತದೆ. ಜ್ಞಾನಸ್ಯ ಗ್ರಾಹಕೇಣ ಸಾಕ್ಷಿಣೈವ=ಮನೋವೃತ್ತಿರೂಪವಾದ ಜ್ಞಾನದ ಗ್ರಾಹಕವಾದ ಸಾಕ್ಷಿಯಿಂದಲೇ ಮಾನತಾಮಿತೇಃ=ಪ್ರಾಮಾಣ್ಯವೂ ಗೃಹೀತವಾಗುವುದರಿಂದಾಗಿ ಜ್ಞಾನಗಳಿಗೆ ಸ್ವತಃ ಪ್ರಾಮಾಣ್ಯವೂ ಇದೆ.

ಭಾವಾರ್ಥ— ಮನೋವೃತ್ತಿರೂಪವಾದ ಘಟಾದಿಜ್ಞಾನಗಳ ಪ್ರಾಮಾಣ್ಯವು ಆ ಜ್ಞಾನಗಳನ್ನು ಗ್ರಹಿಸುವ ಸಾಕ್ಷಿಯಿಂದಲೇ ಗ್ರಹಿಸ ಲ್ಪಡುತ್ತದೆ. ಆದ್ದರಿಂದ ಆ ಜ್ಞಾನಗಳ ಪ್ರಾಮಾಣ್ಯವು ಸ್ವತಃ ಅಂದರೆ ಜ್ಞಾನಗ್ರಾಹಕವಾದ ಸಾಕ್ಷಿಗ್ರಾಹ್ಯ. ಸಾಕ್ಷಿಯ ಪ್ರಾಮಾಣ್ಯವನ್ನು ಗ್ರಹಿಸಲು ಮತ್ತೊಂದು ಪ್ರಮಾಣದ ಅಗತ್ಯವಿಲ್ಲ. ಅದು ತನ್ನ ಪ್ರಾಮಾಣ್ಯವನ್ನು ತಾನೇ ನಿರ್ಧರಿಸುತ್ತದೆ. ಉದಾಹರಣೆಗೆ— 'ಇದಂ ಜಲಂ' ಎಂಬ ಜ್ಞಾನವನ್ನೂ ಅದರ ಪ್ರಾಮಾಣ್ಯವನ್ನೂ ಸಾಕ್ಷಿಯು ಗ್ರಹಿಸುತ್ತದೆ— 'ಇದಂ ಜಲಂ ಇತಿ

ಜ್ಞಾನಂ ಪ್ರಮಾಣಂ'' ಇದು ಪ್ರಾಮಾಣ್ಯವನ್ನು ಗ್ರಹಿಸುವ ಸಾಕ್ಷಿಜ್ಞಾನ. ಅದರ ಪ್ರಾಮಾಣ್ಯವನ್ನು ಗ್ರಹಿಸಲು ಅಥವಾ ಆ ಸಾಕ್ಷಿಜ್ಞಾನವನ್ನು ಗ್ರಹಿಸಲು ಇನ್ನೊಂದು ಜ್ಞಾನದ ಅಗತ್ಯವಿಲ್ಲ. ಆ ಸಾಕ್ಷಿಜ್ಞಾನವು ಸ್ವಪ್ರಕಾಶವಾದುದರಿಂದ ತನ್ನನ್ನು ಹಾಗೂ ತನ್ನ ಪ್ರಾಮಾಣ್ಯವನ್ನು ತಾನೇ ಗ್ರಹಿಸುತ್ತದೆ.

**ದೋಷಾಭಾವೇ ಪ್ರಮಾಣತ್ವಂ ದೋಷಾಭಾವಸ್ಯ ಸಾಕ್ಷಿಣಾ ।**
**ನಿಶ್ಚಿತತ್ವಂ ಕ್ವಚಿಚ್ಚೈವ ಸ್ವತಃ ಪ್ರಾಮಾಣ್ಯಮಿಷ್ಯತೇ ॥ ೧೫೫ ॥**

'ದೋಷಾಭಾವೇ=ದೋಷವಿಲ್ಲದಿದ್ದಾಗ ಅಸ್ಯ ಪ್ರಾಮಾಣ್ಯಂ=ಈ ಜ್ಞಾನಕ್ಕೆ ಪ್ರಾಮಾಣ್ಯವಿದೆ' ಎಂದು ಪರೀಕ್ಷಾ ಇಲ್ಲದಿರುವಾಗ ಸಾಕ್ಷಿಯು ಜ್ಞಾನದಲ್ಲಿ ಪ್ರಾಮಾಣ್ಯವನ್ನು ಸಮ್ಮುಗ್ಧವಾಗಿ ಗ್ರಹಿಸುತ್ತದೆ. ಈ ಜ್ಞಾನವು ಪ್ರಮಾಣವೇ ಆಗಿದೆ, ಎಂದು ನಿರ್ಧಾರವಾಗಿ ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ. ಕ್ವಚಿದೇವ='ಪರೀಕ್ಷೆ'ಯ ಸಹಕಾರ ಸಿಕ್ಕಾಗ ಪರೀಕ್ಷೆಯಿಂದ ದೋಷಾಭಾವಸ್ಯ=ದೋಷಾಭಾವದ ನಿಶ್ಚಿತತ್ವಂ=ನಿಶ್ಚಯವಾದಾಗ ಪ್ರಾಮಾಣ್ಯಂ ಸ್ವತಃ ಇಷ್ಯತೇ=ಜ್ಞಾನಗ್ರಾಹಕವಾದ ಸಾಕ್ಷಿಯೇ ಪ್ರಾಮಾಣ್ಯವನ್ನು ಗ್ರಹಿಸುತ್ತದೆ, ಎಂದು ಅಂಗೀಕರಿಸಲ್ಪಡುತ್ತದೆ.

**ಭಾವಾರ್ಥ**—ಜ್ಞಾನವನ್ನು ಗ್ರಹಿಸುವ ಸಾಕ್ಷಿಯು ಪ್ರಾಮಾಣ್ಯವನ್ನೂ ಗ್ರಹಿಸುತ್ತದೆ. ಕೆಲವೊಮ್ಮೆ ಸಮ್ಮುಗ್ಧವಾಗಿ ಅಂದರೆ 'ದೋಷವಿಲ್ಲದಿದ್ದರೆ ಇದು ಪ್ರಮಾಣ' ಎಂದಿಷ್ಟೇ ಗ್ರಹಿಸುತ್ತದೆ. ಉದಾಹರಣೆಗೆ, ನಮಗೆ ಪ್ರತಿನಿತ್ಯ ಅನೇಕ ಜ್ಞಾನಗಳು ಬರುತ್ತವೆ. ಅವುಗಳಲ್ಲಿ ಕೆಲವು ಪ್ರವೃತ್ತಿಗೆ ಕಾರಣವಾಗುತ್ತವೆ, ಕೆಲವು ಆಗುವುದಿಲ್ಲ. ರಸ್ತೆಯಲ್ಲಿ ಹೋಗುವಾಗ ಅನೇಕ ಅಪರೂಪದ ದೃಶ್ಯಗಳನ್ನು ನೋಡುತ್ತೇವೆ, ಹೋಗುತ್ತೇವೆ. ಆ ಜ್ಞಾನಗಳು ಸರಿಯೋ ತಪ್ಪೋ ಎನ್ನುವ ವಿಚಾರವನ್ನು ಮಾಡಲು ಹೋಗುವುದಿಲ್ಲ. ಅಂತಹ ಸಂದರ್ಭದಲ್ಲಿ ಆ ಜ್ಞಾನಗಳ ಪ್ರಾಮಾಣ್ಯವನ್ನು ಸಾಕ್ಷಿಯು ಸಮ್ಮುಗ್ಧವಾಗಿ ಗ್ರಹಿಸುತ್ತದೆ. ಆದರೆ ಕೆಲವೊಮ್ಮೆ ಜ್ಞಾನದಿಂದ ನಾವು ಪ್ರವೃತ್ತಿ ಮಾಡಬೇಕಾಗಿರುತ್ತದೆ. ಉದಾಹರಣೆಗೆ— ಹಣದ ಅವಶ್ಯಕತೆ ಇದ್ದಾಗ ಮನೆಯಲ್ಲಿ ಇದ್ದ ಒಡವೆಗಳನ್ನು ಅಡವಿಡಬೇಕಾಗಿ ಬಂದರೆ 'ಇದು ಬಂಗಾರ' ಎಂದಿಷ್ಟೇ ತಿಳಿಯದೆ ನಿಜವಾಗಿಯೂ ಅದು ಬಂಗಾರವೋ, ಖೋಟಾ ಬಂಗಾರವೋ

ಎಂದು ನಿರ್ಧರಿಸಲು ಅದನ್ನು ಪರೀಕ್ಷೆಗೆ ಒಡ್ಡಿ ನಮ್ಮ ಸಂದೇಹಗಳನ್ನು ಪರಿಹರಿಸಿಕೊಳ್ಳುತ್ತೇವೆ. ಹೀಗೆ ಪರೀಕ್ಷೆಯಿಂದ ಪ್ರತಿಬಂಧಕನಿರಾಸವಾದ ಮೇಲೆ ''ಇದು ಬಂಗಾರ'' ಎಂಬ ಜ್ಞಾನದಲ್ಲಿ ಪ್ರಾಮಾಣ್ಯವನ್ನೂ ಸಾಕ್ಷಿಯು ನಿರ್ಧರಿಸುತ್ತದೆ. ಇಲ್ಲಿ ಪರೀಕ್ಷೆಯು ಪ್ರತಿಬಂಧಕನಿರಾಸಕವೇ ಹೊರತು, ಪ್ರಾಮಾಣ್ಯನಿಶ್ಚಾಯಕವಲ್ಲ. ಪ್ರತಿಬಂಧಕ ಹೋದಾಗ ಸಾಕ್ಷಿಯೇ ಪ್ರಾಮಾಣ್ಯ ವನ್ನು ನಿರ್ಧರಿಸುತ್ತದೆ.

**ಅತೋ ನ ಸರ್ವಮಾನಾನಾಂ ಪ್ರಾಮಾಣ್ಯಂ ನಿಶ್ಚಿತಂ ಭವೇತ್।**
**ಸಾಕ್ಷಿಣಾ ನಿಶ್ಚಿತಂ ಯತ್ರ ತತ್ ಪ್ರಾಮಾಣ್ಯಂ(ಣ್ಯ)**
**ಸ್ವಲಕ್ಷಣಮ್ ॥ ೧೫೬ ॥**

ಅತಃ=ಆದ್ದರಿಂದ ಸರ್ವಪ್ರಮಾಣಾನಾಂ ಪ್ರಾಮಾಣ್ಯಂ=ಎಲ್ಲಾ ಪ್ರಮಾಣಗಳ ಪ್ರಾಮಾಣ್ಯವು ಸಾಕ್ಷಿಣಾ ನಿಶ್ಚಿತಂ ನ ಭವೇತ್=ಸಾಕ್ಷಿಯಿಂದ ನಿರ್ಧಾರಿತವಾಗಿರುವುದಿಲ್ಲ. ಯತ್ರ=(ಯದಾ) ಯಾವಾಗ ಸಾಕ್ಷಿಣಾ ನಿಶ್ಚಿತಂ=ಸಾಕ್ಷಿಯಿಂದ ನಿರ್ಧಾರಿತವಾಗುವುದೋ ತತ್=ಆಗ ಮಾತ್ರ ಸ್ವಲಕ್ಷಣಂ=ಅಪ್ರಾಮಾಣ್ಯಕ್ಕಿಂತ ಭಿನ್ನವಾದ ಪ್ರಾಮಾಣ್ಯವು ಸಿದ್ಧವಾಗುತ್ತದೆ.

**ನಹಿ ಕಶ್ಚಿತ್ ಸುಖಾದ್ಯೇಷು ಸಂಶಯಂ ಕುರುತೇ ಜನಃ ।**
**ನಚೈವಾಖಿಲಮಾನಾನಿ ನಿಶ್ಚಿನೋತ್ಯಖಿಲೋ ಜನಃ ।**
**ತಸ್ಮಾದನುಭವಾರೂಢಂ ಕಿಮರ್ಥಮಪಲಪ್ಯತೇ ॥ ೧೫೭॥**

ಯಸ್ಮಾತ್=ಯಾವಕಾರಣದಿಂದ ಕಶ್ಚಿತ್ ಜನಃ=ಯಾವ ವ್ಯಕ್ತಿಯೂ ಸುಖಾದ್ಯೇಷು=ಸುಖಾದಿ ಆಂತರಪದಾರ್ಥಗಳಲ್ಲಿ ಸಂಶಯಂ ನ ಕುರುತೇ= ಸಂದೇಹವನ್ನು ಪಡುವುದಿಲ್ಲ, ಯಸ್ಮಾತ್=ಯಾವ ಕಾರಣದಿಂದ ಅಖಿಲೋ ಜನಃ=ಸಕಲಜನಸಮುದಾಯವು ಅಖಿಲಮಾನಾನಿ=ಎಲ್ಲ ವೃತ್ತಿಜ್ಞಾನ ಗಳನ್ನೂ ನ ನಿಶ್ಚಿನೋತಿ=ಪ್ರಮಾಣಗಳೆಂದು ನಿರ್ಧರಿಸುವುದಿಲ್ಲವೋ ತಸ್ಮಾತ್=ಆದ್ದರಿಂದ ಅನುಭವಾರೂಢಂ=ಎಲ್ಲರ ಅನುಭವಸಿದ್ಧವಾದ ಈ ವಿಷಯವು ಕಿಮರ್ಥಂ=ಏತಕ್ಕಾಗಿ ಅಪಲಪ್ಯತೇ=ಅಪಲಾಪ ಮಾಡಲ್ಪಡು ತ್ತದೆ?

ಭಾವಾರ್ಥ— ಸುಖ ದುಃಖಾದಿಗಳ ಸಂವೇದನೆಯು ಸಾಕ್ಷಿಯಿಂದ ಬಂದಾಗ 'ನನಗೆ ಸುಖ ಇದೆಯೋ ಇಲ್ಲವೋ' ಎಂದು ಯಾರೂ ಸಂದೇಹಪಡುವುದಿಲ್ಲ. ಇದರಿಂದ ಸಾಕ್ಷಿಜ್ಞಾನಪ್ರಾಮಾಣ್ಯವು ಪರೀಕ್ಷೆಯ ಅಗತ್ಯವೇ ಇಲ್ಲದ ಸಾಕ್ಷಿಯಿಂದಲೇ ನಿರ್ಧಾರಿತವಾಗುತ್ತದೆ, ಎನ್ನಬಹುದು. ಅಂತೆಯೇ ವೃತ್ತಿಜ್ಞಾನಗಳು ಬಂದಮಾತ್ರಕ್ಕೆ ಈ ಎಲ್ಲ ಜ್ಞಾನಗಳೂ ಪ್ರಮಾಣ ಗಳು, ಎಂದು ಯಾರೂ ನಿರ್ಧಾರಕ್ಕೆ ಬರುವುದಿಲ್ಲ. ಅವುಗಳನ್ನು ಪರಿಶೀಲಿಸಿ ಪ್ರಾಮಾಣ್ಯಾಪ್ರಾಮಾಣ್ಯಗಳನ್ನು ನಿರ್ಧರಿಸುತ್ತಾರೆ. ಹೀಗೆ ವೃತ್ತಿಜ್ಞಾನ ಪ್ರಾಮಾಣ್ಯವು ಪರೀಕ್ಷಾಸಹಕೃತವಾದ ಸಾಕ್ಷಿಯಿಂದಲೇ ತಿಳಿಯಲ್ಪಡುತ್ತದೆ. ಇದು ಎಲ್ಲರ ಅನುಭವ. ಇದನ್ನೇಕೆ ಅಪಲಾಪ ಮಾಡಬೇಕು?

**ದೋಷಾಭಾವಾದಿಕಂ ಚೈವ ಸಾಕ್ಷೀ ಸಮ್ಯಕ್ ಪ್ರಪಶ್ಯತಿ ।**
**ತತ್ ಪರೀಕ್ಷಿತಮಾನೇನ ನ ದೋಷೋ ವಿಷ್ಣವಿ ಕ್ವಚಿತ್ ।**
**ಅಪರೀಕ್ಷಿತದೃಷ್ಟಿಸ್ತು ಕಸ್ಮಿನ್ನರ್ಥೇ ನ ವಿದ್ಯತೇ ॥ ೧೩೮ ॥**

ದೋಷಾಭಾವಾದಿಕಂ ಚ=ದೋಷಗಳು ಇಲ್ಲ ಎಂಬುದನ್ನೂ ಪ್ರಾಮಾಣ್ಯವನ್ನೂ ಸಾಕ್ಷ್ಯೇವ=ಸಾಕ್ಷೀಂದ್ರಿಯವೇ ಸಮ್ಯಕ್=ಸರಿಯಾಗಿ ಪ್ರಪಶ್ಯತಿ=ತಿಳಿಯುತ್ತದೆ. ಆದ್ದರಿಂದ ಅನವಸ್ಥಾದೋಷವಿಲ್ಲ. ತತ್ಪರೀಕ್ಷಿತ-ಮಾನೇನ=ಸಾಕ್ಷಿಯಿಂದ ಪರೀಕ್ಷಿತವಾದ ಪ್ರಮಾಣಗಳಿಂದ (ಅಂತಹ ಪ್ರಮಾಣಗಳ ಆಧಾರದಿಂದ) ವಿಷ್ಣವಿ=ವಿಷ್ಣುವಿನಲ್ಲಿ ಕ್ವಚಿದಪಿ=ಅವತಾರ ರೂಪಗಳಲ್ಲೂ ದೋಷೋ ನ=ದೋಷವಿಲ್ಲ. ಅಪರೀಕ್ಷಿತದೃಷ್ಟಿಸ್ತು=ಪರೀಕ್ಷೆಗೆ ಒಳಪಡದ ಪ್ರತ್ಯಕ್ಷವು ಕಸ್ಮಿನ್ನರ್ಥೇ ನ ವಿದ್ಯತೇ=ಯಾವ ವಿಷಯದಲ್ಲಿ ತಾನೇ ಇಲ್ಲ! ಶುಕ್ತಿರಜತವೂ ಅಪರೀಕ್ಷಿತಪ್ರತ್ಯಕ್ಷದಿಂದ ತಿಳಿಯಲ್ಪಡುತ್ತದೆ. ಆದರೆ ಅದು ಇರಬೇಕಾಗಿಲ್ಲ. ಆದ್ದರಿಂದ ಪರೀಕ್ಷಿತಪ್ರತ್ಯಕ್ಷದಿಂದ ಮಾತ್ರ ವಸ್ತು ಸಿದ್ಧವಾಗುತ್ತದೆ.

**ಉಪಜೀವ್ಯವು ಪ್ರಬಲ**

**ತತ್ ಪ್ರತ್ಯಕ್ಷವಿರುದ್ಧಾರ್ಥೇ ನಾಗಮಸ್ಯಾಪಿ ಮಾನತಾ ।**
**ಉಪಜೀವ್ಯಮಕ್ಷಜಂ ಯತ್ರ ತದನ್ಯತ್ರ ವಿಪರ್ಯಯಃ ॥ ೧೩೯ ॥**

ಯತ್ರ–ಯದಾ=ಯಾವಾಗ ಅಕ್ಷಜಂ=ಪ್ರತ್ಯಕ್ಷವು ಉಪಜೀವ್ಯಂ= ಆಗಮಕ್ಕೆ ಉಪಜೀವ್ಯವಾಗುವುದೋ ತತ್ರ=ಆಗ ಪ್ರತ್ಯಕ್ಷವಿರುದ್ಧಾರ್ಥೇ= ಪ್ರತ್ಯಕ್ಷಕ್ಕೆ ವಿರುದ್ಧವಾದ ವಿಷಯದಲ್ಲಿ ಆಗಮಸ್ಯಾಪಿ=ಆಗಮಕ್ಕೂ ಮಾನತಾ ನ=ಪ್ರಾಮಾಣ್ಯವಿಲ್ಲ. ತದನ್ಯತ್ರ=ಹಿಂದೆ ಹೇಳಿರುವ ಉಪಜೀವ್ಯ–ಉಪಜೀವಕಭಾವ ಇಲ್ಲದಿರುವಲ್ಲಿ ಅರ್ಥಾತ್ ಆಗಮವೇ ಪ್ರತ್ಯಕ್ಷಕ್ಕೆ ಉಪಜೀವ್ಯವಾಗಿದ್ದಲ್ಲಿ ಬಾಧ್ಯ–ಬಾಧಕಭಾವಕ್ಕೂ ವಿಪರ್ಯಯಃ= ವ್ಯತ್ಯಾಸವು ಇರುತ್ತದೆ.

ಭಾವಾರ್ಥ— ಇದುವರೆಗೆ, ಅವತಾರರೂಪಗಳಲ್ಲಿ ದೋಷದರ್ಶನವು ಪರೀಕ್ಷಿತವಾದ ಜ್ಞಾನಿಗಳ ಪ್ರತ್ಯಕ್ಷಕ್ಕೆ ಹಾಗೂ ಆಗಮಕ್ಕೆ ವಿರುದ್ಧವಾಗಿರುವುದ ರಿಂದ ಅಪ್ರಮಾಣ, ಎನ್ನಲಾಯಿತು. ಆದರೆ ಹಿಂದೆ ಜಿಜ್ಞಾಸಾಧಿಕರಣದಲ್ಲಿ ಪ್ರತ್ಯಕ್ಷಕ್ಕೆ ವಿರುದ್ಧವಾದುದರಿಂದ 'ತತ್ತ್ವಮಸಿ' ಎಂಬ ಆಗಮವು ಪ್ರತೀತಾರ್ಥದಲ್ಲಿ ಅಪ್ರಮಾಣ ಎಂದು ಹೇಳಲಾಗಿದೆ. ಇಲ್ಲಿ ಆಗಮಕ್ಕೆ ವಿರುದ್ಧವಾದುದರಿಂದ ಪ್ರತ್ಯಕ್ಷವು ಅಪ್ರಮಾಣ, ಎನ್ನಲಾಗಿದೆ. ಇದು ಪರಸ್ಪರ ವಿರುದ್ಧ. ಅದರ ಪರಿಹಾರ ಇಲ್ಲಿದೆ. ಪ್ರತ್ಯಕ್ಷವು ಆಗಮಕ್ಕೆ ಉಪಜೀವ್ಯ ವಾಗಿದ್ದರೆ, ಆಗಮವು ಸ್ವಭಾವತಃ ಪ್ರಬಲವಾದರೂ ಆ ಪ್ರತ್ಯಕ್ಷಕ್ಕೆ ವಿರುದ್ಧವಾದರೆ ಅಪ್ರಮಾಣವಾಗುತ್ತದೆ. ಆಗಮವೇ ಪ್ರತ್ಯಕ್ಷಕ್ಕೆ ಉಪಜೀವ್ಯ ವಾದರೆ ಆಗ ಆಗಮವು ಪ್ರಬಲ, ಪ್ರತ್ಯಕ್ಷ ದುರ್ಬಲ. ಪ್ರಕೃತದಲ್ಲಿ ದೋಷಗ್ರಾಹಿಪ್ರತ್ಯಕ್ಷಕ್ಕೆ ಆಗಮವೇ ಉಪಜೀವ್ಯವಾಗಿದೆ. ಅಂತಹ ಆಗಮಕ್ಕೆ ವಿರುದ್ಧವಾದುದರಿಂದ ಪ್ರತ್ಯಕ್ಷವು ಅಪ್ರಮಾಣ. 'ತತ್ತ್ವಮಸಿ' ಎಂಬ ಆಗಮಕ್ಕೆ ತ್ವಂ ಪದದ ಅರ್ಥವಾದ ಜೀವನನ್ನು ಗ್ರಹಿಸುವುದರಿಂದ ಪ್ರತ್ಯಕ್ಷವು ಉಪಜೀವ್ಯವಾಗಿದೆ. ಅದಕ್ಕೆ ವಿರುದ್ಧವಾದುದರಿಂದ 'ತತ್ತ್ವಮಸಿ' ಎಂಬ ಆಗಮದ ಪ್ರತೀತಾರ್ಥ ವನ್ನು ಬಿಡಬೇಕಾಗುತ್ತದೆ. ಹೀಗೆ ಪೂರ್ವೋತ್ತರಗಳಿಗೆ ವಿರೋಧವಿಲ್ಲ.

**ಲೌಕಿಕೇ ವ್ಯವಹಾರೇಽತ್ರ ಪ್ರತ್ಯಕ್ಷಸ್ಯೋಪಜೀವ್ಯತಾ ।**
**ಅವತಾರಾದಿದೃಷ್ಟೌ ಸ್ಯಾದಾಗಮಸ್ಯೋಪಜೀವ್ಯತಾ ॥ ೧೬೦ ॥**

ಲೌಕಿಕೇ ವ್ಯವಹಾರೇ=ಪ್ರತ್ಯಕ್ಷಸಿದ್ಧನಾದ ಜೀವನು ಬ್ರಹ್ಮನಾಗಿದ್ದಾನೆ,

ಎನ್ನುವ ವ್ಯವಹಾರವು ತತ್ತ್ವಮಸಿ ಆಗಮದಿಂದ ಮಾಡಲ್ಪಡುವಾಗ ಅತ್ರ= ಆಗಮವನ್ನು ಕುರಿತು ಪ್ರತ್ಯಕ್ಷಸ್ಯ ಉಪಜೀವ್ಯತಾ=ಪ್ರತ್ಯಕ್ಷಕ್ಕೆ ಉಪಜೀವ್ಯತ್ವ ಇದೆ. ಅವತಾರಾದಿದೃಷ್ಟೌ=ರಾಮಕೃಷ್ಣಾದಿಅವತಾರಗಳಲ್ಲಿ ದೋಷವನ್ನು ಕಾಣುವ ಸಂದರ್ಭದಲ್ಲಿ ಪ್ರತ್ಯಕ್ಷವನ್ನು ಕುರಿತು ಆಗಮಸ್ಯ ಉಪಜೀವ್ಯತಾ= ಆಗಮಕ್ಕೇ ಉಪಜೀವ್ಯತ್ವ.

ಭಾವಾರ್ಥ— ಕೇವಲ ಪ್ರತ್ಯಕ್ಷವಾಗಲೀ ಕೇವಲ ಆಗಮವಾಗಲೀ ಒಂದಕ್ಕೆ ಮತ್ತೊಂದು ಬಾಧಕವಾಗುವುದಿಲ್ಲ. ಅವುಗಳಿಗೆ ಉಪಜೀವ್ಯ-ಉಪಜೀವಕಭಾವವಿದ್ದು ವಿರೋಧ ಇದ್ದಾಗ ಮಾತ್ರ ಬಾಧ್ಯ-ಬಾಧಕಭಾವ ಬರುತ್ತದೆ. ಪ್ರತ್ಯಕ್ಷವನ್ನು ಆಗಮವು ಅವಲಂಬಿಸಿದರೆ ಪ್ರತ್ಯಕ್ಷವು ಉಪಜೀವ್ಯವಾಗುತ್ತದೆ, ಅದೇ ಪ್ರಬಲವಾಗುತ್ತದೆ. ಆಗಮವನ್ನು ಅವಲಂಬಿಸುವ ಪ್ರತ್ಯಕ್ಷವು ಉಪಜೀವಕವಾಗುತ್ತದೆ, ಆಗಮವು ಉಪಜೀವ್ಯವಾಗುತ್ತದೆ, ಆಗ ಅದೇ ಪ್ರಬಲವಾಗುತ್ತದೆ.

**ಆಗಮೇನ ಹಿ ವಿಷ್ಣುತ್ವಂ ಜ್ಞಾತ್ವಾ ದೋಷೋಽತ್ರ ಕಲ್ಪ್ಯತೇ ।**
**ನ ಚೇತ್ ಸ್ಯಾದ್ ದೋಷವಾನನ್ಯಃ ಶಾಸ್ತ್ರಸಿದ್ಧಂ ಹಿ**
**ಲಕ್ಷಣಮ್ ॥ ೧೬೧ ॥**

ಆಗಮೇನ ತು=ರಾಮಕೃಷ್ಣಾದಿಗಳು ಭಗವಂತನ ಅವತಾರಗಳು ಎಂದು ಹೇಳುವ ಆಗಮದಿಂದ ವಿಷ್ಣುತ್ವಂ ಜ್ಞಾತ್ವಾ=ರಾಮ-ಕೃಷ್ಣಾದಿಗಳಿಗೆ ವಿಷ್ಣುತ್ವವನ್ನು ತಿಳಿದು, ಅತ್ರ=ವಿಷ್ಣುವಿನಲ್ಲಿ ದೋಷಃ=ಭೇದ-ಭೇದಾದಿ ದೋಷವು ಕಲ್ಪ್ಯತೇ=ಕಲ್ಪಿಸಲ್ಪಡುತ್ತದೆ. ನ ಚೇತ್=ಆಗಮದಿಂದ ವಿಷ್ಣುತ್ವವು ನಿಶ್ಚಯವಾಗದಿದ್ದಲ್ಲಿ ಅನ್ಯಃ=ಯಾರೋ ಒಬ್ಬನು ದೋಷವುಳ್ಳವನು, ಎಂದಿಷ್ಟೇ ತಿಳಿಯುತ್ತದೆ. ಲಕ್ಷಣಂ=ಶ್ರೀವತ್ಸಾದಿಲಕ್ಷಣಗಳು ಶಾಸ್ತ್ರಸಿದ್ಧಂ ಹಿ=ಶಾಸ್ತ್ರದಿಂದಲೇ ಸಿದ್ಧವಾಗಬೇಕಷ್ಟೆ.

ಭಾವಾರ್ಥ— ಅವತಾರರೂಪಗಳಲ್ಲಿ ದೋಷಗ್ರಾಹಿಪ್ರತ್ಯಕ್ಷಕ್ಕೆ ಆಗಮವು ಬಾಧಕವಾಗಬೇಕಾದರೆ ಅದು ಉಪಜೀವ್ಯತಯಾ ಪ್ರಬಲವಾಗಬೇಕು. ಆಗಮವು ಹೇಗೆ ಉಪಜೀವ್ಯವಾಗಿದೆ, ಎಂಬುದನ್ನು ಇಲ್ಲಿ

ತೋರಿಸಲಾಗಿದೆ—ರಾಮ-ಕೃಷ್ಣಾದಿ ರೂಪಗಳಲ್ಲಿ ಉತ್ಪತ್ತ್ಯಾದಿದೋಷಗಳು ಪ್ರತ್ಯಕ್ಷವಾಗಿ ಕಂಡರೂ ''ದೇವರಲ್ಲಿ ದೋಷವಿದೆ'' ಎಂಬ ಜ್ಞಾನ ಬರುವುದಿಲ್ಲ. ರಾಮಾದಿಗಳು ದೇವರ ಅವತಾರ ಎಂದು ತಿಳಿದರೆ ಮಾತ್ರ ದೇವರಲ್ಲಿ ದೋಷವಿದೆ, ಎಂಬ ಜ್ಞಾನವು ಬರುತ್ತದೆ. ಅಥವಾ, ರಾಮನಲ್ಲಿರುವ ಶ್ರೀವತ್ಸಾದಿ ಚಿಹ್ನೆಗಳನ್ನು ನೋಡಿದರೂ ಅದರಿಂದಾಗಿಯೇ ಅವನು ದೇವರು, ಎಂಬ ಜ್ಞಾನವು ಬರುವುದಿಲ್ಲ. ಆ ಚಿಹ್ನೆಗಳು ದೇವರದ್ದು, ಎಂದು ಆಗಮ ಹೇಳಬೇಕು. ಆಗ ಮಾತ್ರ, ದೇವರಲ್ಲಿ ದೋಷಗಳಿವೆ, ಎಂದು ತಿಳಿಯಲು ಸಾಧ್ಯ. ಹೀಗೆ ದೇವರಲ್ಲಿ ದೋಷಪ್ರತ್ಯಕ್ಷ ಬರಬೇಕಾದರೆ ಆಗಮದ ಸಹಾಯ ಬೇಕೇಬೇಕು. ಆದ್ದರಿಂದ ಆಗಮವು ಉಪಜೀವ್ಯ ಹಾಗೂ ಪ್ರಬಲವಾಗುತ್ತದೆ.

**ಕಸ್ಯಚಿದ್ ದೋಷವತ್ತ್ವಂ ಸ್ಯಾದಿತಿಮಾತ್ರೇಽಕ್ಷಜಂ ಭವೇತ್ ।**
**ನ ವಿಷ್ಣೋರ್ದೋಷವತ್ತ್ವೇ ಹಿ ಪ್ರತ್ಯಕ್ಷಂ ವರ್ತತೇ ಸ್ವತಃ ॥ ೧೬೨ ॥**

ಕಸ್ಯಚಿತ್=ಯಾರೋ ಒಬ್ಬ ರಾಮನೆಂಬ ವ್ಯಕ್ತಿಗೆ ದೋಷವತ್ತ್ವಂ ಸ್ಯಾತ್=ದೋಷವಿದೆ ಇತಿಮಾತ್ರೇ=ಇಷ್ಟೇ ವಿಷಯದಲ್ಲಿ ಅಕ್ಷಜಂ=ಪ್ರತ್ಯಕ್ಷವು ಭವೇತ್=ಬಂದೀತು. ವಿಷ್ಣೋಃ ದೋಷವತ್ತ್ವೇ=ವಿಷ್ಣುವಿಗೆ ದೋಷವಿದೆ, ಎಂಬ ವಿಷಯದಲ್ಲಿ ಸ್ವತಃ ಪ್ರತ್ಯಕ್ಷಂ ನ ವಿದ್ಯತೇ=ಪ್ರತ್ಯಕ್ಷ ಮಾತ್ರ ಇಲ್ಲ–ಕೇವಲ ಪ್ರತ್ಯಕ್ಷವು ಸಾಲದು. ಅದಕ್ಕೆ ರಾಮನು ದೇವರು, ಎಂದು ಹೇಳುವ ಆಗಮದ ಸಹಾಯ ಬೇಕು. ಆಗ ಆಗಮವು ಉಪಜೀವ್ಯವಾಗುತ್ತದೆ.

ಭಾವಾರ್ಥ—ಕೃಷ್ಣನಲ್ಲಿ ದೋಷವನ್ನು ಕಾಣುವ ಪ್ರತ್ಯಕ್ಷವು ಮೂರು ವಿಧವಾಗಿರಲು ಸಾಧ್ಯ—

1. ನನಗೆ ಕಾಣುತ್ತಿರುವ ಇವನಲ್ಲಿ (ಕೃಷ್ಣನೆಂಬುವನಲ್ಲಿ) ದೋಷಗಳಿವೆ.
2. ವಿಷ್ಣುಭಿನ್ನನಾದ ಈ ವ್ಯಕ್ತಿಯಲ್ಲಿ ದೋಷಗಳಿವೆ.
3. ವಿಷ್ಣುವಿನ ಅವತಾರನಾದ ಕೃಷ್ಣನಲ್ಲಿ ದೋಷಗಳಿವೆ.

ಮೊದಲ ಎರಡು ಪ್ರತ್ಯಕ್ಷಗಳು 'ದೇವರಲ್ಲಿ ದೋಷಗಳಿಲ್ಲ' ಎನ್ನುವ ಆಗಮಕ್ಕೆ (''ನಿರನಿಷ್ಟೋ ನಿರವದ್ಯಃ'') ವಿರುದ್ಧಗಳೇ ಅಲ್ಲ. ಮೂರನೆಯ ಪ್ರತ್ಯಕ್ಷವು ವಿರುದ್ಧವಾದರೂ ಅದು ಆಗಮವನ್ನು ಅವಲಂಬಿಸಿರುವ ಪ್ರತ್ಯಕ್ಷ.

ದೇವಕ್ಯಾಂ ದೇವರೂಪಿಣ್ಯಾಂ ವಿಷ್ಣುಃ ಸರ್ವಗುಹಾಶಯಃ ।
ಆವಿರಾಸೀತ್....॥ ಭಾಗ.10.4.8॥

ಈ ಭಾಗವತವಾಕ್ಯದಿಂದ ಕೃಷ್ಣನು ವಿಷ್ಣುವಿನ ಅವತಾರ ಎಂದು ತಿಳಿದಿದ್ದರೆ ಮಾತ್ರ 'ಕೃಷ್ಣರೂಪದ ವಿಷ್ಣುವಿನಲ್ಲಿ ದೋಷಗಳಿವೆ' ಎನ್ನುವ ಪ್ರತ್ಯಕ್ಷವು ಬರಲು ಸಾಧ್ಯ. ಅಂತಹ ಪ್ರತ್ಯಕ್ಷವು ಆಗಮೋಪಜೀವಕವಾದುದರಿಂದ ಆಗಮಕ್ಕಿಂತ ದುರ್ಬಲ. ಆಗಮಕ್ಕೆ ಬಾಧಕವಾಗುವುದಿಲ್ಲ.

**ಕೇಚಿತ್ ಪಶ್ಯಂತಿ ದೋಷಾನಿತ್ಯತ್ರಾಪಿ ಸ್ಯಾನ್ನಚಾಕ್ಷಜಮ್ ।**
**ಪೌರಾಣಂ ವಾಕ್ಯಮೇವಾತ್ರ ತಚ್ಛ್ರುತ್ಯೈವ ವಿರುದ್ಧ್ಯತೇ ॥ ೧೬೩ ॥**

ಕೇಚಿತ್ ದೋಷಾನ್ ಪಶ್ಯಂತಿ=ಕೆಲವರು ಭಗವದ್ರೂಪಗಳಲ್ಲಿ ದೋಷಗಳನ್ನು ಕಾಣುತ್ತಾರೆ, ಇತ್ಯತ್ರಾಪಿ=ಹೀಗೆ ಹೇಳುವಲ್ಲಿ ನ ಅಕ್ಷಜಂ=ಪ್ರತ್ಯಕ್ಷವು ಪ್ರಮಾಣವಲ್ಲ. ಹೊರತು, ಅತ್ರ=ಭಗವದ್ರೂಪಗಳಲ್ಲಿ ದೋಷಗಳಿವೆ, ಎಂಬಲ್ಲಿ ಅದು ಪೌರಾಣಂ ವಾಕ್ಯಮೇವ=ಪುರಾಣವಾಕ್ಯವಾಗಿಯೇ ಪ್ರಮಾಣ. ತತ್=ಆ ಪುರಾಣ ವಾಕ್ಯವು ಶ್ರುತ್ಯೈವ="ನಿರನಿಷ್ಟಃ ನಿರವದ್ಯಃ" ಎಂಬ ಶ್ರುತಿಯಿಂದಲೇ ವಿರುದ್ಧ್ಯತೇ=ಬಾಧಿಸಲ್ಪಡುತ್ತದೆ.

**ಭಾವಾರ್ಥ—** ಭಗವಂತನಲ್ಲಿ ದೋಷಗಳಿವೆ ಎನ್ನುವುದಕ್ಕೆ ಪ್ರತ್ಯಕ್ಷವೇ ಪ್ರಮಾಣ, ಎನ್ನಬೇಕಾದರೆ ಅಂತಹ ಪ್ರತ್ಯಕ್ಷ ಇದೆ, ಎಂದು ನಾವು ಇಂದು ತಿಳಿಯುವುದು ಹೇಗೆ? ರಾಮ-ಕೃಷ್ಣಾದಿಗಳು ಎಂದೋ ಇದ್ದರು. ಆ ಕಾಲದಲ್ಲಿದ್ದವರು ಆ ರೂಪಗಳಲ್ಲಿ ದೋಷಗಳನ್ನು ಕಂಡಿರಬಹುದು. ಅದು ನಮಗಿಂದು ಗೊತ್ತಿಲ್ಲ. ಅದನ್ನು ಪುರಾಣಗಳು ತಿಳಿಸಬೇಕು. ಆ ಪುರಾಣಗಳು 'ಅಂದಿನಪುರುಷರ ದೋಷದರ್ಶನವು ಪ್ರಮಾಣ' ಎಂದು ತಿಳಿಸಿದರೆ ಶ್ರುತಿಯ ವಿರೋಧ ಪುರಾಣಗಳಿಗೆ ಬರುತ್ತದೆ. ಹೇಗೆಂದರೆ, ಅಂದಿನವರ ದೋಷಪ್ರತ್ಯಕ್ಷವು ಪ್ರಮಾಣ ಎಂದು ಪುರಾಣವು ಹೇಳಿದರೆ ಭಗವಂತನಲ್ಲಿ ದೋಷವಿದೆ ಎನ್ನುವುದನ್ನು ಪುರಾಣವೂ ಒಪ್ಪಿಕೊಂಡಂತೆ. ಆಗ ಆ ಪುರಾಣವಾಕ್ಯವು ಶ್ರುತಿವಿರುದ್ಧವಾದುದರಿಂದ ಅಪ್ರಮಾಣವಾಗುತ್ತದೆ.

**ಪುರಾಣಸ್ಯೋಪಜೀವ್ಯಶ್ಚ ವೇದ ಏವ ನಚಾಪರಃ ।**
**ತದ್ವಿರೋಧೇ ಕಥಂ ಮಾನಂ ತತ್ ತತ್ರ ಚ ಭವಿಷ್ಯತಿ ॥ ೧೬೪ ॥**

ಪುರಾಣಸ್ಯ=ಪುರಾಣಕ್ಕೆ ವೇದ ಏವ=ವೇದವೇ ಉಪಜೀವ್ಯಃ= ಉಪಜೀವ್ಯವಾಗುತ್ತದೆ. ನಚಾಪರಃ=ವೇದ ಬಿಟ್ಟು ಬೇರೆ ಉಪಜೀವ್ಯ ಪ್ರಮಾಣಗಳಿಲ್ಲ. ತದ್‌ವಿರೋಧೇ=ಅಂತಹ ಉಪಜೀವ್ಯಪ್ರಮಾಣದ ವಿರೋಧವಿದ್ದಲ್ಲಿ ತತ್=ಆ ಪುರಾಣವಾಕ್ಯವು ತತ್ರ=ಭಗವಂತನ ದೋಷ ವಿಷಯದಲ್ಲಿ ಮಾನಂ ಕಥಂ ಭವಿಷ್ಯತಿ=ಪ್ರಮಾಣವು ಹೇಗಾಗುತ್ತದೆ?

**ಭಾವಾರ್ಥ**—ವೇದವಿರುದ್ಧವಾದರೆ ಪುರಾಣವಾಕ್ಯವು ಅಪ್ರಮಾಣ ಏಕಾಗಬೇಕೆಂದರೆ, ಪುರಾಣ ಪೌರುಷೇಯ. ಅದು ಹೇಳಿದ ವಿಷಯಕ್ಕೆ ವೇದಗಳೇ ಆಧಾರ. ಅಂದರೆ ವೇದಗಳು ಪುರಾಣಗಳಿಗೆ ಉಪಜೀವ್ಯ ಪ್ರಮಾಣಗಳು. ಉಪಜೀವ್ಯಪ್ರಮಾಣಕ್ಕೆ ವಿರುದ್ಧವಾದರೆ ಉಪಜೀವಕವೇ ಅಪ್ರಮಾಣವಾಗಬೇಕು. ಆದ್ದರಿಂದ ವೇದವಿರುದ್ಧವಾದ ಪುರಾಣವು ಅಪ್ರಮಾಣವಾಗುತ್ತದೆ.

ವೇದವು ಎಂದೂ ಅಪ್ರಮಾಣವಾಗುವುದಿಲ್ಲ. ಪುರಾಣವು ವೇದಕ್ಕೆ ವಿರುದ್ಧವಾಗಿ ಏನನ್ನಾದರೂ ಹೇಳಿದರೆ ಅದೂ ಪ್ರಮಾಣ ಎಂದೂ ಹೇಳಲಾಗದು. ವಿರುದ್ಧವಾದ ವಿಷಯಗಳನ್ನು ಪ್ರತಿಪಾದಿಸುವ ಎರಡು ವಾಕ್ಯಗಳೂ ಪ್ರಮಾಣಗಳಾದರೆ ಒಂದೇ ವಸ್ತುವಿನಲ್ಲಿ ವಿರುದ್ಧವಾದ ಎರಡು ಧರ್ಮಗಳು ಬರಬೇಕಾಗುತ್ತದೆ. ಅದಕ್ಕಾಗಿ ಒಂದನ್ನು ಮಾತ್ರ ಪ್ರಮಾಣ ಎನ್ನಬೇಕಾಗುತ್ತದೆ. ಆ ಒಂದು ವೇದವೇ ಆಗಬೇಕು, ಅದು ಅಪೌರುಷೇಯ ವಾದ ಕಾರಣ ಅಪ್ರಮಾಣವಾಗಲು ಸಾಧ್ಯವಿಲ್ಲ. ಪರಿಶೇಷಾತ್ ಪುರಾಣವೇ ಅಪ್ರಮಾಣವಾಗಬೇಕು.

**ಅಪರೀಕ್ಷಿತದೃಷ್ಟಿಶ್ಚ ಕಥಮೇವಾಕ್ಷಜಂ ಭವೇತ್ ।**
**ಯದ್ಯೇವಂ ದೇವದತ್ತಾದಿಭ್ರಮಃ ಕಿಂ ನಾಕ್ಷಜಂ ಭವೇತ್ ॥ ೧೬೫ ॥**

ಅಪರೀಕ್ಷಿತದೃಷ್ಟಿಶ್ಚ=ಪರೀಕ್ಷೆಗೆ ಒಳಪಡದ ಪ್ರತ್ಯಕ್ಷವು ಅಕ್ಷಜಂ ಕಥಮೇವ

ಭವೇತ್=ಅಭಿಲಷಿತವಿಷಯದಲ್ಲಿ ಪ್ರತ್ಯಕ್ಷಪ್ರಮಾಣವಾಗಿ ಹೇಗೆ ತಾನೇ ಹೇಳಲಾದೀತು? ಯದ್ಯೇವಂ=ಒಂದುವೇಳೆ ಅಪರೀಕ್ಷಿತವಾದುದೂ ಪ್ರತ್ಯಕ್ಷವಾಗಿ ಆಧಾರವಾಗುವುದಾದಲ್ಲಿ ದೇವದತ್ತಾದಿಭ್ರಮಃ=ದೇವದತ್ತನಿಗೆ ಶುಕ್ತಿಯನ್ನು ನೋಡಿ ಬಂದಿರುವ ರಜತಭ್ರಮೆಯೂ ಕಿಂ ನಾಕ್ಷಜಂ ಭವೇತ್=ಚಾಕ್ಷುಷಪ್ರತ್ಯಕ್ಷರೂಪಪ್ರಮಾಣತಯಾ ಹೇಳಲ್ಪಡಬೇಕಾದೀತು.

ಭಾವಾರ್ಥ— ಪುರಾಣವಾಕ್ಯವು ಆಗಿನ ಕಾಲದ ಜನರಿಗೆ ಇರುವ, ಭಗವದವತಾರದಲ್ಲಿ ದೋಷಪ್ರತ್ಯಕ್ಷವನ್ನು ಪ್ರಮಾಣವೆಂದು ಹೇಳುತ್ತಿಲ್ಲ, ಅವರ ಪ್ರತ್ಯಕ್ಷದ ಅನುವಾದವನ್ನಷ್ಟೇ ಮಾಡುತ್ತದೆ—ಅವರು ಕೃಷ್ಣನಲ್ಲಿ ದೋಷವನ್ನು ಕಂಡರು, ಎಂದು.

ಹೀಗೆ ಹೇಳಿದರೆ ಅಂತಹ ಪ್ರತ್ಯಕ್ಷವು ಅರ್ಥಸಾಧಕವಾಗುವುದಿಲ್ಲ. ಅದು ಅಪರೀಕ್ಷಿತಪ್ರತ್ಯಕ್ಷ. ಅಂತಹ ಪ್ರತ್ಯಕ್ಷವೂ ಅರ್ಥಸಾಧಕವಾಗುವುದಾದಲ್ಲಿ ರಜ್ಜುಸರ್ಪಭ್ರಮೆಯೂ ಸಾಧಕವಾದೀತು.

**ಯಾವಚ್ಛಕ್ತಿ ಪರೀಕ್ಷಾಯಾಮುಪಜೀವ್ಯಸ್ಯ ಬಾಧನೇ ।**
**ದೋಷೋ, ನಾಶೋಧಿತೇ ದೋಷ ಉಪಜೀವ್ಯತ್ವಮಸ್ತ್ವಲಮ್ ॥೧೬೬॥**

ಯಾವಚ್ಛಕ್ತಿಪರೀಕ್ಷಾಯಾಂ ಸತ್ಯಾಂ=ಶಕ್ತಿ ಇದ್ದಷ್ಟು ಪರೀಕ್ಷೆಯನ್ನು ಮಾಡಿದಾಗ ಉಪಜೀವ್ಯಸ್ಯ=ಉಪಜೀವ್ಯಪ್ರಮಾಣಕ್ಕೆ ಬಾಧನೇ= ಉಪಜೀವಕಪ್ರಮಾಣದಿಂದ ಬಾಧವು ಬಂದಲ್ಲಿ ದೋಷಃ=ಉಪಜೀವ್ಯವು ಉಪಜೀವಕವನ್ನು ಬಾಧಿಸುತ್ತದೆ, ಎಂಬ ನಿಯಮಕ್ಕೆ ಭಂಗ ಬರುತ್ತದೆ. ಅಶೋಧಿತೇ=ಉಪಜೀವ್ಯವು ಪರೀಕ್ಷಿತವಾಗಿ ಅಪ್ರಮಾಣವೆಂದು ನಿಶ್ಚಿತವಾಗದಿದ್ದಲ್ಲಿ ನ ದೋಷಃ='ಶೋಧಿತವಾದ ಉಪಜೀವ್ಯವು ಬಾಧಿತವಾಗುವುದಿಲ್ಲ' ಎಂಬ ನಿಯಮಕ್ಕೆ ದೋಷವಿಲ್ಲ. ಆದ್ದರಿಂದ ಅಪರೀಕ್ಷಿತಸಂದರ್ಭದಲ್ಲಿ ಉಪಜೀವ್ಯತ್ವಂ=ಉಪಜೀವ್ಯ–ಉಪಜೀವಕಭಾವವು ಅಲಂ ಅಸ್ತು=ಇದ್ದೇ ಇರಲಿ. (ಅಲಂಶಬ್ದೋಽವಧಾರಣೇ)

ಭಾವಾರ್ಥ— ಉಪಜೀವ್ಯಪ್ರಮಾಣವೇ ಉಪಜೀವಕವನ್ನು ಬಾಧಿಸುತ್ತದೆ ಅಂದರೆ, ಉಪಜೀವ್ಯಪ್ರಮಾಣ ಹೇಳಿದ್ದೇ ಸರಿ, ಉಪಜೀವಕವು ಹೇಳಿದ್ದು

ಸರಿಯಲ್ಲ ಎಂದರ್ಥ. ಪ್ರಕೃತದಲ್ಲಿ ರಾಮ–ಕೃಷ್ಣಾದಿಗಳು ಭಗವಂತನೇ ಆಗಿದ್ದಾರೆ, ಎಂದು ತಿಳಿಸುವ ಶ್ರುತಿಯು 'ರಾಮದೇವರಲ್ಲಿ ದೋಷವಿದೆ' ಎನ್ನುವ ಪ್ರತ್ಯಕ್ಷಕ್ಕೆ ಉಪಜೀವ್ಯಪ್ರಮಾಣ. ಏಕೆಂದರೆ, ರಾಮನು ದೇವರು ಎಂದು ತಿಳಿಯುವುದು ಶ್ರುತಿಯಿಂದಲೇ. ಅದು ತಿಳಿದರೆ ಮಾತ್ರ 'ರಾಮ–ದೇವರಲ್ಲಿ ದೋಷವಿದೆ' ಎಂಬ ಪ್ರತ್ಯಕ್ಷವು ಬರುವುದಕ್ಕೆ ಸಾಧ್ಯ. ಇಲ್ಲದಿದ್ದಲ್ಲಿ 'ರಾಮ ಎಂಬ ರಾಜನಲ್ಲಿ ದೋಷವಿದೆ' ಎಂದಿಷ್ಟೇ ತಿಳಿಯುತ್ತದೆ. ಈ ಪ್ರತ್ಯಕ್ಷವು 'ದೇವರಲ್ಲಿ ದೋಷವಿಲ್ಲ' ಎನ್ನುವ ಶ್ರುತಿಗೆ ಬಾಧಕವಾಗು ವುದಿಲ್ಲ. ಹೀಗೆ ಪ್ರತ್ಯಕ್ಷಕ್ಕೆ ಉಪಜೀವ್ಯವಾದ ಶ್ರುತಿಯು 'ನಿರನಿಷ್ಟಃ ನಿರವದ್ಯಃ' ಎಂದು ದೇವರಲ್ಲಿ ದೋಷಗಳು ಇಲ್ಲ, ಎನ್ನುತ್ತದೆ. ಅದಕ್ಕೆ ವಿರುದ್ಧವಾದ 'ರಾಮದೇವರಲ್ಲಿ ದೋಷಗಳಿವೆ' ಎನ್ನುವ ಉಪಜೀವಕ–ಪ್ರತ್ಯಕ್ಷವು ಅಪ್ರಮಾಣವಾಗುತ್ತದೆ. ಇದರಿಂದ ಉಪಜೀವ್ಯ–ಉಪಜೀವಕಗಳಿಗೆ ವಿರೋಧವಿದ್ದಾಗ ಉಪಜೀವ್ಯವು ಪ್ರಮಾಣ, ಉಪಜೀವಕವು ಅಪ್ರಮಾಣ, ಎನ್ನುವುದು ದೃಢವಾಗುತ್ತದೆ.

ಆದರೆ, ಇದು ಸರಿಯಲ್ಲ. 'ನಾಯಂ ಸರ್ಪಃ' ಎಂಬ ಜ್ಞಾನಕ್ಕೆ ಉಪಜೀವ್ಯಪ್ರಮಾಣ 'ಅಯಂ ಸರ್ಪಃ' ಎನ್ನುವ ಭ್ರಾಂತಿ. ಅಂತಹ ಭ್ರಾಂತಿಯೇ ಇಲ್ಲದಿರುತ್ತಿದ್ದರೆ ಅದನ್ನು ನಿಷೇಧಮಾಡುವ 'ನಾಯಂ ಸರ್ಪಃ' ಎನ್ನುವ ಜ್ಞಾನಕ್ಕೆ ಆಸ್ಪದವೇ ಇಲ್ಲ. ಹೀಗೆ ಇಲ್ಲಿ ಸರ್ಪಜ್ಞಾನವು ಉಪಜೀವ್ಯ, ನಿಷೇಧಜ್ಞಾನವು ಉಪಜೀವಕ. ಇವೆರಡರಲ್ಲಿ ಉಪಜೀವ್ಯವೇ ತಪ್ಪಾಗಿದೆ, ಉಪಜೀವಕವು ಸರಿಯಾಗಿದೆ. ಇದು ಹಿಂದೆ ಹೇಳಿದ ನಿಯಮಕ್ಕೆ ವಿರುದ್ಧವಾಯಿತು, ಎಂದು ಆಕ್ಷೇಪ.

ಇದಕ್ಕೆ ಸಮಾಧಾನ ಹೀಗೆ— ಉಪಜೀವ್ಯವಾದ ಮಾತ್ರಕ್ಕೆ ಅಬಾಧ್ಯ ವಾಗುವುದಿಲ್ಲ, ಅರ್ಥಾತ್ ಸರಿಯಾಗುವುದಿಲ್ಲ. ಆ ಉಪಜೀವ್ಯವು ಶೋಧಿತ ವಾಗಿಯೂ ಇರಬೇಕು. ಅಂದರೆ ಪರೀಕ್ಷಿತವಾಗಿರಬೇಕು. ಅಂತಹ ಪರೀಕ್ಷಿತ ವಾದ ಉಪಜೀವ್ಯವು ಯಾವುದರಿಂದಲೂ ಬಾಧಿತವಾಗುವುದಿಲ್ಲ. ''ಅಯಂ ಸರ್ಪಃ'' ಎಂಬ ಜ್ಞಾನವು ಉಪಜೀವ್ಯವಾದರೂ ಅದು ಶೋಧಿತವಲ್ಲ/ ಪರೀಕ್ಷಿತವಲ್ಲ. ಮಂದಪ್ರಕಾಶದಲ್ಲಿ ಬಂದ ಜ್ಞಾನ ಅದು. 'ನಾಯಂ ಸರ್ಪಃ'

ಎನ್ನುವ ಜ್ಞಾನ ಬೆಳಕು ಹಾಯಿಸಿ, ಮುಟ್ಟಿ ನೋಡಿ ಬಂದ ಪರೀಕ್ಷಿತ ಪ್ರತ್ಯಕ್ಷ. ಆದರಿಂದಾಗಿ ಉಪಜೀವಕವಾದರೂ ಅದು ಬಾಧಕವಾಗುತ್ತದೆ. ಉಪಜೀವ್ಯವು ಬಾಧ್ಯವಾಗುತ್ತದೆ. ಇದರಿಂದ, ಪರೀಕ್ಷಿತವಾದ ಉಪಜೀವ್ಯವು ಎಂದೂ ಬಾಧಿಸಲ್ಪಡುವುದಿಲ್ಲ ಎನ್ನುವ ನಿಯಮಕ್ಕೆ ಯಾವ ಚ್ಯುತಿಯೂ ಇಲ್ಲ.

ಪರೀಕ್ಷಿತದಿಂದ ಅಪರೀಕ್ಷಿತವು ಬಾಧಿಸಲ್ಪಡುತ್ತದೆ, ಎಂದಿಷ್ಟು ಹೇಳಿದರೂ ಸಾಕು, 'ಪರೀಕ್ಷಿತವಾದ–ಉಪಜೀವ್ಯ' ಎಂದು ಹೇಳುವ ಅಗತ್ಯವಿಲ್ಲ. ಆದರೂ ನಮ್ಮಿಂದ ಎಲ್ಲ ಜ್ಞಾನಗಳನ್ನೂ ಕೊನೆಯವರೆಗೂ ಪೂರ್ಣಪರೀಕ್ಷೆಗೆ ಒಳಪಡಿಸಲಾಗುವುದಿಲ್ಲ. ನಮ್ಮ ಶಕ್ತಿಯಿದ್ದಷ್ಟೇ ಪರೀಕ್ಷೆ ಮಾಡಬಹುದು. ಆ ರೀತಿ ಪರೀಕ್ಷಿತವಾದ ಜ್ಞಾನವು ಕೆಲವೊಮ್ಮೆ ತಪ್ಪಾಗಬಹುದು. (ಬಾಧಿಸಲ್ಪಡಬಹುದು) ಆದರೂ, ಅಂತಹ ಪರೀಕ್ಷಿತಪ್ರತ್ಯಕ್ಷವು ಉಪಜೀವ್ಯವಾದರೆ ಅದು ತಪ್ಪಾಗಲು ಸಾಧ್ಯವಲ್ಲ. ಆದ್ದರಿಂದ ಪರೀಕ್ಷಿತವಾದ ಉಪಜೀವ್ಯವು ಬಾಧ್ಯವಲ್ಲ ಎನ್ನುವುದು ಅನಿವಾರ್ಯ.

**ಭ್ರಮೇಽಪ್ಯಭ್ರಮಭಾಗೋಽಸ್ತಿ ತನ್ಮಾತ್ರಮುಪಜೀವ್ಯ ಹಿ ।**
**ಬಾಧಕಜ್ಞಾನವೃತ್ತಿಃ ಸ್ಯಾನ್ನಚೈವಂ ಸುಪರೀಕ್ಷಿತೇ ॥ ೧೬೭ ॥**

ಭ್ರಮೇಽಪಿ='ಅಯಂ ಸರ್ಪಃ' ಎಂಬ ಭ್ರಮೆಯಲ್ಲಿ ಅಭ್ರಮಭಾಗಃ ಅಸ್ತಿ=ಭ್ರಮೆಯಾಗದಿರುವ 'ಅಯಂ' ಎಂಬ ಒಂದು ಭಾಗವು ಇದೆ. ತನ್ಮಾತ್ರಂ ಉಪಜೀವ್ಯ=ಅಷ್ಟಂಶವನ್ನು ಮಾತ್ರ ಉಪಜೀವಿಸಿಕೊಂಡು ಬಾಧಕ ಜ್ಞಾನವೃತ್ತಿಃ ಸ್ಯಾತ್='ನಾಯಂ ಸರ್ಪಃ' ಎನ್ನುವ ಬಾಧಕಜ್ಞಾನದ ಪ್ರವೃತ್ತಿಯಾಗುತ್ತದೆ.

**ಭಾವಾರ್ಥ—** 'ಅಯಂ ಸರ್ಪಃ' ಎನ್ನುವ ಜ್ಞಾನವು ಒಂದೇ ಆದರೂ ಅದರಲ್ಲಿ ಎರಡು ಅಂಶಗಳಿವೆ. 'ಅಯಂ' ಎಂಬ ಧರ್ಮಿ–ಅಂಶ, 'ಸರ್ಪಃ' ಎಂಬ ಆರೋಪ್ಯಾಂಶ. ಆರೋಪ್ಯಾಂಶವು ನಿಷೇಧ್ಯಾರ್ಪಕತ್ವೇನ ಉಪಜೀವ್ಯವಾದರೂ ಅದು ಪರೀಕ್ಷಿತವಲ್ಲವಾದುದರಿಂದ ಬಾಧ್ಯವಾಗುತ್ತದೆ. 'ಅಯಂ' ಎಂಬ ಅಂಶವು ಧರ್ಮಿಅರ್ಪಕತ್ವೇನ ಉಪಜೀವ್ಯವಾದರೂ ಅದು ಪ್ರಮಾ–ಸತ್ಯ. ಆದ್ದರಿಂದ ಅದು ಬಾಧ್ಯವಲ್ಲ. ಹೀಗೆ ಈ ಅಂಶವನ್ನು

ಪರಿಗಣಿಸಿದಾಗ ಯಾವುದು ಉಪಜೀವ್ಯವೋ ಅದು ಬಾಧ್ಯವಲ್ಲ; ಯಾವುದು ಬಾಧ್ಯವೋ ಅದು ಪರೀಕ್ಷಿತ—ಉಪಜೀವ್ಯವಲ್ಲ. ಆದ್ದರಿಂದ ಉಪಜೀವ್ಯವು ಬಾಧ್ಯವಾಗುವುದಿಲ್ಲ, ಎನ್ನುವ ನಿಯಮಕ್ಕೆ ಇಲ್ಲಿ ಚ್ಯುತಿ ಇಲ್ಲ.

ಸುಪರೀಕ್ಷಿತೇ(ಸತಿ)='ಯಃ ಸರ್ವಜ್ಞಃ' ಎಂಬ ಪ್ರಮಾಣವು ಸುಪರೀಕ್ಷಿತ ವಾಗುತ್ತಿರಲು ನಚೈವಂ=ಹಿಂದೆ ಹೇಳಿರುವ ಭ್ರಾಂತಿ–ಬಾಧಕಗಳಂತೆ ಪ್ರಕೃತ ಸರ್ವಜ್ಞತ್ವಬೋಧಕವಾದ 'ಯಃ ಸರ್ವಜ್ಞಃ' ಎಂಬ ಶ್ರುತಿ ಮತ್ತು 'ತತ್ತ್ವಮಸಿ' ಎಂಬ ಶ್ರುತಿಗಳಲ್ಲೂ ಬಾಧ್ಯ–ಬಾಧಕಭಾವವನ್ನು ಹೇಳಿ ಸಮಾಧಾನವನ್ನು ಮಾಡಲಾಗದು.

ಭಾವಾರ್ಥ— ಉಪಜೀವ್ಯವು ಪ್ರಬಲವಾದರೂ ಅಪರೀಕ್ಷಿತವಾದ ಉಪಜೀವ್ಯವು ಪ್ರಬಲವಲ್ಲ, ಅದು ಬಾಧ್ಯವಾಗುತ್ತದೆ, ಎಂದು ಈ ಹಿಂದೆ ನಿರ್ಧರಿಸಲಾಗಿದೆ. ಹೀಗಾದರೆ 'ಯಃ ಸರ್ವಜ್ಞಃ' ಎಂಬ ಶ್ರುತಿಯು 'ತತ್ತ್ವಮಸಿ' ಎಂಬ ಶ್ರುತಿಯಿಂದ ಬಾಧ್ಯವಾಗಬೇಕಾಗುತ್ತದೆ. 'ತತ್ತ್ವಮಸಿ' ಎಂಬ ಶ್ರುತಿಯು ಜೀವ–ಈಶರಿಗೆ ಐಕ್ಯವನ್ನು ಹೇಳುವಮೂಲಕ ಜೀವೇಶ ರಲ್ಲಿರುವ ವಿರುದ್ಧಧರ್ಮಗಳನ್ನು ನಿಷೇಧಮಾಡುತ್ತದೆ. ಈ ಶ್ರುತಿಯಿಂದ ನಿಷೇಧ್ಯವಾದ, ಈಶಧರ್ಮವನ್ನು 'ಯಃ ಸರ್ವಜ್ಞಃ' ಎಂಬ ಶ್ರುತಿಯು ಬೋಧಿಸುತ್ತಿರುವುದರಿಂದ ಅದು ಐಕ್ಯಶ್ರುತಿಗೆ ಉಪಜೀವ್ಯವಾಗುತ್ತದೆ. ನಿಷೇಧ್ಯಾಂಶದಲ್ಲಿ ಉಪಜೀವ್ಯವಾದರೂ ಅದು 'ಅಯಂ ಸರ್ಪಃ' ಎಂಬ ಜ್ಞಾನದಂತೆ ಬಾಧ್ಯವಾಗುತ್ತದೆ. ಧರ್ಮ್ಯಂಶದಲ್ಲಿ ಉಪಜೀವ್ಯವಾದರೆ ಅದು ಪ್ರಮಾ ಆದುದರಿಂದ ಬಾಧ್ಯವಲ್ಲ. ಆದ್ದರಿಂದ 'ಪೃಥಗುಪದೇಶಾತ್' ಎಂಬ ಅಧಿಕರಣದಲ್ಲಿ,

ಉಪಜೀವ್ಯವಿರುದ್ಧಂ ತು ಕಥಮೈಕ್ಯಂ ಶ್ರುತಿರ್ವದೇತ್ ।

ಎಂದಿರುವುದು ಸರಿಯಲ್ಲ, ಎಂದು ಆಕ್ಷೇಪ.

ಈ ಆಕ್ಷೇಪ ಸರಿಯಲ್ಲ, ಎನ್ನುವುದನ್ನು 'ನಚೈವಂ ಸುಪರೀಕ್ಷಿತೇ' ಎಂಬ ಅನುವ್ಯಾಖ್ಯಾನವು ಹೇಳುತ್ತಿದೆ. 'ಅಯಂ ಸರ್ಪಃ' ಎಂಬ ಭ್ರಮೆಯಂತೆ 'ಯಃ ಸರ್ವಜ್ಞಃ' ಎಂಬ ವಾಕ್ಯವಲ್ಲ. 'ಅಯಂ ಸರ್ಪಃ' ಎಂಬ ಭ್ರಮೆಯು

ಉಪಜೀವ್ಯವಾದರೂ ಅಪರೀಕ್ಷಿತ. ಆದರೆ 'ಯಃ ಸರ್ವಜ್ಞಃ' ಎಂಬ ಶ್ರುತಿಯು ಪರೀಕ್ಷಿತವಾದ ಉಪಜೀವ್ಯ. ಅದು ಯಾವುದರಿಂದಲೂ ಬಾಧ್ಯವಾಗುವುದಿಲ್ಲ. ಆದ್ದರಿಂದ ಆ ಶ್ರುತಿ ಹೇಳುವ ಸರ್ವಜ್ಞತ್ವಾದಿಧರ್ಮಗಳು ಈಶನಲ್ಲಿವೆ. ಅದಕ್ಕೆ ವಿರುದ್ಧವಾದ ಧರ್ಮಗಳಿರುವ ಜೀವನೊಂದಿಗೆ ಐಕ್ಯವನ್ನು 'ತತ್ತ್ವಮಸಿ' ಎಂಬ ವಾಕ್ಯವು ಹೇಳಲು ಸಾಧ್ಯವಿಲ್ಲ. ಆದ್ದರಿಂದ ತತ್ತ್ವಮಸಿ ಎಂಬ ಶ್ರುತಿಯು ಜೀವೇಶಾಭೇದವನ್ನು ಬೋಧಿಸಲು ಸಾಧ್ಯವಿಲ್ಲ. ಹೀಗೆ ಇಲ್ಲಿ ಉಪಜೀವ್ಯವಾಗಿದ್ದು ಪರೀಕ್ಷಿತವಾದ 'ಯಃ ಸರ್ವಜ್ಞಃ' ಎಂಬ ಶ್ರುತಿಯೇ 'ತತ್ತ್ವಮಸಿ' ಎಂಬ ಉಪಜೀವಕಶ್ರುತಿಯನ್ನು ಬಾಧಿಸುತ್ತದೆ.

'ಯಃ ಸರ್ವಜ್ಞಃ' ಎಂಬ ಶ್ರುತಿಯು ಪರೀಕ್ಷಿತವಾದುದು, ಎನ್ನುವುದನ್ನು ಭಕ್ತಿಪಾದದಲ್ಲಿ ಹೇಳಲಾಗಿದೆ—

''ಯದಿ ಸ್ಯುಸ್ತಾದೃಶಾ ಧರ್ಮಾಃ ಸರ್ವಜ್ಞತ್ವಾದಯೋ ನ ಕಿಮ್ ॥''

''ವೇದವೇದ್ಯಸ್ಯ ಮಿಥ್ಯಾತ್ವಂ ಯದಿ ನೈಕ್ಯಸ್ಯ ತತ್ ಕಥಮ್ ॥''

ಇದರಂತೆ ಜೀವಗತದುಃಖಾದಿಗಳ ಪ್ರತ್ಯಕ್ಷವೂ ಪರೀಕ್ಷಿತವಾಗಿದೆ ಎಂದು 'ಪೃಥಗಧಿ'ಕರಣದಲ್ಲಿ ಹೇಳಲಾಗಿದೆ—

'ನ ದುಃಖಾನುಭವಃ ಕ್ವಾಪಿ ಮಿಥ್ಯಾನುಭವತಾಂ ವ್ರಜೇತ್''

ಹೀಗೆ, ಜೀವೇಶರಲ್ಲಿ ಧರ್ಮಗಳನ್ನು ತಿಳಿಸುವ ಶ್ರುತಿ ಮತ್ತು ಸಾಕ್ಷಿಗಳು ಪರೀಕ್ಷಿತವಾದ ಉಪಜೀವ್ಯಗಳಾದುದರಿಂದ ಯಾವುದರಿಂದಲೂ ಬಾಧ್ಯಗಳಾಗುವುದಿಲ್ಲ.

**ಸರ್ವಂ ತದುಪಜೀವ್ಯೈವ ಪ್ರಮಾಣಂ ವರ್ತತೇ ಯತಃ ।**
**ಕಥಂ ಬ್ರಹ್ಮೇತಿ ತಜ್ಜ್ಞೇಯಂ ಸರ್ವಜ್ಞತ್ವಾದಿಲಕ್ಷಣಮ್ ॥ ೧೬೮ ॥**

**ವಿಹಾಯ ಯಸ್ಮಾತ್ಕಸ್ಮಾಚ್ಚಿತ್ ಸ್ವರೂಪಸ್ಯೈವ ಚೇದ್ ಯದಿ ।**
**ಉಪಜೀವ್ಯತ್ವಮೇತಸ್ಮಾದ್ ವ್ಯಾವೃತ್ತಂ ಯಾವತಾ ಭವೇತ್।**
**ತಾವತೈವೋಪಜೀವ್ಯತ್ವಂ ಸ್ವರೂಪಸ್ಯೈವ ನ ಕ್ವಚಿತ್ ॥ ೧೬೯ ॥**

ಯತಃ=ಯಾವ ಕಾರಣದಿಂದ ತತ್ ಸರ್ವಂ='ಯಃ ಸರ್ವಜ್ಞಃ' ಎಂಬ ಶ್ರುತಿಯಲ್ಲಿ ಹೇಳಿರುವ ಧರ್ಮಿ ಹಾಗೂ ಸರ್ವಜ್ಞತ್ವಾದಿಧರ್ಮಗಳು ಇವೆಲ್ಲವನ್ನೂ ಉಪಜೀವ್ಯೈವ=ಉಪಜೀವಿಸಿಕೊಂಡೇ ಪ್ರಮಾಣಂ= 'ತತ್ತ್ವಮಸಿ' ಎಂಬ ಅಭೇದಬೋಧಕವಾದ ಪ್ರಮಾಣವು ವರ್ತತೇ=ಇದೆ. 'ಯಃ ಸರ್ವಜ್ಞಃ' ಎಂಬ ಶ್ರುತಿಯು ಸರ್ವಜ್ಞತ್ವಾದಿಧರ್ಮಗಳನ್ನು ಬಿಟ್ಟು ಸ್ವರೂಪಮಾತ್ರದಲ್ಲಿ ಉಪಜೀವ್ಯವಾದರೆ ತತ್=ಆ ಸ್ವರೂಪವು ಕಥಂ ಜ್ಞೇಯಂ='ತತ್ತ್ವಮಸಿ' ಎಂಬ ಶ್ರುತಿಯಿಂದ ಹೇಗೆ ತಾನೇ ತಿಳಿಯಲ್ಪಡಬೇಕು?

ಯದಿ=ಒಂದು ವೇಳೆ ಸರ್ವಜ್ಞತ್ವಾದಿಲಕ್ಷಣಂ=ಸರ್ವಜ್ಞತ್ವಾದಿರೂಪವಾದ ಲಕ್ಷಣವನ್ನು ವಿಹಾಯ=ಬಿಟ್ಟು ತತ್ತ್ವಾದಿಧರ್ಮವಿಶಿಷ್ಟಕ್ಕೆ ಉಪಜೀವ್ಯತ್ವಂ=ಉಪಜೀವ್ಯತ್ವವು ಇರುವುದಾದಲ್ಲಿ ಯಸ್ಮಾತ್‌ಕಸ್ಮಾಚ್ಚಿತ್ ಸ್ವರೂಪಸ್ಯೈವ=ಯಾವುದೋ ಒಂದು ತತ್ತ್ವಾದಿವಿಶಿಷ್ಟವಾದ ಚೇತನದ ದೆಸೆಯಿಂದ ಜೀವನಿಗೆ ಅಭೇದವು ಸಿದ್ಧವಾಗುವುದರಿಂದ ಅದು ಬ್ರಹ್ಮವೆಂದು ತಿಳಿಯುವುದು ಹೇಗೆ?

ಏತಸ್ಮಾತ್=ಈ ಕಾರಣದಿಂದಾಗಿ ಯಾವತಾ=ಯಾವ ಧರ್ಮದಿಂದ ವ್ಯಾವೃತ್ತಂ ಭವೇತ್=ತಿಳಿಯಲ್ಪಡಬೇಕಾದ ತತ್ತ್ವವು ಇತರವ್ಯಾವೃತ್ತವಾಗಿ ತಿಳಿಯಲ್ಪಡುವುದೋ ತಾವತ್ತೈವ=ಆಧರ್ಮಗಳಿಂದ ವಿಶಿಷ್ಟವಾದುದಕ್ಕೇ ಉಪಜೀವ್ಯತ್ವಂ=ಉಪಜೀವ್ಯತ್ವವು ಇದೆ, ಕ್ವಚಿತ್=ಎಲ್ಲೂ ಸ್ವರೂಪಸ್ಯೈವ ನ= ಕೇವಲ ಸ್ವರೂಪಕ್ಕೆ ಉಪಜೀವ್ಯತ್ವವು ಇಲ್ಲ.

**ಭಾವಾರ್ಥ—** 'ಇದಂ ರಜತಂ' ಎಂಬ ಭ್ರಮೆಯು ಇದಂ ಎಂಬ ಧರ್ಮ್ಯಂಶದಲ್ಲಿ ಮಾತ್ರ 'ನೇದಂ ರಜತಂ'ಎಂಬ ಬಾಧಕಜ್ಞಾನಕ್ಕೆ ಉಪಜೀವ್ಯವಾಗುವಂತೆ 'ಯಃ ಸರ್ವಜ್ಞಃ' ಎಂಬ ಶ್ರುತಿಯೂ 'ಯಃ' ಎಂಬ ಧರ್ಮ್ಯಂಶದಲ್ಲಿ ಮಾತ್ರ 'ತತ್ತ್ವಮಸಿ' ಎಂಬ ಶ್ರುತಿಗೆ ಉಪಜೀವ್ಯವಾಗಬಹುದೇ? ಅಂದರೆ 'ತತ್ತ್ವಮಸಿ' ಎಂಬ ಶ್ರುತಿಯಲ್ಲಿ ತತ್ ಎಂದರೆ ಅದು. ಅದು ಎಂದರೆ ತತ್ತಾವಿಶಿಷ್ಟವಾದ ಸ್ವರೂಪ. ಅದು ಸರ್ವಜ್ಞತ್ವವಿಶಿಷ್ಟ ಚೇತನವೇ ಆಗಬೇಕಿಲ್ಲ, ಯಾವುದಾದರೂ ಆಗಬಹುದು. 'ಅಂತಹವನು

ನೀನು' ಎಂದರ್ಥ. ಆದರೆ, ಹೀಗೆ ಹೇಳಿದರೆ ಜೀವನಿಗೆ ಬ್ರಹ್ಮನಿಂದ ಅಭೇದವು ಸಿದ್ಧವಾಗುವುದಿಲ್ಲ. ಅದಕ್ಕಾಗಿ 'ಯಃ ಸರ್ವಜ್ಞಃ' ಎಂಬ ಶ್ರುತಿಯಲ್ಲಿ ಸರ್ವಜ್ಞತ್ವ ವಿಶಿಷ್ಟವಾದ ಚೇತನವು ಹೇಳಲ್ಪಟ್ಟಿದ್ದರೂ ಅಲ್ಲಿ ಹೇಳಲಾದ ಚೇತನ ಸ್ವರೂಪವನ್ನು ಮಾತ್ರ 'ತತ್' ಎಂದು ಉಲ್ಲೇಖಿಸಿ 'ತ್ವಮಸಿ' 'ಅದು ಜೀವ' ಎಂದು 'ತತ್ತ್ವಮಸಿ' ಎಂಬ ವಾಕ್ಯವು ಹೇಳುತ್ತದೆ. ಈಗ 'ತತ್ತ್ವಮಸಿ' ಎಂಬ ವಾಕ್ಯಕ್ಕೆ 'ಯಃ ಸರ್ವಜ್ಞಃ' ಎಂಬ ವಾಕ್ಯವು ಧರ್ಮ್ಯಂಶದಲ್ಲಿ ಮಾತ್ರ ಉಪಜೀವ್ಯ. ಧರ್ಮಿಯು ಸತ್ಯತ್ವಧರ್ಮಾಂಶದಲ್ಲಿ ಉಪಜೀವ್ಯವಲ್ಲ. ಅಂತಹ ಸರ್ವಜ್ಞತ್ವಾದಿಧರ್ಮಗಳನ್ನು 'ತತ್ತ್ವಮಸಿ' ಶ್ರುತಿಯು ನಿರಾಕರಿಸಿದರೆ ಉಪಜೀವ್ಯವಿರೋಧವಿಲ್ಲ, ಎಂದು ಪೂರ್ವಪಕ್ಷ.

ಆದರೆ, ಇದು ಸರಿಯಲ್ಲ. ಧರ್ಮವನ್ನು ಹೇಳದೇ ಧರ್ಮಿಯನ್ನು ಮಾತ್ರ ಹೇಳುವ ಶಬ್ದಗಳೇ ಇಲ್ಲ. ಎಲ್ಲ ಶಬ್ದಗಳೂ ಧರ್ಮವಿಶಿಷ್ಟ-ಧರ್ಮಿವಾಚಕಗಳು. ಹೀಗಿರುವಾಗ 'ತತ್ತ್ವಮಸಿ' ಎಂಬ ಶ್ರುತಿಯಲ್ಲಿರುವ ತತ್‌ಶಬ್ದವು ಹಿಂದೆ 'ಯಃ ಸರ್ವಜ್ಞಃ' ಎಂಬ ಶ್ರುತಿಯಲ್ಲಿ ಪ್ರಸ್ತುತವಾದ ಧರ್ಮಿಯನ್ನು ಮಾತ್ರ ಹೇಳಲು ಸಾಧ್ಯವಿಲ್ಲ. ಅಷ್ಟೇ ಅಲ್ಲ, ಪೂರ್ವಪ್ರಸ್ತುತ ವಾದ ಸರ್ವಜ್ಞತ್ವವಿಶಿಷ್ಟವಾದ ಧರ್ಮಿಯಲ್ಲಿ ವಿಶೇಷಣವಾಗಿ ತೋರುವ ಸರ್ವಜ್ಞತ್ವವನ್ನು ಬಿಟ್ಟು 'ಪ್ರಸ್ತುತತ್ವ' (ತತ್ತಾ) ಎಂಬ ಸಾಮಾನ್ಯಧರ್ಮ ವಿಶಿಷ್ಟವಾದುದನ್ನು 'ತತ್' ಎಂಬ ಶಬ್ದವು ಹೇಳಿದರೂ 'ಅದು ನೀನು' ಎಂದಿಷ್ಟೇ ಶ್ರುತಿಗೆ ಅರ್ಥವಾದೀತು. ಅದು ಎಂದರೆ ಯಾವುದು ಬೇಕಾದರೂ ಆಗಬಹುದು. ಬ್ರಹ್ಮನೇ ಆಗಬೇಕಾಗಿಲ್ಲ, ಅದರಿಂದ ಜೀವನು ಬ್ರಹ್ಮ, ಎಂದಂತಾಗುವುದಿಲ್ಲ. ಆದ್ದರಿಂದ ಅವಿವಕ್ಷಿತವಾದುದನ್ನು ಬಿಟ್ಟು ವಿವಕ್ಷಿತ ವಾದ ಬ್ರಹ್ಮತತ್ತ್ವವೇ ನೀನು, ಎನ್ನುವ ಅರ್ಥ ತಿಳಿಯಬೇಕಾದರೆ ತತ್ ಎಂಬ ಶಬ್ದಕ್ಕೆ ಪೂರ್ವಪ್ರಸ್ತುತವಾದ ಸರ್ವಜ್ಞತ್ವಾದಿವಿಶೇಷಣಗಳಿಂದ ವಿಶಿಷ್ಟವಾದ ಚೇತನ ಎಂದೇ ಅರ್ಥವನ್ನು ಹೇಳಬೇಕು. ಹಾಗೆ ಹೇಳಿದಾಗ 'ಯಃ ಸರ್ವಜ್ಞಃ' ಎಂಬ ವಾಕ್ಯವು ಧರ್ಮ್ಯಂಶದಲ್ಲಿ ಮಾತ್ರ ಉಪಜೀವ್ಯವಲ್ಲ. ಧರ್ಮಾಂಶ ದಲ್ಲೂ ಉಪಜೀವ್ಯವಾಗುತ್ತದೆ. ಆಗ 'ತತ್ತ್ವಮಸಿ' ಶ್ರುತಿಯು ಧರ್ಮ ಮಿಥ್ಯಾ ಎಂದು ಹೇಳಿದರೆ ಉಪಜೀವ್ಯವಿರೋಧವು ಬಂದೇ ಬರುತ್ತದೆ.

**ಸರ್ವಲಕ್ಷಣಯುಕ್ತಂ ಚ (ತು) ಸ್ವರೂಪಂ ಯದಿ ಭಣ್ಯತೇ ।**
**ಅಸ್ತು ನೋ ನೈವ ಹಾನಿಃ ಸ್ಯಾತ್ ಸ್ವಪಕ್ಷಶ್ಚಾಯಮಂಜಸಾ ॥ ೧೭೦ ॥**

**ಯಸ್ಮಾದನ್ವಿತ ಏವಾರ್ಥಃ ಶಬ್ದಾನಾಮಪಿ ಸರ್ವಶಃ ।**
**ವಿಶೇಷಸಾಮಾನ್ಯತಯಾ ಸ್ವರೂಪಮಖಿಲಂ ಭವೇತ್ ॥ ೧೭೧ ॥**

ಯದಿ=ಒಂದುವೇಳೆ ಸರ್ವಲಕ್ಷಣಸಂಯುಕ್ತಂ=ಹಿಂದೆ ಹೇಳಲಾದ ಸೃಷ್ಟಿಕರ್ತೃತ್ವಾದಿಲಕ್ಷಣಗಳಿಂದ ಸಂಪನ್ನವಾದ ಸ್ವರೂಪಂ=ಬ್ರಹ್ಮಸ್ವರೂಪವೇ ಭಣ್ಯತೇ=ತತ್‌ಶಬ್ದದಿಂದ ಹೇಳಲ್ಪಡುತ್ತದೆ, ಎಂದು ಯದಿ ಭಣ್ಯತೇ=ನಿನ್ನಿಂದ ಹೇಳಲ್ಪಡುವುದಾದಲ್ಲಿ ಅಸ್ತು=ಅದು ನಮಗೆ ಸಮ್ಮತವೆ. ನಃ=ನಮಗೆ ನೈವ ಹಾನಿಃ ಸ್ಯಾತ್=ಯಾವ ಹಾನಿಯೂ ಇಲ್ಲ. ಅಯಂ=ಇದು ಅಂಜಸಾ=ವಾಸ್ತವವಾದ ಸ್ವಪಕ್ಷಶ್ಚ=ನಮ್ಮ ಪಕ್ಷವೇ ಆಗಿದೆ. ಯಸ್ಮಾತ್=ಯಾವ ಕಾರಣದಿಂದಾಗಿ ಸರ್ವಶೋಽಪಿ ಶಬ್ದಾನಾಂ=ಎಲ್ಲಾ ಶಬ್ದಗಳಿಗೂ ಅನ್ವಿತ ಏವಾರ್ಥಃ=ಇತರಾನ್ವಿತವಾದುದೇ ಅರ್ಥವಾಗಿದೆ.

ಅಖಿಲಂ ಸ್ವರೂಪಂ=ಯೋಗ್ಯೇತರಾನ್ವಿತವಾದ ಸ್ವರೂಪವು ಎಲ್ಲವೂ ವಿಶೇಷಸಾಮಾನ್ಯತಯಾ=ವಿಶೇಷವಾಗಿ ಸರ್ವಜ್ಞಾದಿಶಬ್ದಗಳಿಂದ ಸರ್ವ ನಾಮಶಬ್ದಗಳಿಂದ ಸಾಮಾನ್ಯವಾಗಿ ಶಬ್ದಬೋಧ್ಯಂ ಭವೇತ್=ಶಬ್ದಗಳಿಂದ ವಾಚ್ಯವಾಗುತ್ತದೆ.

ಭಾವಾರ್ಥ— 'ತತ್ತ್ವಮಸಿ' ಎಂಬ ಶ್ರುತಿಯು 'ಸದೇವ ಸೋಮ್ಯೇದಮಗ್ರ ಆಸೀತ್' ಎಂದು ಆರಂಭಗೊಳ್ಳುವ ಛಾಂದೋಗ್ಯೋಪನಿಷತ್ತಿನ ಪ್ರಕರಣದಲ್ಲಿದೆ. ಆ ಪ್ರಕರಣದಲ್ಲಿ ಬ್ರಹ್ಮನಿಗೆ ಸೃಷ್ಟಿಕರ್ತೃತ್ವವನ್ನು ಹೇಳಿ 'ತತ್ತ್ವಮಸಿ' ಎಂದು ಉದ್ದಾಲಕರು ಶ್ವೇತಕೇತುವಿಗೆ 'ಆ ಬ್ರಹ್ಮನೇ ನೀನು' ಎನ್ನುತ್ತಾರೆ. ಇಲ್ಲಿ ತತ್ ಎಂಬ ಶಬ್ದವು ಯೋಗ್ಯೇತರಾನ್ವಿತಸ್ವಾರ್ಥವನ್ನು ಹೇಳುತ್ತದೆ. ಹಿಂದೆ ಹೇಳಿರುವ ಜಗತ್‌ಕರ್ತೃತ್ವಾದಿಗುಣಗಳೆಲ್ಲವೂ ಬ್ರಹ್ಮನಿಗೆ ಯೋಗ್ಯವಾಗಿವೆ. ಅಂತಹ ಗುಣೋಪೇತನಾದ ಬ್ರಹ್ಮನೇ ತತ್ ಎಂಬ ಶಬ್ದದ ಅರ್ಥ ಎಂದು ಹೇಳುವುದಾದಲ್ಲಿ ನಮ್ಮ ಅಭ್ಯಂತರವೇನೂ ಇಲ್ಲ. ನಾವೂ ಅದೇ ಅರ್ಥವನ್ನು ಹೇಳುತ್ತೇವೆ. ವಸ್ತುವಿನ ಯೋಗ್ಯೇತರಾನ್ವಿತ ಸ್ವರೂಪವನ್ನು

'ತತ್' ಎಂಬ ಶಬ್ದವು ಸಾಮಾನ್ಯವಾಗಿ 'ಅದು' ಎಂದೂ 'ಸರ್ವಜ್ಞಃ' ಎಂಬ ಶಬ್ದವು ಸರ್ವವನ್ನೂ ತಿಳಿದವನು ಎಂದು ವಿಶೇಷವಾಗಿಯೂ ಹೇಳುತ್ತದೆ.

ಹೀಗೆ ತತ್‌ಶಬ್ದವು ಪೂರ್ವಪ್ರಸ್ತುತನಾದ ಬ್ರಹ್ಮವಾಚಕವಾದಾಗ ಅದಕ್ಕಿಂತ ಪೂರ್ವದಲ್ಲಿ ಬರುವ ವಾಕ್ಯಗಳು ಇತರರಲ್ಲಿ ಇಲ್ಲದ ಬ್ರಹ್ಮನಲ್ಲಿ ಮಾತ್ರ ಇರುವ ಗುಣಗಳನ್ನು ಹೇಳಬೇಕು. ಆಗ ತಾದೃಶಗುಣವಿಶಿಷ್ಟನಾದ ಬ್ರಹ್ಮನನ್ನು ತಿಳಿಸುವ ವಾಕ್ಯಗಳೇ ಉಪಜೀವ್ಯಗಳಾಗುತ್ತವೆ. ಅದಕ್ಕೆ ವಿರುದ್ಧವಾಗಿ ಉಪಜೀವ್ಯವಾಕ್ಯ–ತತ್ತ್ವಮಸಿ ಎನ್ನುವ ವಾಕ್ಯವು ಗುಣಗಳನ್ನು ನಿಷೇಧಿಸಿದರೆ ಉಪಜೀವ್ಯವಿರೋಧವು ಇದ್ದೇ ಇದೆ.

**ಪುರೋವರ್ತಿತ್ವಪೂರ್ವಾಣಿ ದೇವದತ್ತಾದಿಕಭ್ರಮೇ ।**
**ವ್ಯಾವರ್ತಯಂತಿ ತದ್ರೂಪಂ ಚೈತ್ರಮಾತ್ರಾದ್ ವಿನೈವ ತು**

**(ಹಿ) ॥ ೧೭೨॥**

ದೇವದತ್ತಾದಿಕೇ ಭ್ರಮೇ=ದೇವದತ್ತನಲ್ಲಿ 'ಇವನು ಚೈತ್ರ' ಎನ್ನುವ ಭ್ರಮೆ ಬಂದಾಗ ಪುರೋವರ್ತಿತ್ವಪೂರ್ವಾಣಿ=ಪುರೋವರ್ತಿತ್ವವೇ ಮೊದಲಾದ ಸಾಧಾರಣಧರ್ಮಗಳು ಚೈತ್ರಮಾತ್ರಾತ್ ವಿನೈವ=ಚೈತ್ರನನ್ನು ಬಿಟ್ಟು ಇತರ ಪುರೋವರ್ತಿಯಾಗಿರದ ಪದಾರ್ಥಗಳಿಂದ ತದ್ರೂಪಂ=ದೇವದತ್ತ ಸ್ವರೂಪವನ್ನು ವ್ಯಾವರ್ತಯಂತಿ=ಬೇರೆಯಾಗಿ ತಿಳಿಸುತ್ತವೆ.

**ಭಾವಾರ್ಥ—** ವ್ಯಾವರ್ತಕಧರ್ಮಗಳಿಂದ ವ್ಯಾವೃತ್ತವಾದ ಸ್ವರೂಪವೇ ಭ್ರಮೆಯಲ್ಲೂ ಉಪಜೀವ್ಯವಾಗಿರುತ್ತದೆ. ಉದಾಹರಣೆಗೆ— ದೇವದತ್ತನನ್ನು ನೋಡಿ 'ಇವನು ಚೈತ್ರ' ಎಂದು ಭ್ರಮೆ ಬಂದಾಗ ನಮ್ಮ ಮುಂದಿರುವ ದೇವದತ್ತನು 'ಅಯಂ(ಇವನು)' ಎಂದು ತಿಳಿಯಲ್ಪಡುತ್ತಾನೆ. 'ಇವನು ದೇವದತ್ತ' ಎಂದು ತಿಳಿಯುವ ಬದಲು 'ಅಯಂ' ಎಂದು ಇದಂತ್ವೇನ ಜ್ಞಾತನಾಗುತ್ತಾನೆ. ಜ್ಞಾತವಾದ ಇದಂತ್ವವು ಅವನಲ್ಲಿದೆ. ಅದು ಚೈತ್ರ ಬಿಟ್ಟು ಇತರೆಲ್ಲಾ ಪುರೋವರ್ತಿಯಲ್ಲದಿರುವವರನ್ನು ವ್ಯಾವೃತ್ತಿಗೊಳಿಸುತ್ತದೆ. ಅಂದರೆ, ನನ್ನ ಮುಂದೆ ಚೈತ್ರನ ಹೊರತಾಗಿ ಇನ್ನಾರೂ ಇಲ್ಲ, ಎಂದು ತಿಳಿಸುತ್ತದೆ. ಹೀಗೆ ಮುಂದಿರುವ ವ್ಯಕ್ತಿ ದೇವದತ್ತನೆಂದು ತಿಳಿಯಲ್ಪಡದಿದ್ದರೂ

ಇದಂತ್ವೇನ ತಿಳಿಯಲ್ಪಟ್ಟಿದ್ದಾನೆ. ಆ ಇದಂತ್ವವು ಅನಿದಂ ಪದಾರ್ಥಗಳಿಂದ ವ್ಯಾವರ್ತಕವೂ ಆಗಿದೆ. ಆದ್ದರಿಂದ ಇದಂತ್ವರೂಪವಾದ ವ್ಯಾವರ್ತಕಧರ್ಮದಿಂದ ವ್ಯಾವೃತ್ತವಾದ ಸ್ವರೂಪವೇ 'ಅಯಂ ಚೈತ್ರಃ' ಎಂಬ ಭ್ರಮೆಯಲ್ಲಿ ವಿಷಯ. ಅದು 'ನಾಯಂ ಚೈತ್ರಃ' ಎಂಬ ಬಾಧಕಜ್ಞಾನಕ್ಕೆ ಉಪಜೀವ್ಯ. ಆದ್ದರಿಂದ ಭ್ರಮೆ ಬಂದಾಗ ವ್ಯಾವೃತ್ತಸ್ವರೂಪವೇ ಬಾಧಕಜ್ಞಾನಕ್ಕೆ ಉಪಜೀವ್ಯವಾಗಿರುತ್ತದೆ, ಕೇವಲ ಸ್ವರೂಪವಲ್ಲ.

**ಬ್ರಹ್ಮಣೋ ನಿರ್ವಿಶೇಷತ್ವಾದ್ ವ್ಯಾವರ್ತಯತಿ ಕಿಂ ಪುನಃ ।**
**ಯಸ್ಮಾತ್ಕಸ್ಮಾಚ್ಚಿದಪ್ಯರ್ಥಾತ್ ತಾವಚ್ಚೇತ್ ಸಿದ್ಧಸಾಧನಮ್ ॥ ೧೭೩ ॥**

ಬ್ರಹ್ಮಣಃ ಪುನಃ=ಬ್ರಹ್ಮನಿಗಾದರೋ ನಿರ್ವಿಶೇಷತ್ವಾತ್=ಯಾವ ಧರ್ಮಗಳೂ ಇಲ್ಲದಿರುವುದರಿಂದ ಕಿಂ ವ್ಯಾವರ್ತಯತಿ=ವ್ಯಾವರ್ತಕವು ಯಾವುದು ಇರಲು ಸಾಧ್ಯ? (ತತ್ತ್ವಮಸಿ, ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ) 'ತತ್ತ್ವ' ಎಂಬ ವಿಶೇಷಣದಿಂದ ಯಸ್ಮಾತ್ ಕಸ್ಮಾಚ್ಚಿದಪ್ಯರ್ಥಾತ್ ಚೇತ್='ತತ್ತ್ವ' ರಹಿತವಾದ ಯಾವುದೋ ಒಂದು ವಸ್ತುವಿನಿಂದ ವ್ಯಾವೃತ್ತಿಯನ್ನು ತಿಳಿಸಿ ತಾವತ್= ಅಂತಹ ವ್ಯಾವೃತ್ತವಾದ ಸ್ವರೂಪವನ್ನು ಉಪಜೀವಿಸಿ 'ತ್ವಮಸಿ=ನೀನಾಗಿದ್ದಿ' ಎಂದು ಶ್ರುತಿಯು ತಿಳಿಸಿದರೆ ಸಿದ್ಧಸಾಧನಂ=ಶ್ರುತಿಯು ತಿಳಿದಿರುವುದನ್ನೇ ತಿಳಿಸಿದಂತಾಗುತ್ತದೆ.

**ಭಾವಾರ್ಥ—** ಇಲ್ಲಿ 'ತತ್ತ್ವಮಸಿ' ಶ್ರುತಿಗೆ 'ಯಃ ಸರ್ವಜ್ಞಃ' ಎಂಬ ಶ್ರುತಿಯು ಧರ್ಮ್ಯಂಶದಲ್ಲಿ ಉಪಜೀವ್ಯ ಎನ್ನುವ ವಾದಕ್ಕೆ ದೋಷಾಂತರವನ್ನು ಹೇಳಲಾಗಿದೆ— ಅದ್ವೈತಬ್ರಹ್ಮ ನಿರ್ವಿಶೇಷ. ಅವನಲ್ಲಿ ಇತರ ವ್ಯಾವರ್ತಕವಾದ ಯಾವ ಧರ್ಮಗಳೂ ಇಲ್ಲ. ಆದ್ದರಿಂದ ಅವನಲ್ಲಿ ವ್ಯಾವೃತ್ತತ್ವವೇ ಇಲ್ಲ. ಅವ್ಯಾವೃತ್ತವಾದ ಸ್ವರೂಪವು ಉಪಜೀವ್ಯವಾಗುವುದಿಲ್ಲ, ಎಂದು ಹಿಂದೆ ಹೇಳಲಾಗಿದೆ. ಆದ್ದರಿಂದ 'ಯಃ ಸರ್ವಜ್ಞಃ' ಎಂಬ ವಾಕ್ಯವು ಸ್ವರೂಪಾಂಶದಲ್ಲಿ ಉಪಜೀವ್ಯ, ಎಂದು ಹೇಳಲಾಗದು.

'ತತ್' ಎಂಬ ಪದದ ಅರ್ಥವಾದ 'ತತ್ತ್ವ' ಎಂಬ ಧರ್ಮವಿಶಿಷ್ಟನಾದ ಬ್ರಹ್ಮನು ಉಪಜೀವ್ಯ ಎನ್ನುವುದೂ ಸರಿಯಲ್ಲ. ತತ್ತ್ವರೂಪಧರ್ಮವು 'ತತ್ತ್ವ'

ರಹಿತವಾದ ಪುರೋವರ್ತಿ ವಸ್ತುವಿನಿಂದ ವ್ಯಾವೃತ್ತಿಯನ್ನು ತಿಳಿಸುತ್ತದೆ. ಅಂತಹ ವಸ್ತು ದೇಶಾಂತರದಲ್ಲಿರುವ ಘಟಾದಿಗಳು. ಅವುಗಳಿಂದ ವ್ಯಾವೃತ್ತಿಯು ಜೀವನಲ್ಲಿ ಸಿದ್ಧವಾಗಿದೆ. ಅದನ್ನು ತಿಳಿಸುವ 'ತತ್ತ್ವಮಸಿ' ಎಂಬ ವಾಕ್ಯವು ವ್ಯರ್ಥ ವಾದಂತಾಗಿ ಅದು ಶಾಸ್ತ್ರವೆನಿಸಲಾರದು.

**ಚಿನ್ಮಾತ್ರತ್ವಂ ಚ ನೈವೇಷ್ಟಮವಿಶೇಷತ್ವವಾದಿನಃ ।**
**ತಾವನ್ಮಾತ್ರಂ ಯದೀಷ್ಟಂ ಸ್ಯಾತ್ ಸರ್ವಜ್ಞತ್ವಂ ಕುತೋ**
**ನ ತತ್ ॥ ೧೭೪ ॥**

ಚಿನ್ಮಾತ್ರತ್ವಂ ಚ=ನಿರ್ವಿಷಯಕವಾದ ಜ್ಞಾನಸ್ವರೂಪತ್ವವೂ ಕೂಡಾ ಅವಿಶೇಷತ್ವವಾದಿನಃ=ಬ್ರಹ್ಮನಲ್ಲಿ ಯಾವ ವಿಶೇಷಗಳೂ ಇಲ್ಲ ಎನ್ನುವ ಅದ್ವೈತ ವಾದಿಗೆ ನೈವ ಇಷ್ಟಂ=ಅಭಿಪ್ರೇತವಲ್ಲ. ತಾವನ್ಮಾತ್ರಂ=ಚಿನ್ಮಾತ್ರವು ಯದಿ ಇಷ್ಟಂ ಸ್ಯಾತ್=ಬ್ರಹ್ಮನಿಗೆ ಇದೆ, ಎಂದು ಸಮ್ಮತವಾಗುವುದಾದಲ್ಲಿ ತತ್= ಹಾಗಿದ್ದಲ್ಲಿ ಸರ್ವಜ್ಞತ್ವಂ ಕುತೋ ನ=ಸರ್ವಜ್ಞತ್ವಧರ್ಮವೂ ಬ್ರಹ್ಮನಲ್ಲಿ ಏಕಿಲ್ಲ?

**ಭಾವಾರ್ಥ—** ಬ್ರಹ್ಮನು ನಿರ್ವಿಶೇಷನಾದರೂ 'ವಿಜ್ಞಾನಮಾನಂದಂ ಬ್ರಹ್ಮ' ಎಂಬ ಶ್ರುತಿಯು ಜ್ಞಾನರೂಪ, ಆನಂದರೂಪ ಎನ್ನುತ್ತದೆ. ಆದ್ದರಿಂದ ಅವನಲ್ಲಿ ಚಿನ್ಮಾತ್ರತ್ವ (ಜ್ಞಾನರೂಪತ್ವ) ಎಂಬ ಧರ್ಮವು ಇದೆ. ಆ ಧರ್ಮವೂ ಬ್ರಹ್ಮಸ್ವರೂಪವೇ ಆಗಿದೆ. ಇದರಿಂದ ನಿರ್ವಿಶೇಷಬ್ರಹ್ಮವಾದಕ್ಕೆ ಚ್ಯುತಿಯೂ ಇಲ್ಲ, ಎನ್ನುವುದಾದಲ್ಲಿ 'ಯಃ ಸರ್ವಜ್ಞಃ' ಎಂಬ ಶ್ರುತಿ ಹೇಳುವ ವಿಜ್ಞಾನ ಸ್ವರೂಪತ್ವವೂ ಇದೇರೀತಿ ಬ್ರಹ್ಮನಲ್ಲಿ ಏಕೆ ಇರಬಾರದು? ಆದ್ದರಿಂದ ಆ ಶ್ರುತಿಯು ಧರ್ಮಾಂಶದಲ್ಲಿಯೂ ಉಪಜೀವ್ಯವಾಗಬಹುದು.

**ಚಿನ್ಮಾತ್ರಾಭೇದಸಾಧ್ಯೇಽಪಿ ಸಿದ್ಧಂ ತತ್ ಪ್ರತಿವಾದಿನಃ ।**
**ಸ್ವಾಭೇದಾಂಗೀಕೃತೇರೇವ ಚಿತ್ತ್ವಂ ಸ್ವಸ್ಯಾಪಿ ಯನ್ಮತಮ್ ॥ ೧೭೫ ॥**

ತತ್ತ್ವಮಸಿ, ಎಂಬ ಶ್ರುತಿಯಿಂದ ಚಿನ್ಮಾತ್ರಾಭೇದಸಾಧ್ಯೇಽಪಿ=ಚಿನ್ಮಾತ್ರ ದಿಂದ ಅಭೇದವು ಬೋಧಿತವಾದರೂ ತತ್=ಅದು ಪ್ರತಿವಾದಿನಃ=

ಪ್ರತಿವಾದಿಯಾದ ಭೇದವಾದಿಗೆ ಸಿದ್ಧಂ=ಸಿದ್ಧವಾಗಿದೆ. ಯತ್=ಯಾವ ಕಾರಣದಿಂದ ಸ್ವಸ್ಯಾಪಿ=ತ್ವಂ ಪದಪ್ರತಿಪಾದ್ಯನಾದ ಜೀವನಿಗೂ ಚಿತ್ತ್ವಂ= ಚಿನ್ಮಾತ್ರತ್ವವು ಮತಂ=ಅಭಿಮತವಾಗಿದೆಯೋ ಸ್ವಾಭೇದಾಂಗೀಕೃತೇರೇವ= ತನಗೆ ತನ್ನಿಂದ ಅಭೇದವು ಅಂಗೀಕರಿಸಲ್ಪಟ್ಟಿರುವುದರಿಂದಲೇ ಪ್ರತಿವಾದಿನಃ ಸಿದ್ಧಂ=ಭೇದವಾದಿಗೂ ಚಿನ್ಮಾತ್ರಾಭೇದವು ಸಿದ್ಧವಾಗಿದೆ.

ಭಾವಾರ್ಥ— ಬ್ರಹ್ಮನು ಸರ್ವಜ್ಞನೆಂದೂ ಚಿನ್ಮಾತ್ರನೆಂದೂ ಶ್ರುತವಾಗಿದ್ದರೂ ತತ್ ಎಂಬ ಪದಕ್ಕೆ ಚಿನ್ಮಾತ್ರ, ಎಂದು ಮಾತ್ರ ಅರ್ಥ. ಅದು ಅಭೇದಕ್ಕೆ ವಿರುದ್ಧವಲ್ಲದ ಧರ್ಮ. ಸರ್ವಜ್ಞ ಎಂದು ಅರ್ಥವಲ್ಲ. ಏಕೆಂದರೆ, ಅದು ಅಭೇದಕ್ಕೆ ವಿರುದ್ಧವಾದ ಧರ್ಮ. ಹೀಗೆ ಹೇಳಿದಾಗ 'ತತ್-ತ್ವಮಸಿ' ಎಂದರೆ 'ನೀನು ಚಿನ್ಮಾತ್ರ' ಎಂದಂತಾಗುತ್ತದೆ. ತ್ವಂಪದಾರ್ಥವಾದ ಜೀವನು, ಚಿತ್‌ಸ್ವರೂಪನೆಂದು ಭೇದವಾದಿಗಳಿಗೂ ಸಮ್ಮತವಾಗಿದೆ. ಆದ್ದರಿಂದ ಶ್ರುತಿಯು ಸಿದ್ಧಾರ್ಥಬೋಧಕವಾಗಿದೆ.

**ಸರ್ವಾಪೇಕ್ಷತಯಾ ಸರ್ವಜ್ಞತ್ವಮಿತ್ಯೇವ ತನ್ನಹಿ ।**
**ಇತಿ ಚೇಚ್ಚೇತನತ್ವಂ ಚ ಜ್ಞತ್ವಂ ನ ಜ್ಞೇಯವರ್ಜಿತಮ್ ॥ ೧೭೬ ॥**

ಸರ್ವಜ್ಞತ್ವವು ಸರ್ವಾಪೇಕ್ಷಯಾ=ಸರ್ವವನ್ನೂ ಅವಲಂಬಿಸಿರುವುದ ರಿಂದಾಗಿ ಸರ್ವಜ್ಞತ್ವಮೇವ ನಹಿ=ಬ್ರಹ್ಮನಿಗೆ ಸರ್ವಜ್ಞತ್ವವೇ ಮಿಥ್ಯಾ ಇತಿ ಚೇತ್=ಹೀಗೆ ಹೇಳುವುದಾದರೆ ಚೇತನತ್ವಂ ಚ=ಚೇತನತ್ವವೂ ಜ್ಞತ್ವಂ= ಜ್ಞಾನರೂಪವಾದುದು. ಜ್ಞತ್ವಂ=ಜ್ಞಾನವೂ ಜ್ಞೇಯವರ್ಜಿತಂ ನ=ಜ್ಞೇಯ ರಹಿತವಾಗಿ ಇರುವುದಿಲ್ಲ.

ಭಾವಾರ್ಥ— ಬ್ರಹ್ಮನಲ್ಲಿ ಸರ್ವಜ್ಞತ್ವವನ್ನು, ಜ್ಞಾನರೂಪತ್ವವನ್ನೂ ಶ್ರುತಿಯು ಹೇಳುತ್ತದೆ. ಅವುಗಳಲ್ಲಿ ಸರ್ವಜ್ಞತ್ವವು ಸರ್ವಸಾಪೇಕ್ಷ ವಾದುದರಿಂದ ಬ್ರಹ್ಮರೂಪವಲ್ಲ. ಜ್ಞಾನವು ಬ್ರಹ್ಮರೂಪವಾಗುವುದಕ್ಕೆ ಇಂತಹ ಬಾಧಕಗಳಿಲ್ಲ, ಎಂದು ಆಕ್ಷೇಪ. ಇದು ಸರಿಯಲ್ಲ. ಜ್ಞಾನವೂ ವಿಷಯ ಸಾಪೇಕ್ಷ. ವಿಷಯವಿಲ್ಲದ ಜ್ಞಾನವೇ ಇಲ್ಲ. ಆದ್ದರಿಂದ ಅದೂ ಬ್ರಹ್ಮರೂಪ ವಾಗಲಾರದು.

**ಸ್ವಜ್ಞೇಯತ್ವಂ ಚ ನೈವಾಸೌ ಮನ್ಯತೇ ಸವಿಶೇಷತಃ ।**
**ಸ್ವಶಬ್ದೋಽಪಿ ಪರಾಪೇಕ್ಷಸ್ತಸ್ಮಾದ್ ವ್ಯಾವೃತ್ತಿರೇವ ಹಿ ।**
**ಸ್ವಶಬ್ದಾರ್ಥ ಇತಿ ಪ್ರೋಕ್ತಃ ಸ್ವರೂಪಂ ನಾಮ ಕಿಂ ನ ಚೇತ್ ॥ ೧೭೭ ॥**

ಅಸೌ ತು=ಮಾಯಾವಾದಿಯಾದರೂ ಸವಿಶೇಷತಃ=ಬ್ರಹ್ಮನಿಗೆ ಸವಿಶೇಷತ್ವ ಬರುವ ಕಾರಣದಿಂದಾಗಿ ಸ್ವಜ್ಞೇಯತ್ವಂ=ಸವಿಷಯಕಜ್ಞಾನವತ್ತ್ವವನ್ನು ನೈವ ಮನ್ಯತೇ=ಅಂಗೀಕರಿಸುವುದೇ ಇಲ್ಲ.

**ಭಾವಾರ್ಥ—** ಜ್ಞಾನಕ್ಕೆ ವಿಷಯವು ಇರಲೇಬೇಕು. ಏಕೆಂದರೆ, ಜ್ಞಾನ ಸಕರ್ಮಕವಾದ ಕ್ರಿಯೆ. ಅದು ಕರ್ಮವಿಲ್ಲದೆ ಇರಲಾರದು. ವಿಷಯವೇ ಕರ್ಮ. ಜ್ಞಾನಕ್ಕೆ ಒಂದೋ ಬ್ರಹ್ಮನು ವಿಷಯನಾಗಬೇಕು. ಇಲ್ಲವೆ, ಬ್ರಹ್ಮ ಭಿನ್ನವಾದುದು ವಿಷಯವಾಗಬೇಕು. ಬ್ರಹ್ಮರೂಪಜ್ಞಾನಕ್ಕೆ ಬ್ರಹ್ಮನು ಕರ್ತೃ. ಅವನೇ ಅದಕ್ಕೆ ವಿಷಯನೂ ಆದರೆ ಜ್ಞಾನದ ಕರ್ತೃತ್ವ ಮತ್ತು ಕರ್ಮತ್ವ ಎರಡೂ ಬ್ರಹ್ಮನಲ್ಲಿ ಬರಬೇಕಾಗುತ್ತದೆ. ಆದ್ದರಿಂದ ಬ್ರಹ್ಮನಲ್ಲಿರುವ ಜ್ಞಾನಕ್ಕೆ ಬ್ರಹ್ಮನು ವಿಷಯನಲ್ಲ. ಬ್ರಹ್ಮಭಿನ್ನವಾದುದೆಲ್ಲ ಮಿಥ್ಯಾ. ಮಿಥ್ಯಾಸಾಪೇಕ್ಷವಾದ ಚೇತನತ್ವವೂ ಮಿಥ್ಯಾ. ಆದ್ದರಿಂದ ಅದೂ ಬ್ರಹ್ಮಸ್ವರೂಪವಾಗಲು ಸಾಧ್ಯವಿಲ್ಲ.

ಸ್ವಶಬ್ದೋಽಪಿ=ಸ್ವರೂಪಮಾತ್ರಮುಪಜೀವ್ಯಂ, ಎಂದು ಪರರು ಹೇಳುತ್ತಾರೆ. ಇಲ್ಲಿರುವ ಸ್ವಶಬ್ದವೂ ಪರಾಪೇಕ್ಷಃ=ಬ್ರಹ್ಮಭಿನ್ನವಾದ ಅರ್ಥ ಸಾಪೇಕ್ಷಪ್ರತಿಪಾದಕ. ಹೇಗೆಂದರೆ, ತಸ್ಮಾತ್=ಬೇರೊಂದಕ್ಕಿಂತ ವ್ಯಾವೃತ್ತಿ-ರೇವ=ಭೇದವೇ ಸ್ವಶಬ್ದಾರ್ಥಃ ಪ್ರೋಕ್ತಃ=ಸ್ವ ಎಂಬ ಶಬ್ದದ ವಾಚ್ಯವಾಗಿ ಹೇಳಲ್ಪಟ್ಟಿದೆ. ನಚೇತ್=ಹಾಗಲ್ಲವಾದರೆ ಸ್ವರೂಪಂ ನಾಮ ಕಿಂ='ಸ್ವರೂಪ' ಎಂದರೇನು?

**ಭಾವಾರ್ಥ—** ತತ್ತ್ವಮಸಿ ಎಂಬ ಶ್ರುತಿಯು ಬ್ರಹ್ಮಸ್ವರೂಪವನ್ನು ಮಾತ್ರ ಅವಲಂಬಿಸಿದೆ, ಎಂದು ಪರರ ವಾದ. ಹಾಗೆ ಹೇಳಿದರೂ ಅದು ಇತರ ವ್ಯಾವೃತ್ತವಾದ ಸ್ವರೂಪವೇ ಆಗಿರಬೇಕು, ಎಂದು ಸಿದ್ಧಾಂತಿಗಳ ವಾದ. ಪರರ ವಾದವನ್ನು ಒಪ್ಪಿದರೂ 'ಸ್ವ' ಎಂಬ ಶಬ್ದಕ್ಕೆ ಪರವ್ಯಾವೃತ್ತಿವಿಶಿಷ್ಟವಾದುದು,

ಎಂದೇ ಅರ್ಥ. ಹೇಗೆಂದರೆ, ರೂಪಶಬ್ದವು ಸ್ವ ಮತ್ತು ಪರ ಎಂಬ ಎರಡೂ ಅರ್ಥಗಳನ್ನು ಹೇಳುತ್ತದೆ. ಹೀಗೆ ರೂಪ ಎಂಬ ಸಾಧಾರಣಶಬ್ದದಿಂದಲೇ 'ಸ್ವ' ಪದಾರ್ಥವು ವಾಚ್ಯವಾದರೂ ಅದರೊಂದಿಗೆ 'ಸ್ವ' ಎಂಬ ಶಬ್ದವನ್ನು ಸೇರಿಸುವುದರಿಂದ ಪರವ್ಯಾವೃತ್ತರೂಪವು 'ಸ್ವರೂಪ' ಶಬ್ದದ ಅರ್ಥ ಎಂದು ತಿಳಿಯುತ್ತದೆ. ಹೀಗೆ ಬ್ರಹ್ಮಸ್ವರೂಪಮಾತ್ರಸಾಪೇಕ್ಷ ಎಂದಾಗಲೂ ವ್ಯಾವೃತ್ತ ಸ್ವರೂಪವೇ ಲಭ್ಯವಾಗುತ್ತದೆ. ಆಗ ವ್ಯಾವರ್ತಕ-ಧರ್ಮಗಳನ್ನು ಹೇಳಲೇ ಬೇಕು. ಅಂತಹ ವ್ಯಾವರ್ತಕ ಧರ್ಮಗಳು ಸರ್ವಜ್ಞತ್ವಾದಿಗಳೇ ಆಗಬೇಕು.

**ರೂಪಶಬ್ದೇನ ಪೂರ್ಣತ್ವಾತ್ ತಚ್ಚ ಸಾಮಾನ್ಯತಾವಚಃ ।**
**ನ ಸ್ವರೂಪಾಭಿಧಾಯಿ ಸ್ಯಾದ್ ವೈಯರ್ಥ್ಯಂ ಸ್ವ(ರವಸ್ಯ)**
**ಪದಸ್ಯ ಯತ್ ॥ ೧೭೮ ॥**

'ಸ್ವರೂಪ' ಎಂಬ ಶಬ್ದವನ್ನು 'ಸ್ವಂ ಚ ತತ್ ರೂಪಂ ಚ' ಎಂದು ಕರ್ಮಧಾರಯವನ್ನಾಗಿ ಪರಿಗಣಿಸಿದರೆ ರೂಪಶಬ್ದೇನ=ಸ್ವ+ರೂಪ ಎಂಬ ಸಮಸ್ತಪದದಲ್ಲಿರುವ ರೂಪಶಬ್ದದಿಂದಲೇ ಪೂರ್ಣತ್ವಾತ್=ಸ್ವರೂಪಶಬ್ದದ ಅರ್ಥವು ಪೂರ್ಣವಾಗಿ ಸಿಗುವುದರಿಂದ ಯತ್=ಯಾವ ಕಾರಣದಿಂದ ಸ್ವಪದಸ್ಯ ವೈಯ್ಯರ್ಥ್ಯಂ=ಸ್ವ ಎಂಬ ಪದವು ವ್ಯರ್ಥವಾಗುವುದೋ ಆದ್ದರಿಂದ ಸ್ವರೂಪಂ ನಾಮ ಕಿಂ=ಸ್ವರೂಪ ಎಂದರೆ ಯಾವುದು?

ಅಥವಾ 'ಸ್ವರೂಪ' ಎಂಬ ಶಬ್ದವು ಅಖಂಡ ಎಂದು ಪರಿಗಣಿಸುವುದಾದಲ್ಲಿ ಚ=ಯಾವ ಕಾರಣದಿಂದ ತತ್=ರೂಪಪದವು ಸಾಮಾನ್ಯತಾವಚಃ= ಸಾಮಾನ್ಯಾಕಾರವಾಚಕವೋ ಆದುದರಿಂದ ಸ್ವರೂಪಾಭಿಧಾಯಿ ನ ಸ್ಯಾತ್= ಸ್ವರೂಪಕ್ಕೆ ವಾಚಕ ಆಗಲಿಕ್ಕಿಲ್ಲ.

**ಭಾವಾರ್ಥ**— ಸ್ವರೂಪ ಎಂಬ ಶಬ್ದವನ್ನು ಸ್ವಂ ಚ ತತ್ ರೂಪಂ ಚ ಎಂದು ಕರ್ಮಧಾರಯಸಮಾಸವನ್ನಾಗಿ ಪರಿಗಣಿಸಿದರೆ ಕರ್ಮಧಾರಯ ಸಮಾಸದಲ್ಲಿ ಪೂರ್ವೋತ್ತರಪದಗಳಿಗೆ ಏಕಾರ್ಥವಾದುದರಿಂದ ರೂಪಶಬ್ದ ದಿಂದಲೇ ಸಮಗ್ರಾರ್ಥವು ಸಿಗುವಾಗ ಸ್ವಶಬ್ದವು ವ್ಯರ್ಥವಾಗುತ್ತದೆ. 'ಸ್ವರೂಪ' ಶಬ್ದವು ಸ್ವ ಮತ್ತು ರೂಪ ಎಂಬ ಎರಡು ಶಬ್ದಗಳ ಸಮುದಾಯ

ರೂಪವಲ್ಲ, ಅಖಂಡವಾದ ಒಂದೇ ಶಬ್ದ, ಎಂದು ಪರಿಗಣಿಸಿದರೆ ಅದು ಶಬ್ದಪ್ರಮಾಣಜ್ಞರಿಗೆ ವಿರುದ್ಧ. ಏಕೆಂದರೆ, ರೂಪಶಬ್ದವು ಸಾಮಾನ್ಯವಾಚಕ. ಸ್ವರೂಪ ಶಬ್ದವು ವಿಶೇಷವಾಚಕ ಎಂದೇ ಎಲ್ಲರ ಅನುಭವ. ಆದ್ದರಿಂದ ರೂಪಶಬ್ದಕ್ಕೂ ಸ್ವರೂಪಶಬ್ದಕ್ಕೂ ಒಂದೇ ಅರ್ಥವನ್ನು ಹೇಳಲಾಗದು.

**ಚೇತನಸ್ಯ ಸ್ವಭಾವೋ ಹಿ ಚೈತನ್ಯಮಿತಿ ಗೀಯತೇ ।**
**ತಸ್ಮಾದ್ ವಿಶೇಷಬಾಹುಲ್ಯಂ ಚೈತನ್ಯಸ್ಯ ವಿಶೇಷತಃ ॥ ೧೭೯ ॥**

ಚೇತನಸ್ಯ ಸ್ವಭಾವೋ ಹಿ=ಚೇತನನ ಸ್ವಾಭಾವಿಕಧರ್ಮವೇ ಚೈತನ್ಯ ಮಿತಿ ಗೀಯತೇ=ಚೈತನ್ಯಶಬ್ದದ ಪ್ರವೃತ್ತಿನಿಮಿತ್ತ. ಜ್ಞಾನವುಳ್ಳವನೇ ಚೇತನ. ಚೇತನ ಶಬ್ದವು 'ಚಿತೀ' ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಆ ಧಾತುವಿಗೆ ಜ್ಞಾನ ಎಂದರ್ಥ. (ಚಿತೀ–ಸಂಜ್ಞಾನೇ) ಚೇತನಶಬ್ದಕ್ಕೆ ಭಾವಾರ್ಥದಲ್ಲಿ ಷ್ಯಞ್ ಪ್ರತ್ಯಯ ಬಂದು ಚೈತನ್ಯ ಎಂಬ ಶಬ್ದವಾಗುತ್ತದೆ. ಆದಕ್ಕೆ ಜ್ಞಾನ ಎಂದೇ ಅರ್ಥ. ಚೇತನ ಎಂದರೆ ಜ್ಞಾನಿ. ಅವನಲ್ಲಿರುವ ಧರ್ಮ ಜ್ಞಾನ. ಆದ್ದರಿಂದ ಚೈತನ್ಯವೆಂದರೂ ಜ್ಞಾನ. ಚೈತನ್ಯವು ಬ್ರಹ್ಮಸ್ವರೂಪ ಎಂದರೆ ಜ್ಞಾನವು ಬ್ರಹ್ಮಸ್ವರೂಪ, ಎಂದಂತಾಯಿತು.

ತಸ್ಮಾತ್=ಜ್ಞಾನವೇ ಬ್ರಹ್ಮನಾದುದರಿಂದ ಚೈತನ್ಯಸ್ಯ=ಬ್ರಹ್ಮನಿಗೆ ವಿಶೇಷತಃ=ಅತಿಶಯವಾಗಿ ವಿಶೇಷಬಾಹುಲ್ಯಂ ಸ್ಯಾತ್=ವಿಷಯೀಕರಣಾದಿ ಸಾಪೇಕ್ಷತ್ವವು ಬಂದಂತಾಗುತ್ತದೆ.

ಬ್ರಹ್ಮನು ಜ್ಞಾನರೂಪನಾದರೆ, ಜ್ಞಾನವು ಜ್ಞೇಯ–ಕರಣಸಾಪೇಕ್ಷವಾದುದರಿಂದ ಬ್ರಹ್ಮನೂ ತತ್ಸಾಪೇಕ್ಷನಾಗುತ್ತಾನೆ. ಜ್ಞೇಯಾದಿಗಳು ಅಸತ್ಯ, ಬ್ರಹ್ಮನು ಸತ್ಯ. ಸತ್ಯವು ಅಸತ್ಯಸಾಪೇಕ್ಷವಾಗುವುದು ಹೇಗೆ? ಆದ್ದರಿಂದ ಚೈತನ್ಯವು ಬ್ರಹ್ಮರೂಪ ಎನ್ನಲಾಗದು. ಚೈತನ್ಯವು ಬ್ರಹ್ಮನಲ್ಲಿದೆ, ಎಂದೇ ಹೇಳಬೇಕು. ಆಗ ಹಿಂದೆ ಹೇಳಿದಂತೆ ಚೇತನತ್ವವೂ ಬ್ರಹ್ಮನಲ್ಲಿ ಇಲ್ಲ, ಎನ್ನಬೇಕಾಗುತ್ತದೆ ಎಂದುದು ಯುಕ್ತವಾಗುತ್ತದೆ.

**ನ ಜ್ಞೇಯಜ್ಞಾತೃಹೀನಂ ಹಿ ಜ್ಞಾನಂ ನಾಮ ಕ್ವಚಿದ್ ಭವೇತ್ ।**
**ಜ್ಞೇಯಜ್ಞಾನವಿಹೀನಶ್ಚ ಜ್ಞ ಇತ್ಯತ್ರ ಚ ನ ಪ್ರಮಾ ॥ ೧೮೦ ॥**

ಜ್ಞೇಯ–ಜ್ಞಾತೃಹೀನಂ=ಜ್ಞೇಯ ಮತ್ತು ಜ್ಞಾತೃಗಳಿಲ್ಲದ ಜ್ಞಾನಂ ನಾಮ=ಜ್ಞಾನವೆಂಬುದು ಕ್ವಚಿತ್=ಎಲ್ಲೂ, ಎಂದೂ ನ ಭವೇತ್=ಇರಲು ಸಾಧ್ಯವಿಲ್ಲ. ಅದರಂತೆ, ಜ್ಞೇಯ–ಜ್ಞಾನವಿಹೀನಶ್ಚ=ಜ್ಞೇಯ ಮತ್ತು ಜ್ಞಾನ ಇವೆರಡು ಇಲ್ಲದ ಜ್ಞಃ=ಜ್ಞಾತೃವು ಇದ್ದಾನೆ, ಇತ್ಯತ್ರ ಚ=ಈ ಬಗ್ಗೆಯೂ ನ ಪ್ರಮಾ=ಪ್ರಮಾಣವಿಲ್ಲ.

**ಭಾವಾರ್ಥ—** ಜ್ಞಾನವು ಜ್ಞಾತೃ–ಜ್ಞೇಯಸಾಪೇಕ್ಷ. ನೀರಿನ ಜ್ಞಾನಕ್ಕೆ ಜ್ಞೇಯವಾದುದು ನೀರು, ಜ್ಞಾತೃ ಆ ಜ್ಞಾನವುಳ್ಳ ವ್ಯಕ್ತಿ. ಅದರಂತೆ ಜ್ಞಾತೃ(ಜ್ಞಾನವುಳ್ಳವನು) ವ್ಯಕ್ತಿ ಇರಬೇಕಾದರೆ ಜ್ಞಾನ ಮತ್ತು ಜ್ಞೇಯಗಳು ಇರಬೇಕು. ಬ್ರಹ್ಮನು ಜ್ಞಾನರೂಪನಾದರೆ ಜ್ಞೇಯ–ಜ್ಞಾತೃಗಳು ಇರಲೇ ಬೇಕು.

**ಜ್ಞಾತೃಜ್ಞೇಯವಿಹೀನಂ ಚ ಜ್ಞಾನಂ ಚೇದ್ ಭೋಕ್ತೃಭೋಗ್ಯ(ಜ್ಯ)ತಃ ।**
**ಹೀನಂ ಭೋಜನಮೇವ ಸ್ಯಾತ್ ತಾಡನಂ ಕರ್ತೃತಾಡ್ಯತಃ ॥ ೧೮೧ ॥**

ಜ್ಞಾತೃ–ಜ್ಞೇಯವಿಹೀನಂ ಚ=ಜ್ಞಾತೃ ಮತ್ತು ಜ್ಞೇಯಗಳಿಂದ ರಹಿತವಾದ ಜ್ಞಾನಂ ಚೇತ್=ಜ್ಞಾನವು ಇರುವುದಾದಲ್ಲಿ ಭೋಕ್ತೃ–ಭೋಗ್ಯತಃ ಹೀನಮೇವ=ಭೋಕ್ತೃ ಮತ್ತು ಭೋಗ್ಯಗಳಿಂದ ರಹಿತವಾದರೂ ಭೋಜನಂ ಸ್ಯಾತ್=ಭೋಜನಕ್ರಿಯೆಯು ನಡೆದೀತು. ಕರ್ತೃ–ತಾಡ್ಯತಃ=ಹೊಡೆಯು ವವನು–ಹೊಡೆಸಿಕೊಳ್ಳುವವನು ಇವರಿಬ್ಬರಿಂದ ಹೀನಮೇವ=ರಹಿತ ವಾಗಿಯೂ ತಾಡನಂ ಸ್ಯಾತ್=ಹೊಡೆಯುವ ಕ್ರಿಯೆಯು ಇರಬೇಕಾದೀತು.

**ಭಾವಾರ್ಥ—**ಕರ್ತೃ–ಕರ್ಮಗಳಿಲ್ಲದೆಯೂ ಜ್ಞಾನವು ಇರುವುದಾದಲ್ಲಿ ಭೋಜನಕ್ರಿಯೆಗೂ ಭೋಕ್ತೃ ಮತ್ತು ಭೋಜ್ಯವಸ್ತುಗಳ ಅಪೇಕ್ಷೆಯೇ ಇಲ್ಲದಾದೀತು. ಹೊಡೆಸಿಕೊಳ್ಳುವವನು ಮತ್ತು ಹೊಡೆಯುವವನು ಇಬ್ಬರೂ ಇಲ್ಲದೆ ತಾಡನ ಕ್ರಿಯೆಯೂ ನಡೆಯಬೇಕಾದೀತು. ಹೊಡೆಯುವವನೂ ಇಲ್ಲ ಹೊಡೆಸಿಕೊಳ್ಳುವವನೂ ಇಲ್ಲ. ಆದರೂ ಹೊಡೆಯುವ ಕ್ರಿಯೆ ಇದೆ, ಎನ್ನುವುದು ಹೇಗೆ ಅಸಂಬದ್ಧವೋ, ಅದರಂತೆ, ಜ್ಞಾತೃ–ಜ್ಞೇಯಗಳಿಲ್ಲದ ಜ್ಞಾನವೂ ಇರುವುದು ಅಸಂಭವ.

**ನಿತ್ಯತ್ವಾತ್ ತಾದೃಶಂ ಚ ಸ್ಯಾದಿತಿ ಚೇನ್ನಿತ್ಯವಾಗಪಿ ।**
**ವಾಚ್ಯವಕ್ತೃವಿಹೀನಾ ಸ್ಯಾನ್ನಹಿ ಸಾ ಚೈವ ತಾದೃಶೀ ॥ ೧೮೨ ॥**

ನಿತ್ಯತ್ವಾತ್=ಜ್ಞಾನವು ನಿತ್ಯವಾದುದರಿಂದ ತಾದೃಶಂ ಚ ಸ್ಯಾತ್= ಜ್ಞಾತೃ–ಜ್ಞೇಯಗಳು ಇಲ್ಲದೆಯೂ (ಜ್ಞಾನವು) ಇರಬಹುದಲ್ಲವೆ? ಇಲ್ಲ. ಹಾಗಿದ್ದರೆ ವಾಚ್ಯ–ವಕ್ತೃವಿಹೀನಾ=ವಾಚ್ಯ ಮತ್ತು ವಕ್ತೃಗಳು ಇಲ್ಲದೆಯೂ ವೇದವಾಗಪಿ=ವೇದವಾಕ್ಯವೂ ಸ್ಯಾತ್=ಇರಬೇಕಾದೀತು. ತಾದೃಶೀ ಸಾ ನೈವಹಿ=ಅಂತಹ ವಾಕ್ಯವು ಇಲ್ಲವಷ್ಟೆ!

**ವಿವರಣೆ**— ಜ್ಞಾನಾಶ್ರಯ ಜ್ಞಾನಕ್ಕೆ ಕರ್ತೃ, ಜ್ಞಾನವಿಷಯ ಕರ್ಮ. ಕರ್ತೃ–ಕರ್ಮಗಳು ಕಾರಕಗಳು. ಕ್ರಿಯಾಜನಕವಾದುದು ಕಾರಕ. ಪ್ರಕೃತ, ಜ್ಞಾನಕ್ರಿಯೆಯು ನಿತ್ಯ. ಅದಕ್ಕೆ ಜನಕ ಇಲ್ಲ. ಆದ್ದರಿಂದ ಕರ್ತೃ–ಕರ್ಮಗಳು ಇಲ್ಲದೆಯೂ ಜ್ಞಾನವು ಇರಬಹುದು, ಎಂದು ಪೂರ್ವಪಕ್ಷ.

ಕ್ರಿಯಾನಿಷ್ಪಾದಕವಾದುದೇ ಕಾರಕವಾಗಬೇಕಿಲ್ಲ. 'ಗಗನಮಸ್ತಿ' ಎಂದಾಗ ನಿತ್ಯವಾದ ಅಸ್ತಿತ್ವಕ್ರಿಯೆಗೆ ಗಗನವು ಕರ್ತೃಕಾರಕವಾಗಿದೆ. ಅದರಂತೆ ಜ್ಞಾನವು ನಿತ್ಯವಾದರೂ ಅದಕ್ಕೆ ಆಶ್ರಯವಾದುದು ಕರ್ತೃ, ವಿಷಯ ವಾದುದು ಕರ್ಮ. ಇಂತಹ ಕರ್ತೃ–ಕರ್ಮಗಳಿಂದ ಜ್ಞಾನವು ಜನ್ಯವಾಗಿರ ದಿದ್ದರೂ ಆ ಕಾರಕಗಳು ಕರ್ತೃ–ಕರ್ಮಗಳಾಗುತ್ತವೆ.

ಕ್ರಿಯೆಯು ನಿತ್ಯವಾದ ಮಾತ್ರಕ್ಕೆ ಕಾರಕಗಳ ಅಪೇಕ್ಷೆ ಬೇಡವೆಂದಾದರೆ ವೇದವಚನವು ನಿತ್ಯವಾದುದರಿಂದ ಅದಕ್ಕೆ ವಕ್ತೃ–ವಾಚ್ಯಗಳ ಅಪೇಕ್ಷೆ ಇಲ್ಲವೆಂದಾದೀತು.

**ದ್ರಷ್ಟಾರೋ ವೇದವಾಚೋ ಹಿ ಸಂತಿ ವಾಚ್ಯಾನಿ ಚಾಂಜಸಾ ।**
**ನಿತ್ಯೋ ದ್ರಷ್ಟಾ ಚ ವಾಚ್ಯಶ್ಚ ಭಗವಾನೇವ ಚ ಸ್ವಯಮ್ ॥ ೧೮೩ ॥**

**ನಹಿ ವಕ್ತೃವಿಹೀನಾ ಚ ವಾಚ್ಯಹೀನಾಪಿ ವಾಕ್ ಕ್ವಚಿತ್ ।**
**ಜ್ಞಾತೃಜ್ಞೇಯವಿಹೀನಂ ಚ ಜ್ಞಾನಮೇವ(ವಂ)ನ ತದ್**
**ಭವೇತ್ ॥ ೧೮೪ ॥**

ವೇದವಾಚಃ=ವೇದದ ವಾಕ್ಯಗಳಿಗೆ ದ್ರಷ್ಟಾರಃ=ದ್ರಷ್ಟೃಗಳಾದ ಋಷಿಗಳೂ ವಾಚ್ಯಾನಿಚ=ವಾಚ್ಯವಾದ ಅರ್ಥಗಳೂ ಸಂತಿ=ಇವೆ. ಚ=ಯಾವಕಾರಣದಿಂದ ವೇದವಾಕ್ಯಗಳ ನಿತ್ಯೋ ದ್ರಷ್ಟಾ=ನಿತ್ಯನಾದ ದರ್ಶಕನು ಹಾಗೂ ವಾಚ್ಯಶ್ಚ=ಅವುಗಳಿಂದ ನಿತ್ಯವಾಚ್ಯನೂ ಸ್ವಯಂ ಭಗವಾನೇವ=ಸ್ವಯಂ ಭಗವಂತನೇ ಆಗಿರುತ್ತಾನೆ, ಹಿ=ಆದ್ದರಿಂದ ವಾಕ್=ವೇದವಾಕ್ಯವು ಕ್ವಚಿತ್=ಪ್ರಳಯಕಾಲದಲ್ಲೂ ವಕ್ತೃವಿಹೀನಾ=ವಕ್ತೃರಹಿತವಾಗಿಯಾಗಲೀ ವಾಚ್ಯಹೀನಾಪಿ=ವಾಚ್ಯರಹಿತವಾಗಿಯೂ ನ=ಇರುವುದಿಲ್ಲ.

ತತ್=ನಿತ್ಯವಾದ ಕ್ರಿಯೆಗೂ ಕರ್ತೃ–ಕರ್ಮಗಳು ಇರುವುದರಿಂದಾಗಿ ಜ್ಞಾತೃ–ಜ್ಞೇಯವಿಹೀನಂ ಚ=ಜ್ಞಾತೃ ಮತ್ತು ಜ್ಞೇಯಗಳಿಂದ ರಹಿತವಾದುದು ಜ್ಞಾನಮೇವ ನ ಭವೇತ್=ಜ್ಞಾನವೇ ಆಗದು.

**ನಹಿ ನಿತ್ಯೋಽಪಿ ವಕ್ತಾಸ್ತಿ ವಾಕ್ಯವಾಚ್ಯವಿವರ್ಜಿತಃ ।**
**ಜ್ಞಾನಜ್ಞೇಯವಿಹೀನಶ್ಚ ಜ್ಞೋಽಪ್ಯೇವಂ ನೈವ ವಿದ್ಯತೇ ॥ ೧೮೫ ॥**

ನಿತ್ಯೋಽಪಿ ವಕ್ತಾ=ನಿತ್ಯವಕ್ತೃವಾದ ಪರಮಾತ್ಮನೂ ವಾಕ್ಯ–ವಾಚ್ಯ ವಿವರ್ಜಿತಃ ನ ಅಸ್ತಿ=ವಾಕ್ಯ ಮತ್ತು ಆ ವಾಕ್ಯದಿಂದ ವಾಚ್ಯವಾದ ವಿಷಯ ಇವೆರಡರಿಂದ ರಹಿತವಾಗಿ ಇರಲಾರ. ಏವಂ=ಇದರಂತೆ ಜ್ಞಾನಜ್ಞೇಯ ವಿಹೀನಃ ಜ್ಞೋಽಪಿ=ಜ್ಞಾನಕ್ರಿಯೆ ಮತ್ತು ಜ್ಞಾನವಿಷಯ ಇವೆರಡು ಇಲ್ಲದ ಜ್ಞಾನಿಯೂ ನೈವ ವಿದ್ಯತೇ=ಇರುವುದೇ ಇಲ್ಲ.

**ಕಿಂಚ ಸರ್ವವಿಲೋಪಶ್ಚ ಕೇನ ಮಾನೇನ ಗಮ್ಯತೇ ।**
**ಸರ್ವೇಣ ಸಹ ತದ್ ವಾಕ್ಯಮರ್ಥಶ್ಚ ಯದಿ ಗಮ್ಯತೇ ॥ ೧೮೬ ॥**

**ತದಭಾವೇನ ಸರ್ವಸ್ಯ ನಾಪಲಾಪೋ ಭವೇತ್ ತದಾ ।**
**ನ ಗೃಹ್ಯತೇ ಚೇತ್ ತನ್ನ್ಯಾಯಾದಪಲಾಪೋ ನಹಿ ಕ್ವಚಿತ್ ॥ ೧೮೭ ॥**

ಕಿಂಚ=ಅದೂ ಅಲ್ಲದೆ, ಸರ್ವವಿಲೋಪಃ=ಸರ್ವಕ್ಕೂ ಮಿಥ್ಯಾತ್ವವು ಕೇನ ಮಾನೇನ=ಯಾವ ಪ್ರಮಾಣದಿಂದ ಗಮ್ಯತೇ=ತಿಳಿಯಲ್ಪಡುತ್ತದೆ?

ಸರ್ವಕ್ಕೂ ಮಿಥ್ಯಾತ್ವವನ್ನು ಹೇಳುವ ಶ್ರುತಿಯಲ್ಲಿ ಸರ್ವೇಣ ಸಹ=

ಎಲ್ಲರೊಂದಿಗೆ ತದ್ವಾಕ್ಯಂ=ಆ ಶ್ರುತಿವಾಕ್ಯವೂ ಅರ್ಥಶ್ಚ=ಅದರ ಅರ್ಥವೂ ಗೃಹ್ಯತೇ=ಸಂಗ್ರಹಿಸಲ್ಪಡುತ್ತದೆಯಾದಲ್ಲಿ ತದಭಾವೇನ=ವಾಕ್ಯ ಮತ್ತು ವಾಕ್ಯಾರ್ಥಗಳೂ ಮಿಥ್ಯಾ ಆಗುವ ಕಾರಣದಿಂದ ತದಾ=ಆ ಪಕ್ಷದಲ್ಲಿ ಸರ್ವಸ್ಯ=ಸಮಗ್ರಪ್ರಪಂಚದ ಅಪಲಾಪಃ=ಮಿಥ್ಯಾತ್ವವು ನ ಭವೇತ್= ಆಗಲಿಕ್ಕಿಲ್ಲ. ನ ಗೃಹ್ಯತೇ ಚೇತ್=ಗ್ರಹಿಸಲ್ಪಡುವುದಿಲ್ಲವಾದರೆ ತನ್ನ್ಯಾಯಾತ್=ಅದೇ ನ್ಯಾಯದಿಂದ (ಯಾವ ನ್ಯಾಯದಿಂದ ವಾಕ್ಯ ಮತ್ತು ವಾಕ್ಯಾರ್ಥಗಳು ಸಂಗ್ರಹಿಸಲ್ಪಡುವುದಿಲ್ಲವೋ ಅದೇ ನ್ಯಾಯದಿಂದ) ಅಪಲಾಪಃ=ವಿಯದಾದಿಪ್ರಪಂಚದ ಮಿಥ್ಯಾತ್ವವೂ ಕ್ವಚಿತ್ ನಹಿ=ಎಂದೂ ಆಗಲಿಕ್ಕಿಲ್ಲ.

**ವಿವರಣೆ**— ಇದುವರೆಗೆ ಮಿಥ್ಯಾಭೂತವಾದ ವಿಷಯಗಳಿಂದ ಸಾಪೇಕ್ಷವಾದ ಭಗವಂತನ ಸರ್ವಜ್ಞತ್ವವು ಮಿಥ್ಯಾ ಎನ್ನುವುದಾದರೆ ಜ್ಞಾನ–ಜ್ಞೇಯ ಸಾಪೇಕ್ಷವಾದ ಚೇತನತ್ವವೂ ಅವನಿಗೆ ಇಲ್ಲವಾದೀತು, ಎಂದು ಹೇಳಲಾಯಿತು. ಮುಂದೆ ವಿಶ್ವಮಿಥ್ಯಾತ್ವಕ್ಕೆ ಪ್ರಮಾಣವೂ ಇಲ್ಲ, ಎಂದು ಸಾಧಿಸಲಾಗಿದೆ.

ಪ್ರತ್ಯಕ್ಷವು ವಿಶ್ವವನ್ನು ಮಿಥ್ಯಾ ಎಂದು ಗ್ರಹಿಸುವುದಿಲ್ಲ, ಅದು ಸತ್ಯವೆಂದೇ ಗ್ರಹಿಸುತ್ತದೆ. ಆದ್ದರಿಂದ ವಿಶ್ವಮಿಥ್ಯಾತ್ವಕ್ಕೆ ಪ್ರತ್ಯಕ್ಷವು ಪ್ರಮಾಣವಲ್ಲ. ಪ್ರತ್ಯಕ್ಷಬಾಧಿತವಾದುದರಿಂದ ಅನುಮಾನವೂ ಪ್ರಮಾಣ ವಾಗದು. ಪರಿಶೇಷಾತ್ ''ನೇಹ ನಾನಾಸ್ತಿ ಕಿಂಚನ'' ಇತ್ಯಾದಿಶ್ರುತಿಗಳು ಪ್ರಮಾಣಗಳಾಗಬೇಕು. ಅಂತಹ ಶ್ರುತಿಗಳು ಬ್ರಹ್ಮಬಿಟ್ಟು ಉಳಿದೆಲ್ಲವೂ ಮಿಥ್ಯಾ, ಎಂದು ಹೇಳಿದರೆ ಎಲ್ಲದರಲ್ಲಿ ಆ ಶ್ರುತಿಗಳು ಮತ್ತು ಅವುಗಳ ಅರ್ಥಗಳೂ ಸೇರುವುದರಿಂದ ಅವೆಲ್ಲವೂ ಮಿಥ್ಯಾ ಎನ್ನಬೇಕಾಗುತ್ತದೆ. ಅವುಗಳೇ ಮಿಥ್ಯಾ ಆದಮೇಲೆ ಅವುಗಳಿಂದ ವಿಶ್ವಮಿಥ್ಯಾತ್ವವು ಸಿದ್ಧವಾಗು ವುದು ಹೇಗೆ? ಈ ಸಮಸ್ಯೆಯ ಪರಿಹಾರಕ್ಕಾಗಿ ಶ್ರುತಿ ಮತ್ತು ಅವುಗಳ ಅರ್ಥವನ್ನು ಬಿಟ್ಟು ಇತರ ಜಗತ್ತಿಗೆ ಮಿಥ್ಯಾತ್ವವನ್ನು ಹೇಳುವುದಾದಲ್ಲಿ ಅದೇ ನ್ಯಾಯದಿಂದ ಜಗತ್ತನ್ನೂ ಬಿಡಬೇಕಾಗುತ್ತದೆ. ವಾಕ್ಯ–ವಾಕ್ಯಾರ್ಥಗಳು ಮಿಥ್ಯಾ ಆದಲ್ಲಿ ಪ್ರಪಂಚಮಿಥ್ಯಾತ್ವಾನುಪಪತ್ತಿ ಇರುವಂತೆ ಪ್ರಪಂಚ ಮಿಥ್ಯಾ

ಎಂದಾದರೂ ಅನೇಕ ಅನುಪಪತ್ತಿಗಳು ಇವೆ. ಆದ್ದರಿಂದ ಒಂದನ್ನು ಬಿಟ್ಟು ಇನ್ನೊಂದು ಉಳಿಸಿಕೊಳ್ಳಲಾಗದು.

**ಉಪಪತ್ತಿವಿಹೀನಸ್ಯ ವಾಕ್ಯಸ್ಯಾರ್ಥೋ ನ ಗಮ್ಯತೇ ।**
**ಉಪಕ್ರಮಾದಿಲಿಂಗಾನಾಂ ಬಲೀಯೋ ಹ್ಯುತ್ತರೋತ್ತರಮ್ ।**
**ಶ್ರುತ್ಯಾದೌ ಪೂರ್ವಪೂರ್ವಂ ಚ ಬ್ರಹ್ಮತರ್ಕವಿನಿರ್ಣಯಾತ್ ॥೧೮೮॥**

ಉಪಪತ್ತಿವಿಹೀನಸ್ಯ=ಯುಕ್ತಿಗೆ ವಿರುದ್ಧವಾದ ವಾಕ್ಯಸ್ಯ=ವಾಕ್ಯದ ಅರ್ಥಃ=ತಾತ್ಪರ್ಯವು ನ ಗಮ್ಯತೇ=ತಿಳಿಯಲ್ಪಡುವುದಿಲ್ಲ. ಉಪಕ್ರಮಾದಿ ಲಿಂಗಾನಾಮ್=ಉಪಕ್ರಮ–ಉಪಸಂಹಾರ ಮೊದಲಾದ ತಾತ್ಪರ್ಯ ನಿರ್ಣಾಯಕಲಿಂಗಗಳ ಮಧ್ಯದಲ್ಲಿ ಉತ್ತರೋತ್ತರಂ=ಮುಂದು–ಮುಂದಿನವುಗಳು ಬಲೀಯಃ=ಹಿಂದು–ಹಿಂದಿನವುಗಳಿಗಿಂತ ಪ್ರಬಲವಾದವುಗಳು. ಶ್ರುತ್ಯಾದೌ ಚ=ಶ್ರುತಿ–ಲಿಂಗ ಮುಂತಾದ ತಾತ್ಪರ್ಯನಿರ್ಣಾಯಕಗಳಲ್ಲಿ ಪೂರ್ವಪೂರ್ವಂ=ಮೊದ–ಮೊದಲನೆಯದು ಬಲೀಯಃ= ಮುಂದಿನವುಗಳಿಗಿಂತ ಪ್ರಬಲಗಳು. ಹೀಗೆ, ಬ್ರಹ್ಮತರ್ಕವಿನಿರ್ಣಯಾತ್= ಬ್ರಹ್ಮತರ್ಕ ಎಂಬ ತರ್ಕಶಾಸ್ತ್ರದಲ್ಲಿ ನಿರ್ಣಯ ಮಾಡಿರುವುದರಿಂದಾಗಿ ಯುಕ್ತಿಯು ತಾತ್ಪರ್ಯನಿರ್ಣಾಯಕಗಳಲ್ಲಿ ಪ್ರಬಲವಾದುದು.

ಭಾವಾರ್ಥ— ಶ್ರುತಿಯ ಅರ್ಥವು ಸರಿ ಇಲ್ಲ, ಎಂದು ಹೇಳಬೇಕಾದರೆ ವಾಕ್ಯದೋಷಗಳನ್ನು ತೋರಿಸಬೇಕು. ಯುಕ್ತಿವಿರೋಧ ಇದ್ದ ಮಾತ್ರಕ್ಕೆ ಶ್ರುತ್ಯರ್ಥ ಸರಿ ಇಲ್ಲ ಎನ್ನುವುದು ಹೇಗೆ? ಈ ಆಕ್ಷೇಪಕ್ಕೆ ಸಮಾಧಾನ ಹೀಗೆ— ಶ್ರುತಿಯ ತಾತ್ಪರ್ಯವನ್ನು ನಿರ್ಣಯಿಸಲು ಉಪಕ್ರಮ, ಉಪಸಂಹಾರ, ಅಭ್ಯಾಸ, ಅಪೂರ್ವತಾ, ಫಲ, ಅರ್ಥವಾದ, ಉಪಪತ್ತಿ ಹೀಗೆ ಏಳು ಲಿಂಗಗಳಿವೆ. ಈ ಏಳರಲ್ಲಿ ಹಿಂದಿನವುಗಳಿಗಿಂತ ಮುಂದಿನವುಗಳು ಪ್ರಬಲಗಳು. ಉಪಕ್ರಮಕ್ಕಿಂತ ಉಪಸಂಹಾರ ಪ್ರಬಲ. ಕೊನೆಯಲ್ಲಿರುವ ಉಪಪತ್ತಿಯು ಎಲ್ಲವುಗಳಿಗಿಂತ ಪ್ರಬಲ. ಉಪಪತ್ತಿ ಎಂದರೆ ಯುಕ್ತಿ. ಅಂತಹ ಯುಕ್ತಿಗೆ ವಿರುದ್ಧವಾದ ವಿಷಯದಲ್ಲಿ ಶ್ರುತಿಗಳಿಗೆ ತಾತ್ಪರ್ಯವನ್ನು ಹೇಳಬಾರದು. ಆದ್ದರಿಂದ ಪೂರ್ವೋಕ್ತಯುಕ್ತಿಗಳಿಗೆ ವಿರುದ್ಧವಾದುದರಿಂದ ವಿಶ್ವಮಿಥ್ಯಾತ್ವದಲ್ಲಿ ಶ್ರುತಿಗಳಿಗೆ ತಾತ್ಪರ್ಯವಿಲ್ಲ.

**ಪ್ರತ್ಯಕ್ಷಮುಪಪತ್ತಿಶ್ಚ ಬಹವಶ್ಚಾಗಮಾ ಯದಾ ।**
**ವಿರುದ್ಧ್ಯಂತೇ ನಚಾರ್ಥೋಽಸ್ತಿ ಯತ್ರ ಲಿಂಗವಿರೋಧಿತಾ ॥ ೧೮೯ ॥**

**ಸ ಏವಾರ್ಥಃ ಕಥಂ ಗ್ರಾಹ್ಯ ಉಪಪನ್ನೇಽವಿರೋಧಿನೀ ।**
**ಮುಖ್ಯಾರ್ಥೇ ವಿದ್ಯಮಾನೇ ತು ಕ್ವ ಸಾರ್ವಜ್ಞ್ಯಂ ನಿಷಿದ್ಧ್ಯತೇ ॥೧೯೦॥**

ಇನ್ನೊಂದು ಕಾರಣದಿಂದಲೂ ಶ್ರುತಿಗೆ ಪ್ರಪಂಚಮಿಥ್ಯಾತ್ವದಲ್ಲಿ ತಾತ್ಪರ್ಯವಿಲ್ಲ. ಪ್ರತ್ಯಕ್ಷಂ=ಪ್ರತ್ಯಕ್ಷವು ಉಪಪತ್ತಿಶ್ಚ=ಯುಕ್ತಿಯೂ ಬಹವಃ ಆಗಮಾಶ್ಚ=ಅನೇಕ ಆಗಮಗಳು ಯದಾ=ಯಾವ ಅರ್ಥವನ್ನು ಮಾಡಿದಾಗ ವಿರುದ್ಧ್ಯಂತೇ=ಶ್ರುತಿ ಹೇಳುವ ಅರ್ಥಕ್ಕೆ ವಿರುದ್ಧಗಳಾಗಿರುತ್ತವೋ, ಯತ್ರ= ಯಾವ ಅರ್ಥವನ್ನು ಮಾಡಿದಾಗ ಅರ್ಥಃ=ಪ್ರಯೋಜನವು ನ ಅಸ್ತಿ= ಇಲ್ಲವೋ, ಯತ್ರ=ಯಾವ ಶ್ರುತ್ಯರ್ಥದಲ್ಲಿ ತಾತ್ಪರ್ಯನಿರ್ಣಾಯಕವಾದ ಲಿಂಗಗಳು ಇರುವುದಿಲ್ಲ, ಅಷ್ಟುಮಾತ್ರವಲ್ಲದೆ ಲಿಂಗವಿರೋಧಿತಾ= ತಾತ್ಪರ್ಯ ಲಿಂಗಗಳ ವಿರೋಧವೇ ಇರುವುದೋ ಅಂತಹ ಶ್ರುತಿವಾಕ್ಯಗಳಿಗೆ ಅವಿರೋಧಿನೀ=ಹಿಂದೆ ಹೇಳಿರುವ ಯಾವ ವಿರೋಧವೂ ಇಲ್ಲದ ಉಪಪನ್ನೇ=ಉಪಪತ್ತಿಗೆ ಅನುಗುಣವಾದ ಅರ್ಥವು ಇರುತ್ತಿರಲು ಸ ಏವಾರ್ಥಃ=ಯುಕ್ತ್ಯಾದಿಗಳಿಗೆ ವಿರುದ್ಧವಾದ ಅರ್ಥವು ಕಥಂ ಗ್ರಾಹ್ಯಃ=ಹೇಗೆ ತಾನೇ ಗ್ರಾಹ್ಯವಾದೀತು?

ಭಾವಾರ್ಥ— ಶ್ರುತಿವಾಕ್ಯಕ್ಕೆ ಅನೇಕಾರ್ಥಗಳನ್ನು ಮಾಡಬಹುದು. ಆದರೆ ಕಾಣುವ ಅರ್ಥಗಳೆಲ್ಲವೂ ಶ್ರುತಿತಾತ್ಪರ್ಯವಿಷಯಗಳಾಗಬೇಕಿಲ್ಲ. ಯಾವ ಅರ್ಥಕ್ಕೆ ಪ್ರತ್ಯಕ್ಷಾದಿಪ್ರಮಾಣಗಳ ವಿರೋಧವು ಇರುವುದಿಲ್ಲವೋ, ಯಾವ ಅರ್ಥವನ್ನು ಮಾಡಿದಾಗ ಪ್ರಯೋಜನವು ಇರುವುದೋ ಯಾವ ಅರ್ಥವು ತಾತ್ಪರ್ಯನಿರ್ಣಾಯಕಗಳಾದ ಉಪಕ್ರಮಾದಿಲಿಂಗಗಳಿಗೆ ವಿರುದ್ಧವಲ್ಲವೋ ಅಂತಹ ಅರ್ಥವೇ ಶ್ರುತಿತಾತ್ಪರ್ಯವಿಷಯವಾಗುತ್ತದೆ. ವಿಶ್ವಮಿಥ್ಯಾತ್ವರೂಪವಾದ ಅರ್ಥವು ಪ್ರತ್ಯಾಕ್ಷಾದಿಪ್ರಮಾಣಗಳಿಗೆ ವಿರುದ್ಧ ವಾಗಿದೆ. ಅದರಿಂದ ಆಗುವ ಪ್ರಯೋಜನವೂ ಇಲ್ಲ. ಆ ಅರ್ಥವು ತಾತ್ಪರ್ಯ ಲಿಂಗಗಳಿಗೆ ವಿರುದ್ಧವೂ ಆಗಿದೆ. ಇಷ್ಟೇ ಅಲ್ಲದೆ ಆ ಅರ್ಥವನ್ನು ಬಿಟ್ಟು

ಅರ್ಥಾಂತರವನ್ನು ಆ ಶ್ರುತಿಗೆ ಹೇಳಬಹುದು. ಉದಾಹರಣೆಗೆ— 'ನೇಹ ನಾನಾಸ್ತಿ ಕಿಂಚನ' ಎಂಬ ಶ್ರುತಿಗೆ (ಇಹ=) ಈ ಪ್ರಪಂಚದಲ್ಲಿ (ಕಿಂಚನ ನಾಸ್ತಿ) ಬ್ರಹ್ಮ ಬಿಟ್ಟು ಇನ್ನಾವುದೂ ಇಲ್ಲ ಎನ್ನುವ ಅರ್ಥವನ್ನು ಮಾಡಿದರೆ ಅದು ಪ್ರತ್ಯಕ್ಷಾದಿಪ್ರಮಾಣಗಳಿಗೆ ವಿರುದ್ಧವಾಗುತ್ತದೆ. ಅಂತಹ ಅರ್ಥವನ್ನು ಮಾಡುವುದರಿಂದ ಯಾವ ಪ್ರಯೋಜನವೂ ಇಲ್ಲ. ಆದರೆ ಇಹ=ಬ್ರಹ್ಮನಲ್ಲಿ ನಾನಾ ನಾಸ್ತಿ=ಭಿನ್ನವಾದ ಗುಣ ಕರ್ಮಾದಿಗಳು ಇಲ್ಲ, ಎನ್ನುವ ಅರ್ಥವನ್ನು ಮಾಡಿದರೆ ಪ್ರತ್ಯಕ್ಷಾದಿಪ್ರಮಾಣಗಳ ವಿರೋಧವು ಇಲ್ಲ. ಅದನ್ನು ತಿಳಿಯುವುದರಿಂದ ಭಗವದನುಗ್ರಹವೂ ಆಗುತ್ತದೆ. ಇಂತಹ ಅರ್ಥವು ಇರುವಾಗ ಪ್ರಪಂಚಮಿಥ್ಯಾತ್ವಪರವಾದ ಅರ್ಥವನ್ನು ಮಾಡಬಾರದು.

ಹೀಗೆ, ಮುಖ್ಯಾರ್ಥೇ ಅವಿದ್ಯಮಾನೇ ತು='ನೇಹ ನಾನಾಸ್ತಿ' ಎಂಬ ಶ್ರುತಿಯ ಕಿಂಚನಶಬ್ದಕ್ಕೆ ಸಂಕೋಚ ಮಾಡದಿರುವುದರಿಂದ ಮುಖ್ಯಾರ್ಥವೆಂದು ಪರಿಗಣಿಸಬಹುದಾದ ಪ್ರಪಂಚಮಿಥ್ಯಾತ್ವ ಎಂಬ ಅರ್ಥವು ಇಲ್ಲದಿರುವಾಗ ಕ್ವ ಸಾರ್ವಜ್ಞ್ಯಂ ನಿಷಿದ್ಧ್ಯತೇ=ಬ್ರಹ್ಮನಿಗೆ ಸರ್ವಜ್ಞತ್ವವನ್ನು ಏಕೆ ನಿಷೇಧ ಮಾಡಲ್ಪಡಬೇಕು?

**ಭಾವಾರ್ಥ—** ಸರ್ವಜ್ಞತ್ವವು ಸರ್ವಪ್ರಪಂಚಘಟಿತವಾಗಿರುವುದರಿಂದ ಪ್ರಪಂಚವು ಮಿಥ್ಯಾ ಆದಲ್ಲಿ ತದ್‌ಘಟಿತವಾದ ಸರ್ವಜ್ಞತ್ವವೂ ಮಿಥ್ಯಾ ಆಗುತ್ತದೆ. ಆದರೆ, ಪ್ರಪಂಚಮಿಥ್ಯಾತ್ವಕ್ಕೆ ಪ್ರಮಾಣವು ಇಲ್ಲದಿರುವುದರಿಂದ ಬ್ರಹ್ಮನ ಸರ್ವಜ್ಞತ್ವಕ್ಕೆ ಯಾವ ವಿರೋಧವೂ ಇಲ್ಲ. ಯದ್ಯಪಿ 'ನೇಹ ನಾನಾಸ್ತಿ ಕಿಂಚನ' ಎಂಬ ಶ್ರುತಿಯಲ್ಲಿ 'ನ ಕಿಂಚನ' ಎಂದರೆ ಯಾವುದೂ ಇಲ್ಲ, ಎಂದೇ ಅರ್ಥ. ಪ್ರಪಂಚವು ಮಿಥ್ಯಾ ಎಂದಾಗ ಈ ಅರ್ಥವು ಮುಖ್ಯಾರ್ಥವೆನಿಸುತ್ತದೆ. ಆದರೆ, ಆ ಶ್ರುತಿ ಬ್ರಹ್ಮನಲ್ಲಿ ಗುಣಾದಿಭೇದವನ್ನಷ್ಟೇ ನಿಷೇಧ ಮಾಡುತ್ತದೆ, ಎಂದಾಗ ಕಿಂಚನಶಬ್ದಕ್ಕೆ ಅರ್ಥಸಂಕೋಚವನ್ನು ಮಾಡಬೇಕಾಗುತ್ತದೆ. ಆದರೂ ಪ್ರತ್ಯಕ್ಷಾದಿವಿರುದ್ಧವಾದುದರಿಂದ ಸರ್ವವೂ ಮಿಥ್ಯಾ, ಎನ್ನುವ ಮುಖ್ಯಾರ್ಥವನ್ನು ಬಿಡಬೇಕು. ಹೀಗೆ ಪ್ರಪಂಚ ಮಿಥ್ಯೆ ಅಲ್ಲ. ಆದ್ದರಿಂದ ಸರ್ವಜ್ಞತ್ವಾದಿಗುಣಗಳೂ ಸತ್ಯವಾಗಿವೆ.

**ಅತಃ ಸರ್ವಗುಣೈರ್ಯುಕ್ತಂ ಬ್ರಹ್ಮಾಂಗೀಕಾರ್ಯಮೇವ ಹಿ ॥ ೧೯೧॥**

ಅತಃ=ಆದ್ದರಿಂದ ಬ್ರಹ್ಮ=ಬ್ರಹ್ಮನು ಸರ್ವಗುಣೈಃ=ಸಕಲಗುಣಗಳಿಂದ ಯುಕ್ತನೆಂದು ಅಂಗೀಕಾರ್ಯಮೇವ ಹಿ=ಅಂಗೀಕರಿಸಲ್ಪಡಲೇಬೇಕು.

ಭಾವಾರ್ಥ— 'ತತ್ತ್ವಮಸಿ' ಎಂಬ ಅಭೇದಶ್ರುತಿಗೆ ಉಪಜೀವ್ಯಶ್ರುತಿ 'ಯಃ ಸರ್ವಜ್ಞಃ' ಎಂಬ ಶ್ರುತಿ. ಅದು ಬ್ರಹ್ಮನು ಸರ್ವಜ್ಞ ಎಂದು ತಿಳಿಸುತ್ತದೆ. ಅವನು ಸರ್ವಜ್ಞನಾದರೆ ಅಲ್ಪಜ್ಞನಾದ ಜೀವನಿಂದ ಐಕ್ಯವು ಇರಲು ಸಾಧ್ಯವಿಲ್ಲ. ಆದ್ದರಿಂದ ಐಕ್ಯವು ಉಪಜೀವ್ಯಪ್ರಮಾಣವಿರುದ್ಧ.

**ಅಪಲಾಪೋಽಪಿ ಸರ್ವಸ್ಯ ನ ಕಥಂಚನ ಯುಜ್ಯತೇ ।**
**ಅನಾದಿಯೋಗ್ಯತಾ ಚೋಕ್ತಾ ತೇನ ಗ್ರಾಹ್ಯೈವ ಸರ್ವಥಾ ॥ ೧೯೨ ॥**

ಸರ್ವಸ್ಯ=ಬ್ರಹ್ಮನ ಎಲ್ಲ ಗುಣಗಳಿಗೂ ಅಪಲಾಪಃ=ಮಿಥ್ಯಾತ್ವವನ್ನು ಕಲ್ಪನೆ ಮಾಡುವುದು ಕಥಂಚನ ನ ಯುಜ್ಯತೇ=ಯಾವುದೇ ಪ್ರಮಾಣಗಳೂ ಇಲ್ಲದಿರುವುದರಿಂದ ಯುಕ್ತವಾದುದಲ್ಲ. ಅನಾದಿಯೋಗ್ಯತಾ ಚ ಉಕ್ತಾ= ಜೀವ–ಮಾನವ–ದಾನವಾದಿ ಜೀವಸ್ವಭಾವವು ಅನಾದಿಯಾದುದು ಎಂದು ಹಿಂದೆಯೇ ಹೇಳಲಾಗಿದೆ. ತೇನ=ಆ ಕಾರಣದಿಂದ ಸಾ=ಆ ಅನಾದಿ ಯೋಗ್ಯತೆಯು ಗ್ರಾಹ್ಯೈವ=ಅಂಗೀಕರಿಸಲ್ಪಡಲೇಬೇಕು.

ಭಾವಾರ್ಥ— ಬ್ರಹ್ಮನಲ್ಲಿ ಸರ್ವಜ್ಞತ್ವ ಇದೆ, ಆದರೆ, ಅದು ಮಿಥ್ಯಾ. ಏಕೆಂದರೆ ಅದು ಸತ್ಯವಾದರೆ ಜೀವ–ಬ್ರಹ್ಮರಿಗೆ ಐಕ್ಯವು ಕೂಡುವುದಿಲ್ಲ. ಹೀಗೆ ಐಕ್ಯಾನ್ಯಥಾನುಪಪತ್ತ್ಯಾ ಸರ್ವಜ್ಞತ್ವವು ಮಿಥ್ಯಾ, ಎನ್ನುವುದು ಸರಿಯಲ್ಲ. ಹಿಂದೆ ಹೇಳಿದಂತೆ ದೇವತ್ವ–ಮಾನವತ್ವ–ದಾನವತ್ವಾದಿಧರ್ಮಗಳು ಜೀವರ ಅನಾದಿಸ್ವಭಾವಸಿದ್ಧವಾದ ಧರ್ಮಗಳು. ಅಂತಹ ಜೀವಾದಿಗಳಿಂದ ಅಭೇದವು ಆ ಧರ್ಮಗಳಿಲ್ಲದ ಬ್ರಹ್ಮನೊಂದಿಗೆ ಇರುವುದಾದರೂ ಹೇಗೆ?

ಹೀಗೆ ಐಕ್ಯವು ಪ್ರಮಾಣವಿರುದ್ಧವಾದುದರಿಂದ ಅದರ ಉಪಪತ್ತಿಗಾಗಿ ಬ್ರಹ್ಮನ ಗುಣಗಳು ಮಿಥ್ಯಾ ಎನ್ನುವುದು ಸರಿಯಲ್ಲ.

**ಮುಕ್ತಾನಾಂ ತಾರತಮ್ಯಂ ಚ ಮಾನ್ಯೈರುಕ್ತೈರ್ನ ಚಾಲ್ಯತೇ ।**
**ಜ್ಞಾನಿನೋಽಪಿ ಯತೋ ನಿತ್ಯಂ ಕುರ್ವಂತಿ ಶುಭಮೇವ ಹಿ ॥ ೧೯೩ ॥**

**ತಾರತಮ್ಯಂ ತು ಮುಕ್ತೌ ಚ ತೇನೈವಾಧ್ಯವಸೀಯತೇ ।**
**ತಾರತಮ್ಯಂ ನ ಚೇನ್ಮುಕ್ತೌ ಕುತಃ ಕುರ್ಯುಃ ಶುಭಂ ಪುನಃ ॥ ೧೯೪ ॥**

ಮಾನೈಃ ಉಕ್ತೈಃ=ಪ್ರಮಾಣಗಳನ್ನು ಹೇಳಿರುವುದರಿಂದ (ಮಾನಾನಾಮ್ ಉಕ್ತತ್ವಾತ್) ಮುಕ್ತಾನಾಂ ತಾರತಮ್ಯಂ ನ ಚಾಲ್ಯತೇ=ಮುಕ್ತರಿಗೆ ತಾರತಮ್ಯವು ನಿರಾಕರಿಸಲ್ಪಡುವಂತಿಲ್ಲ. ಮೋಕ್ಷದಲ್ಲೂ ತಾರತಮ್ಯವು ಇದ್ದಮೇಲೆ ಜೀವ–ಬ್ರಹ್ಮರಿಗೆ ಐಕ್ಯವು ಇರಲು ಸಾಧ್ಯವಿಲ್ಲ. ಆದ್ದರಿಂದ ಐಕ್ಯದ ಸಮರ್ಥನೆಗಾಗಿ ಸರ್ವಜ್ಞತ್ವಾದಿಗುಣಗಳಿಗೆ ಮಿಥ್ಯಾತ್ವವನ್ನು ಹೇಳಬಾರದು.

ಯತಃ=ಯಾವ ಕಾರಣದಿಂದ, ಜ್ಞಾನಿನೋಽಪಿ=ಜ್ಞಾನಿಗಳೂ ಕೂಡಾ ಶುಭಮೇವ=ಸತ್ಕರ್ಮಗಳನ್ನೇ ಕುರ್ವಂತಿ=ತಾರತಮ್ಯದಿಂದ ಮಾಡುತ್ತಾರೆ. ಹಿ=ಇದು ಪ್ರಸಿದ್ಧವು. ತೇನೈವ=ಅದರಿಂದಲೇ ಮುಕ್ತೌ ತಾರತಮ್ಯಂ ಚ=ಮೋಕ್ಷದಲ್ಲಿ ತಾರತಮ್ಯವೂ ಅವಸೀಯತೇ=ನಿರ್ಧರಿಸಲ್ಪಡುತ್ತದೆ. ಮುಕ್ತೌ ತಾರತಮ್ಯಂ ನ ಚೇತ್=ಮೋಕ್ಷದಲ್ಲಿ ತಾರತಮ್ಯವು ಇಲ್ಲದಿದ್ದಲ್ಲಿ ಪುನಃ=ಜ್ಞಾನಬಂದಮೇಲೂ ಶುಭಂ ಕುತಃ ಕುರ್ಯುಃ=ಶುಭವನ್ನು ಏಕೆ ಮಾಡಿಯಾರು?

ಭಾವಾರ್ಥ— 1. ಮೋಕ್ಷದಲ್ಲಿಯೂ ಜೀವರಲ್ಲಿ ತಾರತಮ್ಯವು ಇರುವುದರಿಂದ ಜೀವರು ಬ್ರಹ್ಮಾಭಿನ್ನರಲ್ಲ.

2. ಮೋಕ್ಷದಲ್ಲಿ ಏಕೆ ತಾರತಮ್ಯ ಇದೆ? ಒಂದುವೇಳೆ ಮೋಕ್ಷದಲ್ಲಿ ತಾರತಮ್ಯವು ಇಲ್ಲದಿರುತ್ತಿದ್ದರೆ ಅಪರೋಕ್ಷಜ್ಞಾನಿಗಳಿಗೆ ಮೋಕ್ಷವು ನಿಶ್ಚಿತವಾದುದರಿಂದ ಅವರು ಸತ್ಕರ್ಮಾನುಷ್ಠಾನ ಮತ್ತು ದುಷ್ಕರ್ಮಗಳ ತ್ಯಾಗವನ್ನು ಮಾಡುತ್ತಿರಲಿಲ್ಲ. ಆದರೆ ಅವರು ಅವುಗಳನ್ನು ಮಾಡುತ್ತಾರೆ. ಆದಕಾರಣ ಮೋಕ್ಷದಲ್ಲೂ ತಾರತಮ್ಯ ಇದೆ.

**ಕೃಚ್ಛ್ರೇಣಾಪಿ ತಪೋ ಜ್ಞಾನಂ ಕರ್ಮಾಪ್ಯೇತೇ ಚರಂತಿ ಹಿ ।**
**ಬಿಭ್ಯತಿ ಸ್ಮಾಶುಭಾನ್ನಿತ್ಯಂ ಸಕಾಮಾಶ್ಚ ಶುಭೇ ಸದಾ ॥ ೧೯೫ ॥**

ಕೃಚ್ಛ್ರೇಣಾಪಿ=ಕ್ಲೇಶದಿಂದಲೂ ತಪಃ=ತಪಸ್ಸನ್ನೂ ಜ್ಞಾನಂ=ಜ್ಞಾನ

ಸಾಧನವಾದ ಶ್ರವಣಾದಿಗಳನ್ನೂ ಕರ್ಮಾಽಪಿ=ಯಜ್ಞಾದಿಕರ್ಮಗಳನ್ನೂ ಏತೇ=ಅಪರೋಕ್ಷಜ್ಞಾನಿಗಳು ಚರಂತಿ=ಅನುಷ್ಠಾನ ಮಾಡುತ್ತಾರೆ. ನಿತ್ಯಂ= ಸದಾ ಅಶುಭಾತ್=ಅಸತ್ಕರ್ಮಗಳಿಂದ ಬಿಭ್ಯತಿ=ಹೆದರುತ್ತಾರೆ. ಸದಾ= ಯಾವಾಗಲೂ ಶುಭೇ=ಸತ್ಕರ್ಮದಲ್ಲಿ ಸಕಾಮಾಶ್ಚ=ಅಭಿಲಾಷೆ ಉಳ್ಳವ ರಾಗಿರುತ್ತಾರೆ.

**ನಚ ಸ್ವಭಾವ ಏವಾಯಂ ಭಯಪೂರ್ವಪ್ರವೃತ್ತಿತಃ ।**
**ಕೃಚ್ಛ್ರೇಣಾಚರಣಾಚ್ಚೈವ ಶುಭಸ್ಯೈವ ಪುನಃಪುನಃ ॥ ೧೯೬ ॥**

ಭಯಪೂರ್ವಪ್ರವೃತ್ತಿತಃ=ಕರ್ಮತ್ಯಾದಿಂದ ಬರುವ ಪಾಪದಿಂದ ಹೆದರಿ ಸತ್ಕರ್ಮಗಳಲ್ಲಿ ಪ್ರವೃತ್ತಿ ಮಾಡುವುದರಿಂದಾಗಿ ಅಯಂ ಸ್ವಭಾವ ಏವ ನ=ಕರ್ಮಮಾಡುವುದೇ ಅವರ ಸ್ವಭಾವ ಎನ್ನುವುದು ಸರಿಯಲ್ಲ. ಕೃಚ್ಛ್ರೇಣ=ಅತಿಕ್ಲೇಶದಿಂದ ಪುನಃ ಪುನಃ=ಮತ್ತೆ ಮತ್ತೆ ಶುಭಸ್ಯೈವ=ಸತ್ಕರ್ಮ ಗಳನ್ನೇ ಆಚರಣಾಚ್ಚೈವ=ಮಾಡುವುದರಿಂದಾಗಿಯೂ ಅದು ಸ್ವಭಾವವಲ್ಲ.

ಭಾವಾರ್ಥ— ಅಪರೋಕ್ಷಜ್ಞಾನಿಗಳೂ ಕಷ್ಟಪಟ್ಟು ಸತ್ಕರ್ಮಗಳನ್ನು ಮಾಡುತ್ತಾರೆ. ಪಾಪದ ಅಂಜಿಕೆಯಿಂದ ದುಷ್ಕರ್ಮಗಳಿಂದ ದೂರವಿರುತ್ತಾರೆ. ಇದನ್ನು ನೋಡಿದಾಗ ಅವರು ಮಾಡುವ ಕರ್ಮಗಳು ಅಭ್ಯಾಸಬಲದಿಂದ ಸ್ವಾಭಾವಿಕವಾದುದು ಎನ್ನುವಂತಿಲ್ಲ. ಫಲದ ಅಪೇಕ್ಷೆಯಿಂದಲೇ ಅವರು ಕರ್ಮಗಳನ್ನು ಮಾಡುತ್ತಾರೆ. ಮೋಕ್ಷದಲ್ಲಿ ಆನಂದವೃದ್ಧಿಯೇ ಅದರ ಫಲ. ಕರ್ಮದ ವೈಷಮ್ಯದಿಂದ ಮೋಕ್ಷಾನಂದದಲ್ಲೂ ವೈಷಮ್ಯವಿದೆ. ಹೀಗೆ ಮೋಕ್ಷ ದಲ್ಲೂ ಆನಂದತಾರತಮ್ಯೋಪೇತರಾದ ಜೀವರಿಗೆ ಬ್ರಹ್ಮನೊಂದಿಗೆ ಅಭೇದವಿಲ್ಲ.

**ತಾದೃಶೋಽಪಿ ಸ್ವಭಾವಶ್ಚೇದಜ್ಞಸ್ಯಾಪಿ ಭವೇತ್ ತಥಾ ।**
**ಫಲವತ್ತ್ವೇ ಪ್ರಮಾಣಂ ಚೇತ್ ತತ್ರ ಜ್ಞಸ್ಯ ಸಮಂ ಹಿ ತತ್ ॥ ೧೯೭ ॥**

ತಾದೃಶೋಽಪಿ=ಭಯಾದಿಪೂರ್ವಕವಾಗಿ ಕರ್ಮಾನುಷ್ಠಾನವೂ ಸ್ವಭಾವಶ್ಚೇತ್=ಸ್ವಭಾವ ಎನ್ನುವುದಾದಲ್ಲಿ ಅಜ್ಞಸ್ಯಾಪಿ=ಅಜ್ಞಾನಿಯ ಪ್ರವೃತ್ತಿಯೂ ತಥಾ ಭವೇತ್=ಸ್ವಭಾವದಿಂದಲೇ ಎಂದು ಹೇಳಬೇಕಾದೀತು.

ಫಲವತ್ತ್ವೇ ಪ್ರಮಾಣಂ ಚೇತ್=ಅಜ್ಞಾನಿಗಳ ಶುಭಾಶುಭಪ್ರವೃತ್ತಿಗಳಿಗೆ ಸ್ವರ್ಗ–ನರಕಾದಿಗಳೇ ಫಲ ಎಂದು ಹೇಳುವ ಪ್ರಮಾಣವೇ ಅವರ ಕರ್ಮ ಸ್ವಾಭಾವಿಕವಲ್ಲ ಎನ್ನುವುದಕ್ಕೆ ಆಧಾರವಾಗುವುದಾದಲ್ಲಿ ತತ್=ಅಂತಹ ಪ್ರಮಾಣವು ಜ್ಞಸ್ಯ=ಜ್ಞಾನಿಯ ಕರ್ಮಕ್ಕೂ ಸಮಂ ಹಿ=ಸಮಾನವಾದುದು.

ಭಾವಾರ್ಥ— ಜ್ಞಾನಿಗಳು ಜ್ಞಾನಬರುವ ಮೊದಲು ಭಯಪೂರ್ವಕವಾಗಿ ಕ್ಲೇಶದಿಂದ ಕರ್ಮಗಳನ್ನು ಆಚರಿಸುತ್ತಲಿದ್ದರು. ಅಪರೋಕ್ಷಜ್ಞಾನ ಬಂದ ಮೇಲೂ ಅದೇ ರೂಢಿಯಿಂದ ಸ್ವಾಭಾವಿಕವಾಗಿಯೇ ಭಯದಿಂದ ಕರ್ಮಗಳನ್ನು ಅನುಷ್ಠಾನ ಮಾಡುತ್ತಾರೆ. ವಸ್ತುತಃ ಅವರ ಕರ್ಮಕ್ಕೆ ಫಲವಿಲ್ಲ, ಎಂದು ಪೂರ್ವಪಕ್ಷ.

ಇದಕ್ಕೆ ಸಮಾಧಾನ— ಹೀಗಾದರೆ ಅಜ್ಞಾನಿಗಳ ಕರ್ಮವೂ ಸ್ವಾಭಾವಿಕವಾಗಿಯೇ ನಡೆಯುತ್ತದೆ, ಅದಕ್ಕೂ ಫಲವಿಲ್ಲ, ಎಂದು ಹೇಳಬೇಕಾದೀತು.

ಪೂರ್ವಪಕ್ಷ–ಅಜ್ಞಾನಿಗಳ ಕರ್ಮವನ್ನು ಹಾಗೆಂದು ಪರಿಗಣಿಸಲಾಗದು. ಏಕೆಂದರೆ ಅವರು ಮಾಡಿದ ಕರ್ಮಗಳಿಗೆ ಸ್ವರ್ಗ–ನರಕಾದಿಫಲಗಳು ಇವೆ, ಎಂದು ಹೇಳುವ ಪ್ರಮಾಣಗಳಿವೆ. ಆದ್ದರಿಂದ ಅಜ್ಞಾನಿಗಳ ಕರ್ಮವು ನಿಷ್ಫಲವಲ್ಲ.

ಸಿದ್ಧಾಂತ— ಇದೇ ಯುಕ್ತಿ ಜ್ಞಾನಿಕರ್ಮಕ್ಕೂ ಹೇಳಬಹುದು.

ಕರ್ಮಜಂ ಬುದ್ಧಿಯುಕ್ತಾ ಹಿ ಫಲಂ ತ್ಯಕ್ತ್ವಾ ಮನೀಷಿಣಃ॥
(ಗೀ.2.51)

ಇತ್ಯಾದಿ ಪ್ರಮಾಣಗಳು, ಜ್ಞಾನಿಗಳು ಮಾಡುವ ಕರ್ಮಗಳಿಗೂ ಫಲವಿಲ್ಲ, ಎನ್ನುತ್ತವೆ. ಈ ಪ್ರಮಾಣಾನುಸಾರವಾಗಿ ಜ್ಞಾನಿಕರ್ಮಕ್ಕೆ ಮೋಕ್ಷದಲ್ಲಿ ಆನಂದವೃದ್ಧಿಯೇ ಫಲ ಎಂದು ಸಿದ್ಧವಾಗುತ್ತದೆ.

**'ನಿಷ್ಕಾಮಂ ಜ್ಞಾನಪೂರ್ವಂ ಚ ನಿವೃತ್ತಮಿಹ ಚೋಚ್ಯತೇ ।**
**ನಿವೃತ್ತಂ ಸೇವಮಾನಸ್ತು ಬ್ರಹ್ಮಾಭ್ಯೇತಿ ಸನಾತನಮ್' ॥ ೧೯೮ ॥**

ನಿಷ್ಕಾಮಂ=ಲೌಕಿಕಫಲಕಾಮನಾರಹಿತವಾದ ಜ್ಞಾನಪೂರ್ವಂ ತು=

ಅಪರೋಕ್ಷಜ್ಞಾನಪೂರ್ವಕವಾದ ಕರ್ಮವು ಇಹ=ಪ್ರವೃತ್ತ-ನಿವೃತ್ತಕರ್ಮಗಳಲ್ಲಿ ನಿವೃತ್ತಮಿತಿ ಚ ಉಚ್ಯತೇ=ನಿವೃತ್ತಕರ್ಮವೆಂದು ಹೇಳಲ್ಪಟ್ಟಿದೆ. ನಿವೃತ್ತಂ ಸೇವಮಾನಸ್ತು=ನಿವೃತ್ತಕರ್ಮವನ್ನು ಮಾಡುವವನು ಸನಾತನಂ ಬ್ರಹ್ಮ ಅಭ್ಯೇತಿ=ಆನಂದೋದ್ರೇಕದೊಂದಿಗೆ ಮುಕ್ತನಾಗುತ್ತಾನೆ.

**'ಶುಭೇನಾಽನಂದವೃದ್ಧಿಃ ಸ್ಯಾದ್ಧ್ರಾಸಶ್ಚೈವಾಶುಭೇನ ಹಿ ।**
**ಜ್ಞಾನಿನೋಽಪಿ ಯತಸ್ತೇನ ಕರ್ತವ್ಯಂ ಶುಭಮೇವ ತೈಃ' ॥ ೧೯೯ ॥**

ಯತಃ=ಯಾವ ಕಾರಣದಿಂದ ಜ್ಞಾನಿನೋಽಪಿ=ಜ್ಞಾನಿಗೂ ಕೂಡಾ ಶುಭೇನ=ಸತ್ಕರ್ಮದಿಂದ ಆನಂದವೃದ್ಧಿಃ ಸ್ಯಾತ್=ಮೋಕ್ಷದಲ್ಲಿ ಆನಂದದ ವೃದ್ಧಿಯಾಗುವುದು. ಅಶುಭೇನ ಹಿ=ದುಷ್ಕರ್ಮದಿಂದ ಹ್ರಾಸಶ್ಚ ಸ್ಯಾದೇವ=ಆನಂದಹ್ರಾಸವೂ ಆಗುತ್ತದೆ. ತೇನ=ಆ ಕಾರಣದಿಂದ ತೈಃ=ಜ್ಞಾನಿಗಳಿಂದ ಶುಭಮೇವ ಕರ್ತವ್ಯಂ=ಸತ್ಕರ್ಮವೇ ಮಾಡಲ್ಪಡಬೇಕು. ಇವೆರಡು ಸ್ಮೃತಿವಾಕ್ಯಗಳು. ಮುಂದಿನದು ಶ್ರುತಿವಚನ—

**'ಉಪಾಸ್ತೇ ಸ ಯ ಆತ್ಮಾನಂ ಕ್ಷೀಯತೇ ನಾಸ್ಯ ಕರ್ಮ ಹಿ(ಹ) ।**
**ಅಸ್ಮಾದ್ಧ್ಯೇವಾತ್ಮನೋ ಯದ್ಯತ್ ಕಾಮಯೇತ್ ಸೃಜತೇ ಚ ತತ್' ॥ ೨೦೦ ॥**

ಈ ಅನುವ್ಯಾಖ್ಯಾನದಿಂದ ಸೂಚಿತವಾದ ಶ್ರುತಿವಾಕ್ಯ—

ಸ ಯ ಆತ್ಮಾನಮೇವ ಲೋಕಮುಪಾಸ್ತೇ ನ ಹಾಸ್ಯ ಕರ್ಮ ಕ್ಷೀಯತೇ ।
ಅಸ್ಮಾದ್ಧ್ಯೇವಾತ್ಮನಃ ಯದ್ಯತ್ ಕಾಮಯತೇ ತತ್ತತ್ ಸೃಜತೇ ॥

ಅನುವ್ಯಾಖ್ಯಾನದ ಅರ್ಥ— ಸ ಯಃ=ಆಯಾವ ಜ್ಞಾನಿಯು ಆತ್ಮಾನಮ್ ಉಪಾಸ್ತೇ=ಭಗವಂತನ ಉಪಾಸನೆಯಿಂದ ಅವನನ್ನು ನೋಡುವನೋ ಅಸ್ಯ ಕರ್ಮ=ಅವನು ಮಾಡಿದ ಕರ್ಮವು ನ ಕ್ಷೀಯತೇ=ಕ್ಷಯವಾಗುವುದಿಲ್ಲ. ಅಸ್ಮಾದ್ ಹಿ–ಏವ ಆತ್ಮನಃ=ಅದೇ ಆತ್ಮನ ಪ್ರಸಾದದಿಂದಾಗಿ ಜ್ಞಾನಿಯು ಮುಕ್ತನಾದ ಮೇಲೆ ಯದ್ಯತ್=ಯಾವುದನ್ನೆಲ್ಲ ಕಾಮಯೇತ್=ಬಯಸುವನೋ ತತ್ತತ್=ಅವೆಲ್ಲವನ್ನೂ ಸೃಜತೇ=ಪರಮಾತ್ಮನು ಸೃಷ್ಟಿ ಮಾಡುವನು.

**'ಅವಿದ್ವಾನ್ ಬಹುಕರ್ಮಾऽಪಿ ಹ್ಯಂತವತ್ ಫಲಮಾಪ್ನುಯಾತ್'**
**॥ ೨೦೧ ॥**

ಈ ಅನುವ್ಯಾಖ್ಯಾನದಿಂದ ಸೂಚಿತಶ್ರುತಿ—

ಯದ್ಯಪ್ಯನೇವಂವಿನ್ಮಹತ್ ಪುಣ್ಯಂ ಕರ್ಮ ಕರೋತಿ
ತದ್ಧಾಸ್ಯಾಂತತಃ ಕ್ಷೀಯತೇ ॥

ಅನುವ್ಯಾಖ್ಯಾನದ ಅರ್ಥ—ಅವಿದ್ವಾನ್=ಬ್ರಹ್ಮಾಪರೋಕ್ಷವಿಲ್ಲದವನು ಬಹುಕರ್ಮಾಪಿ=ಹೆಚ್ಚು ಸತ್ಕರ್ಮಗಳನ್ನು ಮಾಡಿದ್ದರೂ ಅಂತವತ್ ಫಲಂ=ನಶ್ವರವಾದ ಫಲವನ್ನೇ ಆಪ್ನುಯಾತ್=ಹೊಂದುತ್ತಾನೆ.

**'ಯದೇವ ವಿದ್ಯಯಾ ಕುರ್ಯಾತ್ ತದೇವ ಹ್ಯತಿವೀರ್ಯವತ್ ।'**
**ಇತ್ಯಾದಿವಾಕ್ಯಸಾಮರ್ಥ್ಯಾತ್ ತಾರತಮ್ಯಂ ವಿಮುಕ್ತಿಗಮ್ ॥ ೨೦೨ ॥**

ಇಲ್ಲಿನ ಪೂರ್ವಾರ್ಧದಿಂದ ಸೂಚಿತ ಶ್ರುತಿ—

ಯದೇವ ವಿದ್ಯಯಾ ಕರೋತಿ ಶ್ರದ್ಧಯೋಪನಿಷದಾ ।
ತದೇವ ವೀರ್ಯವತ್ತರಂ ಭವತಿ ॥

ಅನುವ್ಯಾಖ್ಯಾನದ ಅರ್ಥ—ಯದೇವ=ಯಾವ ಕರ್ಮವನ್ನು ವಿದ್ಯಯಾ=ಬ್ರಹ್ಮಸಾಕ್ಷಾತ್ಕಾರಪೂರ್ವಕವಾಗಿ ಉಪನಿಷದಾ=ಸ್ವಯೋಗ್ಯವಾದ ತತ್ತ್ವಜ್ಞಾನದಿಂದ ಕುರ್ಯಾತ್=ಮಾಡುವನೋ ತದೇವ=ಅದು ಮಾತ್ರ ವೀರ್ಯವತ್ತರಂ=ಅಧಿಕ ಫಲವುಳ್ಳದ್ದಾಗಿ ಭವತಿ=ಆಗುತ್ತದೆ.

ಇತ್ಯಾದಿವಾಕ್ಯಸಾಮರ್ಥ್ಯಾತ್=ಇವೇ ಮೊದಲಾದ ವಾಕ್ಯಗಳ ಆಧಾರದಿಂದ ವಿಮುಕ್ತಿಗಂ ತಾರತಮ್ಯಂ=ಮೋಕ್ಷದಲ್ಲೂ ಇರುವ ತಾರತಮ್ಯವು ಸಿದ್ಧವಾಗುತ್ತದೆ.

**ನಚಾತ್ರೋಪಾಸಕಸ್ಯೈವ ಫಲಮಕ್ಷಯಮುಚ್ಯತೇ ।**
**ನಹಿ ಜ್ಞಾನಂ ವಿನಾ ಕ್ವಾಪಿ ಫಲಸ್ಯಾಕ್ಷಯತಾ ಭವೇತ್ ॥ ೨೦೩ ॥**

ಅತ್ರ=ಈ ಹಿಂದೆ ಉಲ್ಲೇಖಿಸಲಾದ ಶ್ರುತಿಗಳಲ್ಲಿ ಉಪಾಸಕಸ್ಯೈವ=

ಬ್ರಹ್ಮೋಪಾಸಕನಾದವನಿಗೇ ಅಕ್ಷಯಂ ಫಲಮ್ ಉಚ್ಯತೇ=ಕರ್ಮಗಳಿಗೆ ಅಕ್ಷಯಫಲವನ್ನು ಹೇಳಲಾಗಿದೆ. ಆ ಶ್ರುತಿಗಳಲ್ಲಿರುವ ಜ್ಞಾನಪದಕ್ಕೆ ಪರೋಕ್ಷ ಜ್ಞಾನ ಎಂದೇ ಅರ್ಥ, ಅಪರೋಕ್ಷಜ್ಞಾನವಲ್ಲ. ಆದ್ದರಿಂದ ಅಪರೋಕ್ಷ ಜ್ಞಾನಿಗಳು ಮಾಡುವ ಕರ್ಮಗಳಿಗೆ ಫಲವನ್ನು ಹೇಳಿದ್ದಲ್ಲ. ಅಪರೋಕ್ಷ ಜ್ಞಾನಿಗಳಿಗೆ ಕರ್ಮದ ನಿರ್ಬಂಧವೇ ಇಲ್ಲ. ಅವರು ಕರ್ಮ ಮಾಡುವುದಿಲ್ಲ. ಮೋಕ್ಷಾನಂದದಲ್ಲಿ ತಾರತಮ್ಯ ಇಲ್ಲ, ಇದು ಪೂರ್ವಪಕ್ಷ.

ಸಿದ್ಧಾಂತ— ಜ್ಞಾನಂ ವಿನಾ=ಅಪರೋಕ್ಷಜ್ಞಾನದ ಹೊರತಾಗಿ ಕ್ವಾಪಿ= ಮೋಕ್ಷದಲ್ಲಾಗಲೀ ಇಹದಲ್ಲಾಗಲೀ ಫಲಸ್ಯ=ಕರ್ಮಫಲಕ್ಕೆ ಅಕ್ಷಯತಾ=ನಾಶ ಇಲ್ಲದಿರುವಿಕೆಯು ನಹಿ ಭವೇತ್=ಇರಲಾರದು.

ಭಾವಾರ್ಥ— ಸ ಯ ಆತ್ಮಾನಮೇವ ಲೋಕಮುಪಾಸ್ತೇ
ನ ಹಾಸ್ಯ ಕರ್ಮ ಕ್ಷೀಯತೇ ॥

ಈ ಶ್ರುತಿಯು ಆತ್ಮಜ್ಞಾನಿಯ ಕರ್ಮವು ಅಕ್ಷಯ, ಅದಕ್ಕೆ ನಾಶವಿಲ್ಲ, ಎಂದು ಹೇಳುತ್ತದೆ. ಈ ಆತ್ಮಜ್ಞಾನಿ ಅಪರೋಕ್ಷಜ್ಞಾನಿಯೇ ಆಗಿರಬೇಕು. ಪರೋಕ್ಷಜ್ಞಾನಿಯಾದರೆ ಅವನು ಮಾಡಿದ ಕರ್ಮಕ್ಕೆ ಸಿಗುವ ಫಲ ಮೋಕ್ಷ ರೂಪವಾದ ಅಕ್ಷಯಫಲ, ಎಂದಂತಾಗುತ್ತದೆ. ಆದರೆ, ಮೋಕ್ಷ ಕರ್ಮಸಾಧ್ಯ ವಲ್ಲ, ಜ್ಞಾನಮಾತ್ರಸಾಧ್ಯ. ಇನ್ನು ಅವನ ಕರ್ಮಕ್ಕೆ ಸ್ವರ್ಗಾದಿಸುಖವೇ ಫಲ ಎನ್ನಬೇಕು. ಆದರೆ, ಅದು ಅಕ್ಷಯಫಲವಲ್ಲ, ಕ್ಷಯಫಲ. ಹೀಗೆ ಅನಿವಾರ್ಯ ವಾಗಿ ಆತ್ಮಜ್ಞಾನಿ ಎಂದರೆ ಅಪರೋಕ್ಷಜ್ಞಾನಿ ಎಂದೇ ಹೇಳ ಬೇಕಾಗುತ್ತದೆ. ಆದ್ದರಿಂದ ಬ್ರಹ್ಮಜ್ಞಾನಿಗಳೂ ಕರ್ಮಗಳನ್ನು ಮಾಡುತ್ತಾರೆ. ಆ ಕರ್ಮಗಳಲ್ಲಿ ತಾರತಮ್ಯವಿರುವ ಪ್ರಯುಕ್ತ ಮೋಕ್ಷಸುಖದಲ್ಲೂ ತಾರತಮ್ಯ ಇರಲೇಬೇಕು.

ಹೀಗೆ ಶ್ರುತಿಗಳಿಂದ ಅನ್ಯಥಾನುಪಪತ್ತಿಯಿಂದ ಸಿದ್ಧವಾಗುವ ವಿಷಯ ಜ್ಞಾನಿಗಳಿಗೂ ಕರ್ಮನಿರ್ಬಂಧ ಇದೆ, ಎಂದು. ಈ ಬಗ್ಗೆ ಸ್ಪಷ್ಟವಾದ ಶ್ರುತಿಯನ್ನೂ ಭಾಷ್ಯದಲ್ಲಿ (3.4.32) ಉಲ್ಲೇಖಿಸಲಾಗಿದೆ—

ಪಶ್ಯನ್ನಪೀಮಮಾತ್ಮಾನಂ ಕುರ್ಯಾತ್ ಕರ್ಮಾವಿಚಾರಯನ್ ।
ಯದಾತ್ಮನಃ ಸುನಿಯತಮಾನಂದೋತ್ಕರ್ಷಮಾಪ್ನುಯಾತ್ ॥

ಇತಿ ಕೌಷಾರವಶ್ರುತೌ ॥

**ಜ್ಞಾನದ್ವಾರೇಣ ಚೇತ್ ತಸ್ಯ ನಾಸ್ಮತ್ಪಕ್ಷಪ್ರತೀಪತಾ ।**
**ಜ್ಞಾನೋತ್ತರಸ್ಯೈವಮಪಿ ಹ್ಯಕ್ಷಯತ್ವಂ ನಚಾನ್ಯಥಾ ॥ ೨೦೪ ॥**

ಕರ್ಮಫಲವು ಅಕ್ಷಯವೆನಿಸುವುದು ಜ್ಞಾನದ್ವಾರೇಣ ಚೇತ್=ಕರ್ಮದಿಂದ ಆಗುವ ಅಪರೋಕ್ಷದ ಮೂಲಕ ಎನ್ನುವುದಾದಲ್ಲಿ ತಸ್ಯ=ಪರರು ಮಾಡುವ ಈ ಶ್ರುತಿವ್ಯಾಖ್ಯಾನಕ್ಕೆ ನ ಅಸ್ಮತ್‌ಪ್ರತೀಪತಾ=ನಾವು ಹೇಳುವ ಮೋಕ್ಷತಾರತಮ್ಯಕ್ಕೆ ವಿರೋಧವಿಲ್ಲ.

ಭಾವಾರ್ಥ— ನಿಷ್ಕಾಮಕರ್ಮದಿಂದ ಅಪರೋಕ್ಷಜ್ಞಾನ, ಅದರಿಂದ ಅಕ್ಷಯಫಲಮೋಕ್ಷ. ಹೀಗೆ, ಕರ್ಮವೂ ಅಕ್ಷಯಫಲಕ್ಕೆ ಜ್ಞಾನದ್ವಾರಾ ಕಾರಣವಾಗುತ್ತದೆ ಎನ್ನುವುದು ಮೋಕ್ಷತಾರತಮ್ಯಕ್ಕೆ ವಿರುದ್ಧವಲ್ಲ. ಅದನ್ನು ತಾರತಮ್ಯವಾದಿಗಳೂ ಒಪ್ಪುತ್ತಾರೆ. ಅದರಿಂದ ಮೋಕ್ಷತಾರತಮ್ಯವೇ ಸಿದ್ಧವಾಗುತ್ತದೆ– ನಿಷ್ಕಾಮಕರ್ಮದಲ್ಲಿ ವೈಷಮ್ಯವಿದೆ. ಅದರಿಂದಾಗಿ ಅಪರೋಕ್ಷಜ್ಞಾನದಲ್ಲೂ ವೈಷಮ್ಯ ಇರಬೇಕು. ಸಾಧನವೈಷಮ್ಯವು ಫಲವೈಷಮ್ಯಕ್ಕೆ ಕಾರಣ. ಅಪರೋಕ್ಷದಲ್ಲಿ ವೈಷಮ್ಯವಿರುವುದರಿಂದ ಅದರ ಫಲವಾದ ಮೋಕ್ಷದಲ್ಲೂ ವೈಷಮ್ಯವಿರಬೇಕಾಗುತ್ತದೆ. ಆದ್ದರಿಂದ ಈ ವಾದವು ಮೋಕ್ಷವೈಚಿತ್ರ್ಯಕ್ಕೆ ಅನುಕೂಲವೇ ಹೊರತು, ಪ್ರತಿಕೂಲವಲ್ಲ.

ಏವಮಪಿ=ಹೀಗೆ ಹೇಳಿದರೂ ಜ್ಞಾನೋತ್ತರಸ್ಯ=ಅಪರೋಕ್ಷಜ್ಞಾನೋತ್ತರದಲ್ಲಿ ಅನುಷ್ಠಾನ ಮಾಡಿದ ಕರ್ಮಗಳಿಗೆ ಅಕ್ಷಯತ್ವಂ=ಅಕ್ಷಯಮೋಕ್ಷಫಲಕತ್ವವು ಸಿದ್ಧವಾಗಿಯೇ ತೀರುತ್ತದೆ. ನಚಾನ್ಯಥಾ=ಮೋಕ್ಷಬಿಟ್ಟು ಇತರ ಫಲವು ಅಂತಹ ಕರ್ಮಕ್ಕೆ ಇಲ್ಲವಾದುದರಿಂದ.

ಭಾವಾರ್ಥ— ಅಪರೋಕ್ಷಜ್ಞಾನಕ್ಕಿಂತ ಮೊದಲು ಅನುಷ್ಠಾನ ಮಾಡಿದ ಕರ್ಮಗಳು ಜ್ಞಾನದ್ವಾರಾ ಅಕ್ಷಯಫಲಹೇತು, ಎಂದು ಶ್ರುತಿಗೆ ಅನ್ಯಥಾ ವ್ಯಾಖ್ಯಾನವನ್ನು ಮಾಡಿದರೂ ಜ್ಞಾನೋತ್ತರದಲ್ಲಿ ಮಾಡಿದ ಕರ್ಮಕ್ಕೆ ಮೋಕ್ಷವೇ ಫಲ ಎನ್ನುವುದನ್ನು ಹೇಳಲೇಬೇಕು. ಇಲ್ಲದಿದ್ದಲ್ಲಿ ಅದು ವ್ಯರ್ಥವಾಗುತ್ತದೆ. ಅಂತಹ ಕರ್ಮದ ವೈಷಮ್ಯದಿಂದಲೇ ಮೋಕ್ಷವೈಷಮ್ಯವು ಸಿದ್ಧವಾಗುತ್ತದೆ.

**ಪೂರ್ವಭಾವಿಶುಭಾನಾಂ ಹಿ ಜ್ಞಾನೇನೈವ ಕೃತಾರ್ಥತಾ ।**
**ಪ್ರಾರಬ್ಧಾನಾಂ ತು ಭೋಗೇನ ತಜ್‌ಜ್ಞಾನೋತ್ತರಕರ್ಮಣಾಮ್ ।**
**ಮುಕ್ತಾವನುಪ್ರವೇಶಃ ಸ್ಯಾದನ್ಯಥಾ ತತ್ಕೃತಿರ್ನಹಿ ॥ ೨೦೫ ॥**

ಪೂರ್ವಭಾವಿಶುಭಾನಾಂ ತು=ಅಪರೋಕ್ಷಜ್ಞಾನಕ್ಕಿಂತ ಮೊದಲು ಮಾಡಿರುವ ಸತ್ಕರ್ಮಗಳಿಗೆ ಜ್ಞಾನೇನೈವ=ಅಪರೋಕ್ಷಜ್ಞಾನದಿಂದಲೇ ಕೃತಾರ್ಥತಾ=ಸಾರ್ಥಕ್ಯವು. ಆ ಕರ್ಮಗಳಿಗೆ ಫಲ ಅಪರೋಕ್ಷಜ್ಞಾನ ಮಾತ್ರ. ಅದು ಮೋಕ್ಷಕ್ಕೆ ಕಾರಣವಾಗುವುದಿಲ್ಲ. ಅಪರೋಕ್ಷಜ್ಞಾನರೂಪವಾದ ಆ ಫಲದಿಂದ ಕರ್ಮಜನ್ಯವಾದ ಪುಣ್ಯವೂ ನಾಶವಾಗುತ್ತದೆ.

ಪ್ರಾರಬ್ಧಾನಾಂ ತು=ಜ್ಞಾನಿಯಲ್ಲಿರುವ ಪ್ರಾರಬ್ಧಕರ್ಮಗಳಿಗೆ ಭೋಗೇನ=ಫಲಭೋಗದಿಂದಲೇ ಕೃತಾರ್ಥತಾ=ಸಾರ್ಥಕ್ಯವು. ಜ್ಞಾನೋತ್ತರ ಕಾಲದ ಭೋಗದಿಂದ ಪ್ರಾರಬ್ಧವು ನಾಶವಾಗುತ್ತದೆ.

ಇನ್ನು ಜ್ಞಾನೋತ್ತರಕರ್ಮಣಾಂ ತು=ಅಪರೋಕ್ಷಜ್ಞಾನ ಬಂದಮೇಲೆ ಮಾಡಿದ ಕರ್ಮಗಳಿಗೆ ಮುಕ್ತೌ ಅನುಪ್ರವೇಶಃ ಸ್ಯಾತ್=ಮೋಕ್ಷದಲ್ಲಾಗುವ ಆನಂದವೃದ್ಧಿಹೇತುತ್ವವೇ ಇರಬೇಕು. ಅನ್ಯಥಾ=ಅದೂ ಆಗದಿದ್ದರೆ ತತ್ಕೃತಿರ್ನಹಿ=ಜ್ಞಾನಿಗಳು ಅದನ್ನು ಮಾಡುತ್ತಲೇ ಇರಲಿಲ್ಲ. ಜ್ಞಾನೋತ್ತರ ಕರ್ಮಗಳಿಗೆ ಇರಬಹುದಾದ ಫಲ ಒಂದೇ, ಮೋಕ್ಷದಲ್ಲಿ ಆನಂದವೃದ್ಧಿ. ಅದೂ ಆಗದಿದ್ದರೆ ಆ ಕರ್ಮಗಳು ನಿಷ್ಫಲವಾಗುತ್ತವೆ. ನಿಷ್ಫಲಕರ್ಮಗಳನ್ನು ಜ್ಞಾನಿಗಳೇಕೆ ಮಾಡುತ್ತಾರೆ?

**ಜ್ಞಾನಾತ್ ಪೂರ್ವಾಣಿ(ಸ)ಕರ್ಮಾಣಿ ಶುಭಾನಿ ಜ್ಞಾನಸಿದ್ಧಯೇ ।**
**ಅಕಾಮ್ಯಾನಿ ನಿಷಿದ್ಧಾನಿ ಜ್ಞಾನರೋಧಾಯ ಭುಕ್ತಯೇ ॥ ೨೦೬ ॥**

ಜ್ಞಾನಾತ್ ಪೂರ್ವಾಣಿ=ಅಪರೋಕ್ಷಜ್ಞಾನಕ್ಕಿಂತ ಮೊದಲು ಮಾಡಿರುವ ಅಕಾಮ್ಯಾನಿ ಶುಭಾನಿ ಕರ್ಮಾಣಿ=ನಿಷ್ಕಾಮವಾಗಿ ಮಾಡಿದ ಸತ್ಕರ್ಮಗಳು ಜ್ಞಾನಸಿದ್ಧಯೇ ಭವಂತಿ=ಅಪರೋಕ್ಷಜ್ಞಾನಸಿದ್ಧಿಗಾಗಿ ಆಗುತ್ತವೆ, ಕಾಮ್ಯಕರ್ಮಗಳು ಜ್ಞಾನಕ್ಕೆ ಕಾರಣಗಳಲ್ಲ. ನಿಷಿದ್ಧಾನಿ=ನಿಷಿದ್ಧಕರ್ಮಗಳು

ಜ್ಞಾನರೋಧಾಯ=ಜ್ಞಾನಕ್ಕೆ ಪ್ರತಿಬಂಧವನ್ನು ಉಂಟುಮಾಡುತ್ತವೆ, ಭುಕ್ತಯೇ=ದುಃಖಭೋಗಕ್ಕೂ ಕಾರಣವಾಗುತ್ತವೆ.

**ಯೋಗ್ಯತಾಯಾ ಬಲಾದ್ ಯಚ್ಚ ಶುಭಬಾಹುಲ್ಯಮಾದಿತಃ ।**
**ಜ್ಞಾನಬಾಹುಲ್ಯಮೇವೈತತ್ ಕುರ್ಯಾನ್ನಾನ್ಯಸ್ಯ ಕಾರಣಮ್ ॥ ೨೦೭ ॥**

ಆದಿತಃ=ಅಪರೋಕ್ಷಜ್ಞಾನವು ಬರುವುದಕ್ಕೆ ಮೊದಲು ಯೋಗ್ಯತಾಯಾಃ ಬಲಾತ್=ಬ್ರಾಹ್ಮಣತ್ವಾದಿಯೋಗ್ಯತೆಯಿಂದ ಯತ್ ಶುಭಬಾಹುಲ್ಯಂ=ಏನು ಸತ್ಕರ್ಮದ ಬಾಹಳ್ಯವಿದೆಯೋ (ಹೆಚ್ಚು ಸತ್ಕರ್ಮಗಳಿವೆಯೋ) ಏತತ್= ಇದೆಲ್ಲವೂ ಜ್ಞಾನಬಾಹುಲ್ಯಮೇವ ಕುರ್ಯಾತ್=ಅಪರೋಕ್ಷಜ್ಞಾನದಲ್ಲಿ ವೃದ್ಧಿಯನ್ನಷ್ಟೇ ಮಾಡುತ್ತದೆ. ಅನ್ಯಸ್ಯ ನ ಕಾರಣಮ್=ಇತರಫಲಕ್ಕೆ ಅದು ಕಾರಣವಾಗುವುದಿಲ್ಲ.

### ಭಕ್ತಿಯೇ ಮೋಕ್ಷಸಾಧನ

**ಜ್ಞಾನಸ್ಯ ಭಕ್ತಿಭಾಗತ್ವಾದ್ ಭಕ್ತಿರ್ಜ್ಞಾನಮಿತೀರ್ಯತೇ ।**
**ಜ್ಞಾನಸ್ಯೈವ ವಿಶೇಷೋ ಯದ್ ಭಕ್ತಿರಿತ್ಯಭಿಧೀಯತೇ ॥ ೨೦೮ ॥**

ಜ್ಞಾನಸ್ಯ=ಜ್ಞಾನಕ್ಕೆ ಭಕ್ತಿಭಾಗತ್ವಾತ್=ಭಕ್ತಿಯ ಏಕದೇಶತ್ವವು ಇರುವುದ ರಿಂದಾಗಿ ಭಕ್ತಿಃ=ಭಕ್ತಿಯೇ ಜ್ಞಾನಮಿತೀರ್ಯತೇ=ಜ್ಞಾನವೆಂದು ಹೇಳಲ್ಪಡು ತ್ತದೆ.

ಶಾಸ್ತ್ರಗಳ ಯಾವ ವಾಕ್ಯದಲ್ಲಿ ಜ್ಞಾನವು ಮೋಕ್ಷಸಾಧನವೆಂದು ಹೇಳಲಾಗಿದೆಯೋ ಆ ವಾಕ್ಯದಲ್ಲಿರುವ ಜ್ಞಾನಪದಕ್ಕೆ ಭಕ್ತಿ ಎಂದೇ ಅರ್ಥ. ಏಕೆಂದರೆ, ಜ್ಞಾನವು ಭಕ್ತಿಯ ಏಕದೇಶ. ಮಹಾತ್ಮ್ಯಜ್ಞಾನಪೂರ್ವಕವಾದ ಸ್ನೇಹವೇ ಭಕ್ತಿ. ಅಂತಹ ಭಕ್ತಿಯ ಒಂದಂಶ ಜ್ಞಾನ. ''ದೃಷ್ಟ್ವೈವ ತಂ ಮುಚ್ಯತೇ'' ಎಂಬ ಉಪನಿಷದ್ವಾಕ್ಯವು ಜ್ಞಾನವು ಮೋಚಕ, ಎನ್ನುತ್ತದೆ. ಇಲ್ಲಿ ಜ್ಞಾನವೆಂದರೆ ಭಕ್ತಿ. ಭಕ್ತಿಯು ಮೋಚಕ, ಎಂದರ್ಥ.

ಅಥವಾ, ಜ್ಞಾನಸ್ಯೈವ ವಿಶೇಷಃ=ಜ್ಞಾನದ ವಿಶೇಷ ಅಂದರೆ, ಸ್ನೇಹಸಾಹಿತ್ಯ ಎಂಬ ವಿಶೇಷವೇ ಭಕ್ತಿ. ಸ್ನೇಹಸಹಿತಜ್ಞಾನವೇ ಭಕ್ತಿ. ಜ್ಞಾನ

ಮತ್ತು ಸ್ನೇಹ ಇವೆರಡು ಭಕ್ತಿಯ ಅಂಶಗಳು. ಒಂದಂಶವನ್ನು ಹೇಳಿದಾಗ ಅಜಹಲ್ಲಕ್ಷಣಯಾ ಇನ್ನೊಂದು ಅಂಶವನ್ನು ತೆಗೆದುಕೊಳ್ಳಬೇಕು.

**ಪರೋಕ್ಷತ್ವಾಪರೋಕ್ಷತ್ವೇ ವಿಶೇಷೌ ಜ್ಞಾನಗೌ ಯಥಾ ।**
**ಸ್ನೇಹಯೋಗೋಽಪಿ ತದ್ವತ್ ಸ್ಯಾದ್ ವಿಶೇಷೋ**
**ಜ್ಞಾನಗೋಽಪರಃ ॥ ೨೦೯ ॥**

ಯಥಾ=ಹೇಗೆ ಪರೋಕ್ಷತ್ವಾಪರೋಕ್ಷತ್ವೇ ವಿಶೇಷೌ=ಪರೋಕ್ಷತ್ವ-ಅಪರೋಕ್ಷತ್ವ ಎಂಬ ಎರಡು ವಿಶೇಷಗಳು ಜ್ಞಾನಗೌ=ಜ್ಞಾನದಲ್ಲಿ ಇರುವವುಗಳೋ ತದ್ವತ್=ಅದರಂತೆ, ಸ್ನೇಹಯೋಗೋಽಪಿ=ಸ್ನೇಹಸಂಬಂಧವೂ ಜ್ಞಾನಗಃ=ಜ್ಞಾನದಲ್ಲೇ ಇರುವ ಅಪರಃ=ಇನ್ನೊಂದು ವಿಶೇಷಃ ಸ್ಯಾತ್= ವಿಶೇಷವಾಗಿರುತ್ತದೆ.

**ಭಾವಾರ್ಥ—** ಜ್ಞಾನವು ಪರೋಕ್ಷ ಅಪರೋಕ್ಷ ಎಂದು ಎರಡು ವಿಧವಾಗಿರುವಂತೆ ಸ್ನೇಹಸಹಿತ, ಸ್ನೇಹರಹಿತ, ಎಂಬ ಎರಡು ವೈವಿಧ್ಯವು ಜ್ಞಾನದಲ್ಲಿದೆ. ಆದ್ದರಿಂದ ಶ್ರುತಿಯಲ್ಲಿರುವ ಜ್ಞಾನಪದಕ್ಕೆ 'ಸ್ನೇಹ-ಸಹಿತಜ್ಞಾನ' ಎಂದು ಅರ್ಥವನ್ನು ಹೇಳಬಹುದು.

**ಇತ್ಯಭಿಪ್ರಾಯತಃ ಪ್ರಾಯೋ ಜ್ಞಾನಮೇವ ವಿಮುಕ್ತಯೇ ।**
**ವದಂತಿ ಶ್ರುತಯಃ ಸೋಽಯಂ ವಿಶೇಷೋಽಪಿ ಹ್ಯುದೀರ್ಯತೇ ।**
**ಭಕ್ತಿರ್ಜ್ಞಾನಮಿತಿ ಕ್ವಾಪಿ (ನಹಿ ದ್ವೇಷಯುತಾ ದೃಶಿಃ ।) ॥ ೨೧೦ ॥**

ಇತ್ಯಭಿಪ್ರಾಯತಃ=ಜ್ಞಾನಪದಕ್ಕೆ ಭಕ್ತಿ ಎಂಬ ಅರ್ಥದಲ್ಲಿ ರೂಢ ಲಕ್ಷಣಾಭಿಪ್ರಾಯದಿಂದ ಶ್ರುತಯಃ='ತರತಿ ಶೋಕಮಾತ್ಮವಿತ್' ಇತ್ಯಾದಿ ಶ್ರುತಿಗಳು ಪ್ರಾಯಃ=ಹೆಚ್ಚಾಗಿ ಜ್ಞಾನಮೇವ=ಜ್ಞಾನವನ್ನೇ ವಿಮುಕ್ತಯೇ= ಮೋಕ್ಷಕ್ಕಾಗಿ ವದಂತಿ=ಹೇಳುತ್ತವೆ.

ಕ್ವಾಪಿ=ಕೆಲವೆಡೆ ಭಕ್ತಿರ್ಜ್ಞಾನಮಿತಿ=ಭಕ್ತಿ-ಜ್ಞಾನಪದಗಳಿಂದ ಸೋಽಯಂ ವಿಶೇಷೋಽಪಿ=ಸ್ನೇಹ ಮತ್ತು ಜ್ಞಾನರೂಪವಾದ ವಿಶೇಷವೂ ಉದೀರ್ಯತೇ=ಹೇಳಲ್ಪಡುತ್ತದೆ.

ಭಾವಾರ್ಥ— ಸ್ನೇಹಸಹಿತವಾದ ಜ್ಞಾನವೇ ಭಕ್ತಿ. ಇಂತಹ ಭಕ್ತಿಯ ಏಕದೇಶವನ್ನು ಹೇಳುವ ಜ್ಞಾನಪದಕ್ಕೆ ಸ್ನೇಹಸಹಿತವಾದ ಜ್ಞಾನದಲ್ಲಿ ಅಜಹಲ್ಲಕ್ಷಣಾ. ಇದು ರೂಢ ಲಕ್ಷಣವಾದುದರಿಂದ ಶಕ್ತಿತುಲ್ಯವಾಗಿದೆ. 'ಜ್ಞಾನ ಮತ್ತು ಭಕ್ತಿಗಳಿಂದ ಮೋಕ್ಷವಾಗುತ್ತದೆ' ಹೀಗೆ ಒಂದೇ ವಾಕ್ಯದಲ್ಲಿ ಜ್ಞಾನ-ಭಕ್ತಿ ಎಂಬ ಎರಡು ಪದಗಳಿದ್ದರೆ ಆಗ ಜ್ಞಾನಪದಕ್ಕೆ ಜ್ಞಾನಮಾತ್ರ ಅರ್ಥ, ಭಕ್ತಿಪದಕ್ಕೆ ಸ್ನೇಹ, ಎಂದಿಷ್ಟೇ ಅರ್ಥ. ಅಲ್ಲಿ ಲಕ್ಷಣಾ ಮಾಡಬಾರದು.

**(ಭಕ್ತಿರ್ಜ್ಞಾನಮಿತಿ ಕ್ವಾಪಿ) ನಹಿ ದ್ವೇಷಯುತಾ ದೃಶಿಃ ।**
**ಪುರುಷಾರ್ಥಾಯ ಭವತಿ ಸರ್ವಶ್ರುತಿವಿರೋಧತಃ ॥ ೨೧೧ ॥**

ದ್ವೇಷಯುತಾ=ದ್ವೇಷಸಹಿತವಾದ ದೃಶಿಃ=ಜ್ಞಾನವು ಸರ್ವಶ್ರುತಿ ವಿರೋಧತಃ=ಎಲ್ಲಾ ಶ್ರುತಿಗಳ ವಿರೋಧವಿರುವ ಕಾರಣದಿಂದ ಪುರುಷಾರ್ಥಾಯ=ಮೋಕ್ಷಕಾರಣವಾಗಿ ನ ಭವತಿ=ಆಗುವುದಿಲ್ಲ.

ಭಾವಾರ್ಥ— ಸ್ನೇಹವಿಲ್ಲದೆ ಕೇವಲ ಜ್ಞಾನದಿಂದ ಮೋಕ್ಷವು ಸಿಗುವುದಿಲ್ಲವೆಂದಾದಲ್ಲಿ ಜ್ಞಾನಪದಕ್ಕೆ ಸ್ನೇಹಸಹಿತಜ್ಞಾನ ಎಂಬ ಅರ್ಥದಲ್ಲಿ ಲಕ್ಷಣಾ ಮಾಡಬಹುದು. ಆದರೆ ಸ್ನೇಹವಿಲ್ಲದಿದ್ದರೂ ದ್ವೇಷಯುಕ್ತವಾದ ಜ್ಞಾನದಿಂದಲೂ ಮೋಕ್ಷವಾಗುತ್ತದೆ. ಹೀಗಿರುವಾಗ ಜ್ಞಾನಪದಕ್ಕೆ ಸ್ನೇಹಯುಕ್ತ ಜ್ಞಾನದಲ್ಲಿ ಲಕ್ಷಣಾ ಏಕೆ ಮಾಡಬೇಕು?

ಈ ಆಕ್ಷೇಪಕ್ಕೆ ಸಮಾಧಾನ— ದ್ವೇಷವು ಮೋಕ್ಷಕ್ಕೆ ಸಾಧನವಲ್ಲ. ಅದು ಸಕಲಶ್ರುತಿಗಳಿಗೂ ವಿರುದ್ಧ. ಅದನ್ನು ಮುಂದೆ ತೋರಿಸಲಾಗಿದೆ—

**'ಚೇತನಸ್ಯ ದ್ವಯಂ ಭೋಗ್ಯಂ ಸಂಸಾರೋ ಮುಕ್ತಿರೇವ ಚ ।**
**ಸಂಸಾರಸ್ತ್ರಿವಿಧಸ್ತತ್ರ ಸ್ವರ್ಗೋ ಮಧ್ಯಮಧಸ್ತಥಾ ॥ ೨೧೨ ॥**

**ಮುಕ್ತಿಶ್ಚ ದ್ವಿವಿಧಾ ತತ್ರ ಸುಖಂ ನಿತ್ಯಂ ತಥಾಽಪರಮ್ ।**
**ನಿತ್ಯದುಃಖಮಿತಿ ಜ್ಞೇಯಂ ಸಾಧನಂ ಸಂಸೃತಾವಪಿ ॥ ೨೧೩ ॥**

**ಕಾಮ್ಯಂ ಕರ್ಮ ನಿಷಿದ್ಧಂ ಚ ಸಾಜ್ಞಾನಮಿತಿ ನಿಶ್ಚಯಃ ।**
**ದ್ವೇಷೋ ಭಕ್ತಿಶ್ಚ ಮುಕ್ತೌ ತು ಮುಕ್ತಿದ್ವಯವಿಧಾಯಕಮ್' ॥ ೨೧೪ ॥**

**ಇತಿ ಪೈಂಗಿಶ್ರುತೇರ್ದ್ವೇಷೋ ನೈವ ಸನ್ಮುಕ್ತಿಕಾರಣಮ್ ॥ ೨೧೫ ॥**

'ಚೇತನಸ್ಯ ಭೋಗ್ಯಂ ದ್ವಯಂ=ಚೇತನರಿಗೆ ಭೋಗಾರ್ಹವಾದುದು ಎರಡು—ಸಂಸಾರಃ ಮುಕ್ತಿರೇವ ಚ=ಸಂಸಾರ ಮತ್ತು ಮೋಕ್ಷ. ತತ್ರ= ಇವೆರಡರಲ್ಲಿ ಸಂಸಾರಃ ತ್ರಿವಿಧಃ=ಸಂಸಾರವು ಮೂರುವಿಧ—ಸ್ವರ್ಗಃ ಮಧ್ಯಮ್ ತಥಾ ಅಧಃ=ಸ್ವರ್ಗ, ಮಾನುಷಜೀವನ ಹಾಗೂ ನರಕ. ತತ್ರ= ಮಾನುಷಭೋಗ್ಯದಲ್ಲಿ ಮುಕ್ತಿಃ=ಮೋಕ್ಷವು ದ್ವಿವಿಧಾ=ಎರಡು ವಿಧ–ನಿತ್ಯಂ ಸುಖಂ=ನಿತ್ಯಸುಖ ಮತ್ತು ಅಪರಂ ನಿತ್ಯದುಃಖಂ=ಇನ್ನೊಂದು ನಿತ್ಯದುಃಖ, ಇತಿ ಜ್ಞೇಯಂ=ಹೀಗೆ ತಿಳಿಯಲ್ಪಡಬೇಕು. ಸಂಸೃತೌ ಅಪಿ= ಸಂಸಾರದ ವಿಷಯದಲ್ಲಿ ಸಾಧನಮಪಿ=ಸಾಧನವೂ ಕಾಮ್ಯಂ ಕರ್ಮ= ಕಾಮ್ಯ ಕರ್ಮಗಳು(ಇದು ಸ್ವರ್ಗಕ್ಕೆ ಸಾಧನ) ನಿಷಿದ್ಧಂ ಕರ್ಮ=ಶಾಸ್ತ್ರನಿಷಿದ್ಧ ವಾದ ಕರ್ಮ ಸಾಜ್ಞಾನಂ=ಮಿಥ್ಯಾಜ್ಞಾನದಿಂದ ಸಹಿತವಾದ ಕರ್ಮ. ಮೊದಲನೆಯದು ಮಾನುಷಾದಿಯೋನಿಪ್ರಾಪ್ತಿಗೆ, ಎರಡನೆಯದು ನರಕಕ್ಕೆ ಕಾರಣ. ಇತಿ ನಿಶ್ಚಯಃ=ಇದು ನಿರ್ಧಾರ. ಮುಕ್ತೌ ತು=ವಿಷ್ಣುವಿನ ವಿಷಯ ದಲ್ಲಿ (ಮೋಚಯತೀತಿ–ಮುಕ್ತಿಃ) ದ್ವೇಷಃ=ವಿಷ್ಣು–ವೈಷ್ಣವದ್ವೇಷವು ಮತ್ತು ಭಕ್ತಿಶ್ಚ=ವಿಷ್ಣುಭಕ್ತಿಯೂ ಮುಕ್ತಿದ್ವಯವಿಧಾಯಕಂ=ಎರಡು ವಿಧವಾದ ಮೋಕ್ಷಕ್ಕೆ ಕಾರಣವಾಗಿದೆ. ದ್ವೇಷವು ನಿತ್ಯದುಃಖರೂಪವಾದ ಮೋಕ್ಷಕ್ಕೂ ಭಕ್ತಿಯು ನಿತ್ಯಸುಖರೂಪವಾದ ಮೋಕ್ಷಕ್ಕೂ ಕಾರಣವಾಗುತ್ತದೆ.

ಇತಿ ಪೈಂಗಿಶ್ರುತೇಃ=ಹೀಗೆ ಪೈಂಗಿಶ್ರುತಿಯು ಇರುವುದರಿಂದ ದ್ವೇಷಃ= ದ್ವೇಷವು ನೈವ ಸನ್ಮುಕ್ತಿಕಾರಣಂ=ನಿತ್ಯಸುಖರೂಪವಾದ ಮೋಕ್ಷಕ್ಕೆ ಕಾರಣವಲ್ಲ.

**ಅಸನ್ಮುಕ್ತೇಃ ಕಾರಣಂ ಚ ಮುಕ್ತಾವಿತ್ಯತ್ರ ಕೇಶವಃ ।**
**ಮುಕ್ತಿಶಬ್ದೋದಿತೋ ಮೋಕ್ಷಂ ಸ್ವಭಕ್ತಾನಾಂ ಕರೋತಿ ಯತ್ ॥೨೧೬॥**

ದ್ವೇಷವು ನಿತ್ಯಸುಖರೂಪವಾದ ಮೋಕ್ಷಕ್ಕೆ ಕಾರಣವಲ್ಲ. ಏಕೆಂದರೆ, ಅಸನ್ಮುಕ್ತೇಃ ಕಾರಣಂ ಚ=ನಿತ್ಯದುಃಖರೂಪವಾದ ತಮಸ್ಸಿಗೆ ಕಾರಣವಾಗಿದೆ.

ಪೈಂಗಿಶ್ರುತಿಯ 'ಮುಕ್ತೌ' ಇತ್ಯತ್ರ='ಮುಕ್ತೌತು' ಎಂಬಲ್ಲಿ ಮುಕ್ತಿಶಬ್ದೋದಿತಃ=ಮುಕ್ತಿಶಬ್ದದಿಂದ ವಾಚ್ಯನಾದವನು ಕೇಶವಃ=ವಿಷ್ಣುವು.

ಹೇಗೆಂದರೆ, ಸ್ವಭಕ್ತಾನಾಂ=ತನ್ನ ಭಕ್ತರಿಗೆ ಅವನು ಮೋಕ್ಷಂ ಕರೋತಿ=ನಿತ್ಯಸುಖವನ್ನು ಕೊಡುತ್ತಾನೆ.

**(ದ್ವಿ)ದ್ವೇಷತೋಽಪಿ ವಿಮುಕ್ತಿಶ್ಚೇನ್ಮಹಾತಾತ್ಪರ್ಯರೋಧನಮ್ ।**
**ಭಕ್ತ್ಯಾ ಪ್ರಸನ್ನತೋ ದೇವಾನ್ಮುಕ್ತಿರಿತ್ಯೇವ ತದ್ಗುಣಾನ್ ॥ ೨೧೭ ॥**

**ವದಂತಿ ಶ್ರುತಯಸ್ಸರ್ವಾಃ ಪುರಾಣಾನ್ಯಾಗಮಾ ಅಪಿ ।**
**ಯದಿ ದ್ವೇಷೇಣ ಮುಕ್ತಿಃ ಸ್ಯಾದ್ ವಕ್ತವ್ಯೋ ದೋಷಸಂಚಯಃ**
**॥ ೨೧೮ ॥**

ದ್ವೇಷತೋಽಪಿ ವಿಮುಕ್ತಿಶ್ಚೇತ್=ದ್ವೇಷದಿಂದಲೂ ಮೋಕ್ಷವಾಗುವುದಾದಲ್ಲಿ ಮಹಾತಾತ್ಪರ್ಯರೋಧನಂ=ಶಾಸ್ತ್ರಗಳಿಗೆ ಭಗವಂತನ ಗುಣೋತ್ಕರ್ಷದಲ್ಲೇ ಮುಖ್ಯತಾತ್ಪರ್ಯ ಎನ್ನುವುದಕ್ಕೆ ವಿರೋಧ ಬರುತ್ತದೆ. ಹೇಗೆಂದರೆ, ಭಕ್ತ್ಯಾ ಪ್ರಸನ್ನತಃ ದೇವಾತ್=ಭಕ್ತಿಯಿಂದ ಪ್ರಸನ್ನನಾದ ಭಗವಂತನಿಂದ ಮುಕ್ತಿಃ=ಮೋಕ್ಷವು ಇತ್ಯೇವ ಕಾರಣಾತ್=ಈ ಕಾರಣದಿಂದಾಗಿಯೇ ಸರ್ವಾಃ ಶ್ರುತಯಃ=ಎಲ್ಲ ವೇದಗಳೂ ಪುರಾಣಾನಿ=ಪುರಾಣಗಳು ಆಗಮಾ ಅಪಿ=ಪಂಚರಾತ್ರಾದಿಆಗಮಗಳೂ ಕೂಡಾ ತದ್‌ಗುಣಾನ್=ಭಗವಂತನ ಗುಣಗಳನ್ನು ವದಂತಿ=ಹೇಳುತ್ತವೆ.

ಯದಿ ದ್ವೇಷೇಣ ಮುಕ್ತಿಃ ಸ್ಯಾತ್=ಒಂದು ವೇಳೆ ದ್ವೇಷದಿಂದ ಮೋಕ್ಷವಾಗುವುದಾದಲ್ಲಿ ದೋಷಸಂಚಯಃ ವಕ್ತವ್ಯಃ=ವಿಷ್ಣುವಿನಲ್ಲಿ ಅನೇಕ ದೋಷಗಳು ಶಾಸ್ತ್ರದಲ್ಲಿ ಹೇಳಲ್ಪಡಬೇಕು.

ಭಾವಾರ್ಥ—ದ್ವೇಷದಿಂದ ಮೋಕ್ಷವೆಂದಾದಲ್ಲಿ ಶಾಸ್ತ್ರಗಳ ಪ್ರಧಾನ ತಾತ್ಪರ್ಯಕ್ಕೆ ವಿರೋಧ ಬರುತ್ತದೆ. ಸಕಲಶಾಸ್ತ್ರಗಳಿಗೂ ಮೋಕ್ಷಸಾಧನ ಭಗವತ್‌ಪ್ರಸಾದಕ್ಕೆ ಕಾರಣವಾದ ಭಗವಂತನ ಗುಣಗಳನ್ನು ನಿರೂಪಿಸುವಲ್ಲೇ ಮುಖ್ಯತಾತ್ಪರ್ಯ. ಇಂತಹ ಗುಣೋತ್ಕರ್ಷಜ್ಞಾನದಿಂದ ಭಗವಂತನಲ್ಲಿ ಸ್ನೇಹವೇ ಹುಟ್ಟುತ್ತದೆ, ದ್ವೇಷ ಉಂಟಾಗುವುದಿಲ್ಲ. ಒಂದುವೇಳೆ ಸ್ನೇಹದಂತೆ ದ್ವೇಷವೂ ಮೋಕ್ಷಕ್ಕೆ ಕಾರಣವಾಗುವುದಾದಲ್ಲಿ ದ್ವೇಷಸಾಧನವಾದ ದೋಷ

ಗಳನ್ನೂ ಭಗವಂತನಲ್ಲಿ ಶ್ರುತಿಗಳು ಹೇಳಬೇಕು. ಆದರೆ, ದೋಷಗಳನ್ನೆಂದೂ ಶ್ರುತಿಗಳು ಹೇಳುತ್ತಿಲ್ಲ. ಆದ್ದರಿಂದ ದ್ವೇಷವು ಮೋಕ್ಷಸಾಧನವಲ್ಲ.

**ಸ್ಮರ್ತವ್ಯೋ ಭಗವಾನ್ ನಿತ್ಯಮಿತ್ಯರ್ಥೇನ್ಯೈವ ಹಿ ಕ್ವಚಿತ್ ।**
**ದ್ವೇಷಾದಿವ ಗುಣಾನಾಹ ಪುರಾಣೇ ಕ್ರುದ್ಧವಾಕ್ಯವತ್ ॥ ೨೧೯ ॥**

ಭಗವಾನ್=ಭಗವಂತನು ನಿತ್ಯಂ ಸ್ಮರ್ತವ್ಯಃ=ಇತಿ=ಸದಾ ಸ್ಮರಣಾ-ರ್ಹನು ಎಂಬ ಕಾರಣಕ್ಕಾಗಿ ಕ್ವಚಿತ್=ಕೆಲವೆಡೆ ಪುರಾಣಗಳಲ್ಲಿ ಇತ್ಯರ್ಥೇನ್ಯೈ= ಈ ಅಭಿಪ್ರಾಯದಿಂದಲೇ ಕ್ರುದ್ಧವಾಕ್ಯವತ್=ಕೋಪಬಂದವನ ಮಾತಿನಂತೆ ದ್ವೇಷಾತ್ ಮುಕ್ತಿಮಾಹೇವ=ವೇದವ್ಯಾಸರು ದ್ವೇಷದಿಂದಲೂ ಮೋಕ್ಷವನ್ನು ಹೇಳಿದಂತೆ ಕಾಣುತ್ತದೆ. ಇನ್ನು ಕೆಲವೆಡೆ 'ದ್ವೇಷಾತ್ ಚೈದ್ಯಾದಯೋ ನೃಪಾಃ' ಎಂಬಲ್ಲಿ ವ್ಯಾಸರು ಗುಣಾನಾಹ=ಭಗವಂತನ ಕೃಪಾಲುತ್ವಗುಣವನ್ನೇ ಹೇಳಿ ದ್ದಾರೆ.

ಭಾವಾರ್ಥ—ಪುರಾಣಗಳಲ್ಲಿ ದ್ವೇಷದಿಂದಲೂ ಮೋಕ್ಷವನ್ನು ಹೇಳುವ ವಾಕ್ಯಗಳಿವೆ. ಅವುಗಳಲ್ಲಿ ಎರಡು ರೀತಿ ಇದೆ. ಕೆಲವು ವಾಕ್ಯಗಳು ದ್ವೇಷದಿಂದ ನಿರಂತರ ದೇವರನ್ನು ಸ್ಮರಿಸುತ್ತಾ ಮುಕ್ತರಾಗುತ್ತಾರೆ, ಎನ್ನುತ್ತವೆ. ಉದಾಹರಣೆಗೆ—

ವೈರೇಣ ಯಂ ನೃಪತಯಃ ಶಿಶುಪಾಲಪೌಂಡ್ರ-
ಸಾಲ್ವಾದಯೋ ಗತಿವಿಲಾಸವಿಲೋಕಾನಾದ್ಯೈಃ ।
ಧ್ಯಾಯಂತ ಆಕೃತಧಿಯಃ ಶಯನಾಸನಾದೌ
ತತ್ಸಾಮ್ಯಮಾಪುರನುರಕ್ತಧಧಿಯಃ ಪುನಃ ಕಿಮ್ ॥

(ಭಾ.11-5-49)

ಶಿಶುಪಾಲಾದಿಗಳು ಕೃಷ್ಣನಲ್ಲಿ ಉತ್ಕಟದ್ವೇಷದಿಂದ ಸದಾ ಅವನ ನಡೆ—ನುಡಿ–ನೋಟಗಳನ್ನು ನೆನೆಯುತ್ತಲೇ ಅವನ ಸಾಮ್ಯವನ್ನು ಹೊಂದಿ ದರು.

ಇಂತಹ ವಾಕ್ಯಗಳ ಅಭಿಪ್ರಾಯ–ಭಗವಂತನನ್ನು ಸದಾ ಸ್ಮರಿಸುತ್ತಿರ ಬೇಕು, ಎಂದು. ತಂದೆ ಸಿಟ್ಟು ಬಂದಾಗ ಮಗನಿಗೆ–ಹೀಗೆ ಮಾಡುವುದಕ್ಕಿಂತ

ಸಾಯುವುದೇ ವಾಸಿ, ಎನ್ನುತ್ತಾನೆ. ಅದರ ಅರ್ಥ— ಈ ಕೆಟ್ಟ ಕೆಲಸ ಮಾಡ ಬೇಡ, ಎಂದು. ಅದರಂತೆ ಮೇಲಿನ ಭಾಗವತವಾಕ್ಯದ ಭಾವಾರ್ಥವನ್ನೂ ತಿಳಿಯಬೇಕು.

ಮನುಸ್ಮೃತಿಯಲ್ಲಿ ಹೀಗಿದೆ—

ವೃದ್ಧೌ ಚ ಮಾತಾಪಿತರೌ, ಸಾಧ್ವೀ ಭಾರ್ಯಾ, ಸುತಃ ಶಿಶುಃ ।
ಅಪ್ಯಕಾರ್ಯಶತಂ ಕೃತ್ವಾ ಭರ್ತವ್ಯಾ ಮನುರಬ್ರವೀತ್ ॥

ಹತ್ತಾರು ಕೆಟ್ಟಕೆಲಸಗಳನ್ನು ಮಾಡಿಯಾದರೂ ವೃದ್ಧ ತಂದೆ-ತಾಯಂದಿರನ್ನು ಪತ್ನೀ-ಪುತ್ರರನ್ನು ಸಾಕಿ-ಸಲಹುವುದು ಗೃಹಸ್ಥನ ಕರ್ತವ್ಯ, ಎಂದು ಇದರ ಅರ್ಥ. ಇದರ ಭಾವ— ಕೆಟ್ಟಕೆಲಸಗಳನ್ನು ಮಾಡಬೇಕು, ಎಂದಲ್ಲ. ಆಶ್ರಿತರನ್ನು ಸಲಹಬೇಕು, ಎಂದು ಮಾತ್ರ. ಅದರಂತೆ ದ್ವೇಷದಿಂದ ಶಿಶುಪಾಲಾದಿಗಳು ಕೃಷ್ಣನನ್ನು ಸ್ಮರಿಸಿ ಉದ್ಧೃತರಾದರು, ಎಂದರೆ ದ್ವೇಷ ಮಾಡಬೇಕು, ಎಂದರ್ಥವಲ್ಲ. ದೇವರನ್ನು ಸ್ಮರಿಸಬೇಕು, ಎಂದಿಷ್ಟೇ ಅರ್ಥ.

ಇನ್ನು ಕೆಲವೆಡೆ ದ್ವೇಷದಿಂದಲೇ ಮೋಕ್ಷ ಎಂದು ಹೇಳಲಾಗಿದೆ. ಉದಾಹರಣೆಗೆ—

ದ್ವೇಷಾತ್ ಚೈದ್ಯಾದಯೋ ನೃಪಾಃ ॥ (ಭಾಗ.7-2-32)

''ಚೈದ್ಯಾದಯೋಽಸುರಾವೇಶಾದ್ಧರೌ ದ್ವೇಷಯುತಾ ಅಪಿ ।
ನಿಜಸ್ವಭಾವಯಾ ಭಕ್ತ್ಯಾ ನೀತಾ ಹರಿಸರೂಪತಾಮ್ ॥
ತಥಾಹಿ ಕರುಣೋ ವಿಷ್ಣುರನ್ಯಾವೇಶಾದ್ ಯದಿ ದ್ವಿಷನ್ ।
ಹೀಯತೇ ಕಿಂ ಮಮಾನೇನೇತ್ಯಾನಂದಸ್ವರೂಪಿಣಃ ॥
ಅತೋ ಯದ್ಯಸುರಾವೇಶಾತ್ ಕೃತಮೇನೇನ ದುಷ್ಕೃತಮ್ ।
ಅನಾದಿಭಕ್ತೋ ಯಸ್ಮಾನ್ಮೇ ಮೋಚಯಿಷ್ಯೇ ತತಸ್ತ್ವಹಮ್ ॥
ಇತಿ ಮತ್ವಾ ಮೋಚಯತಿ ಚೈದ್ಯಾದೀನಪಿ ಕೇಶವಃ'' ॥

(ಇತಿ ಬ್ರಹ್ಮಾಂಡೇ)

ಇಂತಹ ವಾಕ್ಯಗಳು ಭಗವಂತನ ಕೃಪಾಲುತ್ವಗುಣವನ್ನು ಹೇಳುತ್ತವೆ. ಶಿಶುಪಾಲಾದಿಗಳು ಶ್ರೀಕೃಷ್ಣನನ್ನು ನಿರಂತರವಾಗಿ ದ್ವೇಷಮಾಡಿದರು. ಆದರೂ, ಕೃಷ್ಣ ಬೇಸರಿಸಿಕೊಂಡಿಲ್ಲ. 'ಅವನು ನನ್ನ ದ್ವಾರಪಾಲಕನಾದ ಭಕ್ತ.

ಅಸುರಾವೇಶದಿಂದಾಗಿ ನನ್ನನ್ನು ದ್ವೇಷಮಾಡುತ್ತಿದ್ದಾನೆ. ಅದು ಅವನ ಸಹಜ ಭಾವವಲ್ಲ' ಎಂದು ತಿಳಿದು ದ್ವೇಷವನ್ನು ಉಪೇಕ್ಷೆಮಾಡಿ ಸಹಜ ಭಕ್ತಿಯನ್ನಷ್ಟೇ ಪರಿಗಣಿಸಿ ಮೋಕ್ಷವನ್ನು ಕೊಟ್ಟ. ಇದು ಭಗವಂತನ ಭಕ್ತಾನುಕಂಪೆ. ಹೀಗೆ ಇಂತಹ ವಾಕ್ಯಗಳು ಭಗವಂತನ ಕೃಪಾಗುಣವನ್ನೇ ತಿಳಿಸುತ್ತವೆ.

**ಯಥಾ ಕ್ರುದ್ಧಃ ಪಿತಾ ಪುತ್ರಂ ಮರೇತ್ಯಾಕ್ಷೇಪಪೂರ್ವಕಮ್ ।**
**ಪ್ರೋಕ್ತಸ್ಯಾನ್ಯಸ್ಯ ಕೃತ್ಯರ್ಥಂ ವದತ್ಯೇವಂ ಪುರಾಣಗಮ್ ॥ ೨೨೦ ॥**

ಯಥಾ=ಹೀಗೆ ಕ್ರುದ್ಧಃ ಪಿತಾ=ಸಿಟ್ಟಿಗೆದ್ದ ತಂದೆ ಆಕ್ಷೇಪ ಪೂರ್ವಕಂ=ಆಕ್ಷೇಪ ಮಾಡುವಂತೆ ಪುತ್ರಂ=ಮಗನನ್ನು 'ಮರ ಇತಿ=ಸಾಯಿ' ಎಂಬ ಮಾತನ್ನು, ಪ್ರೋಕ್ತಸ್ಯ=ತನ್ನಿಂದ ಹೇಳಲ್ಪಟ್ಟ ಅನ್ಯಸ್ಯ=ಬೇರೆ ಕೆಲಸದ ಕೃತ್ಯರ್ಥಂ=ಮಾಡುವುದಕ್ಕಾಗಿಯೇ ವದತಿ=ಹೇಳುವನೋ ಏವಂ ಪುರಾಣಗಂ ವಾಕ್ಯಂ=ಅದರಂತೆಯೇ ಪುರಾಣದಲ್ಲಿರುವ ದ್ವೇಷದಿಂದ ಸ್ಮರಿಸಿ ಮುಕ್ತಿಯನ್ನು ಹೇಳುವ ವಾಕ್ಯ.

**ಭಾವಾರ್ಥ**—ಇದರ ಭಾವವನ್ನು ಸುಧಾದಲ್ಲಿ ಹೀಗೆ ವಿವರಿಸ ಲಾಗಿದೆ— ತಂದೆ ಮಗನಿಗೆ ಏನೋ ಕೆಲಸ ಹೇಳುತ್ತಾನೆ. ಮಗ ಆಲಸ್ಯದಿಂದ ಆ ಕೆಲಸವನ್ನು ಮಾಡಲಿಲ್ಲ. ಸಿಟ್ಟಾದ ತಂದೆ—'ಸೋಮಾರಿ, ನೀನು ಸಾಯಿ' ಎನ್ನುತ್ತಾನೆ. ಇಲ್ಲಿ ತಂದೆಯ ಅಭಿಪ್ರಾಯ–ನೀನು ಈ ಕೆಲಸವನ್ನು ಮಾಡಲೇ ಬೇಕು, ಎಂದು.

ಇಲ್ಲಿ 'ಮ್ರಿಯಸ್ವ' ಎನ್ನುವ ಪ್ರಸಿದ್ಧಪ್ರಯೋಗವನ್ನು ಬಿಟ್ಟು 'ಮರ' ಎಂದು ಆಚಾರ್ಯರು ಅನ್ಯಥಾಪ್ರಯೋಗ ಮಾಡಿದ್ದಲ್ಲ. ಅದಕ್ಕೂ ಮೂಲ ಭೂತವಾದ ಒಂದು ಕ್ರಿಯಾಪದ ಇದೆ. ಮಾತ್ರವಲ್ಲ, ಅಂತಹ ಪ್ರಯೋಗವೂ ರೂಢಿಯಲ್ಲಿದೆ ಎಂದು ಸುಧಾದಲ್ಲಿ ತೋರಿಸಲಾಗಿದೆ—

ರಾಜಪುತ್ರ ಚಿರಂ ಜೀವ ಮಾ ಜೀವ ಋಷಿಪುತ್ರಕ ।
ಜೀವ ವಾ ಮರ ವಾ ಸಾಧೋ ವ್ಯಾಧ ಮಾ ಜೀವ ಮಾ ಮರ ॥

ಈ ಶ್ಲೋಕದಲ್ಲಿ 'ಮರ' ಎಂಬ ಕ್ರಿಯಾಪದದ ಪ್ರಯೋಗ ಇದೆ. ಇದರ ಭಾವಾರ್ಥ— ರಾಜಕುಮಾರ! ನೀನು ಚಿರಕಾಲ ಬಾಳು. ಋಷಿಕುಮಾರ!

ನೀನು ಬಹುಕಾಲ ಜೀವಿಸಬೇಡ. ವಿರಕ್ತಸನ್ಯಾಸಿಯೇ! ನೀನು ಬೇಕಾದರೆ ಬದುಕು ಅಥವಾ ಸಾಯಿ. ಬೇಡನೇ! ನೀನು ಸಾಯುವುದೂ ಬೇಡ, ಬದುಕುವುದೂ ಬೇಡ.

ರಾಜಪುತ್ರ ಇಲ್ಲಷ್ಟೇ ಸುಖಪಡೆದದ್ದು ಬಂತು, ಸತ್ತಮೇಲೆ ಸುಖವಿಲ್ಲ; ಋಷಿಕುಮಾರನಿಗೆ ಸತ್ತಮೇಲೆಯೇ ಸುಖ, ಜೀವನದಲ್ಲಿ ವ್ರತೋಽಪವಾಸಗಳ ಕ್ಲೇಶ. ವಿರಕ್ತನಿಗೆ ಬದುಕಲ್ಲೂ ಸುಖ, ಸತ್ತಮೇಲೂ ಸುಖ. ಆದ್ದರಿಂದ ಬದುಕಿದರೂ ಸತ್ತರೂ ಒಂದೇ. ಬೇಡನಿಗೆ ಜೀವನದಲ್ಲೂ ದುಃಖ, ಸತ್ತರೂ ದುಃಖ. ಆದ್ದರಿಂದ ಅವನು ಸಾಯುವುದೂ ಬೇಡ, ಬದುಕುವುದೂ ಬೇಡ.

**ವಾಕ್ಯಂ ಶ್ರುತಿವಿರೋಧೇನ ಸ್ವವಿರೋಧೇನ ಚಾಂಜಸಾ ।**
**ಬಹ್ವಾಗಮವಿರೋಧಾಚ್ಚ ನ ದ್ವೇಷಾನ್ಮುಕ್ತಿವಾಚಕಮ್ ॥ ೨೨೧ ॥**

ಪುರಾಣಗಂ ವಾಕ್ಯಂ=ಪುರಾಣದಲ್ಲಿರುವ ದ್ವೇಷದಿಂದ ಮೋಕ್ಷವನ್ನು ಹೇಳುವ ವಾಕ್ಯವು. ಶ್ರುತಿವಿರೋಧೇನ=ಹಿಂದಿನ ಪಾದದಲ್ಲಿ ಹೇಳಿರುವ ಶ್ರುತಿವಾಕ್ಯಗಳ ವಿರೋಧವಿರುವುದರಿಂದ, ಸ್ವವಿರೋಧೇನ=ಆ ವಾಕ್ಯವಿರುವ ಅದೇ ಪುರಾಣದ (ಭಾಗವತದ) ವಿರೋಧವೂ ಇರುವುದರಿಂದ ಬಹ್ವಾಗಮ ವಿರೋಧಾಚ್ಚ=ಅನೇಕಪೌರುಷೇಯಗ್ರಂಥಗಳ ವಿರೋಧವೂ ಇರುವುದರಿಂದ ಅಂಜಸಾ=ಮುಖ್ಯವೃತ್ತಿಯಿಂದ ದ್ವೇಷಾತ್ ಮುಕ್ತಿವಾಚಕಂ ನ=ದ್ವೇಷದಿಂದ ಮುಕ್ತಿಯಾಗುತ್ತದೆ, ಎನ್ನುತ್ತಿಲ್ಲ.

ಭಾವಾರ್ಥ— 'ದ್ವೇಷಾತ್ ಚೈದ್ಯಾದಯೋ ನೃಪಾಃ' ಎಂದು ಭಾಗವತದಲ್ಲಿದೆ. ಅದೇ ಭಾಗವತದಲ್ಲಿ—

'ಹಿರಣ್ಯಕಶಿಪುಶ್ಚಾಪಿ ಭಗವನ್ನಿಂದಯಾ ತಮಃ
ವಿವಿಕ್ಷುರತ್ಯಗಾತ್ ಸೂನೋಃ ಪ್ರಹ್ಲಾದಸ್ಯಾನುಭಾವತಃ ॥ ಎಂದಿದೆ.

ಇದರ ಅರ್ಥ— ಹಿರಣ್ಯಕಶಿಪು ತಾನು ಮಾಡಿದ ಭಗವನ್ನಿಂದೆಯಿಂದ ತಮಸ್ಸಿಗೆ ಹೋಗಬೇಕಾಗಿತ್ತು. ಆದರೂ ಮಗನಾದ ಪ್ರಹ್ಲಾದನ ಭಗವದ್ಭಕ್ತಿಯಿಂದ ತಮಸ್ಸನ್ನು ದಾಟಿದ, ಎಂದು. ಇಲ್ಲಿ ಭಗವಂತನ ದ್ವೇಷವು ತಮಸ್ಸಿಗೆ ಸಾಧನ, ಎಂದು ಭಾಗವತವೇ ಹೇಳುತ್ತಿದೆ.

**'ತಮೋ ದ್ವೇಷೇಣ ಸಂಯಾಂತಿ ಭಕ್ತ್ಯಾ ಮುಕ್ತಿಂ ತಥೈವ ಚ ।**
**ವಿಷ್ಣೌ ವಿಷ್ಣುಪ್ರಸಾದೇನ ವಿಲೋಮತ್ವೇನ ಚಾಂಜಸಾ ।'**
**ಇತಿ ಷಾಡ್ಗುಣ್ಯವಚನಮಪ್ಯುಕ್ತಾರ್ಥನಿಯಾಮಕಮ್ ॥ ೨೨೨ ॥**

''ವಿಷ್ಣೌ ದ್ವೇಷೇಣ ವಿಲೋಮತ್ವೇನ ಅಂಜಸಾ ತಮೋ ಸಂಯಾಂತಿ= ಪ್ರಾಣಿಹಿಂಸಾಜೀವನದಿಂದ ಭಗವದ್‌ದ್ವೇಷದಿಂದ ಬರುವ ಕೋಪದಿಂದಾಗಿ ತಮಸ್ಸಿಗೆ ಹೋಗುತ್ತಾರೆ. ತಥೈವ ಚ ಭಕ್ತ್ಯಾ ವಿಷ್ಣುಪ್ರಸಾದೇನ, ಮುಕ್ತಿಂ ಸಂಯಾಂತಿ=ಅದರಂತೆಯೇ ಭಕ್ತಿಯಿಂದ ಆದ ವಿಷ್ಣುಪ್ರಸಾದದಿಂದ ಮುಕ್ತಿಯನ್ನು ಹೊಂದುತ್ತಾರೆ''.

ಇತಿ=ಈ ರೀತಿಯ ಷಾಡ್ಗುಣ್ಯವಚನಮಪಿ='ಷಾಡ್ಗುಣ್ಯ' ಎಂಬ ಗ್ರಂಥದ ವಚನವೂ ಉಕ್ತಾರ್ಥನಿಯಾಮಕಂ=ದ್ವೇಷದಿಂದ ಮುಕ್ತಿ ಇಲ್ಲ, ಎಂಬ ಅರ್ಥಕ್ಕೆ ಸಾಧಕ.

**ಮಹಾತಾತ್ಪರ್ಯರೋಧೇನ(ಚ)ಕಥಂ ವಾಕ್ಯಂ ಪ್ರಮಾಣತಾಮ್ ।**
**ಯಾತಿ ಸರ್ವಾರ್ಥರೂಪಂ ಹಿ ಮಹಾತಾತ್ಪರ್ಯಮಿಷ್ಯತೇ ॥ ೨೨೩ ॥**

ಮಹಾತಾತ್ಪರ್ಯರೋಧೇನ=ಸಕಲಶಾಸ್ತ್ರಗಳ ಮಹಾತಾತ್ಪರ್ಯಕ್ಕೆ ವಿರೋಧವಿರುವಕಾರಣದಿಂದ ವಾಕ್ಯಂ=ದ್ವೇಷದಿಂದ ಮೋಕ್ಷವನ್ನು ಹೇಳುವ ವಾಕ್ಯವು ಕಥಂ ಪ್ರಮಾಣತಾಂ ಯಾತಿ=ಆಪಾತತಃ ಪ್ರತೀತವಾದ ಅರ್ಥದಲ್ಲಿ ಹೇಗೆ ತಾನೇ ಪ್ರಮಾಣವಾದೀತು? ಸರ್ವಾರ್ಥರೂಪಂ ಹಿ=ಶಾಸ್ತ್ರದ ಎಲ್ಲಾ ವಾಕ್ಯಗಳಿಗೆ ಏಕಾರ್ಥಪ್ರತಿಪಾದಕತ್ವವೇ ಮಹಾತಾತ್ಪರ್ಯಮಿಷ್ಯತೇ=ಮಹಾ ತಾತ್ಪರ್ಯವೆಂದು ಹೇಳಲ್ಪಡುತ್ತದೆ.

**ಭಾವಾರ್ಥ—** ವಾಕ್ಯಕ್ಕಿಂತಲೂ ಮಹಾತಾತ್ಪರ್ಯವು ಪ್ರಬಲ. ದ್ವೇಷವು ಮೋಕ್ಷಸಾಧನ ಎನ್ನುವುದಕ್ಕೆ ವಾಕ್ಯವು ಪ್ರಮಾಣ. ಭಕ್ತಿಯಿಂದಲೇ ಮೋಕ್ಷ ಎನ್ನುವುದು ಸಕಲಶಾಸ್ತ್ರಗಳ ತಾತ್ಪರ್ಯ. ಈ ತಾತ್ಪರ್ಯಕ್ಕೆ ವಿರುದ್ಧವಾದುದ ರಿಂದ ವಾಕ್ಯಾರ್ಥವನ್ನು ಅಂಗೀಕರಿಸಬಾರದು.

**ವಾಚಕತ್ವಂ ಹಿ ತಾತ್ಪರ್ಯಂ ಯದರ್ಥಾ ಅಖಿಲಾ ರವಾಃ ।**
**ಸೋಽರ್ಥಃ ಕಥಂ ಪರಿತ್ಯಾಜ್ಯ ಏಕಶಬ್ದಸ್ಯ ಸಂಶಯೇ ॥ ೨೨೪ ॥**

ವಾಚಕತ್ವಂ ಹಿ=ಪದಗಳಲ್ಲಿರುವ ಅರ್ಥವಾಚಕತ್ವವೇ ತಾತ್ಪರ್ಯಂ= ತಾತ್ಪರ್ಯ, ಎನಿಸುತ್ತದೆ. ಅಖಿಲಾಃ ರವಾಃ=ಎಲ್ಲಾ ಆಗಮಗಳೂ ಯದರ್ಥಾಃ=ಯಾವ ವಿಷಯಪ್ರತಿಪಾದಕವಾಗಿವೆಯೋ ಸೋಽರ್ಥಃ= ಅಂತಹ ಅರ್ಥವು ಏಕಶಬ್ದಸ್ಯ ಸಂಶಯೇ ಸತಿ=ಒಂದು ವಾಕ್ಯದ ವಿಷಯದಲ್ಲಿ ಸಂದೇಹ ಬಂದಾಗ ಕಥಂ ಪರಿತ್ಯಾಜ್ಯಃ=ಹೇಗೆ ತಾನೇ ತ್ಯಾಜ್ಯವಾದೀತು?

**ಭಾವಾರ್ಥ—** ಭಕ್ತಿಯೇ ಭಗವಂತನ ಪ್ರಸಾದಕ್ಕೆ ಕಾರಣವಾಗಿ ಮೋಕ್ಷಸಾಧನ ಎಂದು ಸಕಲಾಗಮಗಳಿಂದ ಸಿದ್ಧವಾಗುವ ಮುಖ್ಯಾರ್ಥ. ದ್ವೇಷವು ಮೋಕ್ಷಕ್ಕೆ ಕಾರಣ ಎನ್ನುವ ವಾಕ್ಯ ಈ ಆಗಮದ ಏಕದೇಶ. ಹಾಗೂ ಆ ಅರ್ಥ ಸಂದಿಗ್ಧ. ಆದ್ದರಿಂದ ಶಾಸ್ತ್ರದ ಏಕದೇಶವಾದ ಆ ವಾಕ್ಯವು ಸಕಲಾಗಮ ವಿರುದ್ಧವಾದುದರಿಂದ ಆಪಾತಾರ್ಥದಲ್ಲಿ ಪ್ರಮಾಣವಾಗುವುದಿಲ್ಲ.

**ಅತೋ ವಿಜ್ಞಾನಭಕ್ತಿಭ್ಯಾಂ ಪುರುಷಾರ್ಥಃ ಪರೋ ಭವೇತ್ ॥ ೨೨೫ ॥**

ಅತಃ=ಆದ್ದರಿಂದ ವಿಜ್ಞಾನಭಕ್ತಿಭ್ಯಾಂ=ವಿಷ್ಣುಮಾಹಾತ್ಮ್ಯಜ್ಞಾನ ಮತ್ತು ಭಕ್ತಿಗಳಿಂದ ಪರಃ ಪುರುಷಾರ್ಥಃ ಭವೇತ್=ಪರಮಪುರುಷಾರ್ಥವಾದ ಮೋಕ್ಷವು ಉಂಟಾಗುತ್ತದೆ.

**ಭಕ್ತಿಯೇ ಸಾಧನ**

**'ಯಸ್ಯ ದೇವೇ ಪರಾ ಭಕ್ತಿರ್ಯಥಾ ದೇವೇ ತಥಾ ಗುರೌ ।**
**ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ' ॥ ೨೨೬ ॥**

**'ಭಕ್ತ್ಯಾ ಜ್ಞಾನಂ ತತೋ ಭಕ್ತಿಸ್ತತೋ ದೃಷ್ಟಿಸ್ತತಶ್ಚ ಸಾ ।**
**ತತೋ ಮುಕ್ತಿಸ್ತತೋ ಭಕ್ತಿಃ ಸೈವ ಸ್ಯಾತ್ ಸುಖರೂಪಿಣೀ' ॥ ೨೨೭ ॥**

**'ಭಕ್ತ್ಯಾ ಪ್ರಸನ್ನೋ ಭಗವಾನ್ ದದ್ಯಾಜ್ಜ್ಞಾನಮನಾಕುಲಮ್ ।**
**ತಯೈವ ದರ್ಶನಂ ಯಾತಃ ಪ್ರದದ್ಯಾನ್ಮುಕ್ತಿಮೇತಯಾ' ॥ ೨೨೮ ॥**

'ನಾಹಂ ವೇದೈರ್ನ ತಪಸಾ ನ ದಾನೇನ ನಚೇಜ್ಯಯಾ ।
ಶಕ್ಯ ಏವಂವಿಧೋ ದ್ರಷ್ಟುಂ ದೃಷ್ಟವಾನಸಿ ಮಾಂ ಯಥಾ' ॥ ೨೨೯ ॥

'ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಮೇವಂವಿಧೋऽರ್ಜುನ ।
ಜ್ಞಾತುಂ ದ್ರಷ್ಟುಂ ಚ ತತ್ವೇನ ಪ್ರವೇಷ್ಟುಂ ಚ ಪರಂತಪ ' ॥ ೨೩೦ ॥

ಇತ್ಯಾದಿವಾಕ್ಯತಶ್ಚೈವ ಸೋऽಯಮುಕ್ತಾರ್ಥ ಈಯತೇ ॥ ೨೩೧ ॥

ಭಾವಾರ್ಥ— ಯಾರಿಗೆ ದೇವತೆಗಳಲ್ಲಿ ಮತ್ತು ಗುರುಗಳಲ್ಲಿ ಅವರವರ ಯೋಗ್ಯತೆಗೆ ಅನುಗುಣವಾದ ಭಕ್ತಿ ಇದೆಯೋ ಅಂತಹ ಮಹಾತ್ಮನಿಗೆ ಶಾಸ್ತ್ರಗಳಲ್ಲಿ ಹೇಳಿರುವ ವಿಷಯಗಳು ಮನದಟ್ಟಾಗುತ್ತವೆ. ಈ ಪ್ರಮಾಣದಿಂದ ಭಕ್ತಿಯಿಂದಲೇ ಜ್ಞಾನ, ಎಂದು ತಿಳಿಯುತ್ತದೆ.

''ಭಕ್ತಿಯಿಂದ ಪರೋಕ್ಷನಿಶ್ಚಯ. ಆ ನಿಶ್ಚಯದಿಂದ ಪಕ್ವವಾದ ಭಕ್ತಿ. ಅಂತಹ ಭಕ್ತಿಯಿಂದ ಅಪರೋಕ್ಷಜ್ಞಾನ. ಅದರಿಂದ ಪರಿಪಕ್ವಭಕ್ತಿ. ಅದರಿಂದ ಮೋಕ್ಷ. ಮೋಕ್ಷವಾದ ಮೇಲೂ ಭಕ್ತಿಯು ಸ್ವಯಂ ಸುಖರೂಪವಾಗಿರುತ್ತದೆ, ಅದಕ್ಕೆ ಫಲಾಂತರ ಇಲ್ಲ''.

''ಭಕ್ತಿಯಿಂದ ಪ್ರಸನ್ನನಾದ ಭಗವಂತನು ವಿಶಿಷ್ಟವಾದ ಜ್ಞಾನವನ್ನು ಕೊಡುತ್ತಾನೆ. ಅಂತಹ ಜ್ಞಾನಪೂರ್ವಕಪಕ್ವಭಕ್ತಿಯಿಂದ ತನ್ನ ದರ್ಶನವನ್ನು ನೀಡಿ ಆಮೇಲೆ ಬಂದ ಪರಿಪಕ್ವಭಕ್ತಿಯಿಂದ ಮುಕ್ತಿಯನ್ನು ನೀಡುತ್ತಾನೆ''.

''ನಾನು ಭಕ್ತಿ ಇಲ್ಲದಿದ್ದವನಿಗೆ ವೇದಗಳಿಂದಾಗಲೀ ತಪಸ್ಸಿನಿಂದಾಗಲೀ ದಾನದಿಂದಾಗಲೀ ಯಜ್ಞದಿಂದಾಗಲೀ ಅರ್ಜುನ, ನೀನು ನನ್ನನ್ನು ಯಾವ ರೀತಿಯಾಗಿ ನೋಡಿರುವಿಯೋ ಆರೀತಿಯಾದ ನಾನು ಕಾಣಿಸಿಕೊಳ್ಳೆನು. ಈ ರೀತಿಯ ನಾನು ಅನನ್ಯಭಕ್ತಿಯಿಂದಲೇ ತಿಳಿಯಲೂ, ನೋಡಲೂ, ಸಾಯುಜ್ಯವನ್ನು ಹೊಂದಲೂ ಶಕ್ತನಾಗುವೆನು''.

ಇತ್ಯಾದಿವಾಕ್ಯಗಳಿಂದ ಹಿಂದೆ ಹೇಳಿರುವ ಭಕ್ತಿಯಿಂದಲೇ ಮೋಕ್ಷ ಎಂಬ ವಿಷಯವು ಸಿದ್ಧವಾಗುತ್ತದೆ.

**ನಚ ಪ್ರಸಾದಮಾಪ್ನೋತಿ ದ್ವೇಷಾದ್ ಭಕ್ತ್ಯಾ ತಮಾಪ್ನುಯಾತ್ ।**
**ಇತಿ ದೃಷ್ಟಾನುಸಾರಿತ್ವಮಪ್ಯಸ್ಮಿನ್ನರ್ಥ ಈಯತೇ ॥ ೨೩೨ ॥**

ದ್ವೇಷಾತ್ ಪ್ರಸಾದಂ ನಾಪ್ನೋತಿ=ದ್ವೇಷದಿಂದ ಪ್ರಸನ್ನತೆಯನ್ನು ಪಡೆಯಲಾಗದು, ಭಕ್ತ್ಯಾ ತಮಾಪ್ನುಯಾತ್=ಭಕ್ತಿಯಿಂದ ಹಿರಿಯರ ಪ್ರಸನ್ನತೆಯನ್ನು ಗಳಿಸಬಹುದು, ಇತಿ ದೃಷ್ಟಾನುಸಾರಿತ್ವಂ=ಹೀಗೆ ಲೋಕದಲ್ಲಿ ಕಂಡಿರುವ ನಿಯಮಾನುಸಾರಿಯಾದ ಅನುಮಾನವೂ ಅಸ್ಮಿನ್ನರ್ಥೇ ಈಯತೇ=ಭಕ್ತಿಯಿಂದಲೇ ಪ್ರಸಾದ, ಎನ್ನುವ ವಿಷಯದಲ್ಲಿ ಅಂಗೀಕರಿಸಲ್ಪಡುತ್ತದೆ.

**ಯೇ ಪೃಥಗ್ ವಿಹಿತಾ ವಿಷ್ಣೋರ್ಗುಣಾ ವೇದೇನ ಸಾದರಮ್ ।**
**ತ ಏವ ದೃಷ್ಟವೈಲೋಮ್ಯಾದಂಗೀಕಾರ್ಯಾ ನಚಾಪರಮ್ ।**
**ಅನ್ಯದ್ ದೃಷ್ಟಾನುಸಾರೇಣ ವಾಸುದೇವೇಽಪಿ ಗೃಹ್ಯತೇ ॥ ೨೩೩ ॥**

ಯೇ ಗುಣಾಃ=ಯಾವ ಜ್ಞಾನಾದಿಗುಣಗಳು ವಿಷ್ಣೋಃ=ವಿಷ್ಣುವಿಗೆ ವೇದೇನ=ವೇದದಿಂದ ಪೃಥಕ್=ಲೋಕವಿಲಕ್ಷಣವಾಗಿ ಸಾದರಮ್ ಉದಿತಾಃ=ತಾತ್ಪರ್ಯಪೂರ್ವಕವಾಗಿ ಹೇಳಲ್ಪಟ್ಟಿವೆಯೋ ತೇ ಏವ=ಅಂತಹ ಗುಣಗಳು ಮಾತ್ರವೇ ದೃಷ್ಟವೈಲೋಮ್ಯಾತ್=ಪ್ರತ್ಯಕ್ಷವಿರೋಧವನ್ನು ಕಡೆಗಣಿಸಿ ಅಂಗೀಕಾರ್ಯಾಃ=ಅಂಗೀಕರಿಸಲ್ಪಡಬೇಕು. ಅಪರಂ ನಚ= ಉಳಿದುದನ್ನು ಹಾಗಲ್ಲ. ಅನ್ಯತ್=ಇತರ ವಿಷಯವು ದೃಷ್ಟಾನುಸಾರೇಣ= ಲೋಕದಲ್ಲಿ ಕಂಡಿರುವಂತೆಯೇ ವಾಸುದೇವೇಽಪಿ=ಪರಮಾತ್ಮನಲ್ಲಿಯೂ ಗೃಹ್ಯತೇ=ಸ್ವೀಕರಿಸಲ್ಪಡುತ್ತದೆ.

ಭಾವಾರ್ಥ— ದೇವರು ಲೋಕವಿಲಕ್ಷಣ. ಅವನಲ್ಲಿ ಲೋಕದಲ್ಲಿ ಕಂಡಂತೆ ಯಾವುದನ್ನೂ ನಿರ್ಧರಿಸಲಾಗದು. ಲೋಕಕ್ಕೆ ವಿರುದ್ಧವಾಗಿ ಅವನಲ್ಲಿ ಅಣುತ್ವ ಮಹತ್ವ ಎರಡೂ ಇವೆ. ಆದ್ದರಿಂದ ಲೋಕದಲ್ಲಿ ಭಕ್ತಿಯಿಂದ ಹಿರಿಯರ ಪ್ರಸಾದವು ಲಭ್ಯವಾಗಿದೆ ಎಂದು ಕಂಡಿರುವುದರಿಂದ ದೇವರೂ ಭಕ್ತಿಗೆ ಒಲಿಯುತ್ತಾನೆ ಎನ್ನುವಂತಿಲ್ಲ. ಈ ಆಕ್ಷೇಪಕ್ಕೆ ಹೀಗೆ ಸಮಾಧಾನ— ವೇದವು ಭಗವಂತನಲ್ಲಿ ಯಾವುದನ್ನು ಲೋಕವಿಲಕ್ಷಣವೆಂದು ಹೇಳುವುದೋ

ಅದನ್ನು ಮಾತ್ರ ಲೋಕವಿರುದ್ಧವಾದರೂ ಭಗವಂತನಲ್ಲಿದೆ, ಎಂದು ತಿಳಿಯಬೇಕು. ಇತರ ವಿಷಯಗಳು ಲೋಕಾನುಸಾರವಾಗಿಯೇ ಇರಬೇಕು, ಲೋಕವಿರುದ್ಧವಾಗಿರಬಾರದು.

**'ದೋಷಾಭಾವಾಶ್ಚ ಯೇ ವೇದೈರುದಿತಾ ಅವಿಹಾಯ ತಾನ್ ।**
**ಅನುಕ್ತಾ ಅಪಿಚ ಗ್ರಾಹ್ಯಾ ಮಹಾತಾತ್ಪರ್ಯಶಕ್ತಿತಃ ।'**
**ಏವಂ ಬೃಹತ್ಸಂಹಿತಾವಾಕ್ ಸಿದ್ಧಾಂತೋ ಹಿ ತದೀರಿತಃ ॥ ೨೩೪ ॥**

''ವೇದೈಃ=ವೇದಗಳಿಂದ ಯೇ ದೋಷಾಭಾವಾಶ್ಚ ಉದಿತಾಃ=ಎಷ್ಟು ದೋಷಗಳು ದೇವರಲ್ಲಿ ಇಲ್ಲವೆಂದು ಹೇಳಲ್ಪಟ್ಟಿವೆಯೋ ತಾನ್ ಅವಿಹಾಯ= ಅವಷ್ಟನ್ನೂ ಬಿಡದೆ ಅನುಕ್ತಾ ಅಪಿ ಗ್ರಾಹ್ಯಾಃ=ಅಲ್ಲಿ ಹೇಳದ ದೋಷಗಳೂ ಇಲ್ಲವೆಂದು ತಿಳಿಯಬೇಕು. ಏಕೆಂದರೆ, ಮಹಾತಾತ್ಪರ್ಯಶಕ್ತಿತಃ=ಶಾಸ್ತ್ರಗಳ ಮಹಾತಾತ್ಪರ್ಯ ಸಾಮರ್ಥ್ಯದಿಂದ ಹೀಗೆ ತಿಳಿಯಬೇಕು''. (ಸಕಲದೋಷ ದೂರ ಎನ್ನುವುದೇ ಶಾಸ್ತ್ರಗಳ ತಾತ್ಪರ್ಯ. ಹೀಗೆ ನಿರ್ಣೀತವಾದುದರಿಂದ)

ಏವಂ ಬೃಹತ್ಸಂಹಿತಾವಾಕ್=ಹೀಗೆ ಬೃಹತ್ಸಂಹಿತೆಯ ವಚನವಿದೆ. ತತ್=ಆದ್ದರಿಂದ ಈರಿತಃ ಸಿದ್ಧಾಂತೋ ಹಿ=ಇದುವರೆಗೆ ಹೇಳಿರುವ ವಿಷಯವು ಪ್ರಾಮಾಣಿಕವಾದುದು.

**ತಾರತಮ್ಯೇನ ತದ್ಭಕ್ತೇಷ್ವಪಿ ಭಕ್ತಿರ್ವಿನಿಶ್ಚಯಾತ್ ।**
**ಕರ್ತವ್ಯೈಷಾऽಪಿ ತದ್ಭಕ್ತಿರ್ಲೋಕವೇದಾನುಸಾರತಃ ॥ ೨೩೫ ॥**

ದೇವರಲ್ಲಿ ಮಾತ್ರವಲ್ಲದೆ, ತದ್ಭಕ್ತೇಷ್ವಪಿ=ಭಗವದ್ಭಕ್ತರಾದ ಲಕ್ಷ್ಮೀದೇವಿ ಮೊದಲಾದವರಲ್ಲೂ ತಾರತಮ್ಯೇನ ಭಕ್ತಿಃ ವಿನಿಶ್ಚಯಾತ್ ಕರ್ತವ್ಯಾ= ತಾರತಮ್ಯಕ್ಕೆ ಅನುಗುಣವಾಗಿ ಭಕ್ತಿಯು ಸರ್ವಥಾ ಮಾಡಲ್ಪಡಬೇಕು. ಏಷಾऽಪಿ=ಭಕ್ತರಲ್ಲಿ ಮಾಡುವ ಭಕ್ತಿಯೂ ತದ್ಭಕ್ತಿಃ=ಭಗವಂತನ ಭಕ್ತಿಯೇ ಆಗಿದೆ. ವಿಷ್ಣುಭಕ್ತಿಯು ವಿಷ್ಣುಭಕ್ತರಲ್ಲಿ ಮಾಡುವ ಭಕ್ತಿಯಿಂದ ಸಾಂಗ ವಾಗುತ್ತದೆ. ಏಕೆಂದರೆ ಲೋಕ–ವೇದಾನುಸಾರತಃ=ಲೋಕಸಿದ್ಧವಾದ ನಿಯಮಕ್ಕೆ ಅನುಗುಣವಾದ ಅನುಮಾನಪ್ರಮಾಣಕ್ಕೆ ಮತ್ತು ವೇದಕ್ಕೆ ಇದು ಅನುಗುಣವಾಗಿದೆ, ಆದಕಾರಣ. ಲೋಕಾನುಸಾರಿ ಹೇಗೆಂದರೆ—

**ಯೋ ಹಿ ಭಕ್ತಃ ಪ್ರಧಾನೇ ಸ್ಯಾತ್ ತದೀಯೇಷ್ವಪಿ ಭಕ್ತಿಮಾನ್ ।**
**ದೃಶ್ಯತೇಽಸೌ ನಿಯಮತೋ ವಿಪರೀತೋ ವಿಪರ್ಯಯೇ ॥ ೨೩೬ ॥**

ಲೋಕದಲ್ಲಿ ಪ್ರಧಾನೇ=ರಾಜಾದಿಪ್ರಮುಖರಲ್ಲಿ ಯಃ ಭಕ್ತಃ=ಯಾರು ಭಕ್ತಿವುಳ್ಳವನೋ ಅಸೌ ತದೀಯೇಷ್ವಪಿ ನಿಯಮತಃ ಭಕ್ತಿಮಾನ್ ದೃಶ್ಯತೇ= ಅಂತಹವನು ರಾಜಭಕ್ತರಲ್ಲೂ ಭಕ್ತನಾಗಿರುವುದು ಕಾಣಲ್ಪಡುತ್ತದೆ. ವಿಪರೀತೇ=ರಾಜಭಕ್ತರಲ್ಲಿ ಆದರವಿಲ್ಲದಿದ್ದಲ್ಲಿ ವಿಪರ್ಯಯಃ=ರಾಜನಲ್ಲೂ ಭಕ್ತಿ ಇರುವುದಿಲ್ಲ.

**ವ್ಯಭಿಚಾರೋ ಯದಿ ಕ್ವಾಪಿ ಭಕ್ತಿಹ್ರಾಸೋಽತ್ರ ಕಲ್ಪ್ಯತೇ ।**
**ಭಕ್ತಿದೋಷೋ ಹ್ಯಸೌ ಯನ್ನ ತದ್ಭಕ್ತೇಷ್ವಪಿ ಭಕ್ತಿಮಾನ್ ॥ ೨೩೭ ॥**

ಯದಿ ಕ್ವಾಪಿ ವ್ಯಭಿಚಾರಃ=ಪ್ರಧಾನರಲ್ಲಿ ಭಕ್ತಿ ಇದ್ದರೆ ತದ್ಭಕ್ತರಲ್ಲೂ ಭಕ್ತಿ ಇರುತ್ತದೆ, ಎಂಬ ನಿಯಮಕ್ಕೆ ಎಲ್ಲಾದರೂ ವ್ಯಭಿಚಾರವಿದ್ದರೆ ಅತ್ರ ಭಕ್ತಿಹ್ರಾಸಃ ಕಲ್ಪ್ಯತೇ=ಅಂತಹ ಸಂದರ್ಭದಲ್ಲಿ ಪ್ರಧಾನದಲ್ಲೇ ಭಕ್ತಿಯು ಹ್ರಾಸವಾಗಿದೆ, ಎಂದು ಕಲ್ಪಿಸಲ್ಪಡುತ್ತದೆ. ಯತ್ ತದ್ಭಕೇಷು ಭಕ್ತಿಮಾನ್ನ ಇತಿ=ಪ್ರಧಾನ ಭಕ್ತರಲ್ಲಿ ಭಕ್ತಿ ಇಲ್ಲ ಎನ್ನುವುದು ಏನಿದೆಯೋ ಅಸೌ ಭಕ್ತಿದೋಷಃ= ಭಕ್ತಿಯಲ್ಲಿರುವ ದೋಷ.

**ಭಾವಾರ್ಥ—** ದೈತ್ಯರು ಬ್ರಹ್ಮದೇವರ ಭಕ್ತರಾಗಿರುತ್ತಾರಾದರೂ ಬ್ರಹ್ಮಭಕ್ತರಾದ ದೇವತೆಗಳನ್ನು ದ್ವೇಷಿಸುತ್ತಾರೆ. ಇಂತಹ ಸಂದರ್ಭದಲ್ಲಿ ದೈತ್ಯರ ಬ್ರಹ್ಮಭಕ್ತಿಯೇ ಪ್ರಶ್ನಾರ್ಹವಾಗುತ್ತದೆ. ಅದು ಸ್ವಾರ್ಥಸಿದ್ಧಿಗಾಗಿ ಮಾಡಿರುವ ಭಕ್ತಿಪ್ರದರ್ಶನ ಮಾತ್ರ. ಆದ್ದರಿಂದಲೇ ಬ್ರಹ್ಮದೇವರು ಅವರಿಗೆ ಸರ್ವಥಾ ಅಮರತ್ವವನ್ನು ಕೊಡುವುದಿಲ್ಲ. ಕಪಟದಿಂದಲೇ ವರವನ್ನು ಕೊಡುತ್ತಾರೆ.

**ತಾರತಮ್ಯೇನ ತೇಷ್ವದ್ಧಾ ಭಕ್ತಿರ್ದೃಷ್ಟಾನುಸಾರತಃ ।**
**ವಿಷ್ಣುಪ್ರಸಾದಾನುಸಾರಾತ್ ಕಾರ್ಯಾ ದೋಷಸ್ತದನ್ಯಥಾ ॥ ೨೩೮ ॥**

ದೃಷ್ಟಾನುಸಾರತಃ=ಲೋಕದೃಷ್ಟಿಗೆ ಅನುಗುಣವಾಗಿ ತೇಷು=ವಿಷ್ಣು

ಭಕ್ತರಾದ ರಮಾದಿಗಳಲ್ಲಿ ವಿಷ್ಣುಪ್ರಸಾದಾನುಸಾರಾತ್=ವಿಷ್ಣುವಿನ ಪ್ರಸಾದಕ್ಕೆ ಅನುಸಾರವಾಗಿ ತಾರತಮ್ಯೇನ ಭಕ್ತಿಃ ಕಾರ್ಯಾ=ತಾರತಮ್ಯದಿಂದಲೇ ಭಕ್ತಿಯು ಮಾಡಲ್ಪಡಬೇಕು. ಅನ್ಯಥಾ ದೋಷಃ=ತಾರತಮ್ಯಕ್ಕೆ ವಿರುದ್ಧವಾಗಿ ಮಾಡಿದರೆ ಅನರ್ಥವಾಗುತ್ತದೆ.

ಭಾವಾರ್ಥ— ವಿಷ್ಣುವಿನ ಪ್ರೀತಿ ಯಾರಲ್ಲಿ ಹೆಚ್ಚು ಇದೆಯೋ ಅವರಲ್ಲಿ ಹೆಚ್ಚು ಭಕ್ತಿ, ಕಡಿಮೆ ಇದ್ದವರಲ್ಲಿ ಕಡಿಮೆ ಭಕ್ತಿ, ಹೀಗೆ ತಾರತಮ್ಯ ತಿಳಿದು ಭಕ್ತಿಯನ್ನು ಮಾಡಬೇಕು.

**ಸ್ವಪ್ರೀತ್ಯನುಸೃತೌ ಪ್ರೀತಿರ್ಲೋಕೇऽಪ್ಯದ್ಧೈವ ದೃಶ್ಯತೇ ।**
**ತಾರತಮ್ಯಪರಿಜ್ಞಾನಮಪ್ಯೇತೇನೈವ ಸಾಧನಮ್ ॥ ೨೩೯ ॥**

ಲೋಕದೃಷ್ಟಾನುಸಾರೇಣ ಎನ್ನುವುದರ ವಿವರಣೆ ಹೀಗೆ— ಲೋಕೇ= ಲೋಕದಲ್ಲಿ ಸ್ವಪ್ರೀತ್ಯನುಸೃತೌ=ರಾಜಾದಿಗಳ ಪ್ರೀತಿಯನ್ನು ನಾವು ಅನುಸರಿಸಿ ದಲ್ಲಿ ಅದ್ಧಾ ಪ್ರೀತಿಃ ದೃಶ್ಯತೇ=ರಾಜನ ಪ್ರೀತಿಯೂ ನಮ್ಮಲ್ಲಿ ಚೆನ್ನಾಗಿ ಇರುವುದು ಕಂಡಿದೆ.

ಏತೇನೈವ=ತಾರತಮ್ಯಾನುಗುಣವಾಗಿ ಭಕ್ತಿಮಾಡಬೇಕು, ಎಂದಿರುವುದ ರಿಂದಲೇ ತಾರತಮ್ಯಪರಿಜ್ಞಾನಮಪಿ=ದೇವತಾತಾರತಮ್ಯದ ಜ್ಞಾನವೂ ಸಾಧನಂ=ಮೋಕ್ಷಕ್ಕೆ ಸಾಧನವು.

**ಭಕ್ತಿತಾರತಮ್ಯಕ್ಕೆ ಪ್ರಮಾಣ**

**'ಲಕ್ಷ್ಮೀವಿರಿಂಚವಾಣೀಶಗಿರಿಜೇಂದ್ರಾ ಗಿರಾಂಪ(ದ್ರಾಂಗಿರಸ್ಸುತಾಃ)ತಿಃ ।**
**ಸೂರ್ಯಾದಯಶ್ಚ ಕ್ರಮಶೋ ಭಗವತ್ಪ್ರೀತಿಗೋಚರಾಃ ॥ ೨೪೦ ॥**

**ತೇಷು ಭಕ್ತಿಃ ಕ್ರಮೇಣೈವ ಕಾರ್ಯಾ ನಿತ್ಯಂ ಮುಮುಕ್ಷುಭಿಃ ।**
**ಸರ್ವೇऽಪಿ ಗುರವಶ್ಚೈತೇ ಪುರುಷಸ್ಯ ಸದೈವ ಹಿ ॥ ೨೪೧ ॥**

**ತಸ್ಮಾತ್ ಪೂಜ್ಯಾಶ್ಚ ನಮ್ಯಾಶ್ಚ ಧ್ಯೇಯಾಶ್ಚ ಪರಿತೋ ಹರಿಮ್ ।'**
**ಇತಿ ಷಾಡ್ಗುಣ್ಯವಚನಾದಪ್ಯೇಷೋऽರ್ಥೋऽವಸೀಯತೇ ॥ ೨೪೨ ॥**

'ಹರಿಭಕ್ತಿಃ ಕ್ರಮೇಣೈವ ತದೀಯೇಷು ಹರಿಸ್ಮೃತಿಃ ।
ಹರಿಸ್ತುತಿಸ್ತತ್‌ಸ್ಮೃತಿಶ್ಚ ತತ್‌ಸ್ತುತಿರ್ಹರಿಪೂಜನಮ್ ॥ ೨೪೩॥

ತತ್ಪೂಜಾ ವಿಹಿತಾ (ತ) ತ್ಯಾಗ ಇತಿ ಮುಕ್ತೇಃ ಕ್ರಮೇಣ ಹಿ ।
ನಿಯಮಾತ್ ಸಾಧನಾನ್ಯೇವ ನಿತ್ಯಸಾಧ್ಯಾನಿ ಚಾಖಿಲೈಃ ।'
ಇತಿ ಪ್ರವೃತ್ತವಚನಂ ಸಾಧನಸ್ಯ ವಿನಿರ್ಣಯೇ ॥ ೨೪೪ ॥

ಲಕ್ಷ್ಮೀ – ವಿರಿಂಚ – ವಾಣೀಶ – ಗಿರಿಜೇಂದ್ರಾಃ=ಲಕ್ಷ್ಮೀದೇವಿ, ಬ್ರಹ್ಮ ದೇವ, ಸರಸ್ವತೀದೇವಿ, ರುದ್ರ, ಪಾರ್ವತೀದೇವೀ, ಇಂದ್ರ ಇವರು ಗಿರಾಂಪತಿಃ=ಬೃಹಸ್ಪತ್ಯಾಚಾರ್ಯರು ಸೂರ್ಯಾದಯಶ್ಚ=ಸೂರ್ಯಾದಿ ದೇವತೆಗಳು ಕ್ರಮಶಃ=ಕ್ರಮವಾಗಿ ಭಗವತ್‌ಪ್ರೀತಿಗೋಚರಾಃ=ಭಗವಂತನ ಪ್ರೀತಿಪಾತ್ರರು. ಮುಮುಕ್ಷುಭಿಃ ತೇಷು ಕ್ರಮೇಣೈವ ನಿತ್ಯಂ ಭಕ್ತಿಃ ಕಾರ್ಯಾ=ಮೋಕ್ಷಾರ್ಥಿಗಳಿಂದ ಈ ಕ್ರಮದಿಂದಲೇ ಸದಾ ಭಕ್ತಿಯು ಮಾಡಲ್ಪಡಬೇಕು. ಇವರಲ್ಲಿ ಭಗವಂತನ ಪ್ರೀತಿಯ ತಾರತಮ್ಯವಿರುವುದು ಭಕ್ತಿತಾರತಮ್ಯಕ್ಕೆ ಕಾರಣ.

ಏತೇ ಸರ್ವೇಽಪಿ ಪುರುಷಸ್ಯ ಸದೈವ ಗುರವಃ=ಇವರೆಲ್ಲರೂ ಸಾಧಕನಿಗೆ ಸದಾ ಗುರುಗಳು. ತಸ್ಮಾತ್=ಆದ್ದರಿಂದ ಹರಿಂ ಪರಿತಃ=ಶ್ರೀಹರಿಯೊಂದಿಗೆ ಪೂಜ್ಯಾಶ್ಚ, ನಮ್ಯಾಶ್ಚ, ಧ್ಯೇಯಾಶ್ಚ=ಪೂಜಾರ್ಹರು, ನಮಸ್ಕಾರಯೋಗ್ಯರು ಹಾಗೂ ಧ್ಯಾನಾರ್ಹರು.

ಇತಿ ಷಾಡ್ಗುಣ್ಯವಚನಾದಪಿ=ಈ ಷಾಡ್ಗುಣ್ಯವಚನಾದಪಿ=ಈ ಷಾಡ್ಗುಣ್ಯಗ್ರಂಥದ ವಾಕ್ಯದಿಂದಲೂ, ಏಷಃ ಅರ್ಥಃ ಅವಸೀಯತೇ= ಭಕ್ತಿತಾರತಮ್ಯವು ಮೋಕ್ಷಕ್ಕೆ ಕಾರಣ, ಎಂದು ತಿಳಿಯುತ್ತದೆ.

''ಹರಿಭಕ್ತಿಃ=ವಿಷ್ಣುವಿನಲ್ಲಿ ಪರಮಭಕ್ತಿ, ತದೀಯೇಷು=ಹರಿಭಕ್ತರಲ್ಲಿ ಕ್ರಮೇಣೈವ (ಭಕ್ತಿಃ)=ತಾರತಮ್ಯಾನುಸಾರ ಭಕ್ತಿ, ಹರಿಸ್ಮೃತಿಃ=ಭಗವಂತನ ಸ್ಮರಣೆ, ಹರಿಸ್ತುತಿಃ=ಭಗವಂತನ ಸ್ತೋತ್ರ, ತತ್‌ಸ್ಮೃತಿಶ್ಚ=ಭಗವದ್ಭಕ್ತರ ಸ್ಮರಣೆ, ತತ್‌ಸ್ತುತಿಃ=ಭಕ್ತರ ಸ್ತೋತ್ರ, ಹರಿಪೂಜನಂ=ಶ್ರೀಹರಿಯಪೂಜೆ, ತತ್ಪೂಜಾ= ಭಕ್ತರ ಆರಾಧನೆ, ವಿಹಿತಾತ್ಯಾಗಃ=ವಿಹಿತಕರ್ಮಗಳನ್ನು ಬಿಡದಿರುವುದು

ಇತಿ=ಇವು ಮುಕ್ತೇಃ ಕ್ರಮೇಣ ಹಿ ನಿಯಮಾತ್ ಸಾಧನಾನಿ=ಮೋಕ್ಷಕ್ಕೆ ಕ್ರಮವಾಗಿ ಅಂದರೆ ಶ್ರೀಹರಿಯಲ್ಲಿ ಭಕ್ತ್ಯಾದಿಗಳು ಮುಖ್ಯಸಾಧನಗಳು ಭಕ್ತರಲ್ಲಿ ಮಾಡುವ ಭಕ್ತ್ಯಾದಿಗಳು ಅಮುಖ್ಯಸಾಧನಗಳು. ಇವು ನಿಯಮೇನ ಸಾಧನಗಳು, ಇವುಗಳಿಲ್ಲದೇ ಮೋಕ್ಷವಿಲ್ಲ. ಆದ್ದರಿಂದ ಅಖಿಲೈಃ=ಎಲ್ಲ ಸಾಧಕರಿಂದಲೂ ನಿತ್ಯಸಾಧ್ಯಾನಿ=ನಿರಂತರವಾಗಿ ಮಾಡಲ್ಪಡಬೇಕಾದವುಗಳು.

ಇತಿ=ಹೀಗೆ ಸಾಧನಸ್ಯ ವಿನಿರ್ಣಯೇ=ಸಾಧನವಿನಿರ್ಣಯ ಎಂಬ ಅವಾಂತರಪ್ರಕರಣದಲ್ಲಿ ಪ್ರವೃತ್ತವಚನಂ=ಪ್ರವೃತ್ತ ಎಂಬ ಗ್ರಂಥದ ಮಾತು.

**ಪ್ರವೃತ್ತೇ ಪಂಚರಾತ್ರೇ ಹಿ ಸಾಧನಸ್ಯಾತಿನಿರ್ಣ(ಶ್ಚ)ಯಃ ॥**
**ಹರಿದ್ವೇಷೋ ನ ಶುಭದಃ ಸದ್ದ್ವೇಷತ್ವಾದ್ ಯಥಾ ಗುರೋಃ ॥ ೨೪೫ ॥**

**ಕ್ರಮಾದ್ ಭಕ್ತಿರ್ಹರಿಪ್ರೀತಿಕಾರಣಂ ತತ್ಪ್ರಿಯೌಪಗಾ ।**
**ಭಕ್ತಿರ್ಯತೋ ಯಥಾ ಸ್ವಸ್ಮಿನ್ನಿತ್ಯಾದ್ಯಾ ಯುಕ್ತಿರತ್ರ ಚ ॥ ೨೪೬ ॥**

ದ್ವೇಷವು ಮೋಕ್ಷಕಾರಣವಲ್ಲ ಎನ್ನಲು ಅನುಮಾನ ಪ್ರಮಾಣ— (1) ಹರಿದ್ವೇಷಃ ನ ಶುಭದಃ=ಹರಿದ್ವೇಷವು ಶುಭಪ್ರದವಲ್ಲ(ಪ್ರತಿಜ್ಞಾ), ಸದ್ವೇಷತ್ವಾತ್=ಸಜ್ಜನದ್ವೇಷವಾದ ಕಾರಣ(ಹೇತು) ಯಥಾ ಗುರೋಃ=ಹೇಗೆ ಗುರುದ್ವೇಷವೋ ಹಾಗೆ.(ದೃಷ್ಟಾಂತ)

(2) ಕ್ರಮಾತ್ ಭಕ್ತಿಃ ಹರಿಪ್ರೀತಿಕಾರಣಂ=ತಾರತಮ್ಯಾನುಸಾರವಾದ ಭಕ್ತಿಯೇ ಶ್ರೀಹರಿಯ ಪ್ರೀತಿಗೆ ಕಾರಣವಾದುದು (ಪ್ರತಿಜ್ಞಾ) ಯತಃ ಹರಿ ಪ್ರಿಯೌಪಗಾ ಭಕ್ತಿಃ=ಹರಿಯ ಪ್ರೀತಿಗೆ ಅನುಗುಣವಾದ ಭಕ್ತಿಯಾಗಿರುವುದ ರಿಂದ (ಹೇತು. ಹರಿಪ್ರಿಯಾನ್ ಉಪಗಚ್ಛತಿ=ವಿಷಯೀಕರೋತಿ ಇತಿ ತತ್ಪ್ರಿಯೌಪಗಾ) ಯಥಾ ಸ್ವಸ್ಮಿನ್ ಭಕ್ತಿಃ=ರಾಜಪ್ರಿಯನಾದ ದೇವದತ್ತನಲ್ಲಿ ಮಾಡುವ ಭಕ್ತಿಯಂತೆ (ದೃಷ್ಟಾಂತ). ರಾಜನ ಪ್ರೀತಿಪಾತ್ರನಾದ ದೇವದತ್ತ ನನ್ನು ಗೌರವಿಸಿದರೆ ರಾಜನಿಗೆ ಪ್ರೀತಿಯಾಗುತ್ತದೆ. ಅದರಂತೆ, ದೇವರ ಪ್ರೀತಿಗೆ ಪಾತ್ರರಾದ ರಮಾ–ಬ್ರಹ್ಮಾದಿಗಳಲ್ಲಿ ಭಕ್ತಿಮಾಡಿದರೆ ದೇವರಿಗೆ ಪ್ರೀತಿಯಾಗು ತ್ತದೆ.

ಅತ್ರ=ಹಿಂದೆ ಹೇಳಿದ ವಿಷಯದಲ್ಲಿ ಇತ್ಯಾದ್ಯಾ=ಇದೇ ಮೊದಲಾದ ಯುಕ್ತಿಃ=ಯುಕ್ತಿಯು.

**ಪ್ರಾಧಾನ್ಯತಾರತಮ್ಯಾನುಸಾರಿಣೀ ಭಕ್ತಿರುತ್ತಮಾ ।**
**ಪ್ರೀತಿದೈವ ಹರೇರ್ಯಸ್ಮಾದ್ ಭಕ್ತಿಃ ಸಾ ಸ್ವೋಪಗಾ ಯಥಾ ॥ ೨೪೭ ॥**

ಪ್ರಾಧಾನ್ಯತಾರತಮ್ಯಾನುಸಾರಿಣೀ ಭಕ್ತಿಃ=ಉತ್ತಮತ್ವದ ತಾರತಮ್ಯಾನು ಸಾರಿಯಾದ ಭಕ್ತಿಯೇ ಹರೇಃ ಪ್ರೀತಿದೈವ=ಶ್ರೀಹರಿಗೆ ಅತಿಪ್ರಿಯವೇ ಆಗಿದೆ. ಯಸ್ಮಾತ್= ಏಕೆಂದರೆ, ಸಾ ಉತ್ತಮಾ=ಅದು ಉತ್ತಮಭಕ್ತಿಯಾಗಿದೆ. ಅಂದರೆ ಅದೇ ಶಾಸ್ತ್ರವಿಹಿತಭಕ್ತಿಯಾಗಿದೆ. ಸ್ವೋಪಗಾ ಯಥಾ=ವಿಷ್ಣುವಿಷಯಕವಾದ ಭಕ್ತಿಯಂತೆ. ಇತಿವಾ=ಹೀಗೂ ಅನುಮಾನ ಮಾಡಬಹುದು. ('ಇತಿವಾ' ಎನ್ನುವುದು ಮುಂದಿನ ಅನುವ್ಯಾಖ್ಯಾನದಲ್ಲಿದೆ.)

**ಇಲ್ಲಿಗೆ ಉಭಯಲಿಂಗಾಧಿಕರಣ ಆಧಿಕಾರಿಕಾಧಿಕರಣ ಮುಗಿಯಿತು.**

# ಫಲಶ್ರುತ್ಯಧಿಕರಣ

**'ಓಂ ಸ್ವಾಮಿನಃ ಫಲಶ್ರುತೇರಿತ್ಯಾತ್ರೇಯಃ ಓಂ'**

**(ಇತಿ ವಾ) ಜ್ಞಾನಕರ್ಮಾದಿ ಫಲಂ ಚೈಷು ಕ್ರಮೋಪಗಮ್ ।**
**ಸ್ವಾತಂತ್ರ್ಯತಾರತಮ್ಯೇನ ಫಲಂ ಹಿ ಫಲಿನಾಂ ಭವೇತ್ ॥ ೨೪೮ ॥**

(ಇಲ್ಲಿರುವ 'ಇತಿ ವಾ' ಎಂಬ ಶಬ್ದಗಳಿಗೆ ಪೂರ್ವಾಧಿಕರಣಾರ್ಥ ದೊಂದಿಗೆ ಅನ್ವಯ.) ಜ್ಞಾನ-ಕರ್ಮಾದಿಫಲಂ (ದೇವಾನಾಂ ಭವತಿ)=ಜ್ಞಾನಿ ಗಳು, ಅಪರೋಕ್ಷಜ್ಞಾನ ಮತ್ತು ಜ್ಞಾನೋತ್ತರದಲ್ಲಿ ಅನುಷ್ಠಾನ ಮಾಡಿದ ಕರ್ಮದ ಫಲ ತತ್ತ್ವಾಭಿಮಾನಿದೇವತೆಗಳಿಗೆ ಸೇರುತ್ತದೆ. ಏಷು ಚ ಕ್ರಮೋಪಗಂ=ಆ ಫಲವೂ ದೇವತೆಗಳಲ್ಲಿ ಇರುವ ತಾರತಮ್ಯಕ್ಕೆ ಅನುಗುಣ ವಾಗಿ ಸಲ್ಲುತ್ತದೆ.

ಭಾವಾರ್ಥ — ಇಲ್ಲಿ ಎರಡು ಅಂಶಗಳನ್ನು ಹೇಳಲಾಗಿದೆ—

(1) ಜ್ಞಾನಿಗಳು ಮಾಡಿದ ಕರ್ಮ ಮತ್ತು ಜ್ಞಾನದ ಫಲವು ದೇವತೆಗಳಿಗೆ ಸೇರುತ್ತದೆ.

(2) ಆ ಫಲವು ದೇವತೆಗಳ ತಾರತಮ್ಯಕ್ಕೆ ಅನುಗುಣವಾಗಿ ಹೆಚ್ಚುಕಡಿಮೆಯಾಗಿ ದೇವತೆಗಳಿಗೆ ಸಲ್ಲುತ್ತದೆ.

ಈ ಅಂಶಗಳನ್ನು ಉತ್ತರಾರ್ಧದಲ್ಲಿ ಸಮರ್ಥಿಸಲಾಗಿದೆ.

ಫಲಿನಾಂ=ಫಲಭಾಗಿಗಳಾದ ದೇವತೆಗಳ ಸ್ವಾತಂತ್ರ್ಯತಾರತಮ್ಯೇನ= ಸ್ವಾಮಿತ್ವದ ತಾರತಮ್ಯದಿಂದ. (ಅದಕ್ಕನುಗುಣವಾಗಿಯೇ ಫಲವು ಬರುತ್ತದೆ. ಇದು ಫಲತಾರತಮ್ಯಕ್ಕೆ ಕಾರಣ.)

ಜ್ಞಾನಿಗಳ ಜ್ಞಾನ–ಕರ್ಮಗಳ ಫಲ ದೇವತೆಗಳಿಗೆ ಏಕೆ ಸೇರಬೇಕು? ಅದಕ್ಕೆ ಉತ್ತರ– ಫಲಂ ಹಿ ಫಲಿನಾಂ ಭವೇತ್=ಫಲವು ಜ್ಞಾನಕರ್ಮಗಳ ಸ್ವಾತಂತ್ರ್ಯ ಇರುವವರಿಗೇ ಸೇರಬೇಕು ತಾನೆ! ಜ್ಞಾನಿಗಳಿಂದ ಕರ್ಮಗಳನ್ನು ಮಾಡಿಸುವವರು ತತ್ತ್ವಾಭಿಮಾನಿದೇವತೆಗಳು. ಆದ್ದರಿಂದ, ಅದರ ಫಲ ಅವರಿಗೂ ಬರಬೇಕು. ಇದು ಸೂತ್ರದ 'ಸ್ವಾಮಿನಃ' ಎಂಬ ಪದದ ಅರ್ಥ.

**ಅಶುಭಂ ತ್ವಶುಭೇಽಪ್ಯೇಷಾಂ ಸ್ವಾತಂತ್ರ್ಯಾತ್ ಪ್ರೀತಿತೋ ಹರೇಃ ।**
**ಆಜ್ಞಯಾ ಚಾನ್ಯಗಂ ನೈವ ಭೋಗಾಯ ಭವತಿ ಕ್ವಚಿತ್ ॥ ೨೪೯ ॥**

ಹರೇಃ ಪ್ರೀತಿತಃ=ಭಗವಂತನ ಪ್ರಸಾದದಿಂದ ಅಶುಭೇಽಪಿ ಏಷಾಂ ಸ್ವಾತಂತ್ರ್ಯಾತ್=ಅಶುಭಕರ್ಮಗಳಲ್ಲೂ ಇವರಿಗೆ (ದೇವತೆಗಳಿಗೆ) ಸ್ವಾಮಿತ್ವವು ಇರುವುದರಿಂದ ಅಶುಭಕರ್ಮಫಲಗಳನ್ನು ತಮಗೆ ಬರದಂತೆ ತಡೆಯುವ ಸಾಮರ್ಥ್ಯವು ದೇವತೆಗಳಿಗೆ ಇರುವುದರಿಂದ ಹಾಗೂ ಹರೇಃ ಆಜ್ಞಯಾ ಚ= ಅಜ್ಞಾನಿಗಳು ಮಾಡಿದ ಪಾಪಕರ್ಮಗಳ ಫಲವು ಕರ್ಮಮಾಡಿಸಿದ ದೇವತೆಗಳಿಗೆ ಬರದಿರಲಿ, ಎಂಬ ಭಗವದಾಜ್ಞೆಯಿಂದಲೂ ಅಶುಭಂ ಕ್ವಚಿತ್ ಏಷಾಂ ನೈವ ಭೋಗಾಯ ಭವತಿ=ಪಾಪಫಲವು ದೇವತೆಗಳ ಅನುಭವಕ್ಕೆ ಬರುವುದಿಲ್ಲ.

ಭಾವಾರ್ಥ— ಅನ್ಯರ ಶುಭಕರ್ಮದಲ್ಲಿ ಸ್ವಾತಂತ್ರ್ಯ ಇರುವುದರಿಂದ ದೇವತೆಗಳಿಗೆ ಪುಣ್ಯವು ಲಭಿಸುವುದಾದಲ್ಲಿ ಅಶುಭಕರ್ಮದ ಸ್ವಾತಂತ್ರ್ಯವೂ

ಅವರಿಗೆ ಇರುವುದರಿಂದ ಪಾಪಲೇಪವೂ ಆಗಬೇಕಾದೀತು. ಈ ಆಕ್ಷೇಪಕ್ಕೆ ಸಮಾಧಾನ ಹೀಗೆ— ದೇವತೆಗಳು ಭಗವತ್ಪ್ರಸಾದಲಭ್ಯವಾದ ಸಾಮರ್ಥ್ಯದಿಂದ ಪಾಪವನ್ನು ಬರದಂತೆ ತಡೆಯುತ್ತಾರೆ. ಭಗವಂತನ ಇಚ್ಛೆಯೂ 'ಅಶುಭಕರ್ಮಗಳನ್ನು ಮಾಡಿಸಿದರೂ ದೇವತೆಗಳಿಗೆ ಪಾಪವು ಬರದಿರಲಿ' ಎಂದು ಇದೆ. ಈ ಎರಡು ಕಾರಣಗಳಿಂದಾಗಿ ದೇವತೆಗಳಿಗೆ ಪಾಪದ ಲೇಪ ಇಲ್ಲ.

**'ಪುಣ್ಯಮೇವಾಮುಮಾಪ್ನೋತಿ ನ ದೇವಾನ್ ಪಾಪಮಾಪ್ನುಯಾತ್ ।'**
**ಇತ್ಯಾದಿಶ್ರುತಯೋ ಮಾನಮುಕ್ತೇऽರ್ಥೇ ಯುಕ್ತಯೋऽಪರಾಃ**
**॥ ೨೫೦ ॥**

ಈ ಅನುವ್ಯಾಖ್ಯಾನದ ಪೂರ್ವಾರ್ಧದಿಂದ ಸೂಚಿತವಾದ ಶ್ರುತಿ ಹೀಗಿದೆ—

''ಪುಣ್ಯಮೇವಾಮುಂ ಗಚ್ಛತಿ ನ ಹ ವೈ ದೇವಾನ್ ಪಾಪಂ ಗಚ್ಛತಿ॥''
(ಬೃ.ಉ.)

ಅದರ ಅರ್ಥ— ''ಅಮುಂ=ದೇವತೆಗಳನ್ನು ಕುರಿತು, ಪುಣ್ಯಮೇವ=ಪುಣ್ಯವು ಮಾತ್ರ ಗಚ್ಛತಿ=ಹೋಗುತ್ತದೆ. ದೇವಾನ್=ದೇವತೆಗಳನ್ನು ಕುರಿತು ಪಾಪಂ ನವೈ ಗಚ್ಛತಿ=ಹೋಗುವುದೇ ಇಲ್ಲ''.

ಇತ್ಯಾದಿಶ್ರುತಯಃ=ಈ ಮೊದಲಾದ ಶ್ರುತಿಗಳು ಉಕ್ತೇऽರ್ಥೇ=ಹಿಂದೆ ಹೇಳಿದ ವಿಷಯದಲ್ಲಿ ಮಾನಮ್=ಪ್ರಮಾಣ. ಇದಲ್ಲದೆ, ಅಪರಾಃ=ಹಿಂದೆ ಹೇಳಿದ್ದಕ್ಕಿಂತಲೂ ಬೇರೆಯಾದ ಯುಕ್ತಯಃ=ಯುಕ್ತಿಗಳೂ ಪ್ರಮಾಣಗಳು. (ಆ ಯುಕ್ತಿಗಳು ಮುಂದೆ ಇವೆ.)

**ಉಪಾಸನಾಧರ್ಮಫಲಂ ಯತೋ ದೇಹಾಂತರೇ ಸ್ಥಿತಿಃ ।**
**ವಾಸುದೇವಾಜ್ಞಯಾ ಚೈವ ಪೂರ್ವಕರ್ಮಾನುಸಾರತಃ ॥ ೨೫೧ ॥**

**ಪ್ರೇರಯಂತಿ ಹಿ ತೇ ಜೀವಾನ್ ಪುಣ್ಯಪಾಪೇಷು ನಿತ್ಯಶಃ ।**
**ಅರಾಗದ್ವೇಷತಶ್ಚೈವ ಕಥಂ ದೋಷಾನವಾಪ್ನುಯುಃ ॥ ೨೫೨ ॥**

**ಹರ್ಯಾಜ್ಞಾಕರಣಾದೇವ ಪುಣ್ಯಮೇಭಿರವಾಪ್ಯತೇ ।**
**ಹರಿಪೂಜೇತಿ ಚೋದ್ದೇಶಾತ್ ಕಥಂ ನ ಶುಭಮಾಪ್ನುಯುಃ ॥ ೨೫೩ ॥**

(1) ಯತಃ=ಯಾವ ಕಾರಣದಿಂದ ದೇಹಾಂತರೇ ಸ್ಥಿತಿಃ=ಮನುಷ್ಯಾದಿ ದೇಹಗಳಲ್ಲಿ ಸ್ಥಿತಿಯು ದೇವತೆಗಳಿಗೆ, ಉಪಾಸನಾಧರ್ಮಫಲಂ=ಅವರು ಮಾಡಿರುವ ಭಗವದುಪಾಸನೆಯ ಪುಣ್ಯದ ಫಲ. ಆದ್ದರಿಂದ ಜೀವರನ್ನು ಅವರ ಕರ್ಮನಿಮಿತ್ತವಾಗಿ ದುಷ್ಕರ್ಮದಲ್ಲಿ ಪ್ರೇರಣೆ ಮಾಡಿದರೂ ಅವರಿಗೆ ಪಾಪಬರುವುದಿಲ್ಲ, ತನ್ನಿಮಿತ್ತವಾದ ದುಃಖವೂ ಬರುವುದಿಲ್ಲ. ಏಕೆಂದರೆ, ದೇವತೆಗಳು ಮಾಡುವ ಪ್ರೇರಣೆ ಪುಣ್ಯದ ಫಲ. ಪುಣ್ಯದಿಂದ ದುಃಖ ವಾಗುವುದು ಹೇಗೆ? ಸಾತ್ವಿಕಕರ್ಮವು ಎಂದೂ ದುಃಖದಲ್ಲಿ ಪರ್ಯವಸಾನ ವಾಗುವುದಿಲ್ಲ.

(2) ತೇ=ಆ ದೇವತೆಗಳು ವಾಸುದೇವಾಜ್ಞಯಾ=ಭಗವಂತನ ಆದೇಶದಿಂದ ಪೂರ್ವಕರ್ಮಾನುಸಾರತಃ=(ಜೀವಿಗಳ) ಪೂರ್ವಕರ್ಮಕ್ಕೆ ಅನುಸಾರವಾಗಿ ಅರಾಗದ್ವೇಷತಶ್ಚೈವ=ರಾಗ–ದ್ವೇಷಗಳಿಲ್ಲದೆಯೇ ಜೀವಾನ್=ಜೀವರನ್ನು ಪುಣ್ಯ–ಪಾಪೇಷು=ಸತ್‌ಕರ್ಮ–ದುಷ್ಕರ್ಮಗಳಲ್ಲಿ ನಿತ್ಯಶಃ=ಸರ್ವದಾ ಪ್ರೇರಯಂತಿ ಹಿ=ಪ್ರೇರಿಸುತ್ತಾರಷ್ಟೆ. ಹೀಗಿರುವಾಗ ಕಥಂ ದೋಷಾನ್ ಅವಾಪ್ನುಯುಃ=ಹೇಗೆ ತಾನೇ ದೋಷಭಾಜನರಾದಾರು? ರಾಜನ ಆಜ್ಞೆಯಂತೆ ಕೋತ್ವಾಲನು ಅಪರಾಧಿಗಳನ್ನು ಶಿಕ್ಷಿಸಿದರೆ ಕೋತ್ವಾಲನಿಗೆ ಪಾಪ ಬರುವುದಿಲ್ಲ. ಅದರಂತೆ, ದೇವತೆಗಳಿಗೂ ಪಾಪವಿಲ್ಲ. ಪುಣ್ಯವೇ ಬರುತ್ತದೆ. ಜೀವರು ಭಗವಂತನ ಆದೇಶರೂಪವಾದ ವೇದದಲ್ಲಿ ಹೇಳಿರುವ ಸತ್ಕರ್ಮಗಳನ್ನು ಮಾಡಿದರೆ ಪುಣ್ಯ ಬರುವಂತೆ ದೇವತೆಗಳಿಗೂ ಭಗವದಾಜ್ಞಾ ಪಾಲನೆಯಿಂದ ಪುಣ್ಯವೇ ಬರುತ್ತದೆ.

(3) ಹರಿಪೂಜೇತಿ ಚೋದ್ದೇಶಾತ್=ಈ ಪ್ರೇರಣೆ ಭಗವಂತನ ಆರಾಧನೆ ಎಂಬ ಉದ್ದೇಶವಿರುವುದರಿಂದ ಕಥಂ ನ ಶುಭಮಾಪ್ನುಯುಃ=ಹೇಗೆ ತಾನೆ ಪುಣ್ಯಭಾಜನರಾಗಲಿಕ್ಕಿಲ್ಲ?

ದೇವತೆಗಳು ನಮ್ಮ ಅಂಗೋಪಾಂಗಗಳಲ್ಲಿದ್ದು ನಮ್ಮ ಪೂರ್ವಕರ್ಮಾನು

ಸಾರ ನಮ್ಮಿಂದ ಶುಭಾಶುಭಕರ್ಮಗಳನ್ನು ಮಾಡಿಸಿ ತಾವು ಮಾಡಿದ ಪ್ರೇರಣಾದಿಗಳನ್ನು ದೇವರಿಗೆ ಅರ್ಪಿಸಿ ಅದು ತಾವು ಮಾಡುವ ಭಗವದಾರಾಧನೆ ಎಂದು ತಿಳಿಯುತ್ತಾರೆ. ಇದು ಭಗವತ್ಪ್ರೀತಿಕರವಾದ ಕೆಲಸ. ಇದರಿಂದ ಅವರಿಗೆ ಭಗವಂತನ ಅನುಗ್ರಹವೇ ಆಗುತ್ತದೆ. ಪಾಪ ಬರಲು ಸಾಧ್ಯವೇ ಇಲ್ಲ.

**ಅತೋ ಯಥಾಕ್ರಮಂ ಧರ್ಮಜ್ಞಾನಯೋಃ ಫಲಮಂಜಸಾ ।**
**ಸರ್ವಪ್ರಾಣಿಗತಂ ದೇವಾಃ ಪ್ರಾಪ್ನುವಂತ್ಯಾವಿರಿಂಚತಃ ॥ ೨೫೪ ॥**

ಅತಃ=ಆದ್ದರಿಂದ ದೇವಾಃ=ದೇವತೆಗಳು ಆವಿರಿಂಚತಃ=ಬ್ರಹ್ಮ ದೇವರಿಂದಾರಂಭಿಸಿ ಯಥಾಕ್ರಮಂ=ತಾರತಮ್ಯಕ್ಕೆ ಅನುಗುಣವಾಗಿ ಸರ್ವಪ್ರಾಣಿಗತಂ=ಎಲ್ಲ ಜೀವಿಗಳಲ್ಲಿರುವ ಧರ್ಮ–ಜ್ಞಾನಯೋಃ ಏವ= ಸತ್‌ಕರ್ಮ ಮತ್ತು ಜ್ಞಾನಗಳ ಮಾತ್ರ ಫಲಂ=ಫಲವನ್ನು (ಪುಣ್ಯವನ್ನು) ಅಂಜಸಾ=ಚೆನ್ನಾಗಿ ಪ್ರಾಪ್ನುವಂತಿ=ಪಡೆಯುತ್ತಾರೆ.

**ದೇವಾ ಏವ ಹಿ ದೇವಾನಾಂ ವಿಶಿಷ್ಟಾ ವಿನಿಯಾಮಕಾಃ ।**
**ಬ್ರಹ್ಮಾ ತ್ವಖಿಲದೇವಾನಾಂ ನರಾಣಾಂ ಚ ನಿಯಾಮಕಃ ।**
**ಅತಃ ಸರ್ವಗುಣಾನೇಷಃ ಪ್ರಾಪ್ನೋತ್ಯಧಿಕ(ಖಿಲ) ಮನ್ಯತಃ ॥ ೨೫೫ ॥**

ವಿಶಿಷ್ಟಾ ದೇವಾ ಏವ ಹಿ=ಉಚ್ಚದೇವತೆಗಳು ದೇವಾನಾಂ=ಸ್ವಾವರ ದೇವತೆಗಳಿಗೆ ವಿನಿಯಾಮಕಾಃ=ನಿಯಾಮಕರು, ಬ್ರಹ್ಮಾ ತು=ಚತುರ್ಮುಖ ಬ್ರಹ್ಮದೇವನಾದರೋ ಅಖಿಲದೇವಾನಾಂ=ಎಲ್ಲಾ ದೇವತೆಗಳಿಗೂ ನರಾಣಾಂ ಚ=ಮನುಷ್ಯರಿಗೂ ನಿಯಾಮಕಃ=ನಿಯಾಮಕನು ಅತಃ=ಆದ್ದರಿಂದ ಅನ್ಯತಃ ಅಧಿಕಂ=ಇತರ ದೇವತೆಗಳಿಗಿಂತಲೂ ಹೆಚ್ಚಾಗಿ ಸರ್ವಗುಣಾನೇವ=ಎಲ್ಲರ ಗುಣಗಳನ್ನೂ ಪ್ರಾಪ್ನೋತಿ=ಹೊಂದುತ್ತಾನೆ.

**ಭಾವಾರ್ಥ**— ದೇವತೆಗಳು ಮನುಷ್ಯರಿಗೆ ಮಾತ್ರ ನಿಯಾಮಕರಲ್ಲ. ಅವರದೇವತೆಗಳಿಗೆ ಉಚ್ಚದೇವತೆಗಳು ನಿಯಾಮಕರು. ಬ್ರಹ್ಮದೇವರೂ ಎಲ್ಲ ದೇವತೆಗಳಿಗೂ ಮನುಷ್ಯರಿಗೂ ನಿಯಾಮಕರು. ಆದ್ದರಿಂದ ಅವರಿಗೆ ಎಲ್ಲರ ಪುಣ್ಯವೂ ಸೇರುತ್ತದೆ.

**ದ್ರವ್ಯಸ್ವಾತಂತ್ರ್ಯವಿಜ್ಞಾನಪ್ರಯತ್ನೈರಧಿಕಂ (ಖಿಲಂ) ಫಲಮ್ ।**
**ದೇವಾನಾಮನ್ಯಗಂ'ಚಾಪಿ ತೇಷು ಹಿ (ಯತ್) ಬ್ರಹ್ಮಣೋಽಧಿಕಮ್**
**(ಹಿ ತತ್) ॥ ೨೫೬ ॥**

**ಬೃಹತ್ತಂತ್ರೋದಿತಂ ವಾಕ್ಯಂ ಹರಿಣಾ ಫಲನಿರ್ಣಯೇ ।**

''ದ್ರವ್ಯಸ್ವಾತಂತ್ರ್ಯ-ವಿಜ್ಞಾನ-ಪ್ರಯತ್ನೈಃ=ಇಂದ್ರಿಯಗಳ ಸ್ವಾತಂತ್ರ್ಯ-ಕರ್ಮಮಾಡಲು ಬೇಕಾದ ಜ್ಞಾನ ಮತ್ತು ಪ್ರಯತ್ನ ಇವುಗಳ ಆಧಿಕ್ಯಕ್ಕೆ ಅನುಸಾರವಾಗಿ ದೇವಾನಾಂ=ದೇವತೆಗಳಿಗೆ ಅನ್ಯಗಂ ಚಾಪಿ=ಇತರಲ್ಲಿಯೂ ಇರುವ ಅಧಿಕಂ ಫಲಂ=ಹೆಚ್ಚು ಪುಣ್ಯಫಲವು ಬರುತ್ತದೆ. ತೇಷುಹಿ= ಅವರಲ್ಲೂ ಬ್ರಹ್ಮಣಃ ಅಧಿಕಂ=ಬ್ರಹ್ಮದೇವರಿಗೆ ಅತಿ ಹೆಚ್ಚು''.

ಇದು ಹರಿಣಾ=ಭಗವಂತನಿಂದ ಫಲನಿರ್ಣಯೇ='ಫಲನಿರ್ಣಯ' ಪ್ರಕರಣದಲ್ಲಿ ಬೃಹತ್ತಂತ್ರೋದಿತಂ ವಾಕ್ಯಂ='ಬೃಹತ್ತಂತ್ರ' ಎಂಬ ಗ್ರಂಥದಲ್ಲಿ ಹೇಳಿರುವ ಮಾತು.

ಭಾವಾರ್ಥ— ನಮ್ಮ ಜ್ಞಾನ-ಕರ್ಮೇಂದ್ರಿಯಗಳು ಸತ್ಕರ್ಮ ಮಾಡಲು ಕಾರಣಗಳು. ಜೊತೆಯಲ್ಲಿ ಕರ್ಮದ ಬಗ್ಗೆ ತಿಳಿವಳಿಕೆ, ಪ್ರಯತ್ನ ಗಳೂ ಇರಬೇಕು. ಇವೆಲ್ಲವುಗಳ ಸಂಪೂರ್ಣ ಹಿಡಿತ ನಮ್ಮಲ್ಲಿಲ್ಲ. ನಮ್ಮಿಂದ ಮಾಡಿಸುವ ತತ್ತ್ವಾಭಿಮಾನಿ ದೇವತೆಗಳಿಗೆ ಇದೆ. ಇವುಗಳ ಸ್ವಾಯತ್ತತೆ ಯಾರ್ಯಾರಿಗೆ ಹೆಚ್ಚು ಇರುವುದೋ ಆ ದೇವತೆಗಳಿಗೆ ಕರ್ಮಫಲದ ಪಾಲು ಹೆಚ್ಚು. ಅತಿ ಹೆಚ್ಚಿನ ಫಲ ಜೀವಗಣನಿಯಾಮಕರಾದ ಬ್ರಹ್ಮದೇವರಿಗೆ. ಈ ವಿಷಯ ಬೃಹತ್ತಂತ್ರ ಗ್ರಂಥದಲ್ಲಿದೆ.

**ಲೋಕೇಽಪ್ಯೇತಾದೃಶಗುಣೈಃ ಫಲಾಧಿಕ್ಯಂ ಹಿ ದೃಶ್ಯತೇ ॥ ೨೫೭ ॥**

ಲೋಕೇಽಪಿ=ಲೋಕದಲ್ಲೂ ಏತಾದೃಶಗುಣೈಃ=ಸ್ವಾತಂತ್ರ್ಯ-ಜ್ಞಾನ-ಪ್ರಯತ್ನ ಮೊದಲಾದ ಗುಣಗಳಿಂದ ಫಲಾಧಿಕ್ಯಂ ದೃಶ್ಯತೇ ಹಿ=ಹೆಚ್ಚು ಫಲ ಸಿಗುವುದು ಕಂಡಿದೆ.

ಭಾವಾರ್ಥ— ಲೋಕದಲ್ಲೂ ಯಾರಿಗೆ ಭೂಮಿಯ ಒಡೆತನ ಹೆಚ್ಚಿದೆಯೋ ಅವರಿಗೆ ಕೃಷಿಯ ಪಾಲು ಹೆಚ್ಚು. ವ್ಯಾಪಾರದಲ್ಲಿ ಹೆಚ್ಚು

ಹಣವನ್ನು ವಿನಿಯೋಗಿಸಿದವರಿಗೆ ಲಾಭದ ಪಾಲು ಹೆಚ್ಚು. ಕೃಷಿಯ ಬಗ್ಗೆ ಹೆಚ್ಚು ತಿಳುವಳಿಕೆ, ಪ್ರಯತ್ನ ಇರುವವರಿಗೆ ಲಾಭಾಂಶ ಹೆಚ್ಚು. ಅದರಂತೆ ಸತ್ಕರ್ಮಗಳ ಫಲವೋ ದೇವತೆಗಳಿಗೆ ಹೆಚ್ಚು.

**ಏವಂಚ ಕಲಿಪೂರ್ವಾಣಾಮಸುರಾಣಾಂ ಮಹತ್ ಫಲಂ ।**
**ಅಶುಭೇಷು ಸದೈವ ಸ್ಯಾನ್ಮಿಥ್ಯಾಜ್ಞಾನಾದಿಕೇಷು ಹಿ ॥ ೨೫೮ ॥**

ಏವಂ=ಇದೇರೀತಿ ಅಶುಭೇಷು=ಕೆಟ್ಟಕೆಲಸಗಳ ನಿಮಿತ್ತವಾದ ಹಾಗೂ ಮಿಥ್ಯಾಜ್ಞಾನಾದಿಕೇಷು ಚ=ಅನ್ಯಥಾಜ್ಞಾನಾದಿಗಳ ನಿಮಿತ್ತ ಕಲಿ ಪೂರ್ವಾಣಾಂ=ಕಲಿಯೇ ಮೊದಲಾದ ಅಸುರಾಣಾಂ=ಅಸುರರಿಗೆ ಸದೈವ= ಯಾವಾಗಲೂ ಮಹತ್ ಫಲಂ=ಕೆಟ್ಟಕೆಲಸವನ್ನು ಮಾಡಿದವರಿಗಿಂತಲೂ ಹೆಚ್ಚಿನ ಫಲ.

ಭಾವಾರ್ಥ— ಸತ್ಕರ್ಮದ ಫಲ ದೇವತೆಗಳಿಗೆ ಸೇರುವಂತೆ ದುಷ್ಕರ್ಮದ ಫಲ ದೈತ್ಯರಿಗೆ ಸೇರುತ್ತದೆ. ಇವೆರಡಕ್ಕೂ ಪ್ರಮಾಣ—

**'ಶುಭಾಶುಭಫಲಂ ದೇವಾ ಅಸುರಾಶ್ಚ ಸಮಾಪ್ನುಯುಃ ।**
**ಕ್ರಮೇಣೈವ ಯಥಾಶಕ್ತಿ ಯಥಾ ಯೇಯೇ ಪ್ರಯೋಜಕಾಃ ॥ ೨೫೯ ॥**

**ಪ್ರೇರಕಾ ಅಪಿ ಪಾಪಾನಾಂ ನ ದೇವಾಃ ಪಾಪಮಾಪ್ನುಯುಃ ।'**
**ಇತಿ ಪ್ರಕಾಶಿಕಾಯಾಂ ಹಿ ಪ್ರೋವಾಚ ಹರಿರಂಜಸಾ ॥ ೨೬೦ ॥**

''ಶುಭಾಶುಭಫಲಂ=ಶುಭಕರ್ಮ ಮತ್ತು ಅಶುಭಕರ್ಮಗಳ ಫಲವನ್ನು ಯಥಾಕ್ರಮವಾಗಿ ಕ್ರಮೇಣೈವ ಯಥಾಶಕ್ತಿ=ತಾರತಮ್ಯಕ್ಕೆ ಅನುಗುಣವಾಗಿ ಹಾಗೂ ಅವರವರ ಸಾಮರ್ಥ್ಯಕ್ಕೆ ಅನುಗುಣವಾಗಿ ಅಂದರೆ ಯೇ ಯೇ ಪ್ರಯೋಜಕಾಃ=ಯಾರು ಯಾರು ಎಷ್ಟೆಷ್ಟು ಕಾರಣರೋ ಅಷ್ಟಷ್ಟು ದೇವಾಃ ಅಸುರಾಶ್ಚ ಸಮಾಪ್ನುಯುಃ=ದೇವತೆಗಳು ಮತ್ತು ಅಸುರರು ಹೊಂದುವರು. ದೇವಾಃ ಪಾಪಾನಾಂ ಪ್ರೇರಕಾ ಅಪಿ=ದೇವತೆಗಳು ಅಶುಭಕರ್ಮಗಳಿಗೆ ಪ್ರೇರಕರಾದರೂ ನ ಪಾಪಮ್ ಆಪ್ನುಯುಃ=ಪಾಪವನ್ನು ಹೊಂದುವುದಿಲ್ಲ.''

ಇತಿ=ಹೀಗೆಂದು ಹರಿಃ=ಶ್ರೀಹರಿಯು ಪ್ರಕಾಶಿಕಾಯಾಂ=ಪ್ರಕಾಶಿಕಾ ಎಂಬ ಗ್ರಂಥದಲ್ಲಿ ಅಂಜಸಾ=ಸ್ಪಷ್ಟವಾಗಿ ಪ್ರೋವಾಚ=ಹೇಳಿರುತ್ತಾನೆ.

**ಯದ್ಯಪ್ಯೇವಂ ಸುರಾಣಾಂ ಚ ದೈತ್ಯಾನಾಂ ಚ ಮಹತ್ ಫಲಮ್ ।**
**ಶುಭಾಶುಭೇಭ್ಯ ಏವಂಚ ಕರ್ತುಶ್ಚ ಸ್ಯಾದ್ ಯಥೋದಿತಮ್॥ ೨೬೧ ॥**

ಯದ್ಯಪಿ=ವಸ್ತುತಃ ಏವಂ=ಹಿಂದೆ ಹೇಳಿರುವಂತೆ ಸುರಾಣಾಂ ಚ ದೈತ್ಯಾನಾಂ ಚ=ದೇವತೆಗಳು ಮತ್ತು ದೈತ್ಯರಿಗೆ ಶುಭಾಶುಭೇಭ್ಯಃ=ಶುಭ ಮತ್ತು ಅಶುಭಕರ್ಮಗಳಿಂದ ಮಹತ್‌ಫಲಂ=ಹೆಚ್ಚಿನ ಫಲ. ಏವಂಚ= ಹೀಗಿದ್ದರೂ ಕರ್ತುಶ್ಚ=ಆ ಕರ್ಮಗಳನ್ನು ಮಾಡುವವನಿಗೂ ಯಥೋದಿತಂ= ಶ್ರುತಿ–ಸ್ಮೃತಿ ಗಳು ಹೇಳುವಂತೆ ಅಲ್ಪಫಲವಿದೆ.

ಭಾವಾರ್ಥ— ಶುಭಫಲ ದೇವತೆಗಳಿಗೆ, ಅಶುಭಫಲ ದೈತ್ಯರಿಗೆ ಎಂದು ಪೂರ್ವಪಕ್ಷ. ಅದರ ಸಿದ್ಧಾಂತವನ್ನು ಇಲ್ಲಿ ಹೇಳಲಾಗಿದೆ— ದೇವ–ದೈತ್ಯರಿಗೆ ಮಾತ್ರವಲ್ಲದೆ ಕರ್ಮಮಾಡಿರುವ ಜೀವನಿಗೂ ಪುಣ್ಯ–ಪಾಪಗಳಿವೆ. ಇದು ಸಿದ್ಧಾಂತ. ಇದಕ್ಕೆ ಶ್ರುತಿ–ಸ್ಮೃತಿಗಳ ಆಧಾರ ಇದೆ. ಯುಕ್ತಿಯೂ ಇದೆ—

**‘‘ತಸ್ಮಾನ್ನಿರಯಮಾನುಷ್ಯಸ್ವರ್ಗಮುಕ್ತ್ಯುಪಭೋಗಿನಃ ।**
**ಮಾನುಷೋತ್ತಮಮಾರಭ್ಯ ದೇವಾಸ್ತು ನಿರಯಂ ವಿನಾ ॥ ೨೬೨ ॥**

**ಅಸುರಾಸ್ತು ವಿನಾ ಮುಕ್ತಿಂ ತಮೋಽಂಧಮಪಿ ಚಾಪ್ನುಯುಃ ।’’**
**ಇತಿ ತತ್ವವಿವೇಕೋ (ತ್ವಾವಲೋ) ಕ್ತಂ ಸ್ವಯಂ ಭಗವತೋ(ತಾ)**
**ವಚಃ ॥ ೨೬೩ ॥**

ತಸ್ಮಾತ್=ಕರ್ಮಫಲವು ಎಲ್ಲರಿಗೂ ಇರುವುದರಿಂದ ಮನುಷ್ಯೋ–ತ್ತಮಂ ಆರಭ್ಯ=ಉತ್ತಮ ಮನುಷ್ಯರನ್ನು ಆರಂಭಿಸಿ ದೇವಾಸುರರೆಲ್ಲರೂ ನಿರಯ–ಮಾನುಷ್ಯ–ಸ್ವರ್ಗ–ಮುಕ್ತಿ–ಉಪಭೋಗಿನಃ=ನರಕ–ಮನುಷ್ಯಲೋಕ–ಸ್ವರ್ಗ ಮತ್ತು ಮೋಕ್ಷ ಈ ಪುರುಷಾರ್ಥಗಳನ್ನು ಅನುಭವಿಸುತ್ತಾರೆ. ಆದರೆ, ದೇವಾಸ್ತು ನಿರಯಂ ವಿನಾ=ದೇವತೆಗಳು ನರಕಬಿಟ್ಟು ಇತರ ಸದ್ಗತಿಗಳನ್ನೂ ಅಸುರಾಸ್ತು=ಅಸುರರು ಮುಕ್ತಿಂ ವಿನಾ=ಮೋಕ್ಷವನ್ನು ಬಿಟ್ಟು ಇತರ ಪುರುಷಾರ್ಥಗಳನ್ನೂ ಅಸುರರು ಅಂಧಂತಮಃ ಅಪಿ=ಅಂಧಂತಮಸ್ಸನ್ನೂ ಆಪ್ನುಯುಃ=ಹೊಂದುವರು.

ಇತಿ=ಹೀಗೆಂದು ತತ್ತ್ವವಿವೇಕೋಕ್ತಂ=ತತ್ವವಿವೇಕಗ್ರಂಥದಲ್ಲಿ ಹೇಳಲ್ಪಟ್ಟ ಸ್ವಯಂ ಭಗವತಃ=ಸಾಕ್ಷಾತ್ ಭಗವಂತನ ವಚಃ=ಮಾತು.

**ಭಾವಾರ್ಥ**— ಇಲ್ಲಿ ಕರ್ತೃಗಳಿಗೂ ಕರ್ಮಫಲ ಇದೆ, ಎಂದು ಸಮರ್ಥಿಸಲಾಗಿದೆ. ಇಲ್ಲದಿದ್ದರೆ, ದೇವತೆಗಳು ಶುಭಕರ್ಮಗಳನ್ನು ಮಾತ್ರ ಮಾಡಿಸುವುದರಿಂದ ಸುಕೃತೈಕಭಾಜನರಾಗಿ ಮನುಷ್ಯಲೋಕದಲ್ಲಿ ಹುಟ್ಟ ಬಾರದು. ದೈತ್ಯರು ಅಶುಭಕರ್ಮಗಳಿಗೆ ಪ್ರೇರಕರಾದುದರಿಂದ ಪಾಪ ಮಾತ್ರಭಾಜನರಾಗಿ ನರಕಕ್ಕೆ ಹೋಗಬೇಕು, ಸ್ವರ್ಗಕ್ಕೆ ಹೋಗಬಾರದು. ಆದರೆ ದೇವತೆಗಳು ಮರ್ತ್ಯಲೋಕದಲ್ಲಿ ಹುಟ್ಟುತ್ತಾರೆ, ದೈತ್ಯರೂ ಸ್ವರ್ಗವೇರುತ್ತಾರೆ. ಇದರಿಂದ ಅವರವರು ಮಾಡಿರುವ ಕರ್ಮದ ಫಲ ಅವರವರಿಗೂ ಇದೆ, ಎಂದು ತಿಳಿಯುತ್ತದೆ.

**ಇಲ್ಲಿಗೆ ಫಲಶ್ರುತ್ಯಧಿಕರಣ ಮುಗಿಯಿತು.**

## ಅನಾವಿಷ್ಕಾರಾಧಿಕರಣ

### 'ಓಂ ಅನಾವಿಷ್ಕುರ್ವನ್ನನ್ವಯಾತ್'

**'ಜ್ಞಾನದಾ ಅಪಿಚಾಚಾರ್ಯಾ ವಿಶೇಷಾತ್ ಫಲಮಾಪ್ನುಯುಃ ।**
**ಮುಕ್ತಾವಷ್ಟಗುಣಂ ಶಿಷ್ಯಾದ್ ಗುರುರಾಪ್ನೋತಿ ಶೋಭನಮ್ ॥೨೬೪ ॥**

**ತದ್ಗುರುರ್ದ್ವಿಗುಣಂ ತಸ್ಮಾತ್ ಸಾರ್ಧಂ ತಾವತ್ ತತೋಽಪರೇ ।**
**ದೇವಾಃ ಸಹಸ್ರಗುಣಿತಂ ಕ್ರಮಾತ್ ತಸ್ಮಾದ್ ಯಥೋತ್ತರಮ್**
**॥ ೨೬೫ ॥**

**ಬ್ರಹ್ಮಾ ಮಹೌಘಗುಣಿತಮೇವಂ ಫಲವಿನಿರ್ಣಯಃ ।'**
**ಇತ್ಯಾಹ ಭಗವಾನ್ ಶಾಸ್ತ್ರೇ ಗುರುವೃತ್ತಾಭಿಧೇ ಸ್ವಯಮ್ ॥ ೨೬೬ ॥**

ಜ್ಞಾನದಾ ಆಚಾರ್ಯಅಪಿ=ಜ್ಞಾನದಾನ ಮಾಡಿದ ಗುರುಗಳೂ ವಿಶೇಷಾತ್=ಶಿಷ್ಯರಿಗಿಂತಲೂ ಹೆಚ್ಚು ಫಲಮ್ ಆಪ್ನುಯುಃ=ಜ್ಞಾನಫಲವನ್ನು ಹೊಂದುತ್ತಾರೆ.

ಇದಕ್ಕೆ ಆಧಾರ— ಗುರುಃ=ಜ್ಞಾನಪ್ರದನಾದ ಗುರುವು ಶಿಷ್ಯಾತ್=ಶಿಷ್ಯನಿಗಿಂತಲೂ ಮುಕ್ತೌ=ಮೋಕ್ಷದಲ್ಲಿ ಅಷ್ಟಗುಣಂ ಶೋಭನಂ=ಎಂಟುಪಟ್ಟು ಹೆಚ್ಚು ಫಲವನ್ನು ಆಪ್ನೋತಿ=ಹೊಂದುತ್ತಾನೆ. ತದ್ಗುರುರ್ಹಿ=ಆ ಗುರುವಿನ ಗುರುವು ತಸ್ಮಾತ್=ಗುರು ಪಡೆದ ಫಲಕ್ಕಿಂತ ದ್ವಿಗುಣಂ=ಎರಡು ಪಟ್ಟು ಫಲಮ್ ಆಪ್ನೋತಿ=ಫಲವನ್ನು ಪಡೆಯುತ್ತಾನೆ. ತತಃ ಪರೇ=ಆ ಪರಮ ಗುರುವಿನ ಅನಂತರದ ಗುರುಗಳು ಸಾರ್ಧಂ ತಾವತ್=ಅರ್ಧಕ್ಕಿಂತಲೂ ಹೆಚ್ಚು ಫಲಭಾಜನರಾಗುತ್ತಾರೆ. ದೇವಾಃ=ದೇವತೆಗಳು ತಸ್ಮಾತ್ ಕ್ರಮಾತ್=ಗುರುಗಳಿಗೆ ಲಭಿಸುವ ಅರ್ಧಫಲಕ್ಕಿಂತಲೂ ಯಥೋತ್ತರಂ=ಹೆಚ್ಚು ಅಂದರೆ ಸಹಸ್ರಗುಣಿತಂ ಫಲಂ=ಸಾವಿರಪಟ್ಟು ಹೆಚ್ಚು ಫಲವನ್ನು ಹೊಂದುವರು. ಬ್ರಹ್ಮಾ=ಚತುರ್ಮುಖಬ್ರಹ್ಮದೇವನು ಯಥೋತ್ತರಂ ತಸ್ಮಾತ್ ಕ್ರಮಾತ್=ದೇವತೆಗಳು ಹೊಂದುವ ಫಲಕ್ಕಿಂತಲೂ ಮಹೌಘಗುಣಿತಂ='ಮಹೌಘ' ಎಂಬ ಸಂಖ್ಯಾಪರಿಮಿತ ಫಲವನ್ನು ಹೊಂದುತ್ತಾನೆ.

ಇತಿ=ಹೀಗೆ ಸ್ವಯಂ ಭಗವಾನ್ ಸ್ವತಃ ಭಗವಂತನೇ ಗುರುವೃತ್ತಾಭಿಧೇ ಶಾಸ್ತ್ರೇ=ಗುರುವೃತ್ತ ಎಂಬ ಗ್ರಂಥದಲ್ಲಿ ಆಹ=ಹೇಳಿದ್ದಾರೆ.

**ಯುಕ್ತಂ ಚ ತನ್ನ ಗೋದಾತಾ ಗೋಮಾತ್ರಫಲಮಾಪ್ನುಯಾತ್ ।**

ಏತತ್=ಶಿಷ್ಯನಿಗಿಂತಲೂ ಗುರುಗಳಿಗೆ ಅಧಿಕಫಲ ಎನ್ನುವುದು ಯುಕ್ತಂ ಚ=ಯುಕ್ತಿಯುಕ್ತವೂ ಆಗಿದೆ. ಹೇಗೆಂದರೆ, ಗೋದಾತಾ=ಗೋವನ್ನು ದಾನಮಾಡಿದವನು ಗೋಮಾತ್ರಫಲಂ ನ ಆಪ್ನುಯಾತ್=ಗೋರೂಪವಾದ ಫಲವನ್ನು ಮಾತ್ರ ಹೊಂದುವುದಿಲ್ಲ. ಅದಕ್ಕಿಂತಲೂ ಹೆಚ್ಚಿನದ್ದಾದ ಸ್ವರ್ಗರೂಪವಾದ ಫಲವು ಸಿಗುತ್ತದೆ. ಆದರಂತೆ, ಶಿಷ್ಯನಿಗೆ ಜ್ಞಾನಮಾತ್ರ ಫಲ. ಗುರುವಿಗೆ ಜ್ಞಾನದಾನದಿಂದ ಜ್ಞಾನಾತಿರಿಕ್ತವಾದ ಹೆಚ್ಚಿನ ಮೋಕ್ಷಫಲವಿದೆ. ಹೀಗೆ ಅನುಮಾನದಿಂದಲೂ ಗುರುವಿಗೆ ಅಧಿಕ ಫಲವು ಸಿದ್ಧವಾಗುತ್ತದೆ.

ಇದಕ್ಕೆ ಭಗವದ್ಗೀತೆಯ ಸಮ್ಮತಿ ಇದೆ—

**'ಯ ಇಮಂ ಪರಮಂ ಗುಹ್ಯಂ ಮದ್ಭಕ್ತೇಷ್ವಭಿಧಾಸ್ಯತಿ' ॥ ೨೬೭ ॥**

ಭಕ್ತಿಂ ಮಯಿ ಪರಾಂ ಕೃತ್ವಾ ಮಾಮೇವೈಷ್ಯತ್ಯಸಂಶಯಃ ।
ನಚ ತಸ್ಮಾನ್ಮನುಷ್ಯೇಷು ಕಶ್ಚಿನ್ಮೇ ಪ್ರಿಯಕೃತ್ತಮಃ ॥೨೬೮॥

ಭವಿತಾ ನಚ ಮೇ ತಸ್ಮಾದನ್ಯಃ ಪ್ರಿಯತಮೋ (ರೋ) ಭುವಿ ।
ಇತ್ಯಾಹ ಭಗವಾನೇವಮಪಿ ಪಾತ್ರಮಪೇಕ್ಷ್ಯತೇ ॥ ೨೬೯ ॥

ಈ ಭಗವದ್ಗೀತಾಶ್ಲೋಕಗಳ ಅಭಿಪ್ರಾಯ ಹೀಗೆ—ಕೃಷ್ಣ ಹೇಳುತ್ತಾನೆ— ಇಲ್ಲಿ ನಾನು ಹೇಳಿರುವ ವಿಷಯಗಳನ್ನು ನನ್ನಲ್ಲಿ ಭಕ್ತಿಪೂರ್ವಕವಾಗಿ ನನ್ನ ಭಕ್ತರಿಗೆ ಹೇಳಿದರೆ ಅಂತಹವನು ನನ್ನನ್ನೇ ಹೊಂದುತ್ತಾನೆ. ಅದರಲ್ಲಿ ಸಂದೇಹ ಬೇಡ. ಮನುಷ್ಯರಲ್ಲಿ ಅವನಷ್ಟು ಪ್ರಿಯನಾದ ಕರ್ತೃ ಮತ್ತೊಬ್ಬನಿಲ್ಲ. ಭೂಮಿಯಲ್ಲಿ ಅವನಿಗಿಂತ ಪ್ರಿಯತಮನಾದವನು ಮುಂದೆಯೂ ಬರಲಾರ''.

ಏವಮಪಿ=ಹೀಗೆ ಜ್ಞಾನದಾನವು ಪರಮಪವಿತ್ರವಾದರೂ ಪಾತ್ರಮ್ ಅಪೇಕ್ಷ್ಯತೇ=ಜ್ಞಾನದಾನವು ಸತ್ಪಾತ್ರವನ್ನು ಅಪೇಕ್ಷಿಸುತ್ತದೆ. ಅಪಾತ್ರದಲ್ಲಿ ಮಾಡಿದ ಜ್ಞಾನದಾನ ನಿಷ್ಫಲಮಾತ್ರವಲ್ಲ, ಪಾಪಕ್ಕೂ ಕಾರಣವಾಗುತ್ತದೆ. ಆದ್ದರಿಂದ ಪಾತ್ರಾಪಾತ್ರವಿವೇಚನೆ ಮಾಡದೆ ಬಹಿರಂಗವಾಗಿ ಜ್ಞಾನದಾನ ಮಾಡಬಾರದು.

ಇಲ್ಲಿಗೆ ಅನಾವಿಷ್ಕಾರಾಧಿಕರಣ ಮುಗಿಯಿತು.

## ಐಹಿಕಾಧಿಕರಣ – ಮುಕ್ತಿಫಲಾಧಿಕರಣ

### 'ಓಂ ಐಹಿಕಮಪ್ರಸ್ತುತಪ್ರತಿಬಂಧೇ ತದ್ದರ್ಶನಾತ್ ಓಂ'

ಏವಮೇವಾವಿರೋಧೇನ ಪ್ರಾರಬ್ಧಸ್ಯೈವ ಕರ್ಮಣಃ ।
ಜ್ಞಾನಂ ದೃಷ್ಟಫಲಂ ಪ್ರೋಕ್ತಂ ಮುಕ್ತಿಶ್ಚೈವೇಹ(ಶ್ಚೇಹೈವ)
ಲಭ್ಯತೇ ॥ ೨೭೦॥

ಈ ಶ್ಲೋಕದಲ್ಲಿ ಎರಡು ಅಧಿಕರಣಗಳ ತಾತ್ಪರ್ಯವನ್ನು ಹೇಳಲಾಗಿದೆ–

1. ಪ್ರಾರಬ್ಧಸ್ಯ ಕರ್ಮಣಃ ಅವಿರೋಧೇನ್ನೈವ ಜ್ಞಾನಂ ದೃಷ್ಟಫಲಂ ಪ್ರೋಕ್ತಮ್–ಪ್ರಾರಬ್ಧಕರ್ಮವು ಪ್ರತಿಬಂಧಕವಾಗದಿದ್ದರೆ ಯಾವ ಜನ್ಮದಲ್ಲಿ ಶ್ರವಣ–ಮನನ–ಧ್ಯಾನಗಳು ಪೂರ್ಣವಾಗಿವೆಯೋ ಅದೇ ಜನ್ಮದಲ್ಲಿ ಸಾಧಕನು ಭಗವಂತನ ಅಪರೋಕ್ಷಜ್ಞಾನವನ್ನು ಪಡೆಯುತ್ತಾನೆ. ಪ್ರಾರಬ್ಧವು ಪ್ರತಿಬಂಧಕವಾಗಿದ್ದಲ್ಲಿ ಜನ್ಮಾಂತರದಲ್ಲಿ ಅಪರೋಕ್ಷ.

2. ಪ್ರಾರಬ್ಧಸ್ಯ ಕರ್ಮಣಃ ಅವಿರೋಧೇನ್ನೈವ ಮುಕ್ತಿಃ ಇಹೈವ ಲಭ್ಯತೇ–ಪ್ರಾರಬ್ಧಕರ್ಮವು ಪ್ರತಿಬಂಧಕವಾಗಿಲ್ಲದಿದ್ದರೆ ಅಪರೋಕ್ಷಜ್ಞಾನ ಬಂದಿರುವ ದೇಹಪಾತವಾದ ಕೂಡಲೇ ಮೋಕ್ಷವಾಗುತ್ತದೆ. ಇಲ್ಲದಿದ್ದರೆ ಜನ್ಮಾಂತರದಲ್ಲಿ ಮೋಕ್ಷ. ಇಲ್ಲಿ ಮೋಕ್ಷವೆಂದರೆ ಲಿಂಗದೇಹಭಂಗವಲ್ಲ. ಸತ್ಯಾದಿ ಲೋಕಪ್ರಾಪ್ತಿ . ಮೋಕ್ಷ ಕಲ್ಪಾಂತದಲ್ಲಿ ಮಾತ್ರ ದೊರಕುತ್ತದೆ.

**ಇಲ್ಲಿಗೆ ಐಹಿಕಾಧಿಕರಣ–ಮುಕ್ತಿಫಲಾಧಿಕರಣ ಮುಗಿಯಿತು.**

**ಇಲ್ಲಿಗೆ ಮೂರನೆಯ ಅಧ್ಯಾಯದ ನಾಲ್ಕನೆಯ ಪಾದ ಮುಗಿಯಿತು.**

॥ ಶ್ರೀವೇದವ್ಯಾಸೋ ವಿಜಯತೇ ॥

ಶ್ರೀಮದಾನಂದತೀರ್ಥಭಗವತ್ಪಾದರು ರಚಿಸಿದ

# ಶ್ರೀಮದನುವ್ಯಾಖ್ಯಾನ

## ನಾಲ್ಕನೆಯ ಅಧ್ಯಾಯದ ಮೊದಲನೇ ಪಾದ

## ಕರ್ಮಕ್ಷಯಪಾದ

### 'ಓಂ ಆವೃತ್ತಿರಸಕೃದುಪದೇಶಾತ್ ಓಂ'

ಸಮನ್ವಯಾವಿರೋಧಾಭ್ಯಾಂ ಸಿದ್ಧೇ ವಸ್ತುನಿ ಸಾಧನೇ ।
ವಿಚಾರಿತೇಷ್ವಶೇಷೇಷು ಸಾಧನೇಷು ವಿಶೇಷತಃ ॥ ೧ ॥

ನಿತ್ಯಶಃ ಕಾರ್ಯಮತ್ಯಂತಮವಶ್ಯಂಭಾವಿಸಾಧನಮ್ ।
ಚಿಂತ್ಯತೇ ಪ್ರಥಮಂ ತತ್ರ ಶ್ರವಣಾದಿಸಕೃತ್ಕ್ರಿಯಾ ॥ ೨ ॥

ಆವೃತ್ತಿರ್ವೇತಿ ಸಂದೇಹೇ ಕರ್ತವ್ಯಾಽಽವೃತ್ತಿರೇವ ಹಿ ।
ಉಪದೇಶೋಽತತ್ ತ್ವಮಸೀತ್ಯಾದಿರ್ಹ್ಯಸಕೃದೇವ ಯತ್ ॥ ೩ ॥

### ಈ ಅಧ್ಯಾಯದ ವಿಷಯ

ಸಮನ್ವಯ–ಅವಿರೋಧಾಭ್ಯಾಂ=ಪ್ರಥಮಾಧ್ಯಾಯದಲ್ಲಿ ಮಾಡಿರುವ ಶ್ರುತಿಸಮನ್ವಯ, ದ್ವಿತೀಯಾಧ್ಯಾದಲ್ಲಿ ಮಾಡಿರುವ ಸಮನ್ವಯಕ್ಕೆ ಅವಿರೋಧ ಇವೆರಡರಿಂದ ವಸ್ತುನಿ ಸಿದ್ಧೇ(ಸತಿ)=ಜಿಜ್ಞಾಸಾವಿಷಯನಾದ ಬ್ರಹ್ಮ ಸ್ವರೂಪವು ಸಿದ್ಧವಾಗುತ್ತಿರಲು ಸಾಧನೇ=ಸಾಧನವಿಷಯಕವಾದ ಮೂರನೆಯ ಅಧ್ಯಾಯದಲ್ಲಿ ಅಶೇಷೇಷು ಸಾಧನೇಷು ವಿಚಾರಿತೇಷು= ಮೋಕ್ಷಕ್ಕೆ ಸಾಧನವಾದುವುಗಳನ್ನೆಲ್ಲ ವಿಚಾರಮಾಡಿದ ಮೇಲೆ ಈ ಅಧ್ಯಾಯ ದಲ್ಲಿ ಮೋಕ್ಷರೂಪವಾದ ಫಲವನ್ನು ವಿಚಾರಮಾಡಬೇಕಾಗಿ ಬಂದಿದೆ. ಆದ್ದರಿಂದ, ಈ ಅಧ್ಯಾಯದಲ್ಲಿ ಮೋಕ್ಷರೂಪಫಲವನ್ನು ವಿಚಾರ ಮಾಡಲಾಗಿದೆ.

ತತ್ರ=ಪ್ರಥಮಪಾದದಲ್ಲಿ ಪ್ರಥಮಂ=ಮೊದಲು, ಕೆಲವು ಸೂತ್ರಗಳಲ್ಲಿ ನಿತ್ಯಶಃ ಕಾರ್ಯಂ=ಸಾಧಕನಿಂದ ನಿರಂತರವಾಗಿ ಮಾಡಲ್ಪಡಬೇಕಾಗಿರುವ ಅತ್ಯಂತಂ ಅವಶ್ಯಂಭಾವಿಸಾಧನಂ=ಅತ್ಯಾವಶಕವಾಗಿ ಅನುಷ್ಠೇಯವಾದ ಸಾಧನಂ=ಮೋಕ್ಷಸಾಧನೆಯು ವಿಶೇಷತಃ ಚಿಂತ್ಯತೇ=ವಿಶೇಷವಾಗಿ ವಿಚಾರಿಸಲ್ಪಡುತ್ತದೆ.

**ಭಾವಾರ್ಥ—** ಇದು ಫಲಾಧ್ಯಾಯ. ಇಲ್ಲಿ ಮೋಕ್ಷಫಲಧ ಬಗ್ಗೆ ಹೇಳಬೇಕು. ಆದರೂ, ಮೊದಲು ತೃತೀಯಾಧ್ಯಾಯದಲ್ಲಿ ಹೇಳಿರುವ ಕೆಲವು ಸಾಧನಗಳನ್ನು ಮೋಕ್ಷಾರ್ಥಿಯು ಆದರ–ನೈರಂತರ್ಯಗಳಿಂದ ಅನುಷ್ಠಾನ ಮಾಡಬೇಕು, ಎಂದು ಹೇಳಲಾಗಿದೆ. ಈ ಸಾಧನಗಳು ಮೋಕ್ಷಕ್ಕೆ ಅಂತರಂಗ ಸಾಧನಗಳು.

ತತ್ರ ಪ್ರಥಮಂ=ಅಂತಹ ಸಾಧನಗಳಲ್ಲಿ ಮೊದಲು ಶ್ರವಣಾದಿ= ಶ್ರವಣ–ಮನನ–ಧ್ಯಾನಗಳು ಸಕೃತ್‌ಕ್ರಿಯಾ=ಒಂದುಸಲ ಮಾತ್ರ ಕರ್ತವ್ಯಗಳೋ ಆವೃತ್ತಿರ್ವಾ=ಮತ್ತೆ ಮತ್ತೆ ಮಾಡಲ್ಪಡಬೇಕೋ? ಇತಿ ಸಂದೇಹೇ= ಹೀಗೆ ಸಂಶಯಬಂದಲ್ಲಿ ಆವೃತ್ತಿರೇವ ಕರ್ತವ್ಯಾ=ಶ್ರವಣಾದಿಗಳನ್ನು ಮತ್ತೆ ಮತ್ತೆ ಅನುಷ್ಠಾನಮಾಡಬೇಕು. ಯತ್=ಯಾವಕಾರಣದಿಂದ ಅತತ್ತ್ವಮಸೀತ್ಯಾದಿಃ ಉಪದೇಶಃ ಅಸಕೃದೇವ='ಅತತ್ವಮಸಿ' ಎಂಬ ಗುರೂಪದೇಶವು ಅನೇಕ ಬಾರಿ (9ಸಲ) ಇದೆ. ಹಿ=ಉದ್ದಾಲಕರು ಶ್ವೇತಕೇತುವಿಗೆ ಮಾಡಿರುವ ಈ ಉಪದೇಶವು ಪ್ರಸಿದ್ಧವಾಗಿದೆ.

**ಭಾವಾರ್ಥ—** 'ಆವೃತ್ತಿಃ, ಅಸಕೃದ್ ಉಪದೇಶಾತ್' ಎಂಬ ಸೂತ್ರದ ಅರ್ಥವನ್ನು ಇಲ್ಲಿ ಹೇಳಲಾಗಿದೆ. ಉದ್ದಾಲಕರು ಶ್ವೇತಕೇತುವಿಗೆ 'ಸ ಆತ್ಮಾ, ಅತತ್ತ್ವಮಸಿ' ಎಂದು ಒಂಭತ್ತು ಸಲ ಉಪದೇಶ ನೀಡಿರುತ್ತಾರೆ. ಇದರಿಂದ ಶಾಸ್ತ್ರಶ್ರವಣ, ಮನನ, ಧ್ಯಾನಗಳನ್ನು ಒಂದುಸಲ ಮಾಡಿದರೆ ಸಾಲದು. ನಿರಂತರವಾಗಿ ಮಾಡುತ್ತಲೇ ಇರಬೇಕು, ಎಂದು ತಿಳಿಯುತ್ತದೆ.

## 'ಓಂ ಲಿಂಗಾಚ್ಚ ಓಂ'

**ಲಿಂಗಾಲ್ಲಾತವ್ಯತಃ ಪೂರ್ವಮೃಜೋಬ್ರ್ರಹ್ಮತ್ವತಃ ಶತಾತ್ ।**
**ಶುಶ್ರಾವೋಗ್ರತಪಾ ನಾಮ ಯೋಗ್ಯೋ ರುದ್ರಪದಸ್ಯ ಯಃ ॥ ೪ ॥**

**ಸಾರ್ಧಂ ಪರಾರ್ಧಂ ವಿಷ್ಣೋಸ್ತು ಗುಣಾನ್ ಭಕ್ತ್ಯಾ ಸದೋದ್ಯತಃ ।**
**ತತ್ತ್ರಿಭಾಗಮುಪಾಸಾಂ ಚ ಚಕ್ರೇ ಸಂಭೃತಮಾನಸಃ ॥ ೫ ॥**

ಲಿಂಗಾತ್=ಮತ್ತೆಮತ್ತೆ ಶ್ರವಣಾದಿಗಳನ್ನು ಮಾಡಿರುವ ಲಿಂಗಗಳಿರುವುದರಿಂದ ಶ್ರವಣಾದಿಗಳ ಆವೃತ್ತಿಯನ್ನು ಮಾಡಬೇಕು.

ಬ್ರಹ್ಮತ್ವತಃ ಶತಾತ್ ಪೂರ್ವಂ=ಯಾರಿಗೆ ಈಗಿನ ಬ್ರಹ್ಮಕಲ್ಪವನ್ನು ಪ್ರಾರಂಭಿಸಿ ನೂರು ಬ್ರಹ್ಮಕಲ್ಪಗಳು ಕಳೆದ ಮೇಲೆ ಬ್ರಹ್ಮತತ್ವವು ಪ್ರಾಪ್ತಿಯಾಗುವುದೋ ಅಂತಹ ಋಜೋಃ ಲಾತವ್ಯತಃ=ಋಜುಗಣಸ್ಥನಾದ ಲಾತವ್ಯನಿಂದ ರುದ್ರಪದಸ್ಯ ಯೋಗ್ಯಃ ಯಃ ಉಗ್ರತಪಾಃ ನಾಮ=ರುದ್ರಪದವಿಗೆ ಯೋಗ್ಯನಾದ ಉಗ್ರತಪನೆಂಬುವನು ಸಾರ್ಧಂ ಪರಾರ್ಧಂ=ಅರ್ಧಸಹಿತ ಪರಾರ್ಧಕಾಲದಷ್ಟು ಕಾಲಪರ್ಯಂತ ಸದಾ-ಉದ್ಯತಃ=ಸರ್ವದಾಯತ್ನಶೀಲನಾಗಿ ಭಕ್ತ್ಯಾ=ಭಕ್ತಿಯಿಂದ ವಿಷ್ಣೋಃ ಗುಣಾನ್ ಶುಶ್ರಾವ=ವಿಷ್ಣುವಿನ ಗುಣಗಳನ್ನು ಕೇಳಿರುವನೋ ತತ್ ತ್ರಿಭಾಗಂ=ಶ್ರವಣ ಮಾಡಿರುವ ಕಾಲದ ಮೂರನೆಯ ಒಂದು ಭಾಗ ಅಂದರೆ 25 ಸಂವತ್ಸರದಷ್ಟು ಕಾಲ ಸಂಭೃತಮಾನಸಃ=ಉಪಾಸ್ಯವಿಷಯದಲ್ಲಿ ಏಕಾಗ್ರಚಿತ್ತನಾಗಿ (ಉಗ್ರತಪನು) ಉಪಾಸಾಂ ಚ ಚಕ್ರೇ=ಮನನ ಧ್ಯಾನ ಮಾಡಿದನು.

ಭಾವಾರ್ಥ— ರುದ್ರಗಣಪ್ರವಿಷ್ಟರಾದ ಉಗ್ರತಪರು ಋಜುಗಣಸ್ಥರಾದ ಲಾತವ್ಯರಿಂದ ಬ್ರಹ್ಮಮಾನದಲ್ಲಿ 75 ಸಂವತ್ಸರಗಳ ಕಾಲ ಒಂದುದಿನವೂ ಬಿಡದೆ ಶಾಸ್ತ್ರಶ್ರವಣ ಮಾಡಿ 25 ಸಂವತ್ಸರಗಳ ಕಾಲ ಧ್ಯಾನ ಮಾಡಿರುವರು.

ಲಾತವ್ಯಶಬ್ದವು 'ಲಾ=ಆದಾನೇ' ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಶಿಷ್ಯರಿಂದ ಉಪಾಸನಾಯೋಗ್ಯ ಎಂದು ಅರ್ಥವನ್ನು ಸುಧಾದಲ್ಲಿ ಹೇಳಲಾಗಿದೆ. ''ಲಾತವ್ಯನಾಮೇತ್ಯರ್ಥಃ=ಲಾತವ್ಯನೆಂದು ಹೆಸರು'' ಹೀಗೆ ಟಿಪ್ಪಣಿಗಳಲ್ಲಿವೆ.

ಈ ಬ್ರಹ್ಮಕಲ್ಪಕ್ಕಿಂತ ನೂರುಕಲ್ಪಗಳ ಹಿಂದೆ ಅರ್ಥಾತ್ ಈ ಬ್ರಹ್ಮಕಲ್ಪವನ್ನು ಸೇರಿಸಿ ನೂರೊಂದು ಬ್ರಹ್ಮಕಲ್ಪಕ್ಕಿಂತ ಮೊದಲು ಬ್ರಹ್ಮಾಪರೋಕ್ಷವನ್ನು ಪಡೆದು ಲಾತವ್ಯರು ನೂರುಬ್ರಹ್ಮಕಲ್ಪಗಳ ನಂತರ ಬ್ರಹ್ಮಪದವಿಗೆ ಬರುತ್ತಾರೆ— ಏಕೋನಶತೇ ಬ್ರಹ್ಮಸು ಅತೀತೇಷು ॥ ಹೀಗೆ ಸನ್ನ್ಯಾಯರತ್ನಾವಲಿಯಲ್ಲಿದೆ.

''ತಥಾಚ ಯಸ್ಮಿನ್ ಕಲ್ಪೇಽಪರೋಕ್ಷಜ್ಞಾನಂ ಜಾತಂ ತದಾರಭ್ಯ ಶತಬ್ರಹ್ಮಕಲ್ಪಾನಂತರಂ ಬ್ರಹ್ಮತ್ವಂ ಭವತಿ। ಅತ ಏವ ''ಸ್ವಧರ್ಮನಿಷ್ಠಃ ಶತಜನ್ಮಭಿಃ ಪುಮಾನ್ ವಿರಿಂಚತಾಮೇತಿ'' (ಭಾ.ತಾ.11) ಎಂದು ಶೇ.ವಾ.ಚಂದ್ರಿಕಾದಲ್ಲಿದೆ.

**ದಶಮನ್ವಂತರಂ ಶಕ್ರಪದಯೋಗ್ಯೋ ಗರುತ್ಮತಃ ।**
**ಪದಯೋಗ್ಯಾತ್ ಸುಮನಸಃ ಸುನಂದೋ ನಾಮ ಚಾಶೃಣೋತ್॥ ೬ ॥**

**ಉಪಾಸಾಂಚಕ್ರ ಉದ್ಯುಕ್ತೋ ಮನ್ವಂತರಚತುಷ್ಟಯಮ್ ।**
**ಸೂರ್ಯಾಚಂದ್ರಮಸೋಶ್ಚೈವ ಪದಯೋಗ್ಯೌ ಸುತೇಜಸೌ ॥ ೭ ॥**

**ಸುರೂಪಃ ಶಾಂತರೂಪಶ್ಚ ಮನ್ವಂತರಚತುಷ್ಟಯಮ್ ।**
**ಅಶೃಣ್ವತಾಂ ಸುಮನಸೋ ಮನ್ವಂತರಮುಪಾಸತಾಮ್ ॥ ೮ ॥**

**ತತಃ ಪ್ರೋಕ್ತಾಸ್ತು ತೇ ಸರ್ವೇ ಭಕ್ತ್ಯೋಗ್ರತಪಆದಯಃ ।**
**ಅಪಶ್ಯನ್ ಪರಮಂ ವಿಷ್ಣುಂ ತತ್ಪ್ರಸಾ(ದೇ)ದೈಧಿತಾಃ ಸದಾ ।**
**ಇತ್ಯುಕ್ತಂ ವಿಷ್ಣುನಾ ಸಾಕ್ಷಾದ್ ಗ್ರಂಥೇ ಸತ್ತತ್ತ್ವಸಂಜ್ಞಿತೇ ॥ ೯ ॥**

ಶಕ್ರಪದಯೋಗ್ಯಃ=ಇಂದ್ರಪದವಿಗೆ ಯೋಗ್ಯನಾದ ಸುನಂದೋ ನಾಮ=ಸುನಂದನೆಂಬ ದೇವತೆಯು ಗುರುತ್ಮತಃ ಪದಯೋಗ್ಯಾತ್= ಗರುಡನಪದವಿಗೆ ಯೋಗ್ಯನಾದ ಸುಮನಸಃ=ಸುಮನಾಃ ಎಂಬ ದೇವತೆ ಯಿಂದ ದಶಮನ್ವಂತರಂ=ಹತ್ತು ಮನ್ವಂತರಗಳ ಕಾಲ ಅಶೃಣೋತ್= ಶ್ರವಣಮಾಡಿರುವನು. ಉದ್ಯುಕ್ತಃ=ಏಕಾಗ್ರಚಿತ್ತನಾಗಿ ಮನ್ವಂತರ ಚತುಷ್ಟಯಂ=ನಾಲ್ಕು ಮನ್ವಂತರಗಳ ಕಾಲ ಉಪಾಸಾಂಚಕ್ರೇ=ಮನನ– ಧ್ಯಾನಗಳನ್ನು ಮಾಡಿರುವನು.

ಸೂರ್ಯಾಚಂದ್ರಮಸೋಃ ಪದಯೋಗ್ಯೌ=ಸೂರ್ಯ–ಚಂದ್ರರ ಪದವಿಗೆ ಯೋಗ್ಯರಾದ ಸುರೂಪಃ ಶಾಂತರೂಪಶ್ಚ=ಸುರೂಪ ಮತ್ತು ಶಾಂತರೂಪ ಎಂಬುವರು ಸುತೇಜಸೌ=ಒಳ್ಳೆಯ ಪ್ರಜ್ಞಾವಂತರಾದವರೂ ಮನ್ವಂತರಚತುಷ್ಟಯಂ=ನಾಲ್ಕು ಮನ್ವಂತರಗಳ ಕಾಲ ಸುಮನಸಃ=

ಸುಮನಾಃ ದೇವತೆಯಿಂದಲೇ ಅಶೃಣ್ವತಾಂ=ಶ್ರವಣ ಮಾಡಿದರು. ಮನ್ವಂತರಂ=ಒಂದು ಮನ್ವಂತರ ಕಾಲಪರ್ಯಂತ ಉಪಾಸತಾಂ=ಉಪಾಸನೆ ಮಾಡಿದರು.

ತತಃ=ಹೀಗೆ ಶ್ರವಣ–ಮನನ–ಧ್ಯಾನಗಳನ್ನು ಮಾಡಿದ ನಂತರ ಪ್ರೋಕ್ತಾಃ=ಹಿಂದೆ ಹೇಳಲ್ಪಟ್ಟ ಉಗ್ರತಪ ಆದಯಃ ತೇ ಸರ್ವೇ=ಉಗ್ರತಪನೇ ಮೊದಲಾದ ಅವರೆಲ್ಲರೂ ಭಕ್ತ್ಯಾ ಸದಾ ತತ್ಪ್ರಸಾದ್ಯೈಧಿತಾಃ=ನಮ್ಮ ಭಕ್ತಿಯಿಂದ ಭಗವಂತನ ಪ್ರಸಾದಸಂಪನ್ನರಾಗಿ ಪರಮಂ ವಿಷ್ಣುಂ=ಸರ್ವೋತ್ತಮನಾದ ವಿಷ್ಣುವನ್ನು ಅಪಶ್ಯನ್=ಅಪರೋಕ್ಷೀಕರಿಸಿಕೊಂಡರು.

ಇತಿ=ಹೀಗೆ ಸಾಕ್ಷಾತ್ ವಿಷ್ಣುನಾ=ಸಾಕ್ಷಾತ್ ವಿಷ್ಣುವಿನಿಂದ ಸತ್ತತ್ವ ಸಂಜ್ಞಿತೇ ಗ್ರಂಥೇ=ಸತ್ತತ್ವ ಎಂಬ ಗ್ರಂಥದಲ್ಲಿ ಉಕ್ತಂ=ಹೇಳಲ್ಪಟ್ಟಿದೆ.

ಭಾವಾರ್ಥ—ಹೀಗೆ ಎಲ್ಲ ದೇವತೆಗಳು ಶ್ರವಣಾದಿಗಳನ್ನು ಆವೃತ್ತಿ ಮಾಡಿಯೇ ಅಪರೋಕ್ಷವನ್ನು ಪಡೆದಿರುವರು. ಆದ್ದರಿಂದ ಇವು ಮತ್ತೆ ಮತ್ತೆ ಮಾಡಬೇಕಾದ ಸಾಧನಗಳು. ಶ್ರವಣಾವೃತ್ತಿ ಎಂದರೆ ಅದೇ ಗ್ರಂಥದ್ದೂ ಆಗ ಬಹುದು, ಆ ಗ್ರಂಥದ ಅರ್ಥವನ್ನೇ ಹೇಳುವ ಗ್ರಂಥಾಂತರದ್ದೂ ಆಗಿರ ಬಹುದು.

ಆವೃತ್ತ್ಯಧಿಕರಣ ಸಮಾಪ್ತವಾಯಿತು.

## ಆತ್ಮಾಧಿಕರಣ

### 'ಓಂ ಆತ್ಮೇತಿ ತೂಪಗಚ್ಛಂತಿ ಗ್ರಾಹಯಂತಿ ಚ ಓಂ'

**ಆತ್ಮೇತಿ ನಾಮ ಕಥಿತಂ ಸಾಕ್ಷಾನ್ನಾರಾಯಣಸ್ಯ ಹಿ ।**
**'ಆತ್ಮಾ ಬ್ರಹ್ಮ ಮಹಾಂಸ್ತಾರಃ ಪರಮೇಶಃ ಶುಚಿಶ್ರವಾಃ ॥ ೧೦ ॥**

**ವಿಷ್ಣುರ್ನಾರಾಯಣೋಽನಂತ' ಇತಿ ಶ್ರೀಪತಿರೀರ್ಯತೇ ।**
**ಇತಿ (ಪಿಂಗ) ಪೈಂಗಿಶ್ರುತಿಶ್ಚೈವ ತಥೈವ ಪರಮಶ್ರುತಿಃ ॥ ೧೧ ॥**

ಆತ್ಮೇತಿ ನಾಮ=ಆತ್ಮಾ ಎಂಬ ಹೆಸರು ಸಾಕ್ಷಾತ್ ನಾರಾಯಣಸ್ಯ ಹಿ

ಕಥಿತಂ=ಮುಖ್ಯವೃತ್ತಿಯಿಂದ ಶ್ರೀಮನ್ನಾರಾಯಣನಿಗೆ ಹೇಳಲ್ಪಟ್ಟಿದೆ. (ಆದ್ದರಿಂದ ಸೂತ್ರದಲ್ಲಿ ಆತ್ಮಾ ಎಂದರೆ ನಾರಾಯಣ. ಅದ್ವೈತಭಾಷ್ಯ ಹೇಳುವಂತೆ 'ಜೀವ' ಎಂದು ಅರ್ಥವಲ್ಲ.) ಅದಕ್ಕೆ ಆಧಾರಗಳು—''ಆತ್ಮ, ಬ್ರಹ್ಮ, ಮಹಾನ್, ತಾರ, ಪರಮೇಶ, ಶುಚಿಶ್ರವಾ, ವಿಷ್ಣು, ನಾರಾಯಣ ಅನಂತ ಇತಿ=ಹೀಗೆಂದು ಶ್ರೀಪತಿಃ ಈರ್ಯತೇ=ಲಕ್ಷ್ಮೀಪತಿಯು ಹೇಳಲ್ಪಡುತ್ತಾನೆ.'' ಇತಿ=ಹೀಗೆ ಪೈಂಗಿಶ್ರುತಿಃ=ಪೈಂಗಿಶ್ರುತಿಯು, ತಥೈವ=ಹಾಗೆಯೇ ಹೇಳುತ್ತದೆ. ಪರಮಶ್ರುತಿಶ್ಚೈವ=ಪರಮಶ್ರುತಿಯೂ ಹೇಳುತ್ತದೆ—

**'ಓಮಾತ್ಮಾ ಭಗವಾನ್ ವಿಷ್ಣುರಾತ್ಮಾನಂದೋಽಕ್ಷರಃ ಸ್ವರಾಟ್ ।**
**ವಿಶ್ವತ್ರಾತಾ ನೃಸಿಂಹೋಽಜೋ ನಾರಾಯಣ ಉರುಕ್ರಮಃ' ॥ ೧೨ ॥**

''ಓಂ, ಆತ್ಮಾ, ಭಗವಾನ್, ವಿಷ್ಣು, ಆತ್ಮಾನಂದ, ಅಕ್ಷರ, ಸ್ವರಾಟ್, ವಿಶ್ವತ್ರಾತಾ, ನೃಸಿಂಹ, ಅಜ, ನಾರಾಯಣ, ಉರುಕ್ರಮ—ಇವೆಲ್ಲವೂ ಶ್ರೀಪತಿಯ ನಾಮಗಳು.

**'ಅನಸೂಯಾ ತಥೈವಾತ್ರೇರ್ಜಜ್ಞೇ ಪುತ್ರಾನಕಲ್ಮಷಾನ್ ।**
**ದತ್ತಂ ದೂರ್ವಾಸಸಂ ಸೋಮಮಾತ್ಮೇಶಬ್ರಹ್ಮಸಂಭವಾನ್' ॥ ೧೩ ॥**

**ಇತಿ ಭಾಗವತೇ ಚೈವ ತಸ್ಮಾದಾತ್ಮಾ ಜನಾರ್ದನಃ ॥ ೧೪ ॥**

ತಥೈವ=ಅದರಂತೆಯೇ ಅನಸೂಯಾ=ಅನಸೂಯಾದೇವಿಯು ಅತ್ರೇಃ=ಅತ್ರಿ ಋಷಿಯಿಂದ ಅಕಲ್ಮಷಾನ್=ದೋಷರಹಿತರಾದ ಆತ್ಮೇಶಬ್ರಹ್ಮ ಸಂಬವಾನ್=ವಿಷ್ಣು–ರುದ್ರ–ಚತುರ್ಮುಖರಿಂದ ಹುಟ್ಟಿದ ದತ್ತಂ=ದತ್ತನನ್ನೂ (ದತ್ತಾತ್ರೇಯ) ದುರ್ವಾಸಸಂ=ದುರ್ವಾಸನನ್ನೂ ಸೋಮಂ=ಚಂದ್ರನನ್ನೂ ಪುತ್ರಾನ್=ಮಕ್ಕಳನ್ನಾಗಿ ಜಜ್ಞೇ (ಜನಯಾಮಾಸ)=ಪಡೆದಳು.

ಇತಿ=ಹೀಗೆ ಭಾಗವತೇ ಚೈವ=ಭಾಗಪತದಲ್ಲೂ ಇದೆ. ತಸ್ಮಾತ್=ಈ ಎಲ್ಲ ಆಧಾರಗಳಿಂದ ಆತ್ಮಾ=ಸೂತ್ರದಲ್ಲಿ ಆತ್ಮನೆಂದರೆ ಜನಾರ್ದನಃ= ನಾರಾಯಣನು.

ಭಾವಾರ್ಥ— ಭಾಗವತದಲ್ಲಿ ಈಶ–ಬ್ರಹ್ಮ ಶಬ್ದಗಳಿಂದ ರುದ್ರ,

ಚತುರ್ಮುಖರನ್ನು ಉಲ್ಲೇಖಿಸಿ ವಿಷ್ಣುವನ್ನು 'ಆತ್ಮಾ' ಎಂದೇ ಕರೆಯಲಾಗಿದೆ. ಇದರಿಂದ ಈಶಶಬ್ದವು ಹೇಗೆ ಲೋಕದಲ್ಲಿ ರುದ್ರವಾಚಕವೋ ಅದರಂತೆ ಆತ್ಮಶಬ್ದವು ಮುಖ್ಯವಾಗಿ ವಿಷ್ಣುವಾಚಕ ಎಂದು ತಿಳಿಯುತ್ತದೆ.

ಭಾಗವತಶ್ಲೋಕದಲ್ಲಿ ಸಂಭವಶಬ್ದಕ್ಕೆ 'ಸಹ ಭವಂತಿ – ಜೊತೆಯಲ್ಲಿ ಇದ್ದಾರೆ' ಎಂದರ್ಥ. ಮೂವರಲ್ಲಿ ಸೋಮನು(ಚಂದ್ರನು) ಸಾಕ್ಷಾತ್ ಬ್ರಹ್ಮನೇ ಅಲ್ಲ. ಬ್ರಹ್ಮನ ಅಂಶ ಸೋಮನೊಂದಿಗಿದೆ. ಬ್ರಹ್ಮದೇವನಿಗೆ ಅವತಾರವಿಲ್ಲ. ಇನ್ನಿಬ್ಬರಿಗೆ ಸಹಭವನ 'ಛತ್ರಿಣಃ ಯಾಂತಿ' ಎಂದಂತೆ ಉಪಚಾರ.

**ತಸ್ಮಾದುಪಾಸ್ಯೋ ವಿಷ್ಣುರಿತಿ ಜ್ಞಾತವ್ಯಃ ಸಜ್ಜನೈಃ ಸದಾ ।**
**ತಥೈವೋಪಾಸತೇ ಸಂತಸ್ತಥೈವೋಪದಿಶಂತಿ ಚ ॥ ೧೫ ॥**

ಸೂತ್ರಕ್ಕೆ ಹೀಗೆ ಅರ್ಥವಾಗುತ್ತದೆ— ತಸ್ಮಾತ್=ಆದ್ದರಿಂದ, (ಆತ್ಮಶಬ್ದವು ವಿಷ್ಣುವಾಚಕವಾದುದರಿಂದ) ಆತ್ಮಾ=ವಿಷ್ಣುವು ಆತ್ಮೇತಿ=ಸ್ವಾಮಿ ಎಂಬುದಾಗಿ ಸಜ್ಜನೈಃ=ಸುಜನರಿಂದ ಸದಾ=ಸರ್ವದಾ ಜ್ಞಾತವ್ಯಃ=ತಿಳಿಯಲ್ಪಡಬೇಕು. ಉಪಾಸ್ಯಃ=ಧ್ಯಾನಿಸಲ್ಪಡಬೇಕು.

ವಿಷ್ಣು ಆತ್ಮನೆಂದು ಉಪಾಸ್ಯ—ಎಂದು ಪ್ರತಿಜ್ಞಾವಾಕ್ಯ. ಇದಕ್ಕೆ ಹೇತು– ಸಂತಃ=ಸಜ್ಜನರು ತಥೈವ=ಅದೇರೀತಿಯಾಗಿ ಉಪಾಸತೇ=ಧ್ಯಾನಿಸುತ್ತಾರೆ, ಉಪದಿಶಂತಿ ಚ=ಮತ್ತೊಬ್ಬರಿಗೆ ಉಪದೇಶವನ್ನೂ ಮಾಡುತ್ತಾರೆ. (ಆದ್ದರಿಂದ ಎಲ್ಲರೂ ವಿಷ್ಣುವನ್ನು ಆತ್ಮನೆಂದೇ(ಸ್ವಾಮಿ ಎಂದೇ) ತಿಳಿದು ಧ್ಯಾನಿಸಬೇಕು.)

**ಆದಾನಾರ್ಥತ್ವತಶ್ಚಾಯಮಾತ್ಮಶಬ್ದಃ ಪತಿಂ ವದೇತ್ ।**
**ಸ್ವಾಮೀ ಮೇ ವಿಷ್ಣುರಿತ್ಯೇವ ನಿತ್ಯದೋಪಾಸ್ಯಮಂಜಸಾ ॥ ೧೬ ॥**

ಸೂತ್ರದಲ್ಲಿ ಆತ್ಮಶಬ್ದವನ್ನು ಆವೃತ್ತಿಮಾಡಿಕೊಳ್ಳಬೇಕು. ಒಂದು ಆತ್ಮಶಬ್ದಕ್ಕೆ ವಿಷ್ಣು ಎಂದರ್ಥ. ಇನ್ನೊಂದು ಆತ್ಮಶಬ್ದದ ಅರ್ಥ— ಅಯಂ ಆತ್ಮಶಬ್ದಃ=ಈ ಎರಡನೆಯ ಆತ್ಮಶಬ್ದವು ಆದಾನಾರ್ಥತ್ವತಃ=ಸ್ವೀಯತ್ವೇನ ಸ್ವೀಕರಿಸುತ್ತಾನೆ, ಎಂಬ ಅರ್ಥವುಳ್ಳದ್ದಾದ್ದರಿಂದ ಪತಿಂ ವದೇತ್=ಸ್ವಾಮಿ, ಎಂಬ ಅರ್ಥವನ್ನು ಹೇಳುತ್ತದೆ.

ಭಾವಾರ್ಥ— ಆತ್ಮಾ ಎಂಬ ಶಬ್ದವು ಆಙ್ ಎಂಬ ಉಪಸರ್ಗದಿಂದ ಕೂಡಿದ 'ದಾ' ಧಾತುವಿನಿಂದ ನಿಷ್ಪನ್ನವಾಗಿದೆ. ದದಾತಿ ಎಂದರೆ ಕೊಡುತ್ತಾನೆ, ಎಂದರ್ಥ. ಆ–ದದಾತಿ ಎಂದರೆ ಸ್ವೀಕರಿಸುತ್ತಾನೆ, ಎಂದರ್ಥ. ಭೃತ್ಯನನ್ನು ಸ್ವೀಕರಿಸುವವನು ಸ್ವಾಮಿ. ಹೀಗೆ ಆತ್ಮಶಬ್ದಕ್ಕೆ ಸ್ವಾಮೀ ಎಂದರ್ಥ.

ಒಟ್ಟಿನಲ್ಲಿ ಸೂತ್ರಾರ್ಥ— ಮೇ ಸ್ವಾಮೀ ವಿಷ್ಣುಃ ಇತ್ಯೇವ='ನನ್ನ ಸ್ವಾಮಿ ವಿಷ್ಣು' ಎಂದು ಅಂಜಸಾ=ಪರಮಾದರದಿಂದ ನಿತ್ಯದಾ=ಸರ್ವದಾ ಆತ್ಮಾ= ವಿಷ್ಣುವು ಉಪಾಸ್ಯಃ=ಧ್ಯಾನಿಸಲ್ಪಡಬೇಕು.

'ಆತ್ಮಾ ಆತ್ಮೇತಿ ಉಪಾಸ್ಯಃ' ಮೊದಲನೆಯ ಆತ್ಮಶಬ್ದಕ್ಕೆ ವಿಷ್ಣು ಎಂದರ್ಥ. ಎರಡನೆಯ ಆತ್ಮಶಬ್ದ ಯೌಗಿಕ. ಸ್ವಾಮೀ ಎಂದು ಅದಕ್ಕೆ ಅರ್ಥ.

**'ಸ್ವಾಮೀ ವಿಷ್ಣುರಿತಿ ಧ್ಯಾನಂ ವಿಶೇಷಣವಿಶೇಷ್ಯತಃ ।**
**ಕರ್ತವ್ಯಂ ಸರ್ವಥೈವೈತನ್ನ ಕಥಂಚನ ವಿಸ್ಮರೇತ್' ॥ ೧೭ ॥**

**ಇತಿ ಸತ್ತತ್ವವಚನಂ ಷಾಡ್ಗುಣ್ಯವಚನಂ ಪರಮ್ ।**
**'ಮಮ ಸ್ವಾಮೀ ಹರಿರ್ನಿತ್ಯಂ ಸರ್ವಸ್ಯ ಪತಿರೇವ ಚ ।**
**ಇತಿ ಧ್ಯೇಯಃ ಸರ್ವದೈವ ಭಗವಾನ್ ವಿಷ್ಣುರವ್ಯಯಃ' ॥ ೧೮ ॥**

ಆತ್ಮತ್ವೋಪಾಸನೆಯು ಅವಶ್ಯಕರ್ತವ್ಯ ಎನ್ನುವುದಕ್ಕೆ ಪ್ರಮಾಣವನ್ನು ಇಲ್ಲಿ ಹೇಳಲಾಗಿದೆ—''ವಿಷ್ಣುಃ ಸ್ವಾಮೀ''=ವಿಷ್ಣುವೇ ನನ್ನ ಸ್ವಾಮಿ, ಇತಿ ವಿಶೇಷಣವಿಶೇಷ್ಯತಃ=ಹೀಗೆ ವಿಶೇಷಣ-ವಿಶೇಷ್ಯಭಾವದಿಂದ ಧ್ಯಾನಂ= ಧ್ಯಾನವು ಕರ್ತವ್ಯಂ=ಮಾಡಲ್ಪಡಬೇಕು. ಏತತ್=ಈ ವಿಧದ ಧ್ಯಾನವು ಸರ್ವಥಾ=ಸರ್ವಾವಸ್ಥೆಯಲ್ಲೂ ಸರ್ವದಾ ಕರ್ತವ್ಯಂ=ಯಾವಾಗಲೂ ಮಾಡಲ್ಪಡಬೇಕು. ಕಥಂಚನ ನ ವಿಸ್ಮರೇತ್=ಯಾವುದೇ ರೀತಿಯಿಂದ ಮರೆಯಬಾರದು. ಇತಿ=ಈರೀತಿಯಾದ ಸತ್ತತ್ವವಚನಂ=ಸತ್ತತ್ವ ಎಂಬ ಗ್ರಂಥದ ಮಾತು. ಹಾಗೂ ಪರಂ=ಇನ್ನೊಂದು ಷಾಡ್ಗುಣ್ಯವಚನಂ= 'ಷಾಡ್ಗುಣ್ಯ' ಎಂಬ ಗ್ರಂಥದ ಮಾತೂ ಇದೆ—

'ಮಮ=ನನಗೆ ಸ್ವಾಮೀ ಹರಿಃ ನಿತ್ಯಂ=ಸರ್ವದಾ ಶ್ರೀಹರಿಯೇ

ಸ್ವಾಮಿಯಾಗಿರುತ್ತಾನೆ. ನನಗೆ ಮಾತ್ರವಲ್ಲದೆ, ಸರ್ವಸ್ಯ ಪತಿರೇವ ಚ=ಎಲ್ಲದಕ್ಕೂ ಅವನೇ ಒಡೆಯ. ಇತಿ ಅವ್ಯಯಃ ಭಗವಾನ್ ವಿಷ್ಣುಃ ಸರ್ವದಾ ಧ್ಯೇಯಃ=ಹೀಗೆ ನಾಶರಹಿತನಾದ, ಷಡ್ಗುಣಸಂಪನ್ನನಾದ ವಿಷ್ಣುವು ಸರ್ವಕಾಲದಲ್ಲೂ ಧ್ಯೇಯನಾಗಿದ್ದಾನೆ.'

**ಇಲ್ಲಿಗೆ ಆತ್ಮಾಧಿಕರಣ ಸಮಾಪ್ತವಾಯಿತು.**

## ನಪ್ರತಿಕಾಧಿಕರಣ

### 'ಓಂ ನ ಪ್ರತೀಕೇ ನಹಿ ಸಃ ಓಂ'

**ಪ್ರತೀಕವಿಷಯತ್ವೇನ ನ ಕಾರ್ಯಾ ವಿಷ್ಣುಭಾವನಾ ।**
**ಪ್ರತೀಕಂ ನೈವ ವಿಷ್ಣುರ್ಯನ್ಮಿಥ್ಯೋಪಾಸಾ ಹ್ಯನರ್ಥದಾ ॥ ೧೯ ॥**

''ಮನೋ ಬ್ರಹ್ಮೇತ್ಯುಪಾಸೀತ'' ಇತ್ಯಾದಿ ಉಪಾಸನಾವಿಧಾಯಕ ವಾಕ್ಯಗಳಲ್ಲಿ ಆಪಾತತಃ ತೋರುವಂತೆ ಪ್ರತೀಕವಿಷಯತ್ವೇನ ವಿಷ್ಣುಭಾವನಾ=ಮನ ಆದಿ ಪ್ರತೀಕವೇ ವಿಷ್ಣು ಎಂದು ಧ್ಯಾನವು ನ ಕಾರ್ಯಾ=ಮಾಡಲ್ಪಡಬಾರದು. ಯತ್=ಯಾವ ಕಾರಣದಿಂದ ಪ್ರತೀಕಂ ನೈವ ವಿಷ್ಣುಃ=ಮನಸ್ಸು ಮುಂತಾದ ಪ್ರತಿನಿಧಿಗಳೇ ವಿಷ್ಣು ಅಲ್ಲ. ಆದ್ದರಿಂದ ಮನಆದಿ ಪ್ರತೀಕಗಳೇ ಬ್ರಹ್ಮನೆಂದು ತಿಳಿಯುವುದು, ಧ್ಯಾನಿಸುವುದು ಮಿಥ್ಯೋಪಾಸನಾ. ಮಿಥ್ಯೋಪಾಸಾ ಹಿ ಅನರ್ಥದಾ=ಮಿಥ್ಯೋಪಾಸನೆಯು ಅನರ್ಥಕಾರಣ.

**ಭಾವಾರ್ಥ—** ಸೂತ್ರದಲ್ಲಿ 'ಪ್ರತೀಕೇ' ಎಂದು ಸಪ್ತಮೀವಿಭಕ್ತಿ ಇರುವುದರಿಂದ ಪ್ರತಿಮೆಯಲ್ಲಿ ಬ್ರಹ್ಮನೆಂದು ತಿಳಿಯಬಾರದು, ಎನ್ನುವ ಅರ್ಥಬರುತ್ತದೆ. ಆದರೆ, ಆ ತಿಳುವಳಿಕೆಯು ಯಥಾರ್ಥವಾದುದರಿಂದ ನಿಷೇಧಮಾಡುವುದು ಉಚಿತವಲ್ಲ. ಆದ್ದರಿಂದ ಪ್ರತೀಕೇ ಎಂಬ ಸಪ್ತಮೀ ವಿಷಯಸಪ್ತಮೀ. ಪ್ರತೀಕವಿಷಯಕವಾದ ವಿಷ್ಣುಭಾವನೆ ಅಂದರೆ, ಪ್ರತೀಕವೇ ಬ್ರಹ್ಮ, ಎಂಬ ಉಪಾಸನೆಯನ್ನು ಸೂತ್ರದಲ್ಲಿ ನಿಷೇಧ ಮಾಡ ಲಾಗಿದೆ—ಎಂದು ಅನುವ್ಯಾಖ್ಯಾನದಲ್ಲಿ ತಿಳಿಸಲಾಗಿದೆ.

'ಯೋऽನ್ಯಥಾ ಸಂತಮಾತ್ಮೇಶಮನ್ಯಥಾ ಪ್ರತಿಪದ್ಯತೇ ।
ಕಿಂ ತೇನ ನ ಕೃತಂ ಪಾಪಂ ಚೋರೇಣಾತ್ಮಾಪಹಾರಿಣಾ ॥ ೨೦ ॥

'ಯೋऽನ್ಯಥಾ ಸಂತಮಾತ್ಮಾನಮನ್ಯಥಾ ಪ್ರತಿಪದ್ಯತೇ ।
ಕಿಂ ತೇನ ನ ಕೃತಂ ಪಾಪಂ ಚೋರೇಣೇಶಾ(ಣಾತ್ಮಾ) ಪಹಾರಿಣಾ ॥೨೧

ಯೋऽನ್ಯಥೈವ ಸ್ಥಿತಂ ವಿಷ್ಣುಮನ್ಯಥಾ ಪ್ರತಿಪದ್ಯತೇ ।
ಕಿಂ ತೇನ ನ ಕೃತಂ ಪಾಪಂ ಚೋರೇಣ ಬ್ರಹ್ಮಹಾರಿಣಾ ॥ ೨೨ ॥

ಈ ಎಲ್ಲ ಪ್ರಮಾಣಗಳಿಗೆ ಒಂದೇ ಅರ್ಥ— ಪರಮಾತ್ಮ ಇರುವುದು ಒಂದುರೀತಿ, ಸಾಧಕನು ತಿಳಿಯುವುದು ಇನ್ನೊಂದು ರೀತಿಯಾದರೆ ಅವನು ಆತ್ಮಾಪಹಾರಕನಾದ ಕಳ್ಳನೆನಿಸುತ್ತಾನೆ. ಅಂತಹವನಿಂದ ಯಾವ ಪಾಪ ತಾನೇ ಮಾಡಲ್ಪಟ್ಟಿಲ್ಲ. ಎಲ್ಲ ಪಾಪಗಳನ್ನೂ ಅವನು ಮಾಡಿದಂತೆ. ಒಟ್ಟಿನಲ್ಲಿ ಅನ್ಯಥೋಪಾಸನೆಯು ಅನರ್ಥಕರ, ಎಂದರ್ಥ.

'ಸ್ವಾತ್ಮಾನಂ ಪ್ರತಿಮಾಂ ವಾಪಿ ದೇವತಾಂತರಮೇವ ವಾ ।
ಚೇತನಾಚೇತನಂ ವಾऽನ್ಯದ್ ಧ್ಯಾಯೇದ್ ಯಃ ಕೇಶವಸ್ತ್ವಿತಿ ।
ಕಿಂ ತೇನ ನ ಕೃತಂ ಪಾಪಂ ಚೋರೇಣೇಶಾಪಹಾರಿಣಾ' ॥ ೨೩ ॥

'ತನ್ನನ್ನೇ ಆಗಲಿ, ಪ್ರತಿಮೆಯನ್ನಾಗಲೀ, ಇತರ ದೇವತೆಗಳನ್ನಾಗಲೀ, ಯಾವುದೇ ಚೇತನ ಜಡಗಳನ್ನಾಗಲೀ ಯಾರು ವಿಷ್ಣುವೆಂದು ಧ್ಯಾನಿಸುವನೋ ಅಂತಹವನು ಈಶನನ್ನು ಅಪಹರಿಸಿದ ಚೋರ. ಅಂತಹವನು ಯಾವ ಪಾಪವನ್ನು ತಾನೇ ಮಾಡಿಲ್ಲ.''

'ಯೋऽನ್ಯದ್ ವಿಷ್ಣುರಿತಿ ಧ್ಯಾಯೇಜ್ಜಾನೀಯಾದ್ ವಾ ಹರಿಂ ತಥಾ ।
ಅಂಧೇತಮಸಿ ಮಜ್ಜೇತ್ ಸ ಯತ್ರ ನೈವೋತ್ಥಿತಿಃ ಕ್ವಚಿತ್' ॥ ೨೪ ॥

'ಯೋऽನ್ಯದ್ ವಿಷ್ಣುರಿತಿ ಧ್ಯಾಯೇದ್ ವಿಷ್ಣುರನ್ಯದಿತಿ ಸ್ಮ ವಾ ।
ಅನ್ಯಥಾ ಧ್ಯಾನದೋಷೇಣ ಸೋऽಂಧೇ(ಮಹಾ) ತಮಸಿ ಮಜ್ಜತಿ'॥೨೫॥

'ಯೋऽನ್ಯದ್ ವಿಷ್ಣುರಿತಿ ಧ್ಯಾಯೇದ್ ವಿಷ್ಣುರನ್ಯದಿತಿಸ್ಮ ವಾ ।
ಮಹಾತಮಸಿ ಮಗ್ನಸ್ಯ ತಸ್ಯ ನೈವೋತ್ಥಿತಿಃ ಕ್ವಚಿತ್' ॥ ೨೬ ॥

'ಭಗವಂತನನ್ನು ಅನ್ಯಥಾ ಧ್ಯಾನಮಾಡಿದರೆ ಮತ್ತೆ ತಿರುಗಿ ಬಾರದ ತಮಸ್ಸಾಗುತ್ತದೆ. '

'ಯತ್ಕಿಂಚಿದನ್ಯಥಾ ಸಂಸ್ಥಮನ್ಯಥಾ ಧ್ಯಾತಮಂಜಸಾ ।
ಧ್ಯಾತುರ್ಮಹಾದೋಷಕರಂ ಕಿಮು ಸರ್ವೇಶ್ವರೋ ಹರಿಃ' ॥ ೨೭ ॥

'ಯತ್ಕಿಂಚಿದನ್ಯಥಾ ಸಂಸ್ಥಮನ್ಯಥಾ ಧ್ಯಾ(ಜ್ಞಾ)ತಮಂಜಸಾ ।
ಮಹಾದೋಷಕರಂ ವಿಷ್ಣುಃ ಕಿಮು ಸರ್ವೇಶ್ವರೇಶ್ವರಃ' ॥ ೨೮ ॥

'ಯತ್ಕಿಂಚಿದನ್ಯಥಾ ಸಂಸ್ಥಮನ್ಯಥಾ ಜ್ಞಾತಮಂಜಸಾ ।
ಅನರ್ಥಕಾರಣಂ ಲೋಕೇ ಕಿಮು ಸರ್ವೇಶ್ವರೇಶ್ವರಃ' ॥ ೨೯ ॥

'ನ ಕಿಂಚಿದನ್ಯಥಾ ಜ್ಞೇಯಂ ಧ್ಯೇಯಂ ವಾ ತೇನ ಕುತ್ರಚಿತ್।
ಕಿಮು ಸರ್ವೋತ್ತಮೋ ವಿಷ್ಣುರ್ಜ್ಞೇಯೋ ನೀಚತಯಾ ಕ್ವಚಿತ್ ॥೩೦॥

ತಸ್ಮಾದ್ ವಸ್ತು ಯಥಾರೂಪಂ ಜ್ಞೇಯಂ ಧ್ಯೇಯಂ ಚ ಸರ್ವದಾ ।
ಕಾರಣಂ ಪುರುಷಾರ್ಥಸ್ಯ ನಾನ್ಯಥಾ ಭವತಿ ಕ್ವಚಿತ್' ॥ ೩೧ ॥

ಇತಿ ಶ್ರುತಿಪುರಾಣೋಕ್ತಿಬಲತೋ ನ ಪ್ರತೀಕತಾ ।
ಧ್ಯೇಯಾ ವಿಷ್ಣೋಃ ಕ್ವಚಿದ್ ಯಸ್ಮಾನ್ಮಿಥ್ಯಾಜ್ಞಾನಮನರ್ಥದಮ್ ॥ ೩೨ ॥

ಇತ್ಯಭಿಪ್ರೇತ್ಯ ನಹಿ ಸ ಇತ್ಯಾಹ ಭಗವಾನ್ ಪ್ರಭುಃ ।
ಪ್ರತೀಕಸಂಸ್ಥಿತತ್ವೇನ ಧ್ಯೇಯೋ ವಿಷ್ಣುರ್ನಚಾನ್ಯಥಾ ॥ ೩೩ ॥

ಈ ಹಿಂದೆ ಹೇಳಿರುವ ಶ್ರುತಿ–ಪುರಾಣಗಳ ಆಧಾರದಿಂದ ವಿಷ್ಣೋಃ ಪ್ರತೀಕತಾ ನ ಧ್ಯೇಯಾ=ವಿಷ್ಣುವೇ ಪ್ರತೀಕವೆಂದು ಧ್ಯಾನಿಸಬಾರದು. ಇಂತಹ

ಮಿಥ್ಯಾಜ್ಞಾನವು ಅನರ್ಥಕಾರಣ. ಇತ್ಯಭಿಪ್ರೇತ್ಯ=ಹೀಗೆ ಅಭಿಪ್ರಾಯಪಟ್ಟು ಭಗವಾನ್ ಪ್ರಭುಃ=ಭಗವಾನ್ ವ್ಯಾಸರು ಸೂತ್ರದಲ್ಲಿ 'ನ ಹಿ ಸಃ' ಎಂದಿರುತ್ತಾರೆ. (ಸಃ=ವಿಷ್ಣುವು ನ ಹಿ=ಪ್ರತಿಮೆಯಲ್ಲ.)

ಆದ್ದರಿಂದ ''ಮನೋ ಬ್ರಹ್ಮೇತ್ಯುಪಾಸೀತ'' ಇತ್ಯಾದಿಶ್ರುತಿಗಳಿಗೆ ಮನಸ್ಸೇ ಬ್ರಹ್ಮನೆಂದು ಉಪಾಸನೆ ಮಾಡಬೇಕು, ಎಂದು ಅರ್ಥವಲ್ಲ. ಪ್ರತೀಕಸಂಸ್ಥಿತತ್ವೇನ= ಮನಸ್ಸು ಮೊದಲಾದ ಪ್ರತೀಕಗಳಲ್ಲಿ ಇದ್ದಾನೆ ಎಂಬುದಾಗಿ ವಿಷ್ಣುಃ ಧ್ಯೇಯಃ=ವಿಷ್ಣುವು ಧ್ಯಾನಿಸಲ್ಪಡಬೇಕು. ನಚಾನ್ಯಥಾ=ಪ್ರತೀಕವೇ ವಿಷ್ಣು ಎಂದು ಧ್ಯಾನಮಾಡಬಾರದು.

ನ ಪ್ರತೀಕಾಧಿಕರಣ ಸಮಾಪ್ತವಾಯಿತು.

# ಬ್ರಹ್ಮದೃಷ್ಟ್ಯಧಿಕರಣ

## 'ಓಂ ಬ್ರಹ್ಮದೃಷ್ಟಿರುತ್ಕರ್ಷಾತ್ ಓಂ'

**ಬ್ರಹ್ಮೇತಿ ಚ ಸದಾ ಧ್ಯೇಯೋ ಭಗವಾನ್ ವಿಷ್ಣುರಂಜಸಾ ।**
**ಉತ್ಕೃಷ್ಟೋ ಬ್ರಹ್ಮಶಬ್ದಾರ್ಥಃ ಪೂರ್ಣತ್ವಂ ಬ್ರಹ್ಮತಾ ಯತಃ ॥ ೩೪ ॥**

ಭಗವಾನ್ ವಿಷ್ಣುಃ=ಭಗವಂತನಾದ ವಿಷ್ಣುವು ಸದಾ ಅಂಜಸಾ= ಸರ್ವದಾ ಭ್ರಮೆ ಇಲ್ಲದೆ ಬ್ರಹ್ಮೇತಿ ಧ್ಯೇಯಃ=ಬ್ರಹ್ಮನೆಂದು ಧ್ಯಾನಿಸಲ್ಪಡಬೇಕು.

**ಭಾವಾರ್ಥ—** ಹಿಂದಿನ ಸೂತ್ರದಿಂದ ಆತ್ಮಾ ಎಂಬ ಪ್ರಥಮಾಂತಪದವನ್ನು ಸಪ್ತಮ್ಯಂತವಾಗಿ ಈ ಸೂತ್ರದಲ್ಲಿ ಸೇರಿಸಿಕೊಳ್ಳಬೇಕು. ಪರಮಾತ್ಮನಲ್ಲಿ ಬ್ರಹ್ಮದೃಷ್ಟಿಯನ್ನು ಮಾಡಬೇಕು, ಎಂದು ಸೂತ್ರಾರ್ಥ. ಸೂತ್ರದಲ್ಲಿರುವ ಉತ್ಕರ್ಷಾತ್ ಶಬ್ದದ ಭಾವಾರ್ಥ— ಬ್ರಹ್ಮಶಬ್ದಾರ್ಥಃ ಉತ್ಕೃಷ್ಟಃ=ಬ್ರಹ್ಮ ಶಬ್ದಕ್ಕೆ ಉತ್ಕೃಷ್ಟ ಎಂದರ್ಥ. ಉತ್ಕರ್ಷ ಎಂದರೆ ಪೂರ್ಣತ್ವ ಎಂದರ್ಥ. ಪೂರ್ಣತ್ವಂ ಬ್ರಹ್ಮತಾ ಯತಃ=ಯಾವ ಕಾರಣದಿಂದ ಬ್ರಹ್ಮಶಬ್ದದ ಪ್ರವೃತ್ತಿನಿಮಿತ್ತ ಪೂರ್ಣತೆ ಅಂದರೆ ಉತ್ಕರ್ಷ. ಆದ್ದರಿಂದ ಬ್ರಹ್ಮನೆಂದರೆ ಉತ್ಕೃಷ್ಟ. ಸರ್ವದಾ ಪರಮಾತ್ಮನನ್ನು ಬ್ರಹ್ಮ=ಪೂರ್ಣ ಎಂದು ಧ್ಯಾನಿಸಬೇಕು.

**'ಆಧಿವ್ಯಾಧಿನಿಮಿತ್ತೇನ ವಿಕ್ಷಿಪ್ತಮನಸೋಽಪಿ ತು ।**
**ಧ್ಯೇಯೈವ ಬ್ರಹ್ಮತಾ ನಿತ್ಯಂ ವಿಷ್ಣೋರ್ಭಕ್ತ್ಯಾ ನಿರಂತರಮ್ ॥'**
**ಇತಿ ಪ್ರಕಾಶಿಕಾಯಾಂ ಚ ವಚನಂ ವಿಷ್ಣುನೇರಿತಮ್ ॥ ೩೫ ॥**

'ಆಧಿ–ವ್ಯಾಧಿನಿಮಿತ್ತೇನ=ಮಾನಸ ಅಥವಾ ಶಾರೀರಿಕ ತೊಂದರೆ ಗಳಿಂದಾಗಿ ವಿಕ್ಷಿಪ್ತಮನಸೋಽಪಿ=ಮನಸ್ಸು ವಿಕ್ಷಿಪ್ತವಾಗಿದ್ದವನಾದರೂ ಅಂತಹವನಿಂದಲೂ ನಿತ್ಯಂ=ಪ್ರತಿದಿನವೂ ನಿರಂತರಂ=ಸತತವಾಗಿ ಭಕ್ತ್ಯಾ= ಭಕ್ತಿಯಿಂದ ವಿಷ್ಣೋಃ=ವಿಷ್ಣುವಿಗೆ ಬ್ರಹ್ಮತಾ=ಪೂರ್ಣತ್ವವು ಧ್ಯೇಯೈವ= ಧ್ಯಾನಿಸಲ್ಪಡಲೇಬೇಕು.''

ಇತಿ=ಹೀಗೆಂದು ವಿಷ್ಣುನಾ ಈರಿತಂ=ವಿಷ್ಣುವಿನಿಂದಲೇ ಹೇಳಲ್ಪಟ್ಟ ಪ್ರಕಾಶಿಕಾಯಾಂ ವಚನಂ=ಪ್ರಕಾಶಿಕಾಗ್ರಂಥದಲ್ಲಿರುವ ಮಾತು.

**ಭಾವಾರ್ಥ**— ಜೀವನದಲ್ಲಿ ಏನೇ ತೊಂದರೆಗಳು ಬಂದರೂ ಸಾಧಕನು ಬ್ರಹ್ಮತ್ವೋಪಾಸನೆಯನ್ನು ಬಿಡಬಾರದು. ಸರ್ವದಾ ವಿಷ್ಣುವು ಗುಣಪೂರ್ಣ, ಎನ್ನುವ ಸ್ಮರಣೆ–ಧ್ಯಾನಗಳನ್ನು ಮಾಡುತ್ತಿರಬೇಕು.

**ಪರಮತ ವಿಮರ್ಶೆ**

## ಓಂ ಆತ್ಮೇತಿ ತೂಪಗಚ್ಛಂತಿ ಗ್ರಾಹಯಂತಿ ಚ ಓಂ

ಈ ಹಿಂದಿನ ಮೂರು ಅಧಿಕರಣಗಳಿಗೆ ಅದ್ವೈತಭಾಷ್ಯದಲ್ಲಿ ಹೇಳಿರುವ ಅರ್ಥವನ್ನು ಮುಂದೆ ವಿಮರ್ಶೆ ಮಾಡಲಾಗಿದೆ. ಅದ್ವೈತ ಭಾಷ್ಯದಲ್ಲಿ 'ಆತ್ಮೇತಿ ತೂಪಗಚ್ಛಂತಿ ಗ್ರಾಹಯಂತಿ ಚ' ಎಂಬ ಸೂತ್ರದ ಪೂರ್ವಪಕ್ಷಸಿದ್ಧಾಂತಗಳು ಹೀಗಿವೆ—

ಬ್ರಹ್ಮನನ್ನು 'ನಾನೇ ಬ್ರಹ್ಮ' ಎಂದು ಅಭೇದೇನ ತಿಳಿಯಬೇಕೋ ಅಥವಾ 'ನನಗಿಂತ ಭಿನ್ನನಾದವನು' ಎಂದು ತಿಳಿಯಬೇಕೋ ಎಂದು ಸಂದೇಹ. ಭಿನ್ನನೆಂದೇ ತಿಳಿಯಬೇಕು ಎಂದು ಪೂರ್ವಪಕ್ಷ. ಏಕೆಂದರೆ, ಬ್ರಹ್ಮನು ಅಪಹತಪಾಪ–ಪಾಪರಹಿತನು. ಜೀವನು ಪಾಪಿ. ಅವನು ನಿರ್ದುಃಖ, ಜೀವ ದುಃಖೀ. ಹೀಗೆ ವಿರುದ್ಧಧರ್ಮಗಳು ಇರುವುದರಿಂದ ಜೀವ–ಬ್ರಹ್ಮರಿಗೆ ಅಭೇದವಿರಲು ಸಾಧ್ಯವಿಲ್ಲ.

ಸಿದ್ಧಾಂತ— ಬ್ರಹ್ಮನನ್ನು ಜೀವಾಭಿನ್ನನೆಂದೇ ಉಪಾಸನೆ ಮಾಡಬೇಕು. ಏಕೆಂದರೆ, 'ತ್ವಂ ವಾ ಅಹಮಸ್ಮಿ ದೇವತೇ ಅಹಂ ವೈ ತ್ವಮಸಿ ದೇವತೇ' ಹೀಗೆ ಜಾಬಾಲರು ಮತ್ತು ಇನ್ನೂ ಅನೇಕಜ್ಞಾನಿಗಳು ಆತ್ಮೇತಿ ತು ಉಪಗಚ್ಛಂತಿ=ತಾವೇ ಬ್ರಹ್ಮರೆಂದು ತಿಳಿಯುತ್ತಾರೆ. ಇತರರಿಗೂ ಗ್ರಾಹಯಂತಿ='ತತ್ ತ್ವಮಸಿ' ಎಂದು ಅಭೇದವನ್ನೇ ಉಪದೇಶಿಸುತ್ತಾರೆ. ಆದ್ದರಿಂದ ಜೀವರು 'ಅಹಂ ಬ್ರಹ್ಮ' ಎಂದೇ ಉಪಾಸನೆ ಮಾಡಬೇಕು. ಜೀವನಲ್ಲಿ ಕಾಣುವ ದುಃಖಾದಿಗಳೆಲ್ಲವೂ ಮಿಥ್ಯಾ, ವಾಸ್ತವವಾಗಿ ಅವನೂ ಸ್ವಭಾವತಃ ಬ್ರಹ್ಮನಂತೆಯೇ ಪಾಪಾದಿದೋಷರಹಿತನಾಗಿದ್ದಾನೆ.

ಇದು, ಪರಭಾಷ್ಯದ ಸೂತ್ರವ್ಯಾಖ್ಯಾನ. ಇದನ್ನು ಅನುವ್ಯಾಖ್ಯಾನದಲ್ಲಿ ನಿರಾಕರಿಸಲಾಗಿದೆ.

**ನಾತ್ಮೇತಿ ಸೂತ್ರಮೀಶಸ್ಯ ಜೀವತ್ವಪ್ರತಿಪಾದಕಮ್ ।**
**ಆತ್ಮಶಬ್ದಂ ಯತೋ ಹೇತುಂ ಕೃತ್ವಾ ಜೀವಂ ನ್ಯವಾರಯತ್ ।**
**ಸ್ವಶಬ್ದಾತ್ ಪ್ರಾಣಭೃಚ್ಚೈವ ನೋಕ್ತ ಇತ್ಯೇವ ವೇದರಾಟ್ ॥ ೩೬॥**

**ಯದ್ಯಾತ್ಮಶಬ್ದೋ ಜೀವೇಽಪಿ ಕಥಂ ಸ ವಿನಿವಾರಯೇತ್ ।**
**ಆತ್ಮಶಬ್ದೋದಿತಸ್ತಸ್ಮಾದ್ ವಿಷ್ಣುರೇವ ನಚಾಪರಃ ॥ ೩೭ ॥**

ಆತ್ಮೇತಿ ಸೂತ್ರಂ='ಆತ್ಮೇತಿ ತೂಪಗಚ್ಛಂತಿ' ಎಂಬ ಸೂತ್ರವು ಈಶಸ್ಯ= ಬ್ರಹ್ಮನಿಗೆ ಜೀವತ್ವಪ್ರತಿಪಾದಕಂ ನ=ಜೀವತ್ವವನ್ನು ಪ್ರತಿಪಾದನೆ ಮಾಡುವ ಸೂತ್ರವಲ್ಲ. ಆ ಸೂತ್ರವು 'ಬ್ರಹ್ಮನೇ ಜೀವ' ಎಂದು ಹೇಳುತ್ತಿಲ್ಲ. ಯತಃ=ಯಾವ ಕಾರಣದಿಂದ ವೇದರಾಟ್=ಶ್ರೀವೇದವ್ಯಾಸರು ಆತ್ಮಶಬ್ದಂ= ಆತ್ಮ ಎಂಬ ಶಬ್ದವನ್ನು ಹೇತುಂ=ಕಾರಣವನ್ನಾಗಿ ಕೃತ್ವಾ=ಮಾಡಿ ಸ್ವಶಬ್ದಾತ್= 'ದ್ಯುಭ್ವಾದ್ಯಾಯತನಂ ಸ್ವಶಬ್ದಾತ್' ಎಂಬ ಸೂತ್ರದಲ್ಲಿ 'ಸ್ವಶಬ್ದಾತ್=ತನ್ನದಾದ ಆತ್ಮಶಬ್ದದಿಂದಾಗಿ ಸ್ವರ್ಗಾದಿಲೋಕಗಳಲ್ಲಿರುವವನಾಗಿ ಪ್ರಾಣಭೃಚ್ಚ ನೋಕ್ತಃ= ಜೀವನೂ ಹೇಳಲ್ಪಟ್ಟಿಲ್ಲ.' ಇತ್ಯೇವ=ಹೀಗೆಂದೇ ಜೀವಂ=ಜೀವನನ್ನು ನ್ಯವಾರಯತ್=ನಿರಾಕರಿಸಿದ್ದಾರೆ.

ಪ್ರಥಮಾಧ್ಯಾಯದ ತೃತೀಯಪಾದದ ಮೊದಲ ಸೂತ್ರ— ದ್ಯುಭ್ವಾದ್ಯಾಯತನಂ ಸ್ವಶಬ್ದಾತ್, ಎಂದು. 'ಯಸ್ಮಿನ್ ದ್ಯೌಃ ಪೃಥಿವೀ ಚಾಂತರಿಕ್ಷಂ ಚ' ಎಂಬ ಉಪನಿಷದ್ವಾಕ್ಯದಲ್ಲಿ (ಮುಂ.2.2.5) ಸ್ವರ್ಗಾದಿ ಲೋಕಗಳಿಗೆ ಆಧಾರನಾಗಿ ಹೇಳಲ್ಪಟ್ಟವರು ಪ್ರಕೃತಿ–ಜೀವಾದಿಗಳು ಎಂದು ಪೂರ್ವಪಕ್ಷ. ಇದನ್ನು ಸೂತ್ರಕಾರರು 'ಸ್ವಶಬ್ದಾತ್' ಎಂಬ ಹೇತುವಿನಿಂದ ನಿರಾಕರಿಸಿದ್ದಾರೆ. ಸ್ವಶಬ್ದ ಎಂದರೆ ಆತ್ಮಶಬ್ದ. ಸೂತ್ರಕಾರರು ಇಲ್ಲಿ ಆತ್ಮಶಬ್ದವು ಬ್ರಹ್ಮನ ಶಬ್ದ ಎಂದಿದ್ದಾರೆ. ಆ ಉಪನಿಷತ್ತಿನಲ್ಲಿ 'ತಮೇವೈಕಂ ಜಾನಥ ಆತ್ಮಾನಂ' ಎಂದು ಸ್ವರ್ಗಾದಿಲೋಕಾಧಾರನಾದವನು ಆತ್ಮ ಎನ್ನಲಾಗಿದೆ. 'ಆತ್ಮ' ಎಂಬ ಹೆಸರು ಪ್ರಧಾನವಾಗಿ ಬ್ರಹ್ಮನದೇ. ಆ ನಾಮವನ್ನು ಹೇಳಿರುವುದರಿಂದ ಜೀವನು (ಪ್ರಾಣಭೃತ್) ಸ್ವರ್ಗಾದಿಆಧಾರನಲ್ಲ. ಹೀಗೆ ಸೂತ್ರಕಾರರೇ ಜೀವನು ಆತ್ಮಶಬ್ದದ ಮುಖ್ಯಾರ್ಥವಲ್ಲ, ಎಂದಿರುತ್ತಾರೆ. ಹೀಗಿದ್ದ ಮೇಲೆ 'ಆತ್ಮೇತಿ ತೂಪಗಚ್ಛಂತಿ' ಎಂಬ ಸೂತ್ರದಲ್ಲಿ ಆತ್ಮ ಎಂದರೆ 'ಜೀವ' ಎನ್ನುವ ಅರ್ಥವು ಸೂತ್ರಕಾರರಿಗೆ ಅಭಿಮತವಲ್ಲ. ಆದ್ದರಿಂದ 'ಜ್ಞಾನಿಗಳು ಬ್ರಹ್ಮನನ್ನು ಆತ್ಮೇತಿ=ಜೀವನೆಂದು ಉಪಗಚ್ಛಂತಿ=ತಿಳಿಯುತ್ತಾರೆ' ಎಂದು ಪ್ರಕೃತಸೂತ್ರಕ್ಕೆ ಅರ್ಥವನ್ನು ಮಾಡಬಾರದು.

ಯದಿ=ಒಂದುವೇಳೆ ಆತ್ಮಶಬ್ದಃ=ಆತ್ಮ ಎಂಬ ಹೆಸರು ಜೀವೇಽಪಿ= ಜೀವನಲ್ಲೂ ಇರುವುದಾದಲ್ಲಿ ಸಃ=ಆ ಆತ್ಮಶಬ್ದವು ಕಥಂ ವಿನಿವಾರಯೇತ್= ಹೇಗೆ ತಾನೇ ಜೀವನನ್ನು ನಿರಾಕರಿಸೀತು? ತಸ್ಮಾತ್=ಆದ್ದರಿಂದ ಆತ್ಮಶಬ್ದೋದಿತಃ=ಆತ್ಮ, ಎಂಬ ನಾಮದಿಂದ ಹೇಳಲ್ಪಡುವವನು ವಿಷ್ಣುರೇವ= ವಿಷ್ಣುವೇ ಅಪರಃ ನ=ಜೀವನಲ್ಲ.

**'ಆತ್ಮಬ್ರಹ್ಮಾದಯಃ ಶಬ್ದಾಸ್ತಮೃತೇ ವಿಷ್ಣುಮವ್ಯಯಮ್ ।**
**ನ ವದಂತಿ ಯತೋ ನಾಪ್ತಾ ಕ್ವಾಪಿ ತೈರ್ಗುಣಪೂರ್ಣತಾ ।**
**ನಾರಾಯಣಾಧ್ಯಾತ್ಮಗತಮಿತಿ ಯದ್ ವೈಷ್ಣವಂ ವಚಃ ॥ ೩೮ ॥**

ಆತ್ಮಶಬ್ದಕ್ಕೆ ವಿಷ್ಣುವೇ ಮುಖ್ಯಾರ್ಥ, ಎನ್ನುವುದಕ್ಕೆ ಪ್ರಮಾಣವೂ ಇದೆ— 'ಆತ್ಮ ಬ್ರಹ್ಮ ಮೊದಲಾದ ಶಬ್ದಗಳು ತಂ ಅವ್ಯಯಂ ವಿಷ್ಣುಂ ಋತೇ=

ನಾಶರಹಿತನಾದ ಆ ವಿಷ್ಣುವನ್ನು ಬಿಟ್ಟು ಬೇರೆಯವರನ್ನು ನ ವದಂತಿ= ಹೇಳುವುದಿಲ್ಲ. ಯತಃ=ಏಕೆಂದರೆ, ತೈಃ ಗುಣಪೂರ್ಣತಾ ನೈವ ಆಪ್ತಾ=ಇತರ ಯಾರಿಂದಲೂ ಗುಣಪೂರ್ಣತ್ವವೂ ಹೊಂದಲ್ಪಟ್ಟಿಲ್ಲ. ಬೇರೆ ಯಾರೂ ಗುಣಪೂರ್ಣರಲ್ಲವಾದ ಕಾರಣ, ಆತ್ಮ ಎಂಬ ಹೆಸರು ವಿಷ್ಣುವನ್ನು ಬಿಟ್ಟು ಇನ್ನಾರಿಗೂ ಸಲ್ಲುವುದಿಲ್ಲ.'

ಇತಿ=ಹೀಗೆಂದು ನಾರಾಯಣಾಧ್ಯಾತ್ಮಗತಂ ಯತ್ ವೈಷ್ಣವಂ ವಚಃ= ವಿಷ್ಣುಪ್ರಣೀತವಾದ 'ನಾರಾಯಣಾಧ್ಯಾತ್ಮ' ಗ್ರಂಥದಲ್ಲಿರುವ ಮಾತು.

**ಯದಿ ಜೀವೇಶಯೋರ್ವೇದಪತಿರೈಕ್ಯಂ ಚ ಮನ್ಯತೇ ।**
**ಆತ್ಮಶಬ್ದಂ ಕಥಂ ತಸ್ಮಾನ್ನಿವಾರಯತಿ ಯುಕ್ತಿತಃ ॥ ೩೯ ॥**

ವೇದಪತಿಃ=ಶ್ರೀವೇದವ್ಯಾಸರು ಜೀವೇಶಯೋಃ ಐಕ್ಯಂ ಯದಿ ಮನ್ಯತೇ=ಜೀವ-ಬ್ರಹ್ಮರಿಗೆ ಅಭೇದವನ್ನು ತಿಳಿಯುವವರಾದರೆ ಆಗ ಆತ್ಮಶಬ್ದಂ=ಆತ್ಮ ಎಂಬ ಶಬ್ದವನ್ನು ತಸ್ಮಾತ್=ಜೀವನಿಂದ ಯುಕ್ತಿತಃ= ಗುಣಪೂರ್ಣತ್ವಯುಕ್ತಿಯಿಂದ ಕಥಂ ನಿವಾರಯತಿ=ಹೇಗೆ ತಾನೇ ನಿರಾಕರಿಸಿಯಾರು?

**ಭಾವಾರ್ಥ**— ಈ ಸೂತ್ರದಲ್ಲಿ ಸೂತ್ರಕಾರರು ಜೀವ-ಬ್ರಹ್ಮರಿಗೆ ಐಕ್ಯವನ್ನು ಹೇಳಿದ್ದರೆ ಆಗ ಬ್ರಹ್ಮವಾಚಕವಾದ ಆತ್ಮ ಎಂಬ ನಾಮವು ಜೀವನಿಗೂ ಇರಬೇಕಾಗುತ್ತದೆ. ಹೀಗಿದ್ದಲ್ಲಿ ಹಿಂದೆ ಆತ್ಮಶಬ್ದದಿಂದ ಜೀವನನ್ನು ನಿರಾಕರಿಸುತ್ತಿರಲಿಲ್ಲ. ಉಪನಿಷತ್ತು ದ್ಯುಭ್ವಾದ್ಯಾಯತನನನ್ನು ಆತ್ಮಾ ಎಂದಿರುವುದರಿಂದ ಜೀವನು ದ್ಯುಭ್ವಾದ್ಯಾಯತನನಲ್ಲ, ಎಂದು ಸೂತ್ರ ಕಾರರು ನಿರಾಕರಿಸಿರುತ್ತಾರೆ. ಇದರಿಂದ ಜೀವನು ಆತ್ಮಶಬ್ದವಾಚ್ಯನಲ್ಲ, ಎಂದು ಸೂತ್ರಕಾರರು ಹೇಳಿದಂತಾಗಿದೆ. ಹೀಗೆ ಹೇಳಿರುವ ಸೂತ್ರಕಾರರು ಈ ಸೂತ್ರದಲ್ಲಿ ಜೀವ-ಬ್ರಹ್ಮರಿಗೆ ಐಕ್ಯವನ್ನು ಹೇಳಿದರೆ ಹಿಂದೆ ಹೇಳಿದ್ದಕ್ಕೆ ವಿರುದ್ಧವಾಗಿ ಆತ್ಮಶಬ್ದವಾಚ್ಯತ್ವವನ್ನು ಜೀವನಿಗೂ ಅಂಗೀಕರಿಸಿದಂತಾಗುತ್ತದೆ. ಇದರಿಂದ ಸೂತ್ರಕಾರರು ವ್ಯಾಹತಭಾಷಿಗಳಾಗುತ್ತಾರೆ. ಆದ್ದರಿಂದ ಈ ಸೂತ್ರ ದಲ್ಲಿ ಜೀವ-ಬ್ರಹ್ಮಾಭೇದವನ್ನು ಹೇಳುವ ಅಭಿಪ್ರಾಯ ಸೂತ್ರಕಾರರಿಗೆ ಇಲ್ಲ.

**ಭೇದಸ್ಯ ವ್ಯಪದೇಶಂ ಚ ಸ್ಥಿತಿಂ ಚಾದನಮೇವ ಚ ।**
**ಭೇದದಾರ್ಢ್ಯೇ ಹೇತುಮಾಹ ಸತಾತ್ಪರ್ಯಂ ಜಗತ್ಪತಿಃ ॥ ೪೦ ॥**

ಹಿಂದೆ ಪ್ರಥಮಾಧ್ಯಾಯದಲ್ಲಿ, ಭೇದಸ್ಯ ವ್ಯಪದೇಶಂ ಚ="ಭೇದ ವ್ಯಪದೇಶಾಚ್ಚಾನ್ಯಃ,(1-1-21) ಶಾರೀರಶ್ಚೋಭಯೇಽಪಿ ಹಿ ಭೇದೇನೈವ ಮಧೀಯತೇ(1-2-20), ವಿಶೇಷಣಭೇದವ್ಯಪದೇಶಾಭ್ಯಾಂ ಚ ನೇತರೌ (1-2-22) ಈ ಸೂತ್ರಗಳಲ್ಲಿ ಭೇದೋಕ್ತಿಯನ್ನು, ಸ್ಥಿತಿಂ ಚಾದನಮೇವ= "ಸ್ಥಿತ್ಯದನಾಭ್ಯಾಂ ಚ"(1-3-7) ಎಂಬ ಸೂತ್ರದಲ್ಲಿ, ಈ ದೇಹದಲ್ಲಿರುವ ಪರಮಾತ್ಮನಿಗೆ ಕರ್ಮ ಫಲಭೋಗ ಇಲ್ಲದೆ ಸ್ಥಿತಿ ಮತ್ತು ಜೀವನಿಗೆ ಕರ್ಮಫಲಭೋಗ ಈ ಎರಡು ವಿರುದ್ಧಧರ್ಮಗಳಿರುವುದರಿಂದಲೂ ಜಗತ್ಪತಿಃ=ಶ್ರೀವೇದವ್ಯಾಸರು ಸತಾತ್ಪರ್ಯಂ=ತಾತ್ಪರ್ಯಪೂರ್ವಕವಾಗಿ ಭೇದದಾರ್ಢ್ಯೇ=ಜೀವೇಶರಿಗೆ ಭೇದವೇ ಇದೆ ಎನ್ನುವ ವಿಷಯದಲ್ಲಿ ಹೇತುಮಾಹ=ಕಾರಣವನ್ನು ಹೇಳಿದ್ದಾರೆ.

**ಭಾವಾರ್ಥ—** ಇಲ್ಲಿ ಅಭೇದವನ್ನು ಹೇಳಿದರೆ ಹಿಂದಿನ ಸೂತ್ರಗಳ ವಿರೋಧವೂ ಬರುತ್ತದೆ—ಆನಂದಮಯಾಧಿಕರಣದಲ್ಲಿ (1-1-6) ಬ್ರಹ್ಮಜೀವರಿಗೆ ಅಭೇದವನ್ನು ಸೂತ್ರಕಾರರು 'ಭೇದವ್ಯಪದೇಶಾಚ್ಚ' ಎಂದೂ ಅಂತರಧಿಕರಣದಲ್ಲಿ "ಭೇದವ್ಯಪದೇಶಾಚ್ಚಾನ್ಯಃ" ಎಂದೂ ನಿರಾಕರಿಸಿರು ತ್ತಾರೆ. ದ್ಯುಭ್ವಾದ್ಯಧಿಕರಣದಲ್ಲಿ (1.3.1) ವಿರುದ್ಧ ಧರ್ಮಗಳನ್ನು ಜೀವೇಶರಿಗೆ ಹೇಳಲಾಗಿದೆ—ಜೀವ ಈ ಶರೀರದಲ್ಲಿದ್ದು ಪಾಪದ ಫಲವನ್ನು ಅನುಭವಿಸುತ್ತಾನೆ. ಆದರೆ, ಅವನ ಜೊತೆಯಲ್ಲೇ ಇರುವ ಪರಮಾತ್ಮನು ಅದನ್ನು ಅನುಭವಿಸುತ್ತಿಲ್ಲ, (ಅನಶ್ನನ್ನನ್ಯಃ ಅಭಿಚಾಕಶೀತಿ). ಹೀಗೆ ಜೀವೇಶರಲ್ಲಿ ವಿರುದ್ಧಧರ್ಮಗಳು ಇರುವುದರಿಂದ ಅವರಲ್ಲಿ ಭೇದವೇ ಇದೆ, ಎಂದು 'ಸ್ಥಿತ್ಯದನಾಭ್ಯಾಂ ಚ' ಎಂಬ ಸೂತ್ರದಲ್ಲಿ ಭೇದವನ್ನು ಯುಕ್ತಿಯಿಂದ ಸಮರ್ಥಿಸಲಾಗಿದೆ. ಹೀಗೆ ಹಿಂದಿನ ಸೂತ್ರಗಳಲ್ಲಿ ಜೀವೇಶರಿಗೆ ಭೇದವನ್ನು ಹೇಳಿ ಈ ಸೂತ್ರದಲ್ಲಿ ಅಭೇದವನ್ನು ಹೇಳಿದರೆ ವಿರೋಧ ಬರುತ್ತದೆ. ಆದ್ದರಿಂದ ಈ ಸೂತ್ರದಲ್ಲಿ ಅಭೇದವನ್ನು ಹೇಳಲಾಗಿಲ್ಲ.

**ವ್ಯಾವಹಾರಿಕಭೇದಶ್ಚೇತ್ ಕ್ವಾಸಾವವ್ಯಾವಹಾರಿಕಃ ॥ ೪೧ ॥**

**ವ್ಯಾವಹಾರಿಕಮಿತ್ಯೇವ ವಚನಂ ವ್ಯಾವಹಾರಿಕಮ್ ।**
**ಉತ ನೇತಿ ವಿಕಲ್ಪೇ ತು ಯದಿ ಸ್ಯಾದ್ ವ್ಯಾವಹಾರಿಕಮ್ ॥ ೪೨ ॥**

**ತಸ್ಯಾಪಿ ಬಾಧ್ಯತಾ ಚೇತ್ ಸ್ಯಾದ್ ಭೇದಃ ಸ್ಯಾತ್ ಪಾರಮಾರ್ಥಿಕಃ ।**
**ಅವ್ಯಾವಹಾರಿಕತ್ವಂ ಚೇದ್ ಭೇದೋಽಯಂ ಸತ್ಯತಾಂ ಗತಃ ॥ ೪೩ ॥**

ಭೇದಃ=ಸೂತ್ರಗಳು ಹೇಳಿರುವ ಜೀವೇಶಭೇದವು ವ್ಯಾವಹಾರಿಕಶ್ಚೇತ್= ಭ್ರಾಂತಿಸಿದ್ಧವಾದುದು, ಅಭೇದವು ಪಾರಮಾರ್ಥಿಕವಾದುದು. ಆದ್ದರಿಂದ ಅವೆರಡಕ್ಕೆ ವಿರೋಧವಿಲ್ಲ, ಎನ್ನುವುದಾದಲ್ಲಿ ಅಸೌ ಕ್ವ ಅವ್ಯಾವಹಾರಿಕಃ= ಹಾಗಾದರೆ ಭ್ರಾಂತಿಸಿದ್ಧವಲ್ಲದ ಭೇದ ಎಲ್ಲಿದೆ?

ಭಾವಾರ್ಥ— ಒಂದು ಭೇದವು ಭ್ರಾಂತಿಸಿದ್ಧವಾಗಬೇಕಾದರೆ ಭ್ರಾಂತಿ ಸಿದ್ಧವಲ್ಲದ ಇನ್ನೊಂದು ಭೇದ ಸತ್ಯವಾಗಿರಬೇಕು. 'ಪ್ರಧಾನ' ವಸ್ತು ಇಲ್ಲದೆ ಭ್ರಾಂತಿಯು ಬರುವುದಿಲ್ಲ. ನಿಜವಾದ ಹಾವೊಂದು ಇದ್ದು, ಅದನ್ನು ನೋಡಿರುವವನಿಗೆ ಹಗ್ಗದಲ್ಲಿ ಹಾವು ಎಂಬ ಭ್ರಮೆಯು ಬರುತ್ತದೆ. ನಿಜ ಹಾವೇ ಇಲ್ಲದೆ ಭ್ರಮೆಯು ಬರುವುದಿಲ್ಲ. ಅದರಂತೆ, ಸತ್ಯಭೇದವಿದ್ದರೆ ಮಾತ್ರ ಭೇದದ ಭ್ರಾಂತಿಬರಬಹುದು. ಆದರೆ ಅದ್ವೈತದರ್ಶನದಲ್ಲಿ ಸತ್ಯವಾದ ಭೇದ ಇಲ್ಲ. ಭ್ರಮೆ ಬರಲು ಸಾಧ್ಯವಿಲ್ಲ.

ವ್ಯಾವಹಾರಿಕಂ ಇತಿ ವಚನಮೇವ ವ್ಯಾವಹಾರಿಕಂ='ಭೇದವು ವ್ಯಾವಹಾರಿಕ' ಎಂಬ ಮಾತಿನ ಅರ್ಥವು (ಅದ್ವೈತದರ್ಶನದಲ್ಲಿ) ವ್ಯಾವಹಾರಿಕವೋ, ಉತ ನ=ಅಲ್ಲವೋ? ಇತಿ ವಿಕಲ್ಪೇ ತು=ಹೀಗೆ ವಿಕಲ್ಪ ಮಾಡಿದಲ್ಲಿ ನೀನು ಇವೆರಡರಲ್ಲಿ ಯಾವ ಪಕ್ಷವನ್ನು ಆರಿಸುತ್ತಿ? ಯದಿ ವ್ಯಾವಹಾರಿಕಂ=ವ್ಯಾವಹಾರಿಕ ಎಂಬ ಪಕ್ಷವನ್ನು ಅವಲಂಬಿಸುವುದಾದಲ್ಲಿ ತಸ್ಯಾಪಿ=ವ್ಯಾವಹಾರಿಕವಾದ ಆ ಮಾತಿನ ಅರ್ಥಕ್ಕೂ ಬಾಧ್ಯತಾ ಚೇತ್ ಸ್ಯಾತ್=ಬಾಧ್ಯತ್ವವು ಇದೆಯಾದಲ್ಲಿ ಭೇದಃ ಪಾರಮಾರ್ಥಿಕಃ ಸ್ಯಾತ್= ಜೀವೇಶಭೇದವು ಪಾರಮಾರ್ಥಿಕವಾದೀತು. ಆ ವಾಕ್ಯದ ಅರ್ಥಕ್ಕೆ

ಅವ್ಯಾವಹಾರಿಕತ್ವಂ ಚೇತ್=ವ್ಯಾವಹಾರಿಕತ್ವವು ಇಲ್ಲವೆಂದಾದಲ್ಲಿ ಅಯಂ ಭೇದಃ=ಆ ವಾಕ್ಯಾರ್ಥಕ್ಕೂ ಬ್ರಹ್ಮನಿಗೂ ಇರುವ ಭೇದವು ಸತ್ಯತಾಂ ಗತಃ= ಸತ್ಯವಾದೀತು.

**ಭಾವಾರ್ಥ—** ಸರ್ವೋऽಪಿ ಭೇದಃ ವ್ಯಾವಹಾರಿಕಃ=ಎಲ್ಲ ಭೇದವೂ ಭ್ರಾಂತಿಕಲ್ಪಿತ, ಎನ್ನುವುದು ಇನ್ನೊಂದು ಕಾರಣದಿಂದಲೂ ಸರಿಯಲ್ಲ. 'ಭೇದವೆಲ್ಲವೂ ಭ್ರಾಂತಿಕಲ್ಪಿತ' ಎಂಬ ಮಾತಿನ ಅರ್ಥವು ಭ್ರಾಂತಿಕಲ್ಪಿತವಾದರೆ ಅಂದರೆ ಬಾಧ್ಯವಾದರೆ ಜೀವೇಶಭೇದವು ಸತ್ಯವಾಗುತ್ತದೆ. ಭೇದವು ಭ್ರಾಂತಿ ಕಲ್ಪಿತ, ಎನ್ನುವುದು ಸುಳ್ಳು ಎಂದರೆ ಭೇದವು ಭ್ರಾಂತಿಕಲ್ಪಿತವಲ್ಲ, ಸತ್ಯ ಎಂದಂತಾಗುತ್ತದೆ. ಆ ವಾಕ್ಯದ ಅರ್ಥವು ಭ್ರಾಂತಿಕಲ್ಪಿತವಲ್ಲದಿದ್ದರೆ ಅದು ಸತ್ಯವಾಯಿತು. ಅಂದರೆ, ಆ ವಾಕ್ಯದ ಅರ್ಥವೂ ಸತ್ಯವಾಯಿತು. ಬ್ರಹ್ಮನೂ ಸತ್ಯ. ಈ ಎರಡು ಸತ್ಯಗಳ ಭೇದವೂ ಸತ್ಯವಾದೀತು.

**ಏಕಸ್ಯಾಸತ್ಯತಾಯಾಂ ಹಿ ದ್ವಯೋರೇವ ವಿರುದ್ಧಯೋಃ ।**
**ಅನ್ಯಸ್ಯ ಸತ್ಯತೈವ ಸ್ಯಾದಿತಿ ಕೇನ ನಿವಾರ್ಯತೇ ॥ ೪೪ ॥**

ವಿರುದ್ಧಯೋಃ ದ್ವಯೋಃ=ವಿರುದ್ಧವಾಗಿರುವ ಎರಡೇ ವಸ್ತುಗಳ ಮಧ್ಯದಲ್ಲಿ ಏಕಸ್ಯ ಅಸತ್ಯತಾಯಾಂ=ಒಂದು ಅಸತ್ಯವಾಗಿದ್ದಲ್ಲಿ ಅನ್ಯಸ್ಯ ಸತ್ಯತೈವ ಸ್ಯಾತ್=ಇನ್ನೊಂದು ಸತ್ಯವೇ ಆಗಿರಬೇಕು. ಇತಿ=ಈ ವ್ಯಾಪ್ತಿಯು ಕೇನ ನಿವಾರ್ಯತೇ=ಯಾರಿಂದ ತಡೆಯಲ್ಪಡಲು ಸಾಧ್ಯ?

**ಭಾವಾರ್ಥ—** 'ಎಲ್ಲ ಭೇದವೂ ಅಸತ್ಯ' ಎನ್ನುವುದು ಅಸತ್ಯವಾದರೆ ಭೇದಗಳೆಲ್ಲವೂ ಸತ್ಯವಾಗುತ್ತವೆ, ಎಂದು ಹಿಂದೆ ಹೇಳಲಾಗಿದೆ. ಇದಕ್ಕೆ ಅನುಕೂಲವಾಗುವ ವ್ಯಾಪ್ತಿಯನ್ನು ಇಲ್ಲಿ ಹೇಳಲಾಗಿದೆ— ವಿರುದ್ಧವಾದ ಎರಡರಲ್ಲಿ ಒಂದು ಸುಳ್ಳಾದರೆ ಇನ್ನೊಂದು ಸತ್ಯವಾಗಲೇಬೇಕು. ಚೇತನತ್ವ ಜಡತ್ವ ಈ ಎರಡು ವಿರುದ್ಧಧರ್ಮಗಳಲ್ಲಿ ಚೇತನತ್ವವು ಅಸತ್ಯವಾದರೆ ಜಡತ್ವವು ಸತ್ಯವಾಗಬೇಕು. ಇದು ಲೋಕಸಿದ್ಧವಾದ ಸಾಮಾನ್ಯನಿಯಮ. ಇದಕ್ಕೆ ಉದಾಹರಣೆ—

**ಅಸತ್ಯಂ ನೋಕ್ತಮಿತ್ಯುಕ್ತೇ ಸತ್ಯಮುಕ್ತಮಿತಿ ಪ್ರಜಾಃ ।**
**ಜಾನಂತ್ಯುಕ್ತಂ ತು ನೋ ಸತ್ಯಮಿತ್ಯುಕ್ತೇಽಸತ್ಯತಾಮಪಿ ॥ ೪೫ ॥**

ಪ್ರಜಾಃ=ಲೋಕದ ಜನರು, ಆಪ್ತನಿಂದ 'ಅಸತ್ಯಂ ನೋಕ್ತಂ' ಇತ್ಯುಕ್ತೇ=ಅಸತ್ಯವು ಹೇಳಲ್ಪಟ್ಟಿಲ್ಲ ಎಂದಾಗ ಸತ್ಯಮುಕ್ತಮ್ ಇತಿ ಜಾನಂತಿ=ಸತ್ಯವೇ ಹೇಳಲ್ಪಟ್ಟಿದೆ ಎಂದು ತಿಳಿಯುತ್ತಾರೆ. ಉಕ್ತಂ ತು ನೋ ಸತ್ಯಂ=ಅನಾಪ್ತನು ಹೇಳಿದ್ದು ಸತ್ಯವಲ್ಲ ಇತ್ಯುಕ್ತೇ=ಹೀಗೆ ಹೇಳಲ್ಪಟ್ಟಾಗ ಅಸತ್ಯತಾಮಪಿ ಜಾನಂತಿ=ಅನಾಪ್ತ ಹೇಳಿದ್ದು ಸುಳ್ಳು ಎಂದೂ ತಿಳಿಯುತ್ತಾರೆ.

ಭಾವಾರ್ಥ—ಮಾತು ಒಂದೋ ಸುಳ್ಳಾಗಿರಬೇಕು, ಇಲ್ಲವೇ ಸತ್ಯವಾಗಿರಬೇಕು. ಇವೆರಡನ್ನು ಬಿಟ್ಟು ಬೇರೆ ಪ್ರಕಾರ ಇಲ್ಲ. ಆಡಿದ ಮಾತು ಸತ್ಯವಲ್ಲವೆಂದಾದರೆ ಆ ಮಾತು ಸುಳ್ಳಾಗಬೇಕು. ಸುಳ್ಳಲ್ಲವಾದರೆ ಸತ್ಯವಾಗಬೇಕು. ಹೀಗೆ ವಿರುದ್ಧವಾದ ಎರಡರಲ್ಲಿ ಒಂದನ್ನು ಅಲ್ಲಗಳೆದರೆ ಇನ್ನೊಂದನ್ನು ಅನುಮೋದಿಸಿದಂತೆ.

**ನ ಸ್ವಪ್ನೇಽಪಿ ದ್ವಯಂ ಮಿಥ್ಯಾ ತತ್ರೈಕಂ ಸತ್ಯಮೇವ ಹಿ ।**
**ಭಾವಾಭಾವಾವುಭೌ ತತ್ರ ಕಥಂ ಮಿಥ್ಯಾ ಭವಿಷ್ಯತಃ ॥ ೪೬ ॥**

ಸ್ವಪ್ನೇಽಪಿ=ಸ್ವಪ್ನದಲ್ಲಿಯೂ ದ್ವಯಂ ನ ಮಿಥ್ಯಾ=ವಿರುದ್ಧವಾದ ಎರಡೂ ಸುಳ್ಳಲ್ಲ. ಅವೆರಡರಲ್ಲಿ ತತ್ರೈಕಂ ಸತ್ಯಮೇವ ಹಿ=ಒಂದು ಸತ್ಯವೇ ಆಗಿರುತ್ತದೆ. ತತ್ರ=ಅಲ್ಲಿ ಭಾವಾಭಾವೌ ಉಭೌ=ಭಾವ ಮತ್ತು ಅಭಾವ ಇವೆರಡೂ ಕಥಂ ಮಿಥ್ಯಾ ಭವಿಷ್ಯತಃ=ಹೇಗೆ ತಾನೇ ಸುಳ್ಳಾದಾವು?

ಭಾವಾರ್ಥ— ಹಿಂದೆ ಹೇಳಿದ ವ್ಯಾಪ್ತಿ ಸ್ವಪ್ನದಲ್ಲಿ ನಡೆಯುವುದಿಲ್ಲ. ಅಲ್ಲಿ ಕಂಡ ಆನೆಯೂ ಸುಳ್ಳು ಅದರ ಅಭಾವವೂ ಸುಳ್ಳು. ಒಂದು ಸುಳ್ಳಾದರೆ ಇನ್ನೊಂದು ಸತ್ಯವಲ್ಲ, ಎಂದು ಆಕ್ಷೇಪ. ಆದರೆ, ಸ್ವಾಪ್ನಗಜ ಸುಳ್ಳಾದರೂ ಅದರ ಅಭಾವ ಸುಳ್ಳಲ್ಲ. ಆ ಗಜ ಇಲ್ಲವೆನ್ನುವುದು ಸತ್ಯವೇ ಆಗಿದೆ. ಒಂದೇ ಕಡೆ ಭಾವ ಮತ್ತು ಅಭಾವ ಎರಡೂ ಇಲ್ಲದಾಗುವುದು ಹೇಗೆ ಸಾಧ್ಯ?

**ಭಾವಸ್ಯ ಹಿ ನಿಷೇಧೇ ತು ನಾಭಾವಸ್ಯ ನಿಷೇಧನಮ್ ।**
**ಸ್ವವಾಚೋಽಸತ್ಯತಾ ಚೇತ್ ಸ್ಯಾತ್ ತಸ್ಮಾದ್ ಭೇದಸ್ಯ ಸತ್ಯತಾ ॥೪೭॥**

ಭಾವಸ್ಯ ನಿಷೇಧೇ ಕೃತೇತು=ಭಾವವಸ್ತುವನ್ನು ನಿಷೇಧ ಮಾಡಿದರೆ ಅಭಾವವನ್ನು ಅಂಗೀಕಾರ ಮಾಡಿದಂತಾಗುವುದರಿಂದ ನ ಅಭಾವಸ್ಯ ನಿಷೇಧನಮ್=ಅಭಾವವನ್ನು ನಿಷೇಧ ಮಾಡಲಾಗುವುದಿಲ್ಲ. ಆದ್ದರಿಂದ, ಸ್ವವಾಚೋऽಸತ್ಯತಾ ಚೇತ್ ಸ್ಯಾತ್=ಪ್ರತಿವಾದಿಯಾದ ಮಾಯಾವಾದಿಯ ''ಎಲ್ಲ ಭೇದವೂ ಮಿಥ್ಯಾ'' ಎಂಬ ವಾಕ್ಯದ ಅರ್ಥವು ಸುಳ್ಳಾದರೆ ತಸ್ಮಾತ್= ವ್ಯಾಪ್ತಿಇರುವುದರಿಂದ ಭೇದಸ್ಯ ಸತ್ಯತಾ=ಜೀವೇಶ ಭೇದವು ಸತ್ಯವಾಗಬೇಕು.

**ತಸ್ಮಾಜ್ಜೀವೇಶಯೋರ್ಭೇದ ಉಕ್ತನ್ಯಾಯೇನ ಗಮ್ಯತೇ ॥ ೪೮ ॥**

ತಸ್ಮಾತ್=ಭೇದವು ಮಿಥ್ಯಾ ಆಗಲು ಸಾಧ್ಯವಿಲ್ಲದುದರಿಂದ ಜೀವೇ-ಶಯೋಃ ಭೇದಃ=ಜೀವ ಮತ್ತು ಈಶ್ವರರಲ್ಲಿ ಭೇದವು ಉಕ್ತನ್ಯಾಯೇನ= ದ್ಯುಭ್ವಾದ್ಯಧಿಕರಣದಲ್ಲಿ ''ಭೇದವ್ಯಪದೇಶಾಚ್ಚಾನ್ಯಃ'' ಇತ್ಯಾದಿ ಸೂತ್ರ ಗಳಿಂದ ಗಮ್ಯತೇ=ತಿಳಿಯಲ್ಪಡುತ್ತದೆ. ಅದಕ್ಕೆ ವಿರುದ್ಧವಾದುದರಿಂದ ಆತ್ಮೋಪಗಮಾಧಿಕರಣದಲ್ಲಿ ಸೂತ್ರವು ಜೀವೇಶಾಭೇದವನ್ನು ಪ್ರತಿಪಾದಿಸು ತ್ತಿಲ್ಲ.

**ಏತಸ್ಮಾದಾತ್ಮಶಬ್ದೋऽಯಂ ಪರಮಾತ್ಮಾಭಿದಾ ಭವೇತ್ ।**
**ಪ್ರತೀಕವಿಷಯತ್ವೇನ ವಿಷ್ಣುದೃಷ್ಟಿರ್ನ ತದ್ ಭವೇತ್ ॥ ೪೯ ॥**

ಏತಸ್ಮಾತ್=ಹಿಂದೆ ಹೇಳಿರುವ ಕಾರಣದಿಂದ ಅಯಂ ಆತ್ಮಶಬ್ದಃ= ಹಿಂದಿನ 'ಆತ್ಮೇತಿ ತೂಪಗಚ್ಛಂತಿ' ಎಂಬ ಸೂತ್ರದಲ್ಲಿರುವ ಈ ಆತ್ಮಶಬ್ದವು ಪರಮಾತ್ಮಾಭಿದಾ ಭವೇತ್=ಪರಮಾತ್ಮನ ಅಭಿಧಾಯಕವೇ ಆಗುತ್ತದೆ. ಆತ್ಮಶಬ್ದಕ್ಕೆ ಪರಮಾತ್ಮ ಎಂದೇ ಅರ್ಥ. ಆದ್ದರಿಂದ ಅದರ ಮುಂದಿರುವ 'ನ ಪ್ರತೀಕೇ ನಹಿ ಸಃ' ಎಂಬ ಸೂತ್ರಕ್ಕೂ ತತ್–ತಸ್ಮಾತ್=ಪೂರ್ವಸೂತ್ರದ ಆತ್ಮಶಬ್ದವು ಪರಮಾತ್ಮವಾಚಕವಾಗಿರುವುದರಿಂದಲೇ ಪ್ರತೀಕವಿಷಯತ್ವೇನ= ಪ್ರತೀಕವಿಷಯದಲ್ಲಿ ವಿಷ್ಣುದೃಷ್ಟಿಃ ನ ಭವೇತ್=ವಿಷ್ಣುಭಾವನೆಯು ಕೂಡದು, ಎಂದೇ ಅರ್ಥ.

ಭಾವಾರ್ಥ— 'ನ ಪ್ರತೀಕೇ' ಎಂಬ ಶಬ್ದದೊಂದಿಗೆ ಹಿಂದಿನ ಸೂತ್ರದ ಆತ್ಮಶಬ್ದವನ್ನು ಸೇರಿಸಿಕೊಳ್ಳಬೇಕು. ಆಗ 'ಪ್ರತೀಕೇ ಆತ್ಮಾ ನ' ಎಂದು

ಪ್ರತಿಜ್ಞಾವಾಕ್ಯವಾಗುತ್ತದೆ. ಆತ್ಮಶಬ್ದಕ್ಕೆ ಹಿಂದೆ ಹೇಳಿರುವಂತೆ ಪರಮಾತ್ಮಾ, ಎಂದು ಅರ್ಥ. ಪ್ರತೀಕೇ ಎಂದು ವಿಷಯಸಪ್ತಮೀ. ಆಗ 'ಪ್ರತೀಕ ವಿಷಯದಲ್ಲಿ ಪರಮಾತ್ಮಜ್ಞಾನವನ್ನು ಮಾಡಬಾರದು, ಪ್ರತಿಮೆಯೇ ದೇವರೆಂದು ತಿಳಿಯಬಾರದು' ಎಂದು ಪ್ರತಿಜ್ಞಾವಾಕ್ಯದ ಅರ್ಥ.

ಆದರೆ, ಅದ್ವೈತಭಾಷ್ಯದಲ್ಲಿ ಹೇಳಿದ ಅರ್ಥ— ಪ್ರತೀಕದಲ್ಲಿ ಜೀವಭಾವವನ್ನು ತಿಳಿಯಬಾರದು, ಬ್ರಹ್ಮನನ್ನು 'ನಾನೇ ಬ್ರಹ್ಮ' ಎಂದು ಉಪಾಸನೆ ಮಾಡುವಂತೆ 'ಪ್ರತಿಮೆಯೇ ನಾನು' ಎಂದು ಉಪಾಸನೆ ಮಾಡಬಾರದು, ಎಂದು. ಇದು ಸರಿಯಲ್ಲ. ಆತ್ಮಶಬ್ದಕ್ಕೆ ಜೀವ, ಎಂದು ಅರ್ಥವಲ್ಲ, ಬ್ರಹ್ಮ ಎಂದೇ ಅದರ ಮುಖ್ಯಾರ್ಥ.

**ಪ್ರತೀಕೇ ವಿಷ್ಣುರಿತ್ಯೇವ ತಸ್ಮಾತ್ ಕಾರ್ಯಾ ಹ್ಯುಪಾಸನಾ ।**
**ನಚ ವಿಷ್ಣುಃ ಪ್ರತೀಕಂ ಯತ್ ತಸ್ಮಾತ್ (ನಾತ್ಮೇತ್ಯುಪಾಸನಾ) ॥ ೫೦ ॥**

ತಸ್ಮಾತ್=ಪ್ರತೀಕವೇ ಬ್ರಹ್ಮ, ಎಂಬ ಉಪಾಸನೆಯನ್ನು ಮಾಡಬಾರದು, ಆದಕಾರಣ ಪ್ರತೀಕೇ ವಿಷ್ಣುಃ=ಮನಸ್ಸೇ ಮೊದಲಾದ ಪ್ರತೀಕಗಳಲ್ಲಿ ವಿಷ್ಣು ಸನ್ನಿಹಿತನಾಗಿರುತ್ತಾನೆ, ಇತ್ಯೇವ ಉಪಾಸನಾ ಕಾರ್ಯಾ=ಹೀಗೆಯೇ ಬ್ರಹ್ಮೋಪಾಸನೆಯನ್ನು ಮಾಡಬೇಕು. (ಇತಿ ಶ್ರುತ್ಯರ್ಥಃ=ಇದೇ ''ಮನೋ ಬ್ರಹ್ಮೇತ್ಯುಪಾಸೀತ' ಎಂಬ ಶ್ರುತಿಯ ಅರ್ಥ.)

ಇನ್ನೂ ಒಂದು ಕಾರಣ ಇದೆ— ಯತ್=ಯಾವ ಕಾರಣದಿಂದ ಪ್ರತೀಕಂ ನ ವಿಷ್ಣುಶ್ಚ=ಪ್ರತೀಕವು ವಿಷ್ಣುವೂ ಅಲ್ಲ, ಜೀವನೂ ಅಲ್ಲ. ತಸ್ಮಾತ್=ಆದ್ದರಿಂದ ಅಂದರೆ ಪ್ರತೀಕವು ಜೀವ, ಎಂಬುದು ಅಪ್ರಸಕ್ತವಾದ ಕಾರಣ ''ನ ಪ್ರತೀಕೇ'' ಎಂಬ ಸೂತ್ರಖಂಡವು ಅದ್ವೈತಭಾಷ್ಯ ಹೇಳಿದಂತೆ 'ಪ್ರತೀಕವೇ ಜೀವ' ಎಂಬ ಉಪಾಸನೆಯನ್ನು ಮಾಡಬಾರದು, ಎಂಬ ನಿಷೇಧವು ಅಪ್ರಸಕ್ತನಿಷೇಧವಾಗುವುದರಿಂದ ಅಂತಹ ನಿಷೇಧವು ಯುಕ್ತವಲ್ಲ. ಹೀಗೆ ಅದ್ವೈತಭಾಷ್ಯದ 'ಪ್ರತೀಕವನ್ನು ಜೀವನೆಂದು ಉಪಾಸನೆ ಮಾಡಬಾರದು' ಎಂಬ ಪ್ರತಿಜ್ಞಾಭಾಗವು ಸರಿಯಲ್ಲ.

ಅಷ್ಟೇ ಅಲ್ಲ, 'ನಹಿ ಸಃ' ಎಂಬ ಸೂತ್ರದಲ್ಲಿ ಹೇಳಿರುವ ಹೇತುಭಾಗದ

ಅರ್ಥವೂ ಸರಿಯಲ್ಲ. ಏಕೆಂದರೆ, 'ಸಃ=ಪ್ರತೀಕವು ನ ಆತ್ಮಾ=ಜೀವನಲ್ಲ, ಎಂದು ಅದ್ವೈತ ಭಾಷ್ಯ ಹೇಳಿರುವ ಅರ್ಥ. ಆದರೆ, ಆತ್ಮಶಬ್ದದ ಮುಖ್ಯಾರ್ಥ ಬ್ರಹ್ಮನಾದುದರಿಂದ 'ನಹಿ ಸಃ ಆತ್ಮಾ' ಎಂದರೆ 'ಪ್ರತೀಕವು ಬ್ರಹ್ಮನಲ್ಲ' ಎಂದೇ ಅರ್ಥವಾಗುತ್ತದೆ ಹೊರತು, ಜೀವನಲ್ಲ ಎಂದು ಅರ್ಥವಾಗುವುದಿಲ್ಲ. ಆದ್ದರಿಂದ ಈ ಸೂತ್ರಕ್ಕೆ ಅದ್ವೈತಭಾಷ್ಯ ಮಾಡಿರುವ ವ್ಯಾಖ್ಯಾನವು ಸರಿಯಲ್ಲ.

## ಬ್ರಹ್ಮದೃಷ್ಟ್ಯಧಿಕರಣವ್ಯಾಖ್ಯಾನ ವಿಮರ್ಶೆ

**(ನಚ ವಿಷ್ಣುಃ ಪ್ರತೀಕಂ ಯತ್ ತಸ್ಮಾತ್) ನಾತ್ಮೇತ್ಯುಪಾಸನಾ।**
**ಇತಿ ಪಕ್ಷೋ ಯದಾ ಬ್ರಹ್ಮದೃಷ್ಟಿಶ್ಚಾತ್ರ ವಿರುಧ್ಯತೇ ।**
**ಸ ನೇತಿ ಯುಕ್ತಿಸ್ತತ್ರಾಪಿ ಸಮೇತ್ಯುಕ್ತವಿರುದ್ಧತಾ ॥ ೫೧ ॥**

ಆತ್ಮೇತ್ಯುಪಾಸನಾ ನ ಇತಿ ಪಕ್ಷಃ=ಹಿಂದಿನ ಸೂತ್ರ ''ಪ್ರತೀಕವು ಜೀವನಲ್ಲವಾದಕಾರಣ 'ಪ್ರತೀಕವೇ ಜೀವ' ಎಂಬ ಉಪಾಸನೆಯನ್ನು ಮಾಡಬಾರದು'' ಎನ್ನುವ ಸತ್ಯವು ಯದಾ=ಯಾವಾಗ ಸಿದ್ಧವಾಯಿತೋ ತದಾ=ಆಗಲೇ ಅತ್ರ=ಪ್ರತೀಕದಲ್ಲಿ ಬ್ರಹ್ಮದೃಷ್ಟಿಶ್ಚ ವಿರುಧ್ಯತೇ=ಬ್ರಹ್ಮಾಭೇದೋಪಾಸನೆಯೂ ವಿರುದ್ಧವಾಗುತ್ತದೆ.

**ಭಾವಾರ್ಥ—** 'ನ ಪ್ರತೀಕೇ, ನಹಿ ಸಃ' ಎಂಬ ಸೂತ್ರಕ್ಕೆ ಅದ್ವೈತ ಭಾಷ್ಯವು ಉಪಾಸಕನೇ ಪ್ರತೀಕವಲ್ಲವಾದುದರಿಂದ ಉಪಾಸಕನು 'ನಾನು ಮನ ಆದಿ ಪ್ರತೀಕ' ಎಂದು ಉಪಾಸನೆ ಮಾಡಬಾರದು ಎಂದು ಅರ್ಥವನ್ನು ಹೇಳುತ್ತದೆ. ಮುಂದಿನ 'ಬ್ರಹ್ಮದೃಷ್ಟಿಃ ಉತ್ಕರ್ಷಾತ್' ಎಂಬ ಸೂತ್ರಕ್ಕೆ 'ಪ್ರತೀಕವೇ ಬ್ರಹ್ಮ' ಎಂದು ಉಪಾಸನೆ ಮಾಡಬಹುದು, ಎಂದು ವ್ಯಾಖ್ಯಾನ ಮಾಡುತ್ತದೆ. ಇದು ಹಿಂದಿನ ಸೂತ್ರದಲ್ಲಿ ಹೇಳಿರುವ ಹೇತುವಿಗೆ ವಿರುದ್ಧ. ಏಕೆಂದರೆ —

ಸ ನೇತಿ ಯುಕ್ತಿಃ=ಪ್ರತೀಕವೇ ಜೀವನಲ್ಲ ಎನ್ನುವ ಯುಕ್ತಿಯು ತತ್ರಾಪಿ ಸಮಾ=ಬ್ರಹ್ಮದೃಷ್ಟಿಯಲ್ಲೂ ಸಮಾನವಾದುದು. ಇತಿ=ಈ ಕಾರಣದಿಂದ

ಉಕ್ತ–ಯುಕ್ತಿವಿರುದ್ಧತಾ=ಹಿಂದಿನ ಸೂತ್ರದಲ್ಲಿ ಹೇಳಿರುವ ಯುಕ್ತಿಗೆ ಈ ಸೂತ್ರದ ಅರ್ಥವು ವಿರುದ್ಧವಾಗುತ್ತದೆ.

ಭಾವಾರ್ಥ— ಹಿಂದಿನ ಸೂತ್ರದಲ್ಲಿ ''ಪ್ರತೀಕವೇ ನಾನು(ಜೀವ)'' ಎನ್ನುವ ಉಪಾಸನೆಯ ನಿಷೇಧಕ್ಕೆ ಕೊಟ್ಟಿರುವ ಕಾರಣ—ವಸ್ತುತಃ ಉಪಾಸಕನು ಪ್ರತೀಕವಲ್ಲ, ಎಂದು. ಪ್ರತೀಕವು ಬ್ರಹ್ಮನೂ ಅಲ್ಲ. ಅಂದಮೇಲೆ ಈ ಸೂತ್ರದಲ್ಲಿ 'ಪ್ರತೀಕವೇ ಬ್ರಹ್ಮ' ಎನ್ನುವ ಉಪಾಸನೆಯನ್ನು ಮಾಡಬಹುದು, ಎಂದು ಹೇಳಿದರೆ ಹಿಂದಿನ ಸೂತ್ರೋಕ್ತಹೇತುವಿಗೆ ವಿರುದ್ಧವಾಗುತ್ತದೆ. ಪ್ರತೀಕವು ಜೀವನಲ್ಲದ ಕಾರಣದಿಂದ ಜೀವಾಭೇದೇನ ಉಪಾಸನೆಯು ಯೋಗ್ಯವಲ್ಲವಾದರೆ ಅದು ಬ್ರಹ್ಮವೂ ಅಲ್ಲವಾದ ಕಾರಣ ಬ್ರಹ್ಮಾಭಿನ್ನತ್ವೇನಾಪಿ ಉಪಾಸ್ಯವಾಗಬಾರದು. ಆದ್ದರಿಂದ 'ಬ್ರಹ್ಮದೃಷ್ಟಿಃ' ಎಂದು ಈ ಸೂತ್ರದಲ್ಲಿ ಪ್ರತೀಕದಲ್ಲಿ ಬ್ರಹ್ಮಾಭೇದಭಾವನೆಯನ್ನು ಮಾಡಬಹುದು, ಎಂದಿರುವುದು ಹಿಂದಿನ ಸೂತ್ರಕ್ಕೆ ವಿರುದ್ಧವಾಗುತ್ತದೆ.

**ಯದ್ಯಪ್ಯುತ್ಕರ್ಷಮಾತ್ರೇಣ ಹ್ಯತದ್ಭಾವೇಽಪ್ಯುಪಾಸನಾ ।**
**ಉತ್ಕರ್ಷ ಆತ್ಮನೋಽಪಿ ಸ್ಯಾಚ್ಚೇತನತ್ವಾದಚೇತನಾತ್ ।**
**ತಸ್ಮಾದತತ್ತ್ವಂ ನೋಪಾಸ್ಯಮಿತಿ ವೇದವಿದಾಂ(ದೋ) ಮತಮ್ ॥ ೫೨ ॥**

ಯದಿ=ಒಂದುವೇಳೆ ಉತ್ಕರ್ಷಮಾತ್ರೇಣ=ಜಡವಾದ ಪ್ರತೀಕಕ್ಕೆ ಬ್ರಹ್ಮತ್ವವೆಂಬ ಉತ್ಕರ್ಷವು ಸಿದ್ಧವಾಗುವ ಮಾತ್ರದಿಂದ ಅತದ್ಭಾವೇಽಪಿ= ಪ್ರತೀಕಕ್ಕೆ ಬ್ರಹ್ಮತ್ವವು ಇಲ್ಲದೇ ಹೋದರೂ ಉಪಾಸನಾ=ಬ್ರಹ್ಮತ್ವೇನ ಉಪಾಸನೆಯು ಅಂಗೀಕರಿಸಲ್ಪಡುವುದಾದಲ್ಲಿ ಚೇತನತ್ವಾತ್=ಆತ್ಮನು ಚೇತನನಾದ ಕಾರಣದಿಂದ ಆತ್ಮನೋಽಪಿ=ಜೀವಾತ್ಮನಿಗೂ ಅಚೇತನಾತ್=ಜಡಕ್ಕಿಂತ ಉತ್ಕರ್ಷಃ ಸ್ಯಾತ್=ಉತ್ಕರ್ಷವು ಇದೆ. ಆದ್ದರಿಂದ ಜಡಪ್ರತೀಕವನ್ನು ಜೀವಾಭೇದೇನ ಉಪಾಸನೆ ಮಾಡಿದಾಗ ಪ್ರತೀಕಕ್ಕೆ ಚೇತನತ್ವರೂಪವಾದ ಉತ್ಕರ್ಷವು ಸಿದ್ಧವಾಗುತ್ತದೆ.

ತಸ್ಮಾತ್=ಜೀವಾಭೇದೋಪಾಸನೆಯ ಪ್ರಸಂಗವು ಬರುವುದರಿಂದಾಗಿ

ಅತತ್ವಂ=ವಾಸ್ತವ ಅಲ್ಲದಿರುವುದು ನೋಪಾಸ್ಯಂ=ಉಪಾಸನೆಗೆ ಅರ್ಹವಲ್ಲ. ಇತಿ=ಹೀಗೆಂದು ವೇದವಿದಾಂ ಮತಮ್=ವೇದಜ್ಞರ ಅಭಿಪ್ರಾಯ.

**ಭಾವಾರ್ಥ**— ಈ ಸೂತ್ರದಲ್ಲಿ ಪ್ರತೀಕವು ಬ್ರಹ್ಮತ್ವೇನ ಉಪಾಸ್ಯ, ಎನ್ನುವುದಕ್ಕೆ 'ಉತ್ಕರ್ಷಾತ್' ಎಂದು ಕಾರಣವನ್ನು ಹೇಳಲಾಗಿದೆ— ಮನ ಆದಿ ಪ್ರತೀಕಗಳು ಜಡವಾಗಿವೆ. ಅವುಗಳನ್ನು ಬ್ರಹ್ಮನೆಂದು ಉಪಾಸನೆ ಮಾಡಿದಾಗ ಅವುಗಳಿಗೆ ಒಂದು ಉತ್ಕರ್ಷ=ಶ್ರೇಷ್ಠತೆ ಬರುತ್ತದೆ. ಆದ್ದರಿಂದ ಜಡಗಳಲ್ಲಿ ಬ್ರಹ್ಮತ್ವೋಪಾಸನೆಯು ಯುಕ್ತವಾಗಿದೆ, ಎಂದು ಈ ಸೂತ್ರದ ಅಭಿಪ್ರಾಯ ಇದು ಪೂರ್ವಪಕ್ಷ.

**ಸಿದ್ಧಾಂತ**— ಬ್ರಹ್ಮನಂತೆ ಜೀವನಲ್ಲೂ ಉತ್ಕರ್ಷವಿದೆ. ಪ್ರತೀಕಗಳು ಜಡವಾಗಿವೆ, ಆದರೆ, ಜೀವನು ಚೇತನನಾಗಿದ್ದಾನೆ. ಜಡವಾದ ಪ್ರತೀಕಗಳನ್ನು ಜೀವನೆಂದು ಉಪಾಸನೆ ಮಾಡಿದಾಗಲೂ ಅವುಗಳಿಗೆ ಚೇತನತ್ವರೂಪವಾದ ಉತ್ಕರ್ಷವು ಸಿದ್ಧವಾಗುತ್ತದೆ. ಹೀಗೆ ಉಭಯಪಕ್ಷದಲ್ಲೂ ಉತ್ಕರ್ಷ ಪ್ರಾಪ್ತಿಯು ಸಮಾನವಾಗಿರುವಾಗ ಒಂದು ಉಪಾಸನೆಯನ್ನು ಮಾಡ ಬಹುದು, ಇನ್ನೊಂದನ್ನು ಮಾಡಬಾರದು, ಎನ್ನುವುದಕ್ಕೆ ನಿಯಾಮಕವಿಲ್ಲ.

ಆದ್ದರಿಂದ ಎರಡೂ ಉಪಾಸನೆಗಳು ಅಸದುಪಾಸನೆಗಳಾದುದರಿಂದ ಎರಡೂ ನಿಷಿದ್ಧವಾಗಿವೆ. ಯಾವುದೇ ರೀತಿಯ ಅಸತ್ಯೋಪಾಸನೆಯನ್ನು ಮಾಡಬಾರದು, ಎಂದೇ ವೈದಿಕಸಿದ್ಧಾಂತ. ಆದ್ದರಿಂದ ಪ್ರತಿಮೆಯೇ ತಾನು, ಎಂದೂ ಉಪಾಸನೆ ಮಾಡಬಾರದು, ಪ್ರತಿಮೆಯು ಬ್ರಹ್ಮ, ಎಂದೂ ಉಪಾಸನೆ ಮಾಡಬಾರದು.

**ಉತ್ಕರ್ಷಾದ್ ಬ್ರಹ್ಮತಾಧ್ಯಾನೇ ಯದಿ ಸ್ಯಾತ್ ಫಲಮಂಜಸಾ ।**
**ಬ್ರಹ್ಮಣೋ ನೀಚತಾಜ್ಞಾ(ಧ್ಯಾ)ನಾದನರ್ಥಃ ಕಿಂ ನ ಜಾಯತೇ॥ ೫೩ ॥**

ಬ್ರಹ್ಮತಾಧ್ಯಾನೇ=ಪ್ರತಿಮೆಯೇ ಬ್ರಹ್ಮ ಎಂದು ಧ್ಯಾನಮಾಡಿದಾಗ ಉತ್ಕರ್ಷಾತ್=ಪ್ರತಿಮೆಗೆ ಉತ್ಕರ್ಷವು ಸಿದ್ಧವಾಗುವ ಕಾರಣದಿಂದ ಅಂಜಸಾ ಫಲಂ ಯದಿ=ಪುರುಷಾರ್ಥರೂಪವಾದ ಫಲವು ದೊರಕುವುದಾದಲ್ಲಿ ಬ್ರಹ್ಮಣಃ ನೀಚತಾಧ್ಯಾನಾತ್=ಅಂತಹ ಉಪಾಸನೆ ಮಾಡಿದಾಗ ಬ್ರಹ್ಮನಿಗೆ

ನೀಚತ್ವಜ್ಞಾನವಿರುವುದರಿಂದಾಗಿ ಅನರ್ಥಃ ಕಿಂ ನ ಜಾಯತೇ= ನರಕಾದ್ಯನರ್ಥವು ಏಕೆ ಆಗುವುದಿಲ್ಲ.

**ಭಾವಾರ್ಥ—** ಜಡವಾದ ಪ್ರತೀಕಗಳನ್ನು ಬ್ರಹ್ಮನೆಂದು ಧ್ಯಾನಿಸಿದಾಗ ಜಡಕ್ಕೆ ಉತ್ಕರ್ಷ ಬಂದಂತೆ ಬ್ರಹ್ಮನಿಗೆ ಅಪಕರ್ಷವೂ ಬರುತ್ತದೆ. ಪರಮ ಚೇತನನಾದ ಬ್ರಹ್ಮನನ್ನು ಜಡವೆಂದು ತಿಳಿದಂತಾಗುತ್ತದೆ. ಹೀಗೆ ಇಂತಹ ಉಪಾಸನೆಯಿಂದ ಜಡಕ್ಕೆ ಉತ್ಕರ್ಷವನ್ನು ತಿಳಿದ ಕಾರಣದಿಂದ ಮೋಕ್ಷರೂಪ ಪುರುಷಾರ್ಥ ಸಿಗುವಂತೆ ಬ್ರಹ್ಮನಿಗೆ ಜಡತ್ವವನ್ನು ತಿಳಿದ ಕಾರಣದಿಂದ ನರಕಾದಿ ಅನರ್ಥಗಳೂ ಯಾಕೆ ಆಗಬಾರದು?

**ಅಚೇತನಸ್ಯ ಬ್ರಹ್ಮತ್ವಧ್ಯಾನೇ ತುಷ್ಟಿರ್ನಹಿ ಕ್ವಚಿತ್ ।**
**ನೀಚಸ್ಯ ಸ್ವಾತ್ಮತಾಜ್ಞಾನಾತ್ ಕು(ಧ್ಯಾನೇ ಕು) ಪ್ಯತಿ ಬ್ರಹ್ಮ**
**ಲೋಕವತ್ ॥ ೫೪ ॥**

ಅಚೇತನಸ್ಯ ಬ್ರಹ್ಮತ್ವಧ್ಯಾನೇ=ಜಡವಾದ ಪ್ರತೀಕಗಳನ್ನು ಬ್ರಹ್ಮನೆಂದು ಧ್ಯಾನಿಸಿದಾಗ ಕ್ವಚಿತ್ ತುಷ್ಟಿಃ ನಹಿ=ಎಂದೂ ಜಡವು ಪ್ರಸನ್ನವಾಗದು. ನೀಚಸ್ಯ ಸ್ವಾತ್ಮತಾಧ್ಯಾನಾತ್=ನೀಚವಾದ ಪ್ರತೀಕದ ಅಭೇದೋಪಾಸನೆ ಮಾಡುವುದ ರಿಂದ ಬ್ರಹ್ಮ ಲೋಕವತ್ ಕುಪ್ಯತಿ=ಲೋಕದಲ್ಲಿ ಜನರಿಗೆ ಕೋಪ ಬರುವಂತೆ ಬ್ರಹ್ಮನೂ ಕೋಪಗೊಳ್ಳುತ್ತಾನೆ.

**ಭಾವಾರ್ಥ—** ಹಿಂದೆ ಪುರುಷಾರ್ಥದಂತೆ ಅನರ್ಥವೂ ಏಕೆ ಆಗ ಬಾರದು? ಎಂದು ಆಕ್ಷೇಪಿಸಲಾಗಿತ್ತು. ವಸ್ತುತಸ್ತು ಅನರ್ಥವೇ ಆಗಬೇಕು. ಜಡಪ್ರತೀಕವನ್ನು ಬ್ರಹ್ಮನೆಂದು ತಿಳಿದಾಗ ಅದಕ್ಕೆ ಉತ್ಕರ್ಷ ಬಂದರೂ ಜಡವಾದುದರಿಂದ ಅದಕ್ಕೇನೂ ಸಂತೋಷವಾಗುವುದಿಲ್ಲ. ಆದರೆ, ಬ್ರಹ್ಮ ಚೇತನ. ಅವನನ್ನು ಜಡಪ್ರತೀಕ ಎಂದು ತಿಳಿದರೆ ಅವನಿಗೆ ಕೋಪ ಬರುವುದಂತೂ ನಿಶ್ಚಿತ. ಲೋಕದಲ್ಲೂ ದೊಡ್ಡವರನ್ನು ಸಣ್ಣದಾಗಿ ಕಂಡಾಗ ಕೋಪಬರುವುದು ಕಂಡಿದೆ. ಆದ್ದರಿಂದ ಅನರ್ಥವು ನಿಶ್ಚಿತ.

**ಚಂಡಾಲೋ ನೃಪ ಇತ್ಯುಕ್ತೇ ನೃಪಶ್ಚಂಡಾಲ ಇತ್ಯಪಿ ।**
**ಕೋ ವಿಶೇಷಃ ಪರಿಜ್ಞಾತೇ ನೃಪೇಣ ಸ್ಯಾತ್ ಕಥಂಚನ ॥ ೫೫ ॥**

ಚಂಡಾಲಃ ನೃಪಃ=ಚಂಡಾಲನು ರಾಜ ಇತ್ಯುಕ್ತೇ=ಹೀಗೆ ಹೇಳಿದರೂ, ನೃಪಃ ಚಂಡಾಲಃ=ರಾಜನು ಚಂಡಾಲ ಇತ್ಯಪಿ ಉಕ್ತೇ=ಹೀಗೆ ಹೇಳಿದರೂ ನೃಪೇಣ ಪರಿಜ್ಞಾತೇ=ಇವೆರಡೂ ರಾಜನಿಂದ ತಿಳಿಯಲ್ಪಟ್ಟಾಗ ಕೋ ವಿಶೇಷಃ ಸ್ಯಾತ್=ಯಾವ ವಿಶೇಷ ಇದ್ದೀತು! ನ ಕಥಂಚಿತ್=ಯಾವ ವಿಶೇಷವೂ ಇಲ್ಲ.

**ಭಾವಾರ್ಥ**—ಲೋಕದಲ್ಲಿ, ಚಂಡಾಲನನ್ನು ರಾಜ, ಎಂದರೂ ರಾಜನು ಚಂಡಾಲ, ಎಂದರೂ ಯಾವ ವಿಶೇಷವೂ ಇಲ್ಲ. ಎರಡಕ್ಕೂ ಒಂದೇ ಅರ್ಥ. ಇವೆರಡರಲ್ಲಿ ಯಾವ ಮಾತನ್ನಾಡಿದರೂ ರಾಜನಿಗೆ ಸಿಟ್ಟು ಬರುತ್ತದೆ. ಆದ್ದರಿಂದ, ಪ್ರತೀಕವು ಬ್ರಹ್ಮ ಎಂದು ಧ್ಯಾನಿಸುವುದಕ್ಕೂ ಬ್ರಹ್ಮನೇ ಪ್ರತೀಕ ಎಂದು ಧ್ಯಾನಿಸುವುದಕ್ಕೂ ಏನೂ ವ್ಯತ್ಯಾಸವಿಲ್ಲ.

**ಪುರತೋ ನರದೇವಸ್ಯ ಚಂಡಾಲೋ ಯದಿ ಪೂಜ್ಯತೇ।**
**ರಾಜವತ್, ಕಿಂ ನ ಕೋಪಃ ಸ್ಯಾದ್ (ಹಿ)ರಾಜ್ಞೋ**
**ಲೋಕೇಽ(ಹಿ)ಭಿಪಶ್ಯತಿ ॥ ೫೬ ॥**

ನರದೇವಸ್ಯ ಪುರತಃ=ರಾಜನ ಸಮ್ಮುಖದಲ್ಲಿ ಲೋಕೇ ಅಭಿಪಶ್ಯತಿ= ಜನರೆಲ್ಲ ನೋಡುತ್ತಿದ್ದಂತೆಯೇ ಚಂಡಾಲೋ ಯದಿ ರಾಜವತ್ ಪೂಜ್ಯತೇ= ಚಂಡಾಲನು ರಾಜನಂತೆ ಸತ್ಕರಿಸಲ್ಪಟ್ಟರೆ ರಾಜ್ಞಃ ಕಿಂ ಕೋಪಃ ನ ಭವಿಷ್ಯತಿ= ರಾಜನಿಗೆ ಕೋಪವು ಬರುವುದಿಲ್ಲವೇನು?

**ಭಾವಾರ್ಥ**— ಮಹಾರಾಜನ ರಥ ನಡೆಸುವ ಸಾರಥಿಯನ್ನು ರಾಜನೆಂದು ಹೊಗಳಿದರೆ ಅವನಿಗೆ ಸಂತೋಷವೂ ಆಗುತ್ತದೆ, ಅವನಿಂದ ಲಾಭವೂ ಆಗಬಹುದು. ಆದರೆ ಅವನ ಮುಂದೆ 'ರಾಜ' ಎನ್ನುವುದು ಬರೀ ಹೊಗಳಿಕೆಯ ಮಾತು ಮಾತ್ರ— 'ಸಿಂಹೋ ಮಾಣವಕಃ' ಎಂದಂತೆ. ಅವನಲ್ಲಿ ನಿಜವಾಗಿಯೂ ರಾಜನೆಂಬ ಭಾವನೆ ಇಲ್ಲ. ನಿಜವಾಗಿ ಆ ಭಾವನೆ ಇದ್ದರೆ ಎಲ್ಲರೂ ನೋಡುತ್ತಿರುವಂತೆ ರಾಜನ ಸಮಕ್ಷಮದಲ್ಲಿಯೆ ರಾಜನಂತೆ ಅವನನ್ನೂ ಗೌರವಿಸಬೇಕಿತ್ತು. ಹಾಗೆ ಗೌರವ ಮಾಡಿದರೆ ರಾಜನಿಗೆ ಸಿಟ್ಟು ಬರುತ್ತದೆ. ಅದರಂತೆ ಪ್ರತಿಮೆಯನ್ನೇ ದೇವರೆಂದು ಪೂಜಿಸಿದರೆ ದೇವರ ನಿಗ್ರಹಕ್ಕೆ ನಾವು ಪಾತ್ರರಾಗುತ್ತೇವೆ.

**ರಾಜ್ಞಸ್ತು ಪುರತಃ ಪ್ರೋಕ್ತೇ ಚಂಡಾಲೋ (ಲಂ) ನೃಪ ಇತ್ಯಪಿ ।**
**ಆತ್ಮಾನಂ ಸ ಇತಿ ಪ್ರೋಕ್ತಮಿತಿವದ್ಧ್ಯೇವ ಕುಪ್ಯತಿ ॥ ೫೭ ॥**

ರಾಜ್ಞಸ್ತು ಪುರತಃ=ರಾಜನ ಸಮ್ಮುಖದಲ್ಲೇ ಚಂಡಾಲೇ=ಚಂಡಾಲನು ನೃಪ ಇತಿ ಪ್ರೋಕ್ತೇ ಸತಿ=ರಾಜನೆಂದು ಭಾವನಾಪೂರ್ವಕವಾಗಿ ಹೇಳಲ್ಪಟ್ಟರೂ ರಾಜನು, ಆತ್ಮಾನಂ ಸ ಇತಿ ಪ್ರೋಕ್ತಂ ಇತಿವತ್ ಏವ=ತನ್ನನ್ನೇ ಚಂಡಾಲ ನೆಂದು ಹೇಳಿದರೆ ಹೇಗೋ ಹಾಗೆ ಕುಪ್ಯತಿ=ಕೋಪಗೊಳ್ಳುತ್ತಾನೆ.

ಭಾವಾರ್ಥ— ರಾಜನ ಮುಂದೆ ಅಂತ್ಯಜನನ್ನು ಗೌರವಿಸುವುದು ಹಾಗಿರಲಿ. 'ಚಂಡಾಲನು ನಿಜವಾಗಿಯೂ ರಾಜನೆಂಬ ಭಾವನೆ ನನ್ನಲ್ಲಿದೆ' ಎಂದು ಹೇಳಿದರೂ ಸಾಕು, ರಾಜನು ತನ್ನನ್ನೇ ಚಂಡಾಲನೆಂದು ಬಗೆದಿದ್ದಾನೆ, ಎನ್ನುವಂತೆ ಅವನಲ್ಲಿ ಸಿಟ್ಟಾಗುತ್ತಾನೆ.

**ಅಭೇದೇ ನೈತಯೋರ್ಧ್ಯಾನೇ ಕೋ ವಿಶೇಷೋ ವಚಸ್ಯಪಿ ।**
**ಅಯಂ ರಾಜಾ ತ್ವಮಿತ್ಯುಕ್ತೇ ಚಂಡಾಲೇಽಥ ನೃಪೇಽಪಿ ಚ ॥ ೫೮ ॥**

**ಚಂಡಾಲ ಇತಿ ತು ಪ್ರೋಕ್ತೇ ಸಮಮೇವ ಹಿ ದೂಷಣಮ್ ।**
**ಧ್ಯಾತೇ ತ್ವೇಕಸ್ಯ ತದ್ಭಾವೇ ತದ್ಭಾವೋಽನ್ಯಸ್ಯ ಕಿಂ ನ ತತ್ ।**
**ನಚೈವ ತದವಿಜ್ಞಾತಂ ಸರ್ವಜ್ಞಬ್ರಹ್ಮಣಾ ಕ್ವಚಿತ್ ॥ ೫೯ ॥**

ಏತಯೋಃ ಅಭೇದೇನ ಧ್ಯಾನೇ=ಬ್ರಹ್ಮ ಮತ್ತು ಪ್ರತೀಕಗಳಲ್ಲಿ ಅಭೇದಭಾವದಿಂದ ಧ್ಯಾನಮಾಡಿದರೆ ಅಂದರೆ ಅವರೆಡೂ ಒಂದೇ ಎಂದು ಧ್ಯಾನಿಸಿದರೆ, ವಚಸ್ಯಪಿ ಕೋ ವಿಶೇಷಃ=ಮಾತಿನಲ್ಲಾದರೂ ವಿಶೇಷವೇನು ಬಂತು? ಹೇಗೆಂದರೆ— ಚಂಡಾಲೇ=ಚಂಡಾಲನಲ್ಲಿ 'ತ್ವಂ ಅಯಂ ರಾಜಾ=ನೀನೇ ಈ ರಾಜನು' ಇತ್ಯುಕೇ=ಹೀಗೆ ಹೇಳಿದರೂ, ನೃಪೇಽಪಿ= ರಾಜನಲ್ಲಿ 'ತ್ವಂ ಅಯಂ ಚಂಡಾಲಃ=ನೀನು ಈ ಚಂಡಾಲನು' ಇತಿ ತು ಪ್ರೋಕ್ತೇ=ಹೀಗೆ ಹೇಳಿದರೂ ದೂಷಣಂ ಸಮಮೇವ=ದೋಷವು ಸಮಾನ ವಾದುದು. ಏಕೆಂದರೆ, ಏಕಸ್ಯ=ಬ್ರಹ್ಮ ಮತ್ತು ಪ್ರತೀಕ ಇವೆರಡರಲ್ಲಿ ಒಂದಕ್ಕೆ ತದ್ಭಾವೇ ಧ್ಯಾತೇ=ಅನ್ಯಾಭೇದವು ಧ್ಯಾನಿಸಲ್ಪಟ್ಟಾಗ ಅಂದರೆ ಪ್ರತಿಮೆಗೆ

ಬ್ರಹ್ಮಾಭೇದವು ಧ್ಯಾನಿಸಲ್ಪಟ್ಟಾಗ ಅನ್ಯಸ್ಯ ಕಿಂ ನ ತತ್=ಇನ್ನೊಂದಕ್ಕೆ ಅಂದರೆ ಬ್ರಹ್ಮನಿಗೆ ಪ್ರತೀಕಾಭೇದವು ಧ್ಯಾನಿಸಿದಂತಾಗುವುದಿಲ್ಲವೇ?

**ತಸ್ಮಾದಪೇಶಲಂ ಸರ್ವಮನ್ಯಸ್ಯ ಬ್ರಹ್ಮತಾವಚಃ ।**
**ತಸ್ಮಾದ್ ಯಥೋಕ್ತಮಾರ್ಗೇಣ ಬ್ರಹ್ಮೋಪಾಸ್ಯಂ ಮುಮುಕ್ಷುಭಿಃ ॥ ೬೦ ॥**

ಸರ್ವಜ್ಞಬ್ರಹ್ಮಣಾ=ಸರ್ವಜ್ಞನಾದ ಬ್ರಹ್ಮನಿಂದ ತತ್=ಪ್ರತಿಮಾ ಭೇದೋಪಾಸನೆಯು ಕ್ವಚಿತ್=ಎಂದೂ ಅವಿಜ್ಞಾತಂ ನ ಚೈವ=ತಿಳಿದಿಲ್ಲ, ಎನ್ನುವಂತಿಲ್ಲ. ತಸ್ಮಾತ್=ಆದ್ದರಿಂದ ಯಥೋಕ್ತಮಾರ್ಗೇಣ=ಪ್ರತೀಕದಲ್ಲಿ ಬ್ರಹ್ಮ, ಎಂಬ ಕ್ರಮದಿಂದಲೇ ಬ್ರಹ್ಮ=ಬ್ರಹ್ಮನು ಮುಮುಕ್ಷುಭಿಃ ಉಪಾಸ್ಯಂ= ಮೋಕ್ಷಾರ್ಥಿಗಳಿಂದ ಧ್ಯಾನಿಸಲ್ಪಡಬೇಕು.

ಭಾವಾರ್ಥ— ಹಿಂದೆ ನಾಮಾದಿಪ್ರತೀಕಗಳನ್ನು ಉದ್ದೇಶಿಸಿ ಬ್ರಹ್ಮತ್ವವಿಧಾನ ಅಂದರೆ 'ಪ್ರತೀಕವೇ ಬ್ರಹ್ಮ' ಎನ್ನುವುದಕ್ಕೂ ಬ್ರಹ್ಮನನ್ನು ಉದ್ದೇಶಿಸಿ ಪ್ರತೀಕತ್ವವಿಧಾನ ಅಂದರೆ 'ಬ್ರಹ್ಮನೇ ಪ್ರತೀಕ' ಎನ್ನುವುದಕ್ಕೂ ಅರ್ಥತಃ ಭೇದವಿದ್ದರೂ ಫಲತಃ ಭೇದವಿಲ್ಲ, ಎಂದು 'ಚಂಡಾಲೋ ನೃಪ ಇತ್ಯುಕ್ತೇ' ಎಂಬ ಅನುವ್ಯಾಖ್ಯಾನದಲ್ಲಿ ಹೇಳಲಾಗಿದೆ. ಇಲ್ಲಿ ಎರಡಕ್ಕೂ ಅರ್ಥತಃ ವ್ಯತ್ಯಾಸವೂ ಇಲ್ಲ, ಎಂದು ಹೇಳಲಾಗಿದೆ. 'ಚಂಡಾಲನನ್ನು ರಾಜ' ಎಂದು ಹೇಳಿದಾಗಲೂ 'ರಾಜ ಚಂಡಾಲ' ಎಂದರೂ ರಾಜ ಮತ್ತು ಚಂಡಾಲನಿಗೆ ಅಭೇದವು ಹೇಳಿದಂತಾಗಿ ರಾಜನಿಗೆ ನೀಚತ್ವವು ಬಂದೇ ಬರುತ್ತದೆ. ಅದರಂತೆ 'ನಾಮ ಬ್ರಹ್ಮೇತ್ಯುಪಾಸೀತ' ಎನ್ನುವ ಶ್ರುತಿ ಹೇಳಿದಂತೆ ನಾಮವೇ ಬ್ರಹ್ಮನೆಂದು ಧ್ಯಾನ ಮಾಡಿದರೂ ಬ್ರಹ್ಮನಿಗೆ ಜಡತ್ವವು ಬಂದೇ ಬರುತ್ತದೆ. ಅದು ಸರ್ವಜ್ಞನಾದ ಬ್ರಹ್ಮನಿಗೂ ತಿಳಿಯುತ್ತದೆ. ಅದರಿಂದ ಉಪಾಸಕನಿಗೆ ನಿಗ್ರಹವು ಆಗುತ್ತದೆ. ಆದ್ದರಿಂದ ಮೋಕ್ಷಾರ್ಥಿಗಳು ಪ್ರತೀಕ ಗಳಲ್ಲಿ ಬ್ರಹ್ಮನಿದ್ದಾನೆ, ಎಂದೇ ಧ್ಯಾನಿಸಬೇಕು.

ಇಲ್ಲಿಗೆ ಬ್ರಹ್ಮದೃಷ್ಟ್ಯಧಿಕರಣವು ಮುಗಿಯಿತು.

# ತದಧಿಗಮಾಧಿಕರಣ

## 'ಓಂ ತದಧಿಗಮ ಉತ್ತರಪೂರ್ವಾಘಯೋರಶ್ಲೇಷವಿನಾಶೌ ತದ್ವ್ಯಪದೇಶಾತ್ ಓಂ'

**ತಥೋಪಾಸ್ಯಾಂಜಸಾ ದೃಷ್ಟಂ ಬ್ರಹ್ಮ ಪಾಪಂ ಚ ಭಸ್ಮಸಾತ್ ।**
**ಕರೋತಿ ನಿಖಿಲಂ ಪೂರ್ವಂ ಪಾಶ್ಚಾತ್ತ್ಯಸ್ಯಾಪ್ಯಸಂಗತಾಮ್ ॥ ೬೧ ॥**

ತಥಾ=ಹಿಂದೆ ಹೇಳಿರುವಂತೆ ಅಂಜಸಾ=ಆದರದಿಂದ ಮತ್ತು ನಿರಂತರವಾಗಿ ಉಪಾಸ್ಯ=ಧ್ಯಾನಿಸಿ ದೃಷ್ಟಂ ಬ್ರಹ್ಮ=ಅಪರೋಕ್ಷೀಕೃತನಾದ ಬ್ರಹ್ಮನು ಪೂರ್ವಂ ನಿಖಿಲಂ ಪಾಪಂ=ಜ್ಞಾನಕ್ಕಿಂತ ಮೊದಲು ಸಂಚಿತವಾದ ಪಾಪ ಮತ್ತು ಅನಿಷ್ಟಪುಣ್ಯವನ್ನು ಭಸ್ಮಸಾತ್ ಕರೋತಿ=ಸುಟ್ಟು ಬೂದಿ ಮಾಡುವನು. ಪಾಶ್ಚಾತ್ತ್ಯಸ್ಯಾಪಿ ಅಸಂಗತಾಂ ಕರೋತಿ=ಮುಂದೆ ಬರಬಹುದಾದ ಪಾಪದ ಲೇಪವು ಜ್ಞಾನಿಗೆ ಆಗದಂತೆ ಮಾಡುವನು.

**(ಕರೋತಿ) ತದ್ದ್ವಿಷಶ್ಚೈವಂ ಪುಣ್ಯನಾಶೋಽಪ್ಯಸಂಗತಾ ।**
**ಯದೇವ ವಿದ್ಯಯೇತ್ಯತ್ರ ಪೂರ್ವೋಕ್ತಾದ್ಧಿ ವಿಶಿಷ್ಯತೇ ॥ ೬೨ ॥**

**ಪೂರ್ವಂ ಸ್ವರ್ಗಾದಿಲಬ್ಧ್ಯರ್ಥಂ ವೀರ್ಯವತ್ತ್ವೇನ ಚೋದಿತಮ್ ।**
**ಕರ್ಮ ವಿದ್ಯಾಯುತಂ ಪಶ್ಚಾನ್ಮೋಕ್ಷೇ ವೀರ್ಯಪ್ರದಂ ತ್ವಿತಿ ॥ ೬೩ ॥**

ತದ್ ದ್ವಿಷಶ್ಚೈವಂ=ಬ್ರಹ್ಮದ್ವೇಷಿಗಳಿಗೂ ಹೀಗೆಯೇ ಪುಣ್ಯನಾಶಃ=ದ್ವೇಷ ಪರಿಪೂರ್ಣವಾದಾಗ ಪೂರ್ವದಲ್ಲಿ ಸಂಚಿತವಾದ ಪುಣ್ಯದ ನಾಶ ಮತ್ತು ಅಸಂಗತಾ=ಮುಂದೆ ಮಾಡುವ ಪುಣ್ಯದ ಅಲೇಪವು ಆಗುತ್ತದೆ. 'ಯದೇವ ವಿದ್ಯಯಾ' ಇತ್ಯತ್ರ='ಯದೇವ ವಿದ್ಯಯಾ' (4-8-18) ಎಂಬ ಇಲ್ಲಿರುವ ಸೂತ್ರದಲ್ಲಿ ಪೂರ್ವೋಕ್ತಾತ್=ತಚ್ಛ್ರುತೇಃ(3.4.8)ಎಂಬ ಸೂತ್ರದಲ್ಲಿ ಹಿಂದೆ ಹೇಳಿರುವುದಕ್ಕಿಂತ ವಿಶಿಷ್ಯತೇ=ವಿಶೇಷವನ್ನು ಹೇಳಿದಂತಾಗುತ್ತದೆ. ಪೂರ್ವಂ=ಹಿಂದೆ ಸ್ವರ್ಗಾದಿ ಲಬ್ಧ್ಯರ್ಥಂ=ಮೋಕ್ಷೇತರಪುರುಷಾರ್ಥ ಪ್ರಾಪ್ತಿಗೆ ವಿದ್ಯಾಯುತಂ ಕರ್ಮ=ಜ್ಞಾನಪೂರ್ವಕವಾದ ಕಾಮ್ಯಕರ್ಮವು

ವೀರ್ಯವತ್ತ್ವೇನ=ಸಮರ್ಥವಾಗಿ ವಿದಿತಂ ಚ=ತಿಳಿಯಲ್ಪಟ್ಟಿದೆ. ಪಶ್ಚಾತ್ತು= 'ಯದೇವ ವಿದ್ಯಯೇತಿ ಹಿ' ಎನ್ನುವ ಇಲ್ಲಿರುವ ಸೂತ್ರದಿಂದ ವಿದ್ಯಾಯುತಂ ಕರ್ಮ=ಜ್ಞಾನಪೂರ್ವಕವಾದ ಕರ್ಮವು ವೀರ್ಯಪ್ರದಂ ತು ಇತಿ= ಮೋಕ್ಷದಲ್ಲಿ ಆನಂದಾತಿಶಯಕ್ಕೆ ಕಾರಣವಾಗುತ್ತದೆ ಎಂದು ಹೇಳಲ್ಪಟ್ಟಿದೆ.

**ಭಾವಾರ್ಥ—** ಹಿಂದೆ ಮೂರನೆಯ ಅಧ್ಯಾಯದ ನಾಲ್ಕನೆಯ ಪಾದದ ಪುರುಷಾರ್ಥಾಧಿಕರಣದಲ್ಲಿರುವ 'ತಚ್ಛ್ರುತೇಃ' ಎಂಬ ಸೂತ್ರದಲ್ಲಿ 'ಯದೇವ ವಿದ್ಯಯಾ ಕರೋತಿ...' ಎಂಬ ಶ್ರುತಿಯನ್ನು ಉಲ್ಲೇಖಿಸಿ ಜ್ಞಾನಿಕೃತವಾದ ಕರ್ಮವು ವೀರ್ಯವತ್ತರವಾಗಿದ್ದು ಪುರುಷಾರ್ಥಸಾಧನವಾಗುತ್ತದೆ, ಎಂದು ಹೇಳಲಾಗಿದೆ. ಮತ್ತೆ ಇಲ್ಲಿರುವ ತದಧಿಗಮಾಧಿಕರಣದ 'ಯದೇವ ವಿದ್ಯಯೇತಿ ಹಿ' ಎಂಬ ಸೂತ್ರದಲ್ಲಿ ಅದೇ ಶ್ರುತಿಯನ್ನು ಉಲ್ಲೇಖಿಸಿ ಅದೇ ವಿಷಯವನ್ನು ಹೇಳಲಾಗಿದೆ. ಇದರಿಂದ ಪುನರುಕ್ತಿಯಾದಂತೆ ಕಾಣುತ್ತದೆ. ಅದರ ಪರಿಹಾರವನ್ನು ಇಲ್ಲಿ ಮಾಡಲಾಗಿದೆ. ಹಿಂದೆ ಜ್ಞಾನಿಕೃತವಾದ ಕರ್ಮವು ಜ್ಞಾನಸಹಿತವಾಗಿ ಸ್ವರ್ಗಾದಿಫಲಕ್ಕೆ ಕಾರಣವೆಂದು ಹೇಳಲಾಗಿದೆ. ಇಲ್ಲಿ ಅದೇ ಕರ್ಮವು ಮೋಕ್ಷಾನಂದವೃದ್ಧಿಗೆ ಕಾರಣವೆಂದು ಹೇಳಲಾಗಿದೆ.

**ತತೋ ಭೋಗೇನ ಪುಣ್ಯಂ ಚ ಕ್ಷಪಯಿತ್ವೇತರತ್ ತಥಾ ।**
**ಬ್ರಹ್ಮದ್ವಿಡ್ ಬ್ರಹ್ಮದರ್ಶೀ ಚ ತಮೋಮೋಕ್ಷಾವವಾಪ್ನುತಃ ॥ ೬೪ ॥**

ತತಃ=ಅನಾರಬ್ಧಪುಣ್ಯ–ಪಾಪಗಳ ನಾಶವಾದ ಮೇಲೆ ಜ್ಞಾನಿಯು ಭೋಗೇನ=ಭೋಗಮಾಡುವ ಮೂಲಕ ಇತರತ್=ಆರಬ್ಧ ಪಾಪವನ್ನು ತಥಾ ಪುಣ್ಯಂಚ=ಅದರಂತೆಯೇ ಪುಣ್ಯವನ್ನೂ ಕ್ಷಪಯಿತ್ವಾ=ನಾಶಮಾಡಿ ಬ್ರಹ್ಮದ್ವಿಟ್=ಬ್ರಹ್ಮದ್ವೇಷಿಯೂ ಬ್ರಹ್ಮಜ್ಞಾನೀ ಚ=ಬ್ರಹ್ಮಜ್ಞಾನಿಯೂ ಕ್ರಮ ವಾಗಿ ತಮೋ–ಮೋಕ್ಷೌ=ತಮಸ್ಸನ್ನೂ ಮೋಕ್ಷವನ್ನೂ ಅವಾಪ್ನುತಃ=ಹೊಂದು ತ್ತಾರೆ.

**ಬ್ರಹ್ಮಣಾಂ ಶತಕಾಲಾತ್ತು ಪೂರ್ವಮಾರಬ್ಧಸಂಕ್ಷಯಃ ।**
**ಬ್ರಹ್ಮಣಸ್ತ್ವೇವ ತಾವತ್ತ್ವಂ ಪಂಚಾಶದ್ ಬ್ರಹ್ಮಣಸ್ತಥಾ ॥ ೬೫ ॥**

**ರುದ್ರಸ್ಯ ವಿಂಶದೇವ ಸ್ಯಾದಿಂದ್ರಸ್ಯಾರ್ಕಾದಿಕೇ ದಶ ।**
**ಅನ್ಯೇಷಾಂ ಬ್ರಹ್ಮಮಾತ್ರಸ್ಯ ತ್ವಂತ ಆರಬ್ಧಸಂಕ್ಷಯಃ ॥ ೬೬ ॥**

**ಬ್ರಹ್ಮಣೈವ ಸಹಾತಶ್ಚ ಪರಂ ನಾರಾಯಣಂ ವ್ರಜೇತ್ ।**
**ಇತಿ ಸತ್ತತ್ವವಚನಂ ಸ್ವಯಂ ಭಗವತೋದಿತಮ್ ॥ ೬೭ ॥**

ಬ್ರಹ್ಮಣಾಂ ಶತಕಾಲಾತ್ತು=ನೂರು ಮಂದಿ ಚತುರ್ಮುಖಬ್ರಹ್ಮರ ಕಾಲಕ್ಕಿಂತ ಪೂರ್ವಂ=ಮೊದಲೇ ಎಲ್ಲಾ ಜ್ಞಾನಿಗಳ ಆರಬ್ಧಸಂಕ್ಷಯಃ= ಪ್ರಾರಬ್ಧಕರ್ಮದ ನಾಶವು ಆಗುತ್ತದೆ. ಬ್ರಹ್ಮಣಸ್ತು=ಬ್ರಹ್ಮನಿಗಾದರೋ ತಾವತ್ತ್ವಮೇವ=ನೂರು ಬ್ರಹ್ಮರ ಕಲ್ಪಪರ್ಯಂತ ಪ್ರಾರಬ್ಧವು ಕ್ಷಯ ವಾಗುತ್ತದೆ. ರುದ್ರಸ್ಯ=ರುದ್ರದೇವನಿಗಾದರೋ ತಥಾ=ಹಾಗೆಯೇ ಪಂಚಾಶದ್‌ಬ್ರಹ್ಮಣಾಂ ಪೂರ್ವಂ=50 ಬ್ರಹ್ಮರ ಕಲ್ಪಕ್ಕಿಂತ ಮೊದಲೇ ಅಂದರೆ ರುದ್ರಪದವಿಗೆ ಬರಲು 39 ಬ್ರಹ್ಮಕಲ್ಪ, ರುದ್ರಪದವಿಯಲ್ಲಿ ಬಂದು ಕಲ್ಪ ಮತ್ತು ಶೇಷಪದವಿಯ ಪ್ರಾಪ್ತಿಯ ಅನಂತರ ಒಂದು ಕಲ್ಪ ಒಟ್ಟು 41 ಬ್ರಹ್ಮರ ಕಲ್ಪಗಳಲ್ಲಿ ಪ್ರಾರಬ್ಧಭೋಗ. ಶೇಷಪದವಿಯಲ್ಲಿರುವ ಒಂದು ಕಲ್ಪ ಸಮಾಪ್ತಿ ಯಾದಾಗ ಮೋಕ್ಷವಾಗುತ್ತದೆ. ('ತಥೈವ ಚತ್ವಾರಿಂಶದ್ಭಿಃ ಪದಂ ಶೈವಂ ಚ ಜನ್ಮಭಿಃ' (ಭಾ.ತಾ.4) ಇಂದ್ರಸ್ಯ=ಇಂದ್ರನಿಗೆ ವಿಂಶದೇವ ಸ್ಯಾತ್=20 ಬ್ರಹ್ಮರ ಕಲ್ಪಗಳಲ್ಲೇ ಪ್ರಾರಬ್ಧ ನಾಶ. ಅರ್ಕಾದಿಕೇ= ಸೂರ್ಯಾದಿದೇವತೆಗಳಿಗೆ ದಶ=ಹತ್ತುಬ್ರಹ್ಮರ ಕಲ್ಪಗಳಲ್ಲಿ ಪ್ರಾರಬ್ಧಕ್ಷಯ. ಅನ್ಯೇಷಾಂ=ಉಳಿದ ಜ್ಞಾನಿಗಳಿಗೆ ಬ್ರಹ್ಮಮಾತ್ರಸ್ಯ=ಒಬ್ಬ ಬ್ರಹ್ಮನ ಕಾಲಪರ್ಯಂತವಾಗಿ ಅಂದರೆ ದೇವಮಾನದಲ್ಲಿ ನೂರುವರ್ಷಗಳ (ಬ್ರಹ್ಮದೇವನ ಪರಾಯುಷ್ಯದ ಕೊನೆಯಲ್ಲಿ) ಅಂತೇ=ಕೊನೆಯ ಒಳಗೇ ಆರಬ್ಧಸಂಕ್ಷಯಃ=ಪ್ರಾರಬ್ಧಕರ್ಮ ನಾಶ. ಅತಶ್ಚ ಪರಂ=ಅದರ ನಂತರವೂ ಬ್ರಹ್ಮಣೈವ ಸಹ=ಚತುರ್ಮುಖ ಬ್ರಹ್ಮದೇವನೊಂದಿಗೇ ಪರಂ ನಾರಾಯಣಂ ವ್ರಜೇತ್=ಸರ್ವೋತ್ತಮನಾದ ನಾರಾಯಣನ ಬಳಿಗೆ ಹೋಗುವರು.

ಇತಿ=ಹೀಗೆ ಭಗವತಾ ಉದಿತಂ=ಶ್ರೀಮನ್ನಾರಾಯಣನಿಂದ ಹೇಳಲ್ಪಟ್ಟಿರುವ ಸತ್ತತ್ವವಚನಂ=ಸತ್ತತ್ವಗ್ರಂಥದ ಮಾತು.

ಎಲ್ಲರಿಗೂ ಅಪರೋಕ್ಷಜ್ಞಾನ ಬಂದಮೇಲೆ ಪ್ರಾರಬ್ಧಕರ್ಮದ ಭೋಗವು ಆರಂಭವಾಗುತ್ತದೆ. ಈಗಿರುವ ಚತುರ್ಮುಖನು ಇಂತಹ ಹಿಂದಿನ ನೂರು ಬ್ರಹ್ಮರಲ್ಲಿ 100ನೇ ಬ್ರಹ್ಮನ ಕಲ್ಪದಲ್ಲಿ ಅಪರೋಕ್ಷವನ್ನು ಪಡೆದಿರುತ್ತಾನೆ. ಅಲ್ಲಿಂದ ಅವನ ಪ್ರಾರಬ್ಧಭೋಗವು ಆರಂಭವಾಗಿದೆ. ಅದರಂತೆ ಇತರ ರುದ್ರಾದಿಗಳಿಗೂ ತಿಳಿಯಬೇಕು.

**ಇಲ್ಲಿಗೆ ನಾಲ್ಕನೆಯ ಅಧ್ಯಾಯದ ಮೊದಲ ಪಾದ ಮುಗಿಯಿತು.**

|| ಶ್ರೀವೇದವ್ಯಾಸೋ ವಿಜಯತೇ ||

ಶ್ರೀಮದಾನಂದತೀರ್ಥಭಗವತ್ಪಾದರು ರಚಿಸಿದ

# ಶ್ರೀಮದನುವ್ಯಾಖ್ಯಾನ

## ನಾಲ್ಕನೇ ಅಧ್ಯಾಯದ ಎರಡನೆಯ ಪಾದ

## ಉತ್ಕ್ರಾಂತಿಪಾದ

**ಓಂ || ದೇವಾನಾಂ ಚ ಮನುಷ್ಯಾಣಾಮೇತಾವತ್ ಸಮಮೇವ ಹಿ |**
**ಉತ್ಕ್ರಾಂತಿಮಾರ್ಗೌ ದೇವಾನಾಂ ನ ಪ್ರಾಯೇಣ ಭವಿಷ್ಯತಃ || ೧ ||**

ಏತಾವತ್=ಹಿಂದಿನ ಪಾದದಲ್ಲಿ ಹೇಳಿರುವ ಕರ್ಮನಾಶವೆಂಬ ಜ್ಞಾನಫಲವು ದೇವಾನಾಂ ಮನುಷ್ಯಾಣಾಂ ಚ ಸಮಮೇವ=ದೇವತೆಗಳಿಗೂ ಮನುಷ್ಯರಿಗೂ ಸಮಾನವಾದುದು. ಅದು ಇಬ್ಬರಿಗೂ ಇದೆ. ಉತ್ಕ್ರಾಂತಿ–ಮಾರ್ಗೌ=ದೇಹದಿಂದ ಉತ್ಕ್ರಾಂತಿ ಮತ್ತು ಅರ್ಚಿರಾದಿ ಮಾರ್ಗ ಇವೆರಡು ಪ್ರಾಯೇಣ=ಹೆಚ್ಚಿನಂಶ ದೇವಾನಾಂ=ದೇವತೆಗಳಿಗೆ ನ ಭವಿಷ್ಯತಃ=ಇರುವುದಿಲ್ಲ.

**ಭಾವಾರ್ಥ**— ಈ ಅಧ್ಯಾಯದ ಮೊದಲ ಪಾದ ಕರ್ಮಕ್ಷಯಪಾದ. ಅಪರೋಕ್ಷಜ್ಞಾನದಿಂದ ಕರ್ಮಕ್ಷಯವನ್ನು ಆ ಪಾದದಲ್ಲಿ ಹೇಳಲಾಗಿದೆ. ಅದು ದೇವತೆಗಳು ಮತ್ತು ಇತರರಿಗೆ ಸಮಾನ. ಎರಡನೆಯ ಈ ಪಾದದಲ್ಲಿ ''ಮಾರ್ಗೋ ಗಮ್ಯಂ ಚ ಅಸ್ಮಿನ್ ಪಾದೇ ಉಚ್ಯತೇ' ಎಂದು ಭಾಷ್ಯದಲ್ಲಿ ಹೇಳಿರುವಂತೆ ದೇವತೆಗಳಲ್ಲದವರಿಗೆ ಅರ್ಚಿರಾದಿಮಾರ್ಗ, ದೇಹದಿಂದ ಉತ್ಕ್ರಾಂತಿ ಹಾಗೂ ದೇವತೆಗಳಿಗೆ ಮತ್ತು ತದಿತರರಿಗೆ ಗಮ್ಯವಾದ ಬ್ರಹ್ಮಸ್ವರೂಪವು ಹೇಳಲ್ಪಟ್ಟಿದೆ.

**ಕರ್ಮಕ್ಷಯಸ್ತಥೋತ್ಕ್ರಾಂತಿರ್ಮಾರ್ಗೋ ಭೋಗಶ್ಚತುಷ್ಟಯಮ್ |**
**ಫಲಂ ಮೋಕ್ಷ ಇತಿ ಪ್ರೋಕ್ತಂ (ಕ್ತಃ) ಕ್ರಮಾತ್ ಪಾದೇಷು**
**ಚೋದಿತಮ್ (ತಃ) || ೨ ||**

ಕರ್ಮಕ್ಷಯಃ=ಪುಣ್ಯ–ಪಾಪಗಳ ನಾಶ, ತಥಾ=ಅದರಂತೆ, (ದ್ವಿತೀಯ ಪಾದದಲ್ಲಿ) ಉತ್ಕ್ರಾಂತಿಃ=ಚರಮದೇಹದಿಂದ ಉತ್ಕ್ರಮಣ ಮಾರ್ಗಃ= ಬ್ರಹ್ಮಪ್ರಾಪ್ತಿ ಭೋಗಃ=ಆನಂದಾನುಭವ ಇವುಗಳು ಫಲಂ ಮೋಕ್ಷಃ=ಜ್ಞಾನ ಫಲವಾದ ಮೋಕ್ಷವು ಇತಿ ಪ್ರೋಕ್ತಃ=ಹೀಗೆ ಹೇಳಲ್ಪಟ್ಟಿವೆ. ಇವುಗಳೇ ಕ್ರಮವಾಗಿ ಪಾದೇಷು=ನಾಲ್ಕು ಪಾದಗಳಲ್ಲಿ ಉದಿತಶ್ಚ=ಹೇಳಲ್ಪಟ್ಟಿವೆ.

ಭಾವಾರ್ಥ— ಇದು ಫಲಾಧ್ಯಾಯ. ಜ್ಞಾನಫಲವನ್ನು ಈ ಅಧ್ಯಾಯದ ನಾಲ್ಕು ಪಾದಗಳಲ್ಲಿ ಹೇಳಲಾಗಿದೆ. ಜ್ಞಾನ ಬಂದ ಕೂಡಲೇ ಸಂಚಿತಕರ್ಮ ನಾಶವಾಗುತ್ತದೆ. ಅದೇ ಕರ್ಮಕ್ಷಯ. ಅದನ್ನು ಪ್ರಥಮ ಪಾದದಲ್ಲಿ ಹೇಳಲಾಗಿದೆ. ಕರ್ಮಕ್ಷಯವಾದಾಗ ದೇಹದಿಂದ ಉತ್ಕ್ರಾಂತಿ (ದೇವತೆಗಳಿಗೆ ಸ್ವೋತ್ತಮರಲ್ಲಿ ಲಯ). ಇದನ್ನು ದ್ವಿತೀಯಪಾದದಲ್ಲಿ ಹೇಳಲಾಗಿದೆ. ತೃತೀಯಪಾದದಲ್ಲಿ ಜೀವರಿಗೆ ಅರ್ಚಿರಾದಿ ಮೋಕ್ಷಮಾರ್ಗ ವನ್ನು, ದೇವತೆಗಳಿಗೆ ಲಯವನ್ನೂ ಹೇಳಲಾಗಿದೆ. ಕೊನೆಯ ಪಾದದಲ್ಲಿ ಭೋಗ ಅಂದರೆ ಬ್ರಹ್ಮಪ್ರಾಪ್ತಿಯಿಂದ ಆನಂದವನ್ನು ಹೇಳಲಾಗಿದೆ.

**ಸ್ರಷ್ಟೃಷ್ವೇವ ಚ ಸೃಜ್ಯಾನಾಂ ಪ್ರವೇಶೋ ಬ್ರಹ್ಮಣೋ ಲಯೇ ।**
**ದೇವಾನಾಂ ಮಾರ್ಗ ಉದ್ದಿಷ್ಟೋ ನಾರ್ಚಿರಾದಿರ್ನಚೋತ್ಕ್ರಮಃ ॥ ೩ ॥**

ಬ್ರಹ್ಮಣಃ ಲಯೇ=ಬ್ರಹ್ಮಲಯಕಾಲದಲ್ಲಿ ಸೃಜ್ಯಾನಾಂ=ಸೃಷ್ಟಿ ಗೊಂಡಿರುವ ದೇವತೆಗಳಿಗೆ ಸ್ರಷ್ಟೃಷು ಪ್ರವೇಶಃ ಏವ=ತಮ್ಮನ್ನು ಸೃಷ್ಟಿಮಾಡಿರುವ ದೇವತೆಗಳಲ್ಲಿ ಸಶರೀರ ಪ್ರವೇಶವೇ ದೇವಾನಾಂ= ದೇವತೆಗಳಿಗೆ ಮಾರ್ಗಃ=ಮೋಕ್ಷಮಾರ್ಗವೆಂದು ಉದ್ದಿಷ್ಟಃ=ಹೇಳಲ್ಪಟ್ಟಿದೆ. ನ ಅರ್ಚಿರಾದಿ=ಮನುಷ್ಯರಿಗೆ ಇರುವಂತೆ ಅರ್ಚಿರಾದಿ ಮಾರ್ಗಗಳು ದೇವತೆಗಳಿಗಿಲ್ಲ. ನ ಚ ಉತ್ಕ್ರಮಃ=ದೇಹದಿಂದ ನಿರ್ಗಮನವೂ ಅವರಿಗಿಲ್ಲ.

**ಸ್ರಷ್ಟುಸ್ತು ಗ್ರಾಸಭೂತಸ್ಯ ದೇಹಸ್ತತ್ರ ಲಯಂ ವ್ರಜೇತ್ ।**
**ಯತಃ ಸೃಜ್ಯಸ್ಯ ದೇವಸ್ಯ ನೈವೋತ್ಕ್ರಾಂತಿಸ್ತತೋ ಭವೇತ್ ॥ ೪ ॥**

ಸ್ರಷ್ಟುಃ=ತಮ್ಮ ಸೃಷ್ಟಿಗೆ ಕಾರಣವಾದ ದೇವತೆಗೆ ಗ್ರಾಸಭೂತಸ್ಯ=

ತುತ್ತಾಗುವ ದೇವತೆಯ ದೇಹಃ=ಶರೀರವೂ ತತ್ರ=ದೇವತಾಲಯಾಧಿಷ್ಠಾನದಲ್ಲೇ ಲಯಂ ವ್ರಜೇತ್=ಲಯಹೊಂದುತ್ತದೆ, ತತಃ=ಆದ್ದರಿಂದ ಸೃಜ್ಯಸ್ಯ ದೇವಸ್ಯ=ಸೃಷ್ಟಿಗೊಳಗಾಗುವ ದೇವತೆಗೆ ಉತ್ಕ್ರಾಂತಿಃ ನೈವ ಭವೇತ್=ದೇಹದಿಂದ ಉತ್ಕ್ರಾಂತಿಯು ಆಗಲಾರದು.

ಭಾವಾರ್ಥ— ದೇವತೆಗಳಿಗೆ ಉಳಿದ ಸಾಧಕರಿಗೆ ಇರುವಂತೆ ಉತ್ಕ್ರಾಂತಿಯಾಗಲೀ ಮಾರ್ಗವಾಗಲೀ ಇಲ್ಲ. ತಮ್ಮತಮ್ಮ ಸೃಷ್ಟಿಗೆ ಕಾರಣರಾದ ಅವರ ದೇವತೆಗಳು ಸ್ವೋತ್ತಮರಲ್ಲಿ ಲಯವಾಗುವಾಗ ತದಧಿಷ್ಠಿತವಾದ ದೇಹವೂ ಲಯವಾಗುತ್ತದೆ. ಹೀಗಾಗಿ ದೇವತೆಗಳಿಗೆ ತಮ್ಮ ದೇಹದಿಂದ ಉತ್ಕ್ರಾಂತಿಯೂ ಇಲ್ಲ.

**ಲಯಾಚ್ಚೈವಾರ್ಚಿರಾದೀನಾಂ ಲೋಕಾನಾಮಪಿ ಸರ್ವಶಃ ।**
**ಕಥಂ ಮಾರ್ಗೋ ಭವೇತ್ ತೇಷಾಂ ವಿಶತಾಮುತ್ತಮಂ (ರಂ) ಸ್ವತಃ**
**॥ ೫ ॥**

ದೇವತೆಗಳು ಸ್ವೋತ್ತಮರಲ್ಲಿ ಲಯವಾಗುವ ಮೊದಲೇ ಅರ್ಚಿರಾದೀನಾಂ ಲೋಕಾನಾಂ ಸರ್ವಶಃ ಲಯಾಚ್ಚ=ಅರ್ಚಿರಾದಿ ದೇವತಾ ಲೋಕಗಳು ಸಂಪೂರ್ಣವಾಗಿ ಲಯವಾಗುವುದರಿಂದಲೂ ಸ್ವತಃ ಉತ್ತರಂ ವಿಶತಾಂ ತೇಷಾಂ=ತಾವಾಗಿಯೇ ಸ್ವೋತ್ತಮದೇವತೆಗಳಲ್ಲಿ ಪ್ರವೇಶಿಸುವ ಅವರಿಗೆ ಮಾರ್ಗಃ ಕಥಂ ಭವೇತ್=ಅರ್ಚಿರಾದಿ ಮಾರ್ಗಗಮನ ಇರುವುದಾದರೂ ಹೇಗೆ? ಆದ್ದರಿಂದ ದೇವತೆಗಳಿಗೆ ಮಾರ್ಗವೂ ಇಲ್ಲ.

**ಜಾತಾನಾಂ ಮಾನುಷೇ ಲೋಕೇ ದೇವಾನಾಂ ತು (ಚ) ಕದಾಚನ ।**
**ಉತ್ಕ್ರಾಂತಿಮಾರ್ಗೌ ಭವತೋ ನ ತದಾ ಮುಕ್ತಿರಿಷ್ಯತೇ ॥ ೬ ॥**

ಕದಾಚನ ಮಾನುಷೇ ಲೋಕೇ ಜಾತಾನಾಂ ದೇವಾನಾಂ ತು=ಕೆಲವೊಮ್ಮೆ ಶಾಪಾದಿಕಾರಣಗಳಿಂದ ಮನುಷ್ಯಲೋಕದಲ್ಲಿ ಹುಟ್ಟಿದ ದೇವತೆಗಳಿಗಾದರೋ ಉತ್ಕ್ರಾಂತಿಮಾರ್ಗೌ ಭವತಃ=ಉತ್ಕ್ರಾಂತಿ ಮತ್ತು ಅರ್ಚಿರಾದಿ ಮಾರ್ಗಗಳು ಇರುತ್ತವೆಯಾದರೂ ತದಾ ನ ಮುಕ್ತಿರಿಷ್ಯತೇ=ಆಗಲೇ ಅವರಿಗೆ ಮೋಕ್ಷವಾಗುವುದಿಲ್ಲ. ಮೂಲರೂಪದಲ್ಲಿ ಐಕ್ಯಮಾತ್ರಆಗುತ್ತದೆ.

ಅನ್ಯೇಷಾಮಪಿ ಸಾಕ್ಷಾತ್ತು ಮುಕ್ತಿಃ ಪ್ರಾಪ್ಯಾಪಿ ತಂ ಹರಿಮ್ ।
ಸಹೈವ ಬ್ರಹ್ಮಣಾ ಭೂಯಾದಿತಿ ಶಾಸ್ತ್ರಸ್ಯ ನಿರ್ಣಯಃ ॥ ೭ ॥

ಅನ್ಯೇಷಾಮಪಿ=ದೇವತೆಗಳಲ್ಲದವರಿಗೂ ತಂ ಹರಿಂ ಪ್ರಾಪ್ಯಾಪಿ=ಆ ವೈಕುಂಠಗತನಾದ ಭಗವಂತನನ್ನು ಹೊಂದಿದರೂ ಸಾಕ್ಷಾತ್ ಮುಕ್ತಿಃ= ಲಿಂಗದೇಹಭಂಗರೂಪವಾದ ಮೋಕ್ಷವು ಬ್ರಹ್ಮಣಾ ಸಹೈವ ಭೂಯಾತ್= ಚತುರ್ಮುಖಬ್ರಹ್ಮನೊಂದಿಗೇ ಆಗಬೇಕು. ಇತಿ=ಹೀಗೆಂದು ಶಾಸ್ತ್ರಸ್ಯ ನಿರ್ಣಯಃ=ಶಾಸ್ತ್ರದ ನಿರ್ಣಯವು.

ಭಾವಾರ್ಥ— ದೇವತೆಗಳಿಗೆ ಕಲ್ಪಾಂತದಲ್ಲಿ ಚತುರ್ಮುಖ ಬ್ರಹ್ಮ ದೇವರ ಜೊತೆಯಲ್ಲೇ ಮೋಕ್ಷ. ಮನುಷ್ಯರಿಗೂ ಹಾಗೆಯೇ. ಭಾಗವತದಲ್ಲಿ ಪರೀಕ್ಷಿದ್ರಾಜನು ಶುಕಾಚಾರ್ಯರಿಂದ ಭಾಗವತವನ್ನು ಕೇಳಿ ಭಗವಂತನ ಪಾದಮೂಲವನ್ನು ಸೇರಿದ, ಎಂದಿದೆ. ಆದರೂ ಅವನಿಗೆ ಲಿಂಗದೇಹ ಭಂಗರೂಪವಾದ ಮೋಕ್ಷವಾಗುವುದು ಚತುರ್ಮುಖಬ್ರಹ್ಮದೇವ ನೊಂದಿಗೆಯೇ. ಅದುವರೆಗೆ ಅವನೂ ಕಾಯಬೇಕು.

ಕ್ಷ್ಮಾಂಭೋಽನಲಾನಿಲವಿಯನ್ಮನಇಂದ್ರಿಯಾರ್ಥ-
ಭೂತಾದಿಭಿಃ ಪರಿವೃತಃ ಪ್ರತಿಸಂಜಿಘೃಕ್ಷುಃ ।
ಅವ್ಯಾಕೃತಂ ವಿಶತಿ ಯರ್ಹಿ ಗುಣತ್ರಯಾತ್ಮಾ
ಕಾಲಂ ಪರಂ ಸ್ವಮನುಭೂಯ ಪರಃ ಸ್ವಯಂಭೂಃ ॥ ೮ ॥

ಏವಂ ಪರೇತ್ಯ ಭಗವಂತಮನುಪ್ರವಿಷ್ಟಾ
ಯೇ ಯೋಗಿನೋ ಜಿತಮರುನ್ಮನಸೋ ವಿರಾಗಾಃ ।
ತೇನೈವ ಸಾಕಮಮೃತಂ ಪುರುಷಂ ಪುರಾಣಂ
ಬ್ರಹ್ಮ ಪ್ರಧಾನಮುಪಯಾಂತ್ಯಗತಾಭಿಮಾನಾಃ ॥ ೯ ॥

'ಭಗವಂತಮನುಪ್ರಾಪ್ತಾ ಅಪಿತು ಬ್ರಹ್ಮಣಾ ಸಹ
ಪರಮಂ ಮೋಕ್ಷಮಾಯಾಂತಿ ಲಿಂಗಭಂಗೇನ ಯೋಗಿನಃ' ॥ ೧೦ ॥

'ಪ್ರಾಪ್ತಾ ಅಪಿ ಪರಂ ದೇವಂ ಸಹೈವ ಬ್ರಹ್ಮಣಾ ಪುನಃ ।
ಆನಂದವ್ಯಕ್ತಿಮಾಯಾಂತಿ ಪೂರ್ಣಾಂ ಲಿಂಗಸ್ಯ ಭಂಗತಃ ।'
ಇತಿ ಶ್ರುತಿಪುರಾಣೋಕ್ತಿಬಲಾದ್ ವಿಜ್ಞಾಯತೇ ಚ ತತ್ ॥ ೧೧ ॥

ಕ್ಷ್ಮಾಂಭೋ...ಭೂತಾದಿಭಿಃ, ಕ್ಷ್ಮಾ=ಭೂಮಿ, ಅಂಭಃ=ನೀರು, ಅನಲ=ಅಗ್ನಿ, ಅನಿಲ=ವಾಯು, ವಿಯತ್=ಆಕಾಶ ಇಂದ್ರಿಯ=ಜ್ಞಾನ– ಕರ್ಮೇಂ-ದ್ರಿಯಗಳು, ಅರ್ಥ=ಜ್ಞಾನೇಂದ್ರಿಯವಿಷಯಗಳು, ಭೂತಾದಿಭಿಃ= ಪಂಚಭೂತಗಳಿಗೆ ಕಾರಣವಾದ–ತಾಮಸಾಹಂಕಾರ ಅದರ ಜೊತೆಯಲ್ಲಿ ವೈಕಾರಿಕ–ತೈಜಸಾಹಂಕಾರಗಳು ಈ ತತ್ವದ ಅಭಿಮಾನಿದೇವತೆಗಳೊಂದಿಗೆ ಪರಿವೃತಃ=ಕೂಡಿರುವ ಗುಣತ್ರಯಾತ್ಮಾ=ಸತ್ವಾದಿಗುಣತ್ರಯಕ್ಕೆ ಅಭಿಮಾನಿ ಯಾದ ಪರಃ=ಹಿಂದೆ ಹೇಳಿದ ಭೂಮ್ಯಾದಿಗಳಿಂದ ಉತ್ತಮನಾದ ಸ್ವಯಂಭೂಃ=ಚತುರ್ಮುಖನು ಸ್ವಂ ಪರಂ ಕಾಲಂ=ತನ್ನ ಪರಸಂಖ್ಯಾಕವಾದ ಕಾಲವನ್ನು ಅನುಭೂಯ=ಅನುಭವಿಸಿ ಪ್ರತಿಸಂಜಿಘೃಕ್ಷುಃ=ಸಂಹಾರ ಮಾಡುವ ಇಚ್ಛೆವುಳ್ಳವನಾಗಿ ಯರ್ಹಿ=ಯಾವಾಗ ಅವ್ಯಾಕೃತಂ= ಪರಮಾತ್ಮನನ್ನು ವಿಶತಿ=ಪ್ರವೇಶಿಸುವನೋ ಏವಂ=ಆಗ ಪರೇತ್ಯ=ಮರಣ ಹೊಂದಿ ಭಗವಂತಂ ಅನುಪ್ರವಿಷ್ಟಾ ಜಿತಮರುತ್–ಮನಸಃ= ಭಗವಂತನಲ್ಲಿ ಸೇರಿರುವ, ಪ್ರಾಣಾಯಾಮದಿಂದ ವಾಯು ಮತ್ತು ಮನಸ್ಸನ್ನು ಗೆದ್ದಿರುವ ವಿರಾಗಾಃ=ವಿರಕ್ತರಾದ ಯೇ ಯೋಗಿನಃ=ವೈಕುಂಠಲೋಕವನ್ನು ಹೊಂದಿರುವ ಯೋಗಿಗಳು ಅಗತಾಭಿಮಾನಾಃ=ತಮ್ಮ ಜೀವಭಾವವನ್ನು ಪರಿತ್ಯಾಗ ಮಾಡದೇ ಇದ್ದವರಾಗಿ ತೇನೈವ ಸಾಕಂ=ಆ ಚತುರ್ಮುಖ ನೊಂದಿಗೇ ಅಮೃತಂ=ಸರ್ವಥಾ ನಾಶರಹಿತನಾದ ಪುರಾಣಂ ಪುರುಷಂ= ಪ್ರಾಚೀನ ಪುರುಷನಾದ ಪ್ರಧಾನಂ=ಸರ್ವಪ್ರಧಾನನಾದ ಬ್ರಹ್ಮ=ಬ್ರಹ್ಮನನ್ನು ಉಪಯಾಂತಿ=ಹೊಂದುತ್ತಾರೆ.

''ಭಗವಂತಂ ಅನುಪ್ರಾಪ್ತಾ ಅಪಿ=ಈಗಾಗಲೇ ಭಗವಂತನ ಲೋಕವನ್ನು ಪಡೆದವರೂ ಕೂಡಾ ಬ್ರಹ್ಮಣಾ ಸಹ=ಚತುರ್ಮುಖ ಬ್ರಹ್ಮದೇವನೊಂದಿಗೇ ಲಿಂಗಭಂಗೇನ ಪರಮಂ ಮೋಕ್ಷಂ=ಲಿಂಗದೇಹಭಂಗದಿಂದ ಪರಮ

ಮೋಕ್ಷವನ್ನು ಅಂದರೆ ಸ್ವರೂಪಾನಂದಾವಿರ್ಭಾವರೂಪವಾದ ಮೋಕ್ಷವನ್ನು ಯೋಗಿನಃ=ಯೋಗಿಗಳು ಆಯಾಂತಿ=ಹೊಂದುತ್ತಾರೆ.''

''ಪರಂ ದೇವಂ ಪ್ರಾಪ್ತಾ ಅಪಿ=ಪರಮಾತ್ಮನನ್ನು ಹೊಂದಿದ್ದರೂ ಪುನಃ=ಮತ್ತೆ ಬ್ರಹ್ಮಣಾ ಸಹೈವ=ಬ್ರಹ್ಮದೇವರೊಂದಿಗೆ ಲಿಂಗಸ್ಯ ಭಂಗತಃ= ಲಿಂಗದೇಹವು ಭಂಗವಾಗುವುದರಿಂದ ಪೂರ್ಣಾಂ ಆನಂದವ್ಯಕ್ತಿಂ ಆಯಾಂತಿ=ಜ್ಞಾನಿಗಳು ತಮ್ಮ ಸ್ವರೂಪಯೋಗ್ಯವಾದ ಆನಂದದ ಅಭಿವ್ಯಕ್ತಿ ಯನ್ನು ಹೊಂದುತ್ತಾರೆ.''

ಇತಿ=ಹೀಗೆ ಶ್ರುತಿ-ಪುರಾಣೋಕ್ತಿಬಲಾತ್=ವೇದ (ಭಾಷ್ಯೋಕ್ತವಾದ) ಪುರಾಣಗಳ ವಚನಗಳ ಆಧಾರದಿಂದ ತತ್=ಹಿಂದೆ ಹೇಳಿರುವ ಪ್ರಮೇಯವು ವಿಜ್ಞಾಯತೇ=ತಿಳಿಯಲ್ಪಡುತ್ತದೆ.

**ಭೋಗಸ್ತು ಸರ್ವದೇವಾನಾಂ ನರಾದೀನಾಂ ಚ ವಿದ್ಯತೇ ।**
**ತತ್ರ ಪ್ರವೇಶೋ ದೇವಾನಾಮುತ್ತರೋತ್ತರತಃ ಕ್ರಮಾತ್ ॥ ೧೨ ॥**

ಭೋಗಸ್ತು=ನಾಲ್ಕನೆಯ ಪಾದದಲ್ಲಿ ಹೇಳಲಾಗುವ ಭೋಗವಾದರೂ ಸರ್ವದೇವಾನಾಂ=ಎಲ್ಲಾ ದೇವತೆಗಳಿಗೂ ನರಾಣಾಂ ಚ=ಮನುಷ್ಯರಿಗೂ ವಿದ್ಯತೇ=ಇದೆ. ಮೊದಲಪಾದದಲ್ಲಿ ಹೇಳಿರುವ ಕರ್ಮಕ್ಷಯ ಮತ್ತು ಕೊನೆಯಪಾದದಲ್ಲಿ ಹೇಳುವ ಭೋಗ ಎಲ್ಲರಿಗೂ ಇದೆ. ಎರಡು ಮತ್ತು ಮೂರನೆಯ ಪಾದದಲ್ಲಿ ಹೇಳಿರುವ ಉತ್ಕ್ರಾಂತಿ ಮತ್ತು ಮಾರ್ಗಗಳು ಮನುಷ್ಯರಿಗೆ ಮಾತ್ರ, ದೇವತೆಗಳಿಗೆ ಇಲ್ಲ.

ತತ್ರ=ಈ ದ್ವಿತೀಯಪಾದದಲ್ಲಿ ಮೊದಲು ದೇವಾನಾಂ=ದೇವತೆಗಳಿಗೆ ಉತ್ತರೋತ್ತರತಃ=ತಮಗಿಂತ ಉತ್ತಮರಲ್ಲಿ ಕ್ರಮಾತ್=ಕ್ರಮದಿಂದ ಪ್ರವೇಶಃ=ಪ್ರವೇಶವು ಉಚ್ಯತೇ=ಹೇಳಲ್ಪಡುತ್ತದೆ. (ಈ ಕ್ರಿಯಾಪದ ಮುಂದಿದೆ.)

**ಸೂತ್ರದಲ್ಲಿ ವಾಗಾದಿಶಬ್ದ ಪ್ರಯೋಗ ಏಕೆ?**

**ಉಚ್ಯತೇ, ದೇಹಗಾನಾಂ ಚ ವೃತ್ತೀನಾಮೇವಮೇವ ತು ॥ ೧೩ ॥**

'ವಾಕ್ ಮನಸಿ ಸಂಪದ್ಯತೇ' ಎಂಬ ಲಯವಾಚಕಶ್ರುತಿಯಲ್ಲಿ ಮತ್ತು 'ವಾಙ್ಮನಸಿ ದರ್ಶನಾತ್' ಎಂದು ಸೂತ್ರದಲ್ಲಿ ದೇಹಗಾನಾಂ=ದೇಹಗಳಲ್ಲಿ ಇರುವ ವೃತ್ತೀನಾಂ=ಇಂದ್ರಿಯಗಳಿಗೆ ವಾಕ್ ಮೊದಲಾದ ಶಬ್ದಗಳು ವಾಚಕಗಳು ಹೇಗೋ ಏವಮೇವ=ಅದರಂತೆ ತು=ಆ ಶಬ್ದಗಳು ತದಭಿಮಾನಿದೇವತಾವಾಚಕಗಳೂ ಆಗಿವೆ.

ದೇವತೆಗಳಿಗೆ ಮಾತ್ರ ಲಯಕಾಲದಲ್ಲಿ, ಜಡವಾದ ಇಂದ್ರಿಯಗಳಿಗೂ ಉತ್ತರೋತ್ತರದೇವತೆಗಳಲ್ಲಿ ಲಯವು ಇದೆ. ಇದನ್ನು ಸೂಚಿಸುವುದಕ್ಕಾಗಿ ವಾಗಭಿಮಾನಿದೇವತೆಯಾದ ಪಾರ್ವತೀ ವಾಚಕವಾದ ಶಬ್ದವನ್ನು ಬಿಟ್ಟು ಶ್ರುತಿಯಲ್ಲಿ ''ವಾಕ್ ಮನಸಿ ಸಂಪತ್ಸ್ಯತೇ'' ಎಂದು ಇಂದ್ರಿಯ ವಾಚಕವಾದ ಶಬ್ದವನ್ನು ಪ್ರಯೋಗಮಾಡಲಾಗಿದೆ. ಅದರಂತೆ, ಸೂತ್ರದಲ್ಲಿ 'ವಾಙ್ಮನಸಿ ದರ್ಶನಾತ್' ಎಂದು ಅಂತಹ ಶಬ್ದಗಳನ್ನೇ ಪ್ರಯೋಗಿಸಲಾಗಿದೆ.

ಭಾವಾರ್ಥ— ಜ್ಞಾನಿಗಳು ಅಪರೋಕ್ಷಜ್ಞಾನದಿಂದ ಸಂಚಿತಕರ್ಮವನ್ನೂ ಭೋಗದಿಂದ ಪ್ರಾರಬ್ಧವನ್ನೂ ಕಳೆದುಕೊಂಡು ಬ್ರಹ್ಮನಾಡಿಯ ಮೂಲಕ ಈ ದೇಹದಿಂದ ಉತ್ಕ್ರಮಣ ಮಾಡಿ ಅರ್ಚಿರಾದಿಮಾರ್ಗದಿಂದ ಸತ್ಯಲೋಕಕ್ಕೆ ಹೋಗುತ್ತಾರೆ. ಅಲ್ಲಿಂದ ಬ್ರಹ್ಮದೇವರೊಂದಿಗೆ ವಿರಜಾ ಸ್ನಾನದಿಂದ ಲಿಂಗದೇಹವನ್ನು ಕಳೆದುಕೊಂಡು ಸ್ವರೂಪಾನಂದವನ್ನು ಅನುಭವಿಸುತ್ತಾ ಪ್ರಳಯಕಾಲದಲ್ಲಿ ಪರಮಾತ್ಮನ ಉದರದೊಳಗೆ ಇರುತ್ತಾರೆ. ಮುಂದೆ ಭಗವಂತನ ಲೋಕಗಳು ಸೃಷ್ಟಿಯಾದಾಗ ಅಲ್ಲಿ ವಾಸಮಾಡುತ್ತಾರೆ. ಹೀಗೆ, ಈ ಕಲ್ಪದಲ್ಲೆ ಜ್ಞಾನಿಗಳಿಗೆ ಲಿಂಗದೇಹ ಭಂಗವಾಗುತ್ತದೆ, ಎಂದು ಶೇಷವಾಕ್ಯಾರ್ಥಚಂದ್ರಿಕಾ ಮತ್ತು ಯಾದುಪತ್ಯಗಳಲ್ಲಿ ಇದೆ.

ಯೋಗೀ ತಾವನ್ನ ಮುಕ್ತಃ ಸ್ಯಾತ್ ಯಾವತ್ಶ್ವೇತಂ ನ ಗಚ್ಛತಿ ॥

ಈ ಪ್ರಮಾಣದಲ್ಲಿ ಶ್ವೇತದ್ವೀಪಗತನಾದ ಭಗವಂತನ ದರ್ಶನವಿಲ್ಲದೆ, ಮೋಕ್ಷವಿಲ್ಲ, ಎಂದಂತಿದೆ. ಇದರಿಂದ, ಮುಂದಿನ ಸೃಷ್ಟಿಯಲ್ಲಿ ಶ್ವೇತದ್ವೀಪವು ಆವಿರ್ಭಾವ ಹೊಂದಿದ ಮೇಲೆಯೇ ಮೋಕ್ಷ ಎಂದು ತಿಳಿಯುತ್ತದೆ. ಆದರೆ, ಲಿಂಗದೇಹ ಭಂಗರೂಪವಾದ ಮೋಕ್ಷವು ಹಿಂದಿನ ಲಯಕಾಲದಲ್ಲೇ ಆಗಿದ್ದರೂ ಸೃಷ್ಟಿಕಾಲದಲ್ಲಿ ಹೇಳಿರುವ ಈ ಮೋಕ್ಷ ಭಗವದಿಚ್ಛಾವರಣನಿವೃತ್ತಿರೂಪವಾದ ಮೋಕ್ಷವೆಂದು ತಿಳಿಯಬೇಕು.

(ಅಸ್ಮಿನ್ನೇವ ಕಲ್ಪೇ ಲಿಂಗಭಂಗಃ। ನತು 'ಯೋಗೀ ತಾವನ್ನ ಮುಕ್ತಃ ಸ್ಯಾತ್' ಇತಿ ವಚನಬಲಾತ್ ಉತ್ತರಕಲ್ಪೇ ಸ ಮಂತವ್ಯಃ। 'ಯೋಗೀ ತಾವತ್ ಇಚ್ಛಾವರಕಾತ್ ಮುಕ್ತಃ ಸ್ಯಾತ್' ಇತ್ಯರ್ಥಕತ್ವೇನ ತಸ್ಯ ಸಾವಕಾಶತ್ವಾತ್। ಶೇ.ವಾ.ಚಂದ್ರಿಕಾ.)

**ಮೋಕ್ಷ ಸ್ವರೂಪದಲ್ಲಿ ಮತಿಭೇದದಿಂದ ಮತಭೇದ**

**ತತ್ರ ಮೋಕ್ಷಸ್ವರೂಪಂ ತು ವಾದಿನಃ ಪ್ರತಿಭಾಶ್ರಯಾತ್।**
**ನಾನಾ ವದಂತಿ, ಪುಂಸಾಂ ಹಿ ಮತಯೋ ಗುಣಭೇದತಃ ॥ ೧೪ ॥**

**ಪೃಥಕ್‌ಪೃಥಕ್ ಪ್ರಜಾಯಂತೇ ತಮಸ್ಯೈವಾನ್ಯಥಾಮತಿಃ।**
**ರಜಸಾ ಮಿಶ್ರಬುದ್ಧಿತ್ವಂ ಸತ್ವೇನೈವ ಯಥಾ ಮತಿಃ ॥ ೧೫ ॥**

ತತ್ರ=(ತಥಾ ಸತಿ) ಸೂತ್ರಕಾರರು ಮೋಕ್ಷಸ್ವರೂಪವನ್ನು ಪ್ರಮಾಣ ಗಳಿಂದ ನಿರ್ಣಯಿಸುತ್ತಿರಲು ವಾದಿನಃ=ಅನೇಕ ಮತೀಯರು ಪ್ರತಿಭಾ-ಶ್ರಯಾತ್=ತಮ್ಮ ಪ್ರತಿಭಾಶಕ್ತಿಯನ್ನು ಅವಲಂಬಿಸಿ ಮೋಕ್ಷಸ್ವರೂಪಂ= ಮೋಕ್ಷವೇನೆಂಬುದನ್ನು ನಾನಾ ವದಂತಿ=ಅನೇಕ ರೀತಿಯಾಗಿ ಹೇಳುತ್ತಾರೆ.

ಪ್ರಮಾಣವಿದ್ದಮೇಲೆ ಈ ಭಿನ್ನಾಭಿಪ್ರಾಯ ಏಕೆ? ಪುಂಸಾಂ ಹಿ ಮತಯಃ=ಮನುಷ್ಯರ ಬುದ್ಧಿಗಳು ಗುಣಭೇದತಃ=ಸತ್ವಾದಿಗುಣವಿಶೇಷ ಗಳಿಂದಾಗಿ ಪೃಥಕ್ ಪೃಥಕ್=ವಿಭಿನ್ನವಾಗಿ ಪ್ರಜಾಯಂತೇ=ಉಂಟಾಗುತ್ತವೆ. ಅನ್ಯಥಾ ಮತಿಃ=ಮಿಥ್ಯಾಜ್ಞಾನವು ತಮಸ್ಯೈವ=ತಮೋಗುಣದಿಂದಲೇ ಬರುತ್ತದೆ. ರಜಸಾ=ರಜೋಗುಣದಿಂದ ಮಿಶ್ರಬುದ್ಧಿತ್ವಂ=ಮಿಶ್ರವಾದ ಬುದ್ಧಿಯೂ ಸತ್ವೇನೈವ=ಸಾತ್ವಿಕಗುಣದಿಂದಲೇ ಯಥಾಮತಿಃ=ಯಥಾರ್ಥ ಜ್ಞಾನವೂ ಬರುತ್ತದೆ.

**ಭಾವಾರ್ಥ—** ತಮೋಗುಣವು ಪ್ರಮಾಣಗಳ ಕಡೆಗೆ ಬುದ್ಧಿಯನ್ನು ಹೋಗದಂತೆ ಮಾಡಿ ಪ್ರಮಾಣಾಭಾಸಗಳ ದೋಷಗಳನ್ನು ಕಾಣದಂತೆ ಮಾಡಿ ಅನ್ಯಥಾಜ್ಞಾನವನ್ನು ಉಂಟುಮಾಡುತ್ತದೆ. ರಜೋಗುಣವು ಪ್ರಮಾಣ ಗಳಲ್ಲಿರುವ ಗುಣಗಳನ್ನು ಕಾಣದಂತೆ ಮಾಡಿ ಪ್ರಮಾಣಾಭಾಸಗಳಲ್ಲಿರುವ

ದೋಷಗಳನ್ನೂ ಆಚ್ಛಾದಿಸಿ ಅವೆರಡರಿಂದಲೂ ಸಂದೇಹಾತ್ಮಕ ಜ್ಞಾನವು ಬರುವಂತೆ ಮಾಡುತ್ತದೆ. ಸತ್ವಗುಣವು ಪ್ರಮಾಣಾಭಾಸದ ದೋಷಗಳನ್ನೂ ಪ್ರಮಾಣಗಳ ಗುಣಗಳನ್ನೂ ವ್ಯಕ್ತಗೊಳಿಸಿ ಸರಿಯಾದ ಜ್ಞಾನಕ್ಕೆ ಕಾರಣ ವಾಗುತ್ತದೆ.

**ಗುಣಾತೀತಾ ವಿಮುಕ್ತಾನಾಂ ಮತಿಃ ಶುದ್ಧಚಿತಿರ್ಯತಃ ।**
**ಸಮ್ಯಗೇವಾಥ ನಿತ್ಯಾ ಚ ತತ್ತನ್ಮಾಹಾತ್ಮ್ಯಯೋಗತಃ ॥ ೧೬ ॥**

ವಸ್ತುತಃ ವಿಮುಕ್ತಾನಾಂ ಮತಿಃ=ಮುಕ್ತರ ಬುದ್ಧಿಯು ಗುಣಾತೀತಾ= ಸತ್ವಾದಿಗುಣಮಯವಲ್ಲ. ಆದ್ದರಿಂದ ಯಥಾರ್ಥವಾಗಲಾರದು. ಆದರೂ ಯತಃ=ಯಾವ ಕಾರಣದಿಂದ ಶುದ್ಧಚಿತಿಃ=ಶುದ್ಧವಾದ ಅಂದರೆ ಸ್ವಾಭಾವಿಕ ದೋಷವಿಲ್ಲದ ಚೇತನವು ನಿತ್ಯಾ=ನಿತ್ಯವಾಗಿರುವುದೋ ಆದ್ದರಿಂದ ಸಮ್ಯಗೇವ=ಮುಕ್ತರ ಬುದ್ಧಿಯು ಯಥಾರ್ಥವೇ ಆಗಿರುತ್ತದೆ.

ಅದು ತತ್ತನ್ಮಾಹಾತ್ಮ್ಯಯೋಗತಃ=ಅವರವರ ಯೋಗ್ಯತಾನುಸಾರವಾಗಿ ಬಹುಲಾ=ಅನೇಕ ವಸ್ತುಗಳನ್ನು ಗ್ರಹಿಸುತ್ತದೆ, ಅತಿವಿಶದಾ ಚ=ಅತ್ಯಂತ ಸ್ಪಷ್ಟವಾಗಿರುತ್ತದೆ.

**ಬ(ಹಳಾ)ಹುಲಾ ಚಾತಿವಿಶದಾ ಸ್ಪಷ್ಟಾ ಚೈವ ಶ್ರಿಯೋ ಮತಿಃ ।**
**(ಮಹಾಶುದ್ಧಚಿತಿತ್ವೇನ) ತತೋಽಪ್ಯತಿಮಹಾಚಿತಿಃ ॥ ೧೭ ॥**

**ಅಶೇಷೋರುವಿಶೇಷಾಣಾಮತಿಸ್ಪಷ್ಟತಯಾ ದೃಶಿಃ ।**
**ನಿತ್ಯಮೇಕಪ್ರಕಾರಾ ಚ ನಾರಾಯಣಮತಿಃ ಪರಾ ॥ ೧೮ ॥**

**ಸೂರ್ಯಪ್ರಭಾವದಖಿಲಂ ಭಾಸಯಂತೀ ನಿರಂತರಾ ।**
**ನಿರ್ಲೇಪಾ ವೀತದೋಷಾ ಚ ನಿತ್ಯಮೇವಾವಿಕಾರಿಣೀ ॥ ೧೯ ॥**

**ವಿಶೇಷಾಂಸ್ತದ್ಗತಾಂಸ್ತ್ಯಕ್ತ್ವಾ ಪ್ರಾಯಸ್ತಲ್ಲಕ್ಷಣಾ ಶ್ರಿಯಃ ।**
**ತಥೈವ ಸ್ಪಷ್ಟತಾಭಾವಾತ್ ತತ್ತಂತ್ರತ್ವಾತ್ತು (ಚ್ಚ) ಕೇವಲಮ್ ॥ ೨೦ ॥**

**ನ ತಾದೃಶೀ ಬ್ರಹ್ಮಣಸ್ತು ಪ್ರಾಯೇಣೈ(ಯ ಏ )ವಂ ಶ್ರಿಯೋ ಯಥಾ ।**
**ಮುಕ್ತಾನಾಂ ತು ತದನ್ಯೇಷಾಂ ಸಮುದ್ರತರಳೋಪಮಾ ॥ ೨೧ ॥**

**ಅಗ್ನಿಜ್ವಾಲಾವದೇವ ಸ್ಯಾತ್ ಸೃತಿಗಾನಾಂ ದೃಶೋ ಭವಃ ।**

ಶ್ರಿಯೋ ಮತಿಃ=ಲಕ್ಷ್ಮೀದೇವಿಯ ಬುದ್ಧಿಯು (ಸಮ್ಯಕ್ತ್ವೇऽಪಿ= ಯಥಾರ್ಥವೇ ಆದರೂ ಗುಣಾತೀತಾ=ಸತ್ವಾದಿಪ್ರಾಕೃತಗುಣಗಳಿಂದ ರಹಿತವಾಗಿದೆ.) ಮಹಾಶುದ್ಧಚಿತಿತ್ವೇನ=ಎಂದೂ ದೋಷಸಂಬಂಧವಿಲ್ಲ ದಿರುವುದರಿಂದ ಸ್ಪಷ್ಟಾ ಚ=ಎಲ್ಲಮುಕ್ತರ ಜ್ಞಾನಕ್ಕಿಂತಲೂ ವಿಶದವಾದುದು, ಅಧಿಕಗ್ರಾಹಿಯಾದುದು.

ತತೋऽಪಿ=ಲಕ್ಷ್ಮೀದೇವಿಗಿಂತಲೂ ಅತಿಮಹಾಚಿತಿಃ=ಅತಿಮಹತ್ತಾದ ಬುದ್ಧಿಯು, ಅದು, ಅಶೇಷ–ಉರುವಿಶೇಷಾಣಾಂ=ಎಲ್ಲಾ ಶ್ರೇಷ್ಠವಾದ ವಿಷಯಗಳನ್ನೂ ಅತಿಸ್ಪಷ್ಟತಯಾ ದೃಶಿಃ=ಅತಿಸ್ಫುಟವಾಗಿ ವಿಷಯೀಕರಿಸು ವಂತಹುದು, ನಿತ್ಯಂ ಏಕಪ್ರಕಾರಾ=ಸದಾ ಒಂದೇ ರೀತಿಯಲ್ಲಿರುವುದು ನಾರಾಯಣಮತಿಃ=ಭಗವಂತನ ಬುದ್ಧಿಯು ಪರಾ=ಸರ್ವೋತ್ತಮ ವಾದುದು. ಅದು ನಿರಂತರಂ=ಸರ್ವದಾ ಸೂರ್ಯಪ್ರಭಾವತ್=ಸೂರ್ಯನ ಪ್ರಕಾಶದಂತೆ ಅಖಿಲಂ ಭಾಸಯಂತೀ=ಎಲ್ಲವನ್ನೂ ವಿಷಯೀಕರಿಸುತ್ತಾ ನಿರ್ಲೇಪಾ=ಕರ್ಮಸಂಬಂಧರಹಿತವಾದುದು, ವೀತದೋಷಾ ಚ=ದೋಷ ರಹಿತವಾದುದು. ನಿತ್ಯಮೇವ ಅವಿಕಾರಿಣೀ=ಅನೇಕ ವಸ್ತುಗಳನ್ನು ವಿಷಯೀಕರಿಸಿದರೂ ಅದು ಸರ್ವದಾ ವಿಕಾರರಹಿತವಾದುದು, ಸೂರ್ಯನ ಪ್ರಭೆಯಂತೆ. ತದ್ಗತಾನ್=ಈಶಬುದ್ಧಿಗತವಾದ ವಿಶೇಷಾನ್=ಅಶೇಷ ವಿಷಯಕತ್ವವಿಶೇಷವನ್ನು ತ್ಯಕ್ತ್ವಾ=ಬಿಟ್ಟು ಶ್ರಿಯಃ ಮತಿಃ=ಲಕ್ಷ್ಮೀದೇವಿಯ ಬುದ್ಧಿಯೂ ಪ್ರಾಯಃ=ಹೆಚ್ಚೂ ಕಡಿಮೆ ತಲ್ಲಕ್ಷಣಾ=ಪರಮಾತ್ಮನ ಬುದ್ಧಿ ಯಂತೆಯೇ ಆಗಿದೆ. ತಥೈವ=ಪರಮಾತ್ಮನ ಜ್ಞಾನದಂತೆ ಸ್ಪಷ್ಟತಾಭಾವಾತ್= ಸ್ಪಷ್ಟತೆಯು ಇಲ್ಲದಿರುವುದರಿಂದ ಕೇವಲಂ ತತ್ತಂತ್ರತ್ವಾತ್=ಭಗವನ್ ಮಾತ್ರಾಧೀನವಾದುದರಿಂದ ನ ತಾದೃಶೀ=ಭಗವಂತನ ಜ್ಞಾನಕ್ಕೆ ಸಮವಲ್ಲ.

ಬ್ರಹ್ಮಣಸ್ತು=ಚತುರ್ಮುಖಬ್ರಹ್ಮನದ್ದಾದರೂ ಪ್ರಾಯೇಣ=ಹೆಚ್ಚು

ಕಡಿಮೆ ಶ್ರಿಯೋ ಯಥಾ=ಲಕ್ಷ್ಮೀದೇವಿಯಂತೆಯೇ. ಆದರೆ ಲಕ್ಷ್ಮೀದೇವಿ ಯಷ್ಟು ಸ್ಪಷ್ಟತೆ ಇಲ್ಲ.

ತದನ್ಯೇಷಾಂ ಮುಕ್ತಾನಾಂ ತು=ಇತರ ಮುಕ್ತರ ಜ್ಞಾನವು ಸಮುದ್ರತರಲೋಪಮಾ=ಸಮುದ್ರದ ಅಲೆಯಂತೆ ಸಂಕೋಚ-ವಿಕಾಸ ವುಳ್ಳದ್ದು. ಸೃತಿಗಾನಾಂ ತು=ಸಂಸಾರಿಗಳ ಜ್ಞಾನವು ದೃಶಃ ಭವಃ= ಅಂತಃಕರಣದಿಂದ ಹುಟ್ಟಿದಂತಹುದು. ಅಗ್ನಿಜ್ವಾಲಾವದೇವ ಸ್ಯಾತ್= ಅಗ್ನಿಯ ಜ್ವಾಲೆಯಂತೆ ಇದ್ದೀತು. ಅಗ್ನಿ ಇದ್ದರೆ ಮಾತ್ರ ಅವರ ಜ್ವಾಲೆ, ಇಲ್ಲದಿದ್ದರೆ ಇಲ್ಲ. ಅದರಂತೆ ಸಂಸಾರಿಗಳ ಜ್ಞಾನ ಅಂತಃಕರಣವೃತ್ತಿ ರೂಪ ವಾದುದರಿಂದ ಜನ್ಯವಾಗಿದೆ.

**ಏವಂವಿಧೇಷು ಜ್ಞಾನೇಷು ತಮಸಾ ಮುಷ್ಟದೃಷ್ಟಯಃ ॥ ೨೨ ॥**

**ಖದ್ಯೋತಸದೃಶಾತ್ಯಲ್ಪಜ್ಞಾನತ್ವಾದನ್ಯಥಾದೃಶಃ ।**
**ವದಂತಿ ವಾದಿನೋ ಮೋಕ್ಷಂ ನಾನಾಮತಸಮಾಶ್ರಯಾತ್ ॥ ೨೩ ॥**

ಜ್ಞಾನೇಷು ಏವಂವಿಧೇಷು ಸತ್ಸು=ಜ್ಞಾನಗಳು ಹೀಗೆ ವಿಭಿನ್ನವಾಗಲು ತಮಸಾ=ತಮೋಗುಣದಿಂದ ಮುಷ್ಟದೃಷ್ಟಯಃ=ಅಪಹರಿಸಲ್ಪಟ್ಟ ಯಥಾರ್ಥಜ್ಞಾನವುಳ್ಳ, ಖದ್ಯೋತಸದೃಶಾತ್ಯಲ್ಪಜ್ಞಾನಾತ್=ಮಿಣುಕು ಹುಳದಷ್ಟೇ ಅಲ್ಪವಾದ, ಅಧಿಷ್ಠಾನದ ಯಥಾರ್ಥಜ್ಞಾನ ಇರುವುದರಿಂದಾಗಿ ಅನ್ಯಥಾದೃಶಃ=ಅಯಥಾರ್ಥಜ್ಞಾನ ಇರುವ ಜನರು ನಾನಾಮತ ಸಮಾಶ್ರಯಾತ್=ಅನೇಕ ಮತಗಳನ್ನು ಅವಲಂಬಿಸಿ ವಾದಿನಃ=ಯಥಾರ್ಥ ಜ್ಞಾನವಿಲ್ಲದವರು ಮೋಕ್ಷಂ=ಮೋಕ್ಷವನ್ನು ನಾನಾ ವದಂತಿ=ಅನೇಕ ವಿಧವಾಗಿ ಹೇಳುತ್ತಾರೆ.

ಭಾವಾರ್ಥ- ತಾಮಸಗುಣವಿದ್ದಾಗ ಅತ್ಯಲ್ಪಯಥಾರ್ಥಜ್ಞಾನವಿದ್ದರೂ ಅಂತಹವರನ್ನು ನಂಬುವಂತಿಲ್ಲ. ಏಕೆಂದರೆ, ಅವರಿಗೆ ಅಧಿಷ್ಠಾನದ ಸಾಮಾನ್ಯ ಯಥಾರ್ಥಜ್ಞಾನ ಇದ್ದರೂ ಉಳಿದಂತೆ ಅದರ ಅಯಥಾರ್ಥಜ್ಞಾನವೇ ಇರುತ್ತದೆ. ಹೀಗಾಗಿ ಅವರ ಯಥಾರ್ಥಜ್ಞಾನವು ನಂಬಿಕೆಗೆ ಅರ್ಹವಲ್ಲ. ಅಂತಹವರು ಮೋಕ್ಷದ ಬಗ್ಗೆ ಹೇಳಿದರೆ ಅದು ವಸ್ತುಸ್ಥಿತಿಯಾಗುವುದಿಲ್ಲ.

**ಜೈನಾಭಿಮತ ಮೋಕ್ಷಸ್ವರೂಪ ವಿಮರ್ಶೆ**

**ಆಶ್ರಿತ್ಯ ಪ್ರತಿಭಾಮಾಹ ಜಿನಸ್ತತ್ರಾತಿತಾಮಸೀಮ್ ।**
**ಜ್ಞಾನಾತ್ ಕರ್ಮಕ್ಷಯಾನ್ಮೋಕ್ಷೋ ಭವೇದ್ ದೇಹಾಖ್ಯಪಂಜರಾತ್**
**॥ ೨೪ ॥**

**ಪಂಜರೋನ್ಮುಕ್ತಖಗವದಲೋಕಾಕಾಶಗೋಚರಃ ।**
**ನಿತ್ಯಮೂರ್ಧ್ವಂ ವ್ರಜತ್ಯೇವ ಪುದ್ಗಲೋ ಹಸ್ತಪಾದವಾನ್ ॥ ೨೫ ॥**

ತತ್ರ=ಆ ವಾದಿಗಳಲ್ಲಿ ಜಿನಃ=ಜೈನರ ಗುರುವಾದ ಜಿನನು ವೇದಪ್ರಾಮಾಣ್ಯವನ್ನು ಅಂಗೀಕರಿಸದಿರುವ ಕಾರಣ ಅತಿತಾಮಸೀಂ= ಅತ್ಯಂತ ತಾಮಸಗುಣದ ಪ್ರತಿಭಾಂ=ಜ್ಞಾನವನ್ನು ಆಶ್ರಿತ್ಯ= ಅವಲಂಬಿಸಿ ಆಹ=ಮೋಕ್ಷದ ಬಗ್ಗೆ ಹೇಳುತ್ತಾನೆ— ಪಂಜರೋನ್ಮುಕ್ತಖಗವತ್= ಪಂಜರದಿಂದ ಬಿಡುಗಡೆಗೊಂಡ ಹಕ್ಕಿಯಂತೆ ಹಸ್ತಪಾದವಾನ್= ಕೈಕಾಲು ಗಳಿಂದ ಕೂಡಿದ ಪುದ್ಗಲಃ=ಜೀವನು ಅಲೋಕಾಕಾಶಗೋಚರಃ= ಅಲೋಕಾಕಾಶವೇ ಗುರಿವುಳ್ಳವನಾಗಿ ನಿತ್ಯಂ=ಸರ್ವದಾ ಊರ್ಧ್ವಂ=ಮೇಲಕ್ಕೆ ವ್ರಜತ್ಯೇವ=ಹೋಗುತ್ತಲೇ ಇರುತ್ತಾನೆ. ಇತಿ=ಹೀಗೆ(ಹೇಳುತ್ತಾನೆ.)

**ಇತಿ, ತತ್ ಕೇನ ಮಾನೇನ ಮೋಕ್ಷರೂಪಂ ಪ್ರದೃಶ್ಯತೇ ।**
**ಗತಿರೂರ್ಧ್ವಾ ಚ ದುಃಖೇತಾ ಗತಿತ್ವಾಲ್ಲೌಕಿಕೀ ಯಥಾ ।**
**ಇತ್ಯುಕ್ತೇ ಚಾನುಮಾನೈಕಶರಣಸ್ಯ ಕಿಮುತ್ತರಮ್ ॥ ೨೬ ॥**

ತತ್ ಮೋಕ್ಷರೂಪಂ=ಇಂತಹ ಮೋಕ್ಷವು ಕೇನ ಮಾನೇನ=ಯಾವ ಪ್ರಮಾಣದಿಂದ ಪ್ರದೃಶ್ಯತೇ=ಜಿನನಿಂದ ಶಿಷ್ಯರಿಗೆ ತಿಳಿಸಲ್ಪಡುತ್ತದೆ? ಮೋಕ್ಷವು ಪ್ರತ್ಯಕ್ಷಗಮ್ಯವಲ್ಲ. ವೇದವನ್ನು ಪ್ರಮಾಣವೆಂದು ಒಪ್ಪುವುದಿಲ್ಲ. ಅನುಮಾನವನ್ನು ಪ್ರಮಾಣವನ್ನಾಗಿ ಹೇಳಬೇಕು. ಅನುಮಾನಕ್ಕೆ ವಿರುದ್ಧವಾದ ಅನುಮಾನವನ್ನು ಹೀಗೆ ಮಾಡಬಹುದು—ಊರ್ಧ್ವಾ ಗತಿಃ=ಮೇಲಕ್ಕೆ ಹೋಗುವುದು, ದುಃಖೇತಾ=ದುಃಖದಿಂದ ಕೂಡಿದೆ, ಗತಿತ್ವಾತ್='ಗಮನ' ವಾದುದರಿಂದ, ಲೌಕಿಕೀ ಯಥಾ=ಲೌಕಿಕವಾದ ನಡಿಗೆಯಂತೆ. ಇತ್ಯುಕ್ತೇ=

ಹೀಗೆ ಹೇಳಿದರೆ ಅನುಮಾನೈಕಶರಣಸ್ಯ=ಅನುಮಾನ ಮಾತ್ರ ಪ್ರಮಾಣ ವೆನ್ನುವ ಜಿನನ ಕಿಮುತ್ತರಮ್=ಉತ್ತರವೇನು?

**ಭಾವಾರ್ಥ**—ಜೈನರಿಗೆ ವೇದವು ಪ್ರಮಾಣವಲ್ಲ. ಪ್ರತ್ಯಕ್ಷಕ್ಕೆ ಮೋಕ್ಷವು ಅಗೋಚರವಾಗಿದೆ. ಇನ್ನುಳಿದಿರುವುದು ಅನುಮಾನ ಮಾತ್ರ. ಅದನ್ನೇ ಸತತೋರ್ಧ್ವಗತಿರೂಪವಾದ ಮೋಕ್ಷಕ್ಕೆ ಆಧಾರವನ್ನಾಗಿ ಹೇಳಬೇಕು. ಆದರೆ ಊರ್ಧ್ವಗತಿಯು ದುಃಖಕ್ಕೆ ಕಾರಣವೆಂದೂ ಸಾಧಿಸಬಹುದಾದ್ದರಿಂದ ಅದು ಸುಖರೂಪವೆಂದು ನಿರ್ಧರಿಸಲಾಗದು.

**ಅನೂರ್ಧ್ವಗತಿತಾ ತತ್ರ ಯದ್ಯುಪಾಧಿಃ ಖಗಸ್ಯ ಚ ।**
**ದೂರೋರ್ಧ್ವಗಮನೇ ದುಃಖಮಿತಿ ಸಾಧ್ಯಾನುಗೋ ನ ಸಃ ॥ ೨೭ ॥**

ತತ್ರ=ದೃಷ್ಟಾಂತವಾದ ನಡಿಗೆಯಲ್ಲಿ ಅನೂರ್ಧ್ವಗತಿತಾ= ಊರ್ಧ್ವಗತಿ ಯಲ್ಲದಿರುವುದು ಯದಿ ಉಪಾಧಿಃ=ಉಪಾಧಿಯಾಗುವುದಾದಲ್ಲಿ ತದಾ ವದಾಮಃ=ಆಗ ನಾವು ಹೇಳುತ್ತೇವೆ, ಖಗಸ್ಯ ಚ=ಪಕ್ಷಿಗೆ ದೂರ–ಊರ್ಧ್ವ ಗಮನೇ=ಬಹುದೂರದವರೆಗೆ ಊರ್ಧ್ವಮುಖವಾದ ಗಮನ ಇದ್ದಲ್ಲಿ (ಹಕ್ಕಿ ಅತಿ ಎತ್ತರಕ್ಕೆ ಏರಿದಾಗ) ದುಃಖಂ=ದುಃಖವಾಗುತ್ತದೆ. ಇತಿ=ಹೀಗೆ ಸಃ=ಆ ಉಪಾಧಿಯು ಸಾಧ್ಯಾನುಗೋ ನ=ಸಾಧ್ಯವ್ಯಾಪಕವಲ್ಲ, ಎಂದು.

**ಭಾವಾರ್ಥ**— ನಾವು ದೂರ ನಡೆದಾಗ ಆಯಾಸವಾಗುತ್ತದೆ. ಅದರಂತೆ ಸತತ ಮೇಲಕ್ಕೆ ಹೋದಾಗಲೂ ಆಯಾಸವಾಗಬೇಕು. ಆದ್ದರಿಂದ ಊರ್ಧ್ವಗಮನವು ದುಃಖಹೇತುವಾದ ಕಾರಣ ಮೋಕ್ಷವಲ್ಲ, ಎಂದು ಆಚಾರ್ಯರ ವಾದ.

ಇದಕ್ಕೆ ಜೈನರ ಪ್ರತಿವಾದ ಹೀಗೆ— ನಡೆಯುವಾಗ ಆಯಾಸವಾದರೂ ಆಕಾಶದಲ್ಲಿ ಮೇಲಕ್ಕೆ ಹೋಗುವುದು ಆಯಾಸವಲ್ಲ. ಅರ್ಥಾತ್, ಅನೂರ್ಧ್ವ ಗತಿಯು ದುಃಖಜನಕವಾದರೂ ಊರ್ಧ್ವಗತಿಯು ದುಃಖಜನಕವಲ್ಲ, ಎಂದು.

ಆದರೆ, ಇದು ಸರಿಯಲ್ಲ. ಹಕ್ಕಿಗಳೂ ಹೆಚ್ಚೆಚ್ಚು ಮೇಲೆ ಹಾರಿದಂತೆ

ಆಯಾಸಕ್ಕೆ ಒಳಗಾಗುತ್ತವೆ. ಇದರಿಂದ ಊರ್ಧ್ವಗತಿಯೂ ಕೂಡ ದುಃಖ ಕಾರಣ ಎಂದು ತಿಳಿಯುತ್ತದೆ.

ಹೀಗೆ ಸಾಧ್ಯವ್ಯಾಪಕವಾಗದಿರುವುದರಿಂದ ಅನೂರ್ಧ್ವಗತಿತ್ವವು ಉಪಾಧಿಯಲ್ಲ.

**ಪ್ರತಿಸಾಧನರೂಪಸ್ಯ ನಾನುಮಾನಸ್ಯ ದೂಷಣಮ್ ।**
**ಉಪಾಧಿಃ ಪ್ರತಿರೂಪಂ ಹಿ ಸಾಧನಂ ತನ್ನ ಚಾಪರಮ್ ॥ ೨೮ ॥**

ಉಪಾಧಿಃ=ಉಪಾಧಿಯು ಪ್ರತಿಸಾಧನರೂಪಸ್ಯ ಅನುಮಾನಸ್ಯ= ಸತ್ಪ್ರತಿಪಕ್ಷಾನುಮಾನಕ್ಕೆ ನ ದೂಷಣಮ್=ದೋಷವಲ್ಲ. (ಯತ್ ಉಪಾಧಿಃ ನಾಮ ದೂಷಣಂ=ಯಾವ ಉಪಾಧಿದೋಷವಿದೆಯೋ) ತತ್=ಆ ದೋಷವು ಪ್ರತಿರೂಪಂ ಸಾಧನಂ=ಪ್ರತಿಪಕ್ಷಾನುಮಾನರೂಪವಾದುದು, ನಚಾಪರಂ= ಅನ್ಯದೋಷವಲ್ಲ.

ಭಾವಾರ್ಥ— ಜೈನರು ಊರ್ಧ್ವಗಮನವು ಸುಖಹೇತು, ಎಂದು ಅನುಮಾನ ಮಾಡಿದಾಗ ಅದು ಗಮನವಾದುದರಿಂದ ದುಃಖಹೇತು, ಎಂದು ನಾವು ಪ್ರತಿಪಕ್ಷಾನುಮಾನವನ್ನು ಮಾಡಿದ್ದೇವೆ. ಅದಕ್ಕೆ 'ಅನೂರ್ಧ್ವಗತಿತ್ವ' ಎಂಬ ಉಪಾಧಿಯನ್ನು ಜೈನರು ಹೇಳಿದ್ದಾರೆ. ಈ ಉಪಾಧಿಯ ಅಭಾವವನ್ನು ಹೇತು ಮಾಡಿ ಊರ್ಧ್ವಗತಿಯು ದುಃಖಹೇತುವಲ್ಲ ಎಂದು ಮತ್ತೆ ಪ್ರತಿಪಕ್ಷಾನುಮಾನ ಮಾಡಬೇಕು. ಆದರೆ ಇದರ ಅಗತ್ಯವಿಲ್ಲ. ನಮ್ಮ ಅನುಮಾನಕ್ಕೆ ಜೈನರ ಅನುಮಾನ ಈಗಾಗಲೇ ಒಂದು ಪ್ರತಿಪಕ್ಷಾನುಮಾನ ಇದೆ. ಮತ್ತೊಂದು ಪ್ರತಿಪಕ್ಷವನ್ನು ಹೇಳುವುದು ಅನಗತ್ಯ. ಆದ್ದರಿಂದ ಪ್ರತಿಪಕ್ಷಾನುಮಾನದಲ್ಲಿ ಉಪಾಧಿಯನ್ನು ಹೇಳುವುದು ವ್ಯರ್ಥ.

**ಅಥಾಪಿ ಸಶರೀರತ್ವಂ ಚಾತ್ರೋಪಾಧಿರ್ನ ವೈ ಭವೇತ್ ।**
**ಗತಿತ್ವಂ ಯತ್ರ ದೇಹಿತ್ವಮಿತಿ ಯತ್ ಸಾಧನಾನುಗಮ್ ॥ ೨೯ ॥**

ಅಥಾಪಿ=ಆದರೂ ಅತ್ರ=ಗತಿಯು ದುಃಖಹೇತು ಎಂದು ಸಾಧಿಸುವ ನಮ್ಮ ಅನುಮಾನಕ್ಕೆ ಸಶರೀರತ್ವಂ=ಶರೀರಸಹಿತತ್ವವು ಉಪಾಧಿಃ ನ ವೈ ಭವೇತ್=ಉಪಾಧಿಯಾಗಲಾರದು. ಯತ್ರ=ಎಲ್ಲಿ ಗತಿತ್ವಂ ತತ್ರ=ಅಲ್ಲಿ

ದೇಹಿತ್ವಂ=ದೇಹಸಹಿತತ್ವವು ಇರುತ್ತದೆ, ಇತಿ ಸಾಧನಾನುಗಮ್ ಯತ್=ಹೀಗೆ ಹೇತುವು ಸಾಧನವ್ಯಾಪಕವಾಗಿರುವುದರಿಂದ.

**ಭಾವಾರ್ಥ**— ಉಪಾಧಿಯು ಪ್ರತಿಪಕ್ಷೋನ್ನಾಯಕವಲ್ಲ, ಅವ್ಯಾಪ್ತಿ-ಉನ್ನಾಯಕ ಎಂದು ಪರಿಗಣಿಸಿ ನಮ್ಮ ಅನುಮಾನಕ್ಕೆ ಸಶರೀರತ್ವವು ಉಪಾಧಿ, ಎಂದು ಹೇಳಬಹುದು. ಗತಿ ಎಂದರೆ ಗಮನ. ಅದು ಚೇತನನಲ್ಲಿದೆ. ಅವನು ಶರೀರಸಹಿತವಾಗಿದ್ದಾನೆ. ಹೀಗೆ ಶರೀರಸಹಿತವಾದ ಚೇತನನ ಚಲನೆಯು ದುಃಖಹೇತು. ಸಾಧಕನಿಗೆ ಶರೀರವಿಲ್ಲ. ಅವನ ಗತಿಯು ದುಃಖಜನಕವಲ್ಲ, ಎಂದು ಜೈನರು ತಮ್ಮ ಪಕ್ಷವನ್ನು ಸಮರ್ಥಿಸಬಹುದು.

ಆದರೆ ಇದು ಸರಿಯಲ್ಲ. ಲೋಕದಲ್ಲಿ ಶರೀರ ಇದ್ದವರೇ ಚಲಿಸುವುದು ಕಂಡಿದೆ. ಶರೀರವಿಲ್ಲದೆ ಕೇವಲ ಆತ್ಮನ ಚಲನೆಯನ್ನು ಯಾರೂ ಕಂಡಿಲ್ಲ. ಇದರಿಂದ ಸಾಧಕನೂ ಶರೀರಸಹಿತವಾಗಿಯೇ ಮೇಲಕ್ಕೆ ಹೋಗುತ್ತಿರಬೇಕು. ಆಗ ಆಯಾಸವು ಅನಿವಾರ್ಯ.

**ಆಗಮಾನನುಸಾರಿತ್ವೇ ಪ್ರಸಂಗೋಽಯಂ ಯತಸ್ತತಃ ।**
**ನಾಪಸಿದ್ಧಾಂತತಾದೋಷಃ ಪ್ರಸಂಗೇ ಯದಿ ಸಾ ಭವೇತ್ ।**
**ತದೈವಾತಿಪ್ರಸಂಗಃ ಸ್ಯಾನ್ನ ಪ್ರಸಂಗಃ ಕ್ವಚಿದ್ ಭವೇತ್ ॥ ೩೦ ॥**

ಎಲ್ಲಾ ಗಮನಗಳು ದುಃಖಕಾರಣವಾದರೆ ನಿಮ್ಮ (ದ್ವೈತದರ್ಶನದಲ್ಲಿ) ಸಿದ್ಧಾಂತದಲ್ಲಿ ಮುಕ್ತರಿಗೂ ಗಮನವಿರುವುದರಿಂದ ಅವರಿಗೂ ದುಃಖವಿರಬೇಕಾದೀತು. ಗಮನವಿದ್ದ ಆತ್ಮನಿಗೆ ಶರೀರವೂ ಇರಲೇಬೇಕೆನ್ನುವುದಾದಲ್ಲಿ ಭಗವಂತನಿಗೂ ಶರೀರವಿರಬೇಕಾದೀತು. ಹೀಗೆ ಅಪಸಿದ್ಧಾಂತವನ್ನು ಹೇಳಿದರೆ ಅದಕ್ಕೆ ಸಮಾಧಾನ—

ಯತಃ=ಯಾವಕಾರಣದಿಂದ ಆಗಮಾನನುಸಾರಿತ್ವೇ ಅಯಂ ಪ್ರಸಂಗಃ= ವೇದಾದಿಶಾಸ್ತ್ರಗಳನ್ನು ಒಪ್ಪದೆ ಮೋಕ್ಷಸ್ವರೂಪವನ್ನು ಅನುಮಾನ ಮಾಡಿದಾಗ ನಾವು ಈ ಅತಿಪ್ರಸಂಗವನ್ನು ಅಂದರೆ ಮುಕ್ತರಿಗೂ ದುಃಖ-ಶರೀರಗಳು ಇರಬೇಕಾದೀತು, ಎಂಬ ಅತಿಪ್ರಸಂಗವನ್ನು ಹೇಳುತ್ತೇವೆಯೋ ಅತಃ=ಆ ಕಾರಣದಿಂದ ನ ಅಪಸಿದ್ಧಾಂತತಾದೋಷಃ=ಅಪಸಿದ್ಧಾಂತದೋಷವು ಇಲ್ಲ.

ಯದಿ=ಒಂದುವೇಳೆ ಪ್ರಸಂಗೇ ಸಾ ಭವೇತ್=ಪ್ರಸಂಗಾನುಮಾನದಲ್ಲೂ (ತರ್ಕದಲ್ಲೂ) ಅಪಸಿದ್ಧಾಂತತಾದೋಷವು ಬರುವುದಾದಲ್ಲಿ ಕ್ವಚಿತ್ ಪ್ರಸಂಗಃ ನ ಭವೇತ್=ಎಲ್ಲೂ 'ತರ್ಕವೇ' ಇಲ್ಲದಾದೀತು.

ಭಾವಾರ್ಥ— ನಾವು ವೇದಪ್ರಮಾಣವಾದಿಗಳು. ವೇದವು ಮುಕ್ತರು ನಿರ್ದುಃಖರು ಎಂದೂ, ಅವರಿಗೆ ಗಮನಾದಿಗಳು ಇವೆ ಎಂದೂ ಹೇಳುತ್ತದೆ. ಈ ಆಧಾರದಿಂದ ಮುಕ್ತರಿಗೆ ಗಮನವಿದ್ದರೂ ದುಃಖವಿಲ್ಲ, ಎಂದು ಹೇಳಬಹುದು. ಅದರಂತೆ ಭಗವಂತನಿಗೆ ಶರೀರವಿಲ್ಲದೆಯೂ ಗಮನವಿರಬಹುದು. ಈ ಕಲ್ಪನೆಗೆ ವೇದವೇ ಆಧಾರ. ಆದರೆ, ಜೈನರು ವೇದಗಳನ್ನು ಪ್ರಮಾಣಗಳೆಂದು ಅಂಗೀಕರಿಸಿಲ್ಲ. ಅವರ ಅನುಮಾನ ವೇದಾನನುಸಾರಿಯಾದುದು. ಅಂತಹ ಅನುಮಾನಕ್ಕೆ ಪ್ರತ್ಯನುಮಾನದ ವಿರೋಧವು ಬರುತ್ತದೆ.

ಇನ್ನೊಂದು ಕಾರಣ— ನಾವು ತರ್ಕವನ್ನು ಹೇಳುತ್ತೇವೆ— ಒಂದುವೇಳೆ ಮುಕ್ತನೂ ಆಕಾಶದಲ್ಲಿ ಮೇಲಕ್ಕೇರುವವನಾದರೆ ಅವನಿಗೆ ಶರೀರವೂ ದುಃಖವೂ ಇರಬೇಕಾದೀತು, ಎಂದು. ಇಂತಹ ತರ್ಕದಲ್ಲಿ ಅಪಸಿದ್ಧಾಂತವು ದೋಷವಲ್ಲ. ಸಿದ್ಧಾಂತಕ್ಕೆ ವಿರುದ್ಧವಾಗಿಯೇ ತರ್ಕದಲ್ಲಿ ಆಪಾದನೆಯನ್ನು ಮಾಡಬೇಕು. ತರ್ಕದಲ್ಲಿ ಅಪಸಿದ್ಧಾಂತವು ದೋಷವಾದಲ್ಲಿ ಎಲ್ಲ ತರ್ಕಗಳೂ ದುಷ್ಟವಾದಾವು.

**ಲೋಕಾಕಾಶಗತಿತ್ವಂ ಚೇದುಪಾಧಿಃ ಸಾಧನಾನುಗಃ ।**
**ಸೋಽಪೀತ್ಯುಕ್ತೇ ವದೇತ್ ಕಿಂ ಸ ತಸ್ಮಾದ್ ವೇದೋದಿತೋ ಭವೇತ್ ॥ ೩೧ ॥**

ಲೋಕಾಕಾಶಗತಿತ್ವಂ ಚೇತ್ ಉಪಾಧಿಃ=ಗಮನದಲ್ಲಿರುವ ಲೋಕಾಕಾಶ ಸಂಬಂಧವೇ ಉಪಾಧಿ ಎಂದಾದಲ್ಲಿ ಸೋಽಪಿ=ಅಂತಹ ಉಪಾಧಿಯೂ ಸಾಧನಾನುಗಃ=ಸಾಧನವ್ಯಾಪಕವಾಗಿದೆ, ಇತ್ಯುಕ್ತೇ=ಹೀಗೆ ಹೇಳಿದರೆ ಸಃ ಕಿಂ ವದೇತ್=ಜೈನನು ಏನು ಹೇಳಿಯಾನು!

ತಸ್ಮಾತ್=ಆದ್ದರಿಂದ ಮೋಕ್ಷಃ=ಮೋಕ್ಷವು ವೇದೋದಿತಃ ಭವೇತ್=ವೇದದಲ್ಲೇ ಹೇಳಲ್ಪಟ್ಟಿರಬೇಕು. (ಮೋಕ್ಷಃ ಎಂಬ ಶಬ್ದ ಮುಂದಿದೆ.)

ಭಾವಾರ್ಥ— ಜೈನರು ಲೋಕಾಕಾಶ ಮತ್ತು ಅಲೋಕಾಕಾಶ ಎಂದು ಎರಡು ರೀತಿಯ ಆಕಾಶವನ್ನು ಹೇಳುತ್ತಾರೆ. ಮೂರ್ತಪದಾರ್ಥಗಳಿರುವ ಆಕಾಶ ಲೋಕಾಕಾಶ. ಯಾವ ಮೂರ್ತಗಳೂ ಇಲ್ಲದ ಆಕಾಶ ಅಲೋಕಾಕಾಶ. ಲೋಕಾಕಾಶಗತಿಯು ಶ್ರಮಕಾರಣವಾದರೂ ಅಲೋಕಾಕಾಶದಲ್ಲಿ ಊರ್ಧ್ವ ಗತಿಯು ಶ್ರಮದಾಯಕವಲ್ಲ, ಎಂದು ಅವರ ವಾದ.

ಗಮನವಾದ್ದರಿಂದ ಎಲ್ಲ ಗಮನಗಳೂ ಶ್ರಮದಾಯಕಗಳು. ಆದ್ದರಿಂದ ಅಲೋಕಾಕಾಶಗಮನವೂ ದುಃಖಕ್ಕೆ ಕಾರಣ, ಎಂದು ಆ ವಾದದ ನಿರಾಕರಣೆ.

ಹೀಗೆ ವೇದದ ಆಧಾರವಿಲ್ಲದ ಕೇವಲ ಕಾಲ್ಪನಿಕವಾದ ಈ ಮೋಕ್ಷಸ್ವರೂಪವು ನಂಬಿಕೆಗೆ ಅರ್ಹವಲ್ಲ.

## ಬೌದ್ಧೋಕ್ತ ಮೋಕ್ಷವಾದ ವಿಮರ್ಶೆ

**ಮೋಕ್ಷ, ಏವ (ವಂ) ಸ್ವಯಂ ವಿಷ್ಣುರ್ಯದ್ಯಪೀಶೋ ಹ್ಯಶೇಷವಿತ್ ।**
**ಚಕಾರ ಸೌಗತಮತಂ ಮೋಹಾಯ್ಯೈವ ಚಕಾರ ಯತ್ ॥ ೩೨ ॥**

**ಅಸುರಾಣಾಮಯೋಗ್ಯಾನಾಂ ವೇದಮಾರ್ಗೇ ಪ್ರವರ್ತತಾಮ್ ।**
**ಅತೋಽಸುರಾಧಿಕಾರತ್ವಾನ್ನ ಗ್ರಾಹ್ಯಂ ತನ್ಮತಂ ಕ್ವಚಿತ್ ॥ ೩೩ ॥**

ಏವಂ=ಜೈನಮತದಂತೆ ಸೌಗತಮತಂ=ಬೌದ್ಧಮತವೂ ಕ್ವಚಿತ್ ನ ಗ್ರಾಹ್ಯಂ=ಯಾವ ಅಂಶದಲ್ಲೂ ಗ್ರಾಹ್ಯವಲ್ಲ. ಯದ್ಯಪಿ ಈಶಃ ಅಶೇಷವಿತ್ ವಿಷ್ಣುಃ=ವಸ್ತುತಃ ಕರಣಪಾಟವವುಳ್ಳ, ಸರ್ವಜ್ಞನಾದ ವಿಷ್ಣುವು ಸ್ವಯಂ ಸೌಗತಮತಂ ಚಕಾರ=ತಾನೇ ಬುದ್ಧನಾಗಿ ಅವತರಿಸಿ ಬೌದ್ಧಮತವನ್ನು ಮಾಡಿದ್ದಾನೆ. ಆದರೂ, ವೇದಮಾರ್ಗೇ ಪ್ರವರ್ತತಾಂ=ವೈದಿಕ ಮಾರ್ಗದಲ್ಲಿ ಪ್ರವೃತ್ತಿ ಮಾಡುತ್ತಲಿದ್ದ ಅಯೋಗ್ಯಾನಾಮ್ ಅಸುರಾಣಾಂ=ತತ್ತ್ವಜ್ಞಾನಕ್ಕೆ ಯೋಗ್ಯರಲ್ಲದ ಅಸುರರ ಮೋಹಾಯ್ಯೈವ=ಮೋಹಕ್ಕಾಗಿಯೇ ಯತ್ ಚಕಾರ=ಯಾವ ಕಾರಣದಿಂದ ಬೌದ್ಧಮತವನ್ನು ಪ್ರಚಾರಮಾಡಿರುವನೋ ಅತಃ=ಆದ್ದರಿಂದ, ಅಸುರಾಧಿಕಾರಿತ್ವಾತ್=ಬೌದ್ಧಮತವು ಅಸುರಾಧಿಕಾರಿಕ ವಾದ ಕಾರಣ ತನ್ಮತಂ ನ ಗ್ರಾಹ್ಯಂ=ಆ ಮತವು ಗ್ರಾಹ್ಯವಲ್ಲ.

**ಭಾವಾರ್ಥ—** ಬುದ್ಧದೇವನಿಗೆ ವಿವಕ್ಷಿತಾರ್ಥತತ್ತ್ವಜ್ಞಾನ, ವಿವಕ್ಷಾ, ಕರಣಪಾಟವಗಳಿದ್ದರೂ ಶ್ರೋತೃಗಳು ಅಯೋಗ್ಯರಾದ ಕಾರಣ ಅವಿಪ್ರಲಿಪ್ಸಾ ಇಲ್ಲ. ಆದ್ದರಿಂದ ಬೌದ್ಧದರ್ಶನವು ಗ್ರಾಹ್ಯವಲ್ಲ.

**ಚತುಷ್ಪ್ರಕಾರಂ ತಚ್ಚೋಕ್ತಂ ಶೂನ್ಯಂ ವಿಜ್ಞಾನಮೇಕಲಮ್ ।**
**ಅನುಮೇಯಬಹಿಸ್ತತ್ತ್ವಂ ತಥಾ ಪ್ರತ್ಯಕ್ಷಬಾಹ್ಯಗಮ್ ॥ ೩೪ ॥**

ತಚ್ಚ=ಆ ಬೌದ್ಧಮತವಾದರೂ ಚತುಷ್ಪಕಾರಂ=ನಾಲ್ಕು ವಿಧವಾಗಿ ಉಕ್ತಮ್=ಹೇಳಲ್ಪಟ್ಟಿದೆ. ಮೊದಲನೆಯದು— ಶೂನ್ಯಮ್ ಏಕಲಂ= ಅದ್ವಿತೀಯವಾದ ಶೂನ್ಯವೇ ತತ್ತ್ವ ಎಂದು. ಎರಡನೆಯದು— ಏಕಲಂ ವಿಜ್ಞಾನಂ=ಅದ್ವಿತೀಯವಾದ ವಿಜ್ಞಾನವೇ ತತ್ತ್ವ ಎಂದು. ಮೂರನೆಯದು, ಅನುಮೇಯ–ಬಹಿಸ್ತತ್ತ್ವಂ=ಬಾಹ್ಯಾರ್ಥವು ಅನುಮಾನಗಮ್ಯ, ಎಂದು. ನಾಲ್ಕನೆಯದು— ತಥಾ ಬಾಹ್ಯಂ ಪ್ರತ್ಯಕ್ಷಂ=ಬಾಹ್ಯಾರ್ಥವು ಪ್ರತ್ಯಕ್ಷ ಗಮ್ಯಂ, ಎಂದು.

**ಭಾವಾರ್ಥ—** ಬೌದ್ಧರು ಶೂನ್ಯವಾದಿಗಳು, ವಿಜ್ಞಾನವಾದಿಗಳು, ಸೌತ್ರಾಂತಿಕರು, ಮಾಧ್ಯಮಿಕರು ಎಂದು ನಾಲ್ಕು ವಿಧ. ಶೂನ್ಯವಾದಿಗಳು ಶೂನ್ಯ ಒಂದೇ ತತ್ತ್ವ ಜಗತ್ತು ಅದರಲ್ಲಿ ಆರೋಪಿತ, ಅಸತ್ಯ ಎನ್ನುತ್ತಾರೆ. ವಿಜ್ಞಾನವಾದಿಗಳು ವಿಜ್ಞಾನವು ತತ್ವವು ಎಂದರೂ ತದತಿರಿಕ್ತವಾದ ಜಗತ್ತು ಇದೆ, ಆದರೆ ಅದು ಪ್ರತ್ಯಕ್ಷಗೋಚರವಲ್ಲ, ಅನುಮೇಯ ಎನ್ನುತ್ತಾರೆ. ಸೌತ್ರಾಂತಿಕರು ಬಾಹ್ಯಪ್ರಪಂಚ ಪ್ರತ್ಯಕ್ಷಪ್ರಮಾಣದಿಂದ ತಿಳಿಯಲ್ಪಡುತ್ತದೆ ಎನ್ನುತ್ತಾರೆ.

ಈ ನಾಲ್ವರಲ್ಲಿ ಶೂನ್ಯವಾದಿಗಳು ಪ್ರತ್ಯಕ್ಷಸಿದ್ಧವಾದ ಈ ಜಗತ್ತು ಅಸತ್ಯ ಎನ್ನುವ ಮೂಲಕ ಜಗತ್ತನ್ನು ಅಪಲಾಪ ಮಾಡುತ್ತಾರೆ. ಆದ್ದರಿಂದ ಅವರ ದರ್ಶನ ಅತಿಹೇಯ. ವಿಜ್ಞಾನವಾದಿಗಳ ವಿಜ್ಞಾನವು ಎಲ್ಲರ ಅನುಭವ ಸಿದ್ಧವಾದ ಜ್ಞಾನ. ಅವರು ರೂಪಪ್ರಪಂಚವನ್ನು ವಿಜ್ಞಾನಾತ್ಮಕ ಎನ್ನುತ್ತಾರೆ. ಇವರು ಶೂನ್ಯವಾದಿಗಳಿಗಿಂತ ವಾಸಿ. ಶೂನ್ಯವಾದಿಗಳ ಶೂನ್ಯವು ಅಪ್ರಾಮಾಣಿಕ, ವಿಜ್ಞಾನ ಪ್ರಾಮಾಣಿಕ. ಅವರು ಸರ್ವಾಪಲಾಪಕರು,

ಇವರು ವಿಜ್ಞಾನಸತ್ಯತ್ವವಾದಿಗಳು. ವೈಭಾಷಿಕರು ರೂಪಪ್ರಪಂಚವನ್ನೂ ಅಂಗೀಕರಿಸುವುದರಿಂದ ವಿಜ್ಞಾನವಾದಿಗಳಿಗಿಂತ ಮೇಲು. ಆದರೆ ಪ್ರತ್ಯಕ್ಷಗಮ್ಯವಾದುದನ್ನು 'ಅನುಮೇಯ' ಎನ್ನುತ್ತಾರೆ. ಇದು ಅನುಭವ ವಿರುದ್ಧ. ಸೌತ್ರಾಂತಿಕರು ಈ ಪ್ರಪಂಚ ಸತ್ಯ, ಇದು ಯಥಾಯಥಂ ಪ್ರತ್ಯಕ್ಷಾದಿಪ್ರಮಾಣವೇದ್ಯ, ಎನ್ನುತ್ತಾರೆ.

**ಇತಿ, ತತ್ರ ತು ಯೇ ಶೂನ್ಯಂ ವದಂತ್ಯಜ್ಞಾನಮೋಹಿತಾಃ ।**
**ತೇ ಮೋಕ್ಷಂ ತಾದೃಶಂ ಬ್ರೂಯುರ್ನಿಃಶಂಕಂ ಮಾಯಿನೋ ಯಥಾ ॥ ೩೫ ॥**

ಇಲ್ಲಿರುವ ಇತಿಶಬ್ದವನ್ನು ಹಿಂದಿನ ಶ್ಲೋಕದಲ್ಲಿ ಅನ್ವಯಿಸಿಕೊಳ್ಳಬೇಕು. ತತ್ರ=ಈ ನಾಲ್ಕುವಿಧ ಬೌದ್ಧರಲ್ಲಿ ಯೇ=ಯಾರು ಅಜ್ಞಾನಮೋಹಿತಾಃ= (ಅಜ್ಞಾನೇತಿ ತಮೋಗುಣಃ ಲಕ್ಷ್ಯತೇ–ಸುಧಾ) ತಮೋಗುಣದ ಪ್ರಭಾವಕ್ಕೆ ಒಳಗಾಗಿ ಶೂನ್ಯಂ ವದಂತಿ=ಶೂನ್ಯವೇ ತತ್ತ್ವ ಎನ್ನುತ್ತಾರೋ ತೇ=ಅವರು ನಿಃ ಶಂಕಂ=ವೇದದ ಬಗ್ಗೆ ಯೋಚಿಸದೆಯೇ ಮಾಯಿನೋ ಯಥಾ=ಮಾಯಾ ವಾದಿಗಳು ಹೇಗೋ ಹಾಗೆ ಮೋಕ್ಷಂ=ಮೋಕ್ಷವನ್ನು ಬ್ರೂಯುಃ=ಹೇಳು ತ್ತಾರೆ.

**ಭಾವಾರ್ಥ**— ಮಾಯಾವಾದಿಗಳಿಗೆ ಬ್ರಹ್ಮ ತತ್ತ್ವ ಬ್ರಹ್ಮಭಾವ ಮೋಕ್ಷ. ಶೂನ್ಯವಾದಿಗಳಲ್ಲಿ ಶೂನ್ಯವು ತತ್ತ್ವ ಶೂನ್ಯಭಾವ ಮೋಕ್ಷ. ಇದು ಅವರೆಡೂ ಮತಗಳ ಸಾಮ್ಯ. ಆದರೆ ಮಾಯಾವಾದಿಗಳು ವೇದಕ್ಕೆ ಪ್ರಾಮಾಣ್ಯವನ್ನು ಅಂಗೀಕರಿಸಿ, ಬ್ರಹ್ಮಸಾಮ್ಯವೇ ಮೋಕ್ಷ ಎನ್ನುವ 'ಪರಮಂ ಸಾಮ್ಯಮುಪೈತಿ' ಇತ್ಯಾದಿವಾಕ್ಯಗಳಿಗೆ ಅರ್ಥಾಂತರವನ್ನು ಮಾಡಿ ಅವುಗಳ ಪ್ರಾಮಾಣ್ಯವನ್ನು ಉಳಿಸಿ ಬ್ರಹ್ಮೈಕ್ಯವನ್ನು ಮೋಕ್ಷ, ಎನ್ನುತ್ತಾರೆ. ಬೌದ್ಧರು ವೇದವನ್ನು ಕಡೆಗಣಿಸಿ ಶೂನ್ಯಸಿದ್ಧಿಯನ್ನು ಮೋಕ್ಷ ಎನ್ನುತ್ತಾರೆ.

**ನ ಕಿಂಚಿನ್ಮುಕ್ತ್ಯವಸ್ಥಾಯಾಮಾತ್ಮಾತ್ಮೀಯಮಥಾಪಿ ವಾ ।**
**ಏಕಸ್ಮಿನ್ ಸಂಸ್ಮೃತೇರ್ಮುಕ್ತೇ ನ ಕಿಂಚಿದವಶಿಷ್ಯತೇ ॥ ೩೬ ॥**

ಮುಕ್ತ್ಯವಸ್ಥಾಯಾಂ=ಮೋಕ್ಷಾವಸ್ಥೆಯಲ್ಲಿ ಆತ್ಮಾ, ಆತ್ಮೀಯಂ ವಾ=ಆತ್ಮನಾಗಲೀ ಅಂದರೆ ಜ್ಞಾನವಾಗಲೀ ಜ್ಞೇಯವಾಗಲೀ ಕಿಂಚಿತ್=ಯಾವುದೂ ನಾವಶಿಷ್ಯತೇ=ಉಳಿಯುವುದಿಲ್ಲ. ಏಕಸ್ಮಿನ್=ಒಬ್ಬನು ಸಂಸೃತೇಃ ಮುಕ್ತೇ ಸತಿ=ಸಂಸಾರದಿಂದ ಬಿಡುಗಡೆಯಾಗುತ್ತಿರಲು ಕಿಂಚಿತ್=ಚೇತನವಾಗಲೀ ಅಚೇತನವಾಗಲೀ ಯಾವುದೂ ನ ಅವಶಿಷ್ಯತೇ=ಉಳಿಯುವುದಿಲ್ಲ.

ಭಾವಾರ್ಥ— ಬೌದ್ಧರು, ಶೂನ್ಯವು ಅದ್ವೈತವಾದದ ಬ್ರಹ್ಮನಂತೆ ಸ್ವಪ್ರಕಾಶವಾದ ಚೇತನ. ಅದರಲ್ಲಿ ಯಾವ ಗುಣಗಳೂ ಇಲ್ಲದಿರುವುದರಿಂದ ಅದನ್ನು ಶೂನ್ಯ ಎನ್ನಲಾಗುತ್ತದೆ. ಜೀವರು ಅನೇಕರು, ಏಕ ಎಂಬ ಎರಡೂ ವಾದ ಅವರಲ್ಲೂ ಇದೆ. ಅವೆರಡರಲ್ಲಿ ಏಕಜೀವವಾದವೇ ಅವರ ಮುಖ್ಯ ಸಿದ್ಧಾಂತ.

**ತತ್ಸಂವೃತ್ಯೈವ ಭೇದೋऽಯಂ ಚೇತನಾಚೇತನಾತ್ಮಕಃ ।**
**ದೃಶ್ಯತೇ ಸಂಸೃ(ವೃ)ತೇರ್ಧ್ವಂಸೇ ನಿರ್ವಿಶೇಷೈವ ಶೂನ್ಯತಾ ॥ ೩೭ ॥**

ಆ ಒಬ್ಬ ಆತ್ಮನ ಸಂವೃತ್ಯೈವ=ಅಜ್ಞಾನದಿಂದ ಚೇತನಾಚೇತನಾತ್ಮಕಃ ಅಯಂ ಭೇದಃ ದೃಶ್ಯತೇ=ಚೇತನ, ಅಚೇತನ ಎಂಬ ವಿಶೇಷವು ಕಾಣಲ್ಪಡುತ್ತದೆ. ಸಂಸೃತೇಃ ಧ್ವಂಸೇ=ಅಜ್ಞಾನವು ನಾಶವಾದಲ್ಲಿ ನಿರ್ವಿಶೇಷಾ ಶೂನ್ಯತೈವ= ನಿರ್ವಿಶೇಷವಾದ ಶೂನ್ಯತತ್ವಮಾತ್ರ ಉಳಿಯುತ್ತದೆ.

**ನ ಸತ್ವಂ ನೈವ ಚಾಸತ್ವಂ ಶೂನ್ಯತತ್ವಸ್ಯ ವಿದ್ಯತೇ ।**
**ನ ಸುಖತ್ವಂ ನ ದುಃಖತ್ವಂ ನ ವಿಶೇಷೋऽಪಿ ಕಶ್ಚನ ॥ ೩೮ ॥**

ಸತ್ತ್ವಂ=ಸತ್ತಾ ಜಾತಿ ಅಥವಾ ಅರ್ಥಕ್ರಿಯಾಕಾರಿತ್ವವಾಗಲೀ ಅಸತ್ವಂ ಚ=ಅಭಾವಪ್ರತಿಯೋಗಿತ್ವರೂಪವಾದ ಅಸತ್ವವಾಗಲೀ ಶೂನ್ಯತತ್ತ್ವಸ್ಯ= ಶೂನ್ಯ ಎಂಬ ತತ್ತ್ವಕ್ಕೆ ನ ವಿದ್ಯತೇ=ಇರುವುದಿಲ್ಲ. ನ ಸುಖತ್ವಂ=ಸುಖರೂಪತ್ವವೂ ಇಲ್ಲ, ನ ದುಃಖತ್ವಂ=ದುಃಖರೂಪತ್ವಧರ್ಮವೂ ಇಲ್ಲ. ಕಶ್ಚನ ವಿಶೇಷೋऽಪಿ ನ=ಯಾವುದೇ ವಿಶೇಷಗಳೂ ಅದರಲ್ಲಿ ಇಲ್ಲ.

**ನಿರ್ವಿಶೇಷಂ ಸ್ವಯಂಭಾತಂ ನಿರ್ಲೇಪಮಜರಾಮರಮ್ ।**
**ಶೂನ್ಯಂ ತತ್ವಮಸಂಬಾಧಂ ನಾನಾಸಂವೃತಿವರ್ಜಿತಮ್ ॥ ೩೯ ॥**

**ಅಶೇಷದೋಷರಹಿತಂ ಮನೋವಾಚಾಮಗೋಚರಮ್ ।**
**ಮೋಕ್ಷ ಇತ್ಯುಚ್ಯತೇಽಸದ್ಭಿರ್ನಾನಾಸಂವೃತಿದೂಷಿತಮ್ ॥ ೪೦ ॥**

**ಸಂಸೃತ್ಯವಸ್ಥಾ(ಸ್ಥಂ)ವಿಜ್ಞೇಯಾ(ಯಂ) ಸಂವೃತ್ಯೈವ ವಿಶಿ(ಶೇ)ಷ್ಯತೇ।**
**ಸ್ಥಿತಯಾ ಧ್ವಸ್ತಯಾ ಚೈವ ಸಂಸೃತಿರ್ಮೋಕ್ಷ ಇತ್ಯಪಿ ॥ ೪೧ ॥**

ನಿರ್ವಿಶೇಷಂ=ಯಾವ ವಿಶೇಷಗಳೂ ಇಲ್ಲದ ಸ್ವಯಂಭಾತಂ= ಸ್ವಪ್ರಕಾಶವಾದ ನಿರ್ಲೇಪಂ=ಪುಣ್ಯ-ಪಾಪಲೇಶವಿಲ್ಲದ, ಅಜರಾಮರಂ= ಮುಪ್ಪು-ಮರಣಗಳಿಲ್ಲದ ಅಸಂಬಾಧಂ=ವಸ್ತ್ವಂತರರಹಿತವಾಗಿ ಅದ್ವಿತೀಯ ವೆನಿಸಿದ, ನಾನಾಸಂವೃತಿವರ್ಜಿತಂ=ನಾನಾವಿಧವಾದ ಅನ್ಯಥಾಜ್ಞಾನಗಳಿಂದ ರಹಿತವಾದ ಅಶೇಷದೋಷರಹಿತಂ=ಕಾಮ-ಕ್ರೋಧಾದಿದೋಷರಹಿತವಾದ ಮನೋವಾಚಾಮಗೋಚರಂ=ಮನಸ್ಸಿಗಾಗಲೀ ಮಾತಿಗಾಗಲೀ ನಿಲುಕದ ಶೂನ್ಯಂ ತತ್ತ್ವಂ ಮೋಕ್ಷಃ=ಶೂನ್ಯತತ್ತ್ವವೇ ಮೋಕ್ಷ, ಇತಿ ಅಸದ್ಭಿಃ ಉಚ್ಯತೇ=ಹೀಗೆ ಅಸಜ್ಜನರಿಂದ ಹೇಳಲ್ಪಡುತ್ತದೆ.

ಅದೇ ಶೂನ್ಯವು ನಾನಾಸಂವೃತಿದೂಷಿತಂ=ಅನೇಕ ವಿಧವಾದ ಮಿಥ್ಯಾ ಜ್ಞಾನಗಳಿಂದ ದೂಷಿತವಾದಾಗ ಸಂಸೃತ್ಯವಸ್ಥಾ ವಿಜ್ಞೇಯಾ=ಸಂಸಾರಾವಸ್ಥೆ ಎಂದು ತಿಳಿಯಲ್ಪಡಬೇಕು. ಹೀಗೆ ಶೂನ್ಯ ಒಂದೇ ಸ್ಥಿತಯಾ=ನಾಶ ವಾಗದಿರುವ ಅಥವಾ ಧ್ವಸ್ತಯಾ=ನಾಶವಾದ ಸಂವೃತ್ಯೈವ=ಅಜ್ಞಾನ ದಿಂದಾಗಿಯೇ ವಿಶಿಷ್ಯತೇ=ಸಂಸಾರ, ಮೋಕ್ಷ ಎಂಬ ವಿಶೇಷವನ್ನು ಪಡೆಯುತ್ತದೆ.

ಭಾವಾರ್ಥ— ವಸ್ತುತಃ ಶೂನ್ಯಾವಸ್ಥೆಯೇ ಮೋಕ್ಷ. ಆ ಶೂನ್ಯ ಸದಾ ನಿರ್ವಿಶೇಷ. ಅದರಲ್ಲಿ ಬಂಧ-ಮೋಕ್ಷಗಳೆಂಬ ವಿಶೇಷಗಳೇನೂ ಇಲ್ಲ. ಆದರೂ ಅಜ್ಞಾನದಿಂದ ಜೊತೆಗೂಡಿದಾಗ ಸಂಸಾರ, ಅಜ್ಞಾನ ನಾಶವಾದಾಗ ಮೋಕ್ಷ. ಹೀಗೆ ಸದಾ ಮುಕ್ತವಾಗಿಯೇ ಇರುವ ಶೂನ್ಯವು ಅಜ್ಞಾನ ಧ್ವಂಸವಾದಾಗ ಮೋಕ್ಷ ಎಂದು ಕರೆಯಲ್ಪಡುತ್ತದೆ.

ಇದುವರೆಗೆ ಏಕಾತ್ಮವಾದವನ್ನು ಹೇಳಿ ಮುಂದೆ ಅನೇಕಾತ್ಮವಾದವನ್ನು ಹೇಳಲಾಗಿದೆ—

**ಕೇಚಿತ್ ತೇಷ್ವನ್ಯಥಾ ಪ್ರಾಹುಸ್ಸಂವೃತ್ಯೈವ ತ್ವನೇಕಧಾ ।**
**ಅವಚ್ಛಿನ್ನಂ ಮಹಾಶೂನ್ಯಂ ನಾನಾಪುದ್ಗಲಶಬ್ದಿತಮ್ ॥ ೪೨ ॥**

ತೇಷು=ಅವರಲ್ಲಿ ಕೇಚಿತ್=ಕೆಲವು ಶೂನ್ಯವಾದಿಗಳು ಅನ್ಯಥಾ=ಹಿಂದೆ ಹೇಳಿರುವ ಏಕಾತ್ಮವಾದಕ್ಕಿಂತ ಭಿನ್ನವಾಗಿ ಆಹುಃ=ಹೇಳುತ್ತಾರೆ— ಮಹಾಶೂನ್ಯಂ=ವ್ಯಾಪ್ತವಾದ ಶೂನ್ಯವು ಸಂವೃತ್ಯಾ ಅವಚ್ಛಿನಂ=ಅನೇಕ ಅಜ್ಞಾನಗಳೆಂಬ ಉಪಾಧಿವಿಶಿಷ್ಟವಾಗಿ ಅನೇಕಧಾ=ನಾನಾವಿಧವಾಗಿ ನಾನಾಪುದ್ಗಲಸಂಜ್ಞಿತಂ ಭವತಿ=ಅನೇಕ ಜೀವರಾಗಿ ಹೆಸರಿಸಲ್ಪಡುತ್ತದೆ.

ಭಾವಾರ್ಥ— ವಿಶಾಲವಾದ ಒಂದೇ ಆಕಾಶವು ನಾಲ್ಕು ಗೋಡೆಗಳ ಒಳಗೂ ಇದ್ದು ಮಠಾಕಾಶ ಎನಿಸುತ್ತದೆ. ಮಠದ ಒಳಗಿರುವ ಮಡಿಕೆಯ ಒಳಗಿದ್ದು ಘಟಾಕಾಶ ಎನಿಸುತ್ತದೆ. ಅದರಂತೆ ಶೂನ್ಯವು ಒಂದೇ ಆದರೂ ಅಜ್ಞಾನಗಳು ಅನೇಕ ಇರುವುದರಿಂದ ಒಂದೊಂದು ಅಜ್ಞಾನಾವಚ್ಛಿನ್ನವಾದ ಶೂನ್ಯವು ಒಂದೊಂದು ಜೀವ ಎನಿಸುತ್ತದೆ. ಇದು ಅನೇಕಜೀವವಾದ ಜೀವವನ್ನು ಬೌದ್ಧರು ಪುದ್ಗಲ ಎನ್ನುತ್ತಾರೆ.

**ಯಸ್ಯ ಶೂನ್ಯೈಕರಸತಾಜ್ಞಾನಾತ್ ಸಾ ತ್ವಪಗಚ್ಛತಿ ।**
**ಸ ಪುದ್ಗಲತ್ವನಿರ್ಮುಕ್ತೋ ಮಹಾಶೂನ್ಯತ್ವಮೇಷ್ಯತಿ ।**
**ಸಂವೃತ್ಯಾ ಯ (ನ್ಯ) ಸ್ತ್ವವಚ್ಛಿನ್ನೋ ದುಃಖಾನ್ಯನುಭವತ್ಯಲಮ್**
**॥ ೪೩ ॥**

ಹೀಗೆ ಈ ಅನೇಕಾತ್ಮರಲ್ಲಿ ಯಸ್ಯ=ಯಾವ ಆತ್ಮನಿಗೆ ಶೂನ್ಯೈಕರ ಸತಾಜ್ಞಾನಾತ್=ಶೂನ್ಯವೇ ಅದ್ವಿತೀಯವಾದ ತತ್ತ್ವ ಎಂಬ ಅಪರೋಕ್ಷಜ್ಞಾನ ದಿಂದ ಸಾ ತು=ಸಂಸಾರಕಾರಣವಾದ ಅಜ್ಞಾನವು ನಶ್ಯತಿ=ನಾಶವಾಗುವುದೋ ಸಃ=ಆ ಆತ್ಮನು ಪುದ್ಗಲತ್ವನಿರ್ಮುಕ್ತಃ=ಜೀವಭಾವದಿಂದ ಬಿಡುಗಡೆಗೊಂಡವ ನಾಗಿ ಮಹಾಶೂನ್ಯತ್ವಂ=ವ್ಯಾಪ್ತವಾದ ಶೂನ್ಯಭಾವವನ್ನು ಏಷ್ಯತಿ=ಹೊಂದು ವನು. ಯಸ್ತು=ಯಾರು ಸಂವೃತ್ಯಾ=ಅಜ್ಞಾನದಿಂದ ಅವಚ್ಛಿನ್ನಃ=ವಿಶಿಷ್ಟ ನಾಗಿರುವನೋ ಅವನು ಅಲಂ=ಚೆನ್ನಾಗಿ ದುಃಖಾನಿ ಅನುಭವತಿ=ದುಃಖ ಗಳನ್ನು ಅನುಭವಿಸುತ್ತಿರುತ್ತಾನೆ. ಇತಿ=ಹೀಗೆಂದು ಶೂನ್ಯವಾದಿಮತ.

**ಇತ್ಯೇವಂ ಮಾಯಿನಶ್ಚಾಹುರೇಕಜೀವತ್ವವಾದಿನಃ ।**
**ಬಹುಜೀವಮತಾಶ್ಚೇತಿ ಮಾಯಾ ತೇಷಾಂ ತು ಸಂವೃತಿಃ ॥ ೪೪ ॥**

ಶೂನ್ಯವಾದಕ್ಕೂ ಮಾಯಾವಾದಕ್ಕೂ ವಿಶೇಷವಿಲ್ಲದುದರಿಂದ ಶೂನ್ಯ ವಾದಿಗಳ ಮತದ ಮೋಕ್ಷಸ್ವರೂಪವನ್ನು ನಿರಾಕರಿಸಿದರೆ ಅದರಿಂದ ಮಾಯಾವಾದಿಗಳ ಮೋಕ್ಷಸ್ವರೂಪವೂ ನಿರಾಕೃತವಾಗುತ್ತದೆ. ಅದಕ್ಕಾಗಿ ಇಲ್ಲಿ ಅವೆರಡು ಮತಗಳಿಗೂ ವಿಶೇಷವಿಲ್ಲ, ಎಂದು ನಿರೂಪಿಸಲಾಗಿದೆ. (ಇಲ್ಲಿರುವ ಇತಿಶಬ್ದಕ್ಕೆ ಹಿಂದೆ ಅನ್ವಯ.)

ಏಕಜೀವತ್ವವಾದಿನಃ=ಏಕಜೀವವಾದಿಗಳೂ (ಏಕಃ ಜೀವಃ ಯಸ್ಮಿನ್ ಲೋಕೇ–ಸಃ) ಬಹುಜೀವಮತಾಶ್ಚ=ಬಹುಜೀವರು ಎಂಬ ಅಭಿಪ್ರಾಯ ವುಳ್ಳವರು ಆದ ಮಾಯಿನಶ್ಚ=ಮಾಯಾವಾದಿಗಳೂ ಏವಂ ಆಹುಃ= ಬೌದ್ಧರಂತೆಯೇ ಮೋಕ್ಷ ಸ್ವರೂಪವನ್ನು ಹೇಳುವರು. ತೇಷಾಂ ತು= ಬೌದ್ಧರಿಗಾದರೋ ಮಾಯಾ=ಮಾಯಾವಾದಿಗಳ ಮಾಯೆಯೇ ಸಂವೃತಿಃ= 'ಸಂವೃತಿ' ಎಂದು ಕರೆಯಲ್ಪಡುತ್ತದೆ.

**ಭಾವಾರ್ಥ**— ಮಾಯಾವಾದದಲ್ಲೂ ಏಕಜೀವವಾದ, ಬಹುಜೀವ ವಾದ ಎಂಬ ಎರಡು ವಾದಗಳಿವೆ. ಈ ವ್ಯತ್ಯಾಸಕ್ಕೆ ಕಾರಣವಾದ ಅಜ್ಞಾನವನ್ನು ಮಾಯಾವಾದಿಗಳು 'ಮಾಯೆ' ಎಂದು ಕರೆಯುತ್ತಾರೆ, ಬೌದ್ಧರು 'ಸಂವೃತಿ' ಎಂದು ಕರೆಯುತ್ತಾರೆ. ಹೀಗೆ ಹೆಸರು ಮಾತ್ರ ಬೇರೆ, ತತ್ತ್ವ ಅದೇ. ಇದರಿಂದಾಗಿ ಬೌದ್ಧರು ಸಂವೃತಿ ನಿವೃತ್ತಿ ಮೋಕ್ಷ ಎನ್ನುತ್ತಾರೆ, ಮಾಯಿಗಳು ಅಜ್ಞಾನ ಅಥವಾ ಮಾಯಾನಿವೃತ್ತಿ ಮೋಕ್ಷ ಎನ್ನುತ್ತಾರೆ.

ಪರತತ್ತ್ವದ ವಿಷಯದಲ್ಲೂ ಇವೆರಡಕ್ಕೆ ಭೇದವಿಲ್ಲ—

**ನಿರ್ವಿಶೇಷತ್ವವಾಚ್ಯೈವ ಶೂನ್ಯಂ ಬ್ರಹ್ಮೇತಿ (ಹ್ಯೈವ) ನೋ ಭಿದಾ ।**
**ಸಚ್ಚಿತ್ಸುಖಾದಿಕಂ ಚೈವ ಕಿಂ ಕುತೋಽಖಂಡವಾದಿನಃ ॥ ೪೫ ॥**

ನಿರ್ವಿಶೇಷತ್ವವಾಚ್ಯೈವ=ಶೂನ್ಯ–ಬ್ರಹ್ಮಗಳೆರಡೂ ಸಕಲವಿಶೇಷರಹಿತ ವಾದುದು ಎಂಬ ಇಬ್ಬರ ಮಾತಿನಿಂದಲೇ ಶೂನ್ಯಂ, ಬ್ರಹ್ಮೇತಿ ಭಿದಾ ನ=

ಒಂದು ಶೂನ್ಯ, ಇನ್ನೊಂದು ಬ್ರಹ್ಮ ಎಂಬ ವಿಶೇಷವೂ ಅವೆರಡರಲ್ಲಿ ಇಲ್ಲ. ಒಂದರಿಂದ ಇನ್ನೊಂದರಲ್ಲಿ ಯಾವುದೇ ವಿಶೇಷವು ಬಂದರೂ ನಿರ್ವಿಶೇಷತ್ವಕ್ಕೆ ಚ್ಯುತಿ ಬರುತ್ತದೆ.

ಸತ್–ಚಿತ್–ಸುಖಾದಿಕಂ ಚ='ಸತ್ಯಂ ಜ್ಞಾನಂ' 'ಆನಂದಂ ಬ್ರಹ್ಮ' ಇತ್ಯಾದಿ ಶ್ರುತಿಗಳು ಹೇಳುವ ಸತ್ವ, ಜ್ಞಾನ, ಆನಂದ ಮೊದಲಾದ ಧರ್ಮಗಳು ಅಖಂಡ ವಾದಿನಃ=ಅಖಂಡಬ್ರಹ್ಮವಾದಿಗಳಿಗೆ ಕುತಃ=ಎಲ್ಲಿಂದ ಬರಬೇಕು?

**ಭಾವಾರ್ಥ—** ಮಾಯಾವಾದಿಗಳು ಬ್ರಹ್ಮ ಸತ್‌ಸ್ವರೂಪ, ಜ್ಞಾನರೂಪ, ಆನಂದರೂಪ ಎನ್ನುತ್ತಾರೆ. ಆದರೆ ಅದಕ್ಕೆ ಪ್ರಯೋಜಕವಾದ ಸತ್ವ, ಜ್ಞಾನತ್ವ ಆನಂದತ್ವ ಎಂಬ ಧರ್ಮಗಳನ್ನು ಅವರು ಅಂಗೀಕರಿಸಿದರೆ ಬ್ರಹ್ಮನ ಅಖಂಡ ಸ್ವರೂಪಕ್ಕೆ ಭಂಗ ಬರುತ್ತದೆ. ಆದ್ದರಿಂದ ಶೂನ್ಯದಂತೆ ಬ್ರಹ್ಮನಲ್ಲೂ ಯಾವ ವಿಶೇಷಗಳೂ ಇಲ್ಲ.

**ವ್ಯಾವರ್ತ್ಯಮಾತ್ರಭೇದಸ್ತು ವಿದ್ಯತೇ ಶೂನ್ಯವಾದಿನಃ ।**
**ಅನೃತಾದೇರಪೋಹಂ ತು ಸ್ವಯಮೇವ ಹಿ ಮನ್ಯತೇ ।**
**ನಿರ್ವಿಶೇಷತ್ವತೋ ನೈವ ವಿಶೇಷೋ ಬ್ರಹ್ಮಶೂನ್ಯಯೋಃ ॥ ೪೬ ॥**

ವ್ಯಾವರ್ತ್ಯಮಾತ್ರಭೇದಸ್ತು=ಮಾಯಾವಾದಿಗಳು ಬ್ರಹ್ಮನಲ್ಲಿ ಸತ್ಯಾದಿ ಪದಗಳಿಂದ ಹೇಳಲ್ಪಡುವ ಅನೃತವ್ಯಾವೃತ್ತ್ಯಾದಿಗಳು ಶೂನ್ಯವಾದಿನಃ ಅಪಿ ವಿದ್ಯತೇ=ಶೂನ್ಯವಾದಿಯ ಶೂನ್ಯಕ್ಕೂ ಇದೆ. ಅನೃತಾದೇಃ ಅಪೋಹಂ= ಅನೃತಾದಿಗಳ ಅಪೋಹವನ್ನು ಸ್ವಯಮೇವ=ಸ್ವತಃ ಶೂನ್ಯವಾದಿಯೂ ಮನ್ಯತೇ=ಅಂಗೀಕರಿಸುತ್ತಾನೆ.

ಅಷ್ಟೇ ಅಲ್ಲ, ನಿರ್ವಿಶೇಷತ್ವತಃ=ಬ್ರಹ್ಮ–ಶೂನ್ಯಗಳೆರಡೂ ನಿರ್ವಿಶೇಷ ಗಳಾದುದರಿಂದ ಬ್ರಹ್ಮಶೂನ್ಯಯೋಃ=ಬ್ರಹ್ಮ ಮತ್ತು ಶೂನ್ಯಗಳಿಗೆ ನೈವ ವಿಶೇಷಃ=ವಿಶೇಷವೇ ಇಲ್ಲ.

**ಭಾವಾರ್ಥ—** ಮಾಯಾವಾದಿಗಳು ಬ್ರಹ್ಮನು ಸತ್ಯ, ಜ್ಞಾನ, ಆನಂದ ಎನ್ನುತ್ತಾರೆ. ಸತ್ಯಾದಿಪದಗಳಿಗೆ ಸತ್ಯತ್ವಗುಣವುಳ್ಳವನು, ಎನ್ನುವ ವಿಧಿ

ರೂಪವಾದ ಅರ್ಥವನ್ನು ಅಂಗೀಕರಿಸದಿದ್ದರೂ ಬ್ರಹ್ಮ ಅನೃತನಲ್ಲ, ಜಡವಲ್ಲ ಎನ್ನುವ ನಿಷೇಧರೂಪವಾದ ಅರ್ಥವನ್ನು ಅಂಗೀಕರಿಸುತ್ತಾರೆ. ಈ ರೀತಿಯ ನಿಷೇಧ ರೂಪವಾದ ಧರ್ಮಗಳನ್ನು ಶೂನ್ಯವಾದಿಗಳು ಶೂನ್ಯಕ್ಕೂ ಅಂಗೀಕರಿಸುತ್ತಾರೆ. ಅವರ ಶೂನ್ಯಸ್ವರೂಪವನ್ನು ನಿರೂಪಿಸುವ ಕಾರಿಕೆ ಹೀಗಿದೆ—

''ಜಾಡ್ಯ-ಸಂವೃತಿ-ದುಃಖಾಂತ-ಪೂರ್ವದೋಷವಿರೋಧಿ ಯತ್'' ಎಂದು. ಇಲ್ಲಿ ಜಾಡ್ಯವಿರೋಧಿ ಎಂದರೆ ಜಡತ್ವಗುಣರಹಿತವಾದುದು ಎಂದರ್ಥ. ಮಾಯಾವಾದಿಗಳು ಜ್ಞಾನಪದಕ್ಕೆ 'ಜಡತ್ವವಿಲ್ಲ' ಎನ್ನುವ ಅರ್ಥವನ್ನೇ ಹೇಳುತ್ತಾರೆ. ಶೂನ್ಯವಾದಿಗಳು ಸಂವೃತಿವಿರೋಧಿ ಎಂದರೆ ಮಾಯಾವಾದಿಗಳು ಅಜ್ಞಾನವಿರೋಧಿ ಎನ್ನುತ್ತಾರೆ. ಹೀಗೆ ಇಂತಹ 'ಅಪೋಹಧರ್ಮಗಳು' ಶೂನ್ಯ-ಬ್ರಹ್ಮರಲ್ಲಿ ಸಮಾನವಾಗಿವೆ.

ಶೂನ್ಯದಿಂದ ಬ್ರಹ್ಮನಲ್ಲಿ ವಿಶೇಷ ಅಥವಾ ಬ್ರಹ್ಮನಿಂದ ಶೂನ್ಯದಲ್ಲಿ ವಿಶೇಷ ಇವೆರಡೂ ವ್ಯಾಹತ. ಏಕೆಂದರೆ ಅವೆರಡೂ ನಿರ್ವಿಶೇಷಗಳು. ನಿರ್ವಿಶೇಷದಲ್ಲಿ ವಿಶೇಷ ಎನ್ನುವುದು ವ್ಯಾಹತ.

**ಪ್ರಾಮಾಣ್ಯಾದಿ ಚ ವೇದಸ್ಯ ಫಲತಃ ಸಮಮೇವ ಹಿ ।**
**ಅತತ್ವಾವೇದಕಂ ಯಸ್ಮಾತ್ ಪ್ರಮಾಣಂ ತೇನ ಕಥ್ಯತೇ ।**
**ಅತತ್ವಾವೇದಕತ್ವಂ ಯದಪ್ರಾಮಾಣ್ಯಂ ಸತಾಂ ಮತಮ್ ॥ ೪೭ ॥**

ವೇದಸ್ಯ ಪ್ರಾಮಾಣ್ಯಾದಿ ಚ=ವೇದಕ್ಕೆ ಪ್ರಾಮಾಣ್ಯಾದಿಗಳೂ ಕೂಡಾ ಫಲತಃ ಸಮಮೇವ=ಅಂತಿಮವಾಗಿ ಸಮಾನವೇ ಆಗಿದೆ. ಯಸ್ಮಾತ್=ಯಾವ ಕಾರಣದಿಂದ ತೇನ=ಮಾಯಾವಾದಿಯಿಂದ ಅತತ್ವಾವೇದಕಂ ಪ್ರಮಾಣಂ ಕಥ್ಯತೇ=ಶಾಸ್ತ್ರಗಳೆಲ್ಲವೂ ಅತತ್ವಾವೇದಕವಾದ ಪ್ರಮಾಣ ಎಂದು ಹೇಳಲ್ಪಡುತ್ತದೆ. ಯತ್=ಯಾವ ಕಾರಣದಿಂದ ಅತತ್ವಾವೇದಕತ್ವಂ= ಅತತ್ವಾವೇದಕತ್ವವೆಂದರೆ ಅಪ್ರಾಮಾಣ್ಯಂ=ಅಪ್ರಾಮಾಣ್ಯವೇ ಎಂದು ಸತಾಂ ಮತಂ=ವಿದ್ವಜ್ಜನ ಸಮ್ಮತವು.

ಭಾವಾರ್ಥ— ಶೂನ್ಯಸ್ವರೂಪದಲ್ಲಿ ಹಾಗೂ ಜಗತ್ತಿನ ಬಗ್ಗೆ ಶೂನ್ಯವಾದ

ಮತ್ತು ಮಾಯಾವಾದಿಗಳಿಗೆ ವಿಶೇಷವು ಇಲ್ಲದೇ ಹೋದರೂ ವೇದಪ್ರಾಮಾಣ್ಯದ ಬಗ್ಗೆ ವಿಶೇಷವಿದೆ. ಬೌದ್ಧರು ವೇದವನ್ನು ಅಪ್ರಮಾಣ ಎಂದರೆ ಮಾಯಾವಾದಿಗಳು ವೇದವು ಅಪೌರುಷೇಯ, ಪ್ರಮಾಣ ಎನ್ನುತ್ತಾರೆ, ಎಂದರೆ, ಹೀಗೆ ಹೇಳುವುದೂ ಸರಿಯಲ್ಲ. ಮಾಯಾವಾದದಂತೆ ವೇದಗಳು 'ಅವಿದ್ಯಾವದ್ ವಿಷಯಗಳು'. ವೇದದಲ್ಲಿ ಹೇಳಲಾಗಿರುವ ಕರ್ಮಗಳು ಅಜ್ಞಾನಿಗಳಿಗೆ ಮಾತ್ರ. ಆ ಕರ್ಮಗಳು ಬ್ರಹ್ಮಭಿನ್ನವಾದುದರಿಂದ ಅತತ್ವಗಳು. ಬ್ರಹ್ಮಮಾತ್ರ ತತ್ತ್ವ. ಅತತ್ವವನ್ನು ತಿಳಿಸುವ ವೇದಗಳು ಅತತ್ವಾವೇದಕಗಳು. ಅತತ್ವಾವೇದಕ ಎಂದರೂ ಅಪ್ರಮಾಣವೆಂದರೂ ಎರಡೂ ಒಂದೇ. ಹೀಗೆ, ಅಂತಿಮವಾಗಿ ಮಾಯಾವಾದದಲ್ಲೂ ವೇದಗಳು ಪ್ರಮಾಣಗಳಲ್ಲ.

**ದೀರ್ಘಭ್ರಾಂತಿಕರೀ ಚೇತ್ ಸ್ಯಾದತತ್ವಾವೇದಕಪ್ರಮಾ ।**
**ರಜ್ಜುಸರ್ಪಾದಿವಿಜ್ಞಾನಾದಪ್ಯಾಧಿಕ್ಯಾದಮಾನತಾ ।**
**ಸ್ಯಾದಾಗಮಸ್ಯಾನಿವರ್ತ್ಯಮಹಾಮೋಹಪ್ರದತ್ವತಃ ॥ ೪೮ ॥**

**ತಲನೈಲ್ಯಾದಿವಿಜ್ಞಾನಮಾಕಾಶೇ ಮಾನತಾಂ ವ್ರಜೇತ್ ।**
**ಛತ್ರಾಕಾರತ್ವವಿಜ್ಞಾನಂ ಚಂದ್ರಪ್ರಾದೇಶತಾ ಮತಿಃ ॥ ೪೯ ॥**

ದೀರ್ಘಭ್ರಾಂತಿಕರೀ=ದೀರ್ಘಕಾಲದವರೆಗೆ ಭ್ರಾಂತಿಕಾರಕವಾದುದು ಅತತ್ವಾವೇದಕಪ್ರಮಾ ಚೇತ್=ಅತತ್ವಾವೇದಕ ಪ್ರಮಾಣ ಎನ್ನುವುದಾದಲ್ಲಿ ರಜ್ಜುಸರ್ಪಾದಿವಿಜ್ಞಾನಾದಪಿ=ಹಗ್ಗವನ್ನು ನೋಡಿ ಹಾವು ಎಂಬ ಭ್ರಮೆಗಿಂತಲೂ ಆಧಿಕ್ಯಾತ್=ಹೆಚ್ಚಿನ ಅಮಾನತಾ=ಅಪ್ರಾಮಾಣ್ಯವು, ಅನಿವರ್ತ್ಯ-ಮಹಾಮೋಹಪ್ರದತ್ವತಃ=ಬ್ರಹ್ಮಜ್ಞಾನೇತರಜ್ಞಾನದಿಂದ ನಿವೃತ್ತಿಯಾಗದ ಭ್ರಮ ಜನಕವಾದ ಕಾರಣದಿಂದ, ಆಗಮಸ್ಯ ಸ್ಯಾತ್=ವೇದಾದ್ಯಾಗಮಗಳಿಗೆ ಬಂದೀತು.

ದೀರ್ಘಭ್ರಾಂತಿಜನಕವಾದುದು ಪ್ರಮಾಣವಾಗುವುದಾದಲ್ಲಿ ಆಕಾಶೇ=ಆಕಾಶದಲ್ಲಿ ತಲನೈಲ್ಯಾದಿವಿಜ್ಞಾನಂ=ಇಂದ್ರನೀಲಮಣಿಯಂತೆ ಆಕಾಶವು ಕಪ್ಪಾಗಿದೆ, ಎಂಬ ಜ್ಞಾನವೂ ಮಾನತಾಂ ವ್ರಜೇತ್=ಪ್ರಮಾಣ

ವಾದೀತು. ಆಕಾಶೇ=ಆಕಾಶದಲ್ಲಿ ಛತ್ರಾಕಾರತ್ವವಿಜ್ಞಾನಂ=ಛತ್ರದಂತೆ ಆಕಾಶದ ಆಕಾರವಿದೆ, ಎಂಬ ಜ್ಞಾನವೂ, ಚಂದ್ರಪ್ರಾದೇಶತಾಮತಿಃ= ''ಚಂದ್ರನು ಗೇಣುಪರಿಮಿತ'' ಎಂಬ ಜ್ಞಾನವೂ ಮನತಾಂ ವ್ರಜೇತ್= ಪ್ರಮಾಣವಾದೀತು.

ಭಾವಾರ್ಥ— ಭ್ರಾಂತಿ ಎರಡು ವಿಧವಾಗಿದೆ—ಕೆಲವು ತತ್ಕಾಲದಲ್ಲೇ ನಿವೃತ್ತಿಯಾಗುತ್ತವೆ, ಮತ್ತೆ ಕೆಲವು ದೀರ್ಘಕಾಲ ಮುಂದುವರಿಯುತ್ತವೆ. ಹಗ್ಗದಲ್ಲಿ ಹಾವು ಎನ್ನುವ ಭ್ರಮೆ ಹತ್ತಿರ ಹೋಗಿ ನೋಡಿದ ಕೂಡಲೇ ನಿವೃತ್ತಿಯಾಗುತ್ತದೆ. ಜಗತ್ತು, ಕರ್ಮಾದಿಗಳ ಜ್ಞಾನ ಬ್ರಹ್ಮಜ್ಞಾನಪರ್ಯಂತ ಇದ್ದು ಬ್ರಹ್ಮಜ್ಞಾನ ಬಂದಾಗ ನಿವೃತ್ತಿಯಾಗುತ್ತದೆ. ಮೊದಲನೆಯ ಜ್ಞಾನ ಅಪ್ರಮಾಣ. ಎರಡನೆಯದು ಅತತ್ವಾವೇದಕಪ್ರಮಾಣ. ಹೀಗೆ, ಅಪ್ರಮಾಣಕ್ಕೂ ಅತತ್ವಾವೇದಕ್ಕೂ ವ್ಯತ್ಯಾಸವಿದೆ. ಇದು ಮಾಯಾವಾದಿಗಳ ಸಮರ್ಥನೆ.

ಇದು ಸರಿಯಲ್ಲ. ಈ ಎರಡೂ ಜ್ಞಾನಗಳು ಭ್ರಾಂತಿ ಎನ್ನುವಲ್ಲಿ ವ್ಯತ್ಯಾಸವಿಲ್ಲ. ಒಂದು ತಾತ್ಕಾಲಿಕ, ಇನ್ನೊಂದು ದೀರ್ಘಕಾಲಿಕ. ಇಷ್ಟೇ ವ್ಯತ್ಯಾಸ. ತಾತ್ಕಾಲಿಕಭ್ರಾಂತಿಯಿಂದಾಗುವ ಭಯಾದಿಗಳು ಅಲ್ಪಕಾಲಿಕ. ದೀರ್ಘಭ್ರಾಂತಿಯಿಂದಾಗುವ ಅನರ್ಥಗಳೂ ದೀರ್ಘಕಾಲಿಕ. ವೇದವು ಇಂತಹ ದೀರ್ಘಕಾಲದ ಅನರ್ಥಕ್ಕೆ ಕಾರಣವಾದ ಭ್ರಾಂತಿಗೆ ಜನಕವಾದರೆ ಮಹಾಭ್ರಾಂತಿಕಾರಣವಾಯಿತು. ಇದು ರಜ್ಜುಸರ್ಪಭ್ರಾಂತಿಗಿಂತಲೂ ಕೆಳ ಮಟ್ಟದ ಸ್ಥಿತಿಯಾಯಿತು. ಇಂತಹ ಭ್ರಾಂತಿಜನಕವಾದ ವೇದ ಪ್ರಮಾಣ ವಾಗುವುದು ಹೇಗೆ? ಒಂದುವೇಳೆ ಇಂತಹ ದೀರ್ಘಭ್ರಮೆಗೆ ಕಾರಣವಾದರೂ ಅದನ್ನು ಪ್ರಮಾಣವೆಂದು ಪರಿಗಣಿಸುವುದಾದಲ್ಲಿ ''ಆಕಾಶವು ನೀಲವಾಗಿದೆ, ಛತ್ರಾಕಾರವಾಗಿದೆ, ಚಂದ್ರನು ಗೇಣುದ್ದನಾಗಿದ್ದಾನೆ'' ಇಂತಹ ಭ್ರಮೆಗಳೂ ದೀರ್ಘಕಾಲದವರೆಗೆ ಇರುವುದರಿಂದ ಇಂತಹ ಭ್ರಮಜನಕಗಳೂ ಪ್ರಮಾಣ ಗಳಾಗಬೇಕಾದೀತು.

ಬ್ರಹ್ಮಜ್ಞಾನಮಾತ್ರದಿಂದ ನಿವೃತ್ತಿಯಾಗುವ ಭ್ರಮೆಗೆ ಜನಕವಾದುದು ಮಾತ್ರ ಪ್ರಮಾಣ. ಈ ಹಿಂದಿನ ಭ್ರಮೆಗಳು ಇತರ ಜ್ಞಾನದಿಂದ

ನಿವೃತ್ತಿಯಾಗುತ್ತವೆ. ಆದ್ದರಿಂದ ತಜ್ಜನಕಗಳು ಪ್ರಮಾಣಗಳಲ್ಲ, ಎನ್ನುವುದೂ ಸರಿಯಲ್ಲ. 'ನಗ–ನಾಗ' ಎಂಬ ಪದಗಳಲ್ಲಿರುವ ಸ್ವರಾಕ್ಷರವಾದ ಅಕಾರದಲ್ಲಿ ಧ್ವನಿಗತವಾದ ಹ್ರಸ್ವತ್ವ–ದೀರ್ಘತ್ವಗಳು ಆರೋಪಿತವಾಗಿವೆ, ಎಂದು ಅದ್ವೈತದರ್ಶನ ಹೇಳುತ್ತದೆ. ಈ ಆರೋಪಿತಧರ್ಮಗಳಿಂದ ಬಂದ ಜ್ಞಾನವೂ ಪ್ರಮಾ ಎಂದೂ ಆ ದರ್ಶನದ ವಾದ, ಭಾಮತೀವಾಕ್ಯ ಹೀಗಿದೆ—

''ನ ಖಲು ನಾಗ ಇತಿ, ನಗ ಇತಿ ವಾ ಪದಾತ್ ಕುಂಜರಂ ಗಿರಿಂ ವಾ ಪ್ರತಿಪದ್ಯಮಾನಾಃ ಭವಂತಿ ಭ್ರಾಂತಾಃ ॥''

'ನಗ' ಎಂಬಲ್ಲಿ ನಕಾರೋತ್ತರ ಅಕಾರದಲ್ಲಿ ಆರೋಪಿತವಾದ ಹ್ರಸ್ವತ್ವ ಇದೆ. ಆದರಿಂದ 'ಪರ್ವತ' ಎಂಬ ಅರ್ಥದ ಜ್ಞಾನವು ಬರುತ್ತದೆ. ಅದರಂತೆ, ನಾಗ ಎಂಬಲ್ಲಿರುವ ಅಕಾರದಲ್ಲಿ ದೀರ್ಘತ್ವವು ಆರೋಪಿತ. ಆದರಿಂದ 'ಆನೆ' ಎಂಬ ಜ್ಞಾನವು ಬರುತ್ತದೆ. ಆ ಎರಡೂ ಜ್ಞಾನಗಳೂ ಬ್ರಹ್ಮಜ್ಞಾನಮಾತ್ರದಿಂದ ಬಾಧ್ಯ. ಅಂತಹ ಜ್ಞಾನಕ್ಕೆ ಜನಕವಾದ ಹ್ರಸ್ವತ್ವವು ಅತತ್ತ್ವಾವೇದಕಪ್ರಮಾಣ. (ವರ್ಣೇ ಹ್ರಸ್ವತ್ವ–ದೀರ್ಘತ್ವಾದಯಃ ಅನ್ಯ ಧರ್ಮಾ ಅಪಿ ಆರೋಪಿತಾಃ ತತ್ವಪ್ರತಿಪತ್ತಿಹೇತವಃ–ಭಾಮತೀ.) ಆದರೆ, ಆ ಧರ್ಮಗಳು ಬ್ರಹ್ಮಜ್ಞಾನ ನಿವರ್ತ್ಯಗಳಲ್ಲ. ಆದ್ದರಿಂದ ಬ್ರಹ್ಮಜ್ಞಾನಿವರ್ತ್ಯತ್ವವು ಅತತ್ತ್ವಾವೇದಕದ ಲಕ್ಷಣವಲ್ಲ. ದೀರ್ಘಭ್ರಾಂತಿ ಹೇತುತ್ವವನ್ನೇ ಅತತ್ತ್ವಾವೇದಕಪ್ರಮಾಣದ ಲಕ್ಷಣವನ್ನಾಗಿ ಹೇಳಬೇಕು. ಆಗ 'ಆಕಾಶಃ ನೀಲಃ' ಇತ್ಯಾದಿ ಭ್ರಮೆಗೆ ಕಾರಣವಾದುದನ್ನು ಅತತ್ತ್ವಾವೇದಕ ಎನ್ನಬೇಕಾಗುತ್ತದೆ.

**ನಿರ್ಭೇದತ್ವಂ ತು ಶೂನ್ಯಸ್ಯ ತೇನಾಪ್ಯಂಗೀಕೃತಂ ಸದಾ ।**
**ಸತ್ತ್ವಾಸತ್ತ್ವಾದಿಧರ್ಮಾಣಾಮಭಾವ ಉಭಯೋರ್ಮತಃ ॥ ೫೦ ॥**

ಶೂನ್ಯಸ್ಯ ನಿರ್ಭೇದತ್ವಂ=ಶೂನ್ಯದಲ್ಲಿ ಯಾವ ಭೇದವೂ ಇಲ್ಲವೆಂದು ತೇನಾಪಿ=ಶೂನ್ಯವಾದಿಯಿಂದಲೂ ಸದಾ ಅಂಗೀಕೃತಂ=ಯಾವಾಗಲೂ ಅಂಗೀಕರಿಸಲ್ಪಟ್ಟಿದೆ. ನಾವು ಮಾಡುವ ಆಪಾದನೆಯಲ್ಲಿ, ಸ್ವತಃ ಅವನೇ ಭೇದಶೂನ್ಯತ್ವವನ್ನು ಒಪ್ಪಿರುತ್ತಾನೆ, ಎನ್ನುವುದನ್ನು ಸದಾ ಎಂಬ ಪದದಿಂದ ಸೂಚಿಸಲಾಗಿದೆ.

ಉಭಯೋಃ=ಶೂನ್ಯ–ಮಾಯಾವಾದಿಗಳಿಗಿಬ್ಬರಿಗೂ ಸತ್ವಾಸತ್ವಾದಿ ಧರ್ಮಾಣಾಮ್ ಅಭಾವಃ=ಸತ್ವ ಮತ್ತು ಅಸತ್ವ ಎಂಬ ಎರಡೂ ಧರ್ಮಗಳು ಬ್ರಹ್ಮಶೂನ್ಯಗಳಲ್ಲಿ ಇಲ್ಲವೆಂಬುದು ಮತಃ=ಸಮ್ಮತವಾಗಿದೆ.

ಭಾವಾರ್ಥ— ಮಾಯಾವಾದಿಗಳು ಹೀಗೆ ಆಕ್ಷೇಪಿಸಬಹುದು— ''ನಾವು ಸಮಗ್ರವೇದವನ್ನು ಅತತ್ವಾವೇದಕ ಎಂದೇನೂ ಹೇಳುವುದಿಲ್ಲ. ವಿಧಿ –ನಿಷೇಧಬೋಧಕವಾದ ವೇದಭಾಗಗಳು ಮಾತ್ರ ಅತತ್ವಾವೇದಕಗಳು. 'ತತ್ತ್ವಮಸಿ' ಎಂಬ ವಾಕ್ಯವು ಅಖಂಡ ಬ್ರಹ್ಮಪ್ರತಿಪಾದಕವಾಗಿದ್ದು ಪ್ರಮಾಣ ವಾಗಿದೆ. ಇದರಂತೆ, ಈ ಮಹಾವಾಕ್ಯಗತವಾದ ತತ್‌ಪದಾರ್ಥಪ್ರತಿಪಾದಕ ವಾದ 'ಯತ್ತದದ್ರೇಷ್ಯಂ' 'ಸತ್ಯಂ ಜ್ಞಾನಮ್' ಇತ್ಯಾದಿವಾಕ್ಯಗಳೂ ಪ್ರಮಾಣಗಳು. ಹೀಗೆ ವೇದದ ಕೆಲವು ವಾಕ್ಯಗಳು ಪ್ರಮಾಣಗಳೆಂದು ನಾವು ಹೇಳುತ್ತೇವೆ, ಬೌದ್ಧರು ಹೇಳುವುದಿಲ್ಲ. ಇದು ಬೌದ್ಧರಿಗೂ ನಮಗೂ ಇರುವ ವ್ಯತ್ಯಾಸ'' ಎಂದು.

ಇದು ಸರಿಯಲ್ಲ. ಬೌದ್ಧರೂ ಶೂನ್ಯವು ಅದ್ವಿತೀಯ, ಅದರಲ್ಲಿ ಯಾವ ಭೇದಗಳೂ ಇಲ್ಲ. ಸತ್ವವೂ ಇಲ್ಲ, ಅಸತ್ವವೂ ಇಲ್ಲ, ಎನ್ನುತ್ತಾರೆ. ಇಂತಹ ತತ್ತ್ವವು ವೇದಪ್ರತಿಪಾದ್ಯವಾದರೆ ಅಂತಹ ವಾಕ್ಯಗಳು ಪ್ರಮಾಣಗಳು, ಎನ್ನುವಲ್ಲಿ ಬೌದ್ಧರಿಗೂ ವಿವಾದವಿಲ್ಲ. ಅವರೂ ಅವುಗಳು ಪ್ರಮಾಣಗಳು, ಎಂದೇ ಹೇಳಬಹುದು.

**ನಹಿ ಸತ್ಪ್ರತಿಯೋಗಿತ್ವಂ ಶೂನ್ಯತ್ವಂ ತೇನ ಚೇಷ್ಯತೇ ।**
**ನಚ ದುಃಖವಿರೋಧಿತ್ವಾದನ್ಯಾ ಹ್ಯಾನಂದತೇಷ್ಯತೇ ॥ ೫೧ ॥**

**ಮಾಯಿನಾ ಶೂನ್ಯಪಕ್ಷೇಽಪಿ ಜ್ಞಾನಂ ಜಾಡ್ಯವಿರೋಧಿ ಚ ।**
**ಧರ್ಮಾಃ ಕೇ(ತೇ)ಽಪಿ ನ ಸಂತ್ಯೇವ ಕೋ ವಿಶೇಷಸ್ತತಸ್ತಯೋಃ ॥ ೫೨॥**

ತೇನ=ಶೂನ್ಯವಾದಿಯಿಂದ ಸತ್‌ಪ್ರತಿಯೋಗಿತ್ವಂ=ಸದ್ವಿರೋಧಿತ್ವಂ ಅಂದರೆ ಸರ್ವಥಾ ಅಸತ್ವವು ಶೂನ್ಯತ್ವಂ=ಶೂನ್ಯತ್ವರೂಪ ಎಂದು ನ ಇಷ್ಯತೇ=ಅಂಗೀಕರಿಸಲ್ಪಡುವುದಿಲ್ಲ, ಶೂನ್ಯ ಎಂದರೆ ಏನೂ ಇಲ್ಲ, ಎಂದು ಶೂನ್ಯವಾದಿಗಳು ಅಂಗೀಕರಿಸುವುದಿಲ್ಲ. ಮಾಯಿನಾ ಚ=ಮಾಯಾವಾದಿ

ಯಿಂದಲೂ ದುಃಖವಿರೋಧಿತ್ವಾತ್ ಅನ್ಯಾ=ದುಃಖವಿರೋಧಿತ್ವಕ್ಕಿಂತ ಬೇರೆ ಯಾದ ಆನಂದತಾ=ಆನಂದರೂಪತ್ವವು ನ ಇಷ್ಯತೇ=ಅಂಗೀಕರಿಸಲ್ಪಡುವು ದಿಲ್ಲ. ಶೂನ್ಯಪಕ್ಷೇಽಪಿ=ಶೂನ್ಯವಾದಿಮತದಲ್ಲೂ (ತತ್ ಸಮಾನಂ=ಇದು ಸಮಾನವಾದುದು.) ಮಾಯಿಮತದಲ್ಲಿ ಜ್ಞಾನಂ=ಜ್ಞಾನವು ಬ್ರಹ್ಮ, ಎಂದರೆ ಜಾಡ್ಯವಿರೋಧಿ ಚ=ಬ್ರಹ್ಮನು ಜಡವಿರೋಧಿ, ಎಂದರ್ಥ. ಶೂನ್ಯವೂ ಜಡವಲ್ಲ ಎಂದು ಶೂನ್ಯವಾದಿಗಳೂ ಅಂಗೀಕರಿಸುತ್ತಾರೆ.

**ಭಾವಾರ್ಥ**— ಶೂನ್ಯವು ಅಸತ್. ಬ್ರಹ್ಮ ಸದ್ರೂಪ. ಹೀಗೆ ಅವರೆಡಕ್ಕೆ ವ್ಯತ್ಯಾಸವಿದೆ, ಎಂದು ತಿಳಿಯಬಾರದು. ಶೂನ್ಯವು ಸರ್ವಥಾ ಶಶವಿಷಾಣ ದಂತೆ ಅಸತ್ಯ ಎಂದು ಬೌದ್ಧರೂ ಒಪ್ಪಿಲ್ಲ. ಅದು ಒಂದು ತತ್ತ್ವ. ನಿರ್ವಿಶೇಷತತ್ತ್ವವಾದುದರಿಂದ ಅದನ್ನು ಶೂನ್ಯ, ಎನ್ನಲಾಗುತ್ತದೆ. ಆ ಶೂನ್ಯವು ಮಾಯಾವಾದಿಗಳು ಹೇಳುವ ರೀತಿಯ ಆನಂದ–ಜ್ಞಾನರೂಪ ಎಂದು ಶೂನ್ಯವಾದಿಗಳೂ ಹೇಳುತ್ತಾರೆ. ಮಾಯಾವಾದಿಗಳ ಬ್ರಹ್ಮ ದುಃಖರೂಪನಲ್ಲದ ಕಾರಣ ಆನಂದರೂಪ, ಆನಂದತ್ವ ಇರುವುದರಿಂದ ಅಲ್ಲ; ಜಡವಲ್ಲದ ಕಾರಣ ಜ್ಞಾನಾತ್ಮಕ. ಜ್ಞಾನತ್ವಗುಣ ಇರುವುದರಿಂದ ಅಲ್ಲ; ಶೂನ್ಯವೂ ದುಃಖಾತ್ಮಕವಲ್ಲ, ಜಡವೂ ಅಲ್ಲ. ಆದ್ದರಿಂದ ಬ್ರಹ್ಮನಂತೆಯೇ ಆಯಿತು. ಹೀಗೆ, ಉಭಯಮತದಲ್ಲಿ ಪರತತ್ತ್ವದಲ್ಲಿ ಯಾವ ಧರ್ಮಗಳೂ ಇಲ್ಲ. ಆದ್ದರಿಂದ ಶೂನ್ಯ–ಬ್ರಹ್ಮರಿಗೆ ಏನುತಾನೇ ವಿಶೇಷವಿರಲು ಸಾಧ್ಯ?

**ಏತಾದೃಶಾನಾಂ ಪಕ್ಷಾಣಾಂ ದೂಷಣಂ ಪ್ರಭುಣಾ ಕೃತಮ್ ।**
**ಸ್ವಪಕ್ಷಸಾಧನೇನೈವ ನಾಭಾವ ಇತಿ ಚೋಕ್ತಿತಃ ॥ ೫೩ ॥**

ಅದ್ವೈತವು ಸೂತ್ರಕಾರರ ಸಿದ್ಧಾಂತವಾಗಿದೆ. ಅದನ್ನು ಆಚಾರ್ಯರು ನಿರಾಕರಿಸುವುದು ಹೇಗೆ? ಇಲ್ಲ, ಸೂತ್ರಕಾರರು ಅದ್ವೈತವಾದಿಗಳಲ್ಲ—

ಏತಾದೃಶಾನಾಂ ಪಕ್ಷಾಣಾಂ=ಶೂನ್ಯವಾದ ಸದೃಶವಾದ ಪಕ್ಷಗಳ ಅಂದರೆ ಅದ್ವೈತವಾದದ ದೂಷಣಂ=ನಿರಾಕರಣೆಯು ಸ್ವಪಕ್ಷಸಾಧನೇನೈವ= 'ಪೃಥುಗುಪದೇಶಾತ್' (2.3.28) ಎಂಬ ಸೂತ್ರದಲ್ಲಿ ಜೀವ–ಬ್ರಹ್ಮಭೇದ ವನ್ನು ಸ್ವಪಕ್ಷವನ್ನಾಗಿ ಸಾಧನೆ ಮಾಡಿರುವುದರಿಂದಲೇ ಪ್ರಭುಣಾ=ಸ್ವಾಮಿ ಯಾದ ವೇದವ್ಯಾಸರಿಂದ ಕೃತಂ=ಮಾಡಲ್ಪಟ್ಟಿದೆ.

ವ್ಯಾಸರು ಅದ್ವೈತವಾದವನ್ನು ನೇರವಾಗಿ ನಿರಾಕರಿಸದೇ ಇದ್ದರೂ ಅದ್ವೈತಕ್ಕೆ ವಿರುದ್ಧವಾದ ಜೀವೇಶಭೇದವನ್ನು ಸಾಧಿಸುವ ಮೂಲಕ ಅದ್ವೈತವನ್ನು ನಿರಾಕರಿಸಿದ್ದಾರೆ. ಅಥವಾ ಕಂಠತಃ ಅದ್ವೈತವನ್ನು ನಿರಾಕರಿಸಿದ್ದಾರೆ—

ನಾಭಾವ ಇತಿ ಚೋಕ್ತಿತಃ='ನಾಭಾವ ಉಪಲಬ್ಧೇಃ' (2.2.28) ಎಂಬ ಸೂತ್ರದಲ್ಲಿ 'ಈ ಪ್ರಪಂಚವು ನ ಅಭಾವಃ=ಅಧ್ಯಸ್ತವಲ್ಲ, ಸತ್ಯ ಎಂದು ತಿಳಿಯಲ್ಪಡುವುದರಿಂದ' ಹೀಗೆ ಹೇಳಿರುವುದರಿಂದ ಅದ್ವೈತವನ್ನೇ ನಿರಾಕರಿಸಿದ್ದಾರೆ.

**ಆತ್ಮಾಭಾವೇ ಪುಮರ್ಥಃ ಕ ಇಷ್ಟಸ್ಯಾತ್ಮಾವಧಿರ್ಯತಃ ।**
**ಯದಿ ನಾತ್ಮಾವಧಿರ್ಮೋಕ್ಷೋ ಮೋಕ್ಷಃ ಸ್ಯಾದ್ ಘಟಶೂನ್ಯತಾ ॥೫೪॥**

ಯತಃ=ಯಾವಕಾರಣದಿಂದ ಆತ್ಮಾ=ಆತ್ಮನೇ ಇಷ್ಟಸ್ಯ ಅವಧಿಃ= ಇಷ್ಟವಾದ ವಸ್ತುಗಳಿಗೆಲ್ಲ ಅಂತಿಮ ಅವಧಿಯಾಗಿರುವನೋ ಅತಃ= ಆದ್ದರಿಂದ ಆತ್ಮಾಭಾವೇ=ಆತ್ಮನೇ ಇಲ್ಲದಿದ್ದಲ್ಲಿ ಮೋಕ್ಷಃ ಕಃ=ಮೋಕ್ಷವು ಯಾರಿಗೆ? ಯದಿ=ಒಂದುವೇಳೆ ಮೋಕ್ಷಃ=ಮೋಕ್ಷವು ನ ಆತ್ಮಾವಧಿಃ= ಆತ್ಮಪರ್ಯಂತವಾಗದಿದ್ದಲ್ಲಿ ಅಂದರೆ ಆತ್ಮನಿದ್ದು ಅವನಿಗೆ ದುಃಖನಾಶ ಎಂದು ಹೇಳದೆ ಆತ್ಮನೂ ನಾಶವಾಗುತ್ತಾನೆ ಎನ್ನುವುದೇ ಮೋಕ್ಷವಾದಲ್ಲಿ ಘಟಶೂನ್ಯತಾ ಮೋಕ್ಷಃ ಸ್ಯಾತ್=ಘಟನಾಶವೂ ದೇವದತ್ತನಿಗೆ ಮೋಕ್ಷ ವೆಂದಾದೀತು.

**ಭಾವಾರ್ಥ—** ಬೌದ್ಧರು ಆತ್ಮಸಹಿತವಾದ ಎಲ್ಲ ಪ್ರಪಂಚದ ನಾಶವೇ ಮೋಕ್ಷ ಎನ್ನುತ್ತಾರೆ. ಇದು ಸರಿಯಲ್ಲ. ಎಲ್ಲರಿಗೂ ಪರಮಾವಧಿಕ ಪ್ರಿಯವಾದುದು ತಾವೇ. ತಮಗಾಗಿ ಉಳಿದುದು ಪ್ರಿಯವಾಗುತ್ತದೆ. ಆದ್ದರಿಂದ ಆತ್ಮನ ದುಃಖಕ್ಕೆ ಕಾರಣವಾದ ದೇಹಇಂದ್ರಿಯಾದಿಗಳ ನಾಶವು ಇಷ್ಟವಾದುದರಿಂದ ಮೋಕ್ಷವೆನಿಸಬಹುದು. ಅದು ಬಿಟ್ಟು ಅತಿಪ್ರಿಯವಾದ ತನ್ನ ನಾಶವೇ ಮೋಕ್ಷವಾಗುವುದು ಹೇಗೆ? ಇಂತಹ ಮೋಕ್ಷವನ್ನು ಅವನು ಬಯಸುವುದೇ ಇಲ್ಲ, ಅದು ಪುರುಷಾರ್ಥವಾಗುವುದು ಹೇಗೆ?

ತಡೆಯಲಾಗದ ವೇದನೆಯಿಂದ ಆತ್ಮಹತ್ಯೆಯನ್ನು ಮಾಡಿಕೊಳ್ಳುವುದು ಕಂಡಿದೆ. ಇದರಿಂದ ಆತ್ಮನಾಶವೂ ಇಷ್ಟವಾಗಬಹುದು, ಎನ್ನುವ ವಾದ

ಸರಿಯಲ್ಲ. ಅಂತಹವರಿಗೂ ವೇದನೆಗೆ ಆಗರವಾದ ಈ ದೇಹ ನಾಶವಾಗಲೀ, ಎನ್ನುವುದೇ ಅಭಿಲಷಿತವಾಗುತ್ತದೆ ಹೊರತು, ಆತ್ಮನಾಶವಲ್ಲ. ಎಲ್ಲರೂ 'ನನಗೆ ದುಃಖ ಹೋಗಲಿ' ಎಂದೇ ಬಯಸುತ್ತಾರೆ, 'ನಾನೇ ಇಲ್ಲದಾಗಲಿ' ಎಂದಲ್ಲ.

**ಆಕ್ಷೇಪ—** ದುಃಖವು ಸರ್ವಾತ್ಮನಾ ನಾಶವಾಗಬೇಕೆಂಬುದು ಎಲ್ಲರ ಅಪೇಕ್ಷೆ. ಈ ಅಪೇಕ್ಷೆ ಈಡೇರಬೇಕಾದರೆ ದುಃಖಕ್ಕೆ ಕಾರಣವಾದದ್ದೆಲ್ಲ ನಾಶವಾಗಬೇಕು. ಕೆಟ್ಟ–ಒಳ್ಳೆ ಕೆಲಸಗಳನ್ನು ಮಾಡುವ ಮೂಲಕ ಪಾಪ–ಪುಣ್ಯಗಳಿಗೆ ಕಾರಣನಾದವನು ಆತ್ಮ. ಅವನ ನಾಶವಾದರೆ ದುಃಖವು ನಾಶವಾಗುತ್ತದೆ. ಆದ್ದರಿಂದ ಆತ್ಮನಾಶವೂ ಪುರುಷಾರ್ಥವಾಗುತ್ತದೆ.

**ಸಮಾಧಾನ—** ತನಗೆ ದುಃಖವು ಇಲ್ಲದಾಗಬೇಕು, ಎನ್ನುವುದು ಆತ್ಮನ ಅಪೇಕ್ಷೆ. ತಾನೇ ಇಲ್ಲದಾದರೆ ಆ ದುಃಖನಾಶವು ಆತ್ಮನದಾಗುವುದು ಹೇಗೆ? ದುಃಖ ನಾಶವಾದಾಗ ಆ ನಿರ್ದುಃಖಸ್ಥಿತಿಯನ್ನು ಅನುಭವಿಸಲು ಆತ್ಮನೇ ಇಲ್ಲದಿದ್ದಮೇಲೆ ಅಂತಹ ದುಃಖನಾಶ ಇದ್ದರೇನು ಇಲ್ಲದಿದ್ದರೇನು? ಅದು ಆತ್ಮನಿಗೆ. ಸಂಬಂಧಪಟ್ಟಿರುವುದಿಲ್ಲ. ಅಂತಹುದೂ ಮೋಕ್ಷವಾದಲ್ಲಿ ಘಟ ನಾಶವೂ ಮೋಕ್ಷ ಏಕಾಗಬಾರದು?

ಆದ್ದರಿಂದ, ಜ್ಞಾನದಿಂದ ಸಂಚಿತಕರ್ಮಗಳ ನಾಶ, ಭೋಗದಿಂದ ಪ್ರಾರಬ್ಧನಾಶವಾದರೆ ಕರ್ಮವೇ ಇಲ್ಲವಾಗುವುದರಿಂದ ದುಃಖಕ್ಕೆ ಕಾರಣ ವಾದ ದೇಹವು ಹುಟ್ಟುವುದಿಲ್ಲ. ಹೀಗೆ, ಆತ್ಮನಿದ್ದರೂ ದುಃಖಕಾರಣವಾದ ದೇಹಾದಿ ಗಳು ಇಲ್ಲದಿರುವುದರಿಂದಲೇ ದುಃಖಾಭಾವವು ಇರಬಹುದು. ದುಃಖ ಇಲ್ಲದಂತಾಗಲೂ ಆತ್ಮನೇ ನಾಶನಾಗಬೇಕಿಲ್ಲ.

**ಕಲ್ಪಿತತ್ವಾದ್ ವಿಶೇಷಾಣಾಂ ಮಾಯಿನೋಽಪಿ ಸಮಂ ಹಿ ತತ್ ॥೫೫॥**

**ದೃಶ್ಯಮಾನೇ ವಿಶೇಷೇಽಪಿ ಯದಿ ಚೇದವಿಶೇಷತಾ ।**
**ಘಟಾಭಾವೇ(ವೋ)ಽವಿಶೇಷಃ ಸ್ಯಾತ್ ಪಾಶ್ಚಾತ್ಯಶ್ಚೇದನಾಗತಃ ॥ ೫೬ ॥**

ವಿಶೇಷಾಣಾಂ ಕಲ್ಪಿತತ್ವಾತ್=ಘಟನಾಶ, ಆತ್ಮನಾಶ ಇವೆರಡೂ ಕಲ್ಪಿತವಿಶೇಷಗಳಾದುದರಿಂದ ಅವೆರಡಕ್ಕೂ ವ್ಯತ್ಯಾಸವಿಲ್ಲ. ಆದ್ದರಿಂದ, ಹಿಂದೆ

ಹೇಳಿದಂತೆ ಆತ್ಮನಾಶಮೋಕ್ಷ ಎಂದರೂ ಘಟನಾಶಮೋಕ್ಷ ಎಂದರೂ ವ್ಯತ್ಯಾಸ ವಿಲ್ಲ.

ತತ್=ಹಿಂದೆ ಶೂನ್ಯವಾದಿಗಳಿಗೆ ಹೇಳಿದ ದೋಷಗಳೆಲ್ಲವೂ ಮಾಯಿನೋಽಪಿ=ಮಾಯಾವಾದಿಗಳಿಗೂ ಸಮಂ=ಸಮಾನವಾದುದು.

**ಭಾವಾರ್ಥ**— ಹಿಂದೆ ಆತ್ಮನಾಶವು ಮೋಕ್ಷವಾದರೆ ಘಟನಾಶವೂ ಮೋಕ್ಷವಾಗಲೀ ಎಂದು ಆರೋಪಿಸಿದ್ದು ಸರಿಯಲ್ಲ. ಹೀಗೆ ಆರೋಪ ಮಾಡಬೇಕಾದರೆ ಅವೆರಡು ನಾಶಗಳಿಗೆ ವ್ಯತ್ಯಾಸವು ಸಮ್ಮತವಾಗಿರಬೇಕು. ಅಂದಮೇಲೆ ಅವೆರಡೂ ಒಂದೇ ಆಗುವುದು ಹೇಗೆ?

ಈ ಆಕ್ಷೇಪಕ್ಕೆ ಸಮಾಧಾನವನ್ನು ಹೇಳಲು ಮೇಲಿನ ಅನುವ್ಯಾಖ್ಯಾನದ ಪೂರ್ವಾರ್ಧ ಇದೆ. ಹೌದು, ಆಕ್ಷೇಪ ಮಾಡುವವರು ಅವೆರಡೂ ಅಭಾವಗಳು ಸತ್ಯ, ಎಂದು ಅಂಗೀಕರಿಸಿದ್ದಾರೆ. ಅವೆರಡಕ್ಕೂ ವೈಲಕ್ಷಣ್ಯವೂ ಇದೆ. ಆದರೆ, ಬೌದ್ಧಮತದಲ್ಲಿ ಅವೆರಡೂ ಅಪ್ರಾಮಾಣಿಕಗಳು–ಮೊಲದ ಕೋಡು, ಕುದುರೆಯ ಕೋಡುಗಳಂತೆ. ಆ ಎರಡು ಕೋಡುಗಳಲ್ಲಿ ವಿಶೇಷಗಳು ಇಲ್ಲದಿರುವಂತೆ ಈ ಎರಡು ಅಭಾವಗಳಲ್ಲೂ ವಿಶೇಷಗಳಿಲ್ಲ. ಆದ್ದರಿಂದ ಆಪಾದನೆಯು ಸರಿಯಾಗಿದೆ.

ಹೀಗೆ ಬೌದ್ಧರ ಮೋಕ್ಷಕಲ್ಪನೆಗೆ ಹೇಳಿದ ದೋಷಗಳೆಲ್ಲವೂ ಮಾಯಾ ವಾದಿಗಳಿಗೂ ಸಮಾನ. ಇದು ಅನುವ್ಯಾಖ್ಯಾನದ ಉತ್ತರಾರ್ಧದ ಭಾವ. ಆದರೆ, ಇದು ಯುಕ್ತವಲ್ಲ. ಮಾಯಾವಾದಿಗಳು ಬ್ರಹ್ಮಭಾವವೇ ಮೋಕ್ಷ ಎನ್ನುತ್ತಾರೆ. ಆತ್ಮನಾಶವನ್ನಲ್ಲ. ಆತ್ಮನು ನಿತ್ಯ. ಅವನಿಗೆ ನಾಶವಿಲ್ಲ. ಆದ್ದರಿಂದ ಬೌದ್ಧರಿಗೆ ಹೇಳಿರುವ ದೋಷ ಮಾಯಾವಾದಿಗಳಿಗೆ ಬರುವುದಿಲ್ಲ.

ಮಾಯಾವಾದಿಗಳು ಜೀವಭಾವ ಹೋಗಿ, ಬ್ರಹ್ಮಭಾವ ಬರುತ್ತದೆ, ಎನ್ನುತ್ತಾರೆ. ಇಲ್ಲಿ ಜೀವಭಾವ ಎಂದರೇನು? ಕರ್ತೃತ್ವ ಭೋಕ್ತೃತ್ವಶಕ್ತಿ ವಿಶಿಷ್ಟನಾಗಿ 'ಅಹಂ' ಎಂಬ ಅನುಭವಕ್ಕೆ ಬರುವವನು ಜೀವ. 'ಅಹಂ ಕರ್ತಾ' ಎಂಬ ಅನುಭವಕ್ಕೆ ವಿಷಯನಾದವನು ಜೀವ. ಇಂತಹ ಜೀವಸ್ವರೂಪವು ಎಲ್ಲರಿಗೂ ಪರಮಪ್ರೇಮಾಸ್ಪದವಾದುದು. ಇದಕ್ಕಿಂತ ಬೇರೆಯಾದ ನಿರಾಕಾರ

ನಾದ ಜೀವನ ಅನುಭವವೇ ಇಲ್ಲ, ಅದು ಇಷ್ಟವಾಗುವುದಂತೂ ದೂರದಲ್ಲೇ ಉಳಿಯಿತು. ಹೀಗೆ, ಎಲ್ಲರಿಗೂ ಪ್ರೇಮಾಸ್ಪದನಾದ ಜೀವನು ಅದ್ವೈತ ದರ್ಶನದಂತೆ ನಾಶವಾಗುತ್ತಾನೆ. ಅಂದಮೇಲೆ ಮಾಯಾವಾದದಲ್ಲೂ ಇಷ್ಟನಾಶವೇ ಪುರುಷಾರ್ಥವೆಂದಂತಾಗುತ್ತದೆ. ಆಗ ಬೌದ್ಧರಿಗಿಂತ ವ್ಯತ್ಯಾಸ ಆ ವಾದಕ್ಕೆ ಬರುವುದಿಲ್ಲ.

ವಿಶೇಷೇ ದೃಶ್ಯಮಾನೇಽಪಿ=ಶೂನ್ಯಭಾವ ಎಂದರೆ 'ಆತ್ಮಾಭಾವ' ಈ ಅಭಾವದಲ್ಲಿ ಆತ್ಮ ರೂಪ ಪ್ರತಿಯೋಗಿವಿಶೇಷದಿಂದ ವಿಶೇಷವು ಕಾಣುತ್ತಿದ್ದರೂ ಯದಿಚೇತ್=ಒಂದುವೇಳೆ ಅವಿಶೇಷತಾ=ಆತ್ಮಾಭಾವದಲ್ಲಿ ವಿಶೇಷವಿಲ್ಲ ವೆನ್ನುವುದಾದರೆ ಘಟಾಭಾವೇ=ಘಟಾಭಾವದಲ್ಲೂ ಅವಿಶೇಷಃ=ವಿಶೇಷ ವೇನಿಲ್ಲ. ಆತ್ಮಾಭಾವವು ಪಾಶ್ಚಾತ್ಯಶ್ಚೇತ್=ನಿರೂಪಣೆ ಮಾಡಿದ ಮೇಲೆ (ಪಾಶ್ಚಾತ್ಯತ್ವಂ ಚಾತ್ರ ವ್ಯವಹಾರಾಪೇಕ್ಷಯಾ–ಸುಧಾ) ಸವಿಶೇಷವಾದರೂ ಸ್ವರೂಪೇಣ ಅದು ನಿರ್ವಿಶೇಷವೆಂದರೆ ಘಟಾಭಾವವೂ ಅನಾಗತಃ= ನಿರೂಪಣದಶಾವನ್ನು ಇನ್ನೂ ಹೊಂದದೇ ಇರುವಾಗ ನಿರ್ವಿಶೇಷವೇ ಆಗಿದೆ.

**ಭಾವಾರ್ಥ**— ಯಾವ ವಿಶೇಷವೂ ಇಲ್ಲದ ಶೂನ್ಯತಾಪತ್ತಿಯೇ ಮೋಕ್ಷ. ಇದು ಘಟಾಭಾವಸಮಾನವಲ್ಲ. ಘಟಾಭಾವಕ್ಕೆ ಘಟ ಎಂಬ ಪ್ರತಿಯೋಗಿಯ ಸಂಬಂಧ ಇದೆ. ಶೂನ್ಯಭಾವಕ್ಕೆ ಅದೂ ಇಲ್ಲ. ಹೀಗೆ ಘಟಾಭಾವಕ್ಕೂ ಶೂನ್ಯಭಾವರೂಪಮೋಕ್ಷಕ್ಕೂ ಭೇದವಿದೆ, ಎಂದು ಪೂರ್ವಪಕ್ಷ. ಇದು ಸರಿಯಲ್ಲ. ಶೂನ್ಯಭಾವ ಎಂದರೆ ಆತ್ಮಾಭಾವ. ಅದಕ್ಕೂ ಆತ್ಮನು ಪ್ರತಿಯೋಗಿ. ಇಂತಹ ಪ್ರತಿಯೋಗಿವಿಶೇಷವು ಇದ್ದರೂ ಅದು ನಿರ್ವಿಶೇಷವಾಗುವುದಾದಲ್ಲಿ ಘಟಾಭಾವವೂ ನಿರ್ವಿಶೇಷವೇ ಏಕೆ ಆಗಬಾರದು?

ಇದಕ್ಕೆ ಬೌದ್ಧರ ಪ್ರತ್ಯುತ್ತರ ಹೀಗಿದೆ— ವಸ್ತು ಬೇರೆ, ಅದನ್ನು ಹೇಳುವ ಶಬ್ದ ಬೇರೆ. ನಿರ್ವಿಶೇಷವಾದ ವಸ್ತುವನ್ನು ಶಬ್ದದಿಂದ ಹೇಳಲು ಸಾಧ್ಯವಿಲ್ಲ ವಾದುದರಿಂದ 'ಆತ್ಮಾಭಾವ' ಎಂದು ಕೆಲವು ಧರ್ಮಗಳನ್ನು ಕಲ್ಪಿಸಿಕೊಂಡು ಅದನ್ನು ಹೇಳಬೇಕಾಗುತ್ತದೆ. ಹೀಗೆ ನಿರೂಪಣೆ ಮಾಡಿದ ಮಾತ್ರಕ್ಕೆ ಆ ವಸ್ತು ಸವಿಶೇಷವೆನಿಸುವುದಿಲ್ಲ. ಆದ್ದರಿಂದ ಮೋಕ್ಷವನ್ನು 'ಆತ್ಮಾಭಾವ' ಎಂದು ನಿರೂಪಿಸಿದ ಮಾತ್ರಕ್ಕೆ ಅದು ಸವಿಶೇಷವಾಗುವುದಿಲ್ಲ, ಎಂದು. ಈ

ಸಮಾಧಾನ ಘಟಾಭಾವಕ್ಕೂ ಸಮಾನ. ಆದ್ದರಿಂದ ಆತ್ಮಾಭಾವಕ್ಕೂ ಘಟಾಭಾವಕ್ಕೂ ಯಾವ ವ್ಯತ್ಯಾಸವೂ ಇಲ್ಲ.

**ನ ಮೋಕ್ಷೋ ವಿಮತೋ ಯಸ್ಮಾದದೇಹೋ ಘಟಶೂನ್ಯತಾ ।**
**ಯಥೇತ್ಯುಕ್ತೇ ವದೇತ್ ಕಿಂ ಸ ಯೋಽನುಮಾಮಾತ್ರಮಾನಕಃ ॥೫೭॥**

''ವಿಮತಃ ನ ಮೋಕ್ಷಃ, ಯಸ್ಮಾತ್ ಅದೇಹಃ, ಯಥಾ ಘಟಶೂನ್ಯತಾ'' ಇತ್ಯುಕ್ತೇ=ಹೀಗೆ ಮೋಕ್ಷತ್ವಾಭಾವವನ್ನು ಅನುಮಾನ ಮಾಡಿದರೆ ಅನುಮಾನ ಮಾತ್ರಮಾನಕಃ=ಅನುಮಾನ ಒಂದೇ ಪ್ರಮಾಣ ಎನ್ನುವ ಸಃ=ಬೌದ್ಧ ಮತ್ತು ಮಾಯಾವಾದಿಯು ಕಿಂ ವದೇತ್=ಏನು ಹೇಳಿಯಾನು?

ಭಾವಾರ್ಥ— ಶೂನ್ಯಭಾವ ಅಥವಾ ಬ್ರಹ್ಮಭಾವವು ದೇಹವಿಲ್ಲದ ಸ್ಥಿತಿಯಾಗಿರುವ ಕಾರಣದಿಂದ ಮೋಕ್ಷವೇ ಅಲ್ಲ, ಘಟಾಭಾವದಂತೆ. ಈ ಅನುಮಾನದಿಂದ ಬೌದ್ಧ-ಮಾಯಾವಾದಿಗಳು ಹೇಳುವ ಮೋಕ್ಷವು ಮೋಕ್ಷವೇ ಅಲ್ಲ, ಎಂದು ಸಾಧಿಸಿದರೆ ಬೌದ್ಧ-ಮಾಯಾವಾದಿಗಳು ಸುಮ್ಮನಾಗಬೇಕಾಗುತ್ತದೆ. ಏಕೆಂದರೆ, ಅವರು ಅನುಮಾನ ಒಂದೇ ಪ್ರಮಾಣ ಎನ್ನುತ್ತಾರೆ. ಅವರ ಅನುಮಾನಕ್ಕೆ ಇಂತಹ ವಿರುದ್ಧಾನುಮಾನಗಳು ಇವೆ. ಅದರಿಂದಾಗಿ ಅವರ ಅನುಮಾನವು ಅರ್ಥಸಾಧಕವಾಗಲಾರದು.

ಮೋಕ್ಷವೆಂದರೆ ಸುಖವಿರಬೇಕು. ಶೂನ್ಯಭಾವ ಬಂದರೆ ದೇಹವೇ ಇರುವುದಿಲ್ಲ, ಆತ್ಮನೂ ಇಲ್ಲ, ಸುಖ ಬರುವುದು ಹೇಗೆ? ಘಟನಾಶದಂತೆ ಆತ್ಮನೂ ನಾಶವಾದರೆ ಯಾರಿಗೆ ಸುಖ? ಆದ್ದರಿಂದ ಜೀವನಾಶವನ್ನು ಹೇಳುವ ಎರಡು ಮತಗಳಲ್ಲಿ ಮೋಕ್ಷವೇ ಇಲ್ಲ.

**ನಚ ಮಾಯೀ ವದೇ(ತ್ ತ)ದತ್ರ ಪೂರ್ವೋಕ್ತೇನೈವ ವರ್ತ್ಮನಾ ।**
**ಅಮಾನತ್ವಾಚ್ಛ್ರುತೇಸ್ತಸ್ಯ ನಚಾದೇಹತ್ವವಾದಿನೀ ॥ ೫೮ ॥**
**ಶ್ರುತಿಃ ಕಾಚಿದದೇಹತ್ವಮಪ್ರಾಕೃತಶರೀರತಾ ।**
**ಮೋಕ್ಷೇ ಭೋಗಂ ಯತೋ ಬ್ರೂತೇ ಜಕ್ಷನ್ ಕ್ರೀಡನ್ನಿತಿ ಶ್ರುತಿಃ ॥೫೯॥**

ಅತ್ರ=ಹಿಂದೆ ಹೇಳಿರುವ ಮೋಕ್ಷಾಭಾವಸಾಧಕವಾದ ಅನುಮಾನದ

ಬಗ್ಗೆ ಮಾಯೀ=ಮಾಯಾವಾದಿಯು ಸ್ವಾಭಿಮತವಾದ ಮೋಕ್ಷದ ಬಗ್ಗೆ ಶ್ರುತಿವಿರೋಧವನ್ನು ನ ವದೇತ್=ಹೇಳಲಾರ. ಪೂರ್ವೋಕ್ತೇನೈವ ವರ್ತ್ಮನಾ=ಹಿಂದೆ 'ಪ್ರಾಮಾಣ್ಯಾದಿ ಚ ವೇದಸ್ಯ' ಎಂಬ ಅನುವ್ಯಾಖ್ಯಾನದಲ್ಲಿ ಹೇಳಿರುವ ಮಾರ್ಗದಿಂದ ತಸ್ಯ=ಮಾಯಾವಾದಿಗೆ ಶ್ರುತೇಃ ಅಮಾನತ್ವಾತ್= ವೇದವು ಪ್ರಮಾಣವಲ್ಲವಾದ ಕಾರಣದಿಂದ.

**ಭಾವಾರ್ಥ**— ಮೋಕ್ಷಾಭಾವವನ್ನು ಸಾಧಿಸುವ ಅನುಮಾನಕ್ಕೆ ಮಾಯಾವಾದಿಗಳು ಶ್ರುತಿವಿರೋಧವನ್ನು ಹೇಳಬೇಕು. ಆದರೆ ಅವರೇ ಹೇಳುವಂತೆ ಶ್ರುತಿಯು ಅತತ್ತ್ವಾವೇದಕ. ಬ್ರಹ್ಮನು ತತ್ತ್ವವಾದರೂ ನಿರ್ವಿಶೇಷನಾದ ಕಾರಣ ಅವನನ್ನು ವೇದವು ಪ್ರತಿಪಾದಿಸಲಾರದು. ಅಲ್ಲಿಗೆ ಸಮಗ್ರವೇದವೂ ಅಪ್ರಮಾಣವಾಗುತ್ತದೆ. ಅಥವಾ ಶ್ರುತಿಯು ಪ್ರಮಾಣ ವಾದರೂ—

ಆದೇಹತ್ವವಾದಿನೀ=ದೇಹವಿಲ್ಲ ಎನ್ನುವ ಕಾಚಿತ್ ಶ್ರುತಿಃ ನ=ಯಾವುದೇ ವೇದವಾಕ್ಯವು ಇಲ್ಲ. 'ಅಶರೀರಂ ವಾವ ಸಂತಂ ನ ಪ್ರಿಯಾಪ್ರಿಯೇ ಸ್ಪೃಶತಃ –ಶರೀರವಿಲ್ಲದ ಮುಕ್ತಾತ್ಮನಿಗೆ ಸುಖ–ದುಃಖಗಳು ಆಗುವುದಿಲ್ಲ' ಎಂಬ ಶ್ರುತಿಯು ಮುಕ್ತನಿಗೆ ಶರೀರವಿಲ್ಲ, ಎನ್ನುವಂತೆ ಕಂಡರೂ—

ಅದೇಹತ್ವಂ=ಶ್ರುತಿಹೇಳಿರುವ ದೇಹಾಭಾವವೆಂದರೆ ಅಪ್ರಾಕೃತ ಶರೀರತಾ=ಪ್ರಾಕೃತದೇಹಾಭಾವ ಮಾತ್ರ. ಮುಕ್ತನಿಗೂ ಅಪ್ರಾಕೃತವಾದ ದೇಹವು ಶ್ರುತಿಸಮ್ಮತವೇ ಆಗಿದೆ. ಯತಃ=ಏಕೆಂದರೆ, 'ಜಕ್ಷನ್ ಕ್ರೀಡನ್' ಇತಿಶ್ರುತಿಃ='ಜಕ್ಷನ್, ಕ್ರೀಡನ್, ರಮಮಾಣಃ— ಮುಕ್ತನು ತಿನ್ನುತ್ತಾ, ಆಡುತ್ತಾ, ರಮಿಸುತ್ತಾ ಇರುತ್ತಾನೆ' ಎಂಬ ಶ್ರುತಿಯು ಮೋಕ್ಷೇ=ಮೋಕ್ಷದಲ್ಲಿ ಭೋಗಂ ಬ್ರೂತೇ=ವಿಷಯಾನುಭವವನ್ನು ಹೇಳುತ್ತದೆ. ತಿನ್ನುವುದು, ಆಡುವುದು ದೇಹವಿಲ್ಲದೆ ಸಾಧ್ಯವಿಲ್ಲ. ಆದ್ದರಿಂದ ಮುಕ್ತರಿಗೂ ದೇಹವಿದೆ, ಎಂದೇ ಶ್ರುತಿಯ ಅಭಿಪ್ರಾಯ. ಅದಕ್ಕೆ ಅನುಗುಣವಾಗಿ 'ಅಶರೀರಂ' ಎಂಬ ಶ್ರುತಿಗೆ ಪ್ರಾಕೃತಶರೀರರಹಿತ, ಎಂದಿಷ್ಟೇ ಅರ್ಥ.

**ನಿರ್ದುಃಖತ್ವಾನ್ನ ತನ್ಮೋಕ್ಷಃ ಪ್ರತಿಪನ್ನಂ ಯಥೇತಿ ಚ ।**
**ಅನುಮಾದೂಷಣಂ ಕಿಂ ಸ್ಯಾದ್ ವಾದಿನೋಃ ಶೂನ್ಯಮಾಯಿನೋಃ॥೬೦**

ತತ್=ಶೂನ್ಯಭಾವವಾಗಲೀ, ಬ್ರಹ್ಮಾಭಾವವಾಗಲೀ, ನ ಮೋಕ್ಷಃ= ಮೋಕ್ಷವಲ್ಲ, ನಿರ್ದುಃಖತ್ವಾತ್=ದುಃಖಾಭಾವರೂಪವಾದ್ದರಿಂದ ಯಥಾ ಪ್ರತಿಪನ್ನಂ=ಸಂಪ್ರತಿಪನ್ನವಾದ ಘಟಾಭಾವದಂತೆ. ಶೂನ್ಯಮಾಯಿನೋಃ ವಾದಿನೋಃ=ಶೂನ್ಯವಾದಿ–ಮಾಯಾವಾದಿಗಳ ಮತದಂತೆ ಇತ್ಯನುಮಾ-ದೂಷಣಂ ಕಿಂ ಸ್ಯಾತ್=ಈ ಅನುಮಾನಕ್ಕೆ ದೋಷವೇನು?

ಭಾವಾರ್ಥ—ಮಾಯಾವಾದಿಗಳು ಹೇಳುವ ಮೋಕ್ಷ ಬ್ರಹ್ಮಭಾವ. ಆದರಿಂದ ಸುಖವಿಲ್ಲ. ಏಕೆಂದರೆ, ಬ್ರಹ್ಮನಲ್ಲಿ ಆನಂದವಿಲ್ಲ. ಶೂನ್ಯವಾದಿಗಳ ಮೋಕ್ಷ ಶೂನ್ಯಭಾವ. ಶೂನ್ಯವೂ ಸುಖರೂಪವಲ್ಲ. ಅವೆರಡೂ ದುಃಖಾಭಾವ ರೂಪ. ಘಟನಾಶವೂ ದುಃಖಾಭಾವ. ಅದು ಪುರುಷಾರ್ಥವಲ್ಲ. ಆದರಂತೆ ಅವರಿಬ್ಬರು ಹೇಳುವ ಮೋಕ್ಷವೂ ಪುರುಷಾರ್ಥವಲ್ಲ.

**ದುಃಖಂ ದುಃಖಾದಭಿನ್ನತ್ವಾನ್ಮೋಕ್ಷೋಽಪಿ ಸ್ಯಾದಸಂಶಯಮ್।**
**ಭೇದೇ ಸದ್ದ್ವೈತತೈವ ಸ್ಯಾದಿತ್ಯಾದ್ಯಮಿತದೋಷತಃ ।**
**ಹೇಯಂ ಮಾಯಾಮತೇನೈವ ಸಹ ಶೂನ್ಯಮತಂ ಬುಧೈಃ ॥ ೬೧ ॥**

ಮೋಕ್ಷಃ=ಇಬ್ಬರು ಅಂಗೀಕರಿಸಿರುವ ಮೋಕ್ಷವೂ ದುಃಖಾತ್ ಅಭಿನ್ನತ್ವಾತ್=ದುಃಖದ ಅಭೇದವು ಇರುವುದರಿಂದಾಗಿ ಅಸಂಶಯಂ= ಸಂದೇಹವೇ ಇಲ್ಲದೆ ದುಃಖಂ ಸ್ಯಾತ್=ದುಃಖರೂಪವಾದುದು ಆದೀತು. ಭೇದೇ=ಬ್ರಹ್ಮ ಅಥವಾ ಶೂನ್ಯಗಳಲ್ಲಿ ದುಃಖಾತ್ ಭೇದೇ=ದುಃಖಕ್ಕಿಂತ ಭೇದ ವಿದ್ದಲ್ಲಿ ಸದ್ ದ್ವೈತತೈವ ಸ್ಯಾತ್=ದ್ವಿತೀಯ ಸತ್‌ಪದಾರ್ಥವು ಬಂದೀತು. ಆದರಿಂದ ಅದ್ವೈತಹಾನಿ, ಅಪಸಿದ್ಧಾಂತ.

ಇತ್ಯಾದಿ ಅಮಿತದೋಷತಃ=ಇಂತಹ ಅನಂತದೋಷಗಳಿರುವ ಕಾರಣ ಮಾಯಾಮತೇನ ಸಹ=ಮಾಯಾವಾದಿಯ ಮತದೊಂದಿಗೆ ಶೂನ್ಯಮತಂ= ಶೂನ್ಯವಾದಿಬೌದ್ಧಮತವು ಬುಧೈಃ=ಜ್ಞಾನಿಗಳಿಂದ ಹೇಯಮೇವ= ಪರಿತ್ಯಾಜ್ಯವೇ ಆಗಿದೆ.

ಭಾವಾರ್ಥ— ಶೂನ್ಯ ಮತ್ತು ಬ್ರಹ್ಮರು ದುಃಖಕ್ಕಿಂತ ಭಿನ್ನರಾದರೆ ದುಃಖವೆಂಬ ದ್ವಿತೀಯಪದಾರ್ಥವನ್ನು ಅಂಗೀಕರಿಸಿದಂತಾಗಿ ಅದ್ವೈತಹಾನಿ.

ಆದ್ದರಿಂದ ದುಃಖ ಮತ್ತು ಅವೆರಡಕ್ಕೆ ಅಭೇದವನ್ನೇ ಹೇಳಬೇಕು. ಆಗ ಶೂನ್ಯ–ಬ್ರಹ್ಮಗಳೆರಡೂ ದುಃಖಾತ್ಮಕಗಳಾಯಿತು. ತದಾತ್ಮಕವಾದ ಮೋಕ್ಷವೂ ದುಃಖರೂಪವಾಗುವುದರಿಂದ ಪುರುಷಾರ್ಥವಲ್ಲ.

ಹೀಗೆ ಈ ಎರಡೂ ಮತಗಳಿಗೆ ಅನಂತದೋಷಗಳಿವೆ. ಆದ್ದರಿಂದ ಅಗ್ರಾಹ್ಯವಾಗಿದೆ.

**ವಿಜ್ಞಾನವಾದ ವಿಮರ್ಶೆ**

**ಏವಂ ವಿಜ್ಞಾನವಾದೋಽಪಿ ಜ್ಞಾನಮಾತ್ರವಿಶೇಷತಃ ।**
**ತಸ್ಯಾಪಿ ಭಂಗುರತ್ವಾದಿವಿಶೇಷಮಪಹಾಯ ಹಿ ।**
**ಅದ್ವೈತತಾಮತಂ ಸಾಕ್ಷಾದುಕ್ತದೋಷಸ್ತತೋ ಭವೇತ್ ॥ ೬೨ ॥**

ಏವಂ ವಿಜ್ಞಾನವಾದೋಽಪಿ=ಇದರಂತೆಯೇ ವಿಜ್ಞಾನವಾದದ ಮೋಕ್ಷವೂ ಹೇಯವಾಗಿದೆ. ಹಿ=ಏಕೆಂದರೆ, ಜ್ಞಾನಮಾತ್ರವಿಶೇಷತಃ= ವಿಜ್ಞಾನವು ತತ್ತ್ವ ಎನ್ನುವ ವಿಶೇಷವನ್ನೂ (ದ್ವಿತೀಯಾರ್ಥೇ ತಸಿಃ) ತಸ್ಯಾಪಿ= ಆ ಜ್ಞಾನಕ್ಕೂ ಭಂಗುರತ್ವಾದಿವಿಶೇಷಂ=ಕ್ಷಣಿಕತ್ವವಿಶೇಷವನ್ನೂ ಅಪಹಾಯ= ಬಿಟ್ಟು ಸಾಕ್ಷಾತ್ ಅದ್ವೈತತಾಮತಂ=ಸಾಕ್ಷಾತ್ ಸತ್ಯವು ಅದ್ವಿತೀಯ ಎನ್ನುವ ಮತವೇ ಅದೂ ಆಗಿದೆ. ತತಃ=ಆದ್ದರಿಂದ ಉಕ್ತದೋಷಃ ಭವೇತ್=ಆ ಎರಡು ಮತಗಳಿಗೆ ಹೇಳಿದ ದೋಷವೇ ಈ ಮತಕ್ಕೂ ಇದೆ.

ಭಾವಾರ್ಥ— ವಿಜ್ಞಾನವಾದಿ ಬೌದ್ಧರಿಗೂ ಶೂನ್ಯವಾದಿಗಳಿಗೂ ಇರುವ ವ್ಯತ್ಯಾಸ–ವಿಜ್ಞಾನವಾದಿಗಳು ಪರತತ್ತ್ವವು ಜ್ಞಾನರೂಪ ಎನ್ನುತ್ತಾರೆ. ಶೂನ್ಯ ವಾದಿಗಳು ಶೂನ್ಯ ಎನ್ನುತ್ತಾರೆ. ಮಾಯಾವಾದಿಗಳು ಬ್ರಹ್ಮನು ಜ್ಞಾನರೂಪ, ಆ ಜ್ಞಾನವು ನಿತ್ಯ ಎನ್ನುತ್ತಾರೆ. ವಿಜ್ಞಾನವಾದಿಗಳು ಜ್ಞಾನವು ಕ್ಷಣಿಕ ಎನ್ನುತ್ತಾರೆ. ಆದರೂ, ಮೋಕ್ಷದ ವಿಷಯದಲ್ಲಿ ಇವರಲ್ಲಿ ವ್ಯತ್ಯಾಸವಿಲ್ಲ. ಜೀವಭಾವವನ್ನು ಬಿಟ್ಟು ಅದ್ವಿತೀಯವಿಜ್ಞಾನಭಾವವನ್ನು ಹೊಂದುವುದೇ ಮೋಕ್ಷ ಎಂದೇ ಇವರ ಸಿದ್ಧಾಂತ. ಆ ವಿಜ್ಞಾನತತ್ತ್ವವೂ ಶೂನ್ಯ–ಬ್ರಹ್ಮರಂತೆಯೇ ಸರ್ವವಿಶೇಷ ರಹಿತವಾದುದು. ಅಂತಹ ವಿಜ್ಞಾನಭಾವ ಪುರುಷಾರ್ಥವೇ ಅಲ್ಲ.

**ಕಾಲೋ ನ ಕೇವಲಜ್ಞಾನೀ ಕಾಲತ್ವಾತ್ ಪ್ರತಿಪನ್ನವತ್ ।**
**ಏತಯಾಽನುಮಯಾ ರೋಧಾನ್ನ ತಾದೃಙ್ಮೋಕ್ಷರೂಪತಾ ॥ ೬೩ ॥**

ಅದ್ವಿತೀಯ ವಿಜ್ಞಾನಭಾವವು ಈ ಅನುಮಾನಕ್ಕೆ ವಿರುದ್ಧವಾಗಿದೆ– ಕಾಲಃ ನ ಕೇವಲಜ್ಞಾನೀ=ಕಾಲವು ಅದ್ವಿತೀಯಜ್ಞಾನವುಳ್ಳದ್ದು ಆಗಲಾರದು. ಯಾವ ಕಾಲದಲ್ಲೂ ಜ್ಞಾನ ಒಂದೇ ಇರಲಾರದು. ಕಾಲತ್ವಾತ್=ಕಾಲವಾದ್ದರಿಂದ ಪ್ರತಿಪನ್ನವತ್=ಸಂಪ್ರತಿಪನ್ನವಾದ ವರ್ತಮಾನ ಕಾಲದಂತೆ. ವರ್ತಮಾನ ಕಾಲದಲ್ಲಿ ಜ್ಞಾನಮಾತ್ರ ಇಲ್ಲ, ಬೇರೆಯೂ ಇದೆ. ಅದರಂತೆ ಯಾವುದೇ ಕಾಲದಲ್ಲಿ ಅದ್ವಿತೀಯವಾದ ಜ್ಞಾನವು ಇರಲು ಸಾಧ್ಯವಿಲ್ಲ.

**ಯದಿ ಕಾಲೋಽಪಿ ನೇತ್ಯಾಹ ಕದೇತಿ ಪ್ರಶ್ನ ಉತ್ತರಮ್ ।**
**ಕಿಂ ವಕ್ಷ್ಯತಿ ಯದಾಽವಸ್ಥಾಂ ವದೇತ್ ಸಾ ಪಕ್ಷತಾಂ ವ್ರಜೇತ್ ॥೬೪॥**

ಜ್ಞಾನ ಬಿಟ್ಟು ಬೇರೇನೂ ಇಲ್ಲ, ಎನ್ನುವ ವಿಜ್ಞಾನವಾದಿಯು ಮೋಕ್ಷದಶಾದಲ್ಲಿ ಕಾಲವೂ ಇರುವುದಿಲ್ಲ, ಎನ್ನುತ್ತಾನೆ. ಹೀಗಿರುವಾಗ 'ಕಾಲಃ' ಎಂದು ಪಕ್ಷಮಾಡುವುದು ಹೇಗೆ? ಯದಿ ಕಾಲೋಽಪಿ ನೇತ್ಯಾಹ= ಒಂದುವೇಳೆ ವಾದಿಯು ಕಾಲವೂ ಇಲ್ಲ, ಎಂದರೆ 'ಕದಾ=ಯಾವಾಗ? (ಯಾವಾಗ ಕಾಲವೂ ಇಲ್ಲ?) ಇತಿ ಪ್ರಶ್ನೇ=ಹೀಗೆ ಪ್ರಶ್ನೆ ಮಾಡಿದರೆ ಉತ್ತರಂ ಕಿಂ ವಕ್ಷ್ಯತಿ=ಏನೆಂದು ಉತ್ತರ ಹೇಳುತ್ತಾನೆ?

ಯದಾ=ಯಾವಾಗ ಅವಸ್ಥಾಂ ವದೇತ್=ಹಿಂದಿನ ಪ್ರಶ್ನೆಗೆ ಮೋಕ್ಷಾವಸ್ಥೆಯಲ್ಲಿ ಎಂದು ಉತ್ತರವನ್ನು ಹೇಳಿದರೆ ಸಾ=ಆ ಅವಸ್ಥೆಯೇ ಪಕ್ಷತಾಂ ವ್ರಜೇತ್=ಪಕ್ಷವಾಗಿ ಆಗುತ್ತದೆ.

ಮೋಕ್ಷಾವಸ್ಥೆಯನ್ನು ಪಕ್ಷ ಮಾಡಿದರೆ 'ಕಾಲತ್ವಾತ್' ಎಂಬ ಹೇತುವು ಅಸಿದ್ಧವಾಗುತ್ತದೆ, ಎಂದರೆ—

**ಅವಸ್ಥಾತ್ವಾದಿತಿ ಹ್ಯೇವ ಹೇತುಃ ಸಾಽಪಿ ಕದೇತಿ ಚ ।**
**ಪೃಷ್ಟೇ, ಕಾಲಶ್ಚ ವಕ್ತವ್ಯೋ ನಾಕಾಲತ್ವಂ ತತೋ ಭವೇತ್ ॥ ೬೫ ॥**

ಕಾಲತ್ವಾತ್, ಎಂಬ ಹೇತುವನ್ನು ಬಿಟ್ಟು ಅವಸ್ಥಾತ್ವಾತ್ ಎಂದೇ ಹೇತು ವನ್ನು ಮಾಡಬೇಕು. ಆಗ ಅನುಮಾನ—'ಅವಸ್ಥಾವಿಶೇಷಃ (ಮೋಕ್ಷಾ ವಸ್ಥೆಯು) ನ ಕೇವಲ ಜ್ಞಾನೀ, ಅವಸ್ಥಾವಿಶೇಷತ್ವಾತ್' ಎಂದಾಗುತ್ತದೆ.

ಅಲ್ಲದೆ, ಸಾ ಪಿ=ಆ ಮೋಕ್ಷಾವಸ್ಥೆಯಾದರೂ ಕದಾ=ಯಾವಾಗ? ಇತಿ ಪೃಷ್ಟೇ=ಹೀಗೆ ಕೇಳಿದಾಗ ಕಾಲಶ್ಚ ವಕ್ತವ್ಯಃ=ಕಾಲವು ಹೇಳಲ್ಪಡಲೇಬೇಕು. ತತಃ=ಆದ್ದರಿಂದ ಅಕಾಲತ್ವಂ ನ ಭವೇತ್=ಕಾಲಾಭಾವವು ಇರಲು ಸಾಧ್ಯವಿಲ್ಲ.

**ನ ಕಾಲ ಇತಿ ಸಾಮಾನ್ಯನಿಷೇಧೇ ಕಾಲಗಪ್ರಮಾ ।**
**ನಿರುಣದ್ಧಿ ಸಮಶ್ಚಾಯಂ ತ್ರಯಾಣಾಮುಕ್ತವಾದಿನಾಮ್ ॥ ೬೬ ॥**

ಕಾಲವನ್ನು ಯಾವಾಗ ನಿಷೇಧಮಾಡುವುದು? ಎನ್ನುವ ಪ್ರಶ್ನೆಯೇ ಸರಿಯಲ್ಲ. ಒಂದು ವಸ್ತು ಎಲ್ಲಿ ಇರುವುದು ಸಂಭಾವಿತವೋ ಅಲ್ಲಿ ಅದರ ನಿಷೇಧವನ್ನು ಮಾಡಬೇಕು. ಉದಾಹರಣೆಗೆ— 'ಈ ಮರದಲ್ಲಿ ಎಲೆಗಳು ಇಲ್ಲ' ಎಂದು ನಿಷೇಧ ಮಾಡಬಹುದು. ಕಾಲದಲ್ಲಿ ಕಾಲವು ಇರುವುದಾದಲ್ಲಿ 'ಕಾಲವು ಯಾವಾಗ ಇಲ್ಲ' ಎನ್ನುವ ಪ್ರಶ್ನೆ ಸಂಗತವಾದೀತು. ಆದರೆ, ಕಾಲವು ಕಾಲದಲ್ಲಿ ಇಲ್ಲ. ಹೀಗಿರುವಾಗ ಕಾಲವು ಯಾವಾಗ (ಯಾವಕಾಲದಲ್ಲಿ) ಇಲ್ಲ? ಎನ್ನುವ ಪ್ರಶ್ನೆ ವ್ಯಾಹತ, ಎಂದು ಪೂರ್ವಪಕ್ಷ.

ಇದಕ್ಕೆ ಸಮಾಧಾನ— ಹಾಗಾದರೆ 'ಕಾಲಃ ನಾಸ್ತಿ=ಕಾಲವೇ ಇಲ್ಲ'ಎಂದು ಕಾಲವನ್ನು ನಿಷೇಧಮಾಡಬೇಕು. ಇದು ಸಾಕ್ಷಿಪ್ರತ್ಯಕ್ಷಕ್ಕೆ ವಿರುದ್ಧ. ಸಾಕ್ಷಿಯು ಕಾಲ ಇದೆ, ಎಂದು ಗ್ರಹಿಸುತ್ತದೆ. ಅದಕ್ಕೆ ವಿರುದ್ಧವಾಗುತ್ತದೆ 'ಕಾಲವೇ ಇಲ್ಲ' ಎನ್ನುವ ನಿಷೇಧ. ಆದ್ದರಿಂದ ಆ ನಿಷೇಧವು ಅಪ್ರಾಮಾಣಿಕವಾಗುತ್ತದೆ. ಇದು ವಿಜ್ಞಾನವಾದಿಗಳಿಗೆ ಮಾತ್ರ ಬರುವ ದೋಷವಲ್ಲ. ಮಾಯಾವಾದಿ—ಶೂನ್ಯವಾದಿಗಳಿಗೂ ಇದು ಸಮಾನವಾದ ದೋಷ.

ನ ಕಾಲ ಇತಿ ಸಾಮಾನ್ಯನಿಷೇಧೇ='ಕಾಲವೇ ಇಲ್ಲ' ಎಂದು ಕಾಲಸಾಮಾನ್ಯವನ್ನು ನಿಷೇಧಮಾಡಿದಲ್ಲಿ ಕಾಲಗಾ ಪ್ರಮಾ=(ಕಾಲಂ ಗಚ್ಛತಿ=

ವಿಷಯೀಕರೋತಿ ಇತಿ—ಕಾಲಗಾ) ಕಾಲವನ್ನು ವಿಷಯೀಕರಿಸುವ ಸಾಕ್ಷಿಪ್ರತ್ಯಕ್ಷವು ನಿರುಣದ್ಧಿ=ವಿರೋಧಿಸುತ್ತದೆ.

**ಏಕಜೀವತ್ವಪಕ್ಷೇ ತು ಕಾಲಾಭಾವಾದಿಯಂ ಪ್ರಮಾ ।**
**ಕುಪಿತಾ ಕಾಲಮಾದಾಯ ದ್ವೈತಮೇವೋಪಪಾದಯೇತ್ ॥ ೬೭ ॥**

ಬಹುಜೀವವಾದಪಕ್ಷದಲ್ಲಿ ಒಬ್ಬನಿಗೆ ಮೋಕ್ಷವಾದಾಗ ಮತ್ತೊಬ್ಬನು ಅಮುಕ್ತನಾಗಿರುವುದರಿಂದ ಕಾಲಾಭಾವವು ಅಸಾಧ್ಯವಾದರೂ ಏಕಜೀವತ್ವ ಪಕ್ಷೇ ತು=ಒಬ್ಬನೇ ಜೀವ, ಅವನು ಮುಕ್ತನಾದರೆ ಯಾವುದೂ ಉಳಿಯುವು ದಿಲ್ಲ ಎನ್ನುವ ಪಕ್ಷದಲ್ಲಿ ಕಾಲವೂ ಇರುವುದಿಲ್ಲ. ಅದಕ್ಕೆ ಸಾಕ್ಷಿಪ್ರತ್ಯಕ್ಷದ ವಿರೋಧ ಬರುತ್ತದೆ— ಕಾಲಾಭಾವಾತ್ ಇಯಂ ಪ್ರಮಾ ಕುಪಿತಾ=ಕಾಲವೂ ಇಲ್ಲದಾಗುವುದರಿಂದ ಕಾಲವಿಷಯಕವಾದ ಸಾಕ್ಷಿಪ್ರತ್ಯಕ್ಷವು ಕೋಪ ಗೊಳ್ಳುತ್ತದೆ=ವಿರುದ್ಧವಾಗುತ್ತದೆ. ಆದ್ದರಿಂದ ಇಯಂ ಪ್ರಮಾ= ಕಾಲವಿಷಯಕವಾದ ಸಾಕ್ಷಿಯು ಕಾಲಂ ಆದಾಯ=ಕಾಲವನ್ನು ಇದೆ, ಎಂದು ಸಮರ್ಥಿಸಿ ಆ ಮೂಲಕ ದ್ವೈತಮೇವ ಉಪಪಾದಯೇತ್= ಶೂನ್ಯಾದ್ವೈತ—ಬ್ರಹ್ಮಾದ್ವೈತಕ್ಕೆ ವಿರುದ್ಧವಾಗಿ ದ್ವೈತವನ್ನೇ ಸಮರ್ಥಿಸು ತ್ತದೆ. ಈ ದೃಷ್ಟಿಯಿಂದ 'ಸಮಶ್ಚಾಯಂ ಪ್ರಸಂಗಃ' ಎಂಬ ಅನುವ್ಯಾಖ್ಯಾನ ದಲ್ಲಿ ವಿಜ್ಞಾನವಾದಿಗಳಿಗೆ ಹೇಳಿರುವ ದೋಷವನ್ನು ಮಾಯಾವಾದಿ— ಶೂನ್ಯವಾದಿಗಳಿಗೂ ಅತಿದೇಶ ಮಾಡಲಾಗಿದೆ.

**ವಿಮತಃ ಪ್ರಪಂಚವಾನ್ ಕಾಲಃ ಕಾಲತ್ವಾತ್ ಪ್ರತಿಪನ್ನವತ್ ।**
**ಇತಿ ಚಾನ್ಯಾಽನುಮೈಕತ್ವಂ ಜೀವಸ್ಯ ವಿನಿವಾರಯೇತ್ ॥ ೬೮ ॥**

''ವಿಮತಃ ಕಾಲಃ=ವಿವಾದಾಸ್ಪದವಾದ ಮೋಕ್ಷಕಾಲವು ಪ್ರಪಂಚವಾನ್=ಪ್ರಪಂಚಸಹಿತವಾಗಿದೆ. ಕಾಲತ್ವಾತ್=ಕಾಲವಾದ್ದರಿಂದ, ಪ್ರತಿಪನ್ನವತ್=ಉಭಯಸಮ್ಮತವಾದ ವರ್ತಮಾನಕಾಲದಂತೆ'' ಇತಿ ಚಾನುಮಾ=ಈ ಅನುಮಾನವು ಮೋಕ್ಷದಲ್ಲಿ ಜೀವಸ್ಯ ಏಕತ್ವಂ ವಿನಿವಾರಯೇತ್=ಜೀವನಿಗೆ ಅದ್ವಿತೀಯತ್ವವನ್ನು ಬಾಧಿಸುತ್ತದೆ.

ಭಾವಾರ್ಥ— ಈ ಅನುಮಾನದ ವಿರೋಧ ವಿಜ್ಞಾನವಾದ, ಶೂನ್ಯವಾದ, ಮಾಯಾವಾದ ಈ ಮೂರಕ್ಕೂ ಇದೆ. ವರ್ತಮಾನಕಾಲದಲ್ಲಿ ಜೀವನ ಹೊರತಾದ ಕಾಲಾದಿದ್ವಿತೀಯವಸ್ತುಗಳು ಇರುವಂತೆ ಮೋಕ್ಷ ಕಾಲದಲ್ಲೂ ಎಲ್ಲವೂ ಇವೆ, ಎಂದು ಇದರ ಅರ್ಥ. ಇದರಿಂದ ಅದ್ವಿತೀಯ ಭಾವವು ಮೋಕ್ಷ ಎನ್ನುವ ಮೂರೂ ವಾದಗಳು ಅನುಮಾನ ವಿರುದ್ಧ ವಾಗುತ್ತವೆ.

**ಕಾಲಶಬ್ದೇಶ್ವರೈಕತ್ವಮತಾನ್ಯಪ್ಯೇವಮೇವ ಹಿ ।**
**ನಿರಾಕೃತಾನಿ ತೇಷಾಂ ಚ ಸಮತ್ವಾತ್ ಪಕ್ಷದೋಷಯೋಃ ॥ ೬೯ ॥**

ಹಿಂದೆ ಹೇಳಿದ ದೋಷಗಳಿಂದಲೇ ಕಾಲ–ಶಬ್ದ–ಈಶ್ವರೈಕತ್ವಮತಾನ್ಯಪಿ= ಕಾಲೈಕ್ಯಮತ, ಶಬ್ದೈಕ್ಯಮತ, ಶಿವೈಕ್ಯಮತಗಳೂ ಏವಮೇವ=ಹೀಗೆಯೇ ನಿರಾಕೃತಾನಿ=ನಿರಾಕರಿಸಲ್ಪಟ್ಟಿವೆ. ತೇಷಾಂ ಚ=ಅವೆಲ್ಲವುಗಳಿಗೂ ಪಕ್ಷ–ದೋಷಯೋಃ=ಅಭಿಪ್ರಾಯವೂ, ದೋಷಗಳೂ ಸಮಾನವಾಗಿವೆ.

ಭಾವಾರ್ಥ— ಕಾಲವೊಂದೇ ತತ್ತ್ವ. ಉಳಿದೆಲ್ಲವೂ ಅದರಲ್ಲಿ ಆರೋಪಿತ ಎಂದು ಒಂದು ಮತ. ಯಾವುದು ಇನ್ನೊಂದು ವಸ್ತುವಿಗೆ ಸಂಬಂಧಪಟ್ಟೇ ತೋರುವುದೋ ಅದರಲ್ಲಿ ಅದು ಅಧ್ಯಸ್ತ–ಆರೋಪಿತ. ''ಇದಂ ರಜತಂ'' ಎಂಬ ಜ್ಞಾನದಲ್ಲಿ ಇದಂ ಎಂಬ ಶುಕ್ತಿ ಸಂಬದ್ಧವಾಗಿಯೇ ರಜತವು ಭಾಸಮಾನವಾಗುತ್ತದೆ. ಆದ್ದರಿಂದ ಶುಕ್ತಿಯಲ್ಲಿ ರಜತವು ಅಧ್ಯಸ್ತವಾಗಿದೆ. 'ಅಯಂ ಘಟಃ' ಎಂದು ಮುಂತಾಗಿ ಕಾಲಸಂಬದ್ಧ ವಾಗಿಯೇ ಎಲ್ಲ ವಸ್ತುಗಳೂ ಕಾಣುತ್ತವೆ. ಆದ್ದರಿಂದ, ಎಲ್ಲವೂ ಕಾಲದಲ್ಲಿ ಆರೋಪಿತವಾಗಿವೆ. ಕಾಲವೊಂದೇ ಸತ್ಯ.

ವೈಯಾಕರಣರು–ಎಲ್ಲವೂ ವಾಚಕವಾದ ಶಬ್ದದೊಂದಿಗೆ ಪ್ರತೀತವಾಗುವುದರಿಂದ ಎಲ್ಲವೂ ಶಬ್ದತತ್ವದಲ್ಲಿ ಅಂದರೆ ಸ್ಫೋಟತತ್ತ್ವದಲ್ಲಿ ಅಧ್ಯಸ್ತ ಎನ್ನುತ್ತಾರೆ. ಜ್ಞಾನ ಬರುವಾಗ 'ಅಯಂ ಘಟಃ' ಎಂದು ಮುಂತಾಗಿ ಆ ವಸ್ತುಗಳಿಗೆ ವಾಚಕಗಳಾದ ಶಬ್ದಸಹಿತವಾಗಿಯೇ ಜ್ಞಾನ ಬರುತ್ತದೆ. ಹೀಗೆ ಸಕಲಜ್ಞಾನಗಳಲ್ಲೂ ಶಬ್ದವು ಅನುಗತವಾದ ಕಾರಣ ಶಬ್ದದಲ್ಲಿ ಅರ್ಥವು ಅಧ್ಯಸ್ತ.

ಕೆಲವು ಶೈವರು ಶಿವಾದ್ವೈತವಾದಿಗಳು. ಅವರು ಶಿವನಲ್ಲಿ ಎಲ್ಲವೂ ಅಧ್ಯಸ್ತ ಎನ್ನುತ್ತಾರೆ.

ಇವರೆಲ್ಲರ ಸಿದ್ಧಾಂತವೂ ಸಮಾನ— ಒಂದು ಸತ್ಯ. ಅದರಲ್ಲಿ ಎಲ್ಲವೂ ಆರೋಪಿತ. ಆ ಸತ್ಯದ ಹೆಸರು ಒಂದೊಂದು ಮತದಲ್ಲಿ ಒಂದೊಂದು. ಆದ್ದರಿಂದ ಈ ಹಿಂದೆ ಹೇಳಿರುವ ಎಲ್ಲ ದೋಷಗಳೂ ಈ ಎಲ್ಲ ಮತಗಳಿಗೂ ಬರುತ್ತವೆ.

**ಜ್ಞಾನಂ ಸ್ವರಸಭಂಗ್ಯೇವ ನಿತ್ಯಸಂತಾನಮಿಷ್ಯತೇ ।**
**ಬೌದ್ಧಾಭ್ಯಾಮಪರಾಭ್ಯಾಂ ತು ತತ್ರಾಪ್ಯುಕ್ತಾಽನುಮಾ ರಿಪುಃ ॥ ೭೦ ॥**

ಬೌದ್ಧಾಭ್ಯಾಂ ಅಪರಾಭ್ಯಾಂ ತು=ಸೌತ್ರಾಂತಿಕ–ವೈಭಾಷಿಕರಿಂದ ಜ್ಞಾನಂ=ಜ್ಞಾನವು ಸ್ವರಸಭಂಗ್ಯೇವ=ಸ್ವಾಭಾವಿಕವಾಗಿಯೇ ವಿಷಯ ಸಂಬಂಧರಹಿತವಾಗಿ ನಿತ್ಯಸಂತಾನಂ ಇಷ್ಯತೇ=ಕ್ಷಣಿಕವಾದರೂ ಅದರ ಸಂತತಿಯೂ ಸರ್ವದಾ ಉಳಿಯುವುದೇ ಮೋಕ್ಷವೆಂದು ಹೇಳಲ್ಪಡುತ್ತದೆ. ತತ್ರಾಪಿ=ಈ ಮತಗಳಿಗೂ ಉಕ್ತಾನುಮಾ=ಹಿಂದೆ ಹೇಳಿರುವ ಕಾಲಪಕ್ಷಕಾನುಮಾನವು ರಿಪುಃ=ಶತ್ರು.

ಭಾವಾರ್ಥ— ಜ್ಞಾನವೇ ಆತ್ಮ. ಆ ಜ್ಞಾನವು ಕ್ಷಣಿಕವಾದರೂ ಅದರ ಪ್ರವಾಹ ಅನುಸ್ಯೂತವಾಗಿರುತ್ತದೆ. ಅಂತಹ ಜ್ಞಾನವು ಯಾವ ಸಂಬಂಧವೂ ಇಲ್ಲದೆ ಪರಿಶುದ್ಧವಾದುದು. ಅದಕ್ಕೆ ಘಟ–ಪಟಾದಿಪ್ರಪಂಚರೂಪವಾದ ವಿಷಯಸಂಬಂಧವೇ ಸಂಸಾರ. ವಿಷಯಸಂಬಂಧವಿನಾಶವೇ ಮೋಕ್ಷ. ವಿಷಯಸಂಬಂಧವು ವಾಸನಾ(ಸಂಸ್ಕಾರ) ಪ್ರಯುಕ್ತವಾಗಿ ಬರುತ್ತದೆ. 'ಸರ್ವಂ ಕ್ಷಣಿಕಂ, ದುಃಖಂ, ಶೂನ್ಯಂ, ಸರ್ವಂ ಸ್ವಲಕ್ಷಣಮ್' ಈ ನಾಲ್ಕು ತತ್ತ್ವಗಳನ್ನು ಸತತವಾಗಿ ಧ್ಯಾನಮಾಡುತ್ತಾ ಇದ್ದರೆ ಆ ಧ್ಯಾನದ ಪರಿಪಕ್ವಾವಸ್ಥೆಯಲ್ಲಿ ವಾಸನಾ ನಾಶವಾಗುತ್ತದೆ. ಇದರಿಂದ ಜ್ಞಾನಕ್ಕೆ ವಿಷಯಸಂಬಂಧವು ನಾಶವಾಗಿ ಶುದ್ಧವಿಜ್ಞಾನವೊಂದೇ ಉಳಿಯುತ್ತದೆ. ಇದೇ ಮೋಕ್ಷ. ಇದು ವೈಭಾಷಿಕರು ಹೇಳುವ ಮೋಕ್ಷ.

ಸೌತ್ರಾಂತಿಕರೂ ಜ್ಞಾನಾತ್ಮವಾದಿಗಳು. ಅವರು ಘಟ-ಪಟಾದಿ ಪ್ರಾಪಂಚಿಕವಸ್ತುಗಳೆಲ್ಲವೂ ಜ್ಞಾನದ ಆಕಾರವಿಶೇಷ ಎನ್ನುತ್ತಾರೆ. ಸಂಸಾರ ದಲ್ಲಿ ಜ್ಞಾನವು ಸಾಕಾರವಾಗಿರುತ್ತದೆ, ನಿರಾಕಾರವಾದ ಜ್ಞಾನಸಂತತಿಯೇ ಮೋಕ್ಷ, ಎಂದು ಅವರ ಮತ.

ಇವೆರಡೂ 'ಕಾಲವು ಸದ್ವಿತೀಯ' ಎಂದು ಸಾಧಿಸುವ ಹಿಂದಿನ ಅನುಮಾನಕ್ಕೆ ವಿರುದ್ಧವಾಗಿವೆ.

**ಮೋಕ್ಷೋ ನ ಶುದ್ಧವಿಜ್ಞಾನಸಂತಾನೀ ಕಾಲಗತ್ವತಃ ।**
**ಪ್ರತಿಪನ್ನೋ ಯಥೇತ್ಯೇತದನುಮಾನಂ ತದುತ್ತರಮ್ ॥ ೭೧ ॥**

ಅನುಮಾನಾಂತರವಿರೋಧವೂ ಇದೆ— ಮೋಕ್ಷಃ ಶುದ್ಧವಿಜ್ಞಾನ ಸಂತಾನೀ ನ=ವಿಷಯಸಂಬಂಧವಿಲ್ಲದ ಶೂನ್ಯವಾದ ಜ್ಞಾನಸಂತತಿಯೇ ಮೋಕ್ಷವಲ್ಲ. ಕಾಲಗತ್ವತಃ=ಕಾಲಸಂಬಂಧವಿರುವುದರಿಂದ, ಪ್ರತಿಪನ್ನೋ ಯಥಾ=ಸಂಸಾರದಂತೆ. ಸಂಸಾರಕಾಲದಲ್ಲಿ ಜ್ಞಾನಕ್ಕೆ ಕಾಲದ ಸಂಬಂಧ ವಿರುವುದರಿಂದ ಅದು ವಿಷಯದ ಸಂಬಂಧವನ್ನು ಪಡೆದಿರುವಂತೆಯೇ ಮೋಕ್ಷದಲ್ಲೂ ಅದಕ್ಕೆ ವಿಷಯದ ಸಂಬಂಧವಿದೆ. ಇತ್ಯೇತದನುಮಾನಂ=ಈ ಅನುಮಾನವು ತದುತ್ತರಂ=ಅವರ ಪಕ್ಷಕ್ಕೆ ದೋಷವಾಗಿದೆ.

**ಅನುಮಾನಾನಿ ಸರ್ವಾಣಿ ಪ್ರತಿಸಾಧನಯೋಗತಃ ।**
**ನಿಷಿದ್ಧಾನ್ಯುಕ್ತಭಂಗ್ಯೈವ ಶ್ರುತಯಶ್ಚಾಸ್ಮದುಕ್ತಿಗಾಃ ॥ ೭೨ ॥**

ಅನುಮಾನಾನಿ ಸರ್ವಾಣಿ=ಅವರು ತಮ್ಮ ಪಕ್ಷಕ್ಕೆ ಸಾಧಕವಾಗಿ ಹೇಳುವ ಸರ್ವಾಣಿ ಅನುಮಾನಾನಿ=ಎಲ್ಲಾ ಅನುಮಾನಗಳೂ ಉಕ್ತಭಂಗ್ಯೈವ=ಹಿಂದೆ ಹೇಳಿರುವ ಕ್ರಮದಿಂದಲೇ ಪ್ರತಿಸಾಧನಯೋಗತಃ=ಪ್ರತ್ಯನುಮಾನಗಳು ಇರುವ ಕಾರಣದಿಂದ ನಿಷಿದ್ಧಾನಿ=ನಿರಾಕರಿಸಲ್ಪಟ್ಟಿವೆ. ಶ್ರುತಯಶ್ಚ= ವೇದಗಳೂ ಅಸ್ಮದುಕ್ತಿಗಾಃ=ನಮಗೆ ಅಭಿಮತವಾದ ಮೋಕ್ಷವನ್ನೇ ಹೇಳುತ್ತವೆ. ಅವುಗಳಿಗೆ ವಿರುದ್ಧವೂ ಆಗಿವೆ, ಪರೋಕ್ತಾನುಮಾನಗಳು. (ಅಸ್ಮದುಕ್ತಿಂ ಗಚ್ಛಂತಿ=ಪ್ರತಿಪಾದಯಂತಿ ಇತಿ—ಅಸ್ಮದುಕ್ತಿಗಾಃ।)

## ಸಾಂಖ್ಯಮತವಿಮರ್ಶೆ

**ಸಾಂಖ್ಯನೈಯಾಯಿಕಾದ್ಯಾಶ್ಚ ಪ್ರಾಹುರ್ಮೋಕ್ಷಂ ತು ನಿಃಸುಖಮ್ ।**
**ಇಚ್ಛಾದ್ವೇಷಪ್ರಯತ್ನಾದೇರಪಿ ಸರ್ವಾತ್ಮನಾ ಲಯಮ್ ॥ ೭೩ ॥**

ಸಾಂಖ್ಯನೈಯಾಯಿಕಾದ್ಯಾಶ್ಚ=ಸಾಂಖ್ಯರು–ನೈಯಾಯಿಕರು–ವೈಶೇಷಿಕರು ಮೋಕ್ಷಂ=ಮೋಕ್ಷವನ್ನು ನಿಃಸುಖಂ ಪ್ರಾಹುಃ=ಸುಖರಹಿತವಾದ ಸ್ಥಿತಿ ಎಂದು ಹೇಳುತ್ತಾರೆ. ಏಕೆಂದರೆ, ಅವರು ತತ್ರ=ಮೋಕ್ಷದಲ್ಲಿ ಇಚ್ಛಾ–ದ್ವೇಷ ಪ್ರಯತ್ನಾದೇರಪಿ=ಇಚ್ಛಾ–ದ್ವೇಷ–ಪ್ರಯತ್ನ–ಶರೀರ, ಇಂದ್ರಿಯ ಇವೆಲ್ಲವುಗಳ ಸರ್ವಾತ್ಮನಾ ಲಯಂ=ನಿಃಶೇಷವಾಗಿ ನಾಶವನ್ನು ಆಹುಃ= ಹೇಳುತ್ತಾರೆ. ('ತತ್ರಾಹುಃ' ಎಂದು ಮುಂದಿನ ಶ್ಲೋಕದಲ್ಲಿದೆ.)

**ಭಾವಾರ್ಥ—** ಸಾಂಖ್ಯಾದಿಗಳು, ನಿರ್ದುಃಖಸ್ಥಿತಿಯೇ ಮೋಕ್ಷ, ಅಲ್ಲಿ ಸುಖಾನುಭವವೂ ಇಲ್ಲ, ಎನ್ನುತ್ತಾರೆ. ಏಕೆಂದರೆ, ಸುಖವು ಹುಟ್ಟಬೇಕಾದರೆ ವಿಷಯವಸ್ತುಗಳ ಅನುಭವ ಬರಬೇಕು. ಅನುಭವಕ್ಕೆ ಇಂದ್ರಿಯಗಳು ಬೇಕು. ಇಂದ್ರಿಯಗಳಿರಬೇಕಾದರೆ ಶರೀರ ಇರಬೇಕು. ಇವೆಲ್ಲ ಇದ್ದರೆ ಸುಖ ಬರುವಂತೆ ದುಃಖವೂ ಬರಬೇಕಾದೀತು. ಆದ್ದರಿಂದ ಜನ್ಯಸುಖ ಮೋಕ್ಷದಲ್ಲಿ ಇಲ್ಲ. ಇನ್ನು ನಿತ್ಯಸುಖವೆನ್ನಬೇಕು. ಸುಖವು ನಿತ್ಯವಾದರೆ ಸಂಸಾರದಲ್ಲೂ ಅದರ ಅನುಭವಬರಬೇಕು. ಸಂಸಾರದಲ್ಲಿ ಅವ್ಯಕ್ತವಾಗಿದ್ದು ಮೋಕ್ಷದಲ್ಲಿ ವ್ಯಕ್ತವಾಗುತ್ತದೆ ಎನ್ನುವುದೂ ಸರಿಯಲ್ಲ. ಸುಖ ವ್ಯಕ್ತವಾಗುವುದು ಎಂದರೆ ನಮ್ಮ ಅನುಭವಗೋಚರವಾಗುವುದು, ಎಂದಿಷ್ಟೇ ಅರ್ಥ. ಸಂಸಾರದಲ್ಲಿ ಅನುಭವಕ್ಕೆ ಕಾರಣವಾದ ಅಂತಃಕರಣಾದಿಸಾಧನಗಳು ಇರುವಾಗ ಸುಖದ ಅನುಭವ ಬರುವುದಿಲ್ಲ, ಅವುಗಳೆಲ್ಲ ನಾಶವಾದ ಮೇಲೆ ಸುಖವು ಅನುಭವಕ್ಕೆ ಬರುತ್ತವೆ ಎನ್ನುವುದು ಹಾಸ್ಯಾಸ್ಪದ. ಸಂಸಾರದಲ್ಲಿ ಆವರಣ ವಿರುವುದರಿಂದ ಅನುಭವಕ್ಕೆ ಗೋಚರವಾಗುವುದಿಲ್ಲ, ಮೋಕ್ಷದಲ್ಲಿ ಆವರಣ ನಾಶವಾಗಿ ಅನುಭವಗೋಚರವಾಗುತ್ತದೆ, ಎನ್ನುವುದೂ ಸರಿಯಲ್ಲ. ಅಮೂರ್ತ ವಸ್ತುವಾದ ಸುಖಕ್ಕೆ ಆವರಣವಿರಲು ಸಾಧ್ಯವಿಲ್ಲ. ಆದ್ದರಿಂದ ಮೋಕ್ಷದಲ್ಲಿ ಸುಖವಿಲ್ಲ. ಆದರೂ ದುಃಖವು ಇಲ್ಲದಿರುವುದರಿಂದ ಅದು ಪುರುಷಾರ್ಥವೆನಿಸುತ್ತದೆ. ಇದು ಸಾಂಖ್ಯ–ವೈಶೇಷಿಕಾದಿಗಳ ಮತ.

**ತತ್ರಾಽಹುರ್ನೈತದಪ್ಯತ್ರ ಶೋಭನಂ ಶ್ರುತಯೋ ಯತಃ ।**
**ಮಹಾನಂದಂ ಚ ಭೋಗಂ ಚ ನಿಯಮೇನ ವದಂತಿ ಹಿ ॥ ೭೪ ॥**

ಅತ್ರ=ಮೋಕ್ಷದಲ್ಲಿ ಏತತ್‌ಅಪಿ=ಸುಖ ಇಲ್ಲದಿರುವುದೂ ನ ಶೋಭನಂ=ಯುಕ್ತವಲ್ಲ, ಯತಃ=ಏಕೆಂದರೆ, ಶ್ರುತಯಃ=ವೇದವಾಕ್ಯಗಳು ಅತ್ರ=ಮೋಕ್ಷದಲ್ಲಿ ಮಹಾನಂದಂ ಚ=ಪೂರ್ಣಾನಂದವನ್ನೂ ಭೋಗಂ ಚ= ಅದರ ಅನುಭವವನ್ನೂ ನಿಯಮೇನ=ವಿಪ್ರಪತ್ತಿಯೇ ಇಲ್ಲದೆ ಒಕ್ಕೊರಲಿನಿಂದ ವದಂತಿ=ಹೇಳುತ್ತವೆ. ಅಂತಹ ಶ್ರುತಿವಾಕ್ಯಗಳನ್ನು ಮುಂದೆ ಹೇಳಲಾಗುವುದು.

**ಪ್ರಾಕೃತಪ್ರಿಯಹಾನಿಸ್ತು ಪ್ರಿಯಾಸ್ಪೃಷ್ಟಿರಿತೀರ್ಯತೇ ।**
**ಅಪ್ರಿಯಂ ಪ್ರತಿಕೂಲಂ ತದವಿಶೇಷೇಣ ಶಬ್ದಿತಮ್ ॥ ೭೫ ॥**

'ಅಶರೀರಂ ವಾವ ಸಂತಂ ನ ಪ್ರಿಯಾಪ್ರಿಯೇ ಸ್ಪೃಶತಃ' ಈ ಶ್ರುತಿಯು ''ಮೋಕ್ಷದಲ್ಲಿ ಶರೀರವೇ ಇಲ್ಲದುದರಿಂದ ಸುಖವೂ ಇಲ್ಲ, ದುಃಖವೂ ಇಲ್ಲ'' ಎನ್ನುತ್ತದೆ. 'ನ ಪ್ರೇತ್ಯ ಸಂಜ್ಞಾಸ್ತಿ' ಎಂಬ ಶ್ರುತಿಯು ಜ್ಞಾನವಿಲ್ಲ, ಎನ್ನುತ್ತದೆ. ಆದ್ದರಿಂದ ಶ್ರುತಿಯು ವಿಪ್ರತಿಪತ್ತಿಯೇ ಇಲ್ಲದೆ ಮೋಕ್ಷದಲ್ಲಿ ಆನಂದವಿದೆ, ಎಂದು ಹೇಳುತ್ತದೆ ಎನ್ನುವ ಮಾತು ಸರಿಯಲ್ಲ, ಎನ್ನುವ ಆಕ್ಷೇಪಕ್ಕೆ ಇಲ್ಲಿ ಸಮಾಧಾನವನ್ನು ಹೇಳಲಾಗಿದೆ.

ಪ್ರಾಕೃತಪ್ರಿಯಹಾನಿಸ್ತು=ಅಂತಃಕರಣಪರಿಣಾಮರೂಪವಾದ ಪ್ರಾಕೃತಸುಖವು ನಾಶವಾಗುತ್ತದೆ ಎಂದು ಪ್ರಿಯಾಸ್ಪೃಷ್ಟಿರಿತಿ='ಪ್ರಿಯಾಪ್ರಿಯೇ ನ ಸ್ಪೃಶತಃ' ಎಂಬ ಶ್ರುತಿಯಲ್ಲಿ 'ಪ್ರಿಯಾಸ್ಪೃಷ್ಟಿ' ಪದದಿಂದ ಈರ್ಯತೇ=ಹೇಳಲ್ಪಟ್ಟಿದೆ.

**ಭಾವಾರ್ಥ—** ಎರಡುವಿಧವಾದ ಸುಖವಿದೆ–ವೃತ್ತಿಸುಖ ಮತ್ತು ಸ್ವರೂಪಸುಖ. ವೃತ್ತಿಸುಖ ಎಂದರೆ ಇಷ್ಟವಾದ ವಿಷಯವಸ್ತುಗಳ ಅನುಭವದಿಂದ ಆಗುವ ಅಂತಃಕರಣದ ಪರಿಣಾಮವಿಶೇಷ. ಅದು ಸಂಸಾರದಲ್ಲಿದೆ. ಮೋಕ್ಷದಲ್ಲಿಲ್ಲ. ಇನ್ನೊಂದು ಆತ್ಮಸ್ವರೂಪಭೂತವಾದ ಸುಖ. ಅದು ಮೋಕ್ಷದಲ್ಲಿದೆ.

'ಪ್ರಿಯಾಪ್ರಿಯೇ' ಎಂಬ ಶ್ರುತಿಯಲ್ಲಿರುವ ಪ್ರಿಯಶಬ್ದಕ್ಕೆ ವೃತ್ತಿಸುಖ ಎಂದು ಅರ್ಥಮಾಡಿದರೆ ಅಪ್ರಿಯಶಬ್ದಕ್ಕೆ ಅದೇ ಅರ್ಥವನ್ನು ಮಾಡಬೇಕು. ಆಗ 'ಮೋಕ್ಷದಲ್ಲಿ ವೃತ್ತಿರೂಪವಾದ ದುಃಖವಿಲ್ಲ, ಬೇರೆ ದುಃಖವಿದೆ' ಎಂದೂ ಅರ್ಥವಾದೀತು. ಈ ಆಕ್ಷೇಪಕ್ಕೆ ಉತ್ತರ—

ಅಪ್ರಿಯಂ=ದುಃಖವು ಪ್ರತಿಕೂಲಂ=ಮೋಕ್ಷಾರ್ಥಿಗೆ ಅನಪೇಕ್ಷಿತವಾದುದು. ತತ್=ಆದ್ದರಿಂದ ಅದು ಅವಿಶೇಷೇಣ=ನಿಃಶೇಷವಾಗಿ ಇಲ್ಲವೆಂದು ಅಪ್ರಿಯಶಬ್ದದಿಂದ ಹೇಳಲ್ಪಟ್ಟಿದೆ.

ಭಾವಾರ್ಥ— 'ಪ್ರಿಯಾಪ್ರಿಯೇ ನ ಸ್ಪೃಶತಃ' ಎಂಬ ಶ್ರುತಿಯಲ್ಲಿ ಸುಖ ಮತ್ತು ದುಃಖ ಇವೆರಡೂ ಮೋಕ್ಷದಲ್ಲಿ ಇಲ್ಲ, ಎಂದು ನಿಷೇಧ ಮಾಡಲಾಗಿದೆ. ಅಲ್ಲಿ ಸುಖವಿಲ್ಲವೆಂದರೆ ವೃತ್ತಿಸುಖ ಇಲ್ಲ ಎಂದು ಅರ್ಥ. ಅಪ್ರಿಯ ಇಲ್ಲ ಎಂದರೆ, ಸರ್ವಾತ್ಮನಾ ದುಃಖವಿಲ್ಲ ಎಂದರ್ಥ. ಏಕೆಂದರೆ, ಮೋಕ್ಷವು ಇಷ್ಟಪ್ರಾಪ್ತಿ, ಅನಿಷ್ಟನಿವೃತ್ತಿರೂಪವಾಗಿದೆ. ಅನಿಷ್ಟವೆಂದರೆ ದುಃಖ. ಅದು ಸರ್ವಾತ್ಮನಾ ಅನಪೇಕ್ಷಿತವಾದುದು. ಆದ್ದರಿಂದ ಸರ್ವಾತ್ಮನಾ ದುಃಖವಿಲ್ಲ, ಎಂದೇ ಅರ್ಥ.

**ನಾಸ್ತಿ ಹ್ಯಪ್ರಾಕೃತಂ ದುಃಖಂ ಸತೋ ಜೀವಸ್ಯ ಕುತ್ರಚಿತ್ ।**
**ಪ್ರಿಯಂ ಸ್ವರೂಪಮೇವಾಸ್ಯ ಬಲಾನಂದಾದಿವಾಕ್ಯತಃ ॥ ೭೬ ॥**

ಸತಃ ಜೀವಸ್ಯ=ಮುಕ್ತಿಯೋಗ್ಯನಾದ ಜೀವನಿಗೆ ಅಪ್ರಾಕೃತಂ ದುಃಖಂ= ಅಂತಃಕರಣವಿಕಾರವಿಲ್ಲದ ಸ್ವರೂಪಭೂತವಾದ ದುಃಖವು ನಾಸ್ತಿ=ಇಲ್ಲ. ಏಕೆಂದರೆ ಕುತ್ರಚಿತ್ (ನೋಕ್ತಂ)=ಶ್ರುತಿ–ಸ್ಮೃತಿಗಳಲ್ಲಿ ಸಜ್ಜೀವರಿಗೆ ಅಪ್ರಾಕೃತ ದುಃಖವು ಹೇಳಲ್ಪಟ್ಟಿಲ್ಲ. ಆದ್ದರಿಂದ ದುಃಖವು ಏಕವಿಧವಾದುದರಿಂದ 'ಅಪ್ರಿಯಂ ನ ಸ್ಪೃಶತಿ' ಎಂದರೆ ಸರ್ವಾತ್ಮನಾ ದುಃಖವು ಇಲ್ಲ, ಎಂದರ್ಥ.

ಬಲಾನಂದಾದಿವಾಕ್ಯತಃ='ಬಲಮಾನಂದ...' ಇತ್ಯಾದಿ ಶ್ರುತಿವಾಕ್ಯದಿಂದ ಪ್ರಿಯಂ=ಸುಖವು ಅಸ್ಯ=ಮೋಕ್ಷಯೋಗ್ಯಜೀವನ ಸ್ವರೂಪಮೇವ= ಸ್ವರೂಪವೇ ಆಗಿದೆ.

ಬಲಮ್ ಆನಂದ ಓಜಶ್ಚ ಸಹೋ ಜ್ಞಾನಮ್ ಅನಾಕುಲಮ್ ।
ಸ್ವರೂಪಾಣ್ಯೇವ ಜೀವಸ್ಯ ವ್ಯಜ್ಯಂತೇ ಪರಮಾದ್ ವಿಭೋಃ ॥

ಈ ಶ್ರುತಿಯು ಜ್ಞಾನಾನಂದಾದಿಗಳು ಸಜ್ಜೀವನ ಸ್ವರೂಪವಾಗಿವೆ. ಅವುಗಳು ಮೋಕ್ಷದಲ್ಲಿ ವ್ಯಕ್ತವಾಗುತ್ತವೆ, ಎಂದು ಹೇಳುತ್ತದೆ. ಆದ್ದರಿಂದ ಸ್ವರೂಪಸುಖವು ಸಂಸಾರದಲ್ಲಿ ಮಾಯಾ–ಅವಿದ್ಯೆ ಎಂದು ಕರೆಯಲ್ಪಡುವ ಪ್ರಕೃತಿಯಿಂದ ಆವೃತವಾಗಿದ್ದು ಮೋಕ್ಷದಲ್ಲಿ ಅವಿದ್ಯೆ ನಾಶವಾಗಿರುವುದರಿಂದ ಸಾಕ್ಷೀಂದ್ರಿಯಕ್ಕೆ ವಿಷಯವಾಗುತ್ತದೆ.

**ಹೇಯತ್ವಾದಪ್ರಿಯಸ್ಯೈವ ಪ್ರಿಯಹಾನೇರನಿಷ್ಟತಃ ।**
**ನ ಸಮಸ್ತಪ್ರಿಯಾಭಾವೋ ಮೋಕ್ಷೇ ಪ್ರೋಕ್ತೇ ತು ಯುಜ್ಯತೇ ॥ ೭೭ ॥**

ಅಪ್ರಿಯಸ್ಯ=ದುಃಖಕ್ಕೆ ಹೇಯತ್ವಾದೇವ=ಸರ್ವಥಾ ಹೇಯತ್ವ ವಿರುವುದರಿಂದ (ದುಃಖವು ಸರ್ವಾತ್ಮನಾ ಅನಿಷ್ಟವಾದುದರಿಂದ) ಹಾಗೂ ಪ್ರಿಯಹಾನೇಃ=ಸುಖನಾಶವು ಅನಿಷ್ಟವಾದುದರಿಂದ ಪ್ರೋಕ್ತೇ ಮೋಕ್ಷೇ= ಶ್ರುತ್ಯುಕ್ತವಾದ ಮೋಕ್ಷದಲ್ಲಿ ಸಮಸ್ತಪ್ರಿಯಾಭಾವಃ=ಸರ್ವವಿಧದ ಸುಖಾಭಾವವು ಇದೆ, ಎಂದು ನ ಯುಜ್ಯತೇ=''ಪ್ರಿಯಾಪ್ರಿಯೇ ನ ಸ್ಪೃಶತಃ' ಎಂಬ ಶ್ರುತಿಗೆ ವ್ಯಾಖ್ಯಾನ ಮಾಡಲಾಗದು. (ಶ್ರುತಿಗೆ ಸರ್ವಥಾ ಸುಖವಿಲ್ಲ, ಎಂದು ಅರ್ಥವನ್ನು ಹೇಳಬಾರದು. ದುಃಖವು ಸರ್ವಥಾ ನಾಶವಾಗುತ್ತದೆ, ಎಂದು ಅರ್ಥವನ್ನು ಮಾಡಬಹುದು.)

**ಅಪ್ರಿಯಸ್ಯ ಸ್ವರೂಪತ್ವಮಸುರೇಷ್ವೇವ ಹಿ ಶ್ರುತಮ್ ।**
**'ಅಸುರಾ ನೈವಮೇವಂ ಚ ನೈವಂ ಚಾಖಿಲಮಾನುಷಾಃ' ॥ ೭೮ ॥**

ಅಪ್ರಿಯಸ್ಯ=ದುಃಖಕ್ಕೆ ಸ್ವರೂಪತ್ವಂ=ಆತ್ಮಸ್ವರೂಪತ್ವವು ಅಸುರೇಷ್ವೇವ= ಅಸುರರಲ್ಲಿ ಮಾತ್ರ ಎಂದು ಶ್ರುತಂ=ಶ್ರುತಿಸಿದ್ಧವಾಗಿದೆ. ಅಸುರಸ್ವರೂಪವು ದುಃಖಾತ್ಮಕ ಎಂದು ಶ್ರುತಿಯು ಹೇಳುತ್ತದೆ. ಆ ಶ್ರುತಿ ಹೀಗಿದೆ—

''ನಿತ್ಯಾನಂದೋ ನಿತ್ಯಜ್ಞಾನೋ ನಿತ್ಯಬಲಃ ಪರಮಾತ್ಮಾ ।
ನೈವಮಸುರಾಃ ಏವಮನೇವಂ ಚ ಮನುಷ್ಯಾಃ ॥''

ಅಸುರಾಃ ನೈವಂ=ಅಸುರರು ಜ್ಞಾನಾನಂದಸ್ವರೂಪರಲ್ಲ, ದುಃಖಾ-ಜ್ಞಾನಸ್ವರೂಪರು. ಮನುಷ್ಯರು ಏವಂ=ಸುಖರೂಪರೂ ನೈವಂ ಚ=ದುಃಖ ರೂಪರೂ ಅರ್ಥಾತ್ ಸುಖ-ದುಃಖಮಿಶ್ರರು. ಇತಿ ಶ್ರುತಂ=ಹೀಗೆ ಶ್ರುತಿಯಲ್ಲಿದೆ.

**ಇತ್ಯಾತ್ಮಪ್ರಿಯಹಾನಾಯ ಕೋ ಯತೇತ ಚ ಬುದ್ಧಿಮಾನ್ ॥ ೭೯ ॥**

ಕಃ ಬುದ್ಧಿಮಾನ್=ಬುದ್ಧಿ ಇರುವ ಯಾರು ತಾನೇ ಆತ್ಮಪ್ರಿಯ ಹಾನಾಯ=ತನ್ನ ಮತ್ತು ತನಗೆ ಪ್ರಿಯವಾದುದರ ನಾಶಕ್ಕೆ ಯತೇತ= ಪ್ರಯತ್ನಿಸಿಯಾನು! ಆದ್ದರಿಂದ ಪ್ರಿಯವಾದ ಸುಖದ ನಾಶವೇ ಮೋಕ್ಷ ವಾದಲ್ಲಿ ಅದಕ್ಕಾಗಿ ಯಾರೂ ಪ್ರಯತ್ನಿಸಲಾರರು.

ಮೋಕ್ಷದಲ್ಲಿ ಸುಖವಿದ್ದರೆ ದುಃಖವೂ ಬರಬೇಕಾದೀತು. ಏಕೆಂದರೆ ಸುಖವಿದ್ದರೆ ದುಃಖವೂ ಇರಬೇಕು ಎನ್ನುವ ನಿಯಮವಿದೆ, ಎನ್ನುತ್ತಾರೆ ತಾರ್ಕಿಕರು. ಆದರೆ ಸುಖಕ್ಕೆ ಕಾರಣವಾದ ವಿಷಯಪದಾರ್ಥಗಳೇ ದುಃಖಕ್ಕೂ ಕಾರಣವಾಗುವುದರಿಂದ ವೃತ್ತಿರೂಪವಾದ ಸುಖವಿದ್ದಾಗ ದುಃಖವೂ ಆಗುತ್ತದೆ. ಮೋಕ್ಷಸುಖ ಸ್ವರೂಪಭೂತವಾಗಿದ್ದು ಕಾರಣಜನ್ಯವೇ ಅಲ್ಲ. ಆದ್ದರಿಂದ ಅಂತಹ ಸುಖವಿದ್ದಾಗ ದುಃಖವಿರಬೇಕಾಗಿಲ್ಲ.

**ಸಂಜ್ಞಾ ನಾಸ್ತೀತ್ಯಪಿ ಹ್ಯಸ್ಯ ನಾಮುಕ್ತಜ್ಞೇಯತೇತಿ ಹಿ।**
**ಧರ್ಮಾನುಚ್ಛಿತ್ತಿಮೇವಾಸ್ಯ ಯತೋ ವಕ್ತ್ಯುತ್ತರಶ್ರುತಿಃ ॥ ೮೦ ॥**

'ನ ಪ್ರೇತ್ಯ ಸಂಜ್ಞಾಸ್ತಿ-ಮೋಕ್ಷವಾದ ಮೇಲೆ ಜ್ಞಾನವಿಲ್ಲ' ಈ ಶ್ರುತಿಯಲ್ಲಿ ಅಸ್ಯ ಸಂಜ್ಞಾ ನಾಸ್ತಿ ಇತ್ಯಪಿ=ಮುಕ್ತನಿಗೆ ಜ್ಞಾನವು ಇಲ್ಲ, ಎಂದಿರುವುದೂ ಅಸ್ಯ=ಮುಕ್ತನಿಗೆ ಅಮುಕ್ತಜ್ಞೇಯತಾ ನ=ಅಮುಕ್ತರಿಂದ ಜ್ಞೇಯತ್ವವು ಇಲ್ಲ ಇತಿಹಿ=ಹೀಗೆ ಅರ್ಥ.

ಭಾವಾರ್ಥ— ಶ್ರುತಿಯಲ್ಲಿ ಮುಕ್ತಸಂಬಂಧಿಯಾದ ಜ್ಞಾನವಿಲ್ಲ ಎಂದಿದೆ. ಇದಕ್ಕೆ ಮುಕ್ತನಿಗೆ ಜ್ಞಾನವಿಲ್ಲ ಎಂದೇ ಅರ್ಥಮಾಡಬೇಕಿಲ್ಲ, ಮುಕ್ತನ ಜ್ಞಾನವು ಇನ್ನೊಬ್ಬರಿಗಿಲ್ಲ, ಎಂದೂ ಅರ್ಥವನ್ನು ಮಾಡಬಹುದು. ಆದ್ದರಿಂದ ಈ ಶ್ರುತಿಯು ಮುಕ್ತನಿಗೆ ಜ್ಞಾನವಿಲ್ಲ, ಎನ್ನುವುದಕ್ಕೆ ಆಧಾರವಾಗುವುದಿಲ್ಲ.

ಯತಃ=ಏಕೆಂದರೆ, ಉತ್ತರಶ್ರುತಿಃ=ಈ ಶ್ರುತಿಯ ಮುಂದಿನ ವಾಕ್ಯ 'ಅವಿನಾಶೀ ವಾ ಅರೇ ಅಯಮಾತ್ಮಾ-ಅನುಚ್ಛಿತ್ತಿಧರ್ಮಾ' ಎಂದು ಅಸ್ಯ=ಮುಕ್ತನಿಗೆ ಧರ್ಮಾನುಚ್ಛಿತ್ತಿಮೇವ ವಕ್ತಿ=ಮುಕ್ತನಿಗೆ ಯಾವ ಧರ್ಮಗಳ ನಾಶವೂ ಇಲ್ಲ, ಎಂದು ಹೇಳುತ್ತದೆ.

ಭಾವಾರ್ಥ— 'ನ ಪ್ರೇತ್ಯ ಸಂಜ್ಞಾಸ್ತಿ' ಎಂಬ ವಾಕ್ಯದ ಮುಂದಿನ ವಾಕ್ಯದಲ್ಲಿ ಮುಕ್ತನ ಯಾವ ಧರ್ಮಗಳೂ ನಾಶವಾಗುವುದಿಲ್ಲ, ಎಂದಿದೆ. ಇದರಿಂದ ಅವನ ಜ್ಞಾನಕ್ಕೆ ನಾಶವಿಲ್ಲ, ಎಂದು ಸಿದ್ಧವಾಗುತ್ತದೆ. ಅದಕ್ಕೆ ಅನುಗುಣವಾಗಿ ಹಿಂದಿನ ವಾಕ್ಯಕ್ಕೆ ಮುಕ್ತನ ಜ್ಞಾನ ಮತ್ತೊಬ್ಬರಿಗಿಲ್ಲ, ಎಂದೇ ಅರ್ಥವನ್ನು ಮಾಡಬೇಕು.

**ಆಶಂಕ್ಯಾಸ್ಯ ಜ್ಞಾನಹಾನಿಂ ಮೈತ್ರೇಯ್ಯಾ ಮೋಹಮಾಹ ಮಾಮ್ ।**
**ಭವಾನಿತ್ಯುಕ್ತವತ್ಯಾ ಹಿ ನಾಹಂ ಮೋಹಂ ವದಾಮಿ ತೇ ॥ ೮೧ ॥**

**ಇತ್ಯುಕ್ತ್ವಾ ಯಾಜ್ಞವಲ್ಕ್ಯೋ ಹಿ ಸ್ವರೂಪಾನಾಶಮೂಚಿವಾನ್ ।**
**ಜ್ಞಾನರೂಪಸ್ಯ ವಿಜ್ಞಾನನಾಶಸ್ತನ್ನಾಶ ಏವ ಯತ್ ॥ ೮೨ ॥**

'ನ ಪ್ರೇತ್ಯ ಸಂಜ್ಞಾಸ್ತಿ' ಎಂಬ ವಾಕ್ಯ ಯಾಜ್ಞವಲ್ಕ್ಯ ಮತ್ತು ಮೈತ್ರೇಯೀ ಸಂವಾದರೂಪವಾಗಿ ಛಾಂದೋಗ್ಯೋಪನಿಷತ್ತಿನಲ್ಲಿ ಇದೆ. ಈ ವಾಕ್ಯವನ್ನು ಕೇಳಿಸಿಕೊಂಡ ಮೈತ್ರೇಯೀ ಅದಕ್ಕೆ 'ಮುಕ್ತಿಯಾದ ಮೇಲೆ ಜ್ಞಾನವೇ ಇರುವುದಿಲ್ಲ' ಎನ್ನುವ ಅರ್ಥವನ್ನು ಪರಿಗ್ರಹಿಸಿ ಜ್ಞಾನಹಾನಿಂ ಆಶಂಕ್ಯ=ಜ್ಞಾನ ನಾಶವನ್ನು ಆಕ್ಷೇಪಿಸಿ ಮೋಹಮಾಹ ಮಾಂ ಭವಾನ್='ನೀನು ನನಗೆ ಭ್ರಾಂತಿಯನ್ನು ಉಂಟು ಮಾಡಿದ್ದಿ' ಇತಿ ಉಕ್ತವತ್ಯಾ=ಹೀಗೆ ಹೇಳಿದ ಮೈತ್ರೇಯ್ಯಾ=ಮೈತ್ರೇಯಿಯಿಂದ ಪ್ರೇರಿಸಲ್ಪಟ್ಟ ಯಾಜ್ಞವಲ್ಕ್ಯಃ=ಯಾಜ್ಞವಲ್ಕ್ಯರು 'ನಾಹಂ ಮೋಹಂ ವದಾಮಿ ತೇ'= ನಾನು ನಿನಗೆ ಅನ್ಯಥಾ ಹೇಳಲಿಲ್ಲ' ಇತ್ಯುಕ್ತ್ವಾ=ಹೀಗೆ (ಯಾಜ್ಞವಲ್ಕ್ಯರು) ಹೇಳಿ ಸ್ವರೂಪಾನಾಶಂ ಊಚಿವಾನ್='ಅವಿನಾಶೀ ವಾ ಅರೇ ಅಯಮ್ ಆತ್ಮಾ' ಎಂದು ಆತ್ಮಸ್ವರೂಪಕ್ಕೆ ನಾಶವಿಲ್ಲ, ಎಂದು ಹೇಳಿದ್ದಾರೆ.

ಭಾವಾರ್ಥ— ಛಾಂದೋಗ್ಯೋಪನಿಷತ್ತಿನಲ್ಲಿ 'ಯಾಜ್ಞವಲ್ಕ್ಯರು ಮತ್ತು ಮೈತ್ರೇಯೀ ಇವರ ಸಂವಾದಪ್ರಸಂಗದಲ್ಲಿ ಯಾಜ್ಞವಲ್ಕ್ಯರು ಆಡಿದ ಮಾತು ಹೀಗಿದೆ— ವಿಜ್ಞಾನಘನ ಏವ ಏತೇಭ್ಯಃ ಭೂತೇಭ್ಯಃ ಸಮುತ್ಥಾಯ ತಾನ್ಯೇವ ಅನು ವಿನಶ್ಯತಿ, ನ ಪ್ರೇತ್ಯ ಸಂಜ್ಞಾ ಅಸ್ತಿ'. ಇದರ ಅರ್ಥ— ಜ್ಞಾನಸ್ವರೂಪನಾದ ಈ ಮುಕ್ತಿಯೋಗ್ಯನಾದ ಜೀವನು ತನ್ನ ಅಂತಿಮ ಜನ್ಮದಲ್ಲಿ ಈ ಪಂಚಭೂತಗಳಿಂದ ಎದ್ದುಬಂದು ಅಂದರೆ, ತಾನು ಅನಾದಿಯಾದರೂ ಪಾಂಚಭೌತಿಕಶರೀರಸಂಬಂಧರೂಪವಾದ ಚರಮ ಜನ್ಮವನ್ನು ಪಡೆದು ಅದರ ನಾಶದಿಂದಾಗಿ ಪಂಚಭೂತಗಳಲ್ಲೇ ಲೀನನಾಗುವನು. ಸತ್ತಮೇಲೆ (ಚರಮಶರೀರ ನಾಶವಾದಮೇಲೆ) ಅವನ ಜ್ಞಾನವಿಲ್ಲ' ಎಂದು.

ಇಲ್ಲಿ 'ನ ಪ್ರೇತ್ಯ ಸಂಜ್ಞಾ ಅಸ್ತಿ' ಎಂಬ ವಾಕ್ಯಕ್ಕೆ ಯಾಜ್ಞವಲ್ಕ್ಯರಿಗೆ ಅಭಿಮತವಾದ ಅರ್ಥ— ಜ್ಞಾನಿಯು ಚರಮಶರೀರತ್ಯಾಗ ಮಾಡಿದ ಮೇಲೆ ಅವನ ಜ್ಞಾನ ಬೇರೆಯವರಿಗೆ ಇಲ್ಲ, ಎಂದು. ಆದರೆ ಮೈತ್ರೇಯೀ ತಿಳಿದ ಅರ್ಥ— ಮುಂದೆ ಮುಕ್ತನಾಗುವ ಆತ್ಮನಿಗೆ ಜ್ಞಾನವಿಲ್ಲ, ಎಂದು. ಹೀಗೆ ತಿಳಿದು ತನ್ನ ಪತಿ ಯಾಜ್ಞವಲ್ಕ್ಯರನ್ನು ಆಕ್ಷೇಪಿಸುತ್ತಾಳೆ— ''ಅತ್ರೈವ ಮಾ ಭವಾನ್ ಮೋಹಾತಮ್ ಆಪಿಪತ್— 'ನ ಪ್ರೇತ್ಯ ಸಂಜ್ಞಾ ಅಸ್ತೀತಿ'— ಮುಕ್ತನಿಗೆ ಜ್ಞಾನವೇ ಇಲ್ಲವೆಂದು ಹೇಳಿ ನನಗೆ ತಾವು ಭ್ರಮೆಯನ್ನು ಉಂಟುಮಾಡಿದ್ದೀರಿ'' ಎಂದು. ಅದಕ್ಕೆ ಯಾಜ್ಞವಲ್ಕ್ಯರ ಪ್ರತಿಕ್ರಿಯೆ— 'ನ ವಾ ಅರೇ ಅಹಂ ಮೋಹಂ ಬ್ರವೀಮಿ, ಅವಿನಾಶೀ ವಾ ಅರೇಽಯಮಾತ್ಮಾ ಅನುಚ್ಛಿತ್ತಿಧರ್ಮಾ—ನಾನು ಅನ್ಯಥಾ ಹೇಳುತ್ತಿಲ್ಲ. ಈ ಆತ್ಮನಿಗಾಗಲೀ, ಅವನ ಧರ್ಮಗಳಿಗಾಗಲೀ ನಾಶವಿಲ್ಲ' ಎಂದು.

ಆದ್ದರಿಂದ 'ನ ಪ್ರೇತ್ಯಸಂಜ್ಞಾ ಅಸ್ತಿ' ಎನ್ನುವ ಅವರ ಪೂರ್ವೋಪದೇಶಕ್ಕೆ ಮುಕ್ತನಿಗೆ ಜ್ಞಾನವಿಲ್ಲ, ಎಂದು ಅರ್ಥವಲ್ಲ, ಮುಕ್ತನ ಜ್ಞಾನ ಬೇರೆಯವರಿಗೆ ಇಲ್ಲ, ಎಂದೇ ಅರ್ಥ.

ಮೈತ್ರೇಯೀ ಮುಕ್ತನಲ್ಲಿರುವ ಜ್ಞಾನಕ್ಕೆ ನಾಶವಿದೆಯೇ? ಎಂದು ಪ್ರಶ್ನೆಮಾಡಿದಾಗ ಯಾಜ್ಞವಲ್ಕ್ಯರು 'ಆತ್ಮನಿಗೆ ನಾಶವಿಲ್ಲ–ಅವಿನಾಶೀ ವಾ

ಅರೇ ಅಯಮ್ ಆತ್ಮಾ' ಎಂದು ಉತ್ತರಿಸಿದ್ದಾರೆ. ಇದು ಅಸಂಗತ, ಎಂದರೆ ಅದಕ್ಕೆ ಅನುವ್ಯಾಖ್ಯಾನದ ಸಮಾಧಾನ— ಯತ್=ಯಾವಕಾರಣದಿಂದ ಜ್ಞಾನರೂಪಸ್ಯ=ಜ್ಞಾನಸ್ವರೂಪನಾದ ತನ್ನಾಶಃ=ಆತ್ಮನ ನಾಶವು ವಿಜ್ಞಾನನಾಶ ಏವ=ಜ್ಞಾನದ ನಾಶವೇ ಆಗುತ್ತದೆಯೋ, ಆದ್ದರಿಂದ ಮುಕ್ತನಿಗೆ ಜ್ಞಾನ ನಾಶವಿಲ್ಲ, ಇತಿ ಅಭಿಪ್ರಾಯವಾನ್ ಸ್ವರೂಪಾನಾಶಮ್ ಊಚಿವಾನ್=ಈ ಅಭಿಪ್ರಾಯದಿಂದ ಸ್ವರೂಪಕ್ಕೆ ನಾಶವಿಲ್ಲ, ಎಂದಿರುತ್ತಾರೆ.

ಭಾವಾರ್ಥ— ಆತ್ಮನು ಜ್ಞಾನರೂಪ. ಮೋಕ್ಷದಲ್ಲಿ ಜ್ಞಾನನಾಶವಿದ್ದರೆ ಆತ್ಮನೇ ನಾಶವಾಗಬೇಕು. ಆತ್ಮನಾಶವು ಪುರುಷಾರ್ಥವಲ್ಲ. ಆದ್ದರಿಂದ ಆತ್ಮನಾಶವಿಲ್ಲ. ಆತ್ಮರೂಪವಾದ ಜ್ಞಾನನಾಶವೂ ಇಲ್ಲ. ಈ ಅಭಿಪ್ರಾಯದಿಂದ ಯಾಜ್ಞವಲ್ಕ್ಯರು 'ಆತ್ಮನಿಗೆ ನಾಶವಿಲ್ಲ' ಎಂದು ಉತ್ತರವನ್ನು ಕೊಟ್ಟಿದ್ದಾರೆ, ಇದು ಅಸಂಗತವಲ್ಲ.

**ಇತಿ, ಶೂನ್ಯಮತೋಚ್ಛಿತ್ತ್ಯೈ ಪುನರಾನಂದಪೂರ್ವಕಾನ್ ।**
**ಧರ್ಮಾನಾಹಾಪ್ಯನುಚ್ಛಿನ್ನಾಂಸ್ತಾರ್ಕಿಕೈರ್ವಿನಿವಾರಿತಾನ್ ॥ ೮೩ ॥**

(ಇಲ್ಲಿರುವ ಇತಿ ಶಬ್ದಕ್ಕೆ ಹಿಂದಿನ ಶ್ಲೋಕದಲ್ಲಿ ಅನ್ವಯ)

ಶೂನ್ಯಮತೋಚ್ಛಿತ್ತ್ಯೈ=ಬೌದ್ಧರ ಶೂನ್ಯವಾದನಿರಾಕರಣೆಗಾಗಿ ಯಾಜ್ಞವಲ್ಕ್ಯರು ಮೈತ್ರೇಯಿಯ ಪ್ರಶ್ನೆಗೆ ನೇರವಾಗಿ 'ಜ್ಞಾನನಾಶವಿಲ್ಲ' ಎನ್ನುವ ಉತ್ತರವನ್ನು ಹೇಳದೆ, ಆತ್ಮನಿಗೆ ನಾಶವಿಲ್ಲ ಎಂದಿದ್ದಾರೆ. ಜ್ಞಾನನಾಶವಿಲ್ಲ, ಎಂದಿಷ್ಟೇ ಹೇಳಿದರೆ ತಾರ್ಕಿಕರ ಮತನಿರಾಸಮಾತ್ರ ಮಾಡಿ ದಂತಾಗುತ್ತದೆ. ಅದಕ್ಕಾಗಿ, ಯಾಜ್ಞವಲ್ಕ್ಯರು ಹೀಗೆ ಹೇಳಿದ್ದಾರೆ. ಇದರಿಂದ ಆತ್ಮನಾಶವೇ ಮೋಕ್ಷ, ಎನ್ನುವ ಬೌದ್ಧಮತದ ನಿರಾಸವೂ ಆಗುತ್ತದೆ.

ಇಷ್ಟು ಹೇಳಿ ಯಾಜ್ಞವಲ್ಕ್ಯರು ಪುನಃ=ಮತ್ತೆ ಆನಂದಪೂರ್ವಕಾನ್= ಸುಖವೇ ಮೊದಲಾದ ತಾರ್ಕಿಕೈಃ ವಿನಿವಾರಿತಾನ್=ತಾರ್ಕಿಕರು ನಿರಾಕರಿಸಿರುವ ಧರ್ಮಾನ್=ಧರ್ಮಗಳನ್ನು ಅನುಚ್ಛಿನ್ನಾನ್=ನಾಶವಿಲ್ಲದವು ಗಳನ್ನಾಗಿ ಆಹ=ಹೇಳಿರುವರು.

ಭಾವಾರ್ಥ— ಹೀಗೆ ಆತ್ಮನಿಗೆ ನಾಶವಿಲ್ಲ, ಎಂದು ಹೇಳುವ ಮೂಲಕ

ಜ್ಞಾನನಾಶವಿಲ್ಲ, ಎಂದು ತಿಳಿಸಿದ ಯಾಜ್ಞವಲ್ಕ್ಯರು ಮತ್ತೆ 'ಅನುಚ್ಛಿತ್ತಿ-ಧರ್ಮಾ' ಎಂದು, ಆತ್ಮಧರ್ಮವಾದ ಆನಂದಾದಿಗಳಿಗೂ ನಾಶವಿಲ್ಲ ಎಂದಿದ್ದಾರೆ. ಇದರಿಂದ ಮುಕ್ತನಲ್ಲಿ ಯಾವ ವಿಶೇಷಗುಣಗಳೂ ಇಲ್ಲ, ಎನ್ನುವ ತಾರ್ಕಿಕಮತವನ್ನೂ ನಿರಾಕರಿಸಿದಂತಾಗುತ್ತದೆ. ಇದರಿಂದ ಮುಕ್ತರಲ್ಲಿ ಜ್ಞಾನಾನಂದಾದಿಗುಣಗಳು ಇವೆ, ಎಂದಂತಾಗುತ್ತದೆ. ಆದ್ದರಿಂದ 'ನ ಪ್ರೇತ್ಯ ಸಂಜ್ಞಾಸ್ತಿ' ಎಂಬ ಯಾಜ್ಞವಲ್ಕ್ಯರ ಉಪದೇಶಕ್ಕೆ ಮೋಕ್ಷದಲ್ಲಿ ಜ್ಞಾನವೇ ಇಲ್ಲ, ಎಂದು ಅರ್ಥವಲ್ಲ.

**ಮಾತ್ರಾಸಂಸರ್ಗಮಪ್ಯಾಹ ತಥಾ ಮಾಧ್ಯಂದಿನಶ್ರುತಿಃ ।**
**ಆಚಿಕ್ಷೇಪ ಮತಂ ತಚ್ಚ ಯಸ್ಮಿನ್ ನ ವಿಷಯಾದನಮ್ ।**
**ಘ್ರಾಣಾದಿಭೋಗಾಭಾವಸ್ಯ ತ್ವನಿಷ್ಟತ್ವಹೃದಾ ಶ್ರುತಿಃ ॥ ೮೪ ॥**

ಮಾಧ್ಯಂದಿನಶ್ರುತಿಃ=''ಮಾತ್ರಾಸಂಸರ್ಗಸ್ತ್ವಸ್ಯ ಭವತಿ'' ಎಂಬ ಮಾಧ್ಯಂದಿನಶ್ರುತಿಯು ತಥಾ=ಮುಕ್ತನ ಧರ್ಮಗಳಿಗೆ ನಾಶವಿಲ್ಲ ಎಂದಂತೆಯೇ ಮಾತ್ರಾಸಂಸರ್ಗಮಪಿ=ವಿಷಯ ಸಂಸರ್ಗಗಳನ್ನೂ ಆಹ= ಹೇಳುತ್ತದೆ.

ಭಾವಾರ್ಥ— ಯಾಜ್ಞವಲ್ಕ್ಯ ಮೈತ್ರೇಯೀಸಂವಾದವು ಕಾಣ್ವಶ್ರುತಿ (ಬೃಹದಾ. ಅಧ್ಯಾಯ-4) ಮಾಧ್ಯಂದಿನಶ್ರುತಿ ಇವೆರಡರಲ್ಲೂ ಇದೆ. ಕಾಣ್ವಶ್ರುತಿಯಲ್ಲಿ ಇಲ್ಲದ ಉಪದೇಶದ ಒಂದು ಹೆಚ್ಚಿನ ಅಂಶ ಮಾಧ್ಯಂದಿನ ಶ್ರುತಿಯಲ್ಲಿ ''ಮಾತ್ರಾಸಂಸರ್ಗಸ್ತ್ವಸ್ಯ ಭವತಿ'' ಎಂದು ಇದೆ. 'ಮಾತ್ರಾಃ' ಎಂದರೆ ವಿಷಯಪದಾರ್ಥಗಳು. ಅವುಗಳ ಸಂಬಂಧವು ಮುಕ್ತಾತ್ಮನಿಗೆ ಆಗುತ್ತದೆ, ಎಂದು ಮಾಧ್ಯಂದಿನ ಶ್ರುತಿಯ ಅರ್ಥ. ಇದರಿಂದ ವಿಷಯ ಪದಾರ್ಥಗಳ ಜ್ಞಾನವು ಮುಕ್ತಾತ್ಮನಿಗೆ ಇದೆ, ಎಂದು ತಿಳಿಯುತ್ತದೆ.

ಇನ್ನೂ ಒಂದು ಕಾರಣದಿಂದ ಮುಕ್ತಾತ್ಮನಿಗೆ ಜ್ಞಾನವಿದೆ, ಎಂದೇ ಯಾಜ್ಞವಲ್ಕ್ಯರ ಅಭಿಪ್ರಾಯ— 'ಯತ್ರ ಹಿ ದ್ವೈತಮಿವ ಭವತಿ' ಎಂಬ ಮುಂದಿನ ವಾಕ್ಯದಲ್ಲಿ ಘ್ರಾಣಾದಿಭೋಗಾಭಾವಸ್ಯ=ಮೂಗು ಮೊದಲಾದ ಇಂದ್ರಿಯಗಳಿಂದ ವಿಷಯಪದಾರ್ಥಗಳ ಭೋಗಾಭಾವಕ್ಕೆ ಅನಿಷ್ಟತ್ವಹೃದಾ=

ಅನಿಷ್ಟ ಎನ್ನುವ ಅಭಿಪ್ರಾಯದಿಂದ ಶ್ರುತಿಃ=ಉಪನಿಷತ್ತು ಯಸ್ಮಿನ್=ಯಾವ ಮತದಲ್ಲಿ (ಅದ್ವೈತಮತದಲ್ಲಿ) ನ ವಿಷಯಾದನಂ=ವಿಷಯದ ಭೋಗವು ಮುಕ್ತಾತ್ಮನಿಗೆ ಇಲ್ಲವೋ ತಚ್ಚ ಮತಂ=ಆ ಮತವನ್ನು ಆಚಿಕ್ಷೇಪ=ಆಕ್ಷೇಪಿಸಿದೆ.

**ಭಾವಾರ್ಥ**— ಯಾಜ್ಞವಲ್ಕ್ಯರ ಉಪದೇಶದಲ್ಲಿ ಮುಂದೆ ಹೀಗಿದೆ—

ಯತ್ರ ಹಿ ದ್ವೈತಮಿವ ಭವತಿ ತದಿತರ ಇತರಂ ಪಶ್ಯತಿ ।
ಯತ್ರ ತ್ವಸ್ಯ ಸರ್ವಮ್ ಆತ್ಮೈವಾಭೂತ್ ತತ್ ಕೇನ ಕಂ ಪಶ್ಯೇತ್ ॥

ಇದರ ಅರ್ಥ ಹೀಗೆ— ಭೇದ ಇದ್ದರೆ ಮಾತ್ರ ಒಬ್ಬನು ತನಗಿಂತ ಬೇರೆಯಾದ ಇನ್ನೊಂದನ್ನು ನೋಡುವುದು ಸಾಧ್ಯ. ಹೀಗೆ ಶ್ರುತಿಯು ಮೊದಲು ವ್ಯಾಪ್ತಿಯನ್ನು ಹೇಳಿದೆ. 'ಯತ್ರ ತ್ವಸ್ಯ...' ಎಂದು ಆಕ್ಷೇಪವನ್ನು ಮಾಡಿದೆ— 'ಒಂದುವೇಳೆ ಮುಕ್ತನಿಗೆ ಅಪೇಕ್ಷಿತವಾದ ವಿಷಯವಸ್ತುಗಳೆಲ್ಲವೂ ಅವನ ಸ್ವರೂಪಗಳೇ ಆದಲ್ಲಿ ಅಂದರೆ, ಮೋಕ್ಷದಲ್ಲಿ ಅವನಿಗಿಂತ ಬೇರೆ ವಸ್ತುಗಳೇ ಇಲ್ಲವಾದಲ್ಲಿ ಮುಕ್ತನು ಯಾವ ಇಂದ್ರಿಯದಿಂದ ಯಾವ ವಸ್ತುವನ್ನು ತಾನೇ ತಿಳಿಯಲಾದೀತು' ಎಂದು ತರ್ಕರೂಪವಾದ ಆಕ್ಷೇಪವನ್ನು ಶ್ರುತಿಯು ಮಾಡಿದೆ. ಇದರ ಪರ್ಯವಸಾನ, ಮುಕ್ತನು ಏನನ್ನೂ ತಿಳಿಯಲಾಗದಾದೀತು, ಎಂದು.

ನಾವು ಯಾವುದನ್ನಾದರೂ ತಿಳಿಯಬೇಕಾದರೆ ನಮಗಿಂತ ಭಿನ್ನವಾದ ಇಂದ್ರಿಯ, ತಿಳಿಯಲ್ಪಡುವ ವಸ್ತುಗಳು ಇರಬೇಕು. ಮೋಕ್ಷದಲ್ಲಿ ಎಲ್ಲರೂ ಬ್ರಹ್ಮಸ್ವರೂಪರಾಗಿ ಇಂದ್ರಿಯ, ವಿಷಯಗಳಾವುವೂ ಇಲ್ಲದಿದ್ದಲ್ಲಿ ಮುಕ್ತನು ಏನನ್ನು ನೋಡಬೇಕು, ಯಾವುದನ್ನು ಮೂಸಬೇಕು? ಹೀಗೆ ಅದ್ವೈತ ದರ್ಶನವನ್ನು ಆಕ್ಷೇಪ ಮಾಡುವ ಮೂಲಕ ಮೋಕ್ಷದಲ್ಲಿ ಅದ್ವೈತವಿಲ್ಲ. ಅಲ್ಲೂ ಜ್ಞಾನೇಂದ್ರಿಯಗಳು, ವಿಷಯವಸ್ತುಗಳು ಇವೆ. ಮುಕ್ತರಿಗೆ ಅವುಗಳ ಜ್ಞಾನವು ಬರುತ್ತದೆ, ಎಂದು ಶ್ರುತಿಯ ಅಭಿಪ್ರಾಯವು ತಿಳಿಯುತ್ತದೆ. ಹೀಗೆ, ಮೋಕ್ಷದಲ್ಲಿ ಜ್ಞಾನವು ಇದೆ, ಎನ್ನುವುದೇ ಶ್ರುತಿಯ ಅಭಿಪ್ರಾಯವಾಗಿರುವುದರಿಂದ 'ನ ಪ್ರೇತ್ಯ ಸಂಜ್ಞಾ ಅಸ್ತಿ' ಎನ್ನುವ ಶ್ರುತಿವಾಕ್ಯಕ್ಕೆ ಮೋಕ್ಷದಲ್ಲಿ ಜ್ಞಾನ ಇಲ್ಲ, ಎಂದು ಅರ್ಥವನ್ನು ಮಾಡಬಾರದು.

ಆಕ್ಷೇಪ— ಯತ್ರ ತು ಅಸ್ಯ ಸರ್ವಮ್ ಆತ್ಮೈವಾಭೂತ್,
ತತ್ ಕೇನ ಕಂ ಪಶ್ಯೇತ್ ॥

ಉಪನಿಷತ್ತಿನ ಈ ವಾಕ್ಯಕ್ಕೆ ಹಿಂದೆ ಹೇಳಿದಂತೆ ಆಕ್ಷೇಪ ಪರವಾಗಿ ಅರ್ಥ ಮಾಡಿದರೆ 'ಮುಕ್ತನು ಎಲ್ಲವನ್ನೂ ತಿಳಿಯುತ್ತಾನೆ' ಎನ್ನುವ ಪರ್ಯವಸಾನ ವಾಗುತ್ತದೆ. ಆದರೆ ಆಕ್ಷೇಪ ಬರುವಂತೆ ಏಕೆ ಅರ್ಥ ಮಾಡಬೇಕು? ಈ ವಾಕ್ಯ ವಸ್ತುಸ್ಥಿತಿಯನ್ನು ಹೇಳುತ್ತದೆ–'ದ್ವೈತವಿದ್ದರೆ ಒಬ್ಬನು ಇನ್ನೊಂದನ್ನು ತಿಳಿಯು ತ್ತಾನೆ. ಮೋಕ್ಷದಲ್ಲಿ (ಯತ್ರತು) ಆತ್ಮನನ್ನು ಬಿಟ್ಟು ಇನ್ನೇನೂ ಇಲ್ಲ. ಹೀಗಿದ್ದ ಮೇಲೆ ಮುಕ್ತನಿಗೆ ಜ್ಞಾನಬರಲು ಸಾಧ್ಯವೇ ಇಲ್ಲ.' ಹೀಗೆ ಜ್ಞಾನಾಭಾವವನ್ನೇ ಈ ಶ್ರುತಿವಾಕ್ಯವು ಹೇಳುತ್ತದೆ, ಎಂದೇಕೆ ಅರ್ಥವಾಗಬಾರದು? ಇದಕ್ಕೆ ಸಮಾಧಾನ ಮುಂದಿನ ವಾಕ್ಯ—

**ಯೇನೇದಮಖಿಲಂ ವೇದ ವಿಜ್ಞಾತಾರಂ ಸ್ವಮೇವ ಚ ।**
**ಕೇನ ತಂ ಚ ವಿಜಾನೀಯಾದಿತ್ಯನಿಷ್ಟಂ ಚ (ಹಿ) ಸರ್ವಥಾ ॥ ೮೫ ॥**

ಮುಂದೆ ಉಪನಿಷತ್ತಿನ ಎರಡು ವಾಕ್ಯಗಳಿಂದ ಹೀಗೆ ಆಕ್ಷೇಪವನ್ನು ಮಾಡಲಾಗಿದೆ— ''ಯೇನ ಇದಂ ಅಖಿಲಂ ವೇದ=ಮುಕ್ತಾತ್ಮನು ಯಾರಿಂದಾಗಿ ಎಲ್ಲವನ್ನೂ ತಿಳಿಯುವನೋ ಅಂತಹ ತಂ=ಪರಮಾತ್ಮನನ್ನೂ ವಿಜ್ಞಾತಾರಂ ಸ್ವಮೇವ ಚ=ತಿಳಿಯುವ ತನ್ನನ್ನೂ ಕೇನ ವಿಜಾನೀಯಾತ್= ಯಾವುದರಿಂದ ತಾನೇ ತಿಳಿದಾನು?'' ಇತಿ=ಹೀಗೆ ಸರ್ವಥಾ ಅನಿಷ್ಟಂ ಚ=ದೊಡ್ಡ ಅನಿಷ್ಟವನ್ನು ಆಪಾದಿಸಿದೆ. ಅಲ್ಲಿ ಆಪಾದನೆಯು ಸ್ಪಷ್ಟವಾಗಿ ಕಾಣುತ್ತಿರುವುದರಿಂದ ಅದರ ಜೊತೆಯಲ್ಲಿರುವ 'ಯತ್ರ ತ್ವಸ್ಯ' ಎಂಬ ವಾಕ್ಯ ದಲ್ಲೂ ಆಪಾದನೆಯನ್ನೇ ಮಾಡಲಾಗಿದೆ, ವಸ್ತುಸ್ಥಿತಿಯನ್ನು ಹೇಳಲಾಗಿಲ್ಲ.

ಭಾವಾರ್ಥ— ಈ ಸಂದರ್ಭದಲ್ಲಿ ಉಪನಿಷತ್ತಿನಲ್ಲಿ ಎರಡು ವಾಕ್ಯಗಳಿವೆ—

1. ಯೇನೇದಂ ಸರ್ವಂ ವಿಜಾನಾತಿ ತಂ ಚ ಕೇನ ವಿಜಾನೀಯಾತ್ ।
2. ವಿಜ್ಞಾತಾರಮರೇ ಕೇನ ವಿಜಾನೀಯಾತ್ ।

ಮೊದಲನೆಯ ವಾಕ್ಯದ ಅರ್ಥ ಹೀಗೆ— ಯಾವ ಪರಮಾತ್ಮನಿಂದಾಗಿ ಮುಕ್ತನು ಎಲ್ಲವನ್ನೂ ನೋಡುವನೋ ಅಂತಹ ದೇವರನ್ನು ಹೇಗೆ ತಿಳಿದಾನು?

ಎರಡನೆಯ ವಾಕ್ಯದ ಅರ್ಥ— ಎಲ್ಲವನ್ನೂ ತಿಳಿಯುವ ತನ್ನನ್ನಾದರೂ ಹೇಗೆ ತಿಳಿದಾನು?

ಈ ಎರಡು ವಾಕ್ಯಗಳಲ್ಲಿ ಹೇಳಲಾಗಿರುವ ಪರಮಾತ್ಮನ ಜ್ಞಾನಾಭಾವ ಹಾಗೂ ತನ್ನ ಜ್ಞಾನಾಭಾವವು ಅನಿಷ್ಟವಾದುದು—ಮುಕ್ತನಿಗೆ ಇಷ್ಟವಲ್ಲ. ಅಂತಹುದನ್ನು ಹೇಳುವ ವಾಕ್ಯಗಳು ವಾಸ್ತವಕಥನವಾಗಲು ಸಾಧ್ಯವಿಲ್ಲ. ಅದು ಆಕ್ಷೇಪಪರ. ಅದರ ಜೊತೆಯಲ್ಲೇ ಹಿಂದೆ ಬಂದಿರುವ 'ಯತ್ರ ತ್ವಸ್ಯ' ಎನ್ನುವ ವಾಕ್ಯವೂ ಆಕ್ಷೇಪದ ಧ್ವನಿಯಲ್ಲೇ ಇದೆ, ವಸ್ತುಸ್ಥಿತಿಕಥನವಲ್ಲ.

**ನಾಖಿಲಜ್ಞಾಪಕೋ ವಿಷ್ಣುರಜ್ಞೇಯೋ ನಿಯಮೇನ ಹಿ ।**
**ತಜ್‌ಜ್ಞಾನಾರ್ಥಂ ಹಿ ವೇದಾನಾಮಖಿಲಾನಾಂ ಪ್ರವರ್ತನಮ್॥ ೮೬ ॥**

ಅಖಿಲಜ್ಞಾಪಕಃ ವಿಷ್ಣುಃ=ನಮ್ಮ ಎಲ್ಲ ಜ್ಞಾನಗಳಿಗೂ ಕಾರಣನಾದ ವಿಷ್ಣುವು(ಇದು 'ಯೇನೇದಂ ಸರ್ವಂ ವಿಜಾನಾತಿ' ಎಂಬ ಉಪನಿಷತ್ತಿನ ಅರ್ಥ.) ನಿಯಮೇನ ಅಜ್ಞೇಯಃ ನ=ಸರ್ವಥಾ ಅಜ್ಞೇಯನಲ್ಲ. ಏಕೆಂದರೆ, ತಜ್‌ಜ್ಞಾನಾರ್ಥಂ=ಆ ವಿಷ್ಣುವಿನ ಜ್ಞಾನಕ್ಕಾಗಿಯೇ ಅಖಿಲಾನಾಂ ವೇದಾನಾಂ ಪ್ರವರ್ತನಂ=ಸಕಲವೇದಗಳ ಪ್ರವೃತ್ತಿ ಇದೆ. (ಎಲ್ಲ ವೇದಗಳೂ ವಿಷ್ಣುವನ್ನು ತಿಳಿಸುತ್ತವೆ. ಇದು 'ಸರ್ವೇ ವೇದಾ ಯತ್ಪದಮ್ ಆಮನಂತಿ' ಎಂಬ ಕಾಠಕಶ್ರುತಿಯಲ್ಲಿ ಹೇಳಲ್ಪಟ್ಟಿದೆ. ಇಲ್ಲಿ ಯತ್ ಪದಂ ಎಂದರೆ ಯಾರ ಸ್ವರೂಪವನ್ನು ಎಂದರ್ಥ.)

ಭಾವಾರ್ಥ— 'ಯತೋ ವಾಚೋ ನಿವರ್ತಂತೇ' ಎಂಬ ಶ್ರುತಿಯಲ್ಲಿ ವಿಷ್ಣುವು ಸರ್ವಥಾ ಜ್ಞೇಯನಲ್ಲ, ಎಂದು ಹೇಳಲಾಗಿದೆ. ಹೀಗಿರುವಾಗ, ಮುಕ್ತನು ಪರಮಾತ್ಮನನ್ನು ತಿಳಿಯದಿರುವುದು ವಸ್ತುಸ್ಥಿತಿಯೇ ಆಗಿದೆ. ಅದು ಅನಿಷ್ಟವಾಗುವುದು ಹೇಗೆ? ಎನ್ನುವ ಆಕ್ಷೇಪಕ್ಕೆ ಇಲ್ಲಿ ಸಮಾಧಾನವನ್ನು ಹೇಳಲಾಗಿದೆ— ವೇದಗಳ ಗುರಿಯೇ ಪ್ರಧಾನವಾಗಿ ವಿಷ್ಣುವನ್ನು ತಿಳಿಸುವುದೇ ಆಗಿದೆ. ಆದ್ದರಿಂದ ಅವನು ಸರ್ವಥಾ ಅಜ್ಞೇಯನಲ್ಲ. ಅವನು

ಅಜ್ಞೇಯನೆಂದು ಹೇಳುವ ಶ್ರುತಿಗೆ ಅವನು ಸಂಪೂರ್ಣವಾಗಿ ಜ್ಞೇಯನಲ್ಲ, ಎಂದಿಷ್ಟೇ ಅರ್ಥ. ಆದ್ದರಿಂದ ವಿಷ್ಣುವನ್ನು ತಿಳಿಯದಿರುವುದು ವಸ್ತುಸ್ಥಿತಿ ಅಲ್ಲ.

ಜೀವನು ತನ್ನನ್ನು ತಾನೇ ತಿಳಿದರೆ ಕರ್ತೃ–ಕರ್ಮಭಾವವಿರೋಧ ಬರುತ್ತದೆ. ಆದ್ದರಿಂದ ಜೀವ ತನ್ನನ್ನು ತಾನು ತಿಳಿದಿಲ್ಲ. ಹೀಗೆ ತನ್ನನ್ನು ತಿಳಿಯದಿರುವುದು ಅನಿಷ್ಟವೇ ಅಲ್ಲ, ಎನ್ನುವ ಆಕ್ಷೇಪಕ್ಕೆ ಉತ್ತರ—

**ಪ್ರತ್ಯಕ್ಷಮಾತ್ಮವಿಜ್ಞಾನಾವಿರೋಧಾನುಭವಾದಪಿ ।**
**ನ ಸ್ವವಿಜ್ಞಾನಿತಾಯಾಂ ಚ ವಿರೋಧಃ ಕಶ್ಚನೇಯತೇ ॥ ೮೭ ॥**

ಆತ್ಮವಿಜ್ಞಾನ–ಅವಿರೋಧಾನುಭವಾತ್ ಅಪಿ=ತನ್ನ ಜ್ಞಾನ ಹಾಗೂ ಕರ್ತೃ–ಕರ್ಮಭಾವವಿರೋಧಾಭಾವ ಇವೆರಡರ ಅನುಭವವು ಎಲ್ಲರ ಅನುಭವವಾಗಿರುವುದರಿಂದ ಸ್ವವಿಜ್ಞಾನತಾಯಾಂ=ತನ್ನ ಜ್ಞಾನವು ತನಗೇ ಇರುವುದರಲ್ಲಿ ಪ್ರತ್ಯಕ್ಷಂ=(ಕ್ರಿಯಾವಿಶೇಷಣಂ) ಪ್ರತ್ಯಕ್ಷವಾಗಿ ಕಶ್ಚನ ವಿರೋಧಃ ನ=ಯಾವುದೇ ವಿರೋಧವು ಇಲ್ಲ.

ಭಾವಾರ್ಥ— ನಮಗೆ ನಮ್ಮ ಜ್ಞಾನವಿರುವುದು 'ನನಗೆ ನಾನು ಗೊತ್ತಿದೆ' ಎಂಬ ಸಾಕ್ಷಿ–ಅನುಭವದಿಂದ ಸಿದ್ಧವಾಗಿದೆ. ಈ ರೀತಿಯ ಅನುಭವ ಇರುವುದರಿಂದಾಗಿಯೇ ಒಂದೇ ಜ್ಞಾನರೂಪವಾದ ಕ್ರಿಯೆಗೆ ಆತ್ಮನೇ ಕರ್ತೃ ಹಾಗೂ ಕರ್ಮವಾಗಿ ಸಿದ್ಧವಾಗುವುದರಿಂದ ಕರ್ತೃ–ಕರ್ಮಭಾವವಿರೋಧವೂ ಇಲ್ಲ. ಆದ್ದರಿಂದ ಸ್ವಾತ್ಮಪ್ರತ್ಯಕ್ಷವು ಎಲ್ಲರಿಗೂ ಇದೆ.

**ಕರ್ತೃಕರ್ಮವಿರೋಧಶ್ಚ ನಿತ್ಯಾನುಭವರೋಧತಃ ।**
**ಕಥಮೇವ ಪದಂ ಗಚ್ಛೇದ್ ವಿರೋಧೋಽದೃಷ್ಟಬಾಧನಮ್ ॥ ೮೮ ॥**

ಯತ್ರ ಅದೃಷ್ಟ–ಬಾಧನಂ=ಪ್ರಮಾಣಬಾಧವು ಅದೃಷ್ಟವಾಗಿದೆಯೋ ಅಲ್ಲಿ ಮಾತ್ರ ವಿರೋಧಃ=ಕರ್ತೃ–ಕರ್ಮಭಾವವಿರೋಧವು ಬರುತ್ತದೆ. ಪ್ರಕೃತದಲ್ಲಿ ನಿತ್ಯಾನುಭವ ರೋಧತಃ=ನಿತ್ಯವಾದ ಸಾಕ್ಷ್ಯನುಭವದ ವಿರೋಧವಿರುವುದರಿಂದ ಕರ್ತೃ–ಕರ್ಮವಿರೋಧಃ=ಒಂದೇ ಕ್ರಿಯೆಯಲ್ಲಿ ಒಬ್ಬನೇ ಆತ್ಮನಿಗೆ ಕರ್ತೃತ್ವ–ಕರ್ಮತ್ವ ರೂಪ ಧರ್ಮಗಳ ವಿರೋಧವು ಕಥಮೇವ ಪದಂ ಗಚ್ಛೇತ್=ಹೇಗೆ ತಾನೇ ಕಾಲಿಟ್ಟೀತು?

ಭಾವಾರ್ಥ— ಅನುಭವದ ವಿರೋಧ ಇದ್ದರೆ ಕರ್ತೃ-ಕರ್ಮ ಒಂದೇ ಆಗುವುದಿಲ್ಲ. 'ನಾನು ನೀರನ್ನು ಕುಡಿಯುತ್ತಿದ್ದೇನೆ' ಎಂಬ ಅನುಭವದಲ್ಲಿ ನೀರು ಕರ್ಮ, 'ನಾನು' ಕರ್ತೃ. ಇವೆರಡು ಬೇರೆ, ಬೇರೆ ಎಂದು ನಮ್ಮ ಅನುಭವ. ಅಂತಹ ಸಂದರ್ಭದಲ್ಲಿ ಕರ್ತೃ-ಕರ್ಮ ಒಂದೇ ಎಂದು ಹೇಳುವುದು ಅನುಭವವಿರುದ್ಧ. ಆದರೆ 'ನನ್ನನ್ನು ನಾನು ತಿಳಿದಿದ್ದೇನೆ' ಎಂಬ ಸಾಕ್ಷ್ಯನುಭವ ಎಲ್ಲರಿಗೂ ಇದೆ. ಇಲ್ಲಿ ಆತ್ಮನೇ ಕರ್ತೃ, ಆತ್ಮನೇ ಕರ್ಮ. ಅಂದರೆ ತಿಳಿಯುವವನೂ ತಿಳಿಯಲ್ಪಡುವವನೂ ಒಂದೇ. ಹೀಗೆ ಅನುಭವ ಇರುವ ಕಾರಣ ಕರ್ತೃತ್ವ ಮತ್ತು ಕರ್ಮತ್ವವನ್ನು ಒಬ್ಬನೇ ಆತ್ಮನಿಗೆ ಹೇಳುವುದೇ ಉಚಿತ. ಬೇರೆ, ಬೇರೆ ಎನ್ನುವುದೇ ಅನುಭವವಿರುದ್ಧ. ಆದ್ದರಿಂದ ಸ್ವಾತ್ಮಪ್ರತ್ಯಕ್ಷ ಎಲ್ಲರಿಗೂ ಇದೆ.

**ಸೋಽಶ್ನುತೇ ಸರ್ವಕಾಮಾಂಶ್ಚ, ಕಾಮಾನ್ನೀ ಕಾಮರೂಪ್ಯಥ ।**
**ಇತ್ಯಾದಿಶ್ರುತಯಶ್ಚೋಕ್ತಮರ್ಥಮೇವ ವದಂತಿ ಹಿ ॥ ೮೯ ॥**

ಅಥ=ಮೋಕ್ಷಪಡೆದ ನಂತರ, 'ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ' 'ಕಾಮಾನ್ನೀ ಕಾಮರೂಪ್ಯನುಸಂಚರನ್' ಇತ್ಯಾದಿ ಶ್ರುತಯಶ್ಚ=ಈ ಮೊದಲಾದ ಶ್ರುತಿಗಳೂ ಉಕ್ತಮರ್ಥಮೇವ=ಹಿಂದೆ ಹೇಳಿರುವಂತೆ ಮುಕ್ತರಿಗೂ ವಿಷಯಭೋಗ ಇದೆ, ಎನ್ನುವ ವಿಷಯವನ್ನೇ ವದಂತಿ ಹಿ=ಹೇಳುತ್ತವೆ.

ಭಾವಾರ್ಥ— ತೈತ್ತಿರೀಯೋಪನಿಷತ್ತಿನ ಬ್ರಹ್ಮವಲ್ಲಿಯ ಆರಂಭದಲ್ಲಿ 'ಬ್ರಹ್ಮವಿದಾಪ್ನೋತಿ ಪರಮ್-ಬ್ರಹ್ಮಜ್ಞಾನಿಯು ಪರಬ್ರಹ್ಮನನ್ನು ಹೊಂದುತ್ತಾನೆ' ಎಂದು ಹೇಳಿ ಅದನ್ನು ಉಪನಿಷತ್ತು ವಿವರಿಸಿದೆ— 'ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ—ಬ್ರಹ್ಮಜ್ಞಾನಿಯು ಚತುರ್ಮುಖನೊಂದಿಗೆ (ಮೋಕ್ಷದಲ್ಲಿ) ತಾನು ಬಯಸಿದ್ದನ್ನೆಲ್ಲ ಅನುಭವಿಸುತ್ತಾನೆ' ಎಂದು. ಇದರಿಂದ ಮುಕ್ತಿಯಲ್ಲಿ ವಿಷಯಭೋಗ ಇದೆ, ಎಂದು ತಿಳಿಯುತ್ತದೆ.

ಇದೇ ಉಪನಿಷತ್ತಿನ ಭೃಗುವಲ್ಲಿಯಲ್ಲಿ— 'ಅಸ್ಮಾಲ್ಲೋಕಾತ್ ಪ್ರೇತ್ಯ...

ಏತಮಾನಂದಮಯಮಾತ್ಮಾನಮುಪಸಂಕ್ರಮ್ಯ । ....ಇಮಾನ್ ಲೋಕಾನ್ ಕಾಮಾನ್ನೀ ಕಾಮರೂಪ್ಯನುಸಂಚರನ್ ।'

ಇಲ್ಲಿಯೂ 'ಕಾಮಾನ್ನೀ=ಬಯಸಿದ ಆಹಾರವುಳ್ಳವನು' ಎಂದು ಮುಕ್ತನನ್ನು ಉಲ್ಲೇಖಿಸಿರುವುದರಿಂದ ಮೋಕ್ಷದಲ್ಲಿ ವಿಷಯಭೋಗ ಇದೆ, ಎಂದು ತಿಳಿಯುತ್ತದೆ.

'ಯತ್ರ ಹಿ ದ್ವೈತಮಿವ ಭವತಿ' ಎಂಬ ಬೃಹದಾರಣ್ಯಕವಾಕ್ಯದಲ್ಲಿ ದ್ವೈತಮಿವ ಎನ್ನುವ ಇವಶಬ್ದದಿಂದ 'ದ್ವೈತವು ವಾಸ್ತವವಲ್ಲ, ದ್ವೈತಾಭಾವವೇ ವಾಸ್ತವ' ಎಂದು ಸೂಚಿಸಲಾಗಿದೆ. 'ಹುಲಿಯಂತಿದೆ' ಎಂದರೆ ವಸ್ತುತಃ ಹುಲಿ ಅಲ್ಲ, ಎಂದು ತಿಳಿಯುವಂತೆ 'ದ್ವೈತಮಿವ' ಎಂದರೂ ದ್ವೈತವು ವಾಸ್ತವವಲ್ಲ, ಎಂದು ಅರ್ಥ. ಆಗ ಆ ವಾಕ್ಯದ ಅರ್ಥ— ವಾಸ್ತವವಾದ ಭೇದವು ಇಲ್ಲದಿದ್ದರೂ ವ್ಯಾವಹಾರಿಕ ಭೇದವು ಇರುವುದರಿಂದಾಗಿ ಸಂಸಾರದಲ್ಲಿ ಜೀವನು ತನಗಿಂತ ಭಿನ್ನವಾದುದನ್ನು ಕಾಣುತ್ತಾನೆ, ಎಂದು. ಇದರಿಂದ ಸಂಸಾರಾವಸ್ಥೆಯಲ್ಲಿ ಕಾಣುವ ದ್ವೈತವು ಅವಾಸ್ತವ, ದ್ವೈತಾಭಾವವೇ ವಾಸ್ತವ, ಎಂದಂತಾಗುತ್ತದೆ. ಈ ಆಕ್ಷೇಪಕ್ಕೆ ಉತ್ತರ ಮುಂದಿದೆ—

**ಅಸ್ವಾತಂತ್ರ್ಯಾದಿವೇತ್ಯುಕ್ತಂ ನ ದ್ವೈತಾಭಾವತಃ ಕ್ವಚಿತ್ ।**
**ಆತ್ಮೈವಾಭೂದಿತಿ ಹ್ಯಸ್ಮಾದವಿಶೇಷಪ್ರಸಂಗತಃ ॥ ೯೦ ॥**

ಅಸ್ವಾತಂತ್ರ್ಯಾತ್ ಇವೇತ್ಯುಕ್ತಂ=ದ್ವೈತದಲ್ಲಿ ಅಂದರೆ ದ್ವಿತೀಯ ವಸ್ತುವಿನಲ್ಲಿ ಜೀವನಿಗೆ ಸ್ವಾತಂತ್ರ್ಯವು ಇಲ್ಲದಿರುವ ಕಾರಣ ಶ್ರುತಿಯಲ್ಲಿ 'ಇವ' ಎನ್ನಲಾಗಿದೆ, ನ ದ್ವೈತಾಭಾವತಃ=ದ್ವಿತೀಯವಸ್ತುವೇ ಇಲ್ಲ, ಎನ್ನುವ ಕಾರಣದಿಂದ ಅಲ್ಲ. ಕ್ವಚಿತ್=ಯಾವುದೇ ಕೋಶದಲ್ಲೂ ಇವಶಬ್ದಕ್ಕೆ ಅಭಾವ ಎನ್ನುವ ಅರ್ಥವಿಲ್ಲ.

ಭಾವಾರ್ಥ— 'ದ್ವೈತಮಿವ ಭವತಿ' ಎಂದರೆ 'ತನ್ನದೆಂಬಂತಿರುವ ದ್ವಿತೀಯವಸ್ತು ಇದ್ದಾಗ' ಎಂದರ್ಥ. ನಾವು ನಮಗಿಂತ ಭಿನ್ನವಾದುದನ್ನು 'ನಮ್ಮದು' ಎನ್ನುವುದು ಸರಿಯಲ್ಲ. ಅದರಲ್ಲಿ ಸ್ವಾತಂತ್ರ್ಯವು ನಮಗಿಲ್ಲ

ದಿರುವಾಗ ನಮ್ಮದು ಎನ್ನುವ ಅಧಿಕಾರವೇ ನಮಗಿಲ್ಲ. ಈ ಅರ್ಥವನ್ನು ಇವಶಬ್ದವು ತಿಳಿಸುತ್ತದೆ. ಅಭಾವ ಎನ್ನುವ ಅರ್ಥವು ಅದಕ್ಕಿಲ್ಲ. ಅಭಾವ ಎನ್ನುವ ಅರ್ಥವು ಅಸಂಗತವೂ ಆಗುತ್ತದೆ—

ಆತ್ಮೈವಾಭೂತ್ ಇತಿ ಅಸ್ಮಾತ್=ಅಭಾವ ಎಂಬ ಅರ್ಥವನ್ನು ಮಾಡಿದಾಗ ಮುಂದಿರುವ 'ಯತ್ರ ತ್ವಸ್ಯ ಸರ್ವಮ್ ಆತ್ಮೈವಾಭೂತ್' ಈ ವಾಕ್ಯದಲ್ಲಿರುವ 'ಆತ್ಮೈವಾಭೂತ್' ಎನ್ನುವುದರಿಂದ ಅವಿಶೇಷಪ್ರಸಂಗತಃ= 'ದ್ವೈತಮಿವ' ಎಂಬುದಕ್ಕೆ ವಿಶೇಷವೇ ಇಲ್ಲದ ಪ್ರಸಂಗವು ಬರುತ್ತದೆ ಯಾದುದರಿಂದಾಗಿಯೂ ಇವಶಬ್ದಕ್ಕೆ ಅಭಾವ ಎಂದು ಅರ್ಥವಲ್ಲ.

ಭಾವಾರ್ಥ— ಇವಶಬ್ದಕ್ಕೆ ಅಭಾವ ಎಂದು ಅರ್ಥವನ್ನು ಮಾಡಿದರೆ 'ದ್ವೈತವು ಇಲ್ಲ' ಎಂದು ಅರ್ಥವಾಗುತ್ತದೆ. 'ಆತ್ಮೈವಾಭೂತ್' ಎನ್ನುವುದಕ್ಕೂ ಆತ್ಮಭಿನ್ನವಾದುದು ಇಲ್ಲ ಎಂದರ್ಥ. ಎರಡಕ್ಕೂ ಒಂದೇ ಅರ್ಥವಾಗುತ್ತದೆ. ಇದರಿಂದ 'ಸಂಸಾರದಲ್ಲಿ ದ್ವೈತವು ಇಲ್ಲದಿರುವುದರಿಂದ ಜೀವನು ಇತರವನ್ನು ನೋಡುತ್ತಾನೆ. ಮೋಕ್ಷದಲ್ಲಿ ದ್ವೈತವು ಇಲ್ಲದಿರುವುದರಿಂದ ಇತರವನ್ನು ನೋಡುವುದಿಲ್ಲ' ಎಂದಂತಾಗುತ್ತದೆ. ಇದು ಪರಸ್ಪರವಿರುದ್ಧ ವಾದುದರಿಂದ ಅಸಂಗತವಾಗುತ್ತದೆ. ಆದ್ದರಿಂದ ಇವಶಬ್ದಕ್ಕೆ ಅಭಾವ, ಎಂದು ಅರ್ಥವಲ್ಲ.

**'ಅಸ್ವಾತಂತ್ರ್ಯೋಪಮಾಭೇದಭೇದೇಷ್ವಿವ ಉದೀರಿತಃ' ।**
**ಶಬ್ದತತ್ವ ಇತಿ ಪ್ರೋಕ್ತಂ, ಮೈತ್ರೇಯ್ಯುಕ್ತೋತ್ತರಂ ಚ ಕಿಮ್ ॥ ೯೧ ॥**

'ಅಸ್ವಾತಂತ್ರ್ಯ–ಉಪಮಾ–ಅಭೇದಭೇದೇಷು ಇವ ಉದೀರಿತಃ= ಅಸ್ವಾತಂತ್ರ್ಯ, ಉಪಮೆ, ಭೇದಾಭೇದ ಈ ಅರ್ಥಗಳಲ್ಲಿ ಇವಶಬ್ದವು ಪ್ರಯೋಗಿಸಲ್ಪಡುತ್ತದೆ.' ಇತಿ=ಹೀಗೆ ಶಬ್ದತತ್ತ್ವೇ ಪ್ರೋಕ್ತಂ=ಹೀಗೆ ಶಬ್ದತತ್ತ್ವ ದಲ್ಲಿ ಹೇಳಲಾಗಿದೆ. (ಆದ್ದರಿಂದ ಇವಶಬ್ದಕ್ಕೆ ಅಸ್ವಾತಂತ್ರ್ಯ ಎಂಬ ಅರ್ಥವು ಪ್ರಮಾಣಸಿದ್ಧವಾಗಿದೆ.)

'ನ ಪ್ರೇತ್ಯ ಸಂಜ್ಞಾಸ್ತಿ' ಎಂಬ ಯಾಜ್ಞವಲ್ಕ್ಯರ ಉಪದೇಶಕ್ಕೆ 'ಮುಕ್ತರಿಗೆ ಜ್ಞಾನ ಇಲ್ಲ, ಎನ್ನುವ ಅರ್ಥವೇ ವಾಸ್ತವವಾದರೆ ಮೈತ್ರೇಯ್ಯುಕ್ತ–ಉತ್ತರಂ ಕಿಂ=ಮೈತ್ರೇಯಿೀ ಆಕ್ಷೇಪಕ್ಕೆ ಯಾಜ್ಞವಲ್ಕ್ಯರ ಉತ್ತರವೇನು?

ಭಾವಾರ್ಥ— ಯಾಜ್ಞವಲ್ಕ್ಯರು 'ನ ಪ್ರೇತ್ಯ ಸಂಜ್ಞಾಸ್ತಿ' ಎಂದಾಗ ಮೈತ್ರೇಯಿೀ ''ಅತ್ರೈವ ಮಾ ಭವಾನ್ ಮೋಹಾಂತಮ್ ಆಪಿಪತ್–ನನಗೆ ನೀವು ಮೋಹವನ್ನು ಉಂಟುಮಾಡಿದ್ದೀರಿ'' ಎಂದಿರುತ್ತಾಳೆ. ಇದಕ್ಕೆ ಯಾಜ್ಞವಲ್ಕ್ಯರು 'ಅವಿನಾಶೀ ವಾ ಅರೇಽಯಮಾತ್ಮಾ ಅನುಚ್ಛಿತ್ತಿಧರ್ಮಾ' ಎಂದು ಉತ್ತರಿಸಿದ್ದಾರೆ. ಮೈತ್ರೇಯಿಯ ಆಕ್ಷೇಪಕ್ಕೆ ಯಾಜ್ಞವಲ್ಕ್ಯರ ಉತ್ತರವು ಸಂಗತವಾಗಬೇಕಾದರೆ ಮೈತ್ರೇಯಿಯ ಆಕ್ಷೇಪದ ಅಭಿಪ್ರಾಯ—'ನೀವು ವಿಜ್ಞಾನಘನಃ' ಎಂದು ಜೀವನು ಜ್ಞಾನರೂಪ ಎಂದು ಹಿಂದೆ ಹೇಳಿದ್ದೀರಿ. ಇಲ್ಲಿ 'ಮೋಕ್ಷದಲ್ಲಿ ಜ್ಞಾನವಿಲ್ಲ' ಎಂದಿದ್ದೀರಿ. ಇವೆರಡೂ ಒಂದಕ್ಕೊಂದು ವಿರುದ್ಧ' ಎಂದು. ಇದಕ್ಕೆ ಯಾಜ್ಞವಲ್ಕ್ಯರ ಉತ್ತರ— 'ನಾನೇನೂ ವಿರುದ್ಧವಾಗಿ ಉಪದೇಶ ಮಾಡಿಲ್ಲ. 'ನ ಪ್ರೇತ್ಯ ಸಂಜ್ಞಾಸ್ತಿ' ಎಂದರೆ ಮುಕ್ತರ ಜ್ಞಾನ ಅಮುಕ್ತರಿಗೆ ಇಲ್ಲ ಎಂದು. ಹೊರತು ಮುಕ್ತರಿಗೆ ಜ್ಞಾನವೇ ಇಲ್ಲವೆಂದು ನನ್ನ ಅಭಿಪ್ರಾಯವಲ್ಲ. ಜ್ಞಾನರೂಪನಾದ ಈ ಆತ್ಮ 'ಅವಿನಾಶೀ'. ಹೀಗೆ ಹೇಳಿದಾಗ ಅಸಾಂಗತ್ಯವಿಲ್ಲ.

ಅಥವಾ, ಮೈತ್ರೇಯಿಯ ಆಕ್ಷೇಪ ಹೀಗೆ— ಮೋಕ್ಷದಲ್ಲಿ ಜ್ಞಾನವೇ ಇಲ್ಲವೆಂದಾದರೆ ಅಜ್ಞಾನದ ಅಂಧಕಾರದಲ್ಲಿ ಮುಳುಗುವ ಈ ಮೋಕ್ಷವು ಪುರುಷಾರ್ಥವೇ ಆಗಲಿಕ್ಕಿಲ್ಲ, ಎಂದು. ಅದಕ್ಕೆ ಯಾಜ್ಞವಲ್ಕ್ಯರ ಉತ್ತರ— ಮೋಕ್ಷದಲ್ಲಿ ಜ್ಞಾನರೂಪನಾದ ಆತ್ಮನಿಗಾಗಲೀ ಅವನ ಆನಂದಾದಿಧರ್ಮಗಳಿಗಾಗಲೀ ನಾಶವಿಲ್ಲ, ಎಂದು. ಈ ಅರ್ಥಕ್ಕೆ ಆಚಾರ್ಯರು ಬೃಹದಾರಣ್ಯಕ ಭಾಷ್ಯದಲ್ಲಿ ಪ್ರಮಾಣವನ್ನೂ ಹೇಳಿದ್ದಾರೆ—

ಸಂಜ್ಞಾನಾಶೋ ಯದಿ ಭವೇತ್ ಕಿಂ ಮುಕ್ತ್ಯಾ ನಃ ಪ್ರಯೋಜನಮ್ ।
ಮೋಹಂ ಮಾಂ ಪ್ರಾಪಯಾಮಾಸ ಭವಾನತ್ರೇತಿ ಚೋದಿತಃ ॥

ಮುಕ್ತನಿಗೆ ಜ್ಞಾನವೇ ಇಲ್ಲ, ಎನ್ನುವ ಯಥಾಶ್ರುತವಾದ ಅರ್ಥವನ್ನು ಯಾಜ್ಞವಲ್ಕ್ಯರ ಮಾತಿಗೆ ಮಾಡಿದರೆ, ಮೈತ್ರೇಯಿಯ ಪ್ರಶ್ನೆಗೆ ಉತ್ತರವೇ ಇಲ್ಲದಾದೀತು. ಯಜ್ಞವಲ್ಕ್ಯರು ವ್ಯಾಘಾತದೋಷವನ್ನಾಗಲೀ ಮುಕ್ತಿಯು ಅಪುರುಷಾರ್ಥವಾದೀತು, ಎನ್ನುವುದನ್ನಾಗಲೀ ಪರಿಹರಿಸಲೇ ಇಲ್ಲವಾದ್ದರಿಂದ.

**ಸುಖಾದಿಧರ್ಮಹಾನೌ ತು ಮುಕ್ತೇಃ ಕಿಂಚ ಪ್ರಯೋಜನಮ್ ।**
**ಯದ್ಯರ್ಥೋ ದುಃಖಹಾನಿಃ ಸ್ಯಾದನರ್ಥಃ ಸುಖನಾಶನಮ್ ॥ ೯೨ ॥**

ಸಾಂಖ್ಯ-ನೈಯಾಯಿಕರು ಹೇಳುವಂತೆ ಸುಖಾದಿಧರ್ಮಹಾನೌ ತು= ಸುಖಾದಿಧರ್ಮಹಾನಿಯೇ ಮೋಕ್ಷವೆಂದಾದಲ್ಲಿ ಮುಕ್ತೇಃ ಪ್ರಯೋಜನಂ ಕಿಂ=ಮೋಕ್ಷಕ್ಕಾಗಿ ಅಧಿಕಾರಿಗೆ ಪ್ರೇರಣೆ ನೀಡುವಂತಹ ಆಕರ್ಷಣೆ ಏನು? (ಮುಕ್ತ್ಯರ್ಥೇ ಪುರುಷಂ ಪ್ರವರ್ತಯತ್ ಕಿಮಪಿ ನಾಸ್ತೀತಿ-ಸುಧಾ.)

ಯದಿ=ಒಂದುವೇಳೆ, ದುಃಖಹಾನಿಃ=ದುಃಖನಾಶರೂಪವಾದ ಮೋಕ್ಷವು ಅರ್ಥಃ=ಅನಿಷ್ಟ ನಿವೃತ್ತಿರೂಪವಾದುದರಿಂದ ಪುರುಷಾರ್ಥವಾಗುವುದಾದಲ್ಲಿ ತರ್ಹಿ=ಆಗ ಸುಖನಾಶನಂ=ಸುಖದ ಹಾನಿಯು ಅನರ್ಥಃ=ಅನಪೇಕ್ಷಿತ ವಾದೀತು.

**ಭಾವಾರ್ಥ—** ಇದುವರೆಗೆ ಸಾಂಖ್ಯಾದಿಗಳು ಹೇಳುವ ಮೋಕ್ಷಕ್ಕೆ ಪ್ರಮಾಣವಿಲ್ಲ, ಎಂದು ಹೇಳಿ ಮುಂದೆ ಆ ಮೋಕ್ಷವು ಪುರುಷಾರ್ಥವೇ ಅಲ್ಲ, ಎಂದು ಹೇಳಲಾಗಿದೆ— ಮೋಕ್ಷದಲ್ಲಿ ಸುಖಾದಿ ಯಾವ ಧರ್ಮಗಳೂ ಇರುವುದಿಲ್ಲ, ಎಂದು ಸಾಂಖ್ಯಾದಿಗಳು ಹೇಳುತ್ತಾರೆ. ಇಂತಹ ಮೋಕ್ಷ ಲಾಭದಿಂದ ಏನು ಪ್ರಯೋಜನ. ಕ್ಲಿಷ್ಟವಾದ ಮೋಕ್ಷಸಾಧನೆಗಳನ್ನು ಅನುಷ್ಠಾನ ಮಾಡುವುದರಿಂದ ಇದ್ದ ಸುಖವನ್ನು ಕಳೆದುಕೊಳ್ಳಲು ಯಾರು ಸಿದ್ಧರಿದ್ದಾರೆ.

**ಆಕ್ಷೇಪ—** ಮೋಕ್ಷದಲ್ಲಿ ಸುಖವಿಲ್ಲದಿದ್ದರೂ ಅನಿಷ್ಟವಾದ ದುಃಖವು ಪರಿಹಾರವಾಗುತ್ತದೆ. ಸಾಂಸಾರಿಕ ದುಃಖವು ಹೋದರೆ ಸಾಕು, ಎಂದು ಬಯಸುವವರಿದ್ದಾರೆ. ಆದ್ದರಿಂದ ಮೋಕ್ಷವು ಪುರುಷಾರ್ಥವಾಗುತ್ತದೆ.

**ಸಮಾಧಾನ—** ಹೀಗೂ ವಾದ ಮಾಡಬಹುದು— ಎಲ್ಲರೂ ಬಯಸುವುದು ಸುಖವನ್ನು. ಅಂತಹ ಸುಖವೇ ಇಲ್ಲವೆಂದಾದಲ್ಲಿ ಮೋಕ್ಷವೇ ಬೇಡ, ಎನ್ನುವವರೂ ಇದ್ದಾರೆ. ಆದ್ದರಿಂದ ಮೋಕ್ಷ ಅಪುರುಷಾರ್ಥ.

**ಆಕ್ಷೇಪ—** ಯಾರಿಗೆ ದುಃಖವೇ ಇರಲಿ ಎನ್ನುವ ಅಪೇಕ್ಷೆ ಇದೆಯೋ ಅಂತಹವನಿಗೆ ಅನಪೇಕ್ಷಿತವಾದುದೇ ಈ ಪ್ರಪಂಚದಲ್ಲಿ ಇಲ್ಲ. ಅನಪೇಕ್ಷಿತವೇ

ಇಲ್ಲದ ಮೇಲೆ ಮುಕ್ತಿ (ಅಂದರೆ ಬಿಡುಗಡೆಯಾದರೂ) ಹೇಗೆ ಇರಲು ಸಾಧ್ಯ? ಅಂತಹವನಿಗೆ ಮೋಕ್ಷವು ಪುರುಷಾರ್ಥವೇ ಅಲ್ಲ. ಆದ್ದರಿಂದ 'ದುಃಖ ಬೇಡ' ಎನ್ನುವವನಿಗೆ ಮಾತ್ರ ಮೋಕ್ಷವು ಪುರುಷಾರ್ಥ.

**ಸಮಾಧಾನ**— 'ದುಃಖ ಬೇಡ' ಎನ್ನುವವನಿಗೂ 'ಸುಖವು ಬೇಕು' ಎನ್ನುವ ಅಪೇಕ್ಷೆಯು ಇರುತ್ತದೆ. ಅಂತಹವನಿಗೆ ಮೋಕ್ಷ ಸಿಕ್ಕರೆ ಬೇಡವಾದ ದುಃಖವು ನಾಶವಾದಂತೆ ಬೇಕಾಗಿರುವ ಸುಖವೂ ನಾಶವಾಗುವುದರಿಂದ ಲಾಭ-ನಷ್ಟಗಳು ಸಮಾನವಾಯಿತು. ಇಂತಹ ಮೋಕ್ಷಕ್ಕಾಗಿ ವಿವೇಕಿಗಳು ಪ್ರಯತ್ನಮಾಡುವುದಿಲ್ಲ.

ಅಸತ್ಯಾನಿ ದುರಂತಾನಿ ಸಮವ್ಯಯಫಲಾನಿ ಚ ।
ಅಶಕ್ಯಾನಿ ಚ ವಸ್ತೂನಿ ನಾರಭೇತ ವಿಚಕ್ಷಣಃ ॥ (ಸುಧಾ)

ವಸ್ತುತಃ ವಿಚಾರಮಾಡಿದರೆ ದುಃಖನಾಶಕ್ಕಿಂತಲೂ ಸುಖನಾಶವೇ ದೊಡ್ಡ ನಷ್ಟ. ಆದ್ದರಿಂದ ಮೋಕ್ಷವಾದರೆ ಲಾಭಕ್ಕಿಂತ ನಷ್ಟವೇ ಹೆಚ್ಚು—

**ತಯೋಶ್ಚ ದುಃಖಹಾನಾದ್ಧಿ ಸುಖನಾಶೋऽಧಿಕೋ ಭವೇತ್ ।**
**ಪ್ರಾಪ್ಯಾಪಿ ದುಃಖಂ ಸುಮಹತ್ ಸುಖಲೇಶಾಪ್ತಯೇ ಜನಃ ।**
**ಯತತೇ ಸುಖಹಾನೌ ಹಿ ಕೋ ಮೋಕ್ಷಾಯ ಯತೇತ್ ಪುಮಾನ್**
**॥ ೯೩ ॥**

ತಯೋಶ್ಚ=ಸುಖ-ದುಃಖನಾಶಗಳ ಮಧ್ಯದಲ್ಲಿ ದುಃಖನಾಶಾತ್= ದುಃಖನಾಶಕ್ಕಿಂತಲೂ ಸುಖನಾಶಃ=ಸುಖದ ನಾಶವು ಅಧಿಕಃ ಭವೇತ್=ಹೆಚ್ಚು ಅನಪೇಕ್ಷಿತವಾಗಿರುತ್ತದೆ. ದುಃಖನಾಶಕ್ಕಿಂತಲೂ ಸುಖನಾಶವೇ ಅಧಿಕ ಹಾನಿ. ಅದಕ್ಕೆ ಯಾರೂ ಸಿದ್ಧರಿರುವುದಿಲ್ಲ. ಸುಖಕ್ಕಿಂತಲೂ ದುಃಖವೇ ಹೆಚ್ಚಾಗಿದ್ದಾಗ ದುಃಖನಾಶವೇ ಹೆಚ್ಚೆನಿಸುತ್ತದೆ, ಎಂದು ಆಕ್ಷೇಪಮಾಡಿದರೆ ಅದಕ್ಕೆ ಸಮಾಧಾನ—

ಜನಃ=ವಾರ್ತಾವಾಹಕರು ಸುಮಹತ್ ದುಃಖಂ ಪ್ರಾಪ್ಯಾಪಿ=ಸುಖಕ್ಕಿಂತಲೂ ಹೆಚ್ಚಿನ ದುಃಖವನ್ನು ಅನುಭವಿಸಿಯೂ ಸುಖಲೇಶಾಪ್ತಯೇ=

ಅಲ್ಪಸುಖದ ಪ್ರಾಪ್ತಿಗಾಗಿ ಯತತೇ=ಪ್ರಯತ್ನಿಸುತ್ತಾರೆ. ಸುಖಹಾನೌ ತು= ಸುಖದ ನಾಶವಾಗುವುದಾದಲ್ಲಿ ಮೋಕ್ಷಾಯ=ಮೋಕ್ಷಕ್ಕಾಗಿ ಕಃ ಪುಮಾನ್= ಯಾವ ವಿವೇಕಿ ತಾನೇ ಯತೇತ್=ಪ್ರಯತ್ನ ಮಾಡಿಯಾನು?

ಭಾವಾರ್ಥ– ಸುಖಕ್ಕಿಂತ ದುಃಖವೇ ಹೆಚ್ಚಾದರೂ ಆ ಅಲ್ಪಸುಖವನ್ನೂ ಬಿಡುವುದಕ್ಕೆ ಜನ ಸಿದ್ಧರಿರುವುದಿಲ್ಲ. ಉದಾಹರಣೆಗೆ— ಹಿಂದೆ ಪತ್ರವನ್ನು ಜನರೇ ಒಂದು ಕಡೆಯಿಂದ ಇನ್ನೊಂದು ಕಡೆಗೆ ಒಯ್ದು ಕೊಡುತ್ತಿದ್ದರು. ರಾಜರು ಕೂಡಲೇ ಸಾಮಂತರಾಜರಿಗೆ ವಿಷಯವನ್ನು ತಿಳಿಸಬೇಕಾದಾಗ ಪತ್ರವಾಹಕರು ಓಡಿಕೊಂಡೇ ಹೋಗಿ ಪತ್ರವನ್ನು ತಲುಪಿಸಬೇಕಾಗುತ್ತಿತ್ತು. ಇಷ್ಟು ಕಷ್ಟಪಟ್ಟರೂ ಅವರಿಗೆ ಸಿಗುತ್ತಿದ್ದ ಸಂಬಳ ಅತ್ಯಲ್ಪ. ಆದರೂ ಅದಕ್ಕಾಗಿ ದೊಡ್ಡ ದುಃಖವನ್ನೂ ಸಹಿಸಿಕೊಂಡು ಕೆಲಸ ಮಾಡುತ್ತಿದ್ದರು. ಹೀಗೆ ದೊಡ್ಡದುಃಖವಿದ್ದರೂ ಜನ ಅಲ್ಪಸುಖವನ್ನು ಬಿಡಲುಸಿದ್ಧರಿರುವುದಿಲ್ಲ. ಇದು ಜನರ ಸ್ವಭಾವ. ಹೀಗಿರುವಾಗ ಮೋಕ್ಷದಿಂದ ಸಾಂಸಾರಿಕದುಃಖ ನಾಶವಾದರೂ ಅದರೊಂದಿಗೆ ಸುಖವೂ ನಾಶವಾಗುವುದಾದಲ್ಲಿ ಅಂತಹ ಸುಖವನ್ನು ಬಿಟ್ಟುಕೊಡಲು ಜನ ಸಿದ್ಧರಿರುವುದಿಲ್ಲ. ದುಃಖವಿದ್ದರೂ ತೊಂದರೆ ಇಲ್ಲ, ಸಾಂಸಾರಿಕಸುಖವೇ ಇರಲಿ, ಮೋಕ್ಷಬೇಡ ಎನ್ನುತ್ತಾರೆ. ಹೀಗಿರುವಾಗ ಯಾವ ಮನುಷ್ಯ ತಾನೇ ಮೋಕ್ಷಕ್ಕಾಗಿ ಪ್ರಯತ್ನಿಸಿಯಾನು?

**ಅಲ್ಪಾಚ್ಚ ಸುಖನಾಶಾದ್ಧಿ ಬಿಭೇತ್ಯತಿತರಾಂ ಜನಃ ।**
**ಮಹಚ್ಚ ದುಃಖಮಾಪ್ನೋತಿ ಸುಖನಾಶನಿವೃತ್ತಯೇ ॥ ೯೪ ॥**

ಜನಃ=ಲೋಕದ ಜನರು ಅಲ್ಪಾಚ್ಚ ಸುಖನಾಶಾತ್=ಸ್ವಲ್ಪ ಸುಖದ ಹಾನಿಯಿಂದಲೂ ಅತಿತರಾಂ ಬಿಭೇತಿ=ತುಂಬಾ ಹೆದರುತ್ತಾರೆ. ಅದರಂತೆ ಸುಖನಾಶನಿವೃತ್ತಯೇ=ಸುಖನಾಶವಾಗದಿರುವುದಕ್ಕಾಗಿ (ಇದ್ದ ಸುಖವು ನಾಶ ವಾಗದಿರಲೆಂದು) ಮಹತ್ ದುಃಖಮ್=ದೊಡ್ಡ ದುಃಖವನ್ನು ಆಪ್ನೋತಿ= ಹೊಂದುತ್ತಾರೆ.

ಭಾವಾರ್ಥ— ಜನ ತಮಗೆ ಸ್ವಲ್ಪವೇ ಸುಖವಿದ್ದರೂ ಅದೂ ಎಲ್ಲಿ ಇಲ್ಲದಾಗುವುದೋ ಎಂದು ಹೆದರುತ್ತಾರೆ. ಅದರಂತೆ ತಮ್ಮ ಅಲ್ಪಸುಖವನ್ನು

ಉಳಿಸಿಕೊಳ್ಳುವುದಕ್ಕಾಗಿ ಸುಖಕ್ಕಿಂತಲೂ ಹೆಚ್ಚು ಕಷ್ಟವನ್ನು ಅನುಭವಿಸುತ್ತಾರೆ. ಹೀಗಿರುವಾಗ ಮೋಕ್ಷಕ್ಕಾಗಿ ಇದ್ದ ಸುಖವನ್ನು ಕಳೆದುಕೊಳ್ಳಲು ಸಿದ್ಧರಾಗುತ್ತಾರೆಯೇ?

**ಆಕ್ಷೇಪ—** ಲೋಕದ ಜನರು ಕಾಮಾಸಕ್ತರು. ಅವರಿಗೆ ನಿಜವಾದ ಸುಖದ ಪರಿಕಲ್ಪನೆಯೇ ಇಲ್ಲ. ಅವರು ವಿಷಮಿಶ್ರಿತಮಿಷ್ಟಾನ್ನವನ್ನೂ ಸುಖದ ಆಸೆಗಾಗಿ ತಿನ್ನುವ ಸ್ವಭಾವದವರು. ಅಂತಹವರು ಮೋಕ್ಷಾಧಿಕಾರಿಗಳೇ ಅಲ್ಲ. ವಿರಾಗಿಗಳೇ ಅಧಿಕಾರಿಗಳು. ಅವರು ಸ್ವರ್ಗಸುಖವನ್ನೂ ಕೆಣಕಿದ ಸರ್ಪದ ಹೆಡೆಯ ನೆರಳಿನಂತೆ ಕಾಣುವವರು. ಅಂತಹವರು ಮೋಕ್ಷಾಧಿಕಾರಿಗಳು. ಇದಕ್ಕೆ ಉತ್ತರ—

**ನಚ ರಾಗನಿಮಿತ್ತಂ ತದ್ ವೀತರಾಗಾ ಅಪಿ ಸ್ಫುಟಮ್ ।**
**ನಾರದಾದ್ಯಾಃ ಸುಖಾರ್ಥಾಯ ಸಹಂತೇ ದುಃಖಮಂಜಸಾ ॥ ೯೫ ॥**

ತತ್=ಅಲ್ಪಸುಖದ ಆಸೆಯಿಂದ ದೊಡ್ಡದುಃಖವನ್ನು ಅನುಭವಿಸುವುದು ರಾಗಾದಿನಿಮಿತ್ತಂ ನ=ಅತಿಲೋಲುಪತೆಯಿಂದ ಎಂದು ಹೇಳಬಾರದು. ಸ್ಫುಟಂ ವೀತರಾಗಾ ಅಪಿ=ವೈರಾಗ್ಯಶೀಲರೆಂದು ಪ್ರಸಿದ್ಧರಾದ ನಾರದಾದ್ಯಾಃ=ನಾರದಾದಿ ಋಷಿಗಳೂ ಸುಖಾರ್ಥಾಯ=ಸುಖಕ್ಕಾಗಿ ಅಂಜಸಾ ದುಃಖಂ=ಹೆಚ್ಚಿನ ದುಃಖವನ್ನು ಸಹಂತೇ=ಸಹಿಸಿಕೊಳ್ಳುತ್ತಾರೆ. ಹೇಗೆಂದರೆ,

**'ಯುದ್ಧಾದಿದರ್ಶನಂ ಯಸ್ಮಾತ್ ಸುದುಃಖೇನಾಪಿ ಕುರ್ವತೇ ।**
**ಯದೇಂದ್ರವೈರೋಚನಯೋರ್ಬ್ರಹ್ಮಾಸ್ತ್ರಾಭ್ಯಾಂ ಸುತಾಪಿತಾಃ ॥ ೯೬ ॥**

**ಅಪಿ ನೈವಾಜಹುರ್ಯುದ್ಧರಸಾತ್ ತೇ ನಾರದಾದಯಃ ।'**
**ಇತಿ ಸ್ಕಾಂದವಚಸ್ತಸ್ಮಾತ್ ಸುಖಾಭಾವಾಯ ಕೋ ಯತೇತ್ ॥ ೯೭ ॥**

ಯಸ್ಮಾತ್=ಏಕೆಂದರೆ, ನಾರದಾದಿಗಳು ಯುದ್ಧಾದಿದರ್ಶನಂ= ಯುದ್ಧಾದಿ ಘೋರಸಂದರ್ಭಗಳ ದರ್ಶನವನ್ನು ದುಃಖೇನಾಪಿ ಕುರ್ವತೇ= ದುಃಖವನ್ನು ಸಹಿಸಿಕೊಂಡು ಮಾಡುತ್ತಾರೆ. ಉದಾಹರಣೆಗೆ— ಯದಾ=

ಯಾವಾಗ ಇಂದ್ರ ಮತ್ತು ಬಲಿ ಇವರಿಗೆ ಯುದ್ಧವಾದಾಗ ಇಂದ್ರ-ವೈರೋಚನಯೋಃ=ದೇವೇಂದ್ರ ಮತ್ತು ಬಲಿ ಇವರ ಬ್ರಹ್ಮಾಸ್ತ್ರಾಭ್ಯಾಂ=ಬ್ರಹ್ಮಾಸ್ತ್ರಗಳಿಂದ ಸುತಾಪಿತಾಃ=ಅತ್ಯಂತ ತೊಂದರೆಗೊಳಗಾದ ತೇ ನಾರದಾದಯಃ=ನಾರದಾದಿ ಋಷಿಗಳು ಯುದ್ಧರಸಾತ್=ಯುದ್ಧದರ್ಶನದಿಂದಾಗುವ ಸುಖದ ಸಲುವಾಗಿ ನೈವಾಜಹುಃ=ಯುದ್ಧದರ್ಶನವನ್ನು ಬಿಡಲಿಲ್ಲ, ಇತಿ ಸ್ಕಾಂದವಚಃ=ಹೀಗೆ ಸ್ಕಾಂದಪುರಾಣದ ವಚನವಿದೆ. ತಸ್ಮಾತ್=ಆದ್ದರಿಂದ ಸುಖಾಭಾವಾಯ=ಸುಖನಾಶಕ್ಕಾಗಿ ಕೋ ಯತೇತ್?=ಯಾರು ತಾನೇ ಪ್ರಯತ್ನಿಸಿಯಾನು?

**ಭಾವಾರ್ಥ—** ವಿರಾಗಿಗಳು ಮೋಕ್ಷಕ್ಕೆ ಅಧಿಕಾರಿಗಳು ಎಂದರೆ, ಸರ್ವಥಾ 'ರಾಗ' ಇಲ್ಲದವರು ಅಧಿಕಾರಿಗಳು ಎನ್ನುವಂತಿಲ್ಲ. ಮೋಕ್ಷಾರ್ಥಿಗಳಾದವರಿಗೂ ಸುಖರಾಗ ಇದ್ದೇ ಇರುತ್ತದೆ. ರಾಗಿಗಳಿಗೆ ಮುಕ್ತಿ ಹೇಗೆ? ಮೋಕ್ಷಕ್ಕೆ ವೈರಾಗ್ಯವೇ ಬೇಕಲ್ಲವೇ? ಹಾಗಾದರೆ ದುಃಖದ್ವೇಷಿಗಳಿಗೆ ಮೋಕ್ಷ ಹೇಗೆ? ಎಂದೂ ಕೇಳಬೇಕಾಗುತ್ತದೆ. ದ್ವೇಷ ಎಂಬ ದುರ್ಗುಣವುಳ್ಳವರಿಗೆ ಮೋಕ್ಷವಾಗಬಾರದಲ್ಲವೆ? ಇದಕ್ಕೆ ಹೀಗೆ ಸಮಾಧಾನ ಹೇಳಬೇಕು— ಸಜ್ಜನ ದ್ವೇಷ ದೋಷ. ದುಃಖದ್ವೇಷ ದೋಷವಲ್ಲ, ಎಂದು. ಇದೇ ಉತ್ತರ ರಾಗಕ್ಕೂ ಅನ್ವಯಿಸುತ್ತದೆ—ವಿಷಯರಾಗ ದೋಷ; ಸುಖರಾಗ, ದೇವರಲ್ಲಿ ಅನುರಾಗ ಗುಣ. ಅದು ಮೋಕ್ಷಕ್ಕೆ ಕಾರಣ, ಪ್ರತಿಬಂಧಕವಲ್ಲ.

ಆದ್ದರಿಂದ ವಿಷಯಸುಖದ ಉತ್ಕಟೇಚ್ಛೇ ಇಲ್ಲದವರು ವಿರಾಗಿಗಳು. ಅಂತಹ ನಾರದಾದಿಗಳೂ ಅಲ್ಪಸುಖಕ್ಕಾಗಿ ದೊಡ್ಡದುಃಖವನ್ನು ಸಹಿಸಿಕೊಂಡಿದ್ದಾರೆ. ಆದ್ದರಿಂದ ಅಲ್ಪಸುಖನಾಶವೂ ಪುರುಷಾರ್ಥವಲ್ಲ.

**ವಿಮತೋ ದುಃಖಯುಗ್ ಯಸ್ಮಾಚ್ಚೇತನಃ ಸನ್ ಸುಖೋಜ್ಝಿತಃ ।**
**ಪ್ರತಿಪನ್ನೋ ಯಥೇತ್ಯೇವ ಚಾನುಮಾ ಕೇನ ವಾರ್ಯತೇ ॥ ೯೮ ॥**

''ವಿಮತಃ=ಮುಕ್ತನೆಂದು ಸಾಂಖ್ಯಾದಿಗಳು ಒಪ್ಪಿರುವ ವ್ಯಕ್ತಿಯು ದುಃಖಯುಕ್ ಏವ=ದುಃಖವುಳ್ಳವನೇ ಆಗಿರುತ್ತಾನೆ, ಯಸ್ಮಾತ್=ಯಾವ ಕಾರಣದಿಂದ ಚೇತನಃ ಸನ್ ಸುಖೋಜ್ಝಿತಃ=ಚೇತನನಾದರೂ ಸುಖವಿಲ್ಲ

ದಿರುವುದರಿಂದಾಗಿ, ಯಥಾ ಪ್ರತಿಪನ್ನಃ=ಸಂಪ್ರತಿಪನ್ನನಾದ ನರಕದಲ್ಲಿರುವ ಚೇತನನಂತೆ.'' ಇತ್ಯೇವ ಚ ಅನುಮಾ=ಈ ರೀತಿಯಾದ ಅನುಮಾನವು ಕೇನ ವಾರ್ಯತೇ=ಯಾರಿಂದ ತಡೆಯಲ್ಪಟ್ಟೀತು?

ಭಾವಾರ್ಥ— ಸಾಂಖ್ಯಾದಿಗಳು ಮೋಕ್ಷದಲ್ಲಿ ದುಃಖವಿಲ್ಲ, ಎಂದು ಹೇಳುತ್ತಾರೆ. ಅದನ್ನು ಒಪ್ಪಿಕೊಂಡು ಇದುವರೆಗೆ ದೋಷವನ್ನು ಹೇಳಲಾಗಿದೆ. ವಸ್ತುತಃ ಸುಖವಿಲ್ಲದ ಮೋಕ್ಷದಲ್ಲಿ ದುಃಖವೇ ಇರಬೇಕಾಗುತ್ತದೆ. ಏಕೆಂದರೆ, ಚೇತನರೆಂದಾದಮೇಲೆ ಸುಖ-ದುಃಖಗಳಲ್ಲಿ ಒಂದಲ್ಲ ಒಂದು ಇರಲೇ ಬೇಕು. ಮೋಕ್ಷದಲ್ಲಿ ಸುಖವಿಲ್ಲವೆಂದಾದರೆ ನರಕದಲ್ಲಿರುವಂತೆ, ದುಃಖ ವಾದರೂ ಇರಬೇಕಾಗುತ್ತದೆ. ಹೀಗೆ ಇಲ್ಲಿ ಬಾಧಕತರ್ಕವನ್ನು ಹೇಳ ಲಾಗಿದೆ— 'ಯದಿ ಮುಕ್ತಃ ಸುಖೀ ನ ಸ್ಯಾತ್ ತರ್ಹಿ ದುಃಖೀ ಅಪಿ ನ ಸ್ಯಾತ್'' ಎಂದು.

**ಸರ್ವಶ್ರುತಿಪುರಾಣೇಷು ಸುಖಭಾವೋಕ್ತಿತಸ್ತಥಾ ।**
**ಮುಕ್ತೌ ನ ಗ್ರಾಹ್ಯಮೇವೈತತ್ ಸುಖಾಭಾವಮತಂ ಬುಧೈಃ ॥ ೯೯ ॥**

ತಥಾ=ಹಾಗೆಯೇ ಸರ್ವಶ್ರುತಿಪುರಾಣೇಷು=ಎಲ್ಲಾ ವೇದಗಳಲ್ಲೂ ಪುರಾಣಗಳಲ್ಲೂ ಸುಖಭಾವೋಕ್ತಿತಃ=ಸುಖ ಇದೆ ಎಂದಿರುವುದರಿಂದ ಮುಕ್ತೌ ಏತತ್ ಸುಖಾಭಾವಮತಂ=ಮೋಕ್ಷದಲ್ಲಿ ಸುಖವಿಲ್ಲ ಎನ್ನುವ ಮತವು ಬುಧೈಃ=ಜ್ಞಾನಿಗಳಿಂದ ನ ಗ್ರಾಹ್ಯಂ=ಗ್ರಾಹ್ಯವಲ್ಲ. ಅಂತಹ ಶ್ರುತಿಗಳು—

**'ಸೋऽನಾನಂದಾದ್ ವಿಮುಕ್ತಃ ಸನ್ನಾನಂದೀಭವತಿ ಸ್ಫುಟಮ್'॥೧೦೦॥**

**'ನಿರ್ಗುಣೇ ಬ್ರಹ್ಮಣಿ ಮಯಿ ಧಾರಯನ್ ವಿಶದಂ ಮನಃ' ।**
**'ಪರಮಾನಂದಮಾಪ್ನೋತಿ ಯತ್ರ ಕಾಮೋऽವಸೀಯತೇ' ॥ ೧೦೧ ॥**

**'ನ ವಿಷ್ಣುಸದೃಶಂ ದೈವಂ ನ ಮೋಕ್ಷಸದೃಶಂ ಸುಖಮ್ ।**
**ನ ವೇದಸದೃಶಂ ವಾಕ್ಯಂ ನ ವರ್ಣೋಂ(ರ್ಣೋऽ) ಕಾರಸಂಮಿತಃ'**
**॥ ೧೦೨ ॥**

**‘ಯತ್ರಾನಂದಾಶ್ಚ ಮೋದಾಶ್ಚ ಮುದಃ ಪ್ರಮುದ ಆಸತೇ ।**
**ಕಾಮಸ್ಯ ಯತ್ರಾಪ್ತಾಃ ಕಾಮಾಸ್ತತ್ರ ಮಾಮಮೃತಂ ಕೃಧಿ’ ॥ ೧೦೩ ॥**

(1) ‘ಸೋಽನಾನಂದಾತ್ ವಿಮುಕ್ತಃ ಸನ್ ಆನಂದೀ ಭವತಿ॥’’ ಸಾಧಕನಾದ ಬ್ರಹ್ಮಜ್ಞಾನಿಯು ಅನಾನಂದಾತ್=ದುಃಖದಿಂದ ವಿಮುಕ್ತಃ=ಬಿಡುಗಡೆ ಹೊಂದಿದವನಾಗಿ ಆನಂದೀಭವತಿ=ಆನಂದವುಳ್ಳವನಾಗುತ್ತಾನೆ.

(2) ‘ನಿರ್ಗುಣೇ’ ಎನ್ನುವುದು ಭಾಗವತಶ್ಲೋಕ. ‘ನಿರ್ಗುಣೇ ಬ್ರಹ್ಮಣಿ ಮಯಿ=ಪ್ರಾಕೃತಗುಣರಹಿತಬ್ರಹ್ಮನಾದ ನನ್ನಲ್ಲಿ ವಿಶದಂ ಮನಃ= ಶುದ್ಧಮನಸ್ಸನ್ನು ಧಾರಯನ್=ಏಕಾಗ್ರಗೊಳಿಸಿ ಯತ್ರ=ಯಾವಲೋಕದಲ್ಲಿ ಕಾಮಃ=ಇಚ್ಛೆಯು ಅವಸೀಯತೇ=ಪೂರ್ಣಗೊಳ್ಳುವುದೋ ಆ ಲೋಕದಲ್ಲಿ ಪರಮಾನಂದಮ್ ಆಪ್ನೋತಿ=ಪೂರ್ಣಾನಂದವನ್ನು ಪಡೆಯುತ್ತಾನೆ.

(3) ವಿಷ್ಣುವಿಗೆ ಸಮರಾದ ದೇವರಿಲ್ಲ, ಮೋಕ್ಷಕ್ಕೆ ಸಮವಾದ ಸುಖವಿಲ್ಲ, ವೇದಕ್ಕೆ ಸಮಾನವಾದ ಮಾತು ಇನ್ನೊಂದಿಲ್ಲ. ಓಂಕಾರಕ್ಕೆ ಸಮಾನವಾದ ಅಕ್ಷರವಿಲ್ಲ.

(4) ಯತ್ರ=ಯಾವ ಲೋಕದಲ್ಲಿ ಆನಂದಾಶ್ಚ=ಸ್ವರೂಪಸುಖ ಮೋದಾಃ= ಪ್ರಿಯರ ದರ್ಶನದಿಂದಾಗುವ ಸುಖ ಮುದಃ=ಅಪ್ರಕೃಷ್ಟವಿಷಯಾನುಭವ ಜನ್ಯವಾದ ಸುಖ, ಪ್ರಮುದಃ=ಪ್ರಕೃಷ್ಟವಿಷಯಾನುಭವಜನ್ಯವಾದ ಸುಖ, ಇವೆಲ್ಲವೂ ಆಸತೇ=ಇರುವವೋ ಯತ್ರ=ಎಲ್ಲಿ ಕಾಮಸ್ಯ ಕಾಮಾಃ=ಇಚ್ಛೆಯ ವಿಷಯಗಳು ಆಪ್ತಾಃ=ಹೊಂದಲ್ಪಡುವವೋ (ಬಯಸಿದ್ದೆಲ್ಲವೂ ಕೈಗೂಡುವುದೋ) ತತ್ರ=ಅಂತಹ ಲೋಕದಲ್ಲಿ ಮಾಂ=ನನ್ನನ್ನು ಅಮೃತಂ ಕೃಧಿ=ಮುಕ್ತನನ್ನಾಗಿಸು. ಸಾಧಕನು ವಾಯುದೇವರನ್ನು ಕುರಿತು ಮಾಡುವ ಈ ಪ್ರಾರ್ಥನೆ ವೇದದಲ್ಲಿದೆ.

**ಇತಿ ಶ್ರುತಿಪುರಾಣಾನಿ ತತ್ರತತ್ರ ವದಂತಿ ಹಿ ।**
**ಅತೋ ಮೋಕ್ಷೇ ಸುಖಾಭಾವ ಇತಿ ಯತ್ಕಿಂಚಿದೇವ ಹಿ ॥ ೧೦೪ ॥**

ಇತಿ=ಹೀಗೆ ಶ್ರುತಿ–ಪುರಾಣಾನಿ=ವೇದ ಮತ್ತು ಪುರಾಣಗಳು ತತ್ರ

ತತ್ರ=ಅಲ್ಲಲ್ಲಿ ವದಂತಿ ಹಿ=ಹೇಳುತ್ತವೆ. ಅತಃ=ಆದ್ದರಿಂದ ಮೋಕ್ಷೇ ಸುಖಾಭಾವ=ಇತಿ ಮೋಕ್ಷದಲ್ಲಿ ಸುಖವಿಲ್ಲ ಎನ್ನುವುದು ಯತ್ಕಿಂಚಿದೇವ=ಉಪೇಕ್ಷಣೀಯವಾದುದು.

**ಶಿರಃಕರಾದ್ಯಭಾವಶ್ಚ ನ ಮುಕ್ತಸ್ಯ ಭವೇತ್ ಕ್ವಚಿತ್ ।**
**ಶ್ರುತಯಶ್ಚ ಪುರಾಣಾನಿ ಮಾನಮತ್ರ ಬಹೂನಿ ಚ ॥ ೧೦೫ ॥**

ಮುಕ್ತಸ್ಯ=ಮುಕ್ತಜೀವನಿಗೆ ಶಿರಃಪಾಣ್ಯಾದ್ಯಭಾವಃ=ತಲೆ–ಕೈ–ಕಾಲು ಮೊದಲಾದ ಅವಯವಗಳೇ ಇಲ್ಲದಿರುವುದು ಕ್ವಚಿತ್=ಎಂದೂ ನ ಭವೇತ್=ಆಗಲಾರದು. ಅತ್ರ ಈ ವಿಷಯದಲ್ಲಿ ಬಹೂನಿ=ಅನೇಕ ಶ್ರುತಯಶ್ಚ ಪುರಾಣಾನಿ ಚ ಮಾನಂ=ಶ್ರುತಿ–ಪುರಾಣಗಳು ಪ್ರಮಾಣಗಳು.

ಭಾವಾರ್ಥ— ಸಾಂಖ್ಯಾದಿಗಳು ಮೋಕ್ಷದಲ್ಲಿ ಶರೀರ–ಕೈ–ಕಾಲುಗಳೇ ಇಲ್ಲ. ಆದ್ದರಿಂದ ಸುಖವಿಲ್ಲ ಎನ್ನುತ್ತಾರೆ. ಆದರೆ ಕೈ–ಕಾಲು–ಇಂದ್ರಿಯಗಳು ವಿಷಯಪದಾರ್ಥಗಳ ಅನುಭವಕ್ಕೆ ಕಾರಣಗಳು. ಇಷ್ಟವಿಷಯಾನುಭವದಿಂದ ಸುಖವಾಗುತ್ತದೆ. ಇದು ವೈಷಯಿಕ ವೃತ್ತಿ ಸುಖ. ಮೋಕ್ಷದಲ್ಲಿ ಸ್ವರೂಪಾನಂದದ ಅನುಭವ ಇರುವುದು. ಅದಕ್ಕಾಗಿ ಇಂದ್ರಿಯಗಳ ಅಗತ್ಯವಿಲ್ಲ.

ಅಲ್ಲದೆ, ಮೋಕ್ಷದಲ್ಲೂ ಶುದ್ಧಪ್ರಕೃತಿನಿರ್ಮಿತವಾದ ಶರೀರವೂ ಇಂದ್ರಿಯಗಳೂ ಇರುತ್ತವೆ. ಶ್ರುತಿ–ಪುರಾಣಗಳಿಂದ ಅದು ತಿಳಿಯುತ್ತದೆ. ಆದ್ದರಿಂದ ಶರೀರಾದಿಗಳೇ ಇಲ್ಲ ಎನ್ನುವ ವಾದ ಕ್ಷುಲ್ಲಕ. ಮುಂದೆ ಮುಕ್ತರಿಗೂ ಶರೀರವಿದೆ ಎನ್ನುವ ಪುರಾಣವಾಕ್ಯಗಳನ್ನು ಉದಾಹರಿಸಲಾಗಿದೆ—

**'ನ ವರ್ತತೇ ಯತ್ರ ರಜಸ್ತಮಸ್ತಯೋಃ**
**ಸತ್ತ್ವಂ ಚ ಮಿಶ್ರಂ ನಚ ಕಾಲವಿಕ್ರಮಃ ।**
**ನ ಯತ್ರ ಮಾಯಾ ಕಿಮುತಾಪರೇ ಹರೇ-**
**ರನುವ್ರತಾ ಯತ್ರ ಸುರಾಸುರಾರ್ಚಿತಾಃ ॥ ೧೦೬ ॥**

**ಶ್ಯಾಮಾವದಾತಾಃ ಶತಪತ್ರಲೋಚನಾಃ**
**ಪಿಶಂಗವಸ್ತ್ರಾಃ ಸುರುಚಃ ಸುಪೇಶಸಃ ।**

ಸರ್ವೇ ಚತುರ್ಬಾಹವ ಉನ್ಮಿಷನ್ಮಣಿ-
ಪ್ರವೇಕನಿಷ್ಕಾಭರಣಾಃ ಸುವರ್ಚಸಃ ॥ ೧೦೭ ॥

ಪ್ರವಾಳವೈಡೂರ್ಯಮೃಣಾಳವರ್ಚಸಾಂ
ಪರಿಸ್ಫುರತ್ಕುಂಡಲಮೌಲಿಮಾಲಿನಾಮ್ ।
ಭ್ರಾಜಿಷ್ಣುಭಿರ್ಯಃ ಪರಿತೋ ವಿರಾಜತೇ
ಲಸದ್ವಿಮಾನಾವಲಿಭಿರ್ಮಹಾತ್ಮನಾಮ್ ॥ ೧೦೮ ॥

ವಿದ್ಯೋತಮಾನಪ್ರಮದೋತ್ತಮಾಭಿಃ
ಸವಿದ್ಯುದಭ್ರಾವಲಿಭಿರ್ಯಥಾ ನಭಃ ।
ಶ್ರೀರ್ಯತ್ರ ರೂಪಿಣ್ಯುರುಗಾಯಪಾದಯೋಃ
ಕರೋತಿ ಮಾನಂ ಬಹುಧಾ ವಿಭೂತಿಭಿಃ' ॥ ೧೦೯ ॥

'ಋಚಾಂ ತ್ವಃ ಪೋಷಮಾಸ್ತೇ ಪುಪುಷ್ವಾನ್
ಗಾಯತ್ರಂ ತ್ವೋ ಗಾಯತಿ ಶಕ್ವರೀಷು ।
ಬ್ರಹ್ಮಾ ತ್ವೋ ವದತಿ ಜಾತವಿದ್ಯಾಂ
ಯಜ್ಞಸ್ಯ ಮಾತ್ರಾಂ ವಿಮಿಮೀತ ಉ ತ್ವಃ' ॥ ೧೧೦ ॥

ಇವು ಭಾಗವತದ್ವಿತೀಯಸ್ಕಂಧದ ಒಂಭತ್ತನೆಯ ಅಧ್ಯಾಯದಲ್ಲಿ ಬಂದಿರುವ ಶ್ಲೋಕಗಳು. ಬ್ರಹ್ಮದೇವರ ತಪಸ್ಸಿಗೆ ಮೆಚ್ಚಿದ ಭಗವಂತ ತನ್ನ ಶ್ವೇತದ್ವೀಪಧಾಮದ ದರ್ಶನವನ್ನು ಮಾಡಿಸಿದ. ಆಗ ಬ್ರಹ್ಮದೇವರು ಕಂಡ ಶ್ವೇತದ್ವೀಪದ ದೃಶ್ಯವನ್ನು ಇಲ್ಲಿ ವರ್ಣಿಸಲಾಗಿದೆ. ಅದರ ತಾತ್ಪರ್ಯ ಹೀಗೆ—

ಶ್ವೇತದ್ವೀಪದಲ್ಲಿ ರಜೋಗುಣವಾಗಲೀ ತಮೋಗುಣವಾಗಲೀ ಅವೆರಡರಿಂದ ಮಿಶ್ರಿತವಾದ ಸತ್ವಗುಣವಾಗಲೀ ಇಲ್ಲ. ಕಾಲದ ಪ್ರಭಾವವೂ ಇಲ್ಲ. ಅಲ್ಲಿ ಮಾಯಾಶಬ್ದಿತವಾದ ಪ್ರಕೃತಿಯೇ ಇಲ್ಲವೆಂದಾಗ ಮಹದಾದಿ ಪ್ರಾಕೃತವಸ್ತುಗಳು (ಅಪರೇ) ಸುತರಾಂ ಇಲ್ಲ. ಅಲ್ಲಿ ದೇವತೆಗಳು ಮತ್ತು ಸಾತ್ವಿಕರಾದ ಅಸುರರು ಇವರುಗಳಿಂದ ಪ್ರಶಂಸೆಗೆ ಪಾತ್ರರಾದ ವಿಷ್ಣುಭಕ್ತರೇ ಇರುತ್ತಾರೆ. ।।ಶ್ಲೋಕ 10।।

ಸತ್ವಾದಿಗುಣಗಳು ಬ್ರಹ್ಮಾಂಡವನ್ನು ವ್ಯಾಪಿಸಿವೆ. ಆದ್ದರಿಂದ ಬ್ರಹ್ಮಾಂಡದ ಒಳಗೆ ಸೇರಿರುವ ಶ್ವೇತದ್ವೀಪದಲ್ಲೂ ಪ್ರಕೃತಿ ವಿಕಾರವಾದ ಸತ್ವಾದಿಗಳಿದ್ದರೂ ಅವುಗಳು ಬಂಧಕವಾಗಿ ಇಲ್ಲ ಎಂದರ್ಥ. (ರಜಃಪ್ರಭೃತೀನಾಮ್ ಅವೃತ್ತಿರ್ನಾಮ ಬಂಧಕತಯಾ ವ್ಯಾಪಾರಾಭಾವಃ- ಸುಧಾ.)

ಅಲ್ಲಿರುವ ಮುಕ್ತರು-ನಿರ್ಮಲವಾದವರು, ನೀಲವರ್ಣದವರು, ಕಮಲದ ದಳದಂತಿವೆ ಅವರ ಕಣ್ಣುಗಳು. ಪೀತಾಂಬರಧಾರಿಗಳು, ನಿರ್ಮಲ ಪ್ರಕಾಶ, ಆಕರ್ಷಕರೂಪ, ಎಲ್ಲರಿಗೂ ನಾಲ್ಕು ಕೈಗಳು, ಕಿರಣಸೂಸುವ ಶ್ರೇಷ್ಠವಾದ ಹಾರ-ಆಭರಣಗಳನ್ನು ಧರಿಸಿದ್ದಾರೆ. (ನಿಷ್ಕಶಬ್ದೋ ಹಾರಪರಃ- ಶೇ.ವಾ.ಚಂ) ಒಳ್ಳೆಯ ಕಾಂತಿಯುಕ್ತರು. ।।ಶ್ಲೋ.11।।

ಪ್ರವಾಲದಂತೆ ಅಂದರೆ ಚಿಗುರಿನಂತೆ, ವಿದ್ರುಮದಂತೆ ಅಂದರೆ ಹವಳದಂತೆ, ಮೃಣಾಲದಂತೆ ಅಂದರೆ ಕಮಲದ ದಿಂಡಿನಂತೆ ಒಬ್ಬೊಬ್ಬರದು ಒಂದೊಂದುವಿಧದ ಮೈಬಣ್ಣ. ಅವರ ಕುಂಡಲ-ಕಿರೀಟ-ಮಾಲೆಗಳು ಮಿಂಚುತ್ತಿವೆ. ಅಂತಹ ಮಹಾತ್ಮರ ವಿಮಾನಗಳು ಮಿಂಚಿನಿಂದ ಕೂಡಿದ ಮೋಡಮುಸುಕಿದ ಆಗಸದಂತೆ ಕಾಣುತ್ತವೆ. ಆ ವಿಮಾನಗಳಲ್ಲಿ ಉತ್ತಮ ಸ್ತ್ರೀಯರೂ ಇದ್ದಾರೆ. ಆ ಲೋಕದಲ್ಲಿ ಲಕ್ಷ್ಮೀದೇವಿಯು ಅನೇಕರೂಪಗಳಿಂದ ಭಗವಂತನ ಸೇವೆಯನ್ನು ಮಾಡುತ್ತಿದ್ದಾಳೆ. ।।ಶ್ಲೋ.12,13।।

(2) ''ಋಚಾಂ ತ್ವಃ'' ಎಂಬುದು ಋಗ್ವೇದ ಮಂತ್ರ. ಇದರ ಅರ್ಥವನ್ನು ಪೃಥಗಧಿಕರಣದಲ್ಲಿ (2.3.14) ಕೊಡಲಾಗಿದೆ.

**ಕಾಮಾನ್ನರೂಪೀ ಚರತೀತಿ ಪೂರ್ವ-**
**ಶ್ರುತ್ಯಾ ಪುರಾಣೋಕ್ತಿಭಿರಪ್ಯದೋಷಃ ।**
**ದೇಹಃ ಸ್ವರೂಪಾತ್ಮಕ ಏವ ತೇಷಾಂ**
**ಮುಕ್ತಿಂ ಗತಾನಾಮಪಿ ಚೇಯತೇ ಹಿ** ।। ೧೧೧ ।।

ಕಾಮಾನ್ನರೂಪೀ ಚರತಿ=ತನಗಿಷ್ಟಬಂದ ಆಹಾರ-ರೂಪಗಳಿಂದ ಮುಕ್ತನು ಸಂಚರಿಸುತ್ತಾನೆ, ಎನ್ನುವ ''ಕಾಮಾನ್ನೀ ಕಾಮರೂಪ್ಯನುಸಂಚರನ್'' ಎಂಬ ಶ್ರುತಿಯೂ ಮೋಕ್ಷದಲ್ಲಿ ಶರೀರವಿದೆ, ಎನ್ನಲು ಪ್ರಮಾಣವಾಗುತ್ತದೆ.

ಇತಿ ಪೂರ್ವಶ್ರುತ್ಯಾ=ಇವೇ ಮೊದಲಾದ ಶ್ರುತಿಯಿಂದ ಪುರಾಣೋಕ್ತಿಭಿರಪಿ=ಪುರಾಣದ ಮಾತುಗಳಿಂದಲೂ ದೇಹವು ಸಿದ್ಧವಾಗುವುದರಿಂದಲೂ ಅದೋಷಃ=ಶರೀರವಿರುವುದು ಮುಕ್ತನಿಗೆ ದೋಷಹೇತುವಲ್ಲ. ಏಕೆಂದರೆ, ಮುಕ್ತಿಂಗತಾನಾಮಪಿ=ಮೋಕ್ಷವನ್ನು ಹೊಂದಿದವರಿಗೂ ತೇಷಾಂ=ಮುಕ್ತರ ಸ್ವರೂಪಾತ್ಮಕ ಏವ ದೇಹಃ=ಅವರ ಸ್ವರೂಪಭೂತವಾದ ದೇಹವೇ ಆಗಿದೆ.

**ಭಾವಾರ್ಥ—** ಹಿಂದೆ ಹೇಳಿರುವ ಶ್ರುತಿ–ಸ್ಮೃತಿಗಳಲ್ಲಿ ಮುಕ್ತರ ದೇಹದ ವರ್ಣನೆಯೂ ಇದೆ, ಅಲ್ಲಿ ಪ್ರಕೃತ್ಯಾದಿಗಳ ಪ್ರಭಾವ ಇಲ್ಲವೆಂದೂ ಇದೆ. ಇದರಿಂದ ಮುಕ್ತರ ದೇಹವು ಅಪ್ರಾಕೃತವಾದ ಚೈತನ್ಯಮಯದೇಹ, ಎಂದು ತಿಳಿಯುತ್ತದೆ.

ಮುಕ್ತರಿಗೆ ದೇಹವಿದೆ ಎನ್ನುವಲ್ಲಿ ಅನುಮಾನಪ್ರಮಾಣವೂ ಇದೆ—

**ಶಿರಃಕರಾದ್ಯೈರಪಿ ಮುಕ್ತಿಭಾಜೋ**
**ಯುಕ್ತಾ ಯತಸ್ತೇ ಪುರುಷಾ ಇದಾನೀಮ್ ।**
**ಯಥೇತಿಪೂರ್ವಾ ಅನುಮಾಶ್ಚ ಜೀವ-**
**ಸ್ವರೂಪಮಂಗಾದಿಯುಗಾಪಯಂತಿ** ॥ ೧೧೨ ॥

''ಮುಕ್ತಿಭಾಜಃ=ಮುಕ್ತಿಪಡೆದವರು ಶಿರಃಕರಾದ್ಯೈರಪಿ ಯುಕ್ತಾಃ= ತಲೆ–ಕೈ ಮೊದಲಾದ ಅಂಗಗಳಿಂದ ಕೂಡಿರುತ್ತಾರೆ, ಯತಃ ತೇ ಪುರುಷಾಃ= ಏಕೆಂದರೆ, ಅವರೂ ಆತ್ಮರಾಗಿದ್ದಾರೆ. ಇದಾನೀಂ ಯಥಾ=ಅಮುಕ್ತಾವಸ್ಥೆಯಲ್ಲಿ ಹೇಗೋ ಹಾಗೆ'' ಇತಿ ಪೂರ್ವಾಃ=ಇದೇ ಮೊದಲಾದ ಅನುಮಾಶ್ಚ= ಅನುಮಾನಗಳೂ ಜೀವಸ್ವರೂಪಂ=ಮುಕ್ತಜೀವರ ಸ್ವರೂಪ ಭೂತವಾದ ಅಂಗಾದಿಕಂ=ಶರೀರ–ಇಂದ್ರಿಯಗಳನ್ನು ಅವಯಂತಿ=ತಿಳಿಸುತ್ತವೆ.

**ಭಾವಾರ್ಥ—** ನಾವು ಆತ್ಮರಾದುದರಿಂದ ನಮಗೆ ಶರೀರವಿರುವಂತೆ ಮುಕ್ತರೂ ಆತ್ಮರೇ ಆದುದರಿಂದ ಅವರಿಗೂ ಶರೀರವಿದೆ, ಎಂದು ಅನುಮಾನದ ಅರ್ಥ.

**ಮೋಕ್ಷದಲ್ಲಿ ಅಭೇದನಿರಾಸ**

**ನ ಬ್ರಹ್ಮರೂಪತ್ವಮಮುಷ್ಯ ದೇಹಿನೋ**
**ಮುಕ್ತಾವಪಿ ಸ್ಯಾತ್ ಪ್ರಮಯಾ ಕಥಂಚಿತ್ ।**

ಮೊದಲು ಭೇದ ಅಥವಾ ಭೇದಾಭೇದ ಮೋಕ್ಷದಲ್ಲಿ ಅಭೇದ, ಎನ್ನುವ ಸಿದ್ಧಾಂತವನ್ನು ಇಲ್ಲಿ ನಿರಾಕರಿಸಲಾಗಿದೆ—

ಪ್ರಮಯಾ=ಮೋಕ್ಷದಲ್ಲಿ ಭೇದ ಇದೆ, ಎಂದು ಪ್ರಮಾಣವಿರುವುದ ರಿಂದಾಗಿ ಅಮುಷ್ಯ ದೇಹಿನಃ=ದೇಹವುಳ್ಳ ಮೋಕ್ಷಯೋಗ್ಯರಿಗೆ ಮುಕ್ತಾವಪಿ= ಮೋಕ್ಷದಲ್ಲೂ ಕೂಡ ಕಥಂಚಿತ್=ಯಾವುದೇ ಪ್ರಮಾಣದಿಂದಲೂ ನ ಬ್ರಹ್ಮಸ್ವರೂಪತ್ವಂ ಸ್ಯಾತ್=ಬ್ರಹ್ಮಾಭೇದವು ಇಲ್ಲ.

**ಭೇದ ಹೇಳುವ ಶ್ರುತಿಗಳು ಇವು**

**'ಸ ಬ್ರಹ್ಮಣಾ ಸಹಿತೋಽಶೇಷಭೋಗಾನ್**
**ಭುಂಕ್ತೇ ತಥೋಪೇತ್ಯ ಸುಖಾರ್ಣವಂ ತಮ್' ॥ ೧೧೩ ॥**

**'ಯತ್ತತ್ ಪರಂಜ್ಯೋತಿರುಪೇತ್ಯ ಜೀವೋ**
**ನಿಜಸ್ವರೂಪತ್ವಮವಾಪ್ಯ ಕಾಮಾನ್ ।**
**ಭುಂಕ್ತೇ ಸ ದೇವಃ (ದೈವಂ) ಪುರುಷೋತ್ತಮೋಽಜ-**
**ಆತ್ಮೇತಿ ಚೋಕ್ತೋ ಗುಣಪೂರ್ತಿಹೇತೋಃ' ॥ ೧೧೪ ॥**

**'ಸೇತುಃ ಸ ದೇವೋಽಖಿಲಮುಕ್ತಭಾಜಾ-'**
**'ಮುತಾಮೃತಸ್ಯೇಷ್ಟ ಇಹೇಶಿತಾ ಯತ್ ।'**

(1) ಸಃ=ಮುಕ್ತನು ಬ್ರಹ್ಮಣಾ ಸಹಿತಃ=ಚತುರ್ಮುಖ ಬ್ರಹ್ಮನೊಂದಿಗೆ ಅಶೇಷಭೋಗಾನ್ ಭುಂಕ್ತೇ=ಎಲ್ಲ ಭೋಗಗಳನ್ನೂ ಅನುಭವಿಸುತ್ತಾನೆ. ಹೀಗೆ ಹೇಳುವ 'ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತೇತಿ ॥' ಎಂಬ ತೈತ್ತಿರೀಯ ಶ್ರುತಿಯು ಮೋಕ್ಷದಲ್ಲಿ ಭೇದವಿದೆ ಎನ್ನಲು ಪ್ರಮಾಣ.

(2) ತಥಾ=ಅದರಂತೆ, ಸುಖಾರ್ಣವಂ ತಂ ಉಪೇತ್ಯ=ಸುಖರೂಪನಾದ ಪರಮಾತ್ಮನನ್ನು ಹೊಂದಿ ಎಂದು ಹೇಳುವ ''ಏತಮಾನಂದಮಯಮಾತ್ಮಾನಮ್ ಉಪಸಂಕ್ರಮ್ಯ'' ಎಂಬ ಶ್ರುತಿ.

(3) ಜೀವಃ=ಜೀವನು ಯತ್ತತ್=ಆ ಯಾವ ಜ್ಯೋತಿರುಪೇತ್ಯ=ಜ್ಯೋತಿರೂಪನಾದ ಪರಮಾತ್ಮನನ್ನು ಹೊಂದಿ ನಿಜಸ್ವರೂಪತ್ವಮ್ ಅವಾಪ್ಯ=(ಸಾಧಕನು) ತನ್ನ ನೈಜವಾದ ರೂಪವನ್ನು ಪಡೆದು ಕಾಮಾನ್ ಭುಂಕ್ತೇ=ತನಗಿಷ್ಟವಾದುದನ್ನು ಅನುಭವಿಸುತ್ತಾನೆ. ಸಃ ಪುರುಷೋತ್ತಮಃ ಅಜಃ ದೇವಃ=ಆ ಪುರುಷೋತ್ತಮನಾದ ಹುಟ್ಟಿಲ್ಲದ ದೇವನೇ ಗುಣಪೂರ್ತಿ ಹೇತೋಃ=ಗುಣಪೂರ್ಣತ್ವಕಾರಣದಿಂದಾಗಿ ಆತ್ಮೇತಿ ಚೋಕ್ತಃ=ಆತ್ಮನೆಂದು ಆ ಶ್ರುತಿಯಲ್ಲಿ ಹೇಳಲ್ಪಟ್ಟಿದ್ದಾನೆ. ಇಲ್ಲಿ ಆಚಾರ್ಯರು ಸೂಚಿಸಿರುವ ಶ್ರುತಿ—

1. ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ । ಸ ಉತ್ತಮಃ ಪುರುಷಃ । ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ ।

2. ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ । ಏಷ ಆತ್ಮಾ ॥

ಅಭೇದವಾದಿಗಳು 'ಯಾರು ಬ್ರಹ್ಮನನ್ನು ಹೊಂದುವನೋ ಅವನೇ ಉತ್ತಮಪುರುಷನಾದ ಬ್ರಹ್ಮ' ಎಂದು ಈ ಶ್ರುತಿಗಳಿಗೆ ಅರ್ಥವನ್ನು ಹೇಳುತ್ತಾರೆ. ಅದು ಅರ್ಥವಲ್ಲ ಎಂದು ತಿಳಿಸಲು ಅರ್ಥತಃ ಶ್ರುತಿಗಳನ್ನು ಗ್ರಹಣ ಮಾಡುತ್ತಲೇ ಅನುವ್ಯಾಖ್ಯಾನದಲ್ಲಿ ಆಚಾರ್ಯರು ಆತ್ಮಶಬ್ದದ ಅರ್ಥವನ್ನು ಹೇಳಿದ್ದಾರೆ. 'ಸ ಉತ್ತಮಃ ಪುರುಷಃ, ಎಂದರೆ ಅಂತಹ ಪುರುಷನು ಸರ್ವೋತ್ತಮ, ಎಂದರ್ಥ. ಅದಕ್ಕೆ ಕಾರಣ ಏಷ ಆತ್ಮಾ=ಇವನೇ ಗುಣಪೂರ್ಣ' ಎಂದು.

(4) ಸಃ ದೇವಃ=ಆ ಪರದೇವನು ಅಖಿಲಮುಕ್ತಿಭಾಜಾಂ=ಎಲ್ಲಾ ಮುಕ್ತರಿಗೂ ಸೇತುಃ=ಧಾರಕನು. ಇದರಿಂದ ಸೂಚಿತಶ್ರುತಿ— ಅಮೃತಸ್ಯೈಷ ಸೇತುಃ ॥

(5) ಯತ್=ಯಾವ ಕಾರಣದಿಂದ ಪುರುಷನು ಇಹ ಈಶಿತಾ=ಸಂಸಾರ

ದಲ್ಲಿ ಎಲ್ಲರಿಗೂ ಒಡೆಯನೋ ಆದ್ದರಿಂದ ಅಮೃತಸ್ಯ ಉತ=ಮುಕ್ತವರ್ಗಕ್ಕೂ ಈಷ್ಟೇ=ಒಡೆಯನು. ಇದರಿಂದ ಸೂಚಿತಶ್ರುತಿ– 'ಉತಾಮೃತತ್ವಸ್ಯೇಶಾನೋ ಯದನ್ನೇನಾತಿರೋಹತಿ ।।' ಈ ಶ್ರುತಿಗೆ 'ಯತ್ ಅನ್ನೇನ ಅತಿರೋಹತಿ= ಯಾವ ಕಾರಣದಿಂದ ಮರ್ತ್ಯರಾದವರನ್ನು ಪುರುಷನು ಮೀರಿ ಇದ್ದಾನೋ ಆ ಕಾರಣದಿಂದ ಅಮೃತತ್ವಸ್ಯ ಈಶಾನಃ=ಮೋಕ್ಷಕ್ಕೂ ಒಡೆಯ' ಎಂದರ್ಥ.

**ಇತ್ಯಾದಿವಾಕ್ಯೈರ್ಭಗವದ್ವಶಃ ಸನ್**
**ಭುಂಕ್ತೇಽಖಿಲಾನ್ ಮುಕ್ತಿಗತೋಽಪಿ ಭೋಗಾನ್ ।। ೧೧೫ ।।**

ಇತ್ಯಾದಿವಾಕ್ಯೈಃ=ಈ ಮೊದಲಾದ ವಾಕ್ಯಗಳಿಂದ, ಮುಕ್ತಿಗತೋಽಪಿ= ಮುಕ್ತನಾದವನೂ ಭಗವದ್‌ವಶಃ ಸನ್=ಭಗವಂತನ ಅಧೀನವಾಗಿಯೇ ಅಖಿಲಾನ್ ಭೋಗಾನ್=ಎಲ್ಲಾ ಭೋಗಗಳನ್ನೂ ಭುಂಕ್ತೇ=ಅನುಭವಿಸು ತ್ತಾನೆ, ಎಂದು ತಿಳಿಯುತ್ತದೆ. ಆದ್ದರಿಂದ ಮೋಕ್ಷದಲ್ಲೂ ಜೀವರಿಗೆ ಬ್ರಹ್ಮೈಕ್ಯ ಇಲ್ಲ.

**ಮೋಕ್ಷದಲ್ಲಿ ಭೇದ ಇದೆ, ಎನ್ನಲು ಅನುಮಾನ ಪ್ರಮಾಣ—**

**ಕಾಲೋಽಪ್ಯಸೌ ನೈಕ್ಯಯುತಃ ಪರೇಣ**
**ಜೀವಸ್ಯ ಕಾಲೋ ಯತ ಏಷ ಯದ್ವತ್ ।**
**ಇತ್ಯಾದಿಕಾ ಅಪ್ಯನುಮಾಃ ಪ್ರಮಾಣಂ**
**ಮುಕ್ತೌ ಚ ಜೀವಸ್ಯ ಪರತ್ವರೋಧೇ ।। ೧೧೬ ।।**

ಅಸೌ ಕಾಲೋಽಪಿ=ಮೋಕ್ಷಕಾಲವೂ ಕೂಡಾ ಪರೇಣ ಜೀವಸ್ಯ ನೈಕ್ಯಯುತಃ=ಜೀವನಿಗೆ ಪರಮಾತ್ಮನೊಂದಿಗೆ ಐಕ್ಯಉಳ್ಳದ್ದಲ್ಲ (ಮೋಕ್ಷಕಾಲ ದಲ್ಲೂ ಜೀವನಿಗೆ ಬ್ರಹ್ಮೈಕ್ಯ ಇಲ್ಲ.) ಯತಃ ಕಾಲಃ=ಯಾವ ಕಾರಣದಿಂದ ಅದು ಕಾಲವಾಗಿದೆಯೋ ಆದರಿಂದಾಗಿ, ಯದ್ವತ್ ಏಷಃ ಕಾಲಃ=ಹೇಗೆ ಸಂಸಾರಕಾಲವೋ ಅದರಂತೆ. ಸಂಸಾರಕಾಲದಲ್ಲಿ ಜೀವೇಶರಿಗೆ ಭೇದವು ಇರುವಂತೆಯೇ ಮೋಕ್ಷಕಾಲದಲ್ಲೂ ಭೇದವಿದೆ, ಎಂದು ಅನುಮಾನದ ಅಭಿಪ್ರಾಯ.

ಇತ್ಯಾದಿಕಾ ಅನುಮಾ ಅಪಿ=ಇವೇ ಮೊದಲಾದ ಅನುಮಾನಗಳೂ ಕೂಡಾ ಮುಕ್ತೌಚ=ಮುಕ್ತಿಯಲ್ಲಿಯೂ ಜೀವಸ್ಯ=ಜೀವನಿಗೆ ಪರತ್ವರೋಧೇ= ಪರಮಾತ್ಮಭಾವವನ್ನು ತಡೆಯುವಲ್ಲಿ ಪ್ರಮಾಣಂ=ಪ್ರಮಾಣವಾಗುತ್ತದೆ. ಇಂತಹ ಅನುಮಾನಗಳು ಮೋಕ್ಷದಲ್ಲಿ ಐಕ್ಯಕ್ಕೆ ಬಾಧಕಗಳಾಗುತ್ತವೆ, ಎಂದು ಅರ್ಥ.

**ಕಥಂ ಚ ಯಃ ಪೂರ್ವಮಸೌ ನ ಪಶ್ಚಾದ್**
**ಭವೇತ್ ಸ ಏವೇತ್ಯಪಿ ಯುಕ್ತಿಮೇತಿ ।**
**ಯತೋ ನ ದೃಷ್ಟಂ ಯದಭೂನ್ನ ಪೂರ್ವಂ**
**ಪಶ್ಚಾತ್ ತದಾಸೇತಿ ಕುತಶ್ಚ ಕಿಂಚಿತ್ ॥ ೧೧೭ ॥**

ಯಃ ಅಸೌ=ಯಾವ ಈ ಜೀವಾತ್ಮನು ಪೂರ್ವಂ=ಸಂಸಾರಾವಸ್ಥೆಯಲ್ಲಿ ಅಸೌ ನ ಭವತಿ=ಪರಮಾತ್ಮನಾಗಿಲ್ಲವೋ ಪಶ್ಚಾತ್=ಮೋಕ್ಷದಲ್ಲಿ ಸ ಏವ ಭವೇತ್ ಇತಿ=ಆ ಪರಮಾತ್ಮನೇ ಆಗುತ್ತಾನೆ, ಎನ್ನುವುದು ಕಥಂ ಯುಕ್ತಿಮೇತಿ=ಹೇಗೆ ಯುಕ್ತವಾಗುತ್ತದೆ? ಮೊದಲು ದೇವರಾಗದವನು ಆಮೇಲೆ ದೇವರೇ ಆಗುವುದು ಹೇಗೆ ಸಾಧ್ಯ? ಯತಃ=ಯಾವ ಕಾರಣದಿಂದ ಯತ್‌ಕಿಂಚಿತ್=ಯಾವುದೇ ವಸ್ತುವು ಪೂರ್ವಂ ಯತ್ ನ ಅಭೂತ್= ಮೊದಲು ಯಾವುದಾಗಿ ಆಗಿರಲಿಲ್ಲವೋ ಪಶ್ಚಾತ್=ಆಮೇಲೆ ಕುತಶ್ಚಿತ್= ಯಾವುದೇ ಕಾರಣದಿಂದಾಗಿ ತದಾಸ=ಆ ವಸ್ತುವಾಗಿ ಆಯಿತೆಂದು ನ ದೃಷ್ಟಂ=ಕಂಡಿಲ್ಲ. ಈಗ ಘಟವು ಪಟವಾಗಿ ಕಾಣದೇ ಇದ್ದಲ್ಲಿ ಅದು ಯಾವುದೇ ಕಾರಣದಿಂದ ಮುಂದೆ ಪಟವಾಗಿ ಆಗಿರುವುದು ಕಂಡಿಲ್ಲ. ಅದರಂತೆ, ಈಗ ಬ್ರಹ್ಮನಾಗದ ಜೀವ ಮುಂದೆಂದೂ ಬ್ರಹ್ಮನಾಗಲಾರ.

**ಯಾದವಪ್ರಕಾಶಮತ ವಿಮರ್ಶೆ**

ಹೀಗೆ ಮೊದಲು ಭೇದ ಆಮೇಲೆ ಅಭೇದ ಎಂಬ ಭಾಸ್ಕರಮತವನ್ನೂ ಮೊದಲು ಭೇದಾಭೇದ ಆಮೇಲೆ ಅಭೇದ ಎಂಬ ಮತವನ್ನೂ ನಿರಾಕರಿಸಿ ಮುಂದೆ ಯಾದವಪ್ರಕಾಶರು ಹೇಳುವ ಮೊದಲೂ ಆಮೇಲೂ ಜೀವೇಶರಿಗೆ ಭೇದಾಭೇದ ಎಂಬ ಮತವನ್ನು ನಿರಾಕರಿಸಲಾಗಿದೆ.

**ನಚೈವ ಮುಕ್ತೇನ (ಕ್ತೌ ತು) ಹರೇಃ ಪೃಥಕ್ತ್ವ-**
**ಮೈಕ್ಯಂ ತಥಾ ಸ್ಯಾದಿತಿ ಯುಕ್ತಿಮೇತಿ ।**
**ಯತೋ ನ ಕುತ್ರಾಪಿ ಭಿದಾಭಿದಾ ಚ**
**ದೃಷ್ಟಾ ಚಿತಶ್ಚೇತನಯಾ ಕುತಶ್ಚಿತ್ ॥ ೧೧೮ ॥**

ಮುಕ್ತೇನ=ಮುಕ್ತನಿಂದ ಹರೇಃ=ವಿಷ್ಣುವಿಗೆ ಪೃಥಕ್ತ್ವಂ=ಭೇದವೂ ತಥಾ=ಅದರಂತೆ ಐಕ್ಯಂ ಚ=ಐಕ್ಯವೂ ಸ್ಯಾತ್=ಇದೆ ಇತಿ=ಹೀಗೆ ಹೇಳುವುದು ಯುಕ್ತಿಂ ನೈವ ಏತಿ=ಯುಕ್ತಿಯುಕ್ತವಾಗುವುದಿಲ್ಲ. ಯತಃ=ಏಕೆಂದರೆ, ಕುತ್ರಾಪಿ=ಎಲ್ಲೂ ಚಿತಃ ಚೇತನಯಾ=ಚೇತನಕ್ಕೆ ಚೇತನದಿಂದ ಭಿದಾಭಿದಾ ಚ ನ ದೃಷ್ಟಾ=ಭೇದಾಭೇದವು ಕಂಡಿಲ್ಲ.

ಭಾವಾರ್ಥ— ಒಬ್ಬ ಚೇತನನು ಇನ್ನೊಬ್ಬ ಚೇತನನಿಂದ ಭಿನ್ನಾಭಿನ್ನ ವಾಗಿರುವುದು ಲೋಕದಲ್ಲಿ ಕಂಡಿಲ್ಲ. ಆದ್ದರಿಂದ ಈ ಮತವೂ ಸರಿಯಲ್ಲ.

**ಇತ್ಥಂ ಮತಾನಿ ಭ್ರಮಜಾನಿ ಯಸ್ಮಾ-**
**ನ್ಮೋಕ್ಷಂ ಸಮುದ್ದೇಶ್ಯಮಪಿ ಭ್ರಮೇಣ ।**
**ವಿದುರ್ನ ಸಮ್ಯಗ್ ಯದಪೀಹ ಲೌಕಿಕಾಃ**
**ಸುಖಂ ಮಮ ಸ್ಯಾಚ್ಚ(ದ್ಧಿ) ಸದೇತಿ ಜಾನತೇ ॥ ೧೧೯ ॥**

ಮತಪ್ರವರ್ತಕರು ಯಸ್ಮಾತ್=ಯಾವ ಕಾರಣದಿಂದ ಸಮುದ್ದೇಶ್ಯ-ಮಪಿ=ಪ್ರಧಾನ ಉದ್ದೇಶವಾದರೂ ಮೋಕ್ಷಂ=ಮೋಕ್ಷವನ್ನು ಭ್ರಮೇಣ= ಭ್ರಮೆಯಿಂದಾಗಿ ಸಮ್ಯಕ್ ನ ವಿದುಃ=ಸರಿಯಾಗಿ ತಿಳಿದಿಲ್ಲವೋ ಅತಃ= ಆದ್ದರಿಂದ ಇತ್ಥಂ ಮತಾನಿ=ಈ ರೀತಿಯ ಮತಗಳು ಭ್ರಮಜಾನಿ= ಭ್ರಾಂತಿಯಿಂದ ಹುಟ್ಟಿಕೊಂಡಿವೆ. ಯತ್=ಯಾವ ಕಾರಣದಿಂದ ಇಹ ಲೌಕಿಕಾಃ=ಚೇತನರ ಮಧ್ಯದಲ್ಲಿ ವೈದಿಕಜ್ಞಾನ ಇಲ್ಲದವರೂ ಮಮ ಸುಖಂ ಸ್ಯಾತ್ ಇತಿ=ನನಗೆ ಸುಖವಾಗಲೀ ಎಂದೇ ಜಾನತೇ=ತಿಳಿಯುತ್ತಾರೆ.

ಭಾವಾರ್ಥ—ಅತಿಸೂಕ್ಷ್ಮವಾದ ಪ್ರಮೇಯದಲ್ಲಿ ತಪ್ಪುಗ್ರಹಿಕೆ ಇದ್ದರೂ ಚಿಂತಿಲ್ಲ. ಸಾಮಾನ್ಯಜನರೂ ತಿಳಿಯಬಲ್ಲ ವಿಷಯದ ಬಗ್ಗೆ ಅನ್ಯಥಾಜ್ಞಾನ

ದೊಡ್ಡಪ್ರಮಾದ. ನನಗೆ ಸುಖವೇ ಆಗಬೇಕೆಂದು, ಸಾಮಾನ್ಯಜನರೂ ಅಪೇಕ್ಷಿಪಡುತ್ತಾರೆ. ಅದರ ಬಗ್ಗೆಯೇ ಜಿನಾದಿದಾರ್ಶನಿಕರಿಗೆ ತಪ್ಪು ತಿಳುವಳಿಕೆ ಇದೆ. ಏಕೆಂದರೆ, ಅದಕ್ಕೆ ವಿರುದ್ಧವಾಗಿ ಊರ್ಧ್ವಗತಿಯು ಮೋಕ್ಷ, ಮೋಕ್ಷದಲ್ಲಿ ಸುಖವೇ ಇಲ್ಲ, ಎಂದೆಲ್ಲ ಹೇಳುತ್ತಾರೆ. ಹೀಗೆ ಸಿದ್ಧಾಂತದ ಫಲವಾದ ಪರಮಪುರುಷಾರ್ಥವನ್ನೇ ಸಾಮಾನ್ಯಜನರ ತಿಳುವಳಿಕೆಗೂ ವಿರುದ್ಧವಾಗಿ ನಿರೂಪಿಸಿದ ಮೇಲೆ ಉಳಿದಂತೆ ಅವರ ಸಿದ್ಧಾಂತವು ನಂಬಿಕೆಗೆ ಅರ್ಹವೇ ಅಲ್ಲ.

ಇಲ್ಲಿಗೆ ಮೋಕ್ಷಸ್ವರೂಪನಿರೂಪಣೆ ಮುಗಿಯಿತು.

## ತೃತೀಯಾಧ್ಯಾಯ ಚತುರ್ಥಪಾದದ
## ಪೂರ್ವಪಕ್ಷ-ಸಿದ್ಧಾಂತ ನ್ಯಾಯಗಳು

### ಪೂರ್ವಪಕ್ಷ ನ್ಯಾಯಗಳು

ಔದಾರ್ಯಮುಚ್ಚಾವಚಶಕ್ತಿರಾತ್ಮ-
ಸ್ವರೂಪದಾರ್ಢ್ಯಂ ಚ ನಿಜಸ್ವಭಾವಃ ।
ಸ್ವಾತಂತ್ರ್ಯಮಾಪೂರ್ಣವಿಶೇಷಯೋಗ್ಯತಾ
ವಿರೋಧಹಾನಿಶ್ಚ ಚತುರ್ಥಪಾದೇ ॥ ೧೨೦ ॥

### ಸಿದ್ಧಾಂತ ಯುಕ್ತಿಗಳು

ವ್ಯವಸ್ಥಿತಿಸ್ತ್ವ ವಿಶೇಷಃ ಸ್ಥಿತಿಶ್ಚ
ನಿಷೇಧಸಾಮಾನ್ಯವಿಧಿಕ್ರಿಯಾಣಾಮ್ ।
ವಿಭಕ್ತತಾ ಚಾತ್ವರಯೈವ ಸಿದ್ಧಿ-
ರ್ವಿಪಕ್ಷಸಂಪ್ರಾಪ್ತಿವಿರೋಧ (ರುದ್ಧ) ಹೇತವಃ ॥ ೧೨೧ ॥

ಮೂರನೆಯ ಅಧ್ಯಾಯದ ನಾಲ್ಕನೆಯ ಪಾದದಲ್ಲಿ ಬರುವ ಹನ್ನೊಂದು ಅಧಿಕರಣಗಳ ಪೂರ್ವಪಕ್ಷ-ಸಿದ್ಧಾಂತಯುಕ್ತಿಗಳು ಹೀಗಿವೆ—

1. ಪುರುಷಾರ್ಥಾಧಿಕರಣ — ಪೂರ್ವಪಕ್ಷ – ಔದಾರ್ಯಂ = ವಿರಕ್ತಿ.

ಸಿದ್ಧಾಂತಯುಕ್ತಿ—ವ್ಯವಸ್ಥಿತಿಃ=ಅರ್ಥಭೇದದಿಂದ ವ್ಯವಸ್ಥೆ. (ವ್ಯವಸ್ಥೋ-ಪಪತ್ತೇಃ-ನ್ಯಾ.ವಿ.)

2. ಅಸಾರ್ವತ್ರಿಕ್ಯಧಿಕರಣ — ಪೂರ್ವಪಕ್ಷಯುಕ್ತಿ – ಔದಾರ್ಯಂ = ಉತ್ಕೃಷ್ಟತ್ವವು. ಸಿದ್ಧಾಂತಯುಕ್ತಿ—ವ್ಯವಸ್ಥಿತಿಃ=ವ್ಯವಸ್ಥೆಯನ್ನು ಕಲ್ಪಿಸಿರುವುದು.

3. ನಾವಿಶೇಷಾಧಿಕರಣ—ಪೂರ್ವಪಕ್ಷಯುಕ್ತಿ–ಉಚ್ಚಾವಚಶಕ್ತಿಃ-ಶಕ್ತಿಯಲ್ಲಿ ಇರುವ ಹೆಚ್ಚು ಕಡಿಮೆ. ಸಿದ್ಧಾಂತಯುಕ್ತಿ—ಅವಿಶೇಷಃ= ವಿಶೇಷಾಭಾವ.

4. ಸ್ತುತ್ಯಧಿಕರಣ—ಪೂರ್ವಪಕ್ಷಯುಕ್ತಿ–ಆತ್ಮಸ್ವರೂಪದಾರ್ಢ್ಯಂ (ವ್ಯಕ್ತವಾದ ಆನಂದಾದಿಗಳಿಗೆ ನಿಶ್ಚಿತತ್ತ್ವ). ಸಿದ್ಧಾಂತಯುಕ್ತಿ— ಸ್ಥಿತಿಃ=ನಿರ್ದಿಷ್ಟಾನಂದ ಪ್ರಾಪ್ತಿಯ ಸ್ಥಿತಿ.

5. ಉಭಯಲಿಂಗಾಧಿಕರಣ– ಪೂರ್ವಪಕ್ಷಯುಕ್ತಿ–ನಿಜಸ್ವಭಾವಃ (ಎಲ್ಲ ಜೀವರ ಸ್ವಭಾವವೂ ಒಂದೇರೀತಿ) ಸಿದ್ಧಾಂತಯುಕ್ತಿ—ನಿಷೇಧ ಸಾಮಾನ್ಯ ವಿಧಿಕ್ರಿಯಾಣಾಂ ವಿಭಕ್ತತಾ=ನಿಷೇಧಸಾಮಾನ್ಯ–ವಿಧಾನ–ಕ್ರಿಯೆ ಇವುಗಳು ಒಬ್ಬರಿಂದೊಬ್ಬರಿಗೆ ವಿಭಿನ್ನವಾಗಿರುವುದು.

6. ಆಧಿಕಾರಿಕಾಧಿಕರಣ– ಪೂರ್ವಪಕ್ಷಯುಕ್ತಿ–ನಿಜಸ್ವಭಾವಃ, ಸಿದ್ಧಾಂತಯುಕ್ತಿ–ವಿಭಕ್ತತಾ.

7. ಫಲಶ್ರುತ್ಯಧಿಕರಣ—ಪೂರ್ವಪಕ್ಷಯುಕ್ತಿ–ಸ್ವಾತಂತ್ರ್ಯಂ. ಸಿದ್ಧಾಂತಯುಕ್ತಿ–ಅತ್ವರಯೈವ ಸಿದ್ಧಿಃ=ವಿಲಂಬದಿಂದ ಸಿದ್ಧಿ.

8. ಕೃತ್ಸ್ನಭಾವಾಧಿಕರಣ— ಪೂರ್ವಪಕ್ಷಯುಕ್ತಿ–ಆಪೂರ್ಣವಿಶೇಷಯೋಗಿತಾ. ಸಿದ್ಧಾಂತಯುಕ್ತಿ–ಅತ್ವರಯೈವ ಸಿದ್ಧಿಃ-ಅವಸರ ಪಡದೆ ಉಪದೇಶದಿಂದಲೇ ಸಿದ್ಧಿ.

9. ಅನಾವಿಷ್ಕಾರಾಧಿಕರಣ—ಪೂರ್ವಪಕ್ಷಯುಕ್ತಿ–ಆ ಪೂರ್ಣವಿಶೇಷಯೋಗ್ಯತಾ. ಸಿದ್ಧಾಂತಯುಕ್ತಿ—ಅತ್ವರಯೈವ ಸಿದ್ಧಿಃ.

10. ಮುಕ್ತಿಫಲಾಧಿಕರಣ— ಪೂರ್ವಪಕ್ಷಯುಕ್ತಿ–ವಿರೋಧಹಾನಿ= ವಿರೋಧವಿಲ್ಲದಿರುವುದು. ಸಿದ್ಧಾಂತಯುಕ್ತಿ–ಅತ್ವರಯ್ಯೆವ ಸಿದ್ಧಿ.

11. ಮುಕ್ತಿಫಲಾಧಿಕರಣ — ಪೂರ್ವಪಕ್ಷಯುಕ್ತಿ – ವಿರೋಧಹಾನಿಃ = ವಿರೋಧವಿಲ್ಲದಿರುವುದು. ಸಿದ್ಧಾಂತಯುಕ್ತಿ–ಅತ್ವರಯ್ಯೆವ ಸಿದ್ಧಿ.

**ನ್ಯಾಯಗಳ ವಿವರಣೆ**

**1. ಪುರುಷಾರ್ಥಾಧಿಕರಣ—** ಈ ಅಧಿಕರಣದಲ್ಲಿ ಬ್ರಹ್ಮಜ್ಞಾನವು ಮೋಕ್ಷಕ್ಕೆ ಮಾತ್ರ ಸಾಧನ, ಫಲಾಂತರಸಾಧನವಲ್ಲ, ಎಂದು ಪೂರ್ವಪಕ್ಷ. 'ಔದಾರ್ಯಂ' ಇದು ಪೂರ್ವಪಕ್ಷಯುಕ್ತಿ. ಔದಾರ್ಯವೆಂದರೆ ವೈರಾಗ್ಯ. ''ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ ನಿರ್ವೇದಮಾಯಾತ್ । ನಾಸ್ತ್ಯಕೃತಃ ಕೃತೇನ । ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್ ।' ಎಂದು ಶ್ರುತಿಯಲ್ಲಿ ಸ್ವರ್ಗಾದಿಫಲಗಳಲ್ಲಿ ಅನಾಸಕ್ತನಾದವನು ಮೋಕ್ಷಹೇತುವಾದ ಜ್ಞಾನವನ್ನು ಅರಸುತ್ತಾನೆ ಎನ್ನಲಾಗಿದೆ. ಆದ್ದರಿಂದ ಜ್ಞಾನಿಗಳಿಗೆ ಮೋಕ್ಷೇತರ ಪುರುಷಾರ್ಥಗಳಲ್ಲಿ ವೈರಾಗ್ಯವಿರುತ್ತದೆ. ಹೀಗಾಗಿ ಜ್ಞಾನವು ಸ್ವರ್ಗಾದಿಗಳಿಗೆ ಕಾರಣವಲ್ಲ. ಮೋಕ್ಷಕ್ಕೆ ಮಾತ್ರ ಕಾರಣ. 'ಜ್ಞಾನಾದೇವ ಸ್ವರ್ಗಃ' ಎಂಬ ವಾಕ್ಯ ಜ್ಞಾನಪ್ರಾಶಸ್ತ್ಯಜ್ಞಾಪಕ, ಎಂದು ಪೂರ್ವಪಕ್ಷ. ಔದಾರ್ಯಂ, ಇದು ಪೂರ್ವಪಕ್ಷಯುಕ್ತಿ. (ನಚ ಜ್ಞಾನಿನಃ ಔದಾರ್ಯಾತ್ ಮೋಕ್ಷಾದನ್ಯ ಫಲೇಚ್ಛಾಯಾಃ ಏವಾಭಾವಾತ್–ನ್ಯಾ.ವಿ.)

ಅಪೇಕ್ಷೆ ಇದ್ದವರಿಗೆ, ಜ್ಞಾನದಿಂದ ಮೋಕ್ಷೇತರಪುರುಷಾರ್ಥಗಳೂ ಆಗುತ್ತವೆ. ಸೌಭರ್ಯಾದಿಯೋಗಿಗಳು ಜ್ಞಾನಸಾಮರ್ಥ್ಯದಿಂದಾಗಿಯೇ ಅನೇಕ ಶರೀರಗಳನ್ನು ಸ್ವೀಕರಿಸಿ ಅದರಿಂದ ವಿಷಯಭೋಗವನ್ನು ಮಾಡಿದ್ದಾರೆ. ಪ್ರಾಯಶಃ, ಜ್ಞಾನಿಗಳಿಗೆ ಇತರಪುರುಷಾರ್ಥಗಳ ಅಪೇಕ್ಷೆ ಇರುವುದಿಲ್ಲ. ಅದನ್ನು ದೃಷ್ಟಿಯಲ್ಲಿ ಇಟ್ಟುಕೊಂಡು 'ಪರೀಕ್ಷ್ಯ ಲೋಕಾನ್' ಎಂಬ ವಾಕ್ಯದಲ್ಲಿ ಇತರಪುರುಷಾರ್ಥಗಳಲ್ಲಿ ಜ್ಞಾನಿಗೆ ವಿರಕ್ತಿಯನ್ನು ಹೇಳಲಾಗಿದೆ. ಅಪೇಕ್ಷೆ ಇರುವ ಸೌಭರ್ಯಾದಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡು 'ಜ್ಞಾನಾದೇವ ಸ್ವರ್ಗಃ' ಇತ್ಯಾದಿ ವಾಕ್ಯಗಳಿವೆ. ಹೀಗೆ ವ್ಯವಸ್ಥೆಯಾ ಎರಡಕ್ಕೂ

ಪ್ರಾಮಾಣ್ಯವನ್ನು ಕೂಡಿಸಬೇಕು, ಎಂದು ಸಿದ್ಧಾಂತ. 'ವ್ಯವಸ್ಥಿತಿಃ' ಎಂದು ಸಿದ್ಧಾಂತ ಯುಕ್ತಿ. (ಇತಿ ವ್ಯವಸ್ಥೋಪಪತ್ತೇಃ-ನ್ಯಾ.ವಿ.)

**2. ಅಸಾರ್ವತ್ರಿಕ್ಯಧಿಕರಣ**— ಈ ಅಧಿಕರಣದಲ್ಲಿ ಬ್ರಹ್ಮಜ್ಞಾನದಲ್ಲಿ ಎಲ್ಲರಿಗೂ ಅಧಿಕಾರವಿದೆ, ಎಂದು ಪೂರ್ವಪಕ್ಷ. ಅರ್ಥೀ, ಸಮರ್ಥಃ, ವಿದ್ವಾನ್ ಅಧಿಕ್ರಿಯತೇ-ಫಲಾಪೇಕ್ಷೆ ಇದ್ದ ಸಮರ್ಥರಾಗಿರುವ ಜ್ಞಾನಿಗಳು ಅಧಿಕಾರಿಗಳು. ಮೋಕ್ಷವು ನಿರ್ದುಃಖಾನಂದಸ್ಥಿತಿಯಾದುದರಿಂದ ಎಲ್ಲರಿಗೂ ಅದರಲ್ಲಿ ಅಪೇಕ್ಷೆ ಇದೆ. ಶ್ರವಣ-ಮನನ-ಧ್ಯಾನಗಳನ್ನು ಮಾಡುವ ಸಾಮರ್ಥ್ಯವೂ ಎಲ್ಲರಲ್ಲಿದೆ. ಆದ್ದರಿಂದ ಬ್ರಹ್ಮಜ್ಞಾನದಲ್ಲಿ ಎಲ್ಲರಿಗೂ ಅಧಿಕಾರವಿದೆ. 'ಔದಾರ್ಯಂ' ಎನ್ನುವುದೇ ಇಲ್ಲೂ ಪೂರ್ವಪಕ್ಷಯುಕ್ತಿ. ಮೋಕ್ಷವು ಉತ್ಕೃಷ್ಟವಾದುದು, ಎಂದು ಅದರ ಭಾವ.

ಫಲಾಪೇಕ್ಷೆ ಇದ್ದರೂ ಯಥಾಶಕ್ತಿ ಸಕಲವೇದಾಧ್ಯಯನ ಮಾಡಿದವರಿಗೆ ಮಾತ್ರ ಬ್ರಹ್ಮಜ್ಞಾನದಲ್ಲಿ ಅಧಿಕಾರ. ಇತರರಿಗೆ ವೈದಿಕಬ್ರಹ್ಮವಿದ್ಯೆಯಲ್ಲಿ ಅಧಿಕಾರವಿಲ್ಲ. ಅನಧಿಕಾರಿಗಳು ವೇದಾಧ್ಯಯನ ಮಾಡಿದರೆ ಅದು ನಿಷ್ಫಲ. ಅವರಿಗೆ ತಂತ್ರಜ್ಞಾನದಿಂದ ವಿದ್ಯಾಪ್ರಾಪ್ತಿಯಾಗಬಹುದು. ವ್ಯವಸ್ಥಿತಿಃ=ಅಧಿಕಾರವು ವ್ಯವಸ್ಥಿತ-ನಿರ್ದಿಷ್ಟರಾದವರಿಗೆ ಮಾತ್ರ ಎಂದು ವ್ಯವಸ್ಥೆಯನ್ನು ಮಾಡಿರುವುದು, ಸಿದ್ಧಾಂತಯುಕ್ತಿ.

**3. ನಾವಿಶೇಷಾಧಿಕರಣ**— ಬ್ರಹ್ಮಜ್ಞಾನಾಧಿಕಾರ ಎಲ್ಲರಿಗೂ ಒಂದೇ ರೀತಿ, ತಾರತಮ್ಯೋಪೇತವಾಗಿಲ್ಲ, ಎಂದು ಈ ಅಧಿಕರಣದ ಪೂರ್ವಪಕ್ಷ. ಅಧಿಕಾರ ಎಲ್ಲರಿಗೂ ಒಂದೇ ರೀತಿಯಾದರೂ ತಮ್ಮ ತಮ್ಮ ಶಕ್ತ್ಯನುಸಾರವಾಗಿ ಒಬ್ಬರು ಹೆಚ್ಚು, ಒಬ್ಬರು ಕಡಿಮೆ ಜ್ಞಾನವನ್ನು ಗಳಿಸುತ್ತಾರೆ. ಅದರಿಂದಾಗಿಯೇ ಫಲತಾರತಮ್ಯವು ಉಪಪನ್ನವಾಗುತ್ತದೆ. ಅದಕ್ಕೆ ದೇವತ್ವ-ಋಷಿತ್ವ-ಮನುಷ್ಯೋತ್ತಮತ್ವಾದಿ ಅಧಿಕಾರಿಪ್ರಭೇದವನ್ನು ಕಲ್ಪಿಸಬೇಕಾಗಿಲ್ಲ ಎಂದು ಪೂರ್ವಪಕ್ಷ. ಉಚ್ಚಾವಚಶಕ್ತಿಃ=ಶಕ್ತಿಯಲ್ಲಿ ಹೆಚ್ಚು ಕಡಿಮೆ ಎಂದು ಪೂರ್ವಪಕ್ಷಯುಕ್ತಿ.

ಭಕ್ತಿ, ಅಧ್ಯಯನಗಳಿಗೆ ಅನುಸಾರವಾಗಿಯೇ ಶಾಸ್ತ್ರದಿಂದ ಜ್ಞಾನಪ್ರಾಪ್ತಿಯಾಗುತ್ತದೆ. ಅದಕ್ಕನುಗುಣವಾಗಿ ಧ್ಯಾನ-ಅಪರೋಕ್ಷಗಳು. ಭಕ್ತ್ಯಾದಿಗಳು

ಸ್ವರೂಪಕ್ಕೆ ಅನುಗುಣವಾಗಿಯೇ ವಿಭಿನ್ನವಾಗಿರುತ್ತವೆ- 'ಉಚ್ಚಾವಚಶಕ್ತೇರಪಿ ತನ್ನಿಬಂಧನತ್ವಾತ್'. ಭಕ್ತ್ಯನುಸಾರವಾಗಿ ಫಲಪ್ರಾಪ್ತಿಯಾಗುವುದು ಎಲ್ಲರಿಗೂ ಅವಿಶೇಷ—ಸಾಮಾನ್ಯ, ಎಂದರ್ಥ. ಭಕ್ತ್ಯಾದ್ಯಾಧಿಕ್ಯಾನುಸಾರೇಣ ಶಾಸ್ತ್ರಾತ್ ಫಲಪ್ರಾಪ್ತೇಃ ಸರ್ವೇಷಾಮ್ ಅವಿಶೇಷಾತ್-ನ್ಯಾ.ವಿ. ಆ ಭಕ್ತಿತಾರತಮ್ಯಕ್ಕೆ ಯೋಗ್ಯತಾತಾರತಮ್ಯವೇ ಕಾರಣ—

> ಸ್ವಾಧಿಕಾರಾಧಿಕೋ ಯತ್ನೋ ಪ್ರಾಯಶೋ ನೋಪಪದ್ಯತೇ ।
> ಕಥಂಚಿದಧಿಕೇ ಯತ್ನೇ ದೋಷಃ ಕಶ್ಚಿತ್ ಸಮಾಪತೇತ್ ॥
>
> -ನ್ಯಾಯವಿವರಣ

ಯೋಗ್ಯತೆಗೆ ಮೀರಿ ಯತ್ನ ಮಾಡಲಾಗದು. ಮಾಡಿದರೂ ಆ ಯತ್ನದಿಂದಾಗುವ ಫಲಾಧಿಕ್ಯಕ್ಕೆ ಪ್ರತಿಬಂಧಕವಾದ ಯಾವುದಾದರೊಂದು ದೋಷವು ಬರುತ್ತದೆ. ಆದ್ದರಿಂದ ಮುಕ್ತಿಯೋಗ್ಯಜೀವರಲ್ಲಿ ಯೋಗ್ಯತಾ ತಾರತಮ್ಯವಿದೆ. ಈ ಅಧಿಕರಣದ ಸಿದ್ಧಾಂತನ್ಯಾಯ-ಅವಿಶೇಷಃ= ಅಧಿಕಾರತಾರತಮ್ಯವಿಲ್ಲದ ಹೊರತು, ಪ್ರಮಿತವಾದ ಜ್ಞಾನತಾರತಮ್ಯವು ಅನುಪಪನ್ನವಾಗುತ್ತದೆ. ಭಕ್ತ್ಯನುಸಾರವಾಗಿ ಫಲಪ್ರಾಪ್ತಿಯಾಗುವುದು ಎಲ್ಲರಿಗೂ ಸಮಾನ.

**4. ಸ್ತುತ್ಯಧಿಕರಣ—** ಅಪರೋಕ್ಷಜ್ಞಾನಿಗಳಿಗೆ ಒಳ್ಳೆಯ ನಡತೆಯಿಂದ ಮತ್ತು ಕೆಟ್ಟ ನಡತೆಯಿಂದ ವಿಶೇಷವು ಇಲ್ಲ, ಎಂದು ಪೂರ್ವಪಕ್ಷ. ಅವರಿಗೆ ಸ್ವರೂಪಾನಂದಾವಿರ್ಭಾವರೂಪವಾದ ಮೋಕ್ಷವು ನಿಶ್ಚಿತವಾದುದರಿಂದ ಸನ್ನಡತೆಯಿಂದ ಹೊಂದಬೇಕಾದ ಫಲವಿಶೇಷವೂ ಇಲ್ಲ, ದುರ್ನಡತೆಯಿಂದ ಆಗುವ ಹಾನಿಯೂ ಇಲ್ಲ. ಆದ್ದರಿಂದ ಜ್ಞಾನಿಗಳ ಯಾವ ರೀತಿಯ ಆಚರಣೆಗೂ ಫಲವಿಲ್ಲ. ಆತ್ಮಸ್ವರೂಪದಾರ್ಢ್ಯಂ-ನಿರ್ಧಾರಿತವಾದ ಆತ್ಮಸ್ವರೂಪಾನುಭವ-ಇದು ಪೂರ್ವಪಕ್ಷಯುಕ್ತಿ.

ಜ್ಞಾನಿಗಳಿಗೆ ಎಷ್ಟು ಆನಂದವು ಕ್ಲೃಪ್ತವಾಗಿದೆಯೋ ಅದು ಜ್ಞಾನೋತ್ತರದಲ್ಲಿ ಮಾಡುವ ಯತ್ನದಿಂದಲೂ ಸಾಧ್ಯವಾಗಿದೆ. ಕೆಟ್ಟ ನಢತೆಯಿಂದ ಸಿಗಬೇಕಾದ ಆನಂದದಲ್ಲಿ ಹ್ರಾಸವಾಗುತ್ತದೆ.

ಯಾ ಸ್ಥಿತಿಃ ತಾಂ ಸಮಾಪ್ನೋತಿ ಯಥಾಶಕ್ತಿಪ್ರಯತ್ನತಃ ।
ವಿಪರೀತಪ್ರವೃತ್ತೇಸ್ತು ತಸ್ಯಾ ಹ್ರಾಸೋಽಧಿಕಂ ಭವೇತ್ ॥ ನ್ಯಾ.ವಿ.

ಹೀಗೆ ಸದಸತ್‌ಪ್ರವೃತ್ತಿಗಳಿಂದಾಗಿ ಜ್ಞಾನಿಗಳಿಗೆ ಸ್ಥಿತಿವಿಶೇಷವಿದೆ. 'ಸ್ಥಿತಿ' ಇದು ಸಿದ್ಧಾಂತಯುಕ್ತಿ. ಮೇಲಿನ ಪ್ರಮಾಣದಲ್ಲಿ ಹೇಳಿರುವಂತೆ–ಮೋಕ್ಷದಲ್ಲಿ ವೃದ್ಧಿ–ಹ್ರಾಸ ಸ್ಥಿತಿ ಎಂದರ್ಥ. (ಸ್ಥಿತಿ ವಿಶೇಷೋಪಪತ್ತೇಃ–ನ್ಯಾ.ವಿ.)

5. **ಉಭಯಲಿಂಗಾಧಿಕರಣ—** ಭಗವಂತನ ಅಪರೋಕ್ಷಜ್ಞಾನವು ಅನಧಿಕಾರಿಗಳಿಗೂ ಆಗುತ್ತದೆ, ಎಂದು ಪೂರ್ವಪಕ್ಷ. ಪ್ರಯತ್ನಮಾಡಿದವರಿಗೆಲ್ಲ ಜ್ಞಾನವು ಆಗುತ್ತದೆ. ಏಕೆಂದರೆ, ಎಲ್ಲರ ಸ್ವಭಾವವೂ ಒಂದೇ ರೀತಿ–ಎಲ್ಲರೂ ಚೇತನರು. ಸ್ವಭಾವದಲ್ಲಿ ವ್ಯತ್ಯಾಸವಿಲ್ಲದಿರುವುದರಿಂದ ಎಲ್ಲರಿಗೂ ಅಪರೋಕ್ಷವಾಗುತ್ತದೆ. ನಿಜಸ್ವಭಾವಃ–'ಸರ್ವಜೀವಾನಾಮ್ ಏಕಪ್ರಕಾರ ಏವ ನಿಜಸ್ವಭಾವಃ–ಚೈತನ್ಯಂ'(ನ್ಯಾ.ವಿ.) ಎಲ್ಲ ಜೀವರೂ ಚೈತನ್ಯರೂಪರು ದೇವತ್ವ–ಮಾನುಷತ್ವಾದಿಗಳು ಸ್ವಾಭಾವಿಕವಲ್ಲ. ಯಾರು ಬೇಕಾದರೂ ದೇವತೆಗಳಾಗಬಹುದು. ಇದು ಪೂರ್ವಪಕ್ಷಯುಕ್ತಿ.

ಎಲ್ಲರೂ ಚೇತನರೇ ಆದರೂ ಅವರ ಸ್ವಭಾವದಲ್ಲಿ ವೈಚಿತ್ರ್ಯವಿದೆ. ಕೆಲವರು ದೇವತಾಸ್ವಭಾವದವರು, ಕೆಲವರು ಋಷಿಸ್ವಭಾವದವರು, ಕೆಲವರು ಅಸುರಸ್ವಭಾವದವರು. ಅವರವರಿಗೆ ವಿಧಿ–ನಿಷೇಧಗಳು ಬೇರೆಬೇರೆಯಾಗಿವೆ. ಅದಕ್ಕೆ ಅನುಗುಣವಾಗಿ ಅಪರೋಕ್ಷಜ್ಞಾನದಲ್ಲೂ ವ್ಯತ್ಯಾಸವಿದೆ. ನಿಷೇಧ–ಸಾಮಾನ್ಯ–ವಿಧಿಕ್ರಿಯಾಣಾಂ ವಿಭಕ್ತತ್ವಾತ್–ಇದು ಸಿದ್ಧಾಂತ ನ್ಯಾಯ.

**ಅ.** ನಿಷೇಧವಿಭಾಗ— ಮೂಲತಃ ದೇವತೆಗಳಲ್ಲದವರು ದೇವಪದವಿಯನ್ನು ಬಯಸಬಾರದು. ದೇವತಾಸ್ವಭಾವದವರು ಆ ಪದವಿಯನ್ನು ಬಯಸಿದರೆ ದೋಷವಿಲ್ಲ. ಇದು ನಿಷೇಧದಲ್ಲಿರುವ ವಿಭಾಗ=ವ್ಯತ್ಯಾಸ.

**ಆ.** ಸಾಮಾನ್ಯವಿಭಾಗ— ಎಲ್ಲಾ ದೇವತೆಗಳ ಜ್ಞಾನವೂ ಸ್ಥಿರವಾದುದು, ಭಕ್ತಿ, ಬಲ, ಪರಾಕ್ರಮ, ವೈರಾಗ್ಯ ಇವೆಲ್ಲವೂ ಅವರಲ್ಲಿ ಸ್ಥಿರವಾಗಿವೆ. ಇತರರಲ್ಲಿ ಇವುಗಳು ಅಸ್ಥಿರಗಳು.

ಇ. ವಿಧಿವಿಭಾಗ— ದೇವತೆಗಳು ಜ್ಞಾನದಾನ ಮಾಡಬೇಕು, ಋಷಿಗಳಿಗೆ ತಪಸ್ಸು, ಮನುಷ್ಯರಿಗೆ ಆಚಾರ. ಹೀಗೆ ವಿಹಿತಕರ್ಮಗಳ ವ್ಯತ್ಯಾಸ.

**ಈ.** ಕ್ರಿಯಾವಿಭಾಗ— ದೇವತೆಗಳು ವಿಹಿತವನ್ನು ಪೂರ್ಣಭಾಗ ಮಾಡುತ್ತಾರೆ, ಮುನಿಗಳು ಅರ್ಧಭಾಗ ಮಾತ್ರ ಮಾಡುತ್ತಾರೆ, ಮನುಷ್ಯರು ಹತ್ತರಲ್ಲಿ ಒಂದಂಶ ಮಾಡುತ್ತಾರೆ.

ಹೀಗೆ ನಾಲ್ಕುವಿಧದ ವ್ಯತ್ಯಾಸದಿಂದ ಅದರ ಫಲವಾದ ಅಪರೋಕ್ಷ ಜ್ಞಾನದಲ್ಲೂ ವ್ಯತ್ಯಾಸವಿದೆ. ಇದು ಸಿದ್ಧಾಂತನ್ಯಾಯದ ಅರ್ಥ.

**6. ಆಧಿಕಾರಿಕಾಧಿಕರಣ—** ಚತುರ್ಮುಖಾದಿಪದವಿಗಳನ್ನು ಯಾರು ಬೇಕಾದರೂ ಹೊಂದಬಹುದು. ಲೋಕದಲ್ಲಿ ಅಮಾತ್ಯನೂ ರಾಜನಾಗಬಹುದು. ವಿಶ್ವಾಮಿತ್ರ ಕ್ಷತ್ರಿಯನಾಗಿದ್ದು ಬ್ರಾಹ್ಮಣನಾಗಿದ್ದಾನೆ. ಹೀಗೆ, ಎಲ್ಲರೂ ಚೇತನರು. ಯಾರು ಏನು ಬೇಕಾದರೂ ಆಗಬಹುದು ಎಂದು ಪೂರ್ವಪಕ್ಷ. ಇಲ್ಲಿಯೂ 'ನಿಜಸ್ವಭಾವ' ಎಂದೇ ಪೂರ್ವಪಕ್ಷಯುಕ್ತಿ.

ಯೋಗ್ಯರಿಗೆ ಮಾತ್ರ ಆಯಾಯ ಪದವಿಯ ಪ್ರಾಪ್ತಿಯಾಗುತ್ತದೆ. ಎಲ್ಲಾ ದೇವತಾಪದವಿಗಳಿಗೂ ಅರ್ಹರಾದ ಚೇತನರ ಸಾಲೇ ಇದೆ. ಅಯೋಗ್ಯರು ಆ ಪದವಿಯನ್ನು ಬಯಸಿದರೆ ಅಧಃಪಾತವಾಗುತ್ತದೆ, ಎಂದು ಸಿದ್ಧಾಂತ.

**7. ಫಲಶ್ರುತ್ಯಧಿಕರಣ—** ದೇವತೆಗಳು ನಮ್ಮ ಇಂದ್ರಿಯಪ್ರೇರಕರಾದುದರಿಂದ 'ಸ್ವಾಮೀ ಹಿ ಫಲಮಶ್ನುತೇ' ಎಂಬ ನ್ಯಾಯದಂತೆ ನಮ್ಮ ಕರ್ಮಫಲಗಳು ಅವರಿಗೇ ಸೇರುತ್ತವೆ. ನಮಗೆ ಮೋಕ್ಷಫಲವೇ ಇಲ್ಲ. ಲೌಕಿಕಭೋಗ-ಭಾಗ್ಯಗಳಷ್ಟೇ ಫಲ, ಎಂದು ಪೂರ್ವಪಕ್ಷ. ಸ್ವಾತಂತ್ರ್ಯವು ಪೂರ್ವಪಕ್ಷಯುಕ್ತಿ. ಇಂದ್ರಿಯನಿಯಾಮಕತ್ವ, ಎಂದು ಅದರ ಅರ್ಥ.

ಮನುಷ್ಯರಿಗೆ ಕೂಡಲೇ ಫಲಸಿದ್ಧಿಯಾಗುತ್ತದೆ. ಮಾನುಷಮುಕ್ತಿಗಾಗಿ ದೇವತೆಗಳು ಎಲ್ಲ ಮನುಷ್ಯರಿಗೂ ಪ್ರೇರಕರಾಗಿರುತ್ತಾರೆ. ಅದೇ ಅವರಿಗೆ ಹರಿಪ್ರೀತಿಕರವಾದ ಕರ್ಮವಾದ್ದರಿಂದ ಅವರಿಗೆ ವಿಲಂಬೇನ ಪ್ರಾರಬ್ಧ ಕ್ಷಯವಾಗಿ ಸಿದ್ಧಿಯಾಗುತ್ತದೆ. ಮನುಷ್ಯರಿಗೆ ಮೋಕ್ಷವೇ ಇಲ್ಲವೆಂದಾದಲ್ಲಿ ದೇವತೆಗಳ ಈ ವಿಳಂಬ ಬೇಕಿರಲಿಲ್ಲ, ಎಂದು ಸಿದ್ಧಾಂತ. ಅತ್ವರಯೈವ ಸಿದ್ಧಿ,

ಇದು ಸಿದ್ಧಾಂತನ್ಯಾಯ. 'ಮಾನುಷಮುಖ್ಯರ್ಥಮೇವ ದೇವಾನಾಮ್ ಅತ್ವರಯಾ ಸಿದ್ಧಿಶ್ರುತೇಃ' -ನ್ಯಾ.ವಿ.

**8.** ಕೃತ್ಸ್ನಭಾವಾಧಿಕರಣ— ಮೋಕ್ಷದಲ್ಲಿ ಇತರಾಶ್ರಮಿಗಳಿಗಿಂತ ಗೃಹಸ್ಥಾಶ್ರಮಿಗಳೇ ಉತ್ತಮರು. ಅವರಿಗೆ ಬ್ರಹ್ಮಚರ್ಯಾದಿ ಎಲ್ಲ ಆಶ್ರಮ ಕರ್ಮಗಳಲ್ಲೂ ಅಧಿಕಾರವಿದೆ. ಆದ್ದರಿಂದ ಅವರೇ ಅಧಿಕರು. ಅಪೂರ್ಣ ವಿಶೇಷಯೋಗ್ಯತಾ-ಎಲ್ಲಾ ಕರ್ಮವಿಶೇಷಗಳಲ್ಲಿ ಅಧಿಕಾರ, ಇದು ಪೂರ್ವಪಕ್ಷಯುಕ್ತಿ.

ಗೃಹಸ್ಥರು ಬೇಗನೇ ಸಿದ್ಧಿಯನ್ನು ಪಡೆಯುತ್ತಾರೆ, ಯತಿಗಳು ಸಾವಕಾಶವಾಗಿ, ಅವರಿಗಿಂತಲೂ ವಿಲಂಬವಾಗಿ ದೇವತೆಗಳು. ಅವರಲ್ಲೂ ಚತುರ್ಮುಖನು ಇನ್ನೂ ತಡವಾಗಿ ಮುಕ್ತಿಭಾಜನನಾಗುತ್ತಾನೆ.

''ತ್ವರಯೈವ ಗೃಹಿಣಃ ಸಾಧಯಂತಿ ಮುಕ್ತಿಮ್ ।
ಅತ್ವರಯೈವ ಯತಯಸ್ತೇಭ್ಯಶ್ಚಾತ್ವರಯಾ ದೇವಾಃ ।
ತೇಷು ಚ ಬ್ರಹ್ಮಾ॥''
ಯೋ ಹಿ ತ್ವರಯಾ ಸಾಧಯೇತ್ ಸ ಮಂದಂ ಸುಖಮವಾಪ್ನುಯಾತ್ ।
ಯೋ ಹ್ಯತ್ವರಯಾ ಸ ಮಹತ್॥

ಬೇಗನೆ ಸಾಧನೆಯಾದರೆ ಅಲ್ಪಮೋಕ್ಷಸುಖ, ದೀರ್ಘವಾದಷ್ಟು ಅಧಿಕ ಸುಖ. ಬಹುಕರ್ಮಾಧಿಕಾರಕ್ಕಿಂತ ಬಹುಕಾಲ ಕರ್ಮಾನುಷ್ಠಾನ ಹೆಚ್ಚಿನದು. ಅತ್ವರಯೈವ ಸಿದ್ಧಿಃ=ನಿಧಾನವಾಗಿ ಸಾಧನೆ, ಇದು ಸಿದ್ಧಾಂತಯುಕ್ತಿ. ಬ್ರಹ್ಮ ದೇವರು ನೂರು ಬ್ರಹ್ಮರ ಕಲ್ಪಪರ್ಯಂತ ಸಾಧನೆಗಳನ್ನು ಮಾಡಿಕೊಂಡೇ ಪ್ರಾರಬ್ಧವನ್ನು ಅನುಭವಿಸುವುದರಿಂದ ಅವರಿಗೆ ಎಲ್ಲರಿಗಿಂತಲೂ ಮಿಗಿಲಾದ ಸಾಯುಜ್ಯಮೋಕ್ಷವು ದೊರೆಯುತ್ತದೆ. ಅತ್ವರಯೈವ ಸಿದ್ಧಿ. ಇದು ಸಿದ್ಧಾಂತ ಯುಕ್ತಿ.

**9.** ಅನಾವಿಷ್ಕಾರಾಧಿಕರಣ— ಸಾರ್ವಜನಿಕವಾಗಿ ತತ್ತ್ವಜ್ಞಾನವನ್ನು ಉಪದೇಶಮಾಡಿದರೆ ಯೋಗ್ಯರಾದ ಅನೇಕರಿಗೆ ಜ್ಞಾನವು ಲಭಿಸುವುದರಿಂದ ಎಲ್ಲರೂ ಕೇಳುವಂತೆ ತತ್ತ್ವೋಪದೇಶ ಮಾಡಬೇಕು ಎಂದು, ಇಲ್ಲಿ ಪೂರ್ವಪಕ್ಷ. ಅಪೂರ್ಣವಿಶೇಷಯೋಗ್ಯತಾ=(ಅಶೇಷತೋಽಪಿ ಯೋಗ್ಯಾ

ಜ್ಞಾನಿನೋ ಭವಂತಿ–ನ್ಯಾ.ವಿ.) ಅಶೇಷಯೋಗ್ಯರಿಗೆ ಜ್ಞಾನಲಾಭ. ಇದು ಪೂರ್ವಪಕ್ಷ ಯುಕ್ತಿ.

ತತ್ತ್ವೋಪದೇಶವು ಶ್ರವಣಕ್ಕಿಂತಲೂ ದೊಡ್ಡಸಾಧನೆ. ಅದನ್ನು ಎಲ್ಲರೂ ಕೇಳುವಂತೆ ಮಾಡಿದರೆ ಅಯೋಗ್ಯರೂ ತತ್ತ್ವಜ್ಞಾನವನ್ನು ಪಡೆಯಬಹುದು. ಅದರಿಂದ ಅನರ್ಥವೇ ಹೆಚ್ಚು. ಆದ್ದರಿಂದ ದೇಶ–ಕಾಲಗಳನ್ನು ನೋಡಿ ಯೋಗ್ಯರಿಗೇ ಏಕಾಂತದಲ್ಲಿ ಶ್ರವಣ ಮಾಡಿಸಬೇಕು. ಅತ್ವರಯೈವ ಸಿದ್ಧಿಃ– ಇದು ಸಿದ್ಧಾಂತಯುಕ್ತಿ. (ತಸ್ಮಾತ್ ವಿಚಾರ್ಯ ಯೋಗ್ಯಾನಾಮೇವ ಅತ್ವರಯೈವ ಕಥಿತ್ವಾ ಸಿದ್ಧಿರ್ಭವತಿ. –ನ್ಯಾ.ವಿ.)

ತ್ಯಕ್ತ್ವಾ ತ್ವರಾಂ ಬ್ರಹ್ಮವಿದ್ಯಾಂ ವದೇತ
ಜನಾಯ ಯೋಗ್ಯಾಯ ಸದೈವ ವಿದ್ವಾನ್॥ ಇತಿ ಶ್ರುತೇಃ । –ನ್ಯಾ.ವಿ.

**10. ಮುಕ್ತಿಫಲಾಧಿಕರಣ—** ಮೋಕ್ಷಸಾಧನವಾದ ಶ್ರವಣಾದಿ ಸತ್ಕರ್ಮ ಗಳ ಫಲವಾದ ಅಪರೋಕ್ಷಜ್ಞಾನವು ಈ ಜನ್ಮದಲ್ಲೇ ಸಿಗುತ್ತದೆ. ಕೃಷ್ಯಾದಿ ಶ್ರಮದ ಫಲವು ಕೂಡಲೇ ಸಿಗುವಂತೆ, ಎಂದು ಈ ಅಧಿಕರಣದ ಪೂರ್ವಪಕ್ಷ. ವಿರೋಧಹಾನಿಃ– ಇದು ಪೂರ್ವಪಕ್ಷಯುಕ್ತಿ. ಸಾಧನೆ ಮಾಡಿದ ಮೇಲೆ ಫಲ ದೊರಕಲು ಯಾವುದೇ ವಿರೋಧವು ಇಲ್ಲ, ಎಂದು ಅದರ ಅರ್ಥ.

ಶ್ರವಣ ಮಾಡಿದ ಜನ್ಮದಲ್ಲೇ ಅಪರೋಕ್ಷವಾಗಬೇಕಿಲ್ಲ. ಶ್ರವಣ– ಮನನ–ಧ್ಯಾನಗಳನ್ನು ಪರಿಪೂರ್ಣವಾಗಿ ಮಾಡಿದ್ದರೂ ಜನ್ಮಾಂತರದ ಪಾಪವು ಪ್ರತಿಬಂಧಕವಾಗಿದ್ದರೆ ಈ ಜನ್ಮದಲ್ಲೇ ಅಪರೋಕ್ಷವಾಗುವುದಿಲ್ಲ. ಪ್ರತಿಬಂಧಕ ಪಾಪಗಳು ಭೋಗದಿಂದ ನಾಶವಾಗಿ ಜನ್ಮಾಂತರದಲ್ಲಿ ಅಪರೋಕ್ಷ ವಾಗುತ್ತದೆ, ಎಂದು ಸಿದ್ಧಾಂತ. ಅತ್ವರಯೈವ ಸಿದ್ಧಿಃ=ವಿಲಂಬವಾಗಿಯೇ ಸಿದ್ಧಿ ಅಂದರೆ ಅಪರೋಕ್ಷರೂಪ ಫಲಸಿದ್ಧಿ, ಎಂದರ್ಥ.

ಯದ್ಯಾರಬ್ಧಂ ಕರ್ಮ ನಿಬಂಧಕಂ ಸ್ಯಾತ್ ।
ಪ್ರೇತ್ಯೈವ ಪಶ್ಯೇತ್ ಯೋಗಮೇವಾನ್ವವೇಕ್ಷ್ಯ ॥

**11. ಮುಕ್ತಿಫಲಾಧಿಕರಣ—** ಬ್ರಹ್ಮಾಪರೋಕ್ಷವಾದಾಗ ಇದ್ದ ಶರೀರವು

ನಾಶವಾದ ಕೂಡಲೇ ಜನ್ಮಾಂತರವಿಲ್ಲದೆ, ಮೋಕ್ಷವಾಗುತ್ತದೆ, ಎಂದು ಈ ಅಧಿಕರಣದ ಪೂರ್ವಪಕ್ಷ. ವಿರೋಧಹಾನಿಃ, ಎನ್ನುವುದೇ ಪೂರ್ವಪಕ್ಷಯುಕ್ತಿ.

ಅಪರೋಕ್ಷಜ್ಞಾನವಾದರೂ ಪ್ರಾರಬ್ಧಕರ್ಮವು ನಾಶವಾಗುವವರೆಗೆ ಮೋಕ್ಷವಿಲ್ಲ. ಸಿದ್ಧಾಂತಯುಕ್ತಿ–ಅತ್ವರಯೈವ ಸಿದ್ಧಿಃ, ಎಂದು.

**ನಾಲ್ಕನೇ ಅಧ್ಯಾಯದ ಮೊದಲ ಪಾದದ ಎಂಟು ಅಧಿಕರಣಗಳ ಪೂರ್ವಪಕ್ಷ–ಸಿದ್ಧಾಂತ ಯುಕ್ತಿಗಳು—**

**ಸುಶಕ್ಯತಾ ಶಶ್ವದತಿಪ್ರಸಿದ್ಧಿವಿವೇಕವಿನ್ಯಾಸವಿಚಾರಸಂಜ್ಞಾಃ ।**
**ನಾನಾಪ್ರವೃತ್ತಿಃ ಕೃತಕೃತ್ಯತಾ ಚ ವಿಪಕ್ಷತರ್ಕಾಃ ಸಮತೀತಪಾದೇ**
**॥ ೧೨೨ ॥**

**ಮಹಾಫಲತ್ವಂ ಪ್ರವಿವಿಕ್ತಾ ಚ ಸಂಧಿಗ್ರಹಃ ಸಾಧನಮಾಪ್ತಕೃತ್ಯಮ್ ।**
**ವಿಶೇಷಕಾರ್ಯಂ ಕೃತಿಸಂಸ್ಥಿತಿಶ್ಚ ಸುಯುಕ್ತಯೋ ನಿರ್ಣಯಗಾಃ**
**ಸ್ವಪಕ್ಷೇ ॥ ೧೨೩ ॥**

**1.** ಆವೃತ್ತ್ಯಧಿಕರಣ— ಪೂರ್ವಪಕ್ಷಯುಕ್ತಿ–ಸುಶಕ್ಯತಾ=ಸುಲಭದಿಂದ ಸಾಧ್ಯತೆ. ಸಿದ್ಧಾಂತಯುಕ್ತಿ–ಮಹಾಫಲತ್ವಂ=ಮೋಕ್ಷವು ಮಹಾಫಲವಾಗಿರುವುದು.

**2.** ಆತ್ಮಾಧಿಕರಣ— ಶಶ್ವದತಿಪ್ರಸಿದ್ಧಿಃ=ಯಾವಾಗಲೂ ಅತ್ಯಂತ ಪ್ರಸಿದ್ಧಿ–ಇದು ಪೂರ್ವಪಕ್ಷಯುಕ್ತಿ. ಸಿದ್ಧಾಂತ ಯುಕ್ತಿ–ಪ್ರವಿವಿಕ್ತತಾ= ಸವಿಶೇಷತ್ವ.

**3.** ನ ಪ್ರತೀಕಾಧಿಕರಣ– ಯುಕ್ತಿವಿವೇಕಃ=ಪೂರ್ವಾಧಿಕರಣ ನ್ಯಾಯದಿಂದ ವಿಚಾರ–ಇದು ಪೂರ್ವಪಕ್ಷಯುಕ್ತಿ. ಸಂಧಿಗ್ರಹಃ=ಉಪಪತ್ತಿಯಿಂದ ಗ್ರಾಹ್ಯತ್ವ. ('ಸಂಧಿಃ=ಉಪಪತ್ತಿಃ'–ನ್ಯಾ.ವಿ.) ಇದು ಸಿದ್ಧಾಂತಯುಕ್ತಿ.

**4.** ಬ್ರಹ್ಮದೃಷ್ಟ್ಯಧಿಕರಣ— ವಿನ್ಯಾಸಃ=ವಿವಿಧಗುಣಧ್ಯಾನ– ಪೂರ್ವಪಕ್ಷಯುಕ್ತಿ. ಸಾಧನಂ=ಅಧಿಕ ಸಾಧನೆ. ಸಿದ್ಧಾಂತಯುಕ್ತಿ.

**5. ಆದಿತ್ಯಾಧಿಕರಣ**—ವಿಚಾರಃ=ವಿವಿಧಸ್ಥಾನಗಳಲ್ಲಿ ಸಂಚಾರ ಪೂರ್ವಪಕ್ಷಯುಕ್ತಿ.ಆಪ್ತಕೃತ್ಯಂ=ಪ್ರಯೋಜನಪ್ರಾಪ್ತಿ–ಸಿದ್ಧಾಂತಯುಕ್ತಿ.

**6. ಆಸೀನಾಧಿಕರಣ**— ಸಂಜ್ಞಾ=ಅಪರೋಕ್ಷಜ್ಞಾನ–ಇದು ಪೂರ್ವಪಕ್ಷ ಯುಕ್ತಿ. ವಿಶೇಷಕಾರ್ಯಂ=ಮನಸ್ಸಿಗೆ ಅಚಲತ್ವರೂಪವಿಶೇಷ ಕಾರ್ಯ–ಇದು ಸಿದ್ಧಾಂತಯುಕ್ತಿ.

**7. ಆಪ್ರಾಯಣಾಧಿಕರಣ**— ನಾನಾಪ್ರವೃತ್ತಿಃ=ಧ್ಯಾನಾತಿರಿಕ್ತ ಶ್ರವಣಾದಿಪ್ರವೃತ್ತಿ–ಇದು ಪೂರ್ವಪಕ್ಷಯುಕ್ತಿ. ವಿಶೇಷಕಾರ್ಯಂ–ಅಪರೋಕ್ಷಜ್ಞಾನಾಖ್ಯವಿಶೇಷಕಾರ್ಯ–ಸಿದ್ಧಾಂತಯುಕ್ತಿ.

**8. ತದಧಿಗಮಾಧಿಕರಣ**— ಕೃತಕೃತ್ಯತಾ=ಜ್ಞಾನಬಂದಕೂಡಲೇ ಕರ್ಮ ನಾಶವಾಗುವುದರಿಂದ ಜ್ಞಾನಿಗೆ ಕೃತಕೃತ್ಯತೆ–ಇದು ಪೂರ್ವಪಕ್ಷಯುಕ್ತಿ. ಕೃತಸಂಸ್ಥಿತಿಃ=ಪ್ರಾರಬ್ಧಕರ್ಮದ ಸ್ಥಿತಿ–ಇದು ಸಿ.ಯುಕ್ತಿ.

**1. ಆವೃತ್ತ್ಯಧಿಕರಣ**— ಜ್ಯೋತಿಷ್ಟೋಮಯಾಗವನ್ನು ಒಮ್ಮೆ ಮಾಡಿದರೂ ಸಾಕು. ಸ್ವರ್ಗ ಸಿಗುತ್ತದೆ. ಮತ್ತೆಮತ್ತೆ ಮಾಡಬೇಕಾಗಿಲ್ಲ. ಅದರಂತೆ ಮೋಕ್ಷಸಾಧನವಾದ ಶ್ರವಣಾದಿಗಳನ್ನೂ ಒಮ್ಮೆ ಮಾಡಿದರೆ ಸಾಕು, ಇದು ಪೂರ್ವಪಕ್ಷ. 'ಸುಶಕ್ಯತಾ' ಎಂದು ಪೂರ್ವಪಕ್ಷನ್ಯಾಯ. ಆವೃತ್ತಿ ಇಲ್ಲದೆಯೂ ಅಪರೋಕ್ಷಜ್ಞಾನವು ಎಲ್ಲರಿಗೂ ಸುಲಭಸಾಧ್ಯ ಎಂದರ್ಥ.

ಒಂದು ಬಾರಿ ಶ್ರವಣ ಮಾಡಿದರೆ ಸಾಲದು, ಅದರಿಂದ ಅಜ್ಞಾನದ ನಾಶವಾಗುವುದಿಲ್ಲ. ಅದನ್ನು ಮತ್ತೆಮತ್ತೆ ಮಾಡುತ್ತಲೇ ಇರಬೇಕು. ಮಹಾಫಲವಾದ ಮೋಕ್ಷವು ಸುಲಭವಾಗಿ ಎಲ್ಲರಿಗೂ ಸಿಗುವಂತಾಗಬಾರದು. ಒಂದೇ ಬಾರಿ ಶ್ರವಣವನ್ನು ಎಲ್ಲರೂ ಮಾಡಬಹುದು. ನಿರಂತರ ಶ್ರವಣವನ್ನು ಎಲ್ಲರೂ ಮಾಡಲಾಗುವುದಿಲ್ಲ. ಮೋಕ್ಷವು ಮಹಾಫಲವಾದ್ದರಿಂದ ಅದರ ಸಾಧನವೂ ಮಹತ್ತಾಗಿರಬೇಕು. ಹೀಗೆ, ಜ್ಞಾನಕ್ಕೆ ಮಹಾಫಲತ್ವಂ=ಮಹಾಫಲ ವಿರುವುದು ಸಿದ್ಧಾಂತಯುಕ್ತಿ.

**2. ಆತ್ಮಾಧಿಕರಣ**— ವಿಷ್ಣುವನ್ನು ಆತ್ಮತ್ವೇನ ಉಪಾಸನೆ ಮಾಡ ಬೇಕಾಗಿಲ್ಲ. ಆತ್ಮಾ ಎಂದರೆ ಸ್ವಾಮಿ. ವಿಷ್ಣು ಜಗದ ಸ್ವಾಮಿ ಎಂಬುದು

ಅತಿಪ್ರಸಿದ್ಧ. ಆದ್ದರಿಂದ ಆ ರೀತಿ ಉಪಾಸನೆಯಲ್ಲಿ ವಿಶೇಷವಿಲ್ಲ, ಎಂದು ಪೂರ್ವಪಕ್ಷ. ಶಶ್ವತ್–ಅತಿಪ್ರಸಿದ್ಧಿಯೇ ಇಲ್ಲಿ ಪೂರ್ವಪಕ್ಷಯುಕ್ತಿ. ಸರ್ವದಾ ಸುಪ್ರಸಿದ್ಧವಾಗಿರುವುದು, ಎಂದರ್ಥ.

ಆನಂದಾದಿಗುಣಗಳ ಉಪಾಸನೆಗಿಂತಲೂ ಸ್ವಾಮಿತ್ವೋಪಾಸನೆಯಿಂದ ಅಧಿಕಫಲವಿದೆ. ಇದರಿಂದಾಗಿ ಮೋಕ್ಷದಲ್ಲಿ ಸ್ವಾವರನಿಯಾಮಕತ್ವವು ಸಿದ್ಧವಾಗುತ್ತದೆ. ಆದ್ದರಿಂದ ಆತ್ಮತ್ವವು ಸರ್ವಮುಕ್ತೋಪಾಸ್ಯವಾದುದು. ಪ್ರವಿವಿಕ್ತತಾ, ಇದು ಸಿದ್ಧಾಂತಯುಕ್ತಿ. 'ಅನ್ಯೇಭ್ಯೋಽಧಿಕಫಲತ್ವೇನ ಸವಿಶೇಷತ್ವಾತ್ ಆತ್ಮತ್ವಸ್ಯ' ಎಂದು ನ್ಯಾಯವಿವರಣದಂತೆ ಪ್ರವಿವಿಕ್ತತಾ ಎಂದರೆ ಸವಿಶೇಷತ್ವ.

**3. ನ ಪ್ರತೀಕಾಧಿಕರಣ**— ಭಗವತ್ಪ್ರತೀಕಗಳನ್ನೇ ಭಗವಂತನೆಂದು ಉಪಾಸನೆ ಮಾಡಬೇಕು. ಅದರಿಂದಲೂ ಮೋಕ್ಷದಲ್ಲಿ ಫಲಾಧಿಕ್ಯವು ಶ್ರುತವಾಗಿದೆ—

ನಾಮ ಬ್ರಹ್ಮೇತ್ಯುಪಾಸ್ತೇ ಯಾವನ್ನಾಮ್ನೋಪಗತಂ
ತತ್ರಾಸ್ಯ ಕಾಮಚಾರೋ ಭವತಿ ॥ ಎಂದು.

ಇಲ್ಲಿ ಪೂರ್ವಪಕ್ಷಯುಕ್ತಿ–ವಿವೇಕಃ=ಪೂರ್ವಾಧಿಕರಣನ್ಯಾಯದಿಂದ ವಿಚಾರ. 'ತರ್ಹಿ ವಿಶೇಷವತ್ತ್ವಾದೇವ ಪ್ರತೀಕಮಪಿ ಈಶ್ವರ ಇತ್ಯುಪಾಸ್ಯಮ್' ಎಂದು ಪೂರ್ವಾಧಿಕರಣವನ್ನು ಉದಾಹರಿಸಿ ನ್ಯಾಯವಿವರಣದಲ್ಲಿ ಪೂರ್ವಪಕ್ಷವನ್ನು ತೋರಿಸಲಾಗಿದೆ. ಫಲವಿಶೇಷವಿರುವುದರಿಂದ ಆತ್ಮತ್ವವು ಉಪಾಸ್ಯವಾಗುವುದಾದರೆ ಕಾಮಚಾರರೂಪ ಫಲವಿಶೇಷವು ಇರುವುದರಿಂದ ಪ್ರತೀಕವೂ ಬ್ರಹ್ಮನೆಂದು ಉಪಾಸ್ಯವಾಗಲಿ.

ಪ್ರತೀಕವು ವಸ್ತುತಃ ಬ್ರಹ್ಮವಲ್ಲ. ಅದನ್ನು ಬ್ರಹ್ಮನೆಂದು ಉಪಾಸನೆ ಮಾಡಿದರೆ ಮಿಥ್ಯೋಪಾಸನೆಯನ್ನು ಮಾಡಿದಂತಾಗುತ್ತದೆ. ಮಿಥ್ಯೋಪಾಸನೆ ಯಿಂದ ಫಲವಿಲ್ಲ, ಮಾತ್ರವಲ್ಲ, ಅನರ್ಥವಿದೆ. ಯಾವುದಕ್ಕೆ ಉಪಪತ್ತಿ ಇದೆಯೋ ಅದೇ ಗ್ರಾಹ್ಯ. ಪ್ರತೀಕವೇ ಬ್ರಹ್ಮನೆನ್ನುವುದು ಉಪಪತ್ತಿಗೆ ವಿರುದ್ಧ. ಇಲ್ಲಿ ಸಂಧಿಗ್ರಹಃ=ಉಪಪತ್ತಿಯಿಂದ ಗ್ರಾಹ್ಯತ್ವವು ಸಿದ್ಧಾಂತಯುಕ್ತಿ. (ಸಂಧಿಃ= ಉಪಪತ್ತಿಃ ವಿದ್ಯತೇ ತಸ್ಯೈವ ಗ್ರಾಹ್ಯತ್ವಾತ್–ನ್ಯಾ.ವಿ.)

**4. ಬ್ರಹ್ಮದೃಷ್ಟ್ಯಧಿಕರಣ**— ಬ್ರಹ್ಮತ್ವೋಪಾಸನೆ ಅಂದರೆ ಪೂರ್ಣತ್ವೋಪಾಸನೆ ಮಾಡಬೇಕಾಗಿಲ್ಲ, ಎಂದು ಪೂರ್ವಪಕ್ಷ. ಪ್ರತಿದಿನವೂ ವಿವಿಧ ಗುಣೋಪಾಸನೆಯಿಂದಲೇ ಭಗವತ್ಪ್ರೀತಿಯು ಲಭ್ಯವಾಗುತ್ತದೆ. ಆತ್ಮತ್ವೋಪಾಸನೆಯಂತೆ ಬ್ರಹ್ಮತ್ವೋಪಾಸನೆಯ ನಿರ್ಬಂಧವಿಲ್ಲ, ಎಂದು ಪೂರ್ವಪಕ್ಷ. ವಿನ್ಯಾಸಃ=ವಿವಿಧಗುಣನ್ಯಾಸ–ಪೂರ್ವಪಕ್ಷಯುಕ್ತಿ.

(ಪ್ರತಿದಿನಂ ವಿವಿಧಗುಣನ್ಯಾಸೇನ ಭಗವತ್ಪ್ರೀತ್ಯುಪಪತ್ತೇಃ –ನ್ಯಾವಿ.)

ಬ್ರಹ್ಮನೆಂದರೆ ಸಕಲ ಗುಣಗಳಿಂದ ಪೂರ್ಣ. ಹೀಗೆ, ಎಲ್ಲಾ ಗುಣಗಳೂ ಬ್ರಹ್ಮತ್ವೋಪಾಸನೆಯಲ್ಲಿ ಸೇರಿರುವುದರಿಂದ ಬ್ರಹ್ಮತ್ವೋಪಾಸನೆಯು ಅಧಿಕ ಭಗವತ್ಪ್ರೀತಿಗೆ ಕಾರಣವಾಗಿ ಫಲಾಧಿಕ್ಯಕ್ಕೆ ಸಾಧನವಾಗುತ್ತದೆ. ಆದ್ದರಿಂದ ಆ ಉಪಾಸನೆಯನ್ನು ಮಾಡಲೇಬೇಕು. ಸಾಧನಂ=ಅಶೇಷಗುಣಗಳೂ ಸೇರಿರುವುದರಿಂದ ಸಾಧನೆಗಳಲ್ಲಿ ಅಧಿಕವಾಗಿರುವುದು. ಇದು ಸಿದ್ಧಾಂತಯುಕ್ತಿ.

**5. ಆದಿತ್ಯಾಧಿಕರಣ**— ಚಂದ್ರಮಾ ಮನಸೋ ಜಾತಃ, ಇತ್ಯಾದಿಯಾಗಿ ದೇವತೆಗಳು ಪರಮಾತ್ಮನ ಅಂಗಗಳಿಂದ ಹುಟ್ಟಿದ್ದಾರೆ. ಅದಕ್ಕಾಗಿ ತಾವು ಹುಟ್ಟಿರುವ ಭಗವದಂಗಗಳು ತಮಗೆ ಆಶ್ರಯಗಳು, ಎಂದು ದೇವತೆಗಳು ಉಪಾಸನೆ ಮಾಡಬೇಕಿಲ್ಲ. ಅದು ಅನ್ಯಥೋಪಾಸನೆಯಾಗುತ್ತದೆ. ಏಕೆಂದರೆ, ಅವರು ಆ ಅಂಗಗಳಿಂದ ಹುಟ್ಟಿದ್ದರೂ ಅಲ್ಲೇ ಇರುವುದಿಲ್ಲ. ಬೇರೆಬೇರೆ ಕಡೆಗಳಲ್ಲಿ ಸಂಚಾರ ಮಾಡುತ್ತಾರೆ. ಇಲ್ಲಿ ಪೂರ್ವಪಕ್ಷಯುಕ್ತಿ– ವಿಚಾರಃ= ವಿವಿಧೆಡೆ ಸಂಚಾರ ಎಂದರ್ಥ.

ದೇವತೆಗಳು ಆ ರೀತಿಯ ಉಪಾಸನೆಯನ್ನು ಮಾಡಬೇಕು. ಹಾಗೆ ಉಪಾಸನೆ ಮಾಡಿದಾಗ ಮಾತ್ರ ಅವರಿಗೆ ಆ ಭಗವದಂಗಗಳಲ್ಲಿ ಲಯವಾಗಿ ಮೋಕ್ಷವು ದೊರಕುತ್ತದೆ. ಅವರು ಒಂದಂಶದಿಂದ ಭಗವದಂಗದಲ್ಲೂ ಇರುತ್ತಾರೆ. ಆಪ್ತಕೃತ್ಯಂ=ತತ್ಕೃತಾವೇವ ಕೃತ್ಯಸ್ಯ ಆಪ್ತತ್ವಾತ್=ಹಾಗೆ ಧ್ಯಾನ ಮಾಡಿದರೆ ಮಾತ್ರ ಅವರಿಗೆ ಮೋಕ್ಷವು ಸಿಗುತ್ತದೆ, ಎಂದು ಸಿದ್ಧಾಂತಯುಕ್ತಿ.

**6. ಆಸೀನಾಧಿಕರಣ**— ಅಪರೋಕ್ಷಜ್ಞಾನಕ್ಕೆ ಆಸನದ ಅಗತ್ಯವಿಲ್ಲ,

ಮನಸ್ಸು ಭಗವದೇಕನಿಷ್ಠವಾಗುವುದರಿಂದಲೇ ಭಗವದಪರೋಕ್ಷವು ಉಂಟಾಗುತ್ತದೆ, ಎಂದು ಪೂರ್ವಪಕ್ಷ. ಸಂ–ಜ್ಞಾ=ಸರಿಯಾದ ಅಪರೋಕ್ಷ ಜ್ಞಾನ–ಪೂರ್ವಪಕ್ಷಯುಕ್ತಿ.

ಆಸನದಿಂದ ಮನಸ್ಸು ನಿಶ್ಚಲವಾಗುತ್ತದೆ. ಶರೀರವು ಚಂಚಲವಾಗಿದ್ದರೆ ಮನಸ್ಸು ನಿಶ್ಚಲವಾಗಿರುವುದಿಲ್ಲ. ಅದಿಲ್ಲದೆ, ಧ್ಯಾನವು ಸಾಧ್ಯವಿಲ್ಲ. ಆದ್ದರಿಂದ ಅಪರೋಕ್ಷಕ್ಕೆ ಆಸನವೂ ಅಗತ್ಯ, ಎಂದು ಸಿದ್ಧಾಂತ. ವಿಶೇಷಕಾರ್ಯಂ= ಅಚಲತ್ವಸಿದ್ಧಿ ಎಂಬ ವಿಶೇಷಕಾರ್ಯ, ಇದು ಸಿದ್ಧಾಂತಯುಕ್ತಿ.

**7. ಆಪ್ರಾಯಣಾಧಿಕರಣ—** ಅಪರೋಕ್ಷಪರ್ಯಂತ ಧ್ಯಾನ, ಆಮೇಲೆ ಧ್ಯಾನ ಬೇಕಿಲ್ಲ. ಆನಂದಾತಿಶಯನಕ್ಕಾಗಿ ಶ್ರವಣಾದಿಗಳನ್ನು ಮಾಡಿದರೂ ಸಾಕು, ಎಂದು ಪೂರ್ವಪಕ್ಷ. ನಾನಾಪ್ರವೃತ್ತಿಃ=ಧ್ಯಾನಾತಿರಿಕ್ತವಾದ ಶ್ರವಣಾದಿ ಪ್ರವೃತ್ತಿ–ಇದು ಪೂರ್ವಪಕ್ಷಯುಕ್ತಿ.

ಧ್ಯಾನವು ಅಪರೋಕ್ಷಜ್ಞಾನಕ್ಕೆ ಸಾಧನವಾಗುವಂತೆ, ಮೋಕ್ಷದಲ್ಲಿ ಆನಂದ ವೃದ್ಧಿಗೂ ಅದೇ ಅಂತರಂಗಸಾಧನ. ಆದ್ದರಿಂದ ಅಪರೋಕ್ಷಾ ನಂತರವೂ ಧ್ಯಾನವು ಕಾರ್ಯ. ವಿಶೇಷಕಾರ್ಯಂ=ಆನಂದವೃದ್ಧಿರೂಪ ವಿಶೇಷ ಕಾರ್ಯ–ಇದು ಸಿದ್ಧಾಂತಯುಕ್ತಿ.

**8. ತದಧಿಗಮಾಧಿಕರಣ—** ಅಪರೋಕ್ಷಜ್ಞಾನ ಬಂದ ಕೂಡಲೇ ಪೂರ್ವಾರ್ಜಿತಕರ್ಮಗಳೆಲ್ಲವೂ ನಾಶವಾಗುವುದರಿಂದ ಕೂಡಲೇ ಮೋಕ್ಷ ವಾಗುತ್ತದೆ, ಎಂದು ಪೂರ್ವಪಕ್ಷ. ಕೃತಕೃತ್ಯತಾ=ಜ್ಞಾನಾನಂತರ ಅಶೇಷಕರ್ಮ ಗಳು ನಾಶವಾಗುವುದರಿಂದ ಜ್ಞಾನಿಯು ಕೃತಕೃತ್ಯ, ಎಂದು ಪೂರ್ವಪಕ್ಷ ಯುಕ್ತಿ.

ಜ್ಞಾನದಿಂದ ಸಂಚಿತಕರ್ಮನಾಶವಾದರೂ, ಪ್ರಾರಬ್ಧಕರ್ಮವು ಇರುತ್ತದೆ. ಅದು ಭೋಗದಿಂದ ನಾಶವಾಗುವವರೆಗೂ ಮೋಕ್ಷವಾಗುವುದಿಲ್ಲ, ಎಂದು ಸಿದ್ಧಾಂತ. ಕೃತಸಂಸ್ಥಿತಿಃ=ಪ್ರಾರಬ್ಧಸಂಸ್ಥಿತಿಯೇ ಸಿದ್ಧಾಂತಯುಕ್ತಿ.

## ನಾಲ್ಕನೆಯ ಅಧ್ಯಾಯದ ಎರಡನೇ ಪಾದದ ಹತ್ತು ಅಧಿಕರಣಗಳ ಪೂರ್ವಪಕ್ಷ-ಸಿದ್ಧಾಂತ ನ್ಯಾಯಗಳು

ವ್ಯಾಮಿಶ್ರತಾ ಕಾರ್ಯಕರತ್ವಮರ್ಥ -
ಕ್ಲೃಪ್ತಿಃ ಸುದಾರ್ಢ್ಯಂ ಪರತಂತ್ರತಾ ಚ ।
ಸಮಾನಧರ್ಮಾಃ ಕೃತಶೇಷತಾ ಚ
ಲೋಕೋಪಮಾ ಪೂರ್ವಮತಾನುಸಾರಾಃ ॥ ೧೨೪ ॥

ವಿಶೇಷಸಾಮ್ಯಶ್ರುತಿದಾರ್ಢ್ಯ(ರಾಢ್ಯ)ತಾ ಚ
ಸಮಾನಲೋಪೋ ಮಹಿಮಾವಿಶೇಷಃ ।
ಕೃತಾರ್ಥತಾ ಶಶ್ವದನುಪ್ರವೃತ್ತಿಃ
ಸಿದ್ಧಾಂತನಿರ್ಣೀತಿವಿಶಿಷ್ಟಹೇತವಃ ॥ ೧೨೫ ॥

1. ವಾಗಧಿಕರಣ—ಪೂರ್ವಪಕ್ಷಯುಕ್ತಿ-ವ್ಯಾಮಿಶ್ರತಾ=ವಿರುದ್ಧವಚನ. ಸಿದ್ಧಾಂತ ನ್ಯಾಯ-ವಿಶೇಷಸಾಮ್ಯಶ್ರುತಿಃ=ಮನಸ್ಸಿಗೆ ವಿಶೇಷವನ್ನೂ ಸಾಮ್ಯವನ್ನೂ ಹೇಳುವ ಶ್ರುತಿ.

ಈ ಅಧಿಕರಣದಲ್ಲಿ ವಾಗಭಿಮಾನಿ ಉಮಾದೇವಿಯು ಮನೋಭಿಮಾನಿಯಾದ ರುದ್ರನಲ್ಲಿ ಲಯಹೊಂದುವುದಿಲ್ಲ, ಎಂದು ಪೂರ್ವಪಕ್ಷ. ಜನ್ಯವು ಜನಕದಲ್ಲಿ ಲಯವಾಗಬೇಕು. ಮನಸ್ಸು-ವಾಕ್‌ಗಳಲ್ಲಿ ಯಾವುದು ಮೊದಲು ಯಾವುದು ಆಮೇಲೆ ಎಂದು ನಿರ್ಧರಿಸಲಾಗದು. 'ವಾಕ್ ಪೂರ್ವರೂಪಂ, ವಾಗುತ್ತರರೂಪಂ' ಎನ್ನುವ ಶ್ರುತಿಯು ವಾಕ್ ಮೊದಲು ಆಮೇಲೆ ಮನಸ್ಸು ಎಂದರೆ 'ಮನಃ ಪೂರ್ವರೂಪಂ, ವಾಗುತ್ತರರೂಪಂ' ಎಂಬ ಶ್ರುತಿಯಲ್ಲಿ ಮನಸ್ಸು ಮೊದಲು ಆಮೇಲೆ ವಾಕ್, ಎಂದಿದೆ. ಹೀಗೆ 'ವ್ಯಾಮಿಶ್ರತ್ವಾತ್ ಅನಿರ್ಣೀತಿರೇವ-ವಿರುದ್ಧಮಾತುಗಳಿರುವುದರಿಂದ ನಿರ್ಣಯಮಾಡಲಾಗದು' (ನ್ಯಾ.ವಿ.) ಎಂದು ಪೂರ್ವಪಕ್ಷ.

'ವಾಕ್ ಪೂರ್ವರೂಪಂ' ಎಂದರೆ ವಿಷ್ಣುಶಬ್ದದ ಪೂರ್ವವರ್ಣವಾದ ವಕಾರದಿಂದ ಪ್ರತಿಪಾದ್ಯವಾದುದು ವಾಕ್‌ಶಬ್ದವಾಚ್ಯವಾದ 'ವಾಮ' ಎಂಬ

ಭಗವದ್‌ರೂಪ ಎಂದರ್ಥ. ಮನಃಶಬ್ದವಾಚ್ಯವಾದ ವರಾಹರೂಪವು ಉತ್ತರವರ್ಣ ಪ್ರತಿಪಾದ್ಯ ಎಂದು ಮಾಂಡೂಕೇಯಮತ. ಮನಸ್‌ಶಬ್ದ ವಾಚ್ಯವು ಪೂರ್ವವರ್ಣದಿಂದಲೂ, ವಾಕ್‌ಶಬ್ದವಾಚ್ಯವಾದುದು ಉತ್ತರ ವರ್ಣದಿಂದಲೂ ಪ್ರತಿಪಾದ್ಯ ಎಂದು ಅವನ ಮಗನ ಮತ. ಹೀಗೆ ಅಲ್ಲಿ ಎರಡು ರೂಪಗಳಿಗೂ ಸಾಮ್ಯವಿದೆ. 'ಮನಸಾ ವಾ ಅಗ್ರೇ ಸಂಕಲ್ಪಯತಿ, ಅಥ ವಾಚಾ ವ್ಯವಹರತಿ–ಮೊದಲು ಮನಸ್ಸಿನಿಂದ ನಿರ್ಧರಿಸಿ ಆಮೇಲೆ ನಾಲಿಗೆಯಿಂದ ಮಾತನಾಡುತ್ತಾನೆ– ಹೀಗೆ ಯುಕ್ತಿಯಿಂದ ಮನಸ್ಸಿಗೆ ವಿಶೇಷ ಅಂದರೆ ಪ್ರಾಧಾನ್ಯವು ಇಲ್ಲಿ ಶ್ರುತವಾಗಿದೆ. ಇದಲ್ಲದೆ ಸ್ಪಷ್ಟವಾದ ಶ್ರುತಿಯೂ ಇರುವುದರಿಂದ ಅಪ್ರಧಾನವಾದ ವಾಕ್‌ಗೆ (ಉಮೆಗೆ) ಮನಸ್ಸಿನಲ್ಲೇ (ರುದ್ರನಲ್ಲಿ) ಲಯ, ಎಂದು ಸಿದ್ಧಾಂತ. ವಿಶೇಷಸಾಮ್ಯಶ್ರುತಿ–ಸಿದ್ಧಾಂತ ನ್ಯಾಯ. ಪ್ರಾಧಾನ್ಯ–ಸಾಮ್ಯಶ್ರವಣ ಎಂದು ಅದರ ಅರ್ಥ.

**2. ಮನಃಪ್ರಾಣಾಧಿಕರಣ**— ಕಾರ್ಯಕರತ್ವಂ = ಸಕಲಕಾರ್ಯ ನಿರ್ವಾಹಕತ್ವವು ಪೂ.ಯುಕ್ತಿ. ಆಢ್ಯತಾ=ಶ್ರೇಷ್ಠತೆಯು ಸಿದ್ಧಾಂತಯುಕ್ತಿ.

ಈ ಅಧಿಕರಣದಲ್ಲಿ ಮನಸ್ಸು (ರುದ್ರದೇವ) ಪ್ರಾಣನಿಗಿಂತ ಪ್ರಧಾನ ವಾಗುವುದರಿಂದ ಅದರಲ್ಲೇ ಪ್ರಾಣನಿಗೆ ಲಯ ಎಂದು ಪೂರ್ವಪಕ್ಷ. ನಮ್ಮ ದೇಹದ ಪ್ರತ್ಯಕ್ಷಾಪ್ರತ್ಯಕ್ಷ ವ್ಯಾಪಾರಗಳಿಗೆಲ್ಲ ಮನಸ್ಸೇ ಕಾರಣವಾಗಿದೆ. ಅದು ಶ್ರೇಷ್ಠ. ಅದರಲ್ಲೇ ಪ್ರಾಣನಿಗೆ ಲಯ. ಕಾರ್ಯಕರತ್ವಂ, ಎನ್ನುವುದು ಪೂರ್ವಪಕ್ಷಯುಕ್ತಿ.

ಪ್ರಾಣನೇ ಶ್ರೇಷ್ಠ. ಮನಸ್ಸೂ ಸೇರಿ ಎಲ್ಲ ಇಂದ್ರಿಯಗಳ ವ್ಯಾಪಾರ ಗಳನ್ನು ಪ್ರಾಣನೇ ನಡೆಸುತ್ತಾನೆ—

ಇಂದ್ರಿಯಸ್ಥೈಃ ಸ್ವರೂಪೈಸ್ತು ಜ್ಞಾನಾನಿ ಜನಯತ್ಯಸೌ ।<br>
ಮನಃಸ್ಥೇನ ವಿಶೇಷೇಣ ಕಾಮ್ಯೈಃ ಕರ್ಮಕೃದೇವ ಚ ॥

ಈ ಶ್ರುತಿಯಲ್ಲಿ ಪ್ರಾಣನಿಗೆ ಸಕಲೇಂದ್ರಿಯಗಳಲ್ಲಿ ಕ್ರಿಯೆಯನ್ನು ನಡೆಸುವ ಮೂಲಕ ಶ್ರೇಷ್ಠತ್ವವನ್ನು ಹೇಳಿರುವುದರಿಂದ ಅವನಲ್ಲೇ ಮನಸ್ಸಿಗೆ ಲಯ, ಎಂದು ಸಿದ್ಧಾಂತ.

**3. ಆಧ್ಯಕ್ಷಾಧಿಕರಣ—** ಇಲ್ಲಿಯೂ ಕಾರ್ಯಕರತ್ವಂ, ಎನ್ನುವುದು ಪೂರ್ವಪಕ್ಷಯುಕ್ತಿ, ಆಧ್ಯತಾ ಎನ್ನುವುದೇ ಸಿದ್ಧಾಂತ ಯುಕ್ತಿ.

ಪ್ರಾಣನಿಗೆ (ಬ್ರಹ್ಮದೇವನಿಗೆ) ಭಗವಂತನಲ್ಲಿ ಲಯವಲ್ಲ. ಅವರರಿಗೆ ಶ್ರೇಷ್ಠರಲ್ಲಿ ಲಯ. ಆದರೆ, ಪ್ರಾಣ ಭಗವಂತನಿಗೆ ಸಮಾನ. ಭಗವಂತನಂತೆ ಅವನೂ ಸೃಷ್ಟಿಕರ್ತಾ ಎಂದು 'ಪ್ರಾಣಾದಿದಮಾವಿರಾಸೀತ್' ಎಂಬ ಶ್ರುತಿ ಇದೆ, ಎಂದು ಪೂರ್ವಪಕ್ಷ. ಈ ಪೂರ್ವಪಕ್ಷಕ್ಕೆ ಅನೇಕ ಶ್ರುತಿಗಳ ಆಧಾರವಿದೆ.

ಪ್ರಾಣನಿಗೆ ವಿಷ್ಣುವಿನಲ್ಲಿಯೇ ಲಯ. ಇದಕ್ಕೆ ನಿರವಕಾಶಶ್ರುತಿಗಳ ಆಧಾರವಿದೆ— 'ಪ್ರಾಣಃ ಪರಮ್ ಉಪಗಚ್ಛತಿ, ಪ್ರಾಣೋ ವಾವ ಈಶಿತ ವ್ಯೇಶಃ' ಎಂದು ಪೂರ್ವಪಕ್ಷಶ್ರುತಿಗಳು ಸರ್ವಶಬ್ದವಾಚ್ಯನಾದ ವಿಷ್ಣುವಿನಲ್ಲಿ ಸಾವಕಾಶ, ಎಂದು ಸಿದ್ಧಾಂತ. ಆಧ್ಯತಾ=ಶ್ರೇಷ್ಠತೆ ಇದು ಸಿದ್ಧಾಂತಯುಕ್ತಿ.

**4. ಭೂತಾಧಿಕರಣ—** ಈ ಅಧಿಕರಣದ ಪೂರ್ವಪಕ್ಷಯುಕ್ತಿ- ಅರ್ಥಕ್ಲೃಪ್ತಿ=ಶ್ರುತಿಯಿಂದ ಸಿದ್ಧಿ. ಸಿದ್ಧಾಂತಯುಕ್ತಿ ಸಮಾನಲೋಪಃ= (ಸ+ಮಾನ) ಪ್ರಮಾಣಸಿದ್ಧ ಲಯ. (ಲೋಪಃ=ಲಯ)

'ಅಗ್ನೌ ದೇವಾ ವಿಲೀಯಂತೇ' ಎಂದು ಶ್ರುತಿ ಇರುವುದರಿಂದ ಎಲ್ಲ ದೇವತೆಗಳಿಗೂ ಅಗ್ನಿಯಲ್ಲೇ ಲಯವೆಂದು ಸಿದ್ಧವಾಗಿದೆ, ಅಗ್ನಿ ವಾಯುವಿ ನಲ್ಲಿ, ವಾಯು ಆಕಾಶದಲ್ಲಿ ಲಯ ಹೊಂದಿದಾಗ ಅಗ್ನಿಯಲ್ಲಿ ಲೀನರಾದ ದೇವತೆಗಳಿಗೆ 'ವಾಯು-ಆಕಾಶರೂಪಭೂತ'ಗಳಲ್ಲಿ ಲಯವು ಅರ್ಥಾತ್ ಸಿದ್ಧವಾಗುತ್ತದೆ, ಎಂದು ಪೂರ್ವಪಕ್ಷ.

ಕೆಲವು ದೇವತೆಗಳಿಗೆ ಮಾತ್ರ ಅಗ್ನಿಯಲ್ಲಿ ಲಯ. ಇತರರಿಗೆ 'ಭೂತೇಷು ದೇವಾ ವಿಲೀಯಂತೇ' ಎಂದು ಸ್ಪಷ್ಟಶ್ರುತಿ ಇರುವುದರಿಂದ ಭೂತಾಭಿಮಾನಿ ದೇವತೆಗಳಲ್ಲಿ ಸಾಕ್ಷಾತ್ತಾಗಿ ಹಾಗೂ ಶ್ರುತಿಯಲ್ಲಿ ಹೇಳಿರುವಂತೆ ಇತರ ರಲ್ಲಿಯೂ ಲಯ ಎಂದು ಸಿದ್ಧಾಂತ. ಇದೂ 'ಪೃಥಿವ್ಯಾಮೃಭವೋ- ವಿಲೀಯಂತೇ, ವರುಣೇಽಶ್ವಿನೌ' ಇತ್ಯಾದಿ ಪ್ರಮಾಣ ಸಿದ್ಧವಾಗಿದೆ, ಎಂದು ಸಿದ್ಧಾಂತಯುಕ್ತಿ.

**5. ನೈಕಸ್ಮಿನ್ನಧಿಕರಣ—** ಇಲ್ಲಿಯೂ ಹಿಂದಿನದೇ ಪೂರ್ವಪಕ್ಷ- ಸಿದ್ಧಾಂತಯುಕ್ತಿಗಳು.

ಪಂಚಭೂತಗಳು ಯಾವ ಕ್ರಮದಿಂದ ಹುಟ್ಟುತ್ತವೋ (ಆತ್ಮನಃ ಆಕಾಶಃ ಸಂಭೂತಃ ಆಕಾಶಾದ್ ವಾಯುಃ...) ಅದಕ್ಕೆ ವಿಪರೀತವಾಗಿ ಅಂದರೆ ವ್ಯುತ್ಕ್ರಮದಿಂದ ಲಯ ಹೊಂದುತ್ತವೆ. ಅದಕ್ಕೆ ಅನುಗುಣವಾಗಿ ಮೋಕ್ಷ ಸಮಯದಲ್ಲಿ ದೇವತೆಗಳಿಗೆ ಒಬ್ಬರಲ್ಲಿ ಮತ್ತೊಬ್ಬರ ಪ್ರವೇಶ. 'ಅಗ್ನೌ ದೇವಾ ವಿಲೀಯಂತೇ' ಎಂದಿರುವುದರಿಂದ, ವಿಶಿಷ್ಯ ಹೇಳಿದ ದೇವತೆಗಳಿಗಿಂತ ಇತರ ದೇವತೆಗಳು ಎಲ್ಲರೂ, ಅಗ್ನಿಯಲ್ಲಿ ಮಾತ್ರ ಲಯ ಹೊಂದುತ್ತಾರೆ. ಈ ಸ್ಪಷ್ಟ ಶ್ರುತ್ಯನ್ಯಥಾನುಪಪತ್ತ್ಯಾ ಭೂತಲಯಶ್ರುತಿಗೆ ಹಿಂದೆ ಹೇಳಿದಂತೆ ಪರಂಪರಯಾ ಇತರ ಭೂತಗಳಲ್ಲಿ ಲಯ, ಎಂದೇ ಅರ್ಥಮಾಡಬೇಕು ಎಂದು ಪೂರ್ವಪಕ್ಷ.

'ಭೂತೇಷು ದೇವಾ ಲೀಯಂತೇ' ಎಂದಿರುವುದರಿಂದ ಅಗ್ನಿಯಲ್ಲಿ ಮಾತ್ರವಲ್ಲದೆ, ಇತರಭೂತಗಳಲ್ಲೂ ಕೆಲವು ದೇವತೆಗಳು ಲಯಹೊಂದು ತ್ತಾರೆ. ಅದನ್ನು ಹೇಳುವ ಶ್ರುತಿವಿಶೇಷವಿದೆ—'ಋಭವಃ ಪೃಥಿವ್ಯಾಂ, ವರುಣೇ ಆಪಃ' ಎಂದು. ಅಲ್ಲದೆ ಅಬಭಿಮಾನಿದೇವತೆಗಳಿಗೆ ವರುಣನಲ್ಲಿ ಲಯ ಹೇಳಿರುವುದರಿಂದ ಅವರಿಗೆ ಸಮಸ್ಕಂಧರಾದ ಅಶ್ವಿನೀದೇವತೆಗಳಿಗೂ ವರುಣನಲ್ಲೇ ಲಯ. (ತತ್ಸಮಾನಾಂ ಚ ವಿಶೇಷವಚನಾಭಾವೇ ಸ್ವಸಮಾನ ಲಯಸ್ಥಾನೇ ಏವ ಲಯೋಪಪತ್ತೇಃ–ನ್ಯಾ.ವಿ.) ಹೀಗೆ, ಪ್ರಮಾಣ ಇರುವುದರಿಂದ ತತ್ತದ್ಭೂತಗಳಲ್ಲೂ ಸಾಕ್ಷಾತ್ ಲಯವನ್ನೇ ಹೇಳಬೇಕು.

**6. ಸಮನಾಧಿಕರಣ**— ಇಲ್ಲಿ 'ಸುದಾರ್ಢ್ಯಂ' ಇದು ಪೂರ್ವಪಕ್ಷ ಯುಕ್ತಿ, ಮಹಿಮಾ, ಎನ್ನುವುದು ಸಿದ್ಧಾಂತಯುಕ್ತಿ. ಸುದಾರ್ಢ್ಯ ಎಂದರೆ ನಿತ್ಯಮುಕ್ತಳಾದುದರಿಂದ ಲಕ್ಷ್ಮೀದೇವಿಗೆ ಪರಮಾತ್ಮನ ಸಾಮ್ಯವು ಸುದೃಢ–ನಿಶ್ಚಿತ ಎಂದರ್ಥ. ಮಹಿಮಾ ಎಂದರೆ ನಿತ್ಯವನ್ನೂ ತನ್ನ ಅಧೀನವನ್ನಾಗಿಸುವ ಪರಮಾತ್ಮನ ಮಹಿಮೆ ಎಂದರ್ಥ. ಲಕ್ಷ್ಮೀದೇವಿ ಸಂಸಾರರಹಿತಳು. ಅವಳ ಗುಣಧರ್ಮಗಳನ್ನು ಶ್ರೀಹರಿಯೂ ವ್ಯತ್ಯಾಸ ಮಾಡುವಂತಿಲ್ಲ. ಆದರಿಂದಾಗಿ ಅವಳ ಸ್ವಾತಂತ್ರ್ಯ ಸುದೃಢವಾಗುತ್ತದೆ. ಆಗ ಅವಳು ಹರಿಗೆ ಸಮಾನ ಳಾದಾಳು. ಆದರೆ, ಅವಳಿಗೆ ಹರಿಯ ಸರ್ವಸಾಮ್ಯವಿಲ್ಲದಿರುವುದರಿಂದ ಅವಳಿಗೂ ಸಂಸಾರವಿದೆ. ಅವಳಿಗೂ ಪರಮಾತ್ಮನಲ್ಲಿ ಲಯವಿದೆ, ಎಂದು ಪೂರ್ವಪಕ್ಷ.

ಲಕ್ಷ್ಮೀದೇವಿ ನಿತ್ಯಮುಕ್ತಳು. ಶ್ರೀಹರಿಯು ಮಹಾಮಹಿಮೋಪೇತನಾದವನು. ಅವನ ಅನುಗ್ರಹವಿಶೇಷದಿಂದಾಗಿಯೇ ಲಕ್ಷ್ಮೀದೇವಿಗೆ ಎಂದೂ ಸಂಸಾರವಿಲ್ಲದಂತಾಗಿದೆ. ಹೀಗೆ, ಅವಳೂ ಭಗವದಧೀನಳು. ಅವಳಿಗೆ ಭಗವಂತನಲ್ಲಿ ಲಯವಿಲ್ಲ. ಅವಳಿಗೆ ಲಯ ಎಂದರೆ ಭಗವಂತನ ಅತಿಸಾಮೀಪ್ಯಪ್ರಾಪ್ತಿ.

**7. ತಾನಿ ಪರಾಧಿಕರಣ**— ಪರತಂತ್ರತಾ–ಪೂರ್ವಪಕ್ಷಯುಕ್ತಿ. ವಿಶೇಷಃ= ಸಿದ್ಧಾಂತಯುಕ್ತಿ.

'ಪ್ರಾಣಸ್ಯಾನ್ಯಾಃ ಕಲಾಃ ಕ್ರಮಾತ್–ದೇವತೆಗಳೆಲ್ಲರೂ ಪ್ರಾಣನ ಪ್ರತಿಬಿಂಬರು ಎಂದಿರುವುದರಿಂದ ಎಲ್ಲ ದೇವತೆಗಳೂ ಚತುರ್ಮುಖನ ಅಧೀನರು. ಆದ್ದರಿಂದ ಅವನಲ್ಲೇ ಕೊನೆಯ ಲಯ, ಪರಮಾತ್ಮನಲ್ಲಿ ಲಯವಿಲ್ಲ, ಎಂದು ಪೂರ್ವಪಕ್ಷ.

ಪ್ರಾಣಂ ಪ್ರಾಪ್ಯ ಪರಂ ದೇವಾಃ ತದನ್ಯೇ ಚೈವ ತದ್ಗತಾಃ ।
ಪ್ರಾಪ್ನುವಂತಿ ಪರಂ ದೇವಂ ವಸಂತಿ ಚ ಯಥಾಸುಖಮ್ ॥

ಎಂಬ ವಿಶೇಷಶ್ರುತಿ ಇರುವುದರಿಂದ ದೇವತೆಗಳು ಪರಮಾತ್ಮನ ಪ್ರತಿಬಿಂಬರೂ ಆಗಿದ್ದಾರೆ. ಆದ್ದರಿಂದ, ಪರಮಾತ್ಮನಲ್ಲೂ ದೇವತೆಗಳಿಗೆ ಪ್ರವೇಶವಿದೆ, ಎಂದು ಸಿದ್ಧಾಂತ.

**8. ಅವಿಭಾಗಾಧಿಕರಣ**— ಸಮಾನಧರ್ಮ, ಎಂದು ಪೂರ್ವಪಕ್ಷ ಯುಕ್ತಿ. ಕೃತಾರ್ಥತಾ ಎಂದು ಸಿದ್ಧಾಂತಯುಕ್ತಿ.

ಮುಕ್ತರು ಸ್ವತಂತ್ರರು, ಭಗವಂತನ ಅಧೀನರಲ್ಲ. ಅವರು ಸತ್ಯಸಂಕಲ್ಪರು. ಬಯಸಿದ್ದೆಲ್ಲ ಸಿಗುತ್ತದೆ. ಪರತಂತ್ರರಾದರೆ ಇದು ಸಾಧ್ಯವಿಲ್ಲ. ಅವರೂ ಪರತಂತ್ರರಾದರೆ ಸಂಸಾರಕ್ಕೂ ಮೋಕ್ಷಕ್ಕೂ ವ್ಯತ್ಯಾಸವೇ ಇಲ್ಲವೆಂದಾಗುತ್ತದೆ. ಇದು ಪೂರ್ವಪಕ್ಷ. ಸಮಾನಧರ್ಮಃ=ಸಂಸಾರ ಸಮಾನ ಧರ್ಮವು ಬರಬೇಕಾಗುತ್ತದೆ, ಎಂದು ಪೂರ್ವಪಕ್ಷಯುಕ್ತಿ.

ಮುಕ್ತರೂ ಭಗವದಧೀನರು. ಆದರೂ ಕೃತಾರ್ಥರು. ಭಗವದಿಚ್ಛೆಗೆ ಅನುಸಾರವಾದ ಇಚ್ಛೆಯೇ ಅವರಿಗೆ ಬರುವುದರಿಂದ ಸತ್ಯಸಂಕಲ್ಪವೂ

ಅವರದ್ದಾಗಿದೆ. ಆದ್ದರಿಂದ ಪರಾಧೀನತೆಯು ಅವರಿಗೆ ದುಃಖಪ್ರದವಲ್ಲ. ಇದು ಸಿದ್ಧಾಂತ. ಕೃತಾರ್ಥತಾ=ತೃಪ್ತಿ ಇದು ಸಿದ್ಧಾಂತಯುಕ್ತಿ.

**9. ತದೋಕೋಧಿಕರಣ**— ಕೃತಶೇಷತಾ ಪೂರ್ವಪಕ್ಷಯುಕ್ತಿ, ಶಶ್ವದನುಪ್ರವೃತ್ತಿ ಇದು ಸಿದ್ಧಾಂತಯುಕ್ತಿ.

ಬ್ರಹ್ಮಾಪರೋಕ್ಷ ಪಡೆದವರಿಗೂ ಪ್ರಾರಬ್ಧಕರ್ಮವು ಇದೆ. ಅವರ ಚರಮದೇಹತ್ಯಾಗ ಪ್ರಾರಬ್ಧಫಲ. ಅಜ್ಞಾನಿಗಳ ದೇಹತ್ಯಾಗವೂ ಕರ್ಮಫಲ. ಆದ್ದರಿಂದ ಜ್ಞಾನಿ–ಅಜ್ಞಾನಿಗಳ ದೇಹತ್ಯಾಗಕ್ಕೆ ವ್ಯತ್ಯಾಸವಿಲ್ಲ, ಎಂದು ಪೂರ್ವಪಕ್ಷ. ಕೃತಶೇಷತಾ=ಪ್ರಾರಬ್ಧಕರ್ಮಶೇಷದ ಫಲವೇ ದೇಹತ್ಯಾಗ, ಎಂದು ಪೂರ್ವಪಕ್ಷಯುಕ್ತಿ.

ಪ್ರಾರಬ್ಧಶೇಷವಿದ್ದರೂ ಅಪರೋಕ್ಷಜ್ಞಾನವಿದ್ದುದರಿಂದ ಜ್ಞಾನಿಗಳ ಮರಣ ಅಜ್ಞಾನಿಗಳ ಮರಣದಂತಲ್ಲ. ಅವರಿಗೆ ಸುಷುಮ್ನಾನಾಡಿಯ ಪ್ರತ್ಯಕ್ಷವಾಗಿ ಆ ಮೂಲಕ ದೇಹದಿಂದ ಹೊರಬರುತ್ತಾರೆ. ಅಪರೋಕ್ಷಜ್ಞಾನವು ಬಂದಂದಿನಿಂದ ಅದರ ಪ್ರಭಾವವೇ ಅನುವೃತ್ತವಾಗುತ್ತದೆ. ಕರ್ಮ ಉಪಮರ್ದವಾಗುತ್ತದೆ. ಇದು ಸಿದ್ಧಾಂತ. ಶಶ್ವತ್=ಸರ್ವದಾ ಅನುವೃತ್ತಿಃ= ಜ್ಞಾನಫಲವು ಅನುಸ್ಯೂತವಾಗಿರುವುದು, ಸಿದ್ಧಾಂತಯುಕ್ತಿ.

**10. ಪ್ರತಿಸ್ಮೃತ್ಯಧಿಕರಣ (ಯೋಗ್ಯಧಿಕರಣ)**— ಲೋಕೋಪಮಾ, ಪೂರ್ವಪಕ್ಷಯುಕ್ತಿ, ಶಶ್ವದನುಪ್ರವೃತ್ತಿ–ಸಿದ್ಧಾಂತಯುಕ್ತಿ.

ಜ್ಞಾನಿಯು ಮೋಕ್ಷಕ್ಕೆ ಹೋಗಲು ಅವನು ಹೊಂದಿದ ಬ್ರಹ್ಮಜ್ಞಾನವೇ ಸಾಲದು. ಭಗವದ್ಗೀತೆಯಲ್ಲಿ ಹೇಳಿರುವಂತಹ 'ಅಗ್ನಿಃ ಜ್ಯೋತಿಃ ಅಹಃ ಶುಕ್ಲಃ' ಉತ್ತರಾಯಣಾದಿಕಾಲವೂ ಕಾರಣ. ಆದರೆ, ಆ ಕಾಲವಿಶೇಷದ ಮತ್ತು ತಾನು ಹೋಗಬೇಕಾಗಿರುವ ಮೋಕ್ಷಮಾರ್ಗದ ಸ್ಮರಣೆ ಬೇಕಾಗಿಲ್ಲ. ಲೋಕದಲ್ಲೂ ಕೃಷ್ಯಾದಿಗಳಿಂದ ಫಲ ಸಿದ್ಧಿಯಾಗಬೇಕಾದರೆ ಅದರಿಂದ ಸಿಗುವ ಫಲದ ಸ್ಮರಣೆಯ ಅಗತ್ಯವಿಲ್ಲ. ಲೋಕೋಪಮಾ=ಲೋಕದ ಸಾದೃಶ್ಯವಿರುವುದ ರಿಂದ ಗಮ್ಯಮಾರ್ಗದ ಸ್ಮರಣೆ ಬೇಕಾಗಿಲ್ಲ, ಎಂದು ಪೂರ್ವಪಕ್ಷ.

ಕ್ರಿಯಾನುವೃತ್ತಿಃ ಲೌಕಿಕೇ ಸಾಧನೇ ತು
ಮನೋನುವೃತ್ತಿಃ ವೈದಿಕೇ ಸಾಧನೇ ಸ್ಯಾತ್ ॥

ಲೌಕಿಕ ಫಲ ಬರಬೇಕಾದರೆ ಕ್ರಿಯಾನುವೃತ್ತಿ ಇರಬೇಕು, ವೈದಿಕ ಫಲಕ್ಕೆ ಮನೋನುವೃತ್ತಿಬೇಕು. ಮನೋನುವೃತ್ತಿ ಎಂದರೆ ಫಲದ ಸ್ಮರಣೆ ಮತ್ತು ಮಾರ್ಗದ ಸ್ಮರಣೆ. ಆದ್ದರಿಂದ ಜ್ಞಾನಿಗೆ ಕಾಲವು ಸಹಾಯಕವಲ್ಲ, ಜ್ಞಾನವೇ ಸಹಾಯಕ. ಅದರ ಜೊತೆಯಲ್ಲಿ, ಮಾರ್ಗಸ್ಮರಣೆ ಮತ್ತು ನನಗೆ ಮೋಕ್ಷವು ಲಭಿಸಿಯೇ ತೀರುತ್ತದೆ, ಎನ್ನುವ ಸ್ಮರಣೆಬೇಕು. ಇದು ಸಿದ್ಧಾಂತ. ಶಶ್ವತ್=ಸದಾ ಅನುವೃತ್ತಿ=ಅನುಸ್ಮರಣೆ ಇದು ಸಿದ್ಧಾಂತಯುಕ್ತಿ.

## ನೈಕಸ್ಮಿನ್ನಧಿಕರಣ

### 'ಓಂ ನೈಕಸ್ಮಿನ್ ದರ್ಶಯತೋ ಹಿ ಓಂ'

**ಪ್ರಧಾನವಾಯುಸ್ತ್ವಿಹ ವಾಯುನಾಮಾ**
**ಭೂತೇಷ್ವಿತಿಪ್ರೋಕ್ತಗತೋಽಪಿ ಯುಕ್ತ್ಯಾ ।**
**ಯಸ್ಮಾಚ್ಛ್ರುತೌ ಪವತೇ ಚೇತಿ ಭೂರಿ**
**ಪ್ರೋಕ್ತೋ ಯತೋ ಭೂತಮಾನೀ ಚ ಸೋಽಪಿ ॥ ೧೨೬ ॥**

ಇಹ='ವಾಯೌ ಇಂದ್ರಃ' ಎಂದು ವಾಯುವಿನಲ್ಲಿ ಇಂದ್ರನಿಗೆ ಲಯವನ್ನು ಹೇಳುವ ಶ್ರುತಿಯಲ್ಲಿ ಭೂತೇಷು ಇತಿ ಪ್ರೋಕ್ತಗತೋಽಪಿ=ಭೂತಗಳಲ್ಲಿ ದೇವತೆಗಳ ಲಯವನ್ನು ಹೇಳುತ್ತೇನೆ, ಎಂಬ ಅಭಿಪ್ರಾಯದಿಂದ ಹೊರಟ ಶ್ರುತಿಯಲ್ಲಿ ಈ ವಾಕ್ಯವು ಇದ್ದರೂ ಪ್ರಧಾನವಾಯುಃ=ಮುಖ್ಯಪ್ರಾಣನೇ ವಾಯುನಾಮಾ=ವಾಯು ಎಂಬ ಶಬ್ದದಿಂದ ಹೇಳಲ್ಪಟ್ಟವನು ಹೊರತು, ಜಡವಾದ ವಾಯುವಲ್ಲ. ಏಕೆಂದರೆ, ಯುಕ್ತ್ಯಾ=ಉತ್ತಮನಾದ ಇಂದ್ರನಿಗೆ ಅಧಮವಾದ ಜಡವಾಯುವಿನಲ್ಲಿ ಲಯವಾಗಲು ಸಾಧ್ಯವಿಲ್ಲ, ಎನ್ನುವ ಯುಕ್ತಿಯಿಂದಾಗಿ ಇಂದ್ರನಿಗೆ ಅವನಿಗಿಂತ ಉತ್ತಮನಾದ ವಾಯುದೇವನಲ್ಲೇ ಲಯವು ಉಚಿತವಾದ ಕಾರಣ (ವಾಯುಶಬ್ದಕ್ಕೆ ವಾಯುದೇವನೆಂದೇ ಅರ್ಥ.).

ಇಂದ್ರನಿಗೆ ವಾಯುದೇವನಲ್ಲೇ ಏಕೆ ಲಯ? ಯಸ್ಮಾತ್=ಯಾವ ಕಾರಣದಿಂದ ಶ್ರುತೌ='ಸ ವಾ ಏಷಾ ದೇವತಾ ಅನಾದಿರ್ಯೋಽಯಂ ಪವತೇ' ಎಂಬ ಶ್ರುತಿಯಲ್ಲಿ ಭೂರಿ=ಸಕಲದೇವೋತ್ತಮನಾಗಿ ಪ್ರೋಕ್ತಃ= ಹೇಳಲ್ಪಟ್ಟಿದ್ದಾನೆ. ಹೀಗೆ, ವಾಯು ಇಂದ್ರಾದಿಗಳಿಗಿಂತ ಉತ್ತಮನಾದುದ ರಿಂದ ಅವನಲ್ಲಿ ಇಂದ್ರನಿಗೆ ಲಯವು ಉಪಪನ್ನವಾಗುತ್ತದೆ. ಆದ್ದರಿಂದ ಶ್ರುತಿಯಲ್ಲಿರುವ ವಾಯುಶಬ್ದಕ್ಕೆ ಮುಖ್ಯಪ್ರಾಣ ಎಂದು ಅರ್ಥ.

ಆ ಶ್ರುತಿಯು ಭೂತವಸ್ತುಗಳನ್ನು ಹೇಳುವ ಪ್ರಕರಣವಾಗಿದೆ. ಅದಕ್ಕೆ ಅನುಗುಣವಾಗಿ ಭೂತವಾಯುವನ್ನೇ ಅರ್ಥವೆಂದು ಹೇಳುವುದು ಉಚಿತ, ಎಂದರೆ, ಯತಃ=ಯಾವ ಕಾರಣದಿಂದ ಸೋಽಪಿ=ಮುಖ್ಯಪ್ರಾಣನೂ ಭೂತಮಾನೀ=ಭೂತವಾಯುವಿಗೆ ಅಭಿಮಾನಿಯಾಗಿರುತ್ತಾನೆ. ಆದ್ದರಿಂದ ಭೂತವಾಚಕವಾಯುಶಬ್ದವು ಅವನಿಗೂ ವಾಚಕವಾಗುತ್ತದೆ.

**ಮಹಾಮಾನೀ ತ್ವಲ್ಪಮಾನೀ ಚ ಯಸ್ಮಾತ್**
**ತಚ್ಛಬ್ದೇನಾಪ್ಯುಚ್ಯತೇ ತೇನ ಸೋಽಪಿ** **॥ ೧೨೭ ॥**

ಯಸ್ಮಾತ್=ಯಾವ ಕಾರಣದಿಂದ ಮಹಾಮಾನೀ=ಸರ್ವಕ್ಕೂ ಅಭಿಮಾನಿಯಾದವನು ಅಲ್ಪಮಾನೀ ಚ=ಸರ್ವಾಂತರ್ಗತವಾದ ಅಲ್ಪಕ್ಕೂ ಅಭಿಮಾನಿಯಾಗಿರುವನೋ ತೇನ=ಅದರಿಂದ ಸೋಽಪಿ=ಮುಖ್ಯಪ್ರಾಣನೂ ತಚ್ಛಬ್ದೇನಾಪಿ=ಭೂತವಾಚಕವಾದ ವಾಯುಶಬ್ದದಿಂದಲೂ ಉಚ್ಯತೇ= ಹೇಳಲ್ಪಡುತ್ತಾನೆ.

**ಭಾವಾರ್ಥ—** ರಾಷ್ಟ್ರಕ್ಕೆ ಅಧಿಪತಿಯಾದವನು ಗ್ರಾಮಕ್ಕೂ ಅಧಿಪತಿ ಯಾಗಿರುತ್ತಾನೆ. ಅದರಂತೆ ಸರ್ವಾಭಿಮಾನಿಯಾದ ಮುಖ್ಯಪ್ರಾಣ ಭೂತ ವಾಯುವಿಗೂ ಅಭಿಮಾನಿಯಾಗುತ್ತಾನೆ. ಆದ್ದರಿಂದ ವಾಯುಶಬ್ದದಿಂದ ಅವನೂ ವಾಚ್ಯನಾಗುತ್ತಾನೆ.

**ನೈಕಸ್ಮಿನ್ನಧಿಕರಣ ಮುಗಿಯಿತು.**

## ತಾನಿಪರಾಧಿಕರಣ

### 'ಓಂ ತಾನಿ ಪರೇ ತಥಾ ಹ್ಯಾಹ ಓಂ'

ಈ ಅಧಿಕರಣದಲ್ಲಿ ಎಲ್ಲ ದೇವತೆಗಳೂ ಅಂತಿಮವಾಗಿ ಪರಮಾತ್ಮನಲ್ಲಿ ಲಯವಾಗುತ್ತಾರೆ ಎನ್ನಲಾಗಿದೆ. ಅದು ಸಾಕ್ಷಾತ್ತಾಗಿ ಅಲ್ಲ, ಪ್ರಾಣದ್ವಾರಾ. ಪ್ರಾಣನಲ್ಲೂ ಎಲ್ಲಾ ದೇವತೆಗಳಿಗೆ ಸಾಕ್ಷಾತ್ ಲಯವಿಲ್ಲ. ಸ್ವೋಚ್ಚದೇವತಾ ಲಯದ್ವಾರಾ-ಅದನ್ನು ಮುಂದಿನ ಅನುವ್ಯಾಖ್ಯಾನದಲ್ಲಿ ಸ್ಪಷ್ಟಗೊಳಿಸ ಲಾಗಿದೆ—

**ತಸ್ಮಿನ್ ಲಯಂ ಯಾಂತಿ ಭೂತಾನ್ಯಶೇಷ-**
**ಕ್ರಮಾವಿರೋಧೇನ ಸ ಏವ ವಿಷ್ಣೌ ।**
**ಇಂದ್ರಾದೀನಾಂ ತತ್ರ ಲಯಃ ಕ್ರಮಂ ತು**
**ಪ್ರೋಕ್ತಂ ವಿಶೇಷಾದನುಸೃತ್ಯ ನಾನ್ಯತ್ ॥ ೧೨೮ ॥**

ಭೂತಾನಿ=ಭೂತಾಭಿಮಾನಿ ಮತ್ತು ತದಿತರದೇವತೆಗಳು ಅಶೇಷಕ್ರಮಾ ವಿರೋಧೇನ=ಶ್ರುತಿಯಲ್ಲಿ ಯಾವ ದೇವತೆಗಳಿಗೆ ಯಾವ ದೇವತೆಯಲ್ಲಿ ಸಾಕ್ಷಾತ್ ಲಯ, ಎಂದು ಹೇಳಿರುವರೋ ಆ ಎಲ್ಲಾ ಕ್ರಮಕ್ಕೆ ಅನುಗುಣವಾಗಿ ತಸ್ಮಿನ್=ಪ್ರಾಣನಲ್ಲಿ ಲಯಂ ಯಾಂತಿ=ಲಯವನ್ನು ಹೊಂದುತ್ತಾರೆ. ಸ ಏವ=ಅವನು ಮಾತ್ರ ಸಾಕ್ಷಾತ್ತಾಗಿ ವಿಷ್ಣೌ=ವಿಷ್ಣುವಿನಲ್ಲಿ ಲಯಹೊಂದು ತ್ತಾನೆ. ತತ್ರ=ಮುಖ್ಯಪ್ರಾಣನಲ್ಲಿ ಇಂದ್ರಾದೀನಾಂ ಲಯಃ=ಇಂದ್ರಾದಿ ದೇವತೆಗಳ ಲಯವು ವಿಶೇಷಾತ್(ವಿಶೇಷೇಣ)=ವಿಶೇಷವಾಕ್ಯದಿಂದ ಪ್ರೋಕ್ತಂ=ಹೇಳಲ್ಪಟ್ಟಿರುವುದನ್ನು ಅನುಸೃತ್ಯ=ಅನುಸರಿಸಿ ತಿಳಿಯಬೇಕು. ನ ಅನ್ಯತ್=ಬೇರೆ ರೀತಿಯಿಂದ ಅಲ್ಲ, ಅಂದರೆ ಸಾಕ್ಷಾತ್‌ಲಯವಲ್ಲ. ಆ ಕ್ರಮ ಹೇಗೆಂದರೆ,

**ತಸ್ಮಾದಶೇಷಾ ಗಿರಿಜಾಂ ಪ್ರವಿಶ್ಯ**
**ತಯ್ಯೆವ ರುದ್ರಂ ಸಹ ತೇನ ವಾಣೀಮ್ ।**
**ತಯಾ ಪತಿಂ ಪ್ರಾಪ್ಯ ಸಹೈವ ತೇನ**
**ಲಯಂ ಹರೌ ಯಾಂತಿ ಸಮಸ್ತಜೀವಾಃ ॥ ೧೨೯ ॥**

ತಸ್ಮಾತ್=ಯಾರಿಗೆ ಯಾರಲ್ಲಿ ಸಾಕ್ಷಾತ್ ಪ್ರವೇಶ ಎಂದು ಹೇಳುವ ವಿಶೇಷಪ್ರಮಾಣವನ್ನು ಅವಶ್ಯವಾಗಿ ಅನುಸರಿಸಬೇಕಾದುದರಿಂದ ಅಶೇಷಾಃ=ಎಲ್ಲಾ ದೇವತೆಗಳೂ ಗಿರಿಜಾಂ=ವಾರುಣೀ ಮತ್ತು ಸೌಪರ್ಣಿಯ ರನ್ನು ಪ್ರವಿಶ್ಯ=ಪ್ರವೇಶಮಾಡಿ ತಯ್ಯೆವ ಸಹ=ಅವರಿಬ್ಬರಿಂದ ಕೂಡಿಕೊಂಡು ರುದ್ರಂ ಪ್ರವಿಶ್ಯ=ಶೇಷ-ಗರುಡರನ್ನು ಪ್ರವೇಶಿಸಿ ತೇನ=ಅವರಿಬ್ಬರೊಂದಿಗೆ ವಾಣೀಂ ಪ್ರವಿಶ್ಯ=ಸರಸ್ವತೀದೇವಿಯನ್ನು ಪ್ರವೇಶಮಾಡಿ ತಯಾ= ಅವಳೊಂದಿಗೆ ಪತಿಂ ಪ್ರಾಪ್ಯ=ಅವಳ ಪತಿಯಾದ ಚತುರ್ಮುಖನನ್ನು ಪ್ರವೇಶ ಮಾಡಿ ತೇನ ಸಹೈವ=ಚತುರ್ಮುಖನೊಂದಿಗೇ ಸಮಸ್ತಜೀವಾಃ= ಎಲ್ಲಾ ಜೀವರು ಹರೌ=ಪರಮಾತ್ಮನಲ್ಲಿ ಲಯಂ ಯಾಂತಿ=ಲಯ ಹೊಂದುತ್ತಾರೆ.

ಭಾವಾರ್ಥ— ಅನುವ್ಯಾಖ್ಯಾನದಲ್ಲಿ ಗಿರಿಜಾಶಬ್ದಕ್ಕೆ ಶೇಷಪತ್ನಿ ವಾರುಣೀ ಮತ್ತು ಗರುಡಪತ್ನಿ ಸೌಪರ್ಣೀ ಎಂದರ್ಥ. ರುದ್ರಶಬ್ದಕ್ಕೆ ಗರುಡ ಮತ್ತು ಶೇಷರು ಎಂದರ್ಥ. ಏಕೆಂದರೆ, ರುದ್ರ-ಪಾರ್ವತಿಯರಿಗೆ ಈ ಕಲ್ಪದಲ್ಲಿ ಮೋಕ್ಷವಿಲ್ಲ. ಅವರು ಶೇಷಪದವಿಗೆ ಬಂದು ಆಮೇಲೆ ಮೋಕ್ಷ. ಮೋಕ್ಷಕ್ಕೆ ಗರುಡಮಾರ್ಗ-ಶೇಷಮಾರ್ಗ ಎರಡೇ ಮಾರ್ಗಗಳು. ಮುಂದೆ ಶೇಷಮಾರ್ಗ ವನ್ನು ಹೇಳಲಾಗಿದೆ—

## ಶೇಷಮಾರ್ಗ

**ಸೋಮಸ್ತು ವಾರೀಶಯುತೋऽನಿರುದ್ಧಂ**
**ವಿಶತ್ಯಸೌ ಕಾಮಮಸೌ ತು (ಚ) ವಾರುಣೀಮ್ ।**
**ಸಾ ಶೇಷದೇವಂ ಸ ಗಿರಂ ಚ ಸೈವ**
**ವಾಯುಂ ವಿಶತ್ಯಂಜ ಇತೀಹ ನಿರ್ಣಯಃ ॥ ೧೩೦ ॥**

ವಾರೀಶಯುತಃ ಸೋಮಃ=ವರುಣನಿಂದ ಸಹಿತನಾದ ಚಂದ್ರನು (ವರುಣನಿಗೆ ಚಂದ್ರನಲ್ಲಿ ಲಯ) ಅನಿರುದ್ಧಂ ವಿಶತಿ=ಅನಿರುದ್ಧನನ್ನು ಪ್ರವೇಶಿಸುವನು. ಅಸೌ=ಅನಿರುದ್ಧನು ಕಾಮಂ=ಕಾಮದೇವನನ್ನು, ಅಸೌ= ಕಾಮದೇವನು ವಾರುಣೀಂ=ವಾರುಣೀದೇವಿಯನ್ನು ಸಾ=ಅವಳು

ಶೇಷದೇವಂ=ತನ್ನ ಪತಿಯಾದ ಶೇಷನನ್ನು, ಸಃ=ಆಶೇಷನು ಗಿರಂ ಚ=ಸರಸ್ವತಿಯನ್ನೂ, ಸೈವ=ಆ ಸರಸ್ವತಿಯೇ ವಾಯುಂ=ಚತುರ್ಮುಖ ಬ್ರಹ್ಮನನ್ನು ವಿಶತಿ=ಪ್ರವೇಶ ಮಾಡುತ್ತಾಳೆ.

ಇತಿ=ಹೀಗೆ ಇಹ='ವಾಯೌ ಇಂದ್ರಃ ಸೋಮ ಆದಿತ್ಯೋ ಬೃಹಸ್ಪತಿಃ' ಎಂಬ ಶ್ರುತಿಯಲ್ಲಿ ವಾಯುಪ್ರವೇಶ ಮಾಡುವವರಾಗಿ ಹೇಳಲ್ಪಟ್ಟ ನಾಲ್ವರಲ್ಲಿ ಹಾಗೂ ಪಂಚಭೂತಗಳಲ್ಲಿ ಒಂದಾದ ಅಬಭಿಮಾನಿವರುಣನಿಗೆ ವಾಯುವಿನಲ್ಲಿ ಪ್ರವೇಶದ ಬಗ್ಗೆ ನಿರ್ಣಯಃ=ನಿರ್ಣಯವು.

**ಭಾವಾರ್ಥ—** ನಾಲ್ಕು ದೇವತೆಗಳು ಸರಸ್ವತೀದ್ವಾರಾ ಸಾಕ್ಷಾತ್ ಬ್ರಹ್ಮನಲ್ಲಿ ಪ್ರವೇಶ ಮಾಡುತ್ತಾರೆ— ಇಂದ್ರ, ಚಂದ್ರ, ಸೂರ್ಯ, ಬೃಹಸ್ಪತಿ. ಇವರಲ್ಲಿ ಚಂದ್ರನ ಮೂಲಕ ಬ್ರಹ್ಮ ಪ್ರವೇಶಮಾಡುವ ಇತರ ದೇವತೆಗಳನ್ನು ಇಲ್ಲಿ ತಿಳಿಸಲಾಗಿದೆ. ಅದರಂತೆ ಭೂತಾಭಿಮಾನಿಗಳಲ್ಲಿ ವರುಣನ ಪ್ರವೇಶ ವನ್ನೂ ನಿರ್ಣಯಿಸಲಾಗಿದೆ.

**ಉಮಾ ಗಿರೀಶಾ(ವಪಿ)ವಿತಿ ಭಾರತೀರಾ-**
**ವಿತಿ ಸ್ಮ ವಾಗ್ ವೇದಗತಾ ಬ್ರವೀತಿ।**
**ಅಹೀಂದ್ರಪತ್ನೀಮಹಿಪಂ ವಿರಿಂಚ-**
**ಪತ್ನೀಂ ವಿರಿಂಚಂಚ ವಿಮುಕ್ತಿಕಾಲೇ** **॥ ೧೩೧ ॥**

ಉಮಾ-ಗಿರೀಶೌ ಇತಿ=ಹಿಂದೆ ಉಮಾ ಮತ್ತು ಗಿರೀಶ ಎಂಬ ಪದಗಳು ಅಪಿ=ಮತ್ತು ಭಾರತೀರೌ ಇತಿ=ಭಾರತೀ ಮತ್ತು ಈರ ಈ ಎರಡು ಪದಗಳು ಅಹೀಂದ್ರಪತ್ನೀಂ ಅಹಿಪಂ ಚ=ಶೇಷಪತ್ನಿಯನ್ನೂ ಮತ್ತು ಶೇಷನನ್ನೂ ವಿರಿಂಚಪತ್ನೀಂ ವಿರಿಂಚಂ ಚ=ಸರಸ್ವತಿಯನ್ನೂ ಬ್ರಹ್ಮದೇವನನ್ನೂ ವಿಮುಕ್ತಿಕಾಲೇ=ಮೋಕ್ಷವನ್ನು ಹೇಳುವ ಪ್ರಸಂಗದಲ್ಲಿ ಬ್ರವೀತಿ=ಹೇಳುತ್ತವೆ.

**ಭಾವಾರ್ಥ—** ಹಿಂದಿನ ಅನುವ್ಯಾಖ್ಯಾನಕ್ಕೆ ಮೂಲವಾದ ವೇದಮಂತ್ರ ದಲ್ಲಿ (129) 'ಗಿರಿಜಾಂ, ರುದ್ರಂ' ಎಂಬ ಎರಡು ಪದಗಳಿಗೆ ಪಾರ್ವತೀ-ಪರಮೇಶ್ವರರು, ಎಂದು ಅರ್ಥವಲ್ಲ. ಏಕೆಂದರೆ, ಅವರಿಗೆ ಈ ಕಲ್ಪದಲ್ಲಿ ಮೋಕ್ಷವಿಲ್ಲ. ಆದ್ದರಿಂದ, ಅವರ ಸಮಕಕ್ಷರಾದ ವಾರುಣೀ ಮತ್ತು ಶೇಷ

ಎಂದು ಅರ್ಥ. ಅದರಂತೆ 'ಸೋಮಸ್ತು ವಾರೀಶ...'' ಎಂಬ ಮಂತ್ರದಲ್ಲಿ 'ಗಿರಂ ಚ ವಾಯುಂ' ಎಂದರೆ ಭಾರತೀ ಮತ್ತು ವಾಯು ಎಂದು ಅರ್ಥವಲ್ಲ. ಅವರಿಗೂ ಬ್ರಹ್ಮಪದವೀ ಪ್ರಾಪ್ತಿಯಾದ ಮೇಲೆ ಮೋಕ್ಷ. ಆದ್ದರಿಂದ ಗಿರಂ ಎಂದರೆ ಸರಸ್ವತಿಯನ್ನು ವಾಯುಂ ಎಂದರೆ ಚತುರ್ಮುಖನನ್ನು ಎಂದರ್ಥ.

**ತ ಏವ ಯತ್ ತತ್ಪದಮಾಪ್ನುವಂತಿ**
**ತತ್ಕಾಲ ಏತಾನ್ ಸಮುಪಾಸ್ಯ ಜೀವಾಃ ।**
**ಬ್ರಹ್ಮತ್ವಕಾಲೇ ಪ್ರವಿಶಂತಿ ಚೈತಾ-**
**ನಿತಿ ಸ್ಮ ವಾಕ್ ತಾದೃಶತಾಮುಪೈತಿ** ॥ ೧೩೨ ॥

ಯತ್=ಆ ಪದಗಳಿಂದ ಅವರನ್ನು ಏಕೆ ತೆಗೆದುಕೊಳ್ಳಬೇಕೆಂದರೆ ತೇ ಏವ=ಅವರೇ ಅಂದರೆ ರುದ್ರಾದಿಗಳೇ ತತ್ಪದಂ=ಶೇಷಾದಿಪದವಿಗಳನ್ನು ಆಪ್ನುವಂತಿ=ಹೊಂದುತ್ತಾರೆ. ಆದ್ದರಿಂದ, ಉಮಾದಿಪದಗಳಿಂದ ವಾರುಣ್ಯಾದಿ ಅರ್ಥವನ್ನು ತೆಗೆದುಕೊಳ್ಳಬೇಕು.

ಚ=ಯಾವ ಕಾರಣದಿಂದ ತತ್ಕಾಲೇ=ಪಾರ್ವತ್ಯಾದಿಗಳಾಗಿರುವಾಗ ಏತಾನ್ ಸಮುಪಾಸ್ಯ=ಪಾರ್ವತೀಪರಮೇಶ್ವರರನ್ನು ಉಪಾಸನೆ ಮಾಡಿ ಜೀವಾಃ=ಮುಕ್ತಿಯೋಗ್ಯರಾದ ಜೀವರು ಬ್ರಹ್ಮತ್ವಕಾಲೇ=ವಾಯುದೇವಾದಿಗಳು ಬ್ರಹ್ಮಾದಿಪದವಿಗೆ ಬರುವ ಸಮಯದಲ್ಲಿ ಏತಾನ್=ವಾರುಣ್ಯಾದಿಗಳನ್ನು ವಿಶಂತಿ=ಪ್ರವೇಶ ಮಾಡುತ್ತಾರೆ, ಇತಿ=ಆ ಕಾರಣದಿಂದ ವಾಕ್= ಶ್ರುತಿವಚನವು ತಾದೃಶತಾಂ=ಉಮಾ-ರುದ್ರ ಮುಂತಾದ ಪದಘಟಕವಾಗಿ ಉಪೈತಿ=ಇರುತ್ತದೆ.

**ಭಾವಾರ್ಥ**— ಶ್ರುತಿಯಲ್ಲಿ ವಾರುಣ್ಯಾದಿಅರ್ಥದಲ್ಲಿ ಉಮಾದಿ ಶಬ್ದಗಳನ್ನು ಪ್ರಯೋಗ ಮಾಡಿರುವುದರಿಂದ ಅನುವ್ಯಾಖ್ಯಾನಲ್ಲಿ ಆಚಾರ್ಯರು ಅದೇ ಶಬ್ದಗಳನ್ನು ಪ್ರಯೋಗ ಮಾಡಿದ್ದಾರೆ. ಶ್ರುತಿಯಲ್ಲಿ ಆ ಶಬ್ದಗಳನ್ನು ಪ್ರಯೋಗ ಮಾಡಲು ಕಾರಣ ಇದು- ರುದ್ರ-ಪಾರ್ವತೀ, ಭಾರತೀ-ವಾಯು ಇವರ ಕಾಲದಲ್ಲಿ ಅವರನ್ನು ವಿಶೇಷವಾಗಿ ಸಾಧಕರು ಉಪಾಸನೆ ಮಾಡಿರುತ್ತಾರೆ. ಅವರೇ ಮುಂದಿನ ಶೇಷಾದಿಪದವಿಗೆ

ಬರುವಾಗಲೂ ಅವರನ್ನು ರುದ್ರ, ಪಾರ್ವತೀ ಇತ್ಯಾದಿ ಹೆಸರುಗಳಿಂದಲೇ ಸಾಧಕರು ಕರೆಯುತ್ತಾರೆ. ಆತ್ಮೀಯವ್ಯಕ್ತಿಯು ಸಂನ್ಯಾಸವನ್ನು ಸ್ವೀಕರಿಸಿದ ಮೇಲೂ ಅವನನ್ನು ಪೂರ್ವಾಶ್ರಮದ ಹೆಸರಿನಿಂದಲೇ ಕರೆಯುವಂತೆ.

## ಗರುಡಮಾರ್ಗ

ಇದುವರೆಗೆ ಶೇಷಮಾರ್ಗವನ್ನು ಹೇಳಲಾಯಿತು. ಮುಂದೆ ಗರುಡಮಾರ್ಗವನ್ನು ಹೇಳುತ್ತಾರೆ—

**ಸೂರ್ಯೋಽಗ್ನಿಯುಕ್ತೋ ಗುರುಮಾಪ್ಯ ತೇನ**
**ಶಕ್ರಂ ಸಹೈತೇ ನ ಸುಪರ್ಣಪತ್ನೀಮ್ ।**
**ತಯಾ ಸುಪರ್ಣಂ ಸಹ ತೇನ ವಾಣೀಂ**
**ಬ್ರಹ್ಮಾಣಮೇತದ್ಗತ ಏವ ಯಾತಿ ॥ ೧೩೩ ॥**

ಅಗ್ನಿಯುಕ್ತಃ ಸೂರ್ಯಃ=ಅಗ್ನಿಯನ್ನು ತನ್ನಲ್ಲಿ ಲಯಮಾಡಿಕೊಂಡ ಸೂರ್ಯನು, ಗುರುಂ ಆಪ್ಯ=ಬೃಹಸ್ಪತ್ಯಾಚಾರ್ಯರಲ್ಲಿ ಲಯ ಹೊಂದಿ ತೇನ ಶಕ್ರಂ=ಅವನಿಂದ ಇಂದ್ರನಲ್ಲಿ ಲಯಹೊಂದಿ ಏತೇನ ಸಹ=ಇಂದ್ರನೊಂದಿಗೆ ಸುಪರ್ಣಪತ್ನೀಂ=ಗರುಡನ ಪತ್ನಿಯನ್ನು ಹೊಂದಿ ತಯಾ=ಅವಳೊಂದಿಗೆ ಸುಪರ್ಣಂ=ಗರುಡನನ್ನು ಹೊಂದಿ ತೇನ=ಅವನಿಂದ ವಾಣೀಂ=ಸರಸ್ವತಿಯನ್ನು ಹೊಂದಿ, ಏತದ್ಗತ ಏವ=ಸರಸ್ವತಿಯಲ್ಲಿ ಇದ್ದವನಾಗಿಯೇ ಬ್ರಹ್ಮಾಣಂ ಯಾತಿ=ಬ್ರಹ್ಮನನ್ನು ಹೊಂದುತ್ತಾನೆ.

**ಇಂದ್ರಪ್ರವೇಶಸ್ತು ಯದೋಚ್ಯತೇಽತ್ರ**
**ತದಾ ಹ್ಯುಮೇತ್ಯೇವ ಸುಪರ್ಣಪತ್ನೀ ।**
**ಉಕ್ತಾ ಸುಪರ್ಣಶ್ಚ ಗಿರೀಶನಾಮ್ನಾ**
**ತತೋ ವಿರೋಧಶ್ಚ ನ ಕಶ್ಚನಾತ್ರ ॥ ೧೩೪ ॥**

ಯದಾ=ಯಾವ ಶ್ರುತಿಯಲ್ಲಿ ಅತ್ರ=ಉಮಾದೇವಿಯಲ್ಲಿ ಇಂದ್ರ ಪ್ರವೇಶಃ ಉಚ್ಯತೇ=ಇಂದ್ರನ ಪ್ರವೇಶವು ಹೇಳಲ್ಪಡುವುದೋ ತದಾ=ಆ ಶ್ರುತಿಯಲ್ಲಿ ಉಮೇತಿ=ಉಮೆ ಎಂದರೆ ಸುಪರ್ಣಪತ್ನೀ ಏವ=ಗರುಡನ

ಪತ್ನಿಯೇ ಹೇಳಲ್ಪಡುತ್ತಾಳೆ. ಸುಪರ್ಣಶ್ಚ=ಗರುಡನೂ ಗಿರೀಶನಾಮ್ನಾ ಉಕ್ತಃ=ಗಿರೀಶ ಪದದಿಂದ ಹೇಳಲ್ಪಡುತ್ತಾನೆ. ತತಃ=ಆದ್ದರಿಂದ ನ ಕಶ್ಚನ ವಿರೋಧಃ=ಯಾವ ವಿರೋಧವೂ ಇಲ್ಲ.

ಭಾವಾರ್ಥ— 'ಇಂದ್ರ ಉಮಾಯಾಂ, ಉಮಾ ರುದ್ರೇ ವಿಲೀಯತೇ' ಎಂಬ ಶ್ರುತಿಯಲ್ಲಿ ಇಂದ್ರನಿಗೆ ಉಮೆಯಲ್ಲೂ, ಉಮೆಗೆ ರುದ್ರನಲ್ಲೂ ಲಯವನ್ನು ಹೇಳಲಾಗಿದೆ. ಇಲ್ಲಿ ಉಮೆ ಎಂದರೆ ಪಾರ್ವತಿಯೂ ಅಲ್ಲ, ಶೇಷಪತ್ನಿ ವಾರುಣಿಯೂ ಅಲ್ಲ. ಗರುಡನ ಪತ್ನಿ ಸೌಪರ್ಣೀ.

ಅದರಂತೆ ರುದ್ರಪದಕ್ಕೆ ಪಾರ್ವತೀಪತಿ ಎಂದಾಗಲೀ ಶೇಷ ಎಂದಾಗಲೀ ಅರ್ಥವಲ್ಲ. ಗರುಡ, ಎಂದು ಅರ್ಥ.

**ಭೃಗ್ವಾದಯೋ ದಕ್ಷಮವಾಪ್ಯ ತೇನ**
**ಪ್ರಾಪ್ಯೇಂದ್ರಮೇತೇನ ಸುಪರ್ಣಪತ್ನೀಮ್ ।**
**ವಿಶಂತಿ ಯೇ ಮನವೋ ರಾಜಮುಖ್ಯಾ**
**ಮನುಂ ಪ್ರವಿಶ್ಯಾತ್ರ ಗತಾ ಮಹೇಂದ್ರಮ್ ॥ ೧೩೫ ॥**

ಭೃಗ್ವಾದಯಃ=ಭೃಗು ಮೊದಲಾದ ಋಷಿಗಳು ದಕ್ಷಮ್ ಅವಾಪ್ಯ= ದಕ್ಷಪ್ರಜಾಪತಿಯಲ್ಲಿ ಲಯಹೊಂದಿ ತೇನ=ದಕ್ಷನಿಂದ ಇಂದ್ರಂ ಪ್ರಾಪ್ಯ= ಇಂದ್ರನನ್ನು ಹೊಂದಿ ಏತೇನ=ಇಂದ್ರನಿಂದ ಸುಪರ್ಣಪತ್ನೀಂ ವಿಶಂತಿ= ಗರುಡನ ಪತ್ನಿಯನ್ನು ಪ್ರವೇಶಿಸುತ್ತಾರೆ.

**ಆಕಾಶ ಉರ್ವೀ ಚ ಗುರುಂ ಪ್ರವಿಶ್ಯ**
**ತೇನೈವ ಯಾತಃ ಪುರುಹೂತದೇವಮ್ ।**
**ಸನಾದಯೋ ಯತಯಃ ಕಾಮಮೇವ**
**ವಿಶಂತಿ ಶಿಷ್ಟಾ ಅಪಿ ಹವ್ಯವಾಹಮ್ ॥ ೧೩೬ ॥**

ಆಕಾಶಃ=ಆಕಾಶಾಭಿಮಾನಿ ಗಣೇಶ ಉರ್ವೀ ಚ=ಭೂದೇವಿಯೂ ಗುರುಂ=ಬೃಹಸ್ಪತ್ಯಾಚಾರ್ಯರನ್ನು ಪ್ರವೇಶಿಸಿ ತೇನೈವ=ಆ ಬೃಹಸ್ಪತ್ಯಾಚಾರ್ಯನೊಂದಿಗೆ ಪುರುಹೂತದೇವಂ ಯಾತಃ=ಇಂದ್ರನನ್ನು

ಪ್ರವೇಶಿಸುತ್ತಾನೆ. ಸನಾದಯಃ ಯತಯಃ=ಸನಕ, ಸನಂದನ, ಸನಾತನ ಈ ಬ್ರಹ್ಮಮಾನಸಪುತ್ರರಾದ ಯತಿಗಳು ಕಾಮಮೇವ ವಿಶಂತಿ=ಕಾಮನನ್ನೇ ಪ್ರವೇಶಿಸುತ್ತಾರೆ. ಕಾಮನಿಗೆ ವಾರುಣೀದೇವಿಯಲ್ಲಿ ಪ್ರವೇಶ, ಇದನ್ನು ಶೇಷಮಾರ್ಗದಲ್ಲಿ ನಿರೂಪಿಸಲಾಗಿದೆ.

ಶಿಷ್ಟಾ ಅಪಿ=ಹಿಂದೆ ಹೇಳಿದವರನ್ನು ಬಿಟ್ಟು ಉಳಿದವರೆಲ್ಲ ಹವ್ಯವಾಹಂ=ಅಗ್ನಿಯನ್ನು ಪ್ರವೇಶಿಸುತ್ತಾರೆ. ಅದನ್ನೇ 'ಅಗ್ನೌ ಸರ್ವೇ ದೇವಾ ವಿಲೀಯಂತೇ' ಎಂದು ಹೇಳಲಾಗಿದೆ. ಇದಕ್ಕೆ ಅಪವಾದ—

**ವರ್ಣಾಶ್ರಮಾಚಾರರತಾ ಮನುಷ್ಯಾ**
**ಧರ್ಮಂ ಮನುಂ ಸೋಽಪಿ ಸಮೇತಿ ಕಾಲೇ ।**
**ತಮೇವ ಸರ್ವೇ ಪಿತರಃ ಸುರಾನುಗಾಃ**
**ಸರ್ವೇ ಕುಬೇರಂ ಸ ಚ ಸೋಮಮೇವ** ॥ ೧೩೭ ॥

ವರ್ಣಾಶ್ರಮಾಚಾರರತಾಃ ಮನುಷ್ಯಾಃ=ತಮ್ಮ ತಮ್ಮ ಆಶ್ರಮ ಧರ್ಮದಲ್ಲಿ ನಿರತರಾದ ಮನುಷ್ಯರು ಧರ್ಮಂ=ಯಮಧರ್ಮನನ್ನು ಸೋಽಪಿ=ಯಮಧರ್ಮನೂ ಮನುಂ=ಸ್ವಾಯಂಭುವಮನುವನ್ನು ಕಾಲೇ=ಮೋಕ್ಷಕಾಲದಲ್ಲಿ ಸಮೇತಿ=ಪ್ರವೇಶಿಸುತ್ತಾರೆ. ದೇವತೆಗಳಿಗೆ ಸ್ವೋತ್ತಮರಲ್ಲಿ ಲಯ, ಮನುಷ್ಯರಿಗೆ ಪ್ರವೇಶ ಮಾತ್ರ. ಸರ್ವೇ ಪಿತರಃ=ಎಲ್ಲ ಪಿತೃದೇವತೆಗಳೂ ತಮೇವ=ಯಮಧರ್ಮನನ್ನೇ ಪ್ರವೇಶಿಸುತ್ತಾರೆ. ಸರ್ವೇ ಸುರಾನುಗಾಃ=ಎಲ್ಲಾ ಗಂಧರ್ವರೂ ಕುಬೇರಂ=ಕುಬೇರನನ್ನು ಪ್ರವೇಶಿಸುತ್ತಾರೆ. ಸ ಚ=ಕುಬೇರನೂ ಸೋಮಮೇವ=ಚಂದ್ರನನ್ನು ಪ್ರವೇಶಿಸುತ್ತಾರೆ. ಚಂದ್ರ ಶೇಷಮಾರ್ಗದಲ್ಲಿ ಬರುತ್ತಾನೆ.

### ದೇವತೆಗಳಿಗೆ ಸಾಯುಜ್ಯಭೋಗ

**ವಿಮುಕ್ತಿಕಾಲೇ ಪ್ರವಿಶಂ(ಶ) ತ್ಯಭೀಕ್ಷ್ಣಂ**
**ಭೋಗಾಂಶ್ಚ ತದ್ದೇಹಗತಾಃ ಪ್ರಭುಂಜತೇ ।**
**ಆನಂದಸುವ್ಯಕ್ತಿರಮುತ್ರ ತೇಷಾಂ**
**ಭವತ್ಯತಶ್ಚೇಷ್ಟತ ಏವ ನಿರ್ಗತಾಃ** ॥ ೧೩೮ ॥

**ಕ್ರೀಡಂತಿ ಭೂಯಶ್ಚ ಸಮಾವಿಶಂತಿ**
**ತಾನೇವ, ಸಾಯುಜ್ಯಮಿದಂ ವದಂತಿ ।**

ಎಲ್ಲರೂ ವಿಮುಕ್ತಿಕಾಲೇ=ಮೋಕ್ಷಸಮಯದಲ್ಲಿ ಪ್ರವಿಶಂತಿ=ಸ್ವೋತ್ತಮರಲ್ಲಿ ಪ್ರವೇಶಿಸುತ್ತಾರೆ. ಅಭೀಕ್ಷ್ಣಂ=ಆವಿಷ್ಟವಾದ ಪಿಶಾಚಿಯಂತೆ ತದ್ದೇಹಗತಾಃ=ಸ್ವೋತ್ತಮದೇಹದಲ್ಲಿ ಇದ್ದವರಾಗಿ ಭೋಗಾಂಶ್ಚ=ಸುಖಾನುಭವವನ್ನು ಪ್ರಭುಂಜತೇ=ಚೆನ್ನಾಗಿ ಮಾಡುತ್ತಾರೆ. ಅಮುತ್ರ=ಉತ್ತಮರಲ್ಲಿ ಪ್ರವೇಶದಿಂದ ತೇಷಾಂ=ಅವರಿಗೆ ಆನಂದ ಸುವ್ಯಕ್ತಿಃ=ಆನಂದದ ಸಂಪೂರ್ಣ ಅಭಿವ್ಯಕ್ತಿಯು ಭವತಿ=ಆಗುತ್ತದೆ. ಅತಃ=ಉತ್ತಮರಿಂದ ಇಷ್ಟತಃ ಏವ=ಸ್ವೇಚ್ಛೆಯಿಂದಲೇ ನಿರ್ಗತಾಃ=ಹೊರಬಂದವರಾಗಿ ಕ್ರೀಡಂತಿ=ವಿಹರಿಸುತ್ತಾರೆ. ಭೂಯಶ್ಚ=ಮತ್ತೆ ತಾನೇವ=ಅವರನ್ನೇ ಸಮಾವಿಶಂತಿ= ಪ್ರವೇಶಿಸುತ್ತಾರೆ. ಇದಂ=ಇದನ್ನು ಸಾಯುಜ್ಯಂ ವದಂತಿ=ಸಾಯುಜ್ಯ ಮೋಕ್ಷ ಎನ್ನುತ್ತಾರೆ. (ಸಾಯುಜ್ಯ ಎಂದರೆ ಐಕ್ಯವಲ್ಲ, ಸಯುಜಾಂ ಭಾವಃ=ಜೊತೆಯಲ್ಲಿರುವವರಲ್ಲಿ ಪ್ರವೇಶ.)

**ಸಾಯುಜ್ಯಹೀನಾಸ್ತು (ಶ್ಚ) ಲಯೇ ತು ಸರ್ವೇ**
**ಪ್ರೋಕ್ತೇನ ಮಾರ್ಗೇಣ ವಿಶಂತಿ ಸೃಷ್ಟೌ ।**
**ಬಹಿಶ್ಚ ನಿರ್ಯಾಂತಿ ತತೋಽನ್ಯದಾಽಪಿ**
**ಸಾಯುಜ್ಯಭಾಜಾಂ ಭವತಿ ಪ್ರವೇಶಃ ॥ ೧೩೯ ॥**

ಸಾಯುಜ್ಯ ಹೀನಾಸ್ತು=ಸಾಯುಜ್ಯವಿಲ್ಲದವರು ಲಯೇ ತು=ಲಯಕಾಲದಲ್ಲಿ ಮಾತ್ರ ಸ್ವೋತ್ತಮರಲ್ಲಿ ಪ್ರೋಕ್ತೇನ ಮಾರ್ಗೇಣ=ಹಿಂದೆ ಹೇಳಿರುವ ಗರುಡ–ಶೇಷಮಾರ್ಗದಿಂದ ವಿಶಂತಿ=ಪ್ರವೇಶ ಮಾಡುತ್ತಾರೆ. ಸೃಷ್ಟೌ=ಸೃಷ್ಟಿಕಾಲದಲ್ಲಿ ಬಹಿಶ್ಚ ನಿರ್ಯಾಂತಿ=ಹೊರಬರುತ್ತಾರೆ. ಆಮೇಲೆ ಅವರಿಗೆ ಪ್ರವೇಶವಿಲ್ಲ. ಆದರೆ, ಸಾಯುಜ್ಯಭಾಜಾಂ=ಸಾಯುಜ್ಯ ಭಾಜನರಿಗೆ ತತಃ=ಲಯಕಾಲಕ್ಕಿಂತ ಅನ್ಯದಾಪಿ=ಆಮೇಲೂ ಅಂದರೆ, ಸೃಷ್ಟಿಕಾಲದಲ್ಲೂ ಪ್ರವೇಶಃ ಭವತಿ=ಸ್ವೋತ್ತಮರಲ್ಲಿ ಪ್ರವೇಶವು ಇದೆ.

**ಉಕ್ತಂ ಸಮಸ್ತಂ ಪರಮಶ್ರುತೌ ಹಿ**
**ಪ್ರೋಕ್ತಂ ಚ (ತು) ಸರ್ಗಕ್ರಮತೋ ವಿಪರ್ಯಯಃ ॥ ೧೪೦ ॥**

**ಮುಕ್ತೌ ಲಯೇ ಯದ್ವದಥೋ ಲಯಶ್ಚ**
**ವಿಪರ್ಯಯೇಣೇತ್ಯವದದ್ ಗಿರಾಂ ಪ್ರಭುಃ(ಪತಿಃ) ।**
**ಲಯೋ ಯತೋ ಮುಕ್ತಿರಿಯಂ ಸುರಾಣಾಂ**
**ಭೋಗೋ ವಿಶೇಷೇಣ ಚ ಯಂ ವದಿಷ್ಯತಿ ॥ ೧೪೧ ॥**

ಉಕ್ತಂ ಸಮಸ್ತಂ=ಮುಕ್ತಿಯ ಬಗ್ಗೆ ಇದುವರೆಗೆ ಹೇಳಿದ್ದೆಲ್ಲವೂ ಪರಮಶ್ರುತೌ ಪ್ರೋಕ್ತಂ ಹಿ=ಪರಮಶ್ರುತಿಯಲ್ಲಿ ಹೇಳಲ್ಪಟ್ಟಿದೆ. ಇದಕ್ಕೆ ಇನ್ನೊಂದು ಆಧಾರ– ಮುಕ್ತೌ=ಮುಕ್ತಿಯಲ್ಲಿ ಸರ್ಗಕ್ರಮತಃ=ಸೃಷ್ಟಿಕ್ರಮಕ್ಕಿಂತ ವಿಪರ್ಯಯಃ=ವೈಪರೀತ್ಯ ಲಯೇ ಯದ್ವತ್=ಲಯದಲ್ಲಿ ಹೇಗೋ ಹಾಗೆ.

ಉತ್ತಮರಿಂದ ಅಧಮರು, ಎಂದು ಸೃಷ್ಟಿಯಾಗುವ ಕ್ರಮ. ಮುಕ್ತಿಕ್ರಮ ಇದಕ್ಕೆ ವಿರುದ್ಧ. ಅಧಮರಿಗೆ ಉತ್ತಮರಲ್ಲಿ ಪ್ರವೇಶ. ಇದಕ್ಕೆ ಉದಾಹರಣೆ ಪ್ರಲಯ. ಪ್ರತೀ ಪ್ರಲಯಕಾಲದಲ್ಲೂ ಹುಟ್ಟಿಗೆ ವಿಪರೀತವಾಗಿ ತತ್ತ್ವಗಳಿಗೆ ಲಯವಾಗುತ್ತದೆ. ಉದಾಹರಣೆಗೆ— ಪ್ರಕೃತಿ–ಮಹತ್ತತ್ವ–ಅಹಂಕಾರ–ಪಂಚಭೂತಗಳು ಇವು ಒಂದರಿಂದ ಒಂದು ಸೃಷ್ಟಿಯಾಗುತ್ತವೆ. ಲಯಕಾಲದಲ್ಲಿ ಪಂಚಭೂತಗಳು ಅಹಂಕಾರ ತತ್ತ್ವದಲ್ಲಿ, ಅದು ಮಹತ್ತತ್ವದಲ್ಲಿ–ಅದು ಪ್ರಕೃತಿಯಲ್ಲಿ ಪ್ರವೇಶಿಸುತ್ತದೆ.

ಲಯವೂ ವಿಪರೀತಕ್ರಮದಿಂದ ಎನ್ನುವುದಕ್ಕೆ ಏನು ಪ್ರಮಾಣ? ಅಥೋ=ಇನ್ನು ಪ್ರಮೇಯಾಂತರ ಹೀಗಿದೆ— ಗಿರಾಂಪ್ರಭುಃ=ವೇದ ಪ್ರಭುವು ಅಂದರೆ ವೇದವ್ಯಾಸರು 'ಲಯಶ್ಚ ವಿಪರ್ಯಯೇಣ=ಸೃಷ್ಟಿಕ್ರಮಕ್ಕೆ ವಿಪರೀತವಾಗಿ ಲಯ' ಇತ್ಯವದತ್=ಹೀಗೆಂದು 'ವಿಪರ್ಯಯೇಣ ಕ್ರಮೋಽತ ಉಪಪದ್ಯತೇ'(3–3–14) ಎಂದು ಸೂತ್ರದಲ್ಲಿ ಹೇಳಿದ್ದಾರೆ.

ಲಯವು ಸೃಷ್ಟಿಗೆ ವಿಪರೀತವಾದರೂ ಮುಕ್ತಿಯೂ ಅದರಂತೆಯೇ ಇರಬೇಕೆಂದೇನು? ಯತಃ=ಯಾವ ಕಾರಣದಿಂದ ಸುರಾಣಾಂ=ದೇವತೆಗಳಿಗೆ

ಲಯ ಏವ ಇಯಂ ಮುಕ್ತಿಃ=ಲಯವೇ ಈ ಮೋಕ್ಷ. ಮನುಷ್ಯರು ದೇಹದಿಂದ ಹೊರಬಂದು ದೇವತೆಗಳಲ್ಲಿ ಸೇರಿ ಮೋಕ್ಷಕ್ಕೆ ಹೋಗುತ್ತಾರೆ. ದೇವತೆಗಳು ದೇಹಸಹಿತರಾಗಿಯೇ ಉತ್ತಮರಲ್ಲಿ ಲಯವಾಗುತ್ತಾರೆ. ಅದೇ ಅವರಿಗೆ ಮೋಕ್ಷ. ಅಂದರೆ ದೇಹಹಾನಿ ಅಷ್ಟೇ ಅವರಿಗೆ ಮೋಕ್ಷವಲ್ಲ-ವಿಶೇಷೇಣ ಚ ಭೋಗಃ=ದೇವಪದವಿಗಿಂತಲೂ ಹೆಚ್ಚಿನ ಸುಖಭೋಗವೂ ಅವರಿಗಿದೆ. ಯಂ=ಯಾವ ಭೋಗವನ್ನು ಸೂತ್ರಕಾರರೇ ನಾಲ್ಕನೆಯ ಪಾದದಲ್ಲಿ ವದಿಷ್ಯತಿ=ಹೇಳುತ್ತಾರೆ. ಲಯಕ್ಕೂ ಮೋಕ್ಷಕ್ಕೂ ದೇಹನಾಶವು ಸಮಾನ ವಾದರೂ ಮೋಕ್ಷದಲ್ಲಿ ಸುಖಭೋಗರೂಪವಿಶೇಷವಿದೆ.

**ಉಕ್ತಶ್ಚ ಬಿಂಬಪ್ರತಿಬಿಂಬಭಾವಃ**
**ಪೈಂಗಿ (ಪಿಂಗ) ಶ್ರುತಾವುಕ್ತಲಯಾನುಸಾರತಃ ।**
**ಬಿಂಬೇ ಲಯೋ ಯನ್ನಿಯತಶ್ಚ ಮುಕ್ತೌ**
**ಚಿದಾತ್ಮನಾಂ ತದ್ವಶತಾ ಚ ಸರ್ವದಾ ॥ ೧೪೨ ॥**

ಪೈಂಗಿಶ್ರುತೌ=ಪೈಂಗಿಶ್ರುತಿಯಲ್ಲಿ ಉಕ್ತಲಯಾನುಸಾರತಃ=ಹಿಂದೆ ಹೇಳಿರುವ ಲಯಕ್ರಮಕ್ಕೆ ಅನುಗುಣವಾಗಿಯೇ ಬಿಂಬಪ್ರತಿಬಿಂಬಭಾವಃ ಉಕ್ತಃ=ಬಿಂಬ-ಪ್ರತಿಬಿಂಬಭಾವವು ಹೇಳಲ್ಪಟ್ಟಿದೆ. ಉತ್ತಮರು ಬಿಂಬರು, ಅಧಮರು ಪ್ರತಿಬಿಂಬರು. ಪ್ರತಿಬಿಂಬರಾದ ದೇವತೆಗಳಿಗೆ ಬಿಂಬರಾದ ದೇವತೆಗಳಲ್ಲಿ ಲಯ. ಪೈಂಗಿಶ್ರುತಿಯಲ್ಲಿ ಲಯಕ್ರಮದಲ್ಲೇ ಬಿಂಬಪ್ರತಿಬಿಂಬ ಭಾವವನ್ನು ಹೇಳಲಾಗಿದೆ. ಬಿಂಬರಾದವರು ಉತ್ತಮರು, ಪ್ರತಿಬಿಂಬರು ಅಧಮರು. ಪ್ರತಿಬಿಂಬರಾದವರು ಬಿಂಬರಿಂದ ಮುಕ್ತಿಯಲ್ಲೂ ನಿಯಮ್ಯ ರಾಗಿರುತ್ತಾರೆ. ಹೀಗೆ ಬಿಂಬ-ಪ್ರತಿಬಿಂಬಭಾವವು ಶ್ರುತಿಸಿದ್ಧವಾದುದರಿಂದ ಉಕ್ತಲಯ ಕ್ರಮವೂ ಶ್ರುತಿಸಿದ್ಧ.

**ತೇಜೋಽಭಿಧಾಂ ತು ಶ್ರಿಯಮಾಪ್ಯ ವಿಷ್ಣು-**
**ಮಗ್ರೇ ತತಃ ಪುತ್ರತಯೈವ ವಾಯುಃ ।**
**ಆಪ್ತಃ ಪ್ರಸೂತಃ ಪುನರೇವ ವಿಷ್ಣುಂ**
**ಪ್ರವಿಶ್ಯ ಮುಕ್ತಃ ಪ್ರಳಯೇಽತ್ರ ತಿಷ್ಠತಿ ॥ ೧೪೩ ॥**

'ಪ್ರಾಣಃ ತೇಜಸಿ, ತೇಜಃ ಪರಸ್ಯಾಂ ದೇವತಾಯಾಂ' ಈ ಶ್ರುತಿಯಲ್ಲಿ ತೇಜಃ ಅಂದರೆ ಪಂಚಭೂತಗಳಲ್ಲಿ ಒಂದಾದ ತೇಜಸ್ಸಲ್ಲ. ವಾಯುಃ=ವಾಯು ದೇವನು ತೇಜೋಭಿಧಾಂ ತು ಶ್ರಿಯಂ=ತೇಜಃ ಶಬ್ದವಾಚ್ಯಳಾದ ಲಕ್ಷ್ಮೀದೇವಿ ಯನ್ನು ಆಪ್ಯ=ಹೊಂದಿ ವಿಷ್ಣುಂ=ಪರಮಾತ್ಮನನ್ನು ಆಪ್ತಃ=ಹೊಂದುತ್ತಾನೆ. ಸೃಷ್ಟಿಕಾಲದಲ್ಲಿ ಅಗ್ರೇ=ಎಲ್ಲರಿಗಿಂತಲೂ ಮೊದಲು ತತಃ=ವಿಷ್ಣುವಿನಿಂದ ಪುತ್ರತಯಾ=ಮಗನಾಗಿ ಬ್ರಹ್ಮತ್ವೇನ ಪ್ರಸೂತಃ=ಬ್ರಹ್ಮನಾಗಿ ಹುಟ್ಟುವ ವಾಯುಃ=ವಾಯುದೇವನು ಪುನರೇವ ಪ್ರಳಯೇ=ಮತ್ತೆ ಪ್ರಳಯದಲ್ಲಿ ವಿಷ್ಣುಂ ಪ್ರವಿಶ್ಯ=ವಿಷ್ಣುವನ್ನು ಪ್ರವೇಶಿಸಿ ಅತ್ರ=ವಿಷ್ಣುವಿನಲ್ಲಿ ತಿಷ್ಠತಿ=ಇರು ತ್ತಾನೆ.

ಭಾವಾರ್ಥ— 'ಪ್ರಾಣಃ ಪರಸ್ಯಾಂ ದೇವತಾಯಾಂ' ಈ ಶ್ರುತಿಯಲ್ಲಿ ಪ್ರಾಣಶಬ್ದಕ್ಕೆ ಮುಖ್ಯವಾಯು ಎಂದು ಅರ್ಥ ಮಾಡಿದಾಗ ಈ ಅನುವ್ಯಾಖ್ಯಾನಲ್ಲಿ ಹೇಳಿದಂತೆ ವಾಯುದೇವನಿಗೆ ಲಕ್ಷ್ಮೀದೇವಿಯಲ್ಲಿ ಲಯ. ಬ್ರಹ್ಮ ಎಂದು ಅರ್ಥಮಾಡಿದಾಗ ಬ್ರಹ್ಮನಿಗೆ ಲಕ್ಷ್ಮೀದೇವಿಯಲ್ಲಿ ಲಯವಿಲ್ಲ, ಪ್ರಾಪ್ತಿಮಾತ್ರ. ಆ ಪಕ್ಷವನ್ನು ಭಾಷ್ಯದಲ್ಲಿ ಹೀಗೆ ನಿರೂಪಿಸಲಾಗಿದೆ—

ಪ್ರಾಣಸ್ಯ ತೇಜಸಿ ಲಯೋ ಮಾರ್ಗಮಾತ್ರಮುದಾಹೃತಮ್ ।
ಸರ್ವೇಶಿತುಶ್ಚ ಸರ್ವಾದೇಃ ತಸ್ಯಾನ್ಯತ್ರ ಲಯಃ ಕಥಮ್ ॥

**ಸರ್ವೇಽಪಿ ತೇ ಮುಕ್ತಗಣಾ ಅಮಂದ-**
**ಸಾಂದ್ರಂ ನಿಜಾನಂದಮಶೇಷತೋಽಪಿ ।**
**ಭುಜಂತ ಏವಾಸತ ಈಶದೇಹೇ**
**ಲಯೇಽಥ ಸರ್ಗೇ ಬಹಿರೇವ ಯಾಂತಿ** ॥ ೧೪೪ ॥

ತೇ ಸರ್ವೇಽಪಿ ಅಶೇಷತಃ ಮುಕ್ತಗಣಾಃ=ಯಾರನ್ನೂ ಬಿಡದಂತೆ ಮುಕ್ತರೆಲ್ಲರೂ ಅಮಂದಸಾಂದ್ರಂ=ಅನಲ್ಪವಾದ ಮತ್ತು ಪೂರ್ಣವಾದ ನಿಜಾನಂದಂ=ಸ್ವರೂಪಾನಂದವನ್ನು ಭುಂಜತ ಏವ=ಅನುಭವಿಸುತ್ತಲೇ ಲಯೇ=ಲಯಕಾಲದಲ್ಲಿ ಈಶದೇಹೇ=ಭಗವಂತನದೇಹದಲ್ಲಿ ಆಸತೇ=

ಇರುತ್ತಾರೆ. ಅಥ ಸರ್ಗೇ=ಆಮೇಲೆ ಸೃಷ್ಟಿಯಾದಾಗ ಬಹಿಃ ಯಾಂತ್ಯೇವ= ಹೊರಗೆ ಬರುತ್ತಾರೆ.

**ಪ್ರಯಾತಿ ಧರ್ಮಂ ನಿರ್ ಋತಿಸ್ತು ಶಕ್ರಂ**
**ಮರುದ್ಗಣಾಃ ಪಾರಿಷ(ರ್ಷ)ದಾಸ್ತಥೈವ ।**
**ಸರ್ವೇಽನಿರುದ್ಧಂ ಪೃತನಾಧಿಪಾದ್ಯಾ-**
**ಸ್ತುರಶ್ರುತಿರ್ಹೀತ್ಥಮಿಯಂ ವಿಮುಕ್ತಿಃ ॥ ೧೪೫ ॥**

ನಿರ್ಋತಿಸ್ತು=ನಿರ್ಋತಿ ಎಂಬ ದಿಗ್ ದೇವತೆಯು ಧರ್ಮಂ=ಯಮ ಧರ್ಮನನ್ನು ಪ್ರಯಾತಿ=ಹೊಂದುತ್ತಾನೆ. ಮರುದ್ಗಣಾಃ=ಮರುದ್ದೇವತೆಗಳು ಶಕ್ರಂ=ಇಂದ್ರನನ್ನೂ ತಥಾ=ಹಾಗೆಯೇ ಪೃತನಾಧಿಪಾದ್ಯಾಃ=ಸೇನಾಧಿಪತಿ ವಿಶ್ವಕ್‌ಸೇನನೇ ಮೊದಲಾದ ಪಾರಿಷದಾಃ=ವಿಷ್ಣು ಪರಿವಾರದವರು ಅನಿರುದ್ಧಂ=ಅನಿರುದ್ಧನನ್ನು ಹೊಂದುತ್ತಾರೆ. ಅನಿರುದ್ಧನು ಕಾಮನಲ್ಲಿ ಲಯಹೊಂದುತ್ತಾನೆ. ಇತ್ಥಂ=ಹೀಗೆ ತುರಶ್ರುತಿಃ=ತುರಶ್ರುತಿಯು ಹೇಳುತ್ತದೆ. ಪರಮಶ್ರುತಿಯಲ್ಲಿ ಈ ಅಂಶ ಇಲ್ಲ.

**ಇಲ್ಲಿಗೆ ನಾಲ್ಕನೆಯ ಅಧ್ಯಾಯದ ಎರಡನೆಯ ಪಾದ ಮುಗಿಯಿತು.**

|| ಶ್ರೀವೇದವ್ಯಾಸೋ ವಿಜಯತೇ ||

## ಶ್ರೀಮದಾನಂದತೀರ್ಥಭಗವತ್ಪಾದರು ರಚಿಸಿದ

# ಶ್ರೀಮದನುವ್ಯಾಖ್ಯಾನ

## ನಾಲ್ಕನೆಯ ಅಧ್ಯಾಯದ ಮೂರನೇಪಾದ

## ಮಾರ್ಗಪಾದ

**ಉತ್ಕ್ರಾಂತಮಾರ್ಗಶ್ಚ ವಿಮುಕ್ತಗಮ್ಯಂ**
**ಪಾದೋದಿತಂ (ಸುಕ್ರಮವಿಕ್ರಮೌ ಚ) ।**

ಉತ್ಕ್ರಾಂತ ಮಾರ್ಗಶ್ಚ=ಶರೀರದಿಂದ ಬ್ರಹ್ಮನಾಡಿಯ ಮೂಲಕ ಉತ್ಕ್ರಾಂತಿಯನ್ನು ಹೊಂದಿದ ಮನುಷ್ಯೋತ್ತಮರ ಭಗವಲ್ಲೋಕ ಮಾರ್ಗವು ಹಾಗೂ ದೇಹ ಮತ್ತು ಕರ್ಮಗಳಿಂದ ಮುಕ್ತರಾದ ಎಲ್ಲರಿಂಲೂ ಗಮ್ಯವಾದ ಸ್ಥಾನವೂ ಈ ಪಾದದಲ್ಲಿ ಹೇಳಲ್ಪಟ್ಟಿದೆ.

### ಪೂರ್ವಪಕ್ಷ-ಸಿದ್ಧಾಂತ ಯುಕ್ತಿಗಳು

**(ಉತ್ಕ್ರಾಂತಮಾರ್ಗಶ್ಚ ವಿಮುಕ್ತಗಮ್ಯಂ ಪಾದೋದಿತಂ)**
**ಸುಕ್ರಮವಿಕ್ರಮೌ ಚ ।**
**ಸಾಂತಾನಿಕ ಪ್ರಾಪ್ತಿರಭೀಷ್ಟತಾ ಚ ಸೌಕರ್ಯ-**
**ಮಿತ್ಯನ್ಯಮತಸ್ಯ ತರ್ಕಾಃ ॥ ೧ ॥**
**ವಿಶೇಷಸಂಪ್ರಾಪ್ತಿ ರುರುತ್ವಮಾಪ್ತಿಃ**
**ಕ್ರಮಾನುರಾಗಃ ಕಥಿತಾನುವೃತ್ತಿಃ ।**
**ಸಿದ್ಧಾಂತನಿರ್ಣೀತಿಕರಾಃ (ಪ್ರತೀಕಂ**
**ದೇಹಾದಿಕಂ ತದ್ಗತಮೇವ ಯೇ ನರಾಃ ) ॥ ೨ ॥**

1. ಅರ್ಚಿರಾದ್ಯಧಿಕರಣ— ಪೂರ್ವಪಕ್ಷಯುಕ್ತಿ ಸುಕ್ರಮ=ಮಾರ್ಗಭೇದ. ಸಿದ್ಧಾಂತಯುಕ್ತಿ ವಿಶೇಷಸಂಪ್ರಾಪ್ತಿ=ವಿಶೇಷಮಾರ್ಗ.

'ತೇಽರ್ಚಿಷಮಭಿ ಸಂಭವಂತಿ' (ಛಾಂ.5.10.1) ಈ ಶ್ರುತಿಯಲ್ಲಿ ದೇಹದಿಂದ ಉತ್ಕ್ರಾಂತರಾದ ಜ್ಞಾನಿಗಳು ಮೊದಲು ಅಗ್ನಿಪುತ್ರನಾದ 'ಅರ್ಚಿ'ಯ ಲೋಕಕ್ಕೆ ಹೋಗುತ್ತಾನೆ ಎನ್ನಲಾಗಿದೆ. 'ಸ ವಾಯುಮಭಿಗಚ್ಛತಿ' (ಬೃ.7.10.1) ಎಂಬ ಶ್ರುತಿ ವಾಯುಲೋಕಕ್ಕೆ ಹೋಗುತ್ತಾನೆ, ಎಂದಿದೆ. ಈ ಎರಡು ಶ್ರುತಿಗಳೂ ಪ್ರಮಾಣಗಳಾದುದರಿಂದ ಅಧಿಕಾರಿಭೇದದಿಂದ ಮಾರ್ಗಭೇದ, ಎಂದು ಪೂರ್ವಪಕ್ಷ. (ಅಧಿಕಾರಿ ಭೇದೇನ ಮಾರ್ಗ ಸುಕ್ರಮೋಪಪತ್ತಿಃ–ನ್ಯಾ.ವಿ.)

''ತೇಽರ್ಚಿಷಮೇವಾಭಿಯಂತಿ ತತೋ ವಾಯುಂ...

ಏಷ ಉ ಏವ ಬ್ರಹ್ಮಪಥಃ''

ಈ ವಿಶೇಷಶ್ರುತಿಯಲ್ಲಿ ನಿರ್ಧಾರಪೂರ್ವಕ ಹೇಳಿರುವುದರಿಂದ ಜ್ಞಾನಿಗಳು ಮೊದಲು ಅರ್ಚಿರ್ಲೋಕಕ್ಕೇ ಹೋಗುತ್ತಾರೆ, ಎಂದು ಸಿದ್ಧಾಂತ. ಅರ್ಚಿರ್ಲೋಕಾನಂತರದಲ್ಲಿ ವಾಯುಲೋಕಕ್ಕೆ ಹೋಗುವುದರಿಂದ 'ಸ ವಾಯುಮಭಿಗಚ್ಛತಿ' ಎನ್ನಲಾಗಿದೆ. ಅದು ಸಾವಕಾಶ ಶ್ರುತಿ.

**2. ವಾಯುಗತ್ಯಧಿಕರಣ**— ಸುಕ್ರಮ–ಪೂರ್ವಯುಕ್ತಿ, ವಿಶೇಷ ಸಂಪ್ರಾಪ್ತಿ – ಸಿದ್ಧಾಂತಯುಕ್ತಿ .

'ಸ ವಾಯುಮಾಗಚ್ಛತಿ–ಅರ್ಚಿರ್ಲೋಕದಿಂದ ವಾಯುಲೋಕಕ್ಕೆ ಜ್ಞಾನಿಯು ಹೋಗುತ್ತಾನೆ' (ಬೃ.7.10.1) ಎಂದು ಬೃಹದಾರಣ್ಯಕಶ್ರುತಿ. 'ಅರ್ಚಿಷೋಽಹಃ' ಎಂದು ಛಾಂದೋಗ್ಯದಲ್ಲಿದೆ. ಇವೆರಡೂ ಪ್ರಮಾಣ ವಾದುದರಿಂದ ಜ್ಞಾನಿಗಳಿಗೆ ಮಾರ್ಗಭೇದವಿದೆ, ಎಂದು ಪೂರ್ವಪಕ್ಷ.

'ಸ ಇತೋ ಗತಃ ದ್ವಿತೀಯಾಂ ಗತಿಂ ವಾಯುಮಾಗಚ್ಛತಿ' ಈ ಶ್ರುತಿಯಲ್ಲಿ 'ಎರಡನೆಯಗತಿ ವಾಯುಲೋಕ' ಎಂದು ವಿಶೇಷವಾಗಿ ಹೇಳಿದೆ. ಇಲ್ಲಿ 'ದ್ವಿತೀಯಂ' ಎಂದಿರುವುದರಿಂದ ಇದು ವಿಶೇಷಶ್ರುತಿ. 'ಅರ್ಚಿಷಃ ಅಹಃ' ಎಂಬ ಶ್ರುತಿಯಲ್ಲಿ ಅಹರ್ಲೋಕವು ಪ್ರಾಪ್ಯ, ಎಂದಿಷ್ಟೇ ಇದೆ. ಅಹರ್ಲೋಕ ದ್ವಿತೀಯಪ್ರಾಪ್ತಿ ಸ್ಥಾನವೇ ಆಗಬೇಕಿಲ್ಲ. ವಾಯುಲೋಕಕ್ಕೆ ಹೋದಮೇಲೆ ಅಹರ್ಲೋಕಕ್ಕೆ ಹೋದರೂ ಆ ಶ್ರುತ್ಯರ್ಥಕ್ಕೇನೂ ಬಾಧವಿಲ್ಲ. ಆದ್ದರಿಂದ ವಾಯುಲೋಕವೇ ದ್ವಿತೀಯ ಪ್ರಾಪ್ತಿಸ್ಥಾನ ಎಂದು ಸಿದ್ಧಾಂತ.

**3. ತಟಿದಧಿಕರಣ—** ಪೂರ್ವಯುಕ್ತಿ ಸುಕ್ರಮ, ಸಿದ್ಧಾಂತ ಯುಕ್ತಿ ವಿಶೇಷಸಂಪ್ರಾಪ್ತಿ.

ಕೌಂಡಿನ್ಯಶ್ರುತಿ–'ಸಂವತ್ಸರಾತ್ ವರುಣಲೋಕಂ–ಸಂವತ್ಸರ ಲೋಕ ದಿಂದ ವರುಣಲೋಕಕ್ಕೆ ಹೋಗುತ್ತಾರೆ, ಎನ್ನುತ್ತದೆ. ಗೌಪವನಶ್ರುತಿ– 'ಸವತ್ಸರಾತ್ ತಟಿತಮಾಗಚ್ಛತಿ' ಎನ್ನುತ್ತದೆ. ಇಲ್ಲಿಯೂ ಅಧಿಕಾರಿಭೇದೇನ ಮಾರ್ಗಭೇದವಿದೆ, ಎಂದು ಪೂರ್ವಪಕ್ಷ.

ತಟಿತ್ ಎಂದರೆ ಮಿಂಚಿಗೆ ಅಭಿಮಾನಿದೇವತೆ. ಅವನ ಲೋಕವು ವರುಣಲೋಕಕ್ಕೆ ಆಧಾರವಾಗಿದೆ. ಆದ್ದರಿಂದ ಸಂವತ್ಸರಾಭಿಮಾನಿ ಲೋಕದಿಂದ ತಟಿಲ್ಲೋಕಕ್ಕೆ ಹೋಗಿಯೇ ವರುಣಲೋಕಕ್ಕೆ ಹೋಗುವುದು ಅನಿವಾರ್ಯ. ಅಂದಮೇಲೆ ಸಂವತ್ಸರದಿಂದ ತಟಿತ್, ಅಲ್ಲಿಂದ ವರುಣ, ಅಲ್ಲಿಂದ ಪ್ರಜಾಪತಿ ಲೋಕಕ್ಕೆ. ಹೀಗೆ ಎಲ್ಲರಿಗೂ ಒಂದೇಮಾರ್ಗ. ಇಲ್ಲಿ ವಿಶೇಷಶ್ರುತಿ—'ತಟಿತಾ ಹ್ಯ್ಯಾಹ್ಯತೇ ವರುಣಲೋಕಃ', ಎಂದು.

**4. ಆತಿವಾಹಿಕಾಧಿಕರಣ—** ಸುಕ್ರಮ ಮತ್ತು ವಿಶೇಷಸಂಪ್ರಾಪ್ತಿಗಳೇ ಪೂರ್ವಪಕ್ಷಸಿದ್ಧಾಂತಯುಕ್ತಿ. ಅಥವಾ, ಮುಂದಿನ ಅಧಿಕರಣದ ವಿಕ್ರಮ– ಉರುತ್ವಗಳು ಪೂರ್ವಪಕ್ಷ ಸಿದ್ಧಾಂತ ಯುಕ್ತಿಗಳು.

**ಪೂರ್ವಪಕ್ಷ—** ಅರ್ಚಿರ್ಲೋಕದ ಅನಂತರ ಪ್ರಾಪ್ಯನಾದ ವಾಯು ಪ್ರಧಾನವಾಯು. ಅಲ್ಲಿ ವಾಯು ಎಂದಿಷ್ಟೇ ಇದೆ. ನಿರ್ವಿಶೇಷಿತವಾಯು ಶಬ್ದವು ಮುಖ್ಯವಾಯುವಾಚಕ. ಇದರ ನಂತರ ಆತಿವಾಹಿಕವಾಯು ಪ್ರಾಪ್ತಿಯನ್ನು ಹೇಳಲಾಗಿದೆ. ಅವನು ಮುಖ್ಯವಾಯುವಿಗಿಂತ ಅವರ. ಉತ್ತಮಪ್ರಾಪ್ತಿಯ ಅನಂತರ ಅಧಮಪ್ರಾಪ್ತಿಯು ಅನುಪಪನ್ನ ಎಂದು ನಿರಾಕರಿಸುವಂತಿಲ್ಲ. 'ಸೋಮಾದಗ್ನಿಂ' ಎಂದು ಉತ್ತಮನಾದ ಸೋಮನ ಅನಂತರ ಅಗ್ನಿಪ್ರಾಪ್ತಿಯನ್ನು ಹೇಳಲಾಗಿದೆ. ಇಲ್ಲಿ ಅಗ್ನಿ ಸೋಮನಿಗಿಂತ ಕಡಿಮೆ. ಆದ್ದರಿಂದ ಬಾಧಕವು ಅಕಿಂಚಿತ್ಕರ. ವಿಕ್ರಮ=ವಿಪರೀತಕ್ರಮ— ಅವರ ಪ್ರಾಪ್ತಿಯ ಅನಂತರ ಉತ್ತಮಪ್ರಾಪ್ತಿ ಎಂಬುದಕ್ಕೆ ವಿಪರೀತವಾದ ಕ್ರಮಕಂಡಿರುವುದು.

**ಸಿದ್ಧಾಂತ**— ಅರ್ಚಿರ್ಲೋಕದ ಅನಂತರ 'ಸ ವಾಯುಮಾಗಚ್ಛತಿ' ಎಂದು ಹೇಳಿದ ವಾಯು ಮುಖ್ಯವಾಯುವಲ್ಲ, ಆತಿವಾಹಿಕವಾಯು. ಏಕೆಂದರೆ, ಅಂತಿಮ ಪ್ರಾಪ್ಯನಾದ ವಾಯುವಿಗೆ 'ದ್ಯೌರ್ವಾವ ವಿದ್ಯುತ್, ತತ್ಪತಿಂ ವಾಯುಂ ಉಪಗಮ್ಯ ತೇನೈವ ಬ್ರಹ್ಮ ಗಚ್ಛತಿ' ಎಂದು 'ದ್ಯುಪತಿ=ಭಾರತೀಪತಿ' ಎಂದು ವಿಶೇಷಣವನ್ನು ಕೊಡಲಾಗಿದೆ. ಇಂತಹ ವಿಶೇಷಣಯುಕ್ತವಾದ ಶ್ರುತಿವಿಶೇಷದಿಂದ ಅಥವಾ, ಉರುತ್ವ (ಉತ್ತಮತ್ವ), ಭಾರತೀಪತಿತ್ವ ಎಂಬ ಉತ್ತಮತ್ವವು ಇರುವುದರಿಂದಾಗಿ ಅಂತಿಮಪ್ರಾಪ್ಯನೇ ಉತ್ತಮ. ದ್ವಿತೀಯಪ್ರಾಪ್ಯನಾದವನು ಆತಿವಾಹಿಕ.

**5. ವೈದ್ಯುತಾಧಿಕರಣ**— 'ಸೋಮಾದಗ್ನಿಂ' ಎಂದು ಉತ್ತಮವಾದ ಸೋಮನ ಅನಂತರ ಅವರನಾದ ಅಗ್ನಿಯ ಪ್ರಾಪ್ತಿಯಂತೆ ಉತ್ತಮನಾದ ವಾಯುವಿನ ಅನಂತರ ಅವರ ದೇವತೆಯ ಪ್ರಾಪ್ತಿ ಇದೆ, ಎಂದು ಪೂರ್ವಪಕ್ಷ. ವಿಕ್ರಮಃ–ವಿಪರೀತಪ್ರಾಪ್ತಿಕ್ರಮವು ಪೂರ್ವಪಕ್ಷಯುಕ್ತಿ.

**ಸಿದ್ಧಾಂತ**— ಅಂತಿಮ ಪ್ರಾಪ್ಯನಾದ ವಾಯುದೇವ ಮುಕ್ತರನ್ನು ಪರಬ್ರಹ್ಮನ ಬಳಿಗೆ ತಲುಪಿಸುತ್ತಾನೆ ಎನ್ನಲಾಗಿದೆ. ರಾಜನ ಬಳಿಗೆ ಸಂದರ್ಶಕ ರನ್ನು ಒಯ್ಯುವವರು ರಾಜನಿಗೆ ಪ್ರೀತಿಪಾತ್ರರಾಗಿರುವಂತೆ ಪರಬ್ರಹ್ಮನ ಬಳಿಗೆ ಮುಕ್ತರನ್ನು ತಲುಪಿಸಬೇಕಾದವನು ಬ್ರಹ್ಮನಿಗೆ ಅತಿಪ್ರಿಯನಾಗಿರಬೇಕು. ವಾಯುದೇವನನ್ನು ಬಿಟ್ಟರೆ ಬ್ರಹ್ಮನಿಗೆ ಪ್ರಿಯನಾದವ ಬೇರಾರೂ ಇಲ್ಲ. ಆದ್ದರಿಂದ ಅಂತಿಮಪ್ರಾಪ್ಯ ವಾಯುದೇವನೇ. ಶ್ರುತಿ ಹಾಗೆಯೇ ಹೇಳುತ್ತದೆ—

ವಾಯುರೇವ ಬ್ರಹ್ಮ ಗಮಯತಿ । ತಸ್ಯ ಹ್ಯೇಷಾ ಶಕ್ತಿಃ ।
ನ ಹ್ಯನ್ಯೋ ಬ್ರಹ್ಮ ಗಮಯತಿ । ಪ್ರಿಯೋ ಹ್ಯೇನದ್ಗಮಯತಿ ।
ನಹ್ಯನ್ಯಃ ಪ್ರಿಯೋ ಬ್ರಹ್ಮಣಃ ॥ –ನ್ಯಾಯ.ವಿ.

**6. ಕಾರ್ಯಾಧಿಕರಣ**— 'ಸ ಏನಾನ್ ಬ್ರಹ್ಮಗಮಯತಿ' – ವಾಯು ದೇವ ಮುಕ್ತಿಯೋಗ್ಯರನ್ನು ಬ್ರಹ್ಮನ ಬಳಿಗೆ ಒಯ್ಯುತ್ತಾನೆ' ಇಲ್ಲಿ ಬ್ರಹ್ಮನೆಂದರೆ ಚತುರ್ಮುಖಬ್ರಹ್ಮ ಎಂದು ಪೂರ್ವಪಕ್ಷ. ಏಕೆಂದರೆ, ಚತುರ್ಮುಖಪ್ರಾಪ್ತಿ ಪರ್ಯಂತವೂ ಸಾಧಕರಿಗೆ ಬಂಧನವು ಸಂತತವಾಗಿ=ಅನುಸೂತ್ಯವಾಗಿ

ಇರುತ್ತದೆ. ಬಂಧ ಇರುವವರೆಗೆ ಪರಬ್ರಹ್ಮಪ್ರಾಪ್ತಿ ಇಲ್ಲ. ಆದ್ದರಿಂದ ಬ್ರಹ್ಮ ಶಬ್ದಕ್ಕೆ ಚತುರ್ಮುಖಬ್ರಹ್ಮದೇವನೆಂದೇ ಅರ್ಥ. ಸಾಂತಾನಿಕ=ಸಂತತವಾಗಿ ಬಂಧವು ಇರುವುದು, ಪೂರ್ವಪಕ್ಷಯುಕ್ತಿ.

**ಸಿದ್ಧಾಂತ**— ಬ್ರಹ್ಮಶಬ್ದಕ್ಕೆ ಎರಡೂ ಅರ್ಥ. ವ್ಯಾಪ್ತ್ಯೋಪಾಸಕರು ಪರಬ್ರಹ್ಮನನ್ನು ಹೊಂದುತ್ತಾರೆ, ಪ್ರತೀಕಾಲಂಬನರು ಚತುರ್ಮುಖನನ್ನು ಹೊಂದುತ್ತಾರೆ. ಶ್ರುತ್ಯನುಸಾರವಾಗಿ ಈ ನಿರ್ಧಾರಮಾಡಬೇಕು—

> ಯಾಂತಿ ದೇವಪದಂ ಕೇಚಿತ್ ಪೂರ್ವಂ ಕೇಚಿತ್ ಲಯೇ ವಿಭುಮ್ ।
> ಯೋಗ್ಯತಾತಾರತಮ್ಯೇನ ವಿಶೇಷೋಽಯಮಪೀಷ್ಯತೇ ॥

ಕೆಲವರು ಪರಮಾತ್ಮನನ್ನೇ ಹೊಂದುತ್ತಾರೆ. ಮತ್ತೆ ಕೆಲವರು ಪ್ರಲಯ ಪೂರ್ವದಲ್ಲಿ ಚತುರ್ಮುಖನನ್ನು ಹೊಂದುತ್ತಾರೆ. ಇಲ್ಲಿ ಆಪ್ತಿಃ=ಶ್ರುತಿಪ್ರಾಪ್ತ ಪ್ರಮೇಯದ ಸ್ವೀಕಾರ, ಇದು ಸಿದ್ಧಾಂತಯುಕ್ತಿ.

**ಪೂರ್ವಪಕ್ಷ-2**— ಬ್ರಹ್ಮಶಬ್ದಕ್ಕೆ ಮುಖ್ಯಾರ್ಥ ಪರಬ್ರಹ್ಮ. ಆದ್ದರಿಂದ ಯೋಗ್ಯತಾಭೇದವಿಲ್ಲದೆ ಎಲ್ಲರೂ ಪರಬ್ರಹ್ಮನನ್ನೇ ಹೊಂದಬೇಕಾದುದು ಉಚಿತ. ಈ ಪೂರ್ವಪಕ್ಷಕ್ಕೆ ನ್ಯಾಯ-ಪ್ರಾಪ್ತಿ. ಪ್ರಥಮಪ್ರಾಪ್ತತ್ವಾತ್ ಅಪೋಹಾಯುಕ್ತೇಃ ತಸ್ಯೈವ ಪ್ರಾಪ್ತಿ-ನಿಯಮಃ-ನ್ಯಾ.ವಿ.

**ಸಿದ್ಧಾಂತ**— 'ಯಾಂತಿ ದೇವಪದಂ' ಎಂಬ ವಿಶೇಷ ಶ್ರುತಿಗೆ ಅನುಗುಣ ವಾಗಿ ಬ್ರಹ್ಮಶಬ್ದಕ್ಕೆ ಎರಡೂ ಅರ್ಥಗಳನ್ನು ಹೇಳಬೇಕು.

**ಪೂರ್ವಪಕ್ಷ-3**— ಎರಡೂ ಬ್ರಹ್ಮರ ಬಳಿ ಜ್ಞಾನಿಗಳು ಹೋಗುತ್ತಾರೆ ಎಂದು ಒಪ್ಪಿಕೊಂಡರೂ ಜ್ಞಾನಿಗಳ ಅಪೇಕ್ಷೆಯಂತೆ ಕೆಲವರು ಅಪರಬ್ರಹ್ಮ, ಕೆಲವರು ಪರಬ್ರಹ್ಮನ ಬಳಿಗೆ ಹೋಗುತ್ತಾರೆ. ಯೋಗ್ಯತೆ ಇದಕ್ಕೆ ನಿಯಾಮಕವಲ್ಲ. ಅಭೀಷ್ಟತಾ—ಎನ್ನುವುದು ಈ ಪೂರ್ವಪಕ್ಷಕ್ಕೆ ಯುಕ್ತಿ.

**ಸಿದ್ಧಾಂತ**— 'ಕ್ರಮಾನುರಾಗೀ ಭಗವಾನ್ ಕ್ರಮಾತ್ ಪುಂಭಿರವಾಪ್ಯತೇ' ಭಗವಂತ ಯೋಗ್ಯತಾಕ್ರಮವನ್ನು ಇಷ್ಟಪಡುತ್ತಾನೆ. ಆದ್ದರಿಂದ ಯೋಗ್ಯತಾನುಸಾರವಾಗಿಯೇ ಪರಾಪರಬ್ರಹ್ಮಪ್ರಾಪ್ತಿ. ಕ್ರಮಾನುರಾಗ-ಈ ಸಿದ್ಧಾಂತಕ್ಕೆ ಯುಕ್ತಿ.

**ಪೂರ್ವಪಕ್ಷ–4**— ಜ್ಞಾನಿಗಳ ಸೌಕರ್ಯಕ್ಕೆ ಅನುಗುಣವಾಗಿ ಪರಾಪರ ಬ್ರಹ್ಮಪ್ರಾಪ್ತಿ, ಎಂದು ಮತ್ತೆ ಪೂರ್ವಪಕ್ಷ. ಸೌಕರ್ಯಂ–ಎನ್ನುವುದೇ ಪೂರ್ವಪಕ್ಷಯುಕ್ತಿ.

**ಸಿದ್ಧಾಂತ**— ಇಚ್ಛೆಗೆ ಬಂದಂತೆ ಅಲೌಕಿಕ ಪ್ರಮೇಯಗಳನ್ನು ಕಲ್ಪಿಸಬಾರದು. ಶ್ರುತಿ ಹೇಳಿದಂತೆ ಕಲ್ಪನೆ ಮಾಡಬೇಕು. ಶ್ರುತಿಯು ಯೋಗ್ಯತೆಯ ಮಾನದಂಡವನ್ನು ಅನುಸರಿಸಿದೆ. ಆದ್ದರಿಂದ ಯೋಗ್ಯತಾನು ಸಾರವಾಗಿಯೇ ಪರಾಪರಪ್ರಾಪ್ತಿಯನ್ನು ಹೇಳಬೇಕು. ಕಥಿತಾನುವೃತ್ತಿ– ಶ್ರುತ್ಯುಕ್ತಾನುಸರಣೆ– ಇದು ಸಿದ್ಧಾಂತಯುಕ್ತಿ.

ಹಿಂದಿನ ಅಧಿಕರಣಗಳಲ್ಲಿ ಒಂದೇ ಪೂರ್ವಪಕ್ಷ–ಸಿದ್ಧಾಂತಯುಕ್ತಿ ಗಳಾದರೂ ಇಲ್ಲಿ ನಾಲ್ಕು ಯುಕ್ತಿಗಳಿವೆ. ಏಕೆಂದರೆ ಈ ಅಧಿಕರಣದಲ್ಲಿ ಒಟ್ಟು ಹತ್ತು ಸೂತ್ರಗಳಿವೆ. ಅವಾಂತರ ವಿಷಯಗಳಿಗೆ ಅನುಸಾರವಾಗಿ ನಾಲ್ಕು ಯುಕ್ತಿಗಳನ್ನು ಹೇಳಲಾಗಿದೆ.—ಅಂತರ್ಭೇದಾಧಿಕರಣತ್ವಾತ್ ಸಮುದಾ ಯೋಕ್ತಿಃ–ನ್ಯಾಯ.ವಿ.

## ಕಾರ್ಯಾಧಿಕರಣ

**(ಸಿದ್ಧಾಂತನಿರ್ಣೀತಕರಾಃ) ಪ್ರತೀಕಂ**
**ದೇಹಾದಿಕಂ ತದ್ಗತಮೇವ ಯೇ ನರಾಃ ।**
**ಉಪಾಸತೇ ತೇ ಪುರತಃ ಸಮಾಪ್ನುಯುಃ–**
**ಬ್ರಹ್ಮಾಣಮಸ್ಮಾನ್ಮತಿಮಾಪ್ಯ ವಿಷ್ಣುಮ್ ॥ ೩ ॥**

**ಪ್ರಾಪ್ಸ್ಯಂತ್ಯತೋಽನ್ಯೇಽಪಿ ತಮಾಪ್ಯ ತಸ್ಮಾ–**
**ದ್ಧರಿಂಗತಾ ಮುಕ್ತಿಭಾಜಃ ಪರಾಂತೇ ॥ ೪ ॥**

ಅಪ್ರತೀಕಾಲಂಬನಾನ್(4.3.15) ಇತ್ಯಾದಿ ಸೂತ್ರದಲ್ಲಿ 'ಪ್ರತೀಕಂ' ಎಂದರೆ ದೇಹ, ಮನಸ್ಸು ಮೊದಲಾದುದು, ಎಂದರ್ಥ. ಯೇ ನರಾಃ=ಯಾವ ಮನುಷ್ಯಸಾಧಕರು ತದ್ಗತಮೇವ=ದೇಹಾದಿಗತನಾದ ಬ್ರಹ್ಮನನ್ನೇ ಉಪಾಸತೇ=ಉಪಾಸನೆ ಮಾಡುವರೋ ತೇ=ಪ್ರತೀಕಾಲಂಬನರಾದ ಅಂತಹ

ಸಾಧಕರು ಪುರತಃ=ಪ್ರಲಯಕಾಲಕ್ಕಿಂತ ಪೂರ್ವದಲ್ಲಿ ಅಸ್ಮಾತ್ ಬ್ರಹ್ಮಣಃ=ಈ ಚತುರ್ಮುಖಬ್ರಹ್ಮನಿಂದ ಮತಿಂ=ಜ್ಞಾನವಿಶೇಷವನ್ನು ಆಪ್ಯ=ಹೊಂದಿ ವಿಷ್ಣುಂ=ವಿಷ್ಣುವನ್ನು ಪ್ರಾಪ್ಸ್ಯಂತಿ=ಪ್ರಲಯಕಾಲದಲ್ಲಿ ಹೊಂದುತ್ತಾರೆ. ಅತೋ ಅನ್ಯೇ=ಪ್ರತೀಕಾಲಂಬನರಿಗಿಂತ ಭಿನ್ನರಾದ ವ್ಯಾಪ್ತ್ಯೋಪಾಸಕರೂ ತಂ ಆಪ್ಯಾಪಿ=ಮೊದಲೋಮ್ಮೆ ವೈಕುಂಠದಲ್ಲಿ ಅಮುಕ್ತಸ್ಥಾನದಲ್ಲಿರುವ ವಿಷ್ಣುವನ್ನು ಹೊಂದಿಯೂ ಪರಾಂತಕಾಲೇ ತಸ್ಮಾತ್=ವಿಷ್ಣುವಿನಿಂದ ತಂ=ಬ್ರಹ್ಮದೇವನನ್ನು ಆಪ್ಯ=ಹೊಂದಿ ಹರಿಂ ಗತಾಃ=ಮುಕ್ತಿಭಾಜಃ ಭವಂತಿ=ಭಗವಂತನನ್ನು ಹೊಂದಿ ಮುಕ್ತರಾಗುತ್ತಾರೆ.

**ಇಲ್ಲಿಗೆ ನಾಲ್ಕನೆಯ ಅಧ್ಯಾಯದ ಮೂರನೆಯ ಪಾದ ಮುಗಿಯಿತು.**

॥ ಶ್ರೀವೇದವ್ಯಾಸೋ ವಿಜಯತೇ ॥

ಶ್ರೀಮದಾನಂದತೀರ್ಥಭಗವತ್ಪಾದರು ರಚಿಸಿದ

# ಶ್ರೀಮದನುವ್ಯಾಖ್ಯಾನ

## ನಾಲ್ಕನೆಯ ಅಧ್ಯಾಯದ ನಾಲ್ಕನೆಯ ಪಾದ

## ಭೋಗಪಾದ

### ನಾಲ್ಕನೇ ಪಾದದ ಪೂರ್ವಪಕ್ಷ–ಸಿದ್ಧಾಂತ ನ್ಯಾಯಗಳು

ಅತಿಕ್ರಮೋಕ್ತಿಃ ಕೃತಿರರ್ಥಲಾಭಃ
ಪರಾಗತಿಃ ಪಾರಗತಿಸ್ತದೋಕಃ ।
ಸಮಸ್ತಕಾರ್ಯಂ ವಶಿತಾ ಚ ವಿಶ್ವ–
ಸಂಭಾವನಾ ಯುಕ್ತಯಸ್ತ್ವನ್ಯಪಕ್ಷೇ ॥ ೧ ॥

ಸಾಮಾನ್ಯರೂಪಂ ಪ್ರತಿಭಾನಮುಕ್ತಿ–
ರಾಶ್ಚರ್ಯತಾಽಕೃತ್ರಿಮತಾಸ್ತಽದೋಷಃ ।
ವಿಶೇಷಕ್ಲೃಪ್ತಿಃ ಕೃತನಿಃಶ್ರಮಶ್ಚ
ಮಾಹಾತ್ಮ್ಯಮಿತ್ಯೇವ ಸುನಿರ್ಣಯಾರ್ಥಾಃ ॥ ೨ ॥

1. ಸಂಪದ್ಯಾಧಿಕರಣ— ಪೂರ್ವಪಕ್ಷಯುಕ್ತಿ–ಅತಿಕ್ರಮೋಕ್ತಿಃ= ಬ್ರಹ್ಮಾತಿಕ್ರಮಣವನ್ನು ಹೇಳಿರುವುದು. ಸಿದ್ಧಾಂತಯುಕ್ತಿ ಸಾಮಾನ್ಯರೂಪ= ಸಾಮಾನ್ಯರೂಪದಿಂದ ಅತಿಕ್ರಮಣೋಕ್ತಿ.

ಪೂರ್ವಪಕ್ಷ— ''ಏತಂ ಸೇತುಂ ತೀರ್ತ್ವಾ ಅಂಧಃ ಸನ್ ಅನಂಧೋ ಭವತಿ–ಜಗದ್ಧಾರಕನಾದ ಬ್ರಹ್ಮನನ್ನು ದಾಟಿ ಅಜ್ಞಾನಿಯಾಗಿದ್ದ ಮುಕ್ತನು ಪೂರ್ಣಜ್ಞಾನಿಯಾಗುತ್ತಾನೆ'' ಎಂದು ಛಾಂದೋಗ್ಯೋಪನಿಷತ್ತು ಮುಕ್ತನು ಪರಮಾತ್ಮನನ್ನೂ ದಾಟುತ್ತಾನೆ, ಎನ್ನಲಾಗಿದೆ. ಆದ್ದರಿಂದ ಬ್ರಹ್ಮನೂ ಅಂತಿಮಗಮ್ಯನಲ್ಲ.

ಸಿದ್ಧಾಂತ— ಛಾಂದೋಗ್ಯಶ್ರುತಿಯಲ್ಲಿ 'ತೀರ್ತ್ವಾ-ದಾಟಿ' ಎಂದಿಷ್ಟೇ ಹೇಳಲಾಗಿದೆ. 'ಅರ್ಚಿಷಃ ಅಹಃ' ಎಂದಂತೆ 'ಬ್ರಹ್ಮನನ್ನು ದಾಟಿ ಇನ್ನೊಂದನ್ನು ಹೊಂದುತ್ತಾನೆ' ಎಂದು ಹೇಳಲಾಗಿಲ್ಲ. ಆದ್ದರಿಂದ, ಸಂಸಾರಂ ತೀರ್ತ್ವಾ ಏತಂ ಸೇತುಂ ಸಂಪದ್ಯ-'ಸಂಸಾರವನ್ನು ದಾಟಿ, ಪರಮಾತ್ಮನನ್ನು ಹೊಂದಿ' ಎಂದು ಶ್ರುತಿಗೆ ಅರ್ಥವನ್ನು ಹೇಳಬೇಕು. ಇದಕ್ಕೆ ಸಂವಾದಿ ಶ್ರುತಿಯೂ ಇದೆ—

''ಇಮಾಂ ಘೋರಾಮಶಿವಾಂ ನದೀಂ ತೀರ್ತ್ವಾ
ಬ್ರಹ್ಮ ಸಂಪದ್ಯತೇ'' (ಮೌದ್ಗಲ್ಯ ಶ್ರುತಿ)

**2. ಮುಕ್ತಾಧಿಕರಣ**— ಕೃತಿ=ಕ್ರಿಯೆ ಇದು, ಪೂರ್ವಯುಕ್ತಿ. ಪ್ರತಿಭಾನ=ಸ್ಪಷ್ಟವಾಗಿ ತೋರುವುದು-ಇದು ಸಿದ್ಧಾಂತಯುಕ್ತಿ.

ಪೂರ್ವಪಕ್ಷ— ಛಾಂದೋಗ್ಯಶ್ರುತಿಯಲ್ಲಿ 'ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್, ರಮಮಾಣಃ' ಎಂದು ಮುಂತಾಗಿ ಕ್ರಿಯೆಗಳನ್ನು ಹೇಳಲಾಗಿದೆ. ಮುಕ್ತನು ಕೃತಕಕೃತ್ಯನಾದುದರಿಂದ ತಿನ್ನುವುದೇ ಮೊದಲಾದ ಕ್ರಿಯೆಗಳು ಅವನಲ್ಲಿ ಇರಲಾರದು. ಆದ್ದರಿಂದ ಇದು ಅಮುಕ್ತಪ್ರಕರಣ.

ಸಿದ್ಧಾಂತ— ಈ ಶ್ರುತಿಯಲ್ಲಿ 'ಪರಂ ಜ್ಯೋತಿರುಪಸಂಪದ್ಯಸ್ವೇನ ರೂಪೇಣಾಭಿ- ನಿಷ್ಪದ್ಯತೇ' ಎಂದು ಸ್ವರೂಪಾವಿರ್ಭಾವವನ್ನು ಹೇಳಿರುವುದ ರಿಂದ ಇದು ಮುಕ್ತಪ್ರಕರಣವೆಂದು ಸ್ಪಷ್ಟವಾಗಿದೆ.

**3. ಆತ್ಮಾಧಿಕರಣ**— ಅರ್ಥಲಾಭಃ=ಪ್ರಯೋಜನಲಾಭ ಪೂರ್ವಪಕ್ಷ ಯುಕ್ತಿ. ಉಕ್ತಿ=ಸ್ಪಷ್ಟಶ್ರುತಿ, ಇದು ಸಿದ್ಧಾಂತಯುಕ್ತಿ.

ಛಾಂದೋಗ್ಯದಲ್ಲಿ 'ಪರಂಜ್ಯೋತಿರುಪಸಂಪದ್ಯ' ಎಂದು ಹೇಳಿರುವ ಜ್ಯೋತಿ ಸೂರ್ಯ, ಪರಮಾತ್ಮನಲ್ಲ. ಸೂರ್ಯನೆಂದಾಗ 'ಸೂರ್ಯಮಗನ್ಮ ಜ್ಯೋತಿರುತ್ತರಂ' ಎಂಬ ಷಟ್‌ಪ್ರಶ್ನಶ್ರುತಿಯೊಂದಿಗೆ ಏಕಾರ್ಥತ್ವಲಾಭವಾಗು ತ್ತದೆ. ಆ ಶ್ರುತಿಯಲ್ಲೂ 'ಏವಂ ಹೈವ ಸ ಪಾಪ್ಮನಾ ವಿನಿರ್ಮುಕ್ತಃ' ಎಂದಿದೆ, ಎಂದು ಪೂರ್ವಪಕ್ಷ.

ಸಿದ್ಧಾಂತ— ಪರಂಜ್ಯೋತಿ ಎಂದರೆ ಬ್ರಹ್ಮನೇ ಎಂದು ಸ್ಪಷ್ಟವಾದ ಶ್ರುತಿ ಇದೆ.

ಆತ್ಮೈವ ಪರಂಜ್ಯೋತಿಃ, ಸಹಿ ಪರಮೋ ದ್ಯೋತತೇ
ಜೀವಾಚ್ಚಾಜೀವಾಚ್ಚ, ತಸ್ಮಾದಾಹುಃ ಪರಂಜ್ಯೋತಿರಿತಿ ।
ತಮೇಷ ಜೀವೋಽಭಿಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ ॥

ಈ ಶ್ರುತಿಯಲ್ಲಿ ಬ್ರಹ್ಮನೇ ಪರಂ ಜ್ಯೋತಿ ಎಂದು ಹೇಳಿ ಅವನ ಪ್ರಾಪ್ತಿಯಿಂದಲೇ ಸ್ವರೂಪಾಭಿವ್ಯಕ್ತಿ, ಎಂದು ಸ್ಪಷ್ಟವಾಗಿ ಹೇಳಲಾಗಿದೆ.

**4. ಅವಿಭಾಗಾಧಿಕರಣ—** ಪರಾಗತಿಃ=ಮೋಕ್ಷವು ಪರಮಗತಿಯಾಗಿರುವುದು ಪೂರ್ವಪಕ್ಷಯುಕ್ತಿ. ಆಶ್ಚರ್ಯತಾ=ಪರಮಾತ್ಮನು ಪರಮಾಶ್ಚರ್ಯನು, ಇದು ಸಿದ್ಧಾಂತ ಯುಕ್ತಿ.

**ಪೂರ್ವಪಕ್ಷ—** ಮೋಕ್ಷವು ಪರಮಪುರುಷಾರ್ಥವಾದುದರಿಂದ ಮುಕ್ತನು ಬಯಸಿದ ವಿಷಯಭೋಗಗಳೆಲ್ಲವೂ ಅಲ್ಲಿ ಸಿಗಬೇಕು. ಆದರೆ, ಪರಮಾತ್ಮ ಪೂರ್ಣಾನಂದ. ಅವನಿಗೆ ವಿಷಯಭೋಗದ ಅಗತ್ಯವಿಲ್ಲ. ಆದ್ದರಿಂದ ಪರಮಾತ್ಮ ಭೋಗಿಸದ ವಿಷಯಗಳನ್ನು ಕೆಲವೊಮ್ಮೆ ಮುಕ್ತರು ಅನುಭವಿಸುತ್ತಾರೆ.

ನ ಚ ಪರಗತಿತ್ವಾತ್ ಈಶ್ವರಾಭುಕ್ತಾ ಅಪಿ ಭೋಗಾಃ ಮುಕ್ತೌ ಭವಂತಿ –ನ್ಯಾ.ವಿ.

**ಸಿದ್ಧಾಂತ—** ಪರಮಾತ್ಮನು ಪರಮಾಶ್ಚರ್ಯನಾದುದರಿಂದ ಪೂರ್ಣಾನಂದನಾದರೂ ವಿಷಯಭೋಗವುಳ್ಳವನು. 'ಪೂರ್ಣಾನಂದಃ ಪೂರ್ಣಭುಕ್' ಎಂದು ಶ್ರುತಿಯು ಹೇಳುತ್ತದೆ. ಹೀಗೆ ಶ್ರುತಿ–ಯುಕ್ತಿಗಳಿಂದ ಎಲ್ಲ ವಿಷಯ ಭೋಗಗಳೂ ಪರಮಾತ್ಮನಿಗೆ ಇವೆ.

**5. ಬ್ರಾಹ್ಮಾಧಿಕರಣ—** ಪಾರಗತಿ=ಸಂಸಾರ ಪಾರವನ್ನು ಮುಟ್ಟಿರುವುದು, ಪೂರ್ವಪಕ್ಷಯುಕ್ತಿ. ಅಕೃತ್ರಿಮತ್ವ=ಕೃತ್ರಿಮವಲ್ಲದ ಚಿದ್ರೂಪದೇಹ, ಸಿದ್ಧಾಂತಯುಕ್ತಿ.

**ಪೂರ್ವಪಕ್ಷ—** ಮುಕ್ತರು ಸಂಸಾರವನ್ನು ದಾಟಿದವರು, ಅವರಿಗೆ ದೇಹವಿಲ್ಲ. ದೇಹವಿಲ್ಲದವರಿಗೆ ಭೋಗವಿಲ್ಲ.

ಸಿದ್ಧಾಂತ— ಮುಕ್ತರಿಗೆ ಕೃತ್ರಿಮವಾದ ದೇಹವಿಲ್ಲದಿದ್ದರೂ ಚಿದ್ರೂಪವಾದ ದೇಹವು ಇದೆ. ಆದ್ದರಿಂದ ವಿಷಯಭೋಗ ಇದೆ.

ಅಥ ವಿಮುಕ್ತಸ್ಯ ಚಿನ್ಮಾತ್ರ ಏವ ದೇಹೋ ಭವತಿ
ಚಿನ್ಮಾತ್ರಾಣಿ ಕರಣಾನಿ, ತೈರೀಶಾನುಗೃಹೀತೈಃ ಭೋಗಾನ್ ಭುಂಕ್ತೇ ॥

**6. ಸಂಕಲ್ಪಾಧಿಕರಣ—** ತದೋಕಃ=ಭಗವಂತನ ಮನೆ, ಪೂರ್ವಪಕ್ಷಯುಕ್ತಿ. ಅಸ್ತದೋಷಃ=ನಿರ್ದೋಷವಾದ ಭಗವನ್ಮಂದಿರ, ಸಿದ್ಧಾಂತಯುಕ್ತಿ.

**ಪೂರ್ವಪಕ್ಷ—** ಮುಕ್ತನಿರುವುದು ಭಗನ್ಮಂದಿರದಲ್ಲಿ. ಭೂಲೋಕದ ಮನೆಯಲ್ಲಿ ಭೋಗವು ಪ್ರಯತ್ನ ಸಾಧ್ಯವಾಗುವಂತೆ ಅಲ್ಲಿಯೂ ಯತ್ನಸಾಧ್ಯ.

**ಸಿದ್ಧಾಂತ—** ಮುಕ್ತನೂ ಆ ಲೋಕವೂ ನಿರ್ದೋಷವಾದುದರಿಂದ ಅಲ್ಲಿ ಭೋಗವು ಶ್ರಮಸಾಧ್ಯವಲ್ಲ. ಸಂಕಲ್ಪಮಾತ್ರದಿಂದ ಎಲ್ಲವೂ ಸಿದ್ಧವಾಗುತ್ತದೆ.

**7. ಅನನ್ಯಾಧಿಪತ್ಯಧಿಕರಣ—** ತದೋಕಃ ಮತ್ತು ಅಸ್ತದೋಷಃ ಎಂದೇ ಇಲ್ಲಿಯೂ ಪೂರ್ವಪಕ್ಷ, ಸಿದ್ಧಾಂತಯುಕ್ತಿಗಳು.

**ಪೂರ್ವಪಕ್ಷ—** ರಾಜಮಂದಿರದಲ್ಲಿ ನಮಗಿಂತ ಅವರರಾದ ಭೃತ್ಯರೂ ನಮ್ಮ ಮೇಲೆ ಅಧಿಕಾರ ಚಲಾಯಿಸುವಂತೆ ಭಗವನ್ಮಂದಿರದಲ್ಲೂ ಅವರರಾದವರೂ ನಮ್ಮ ಅಧಿಪತಿಗಳಾಗಬಹುದು.

**ಸಿದ್ಧಾಂತ—** ಮುಕ್ತಿಸ್ಥಾನದಲ್ಲಿರುವ ಪರಮಾತ್ಮ ಮತ್ತು ಇತರ ಮುಕ್ತರೆಲ್ಲರೂ ನಿರ್ದೋಷರಾದುದರಿಂದ ಅಧಮರು ಉತ್ತಮರ ಮೇಲೆ ಅಧಿಕಾರವನ್ನು ಚಲಾಯಿಸುವುದಿಲ್ಲ.

**8. ಅಭಾವಾಧಿಕರಣ—** ಸಮಸ್ತಕಾರ್ಯ=ದೇಹವಿದ್ದರೆ ದೋಷಪ್ರಸಕ್ತಿ ಪೂರ್ವಪಕ್ಷಯುಕ್ತಿ. ವಿಶೇಷಕ್ಲೃಪ್ತಿ=ಮುಕ್ತರಲ್ಲಿ ವಿಶೇಷವು ಶ್ರುತಿಸಿದ್ಧ-ಸಿದ್ಧಾಂತಯುಕ್ತಿ.

**ಪೂರ್ವಪಕ್ಷ—** ಸುಷುಪ್ತಿಯಲ್ಲಿ ಚಿನ್ಮಾತ್ರದೇಹವಿದ್ದರೂ ವಿಷಯ ಭೋಗವಿಲ್ಲ. ಆದ್ದರಿಂದ ಚಿನ್ಮಾತ್ರದೇಹವು ಭೋಗಪ್ರದವಲ್ಲ. ಜಡದೇಹ ವಿದ್ದರೆ ದುಃಖಾದಿ ಪ್ರಸಂಗ. ಆದ್ದರಿಂದ ಮುಕ್ತರಿಗೆ ವಿಷಯಭೋಗವಿಲ್ಲ.

ಸಿದ್ಧಾಂತ— ಮುಕ್ತರಿಗೆ ಜಡದೇಹವಿದ್ದರೂ ಅದರಲ್ಲಿ ಸಂಪೂರ್ಣ ನಿಯಂತ್ರಣವಿರುವುದರಿಂದ ವಿಷಯಭೋಗ ಇದ್ದರೂ ದುಃಖವಿಲ್ಲ. ಅಗ್ನಿಸ್ತಂಭನ ವಿದ್ಯೆ ಇದ್ದವನಿಗೆ ಬೆಂಕಿಯ ಸಂಪರ್ಕ ಇದ್ದರೂ ಅದು ಸುಡುವುದಿಲ್ಲ. ಅದರಂತೆ. ಅಥವಾ, ಸ್ವಪ್ನದಲ್ಲಿ ದೇಹಾಭಿಮಾನ ಇಲ್ಲದಿರುವುದರಿಂದ ದೇಹವಿಲ್ಲ. ಆದರೂ ಸ್ವಾಪ್ನವಸ್ತುಗಳ ಭೋಗ ಇದೆ. ಅದರಂತೆ ಚಿನ್ಮಾತ್ರದೇಹವಿದ್ದರೂ ಭೋಗವಿರಬಹುದು.

ದೇಹಾಭಾವ್ವ ಭಾವಾಚ್ಚ ನಿರ್ಭೋಗಿತ್ವಂ ಚ ದುಃಖಿತಾಮ್ ।
ಯಾಂತ್ಯಮುಕ್ತಾ ನೋಭಯಂ ಚ ಮುಕ್ತಾನಾಂ ವಶಿತಾ ಯತಃ ।
ಇತಿ ಶ್ರುತ್ಯೈವ ವಿಶೇಷಕ್ಲೃಪ್ತೇಶ್ಚ । ನ್ಯಾ.ವಿ.

**9.** ಜಗದ್ವ್ಯಾಪಾರಾಧಿಕರಣ— ಸಮಸ್ತಕಾರ್ಯ–ಪೂರ್ವಪಕ್ಷಯುಕ್ತಿ. ವಿಶೇಷಕ್ಲೃಪ್ತಿ–ಸಿದ್ಧಾಂತಯುಕ್ತಿ.

ಪೂರ್ವಪಕ್ಷ— ಮುಕ್ತರು ಸಂಕಲ್ಪ ಮಾತ್ರದಿಂದಲೇ ಎಲ್ಲವನ್ನೂ ಪಡೆಯುತ್ತಾರೆ. ಅವರು ಜಗತ್ತಿನ ಸೃಷ್ಟ್ಯಾದಿಗಳನ್ನು ಮಾಡಬೇಕೆಂದು ಬಯಸಿದರೆ ಅದೂ ಅವರಿಂದ ನಡೆಯಬೇಕು. ನಡೆದರೆ ಬ್ರಹ್ಮನ ಜನ್ಮಾದಿಕಾರಣತ್ವ ಲಕ್ಷಣಕ್ಕೆ ಅತಿವ್ಯಾಪ್ತಿ.

ಸಿದ್ಧಾಂತ— ವ್ಯಾಪಾರೋ ಜಗತೋ ವಿಷ್ಣೋಃ
ಮುಕ್ತಾನಾಂ ತು ಸ್ವಭೋಗಗಃ ।
ನ ಹಿ ಸ್ವರ್ಣಂ ಶುದ್ಧಮಪಿ ವಹ್ನಿಕಾರ್ಯಕರಂ ಭವೇತ್॥

ಹೀಗೆ ವಿಶೇಷ ಪ್ರಮಾಣವಿರುವುದರಿಂದ ಮುಕ್ತರು ಜಗತ್ ಸೃಷ್ಟ್ಯಾದಿಗಳಲ್ಲಿ ಅಯೋಗ್ಯರಾದುದರಿಂದ ಆ ಕಾಮನೆಯನ್ನೇ ಮಾಡುವುದಿಲ್ಲ.

**10.** ಸ್ಥಿತ್ಯಧಿಕರಣ— ವಶಿತ್ವ=ಎಲ್ಲವನ್ನೂ ಅಧೀನದಲ್ಲಿಟ್ಟುಕೊಂಡಿರುವುದು ಪೂರ್ವಪಕ್ಷಯುಕ್ತಿ. ಕೃತನಿಶ್ಚಯ=ಕೃತಕೃತ್ಯತೆ, ಅಭ್ಯಾಸಪಾಟವ, ಸಿದ್ಧಾಂತಯುಕ್ತಿ .

ಪೂರ್ವಪಕ್ಷ— ಅಣಿಮಾದಿ ಅಷ್ಟಸಿದ್ಧಿಗಳು ಮುಕ್ತರಿಗೆ ಇರುತ್ತವೆ. ವಶಿತ್ವವೂ ಅವುಗಳಲ್ಲಿ ಒಂದು. ವಶಿತ್ವವೆಂದರೆ ಬೇಕಾದುದನ್ನು ತನ್ನ ವಶದಲ್ಲಿ

ಇಟ್ಟುಕೊಳ್ಳುವುದು. ಅವರು ಆನಂದವೃದ್ಧಿಯನ್ನು ಬಯಸಿದರೆ ಉಪಾಸನಾದಿಗಳಿಂದ ಅದನ್ನೂ ಸಾಧಿಸಿಕೊಳ್ಳಬಲ್ಲರು. ಹೀಗಾಗಿ ಮೋಕ್ಷವೂ ಸಂಸಾರ ಸಮಾನಧರ್ಮವುಳ್ಳದ್ದು.

ಸಿದ್ಧಾಂತ– ಮುಕ್ತರು ಕೃತಕೃತ್ಯರು. ಅವರ ಉಪಾಸನಾದಿಗಳೂ ಪರಮ ಸುಖರೂಪ. ಆದ್ದರಿಂದ ಉಪಾಸನೆಯಿಂದ ಸಾಧ್ಯವಾದ ಫಲ ಅಲ್ಲಿಲ್ಲ.

**11. ಅನಾವೃತ್ತ್ಯಧಿಕರಣ**— ವಿಶ್ವಸಂಭಾವನಾ=ಎಲ್ಲವೂ ಸಂಭಾವಿತ, ಇದು ಪೂರ್ವಪಕ್ಷಯುಕ್ತಿ. ಮಾಹಾತ್ಮ್ಯ=ಸತ್ಯಕಾಮತ್ವ ಮಹಿಮೆ, ಸಿದ್ಧಾಂತ ಯುಕ್ತಿ.

ಪೂರ್ವಪಕ್ಷ— ಎಲ್ಲದಕ್ಕೂ ಕಾಲದ ಮಿತಿ ಇರುವುದರಿಂದ ಸ್ವರ್ಗಾದಿ ಲೋಕಗಳಿಗೆ ಹೋದವರಿಗೆ ಪುನರಾವೃತ್ತಿ ಇರುವುದರಿಂದ ಮೋಕ್ಷದಿಂದಲೂ ಪುನರಾಗಮನ ಇದೆ.

ಸಿದ್ಧಾಂತ— ಸತ್ಯಕಾಮತ್ವವು ಮುಕ್ತರ ಮಹಾತ್ಮೆ. ಮುಕ್ತರು ತಾವು ಇಲ್ಲೇ ಇರಬೇಕೆಂದು ಬಯಸುತ್ತಾರೆ. ಆದ್ದರಿಂದ ಮೋಕ್ಷದಿಂದ ಪುನರಾವೃತ್ತಿ ಇಲ್ಲ.

## ಅನನ್ಯಾಧಿಪತ್ಯಧಿಕರಣ

### 'ಓಂ ಅತ ಏವ ಚಾನನ್ಯಾಧಿಪತಿಃ ಓಂ'

**ಅನನ್ಯಭೃತ್ಯತ್ವಮಿಹೋದಿತೇಭ್ಯ-**
**ಸ್ತ್ವನ್ಯಸ್ಯ ಭೃತ್ಯತ್ವನಿವಾರಣಾಯ ।**
**ಪತಿಂ ಯದೇಷಾಮಪಿ ವಿಷ್ಣು ಮಾಹ**
**ಹ್ಯುತಾಮೃತತ್ವಸ್ಯ ಪತಿತ್ವವಾಗ್ಘರೇಃ ॥ ೩ ॥**

ಇಹ=ಈ ಸೂತ್ರದಲ್ಲಿ ಅನನ್ಯಭೃತ್ಯತ್ವಂ=ಮುಕ್ತರು ಅನ್ಯರಿಗೆ ಭೃತರಲ್ಲ ಎಂದಿರುವುದರ ಅಭಿಪ್ರಾಯ ಉದಿತೇಭ್ಯಃ=ಶಾಸ್ತ್ರದಲ್ಲಿ ಹೇಳಲ್ಪಟ್ಟವರಿಗಿಂತಲೂ ಅನ್ಯಸ್ಯ=ಇತರರಿಗೆ ಭೃತ್ಯತ್ವ ನಿವಾರಣಾಯ=ಮುಕ್ತರು

ಭೃತ್ಯಗಾಗುವುದನ್ನು ನಿರಾಕರಿಸುವುದಕ್ಕಾಗಿ. ಯತ್=ಏಕೆಂದರೆ, ಹರೇಃ= ವಿಷ್ಣುವಿಗೆ ಅಮೃತತತ್ವಸ್ಯ ಉತ ಪತಿತ್ವಂ ಇತಿ ವಾಕ್='ಉತಾಮೃತತ್ವಸ್ಯೇ ಶಾನಃ' ಎಂಬ ಪುರುಷಸೂಕ್ತದ ಮಾತು ವಿಷ್ಣುಂ=ವಿಷ್ಣುವನ್ನು ಏಷಾಂ ಪತಿಂ=ಮುಕ್ತರ ಒಡೆಯನನ್ನಾಗಿ ಆಹ=ಹೇಳುತ್ತದೆ.

ಭಾವಾರ್ಥ— ಈ ಸೂತ್ರದಲ್ಲಿ ಮುಕ್ತರಿಗೆ ಇನ್ನೊಬ್ಬರು ಅಧಿಪತಿಗಳು ಇಲ್ಲ ಎನ್ನಲಾಗಿದೆ. ಇದಕ್ಕೆ ಶಾಂಕರ ಭಾಷ್ಯದಲ್ಲಿ 'ಮುಕ್ತರಿಗೆ ಯಾರೂ ಅಧಿಪತಿಗಳಿಲ್ಲ' ಎನ್ನುವ ಯಥಾಶ್ರುತಾರ್ಥವನ್ನು ಮಾಡಲಾಗಿದೆ. ಆದರೆ, ಅದು ಶ್ರುತಿ ಸಮ್ಮತವಲ್ಲ. ಪುರುಷಸೂಕ್ತದಲ್ಲಿ ಮುಕ್ತರನ್ನು ಅಮೃತರು, ಎಂದು ಕರೆದು ಅವರಿಗೆ ವಿಷ್ಣು ಈಶಾನ ಎಂದು ಹೇಳಲಾಗಿದೆ. ಆದ್ದರಿಂದ ಶಾಸ್ತ್ರದಲ್ಲಿ ಹೇಳಿರುವ ಅಧಿಪತಿಗಳು ಬಿಟ್ಟು ಬೇರೆ ಅಧಿಪತಿಗಳು ಮುಕ್ತರಿಗೆ ಇಲ್ಲ, ಎಂದಷ್ಟೇ ಅರ್ಥ.

**ಏತೇಽಪಿ ಚಾನ್ಯಾಧಿಪತಿತ್ವಯುಕ್ತಾ**
**ವಿಷ್ಣ್ವನ್ಯಚಿತ್ತ್ವೇನ ಯಥಾ ಪುಮಾಂಸಃ ।**
**ಪ್ರಸಿದ್ಧಿಭಾಜಸ್ತ್ವಿತಿ ಚಾನುಮೈವ**
**ಹ್ಯಭೀಷ್ಟಸಿದ್ಧ್ಯೈ ಭವತೀಹ ನಿಶ್ಚಯಾತ್ ॥ ೪ ॥**

ಇದಕ್ಕೆ ಅನುಮಾನವನ್ನೂ ಆಧಾರವನ್ನಾಗಿ ಕೊಡಬಹುದು— 'ಏತೇಽಪಿ=ಮುಕ್ತರೂ ಕೂಡಾ ಅನ್ಯಾಧಿಪತಿತ್ವಯುಕ್ತಾಃ=ಇನ್ನೊಬ್ಬರ ಅಧಿಕಾರಕ್ಕೆ ಒಳಪಟ್ಟಿದ್ದಾರೆ, ವಿಷ್ಣು-ಅನ್ಯಚಿತ್ವೇನ=ವಿಷ್ಣುಭಿನ್ನರಾದ ಚೇತನ ರಾದುದರಿಂದ. ಯಥಾ=ಹೇಗೆ ಪ್ರಸಿದ್ಧಿಭಾಜಃ ಪುಮಾಂಸಃ=ಪರಾಧೀನರಾಗಿ ಪ್ರಸಿದ್ಧರಾದ ಸಂಸಾರಿಗಳೋ ಹಾಗೆ. ಇತಿ ಅನುಮೈವ=ಈ ಅನುಮಾನವೇ, ನಿಶ್ಚಯಾತ್=ನಿಶ್ಚಯವಾಗಿ ಇಹ=ಮುಕ್ತರಲ್ಲಿ ಅಭೀಷ್ಟಸಿದ್ಧ್ಯೈ, ಅಭೀಷ್ಟಸ್ಯ= ಅಧಿಪತಿಗಳಿದ್ದಾರೆ, ಎನ್ನುವ ಅಭೀಷ್ಟದ ಸಿದ್ಧ್ಯೈ=ಸಿದ್ಧಿಗಾಗಿ ಭವತಿ= ಆಗುತ್ತದೆ.

ಭಾವಾರ್ಥ— ವಿಷ್ಣುವನ್ನು ಬಿಟ್ಟರೆ ಉಳಿದೆಲ್ಲರೂ ಅಸ್ವತಂತ್ರರು. ಅಂದರೆ, ಪರಾಧೀನರು. ಮುಕ್ತನೂ ವಿಷ್ಣುವಿಗಿಂತ ಭಿನ್ನನಾದ ಮೇಲೆ ಅವನೂ

ಭಗವದಧೀನವಾಗಿರಬೇಕು. ಈ ಅನುಮಾನವು ಮುಕ್ತರೂ ಪರಾಧೀನರು, ಎನ್ನುವುದಕ್ಕೆ ಆಧಾರ.

**ಮುಕ್ತಸ್ವಕೀಯಾವರಯಂತೃತಾऽಸ್ತಿ**
**ಮುಕ್ತಾವಪಿ ಬ್ರಹ್ಮಪುರಸ್ಸರಾಣಾಮ್ ।**
**'ಅನೇನ ದೇವೇನ ತಥಾऽಮುನಾ ಚ**
**ಹೀಷ್ಟೇ ಪರಾರ್ವಾಕ್ತನಲೋಕಿನಾಮಿತಿ' ॥ ೫ ॥**

**ಫಲಂ ಶ್ರುತಿರ್ಜ್ಞಾನತ ಆಹ ಮುಕ್ತಾ-**
**ವೇತಚ್ಚ ಸರ್ವಾಶುಭನಾಶಲಿಂಗಾತ್ ॥ ೬ ॥**

ಮುಕ್ತೌ=ಮುಕ್ತಿಯಲ್ಲಿ ಬ್ರಹ್ಮಪುರಃಸ್ಸರಾಣಾಂ=ಬ್ರಹ್ಮಾದಿಗಳಿಗೆ ಮುಕ್ತ-ಸ್ವಕೀಯಾವರ-ಯಂತೃತಾ=ತಮ್ಮ ಜೊತೆಗೆ ಮುಕ್ತರಾದ 'ಅವರ' ಜೀವರನ್ನು ಕುರಿತು ನಿಯಾಮಕತ್ವವು ಇದೆ. ಇದಕ್ಕೆ ಶ್ರುತಿಯೇ ಪ್ರಮಾಣ— ''ಅನೇನ ದೇವೇನ=ಚಕ್ಷುರಂತಸ್ಥನಾಗಿ ಪ್ರಸನ್ನನಾದ ಪರಮಾತ್ಮನಿಂದ ತಥಾ=ಹಾಗೆಯೇ ಅಮುನಾ ಚ=ಆದಿತ್ಯಾಂತರ್ಗತನಾದವನಿಂದ ಪರ-ಅರ್ವಾಕ್ತನಲೋಕ-ವರ್ತಿನಾಂ=ಊರ್ಧ್ವಲೋಕ ಮತ್ತು ಕೆಳಗಿನ ಲೋಕಗಳಲ್ಲಿರುವ ಮುಕ್ತರಿಗೆ ಈಷ್ಟೇ=ಅಧಿಪತಿಯಾಗುತ್ತಾನೆ'' ಇತಿ ಶ್ರುತಿಃ=ಈ ಶ್ರುತಿಯು ಜಾನತಃ= ಜ್ಞಾನಿಗೆ ಫಲಂ=ಮುಕ್ತನಿಯಾಮಕತ್ವ ಫಲವನ್ನು ಆಹ=ಹೇಳುತ್ತದೆ.

''ಅಥ ಯ ಏವಂ ವಿದ್ವಾನ್''=ಹೀಗೆ ಪರಮಾತ್ಮನನ್ನು ತಿಳಿದವನು ಎಂದು ಆರಂಭಿಸಿ ಛಾಂದೋಗ್ಯಶ್ರುತಿಯು ''ಸೋऽಮುನೈವ ಯೇ ಚಾಮುಷ್ಮಾತ್ ಪರಾಂಚೋ ಲೋಕಾಃ ತಾಂಶ್ಚಾಪ್ನೋತಿ ದೇವಕಾಮಾಂಶ್ಚ, ಅಥಾನೇನೈವ ಯೇ ಚಾಸ್ಮಾದರ್ವಾಂಚೋ ಲೋಕಾಃ, ತಾಂಶ್ಚಾಪ್ನೋತಿ ಮನುಷ್ಯಕಾಮಾಂಶ್ಚ ॥'' ಎಂದು ಹೇಳುತ್ತದೆ.

ಛಾಂದೋಗ್ಯೋಪನಿಷತ್ತಿನ ಪ್ರಥಮಾಧ್ಯಾಯದಲ್ಲಿ (1.3.9) 'ಅಥ ಯ ಏಷೋऽಂತರಕ್ಷಿಣಿ ಪುರುಷೋ ದೃಶ್ಯತೇ' ಎಂದು ಹೇಳಿ ಉದ್ಗಾತೃವು 'ಆದಿತ್ಯಸ್ಥ ಮತ್ತು ಚಕ್ಷುಸ್ಥನಾದ ಪರಮಾತ್ಮನನ್ನು ತಿಳಿದು ಸಾಮಗಾನ

ಮಾಡಿದರೆ ಹಿಂದೆ ಹೇಳಿರುವ ಸೂರ್ಯಲೋಕದ ಊರ್ಧ್ವದಲ್ಲಿರುವ ಲೋಕ ಮತ್ತು ಕೆಳಗಿರುವ ಲೋಕಗಳ ಆಧಿಪತ್ಯದ ಜೊತೆಗೆ ಅಲ್ಲಿರುವ ವಿಷಯಭೋಗಗಳೆಲ್ಲವೂ ದೊರಕುತ್ತವೆ' ಎಂದು ಫಲವನ್ನು ಮುಕ್ತಿಯಲ್ಲಿ ಹೇಳಲಾಗಿದೆ. ಈ ಮಂತ್ರದಲ್ಲಿ ಅನೇನ, ಎಂದರೆ ಅಕ್ಷಿಸ್ಥನಾದ ಭಗವಂತನಿಂದ ಸೂರ್ಯಲೋಕದ ಕೆಳಗಿನ ಲೋಕಗಳ ಪ್ರಾಪ್ತಿ, ಅಮುನಾ=ಆದಿತ್ಯಾಂತರ್ಗತ ನಾದ ಭಗವಂತನಿಂದ ಊರ್ಧ್ವಲೋಕಗಳ ಆಧಿಪತ್ಯಪ್ರಾಪ್ತಿ, ಎಂದು ಕ್ರಮವನ್ನು ತಿಳಿಯಬೇಕು.

ಈ ಮಂತ್ರದಲ್ಲಿ ಹೇಳಿರುವ ಜ್ಞಾನಫಲವು ಮುಕ್ತಿಯಲ್ಲಿ ಎನ್ನುವುದಕ್ಕೆ ಗಮಕ–ಏತಚ್ಚ=ಈ ಫಲವಾದರೋ ಸರ್ವಾಶುಭನಾಶಲಿಂಗಾತ್=ಸರ್ವ ಪಾಪಗಳ ನಾಶರೂಪವಾದ ಲಿಂಗದಿಂದ ಮುಕ್ತೌ=ಮೋಕ್ಷದಲ್ಲಿ, ಎಂದು ತಿಳಿಯುತ್ತದೆ.

ಭಾವಾರ್ಥ— ಈ ಫಲಶ್ರುತಿಪ್ರಕರಣದಲ್ಲಿ 'ಉದೇತಿ ಹ ವೈ ಸರ್ವೇಭ್ಯಃ ಪಾಪ್ಮಭ್ಯಃ ಯ ಏವಂ ವೇದ—ಹೀಗೆ ತಿಳಿದವನು ಸಕಲಪಾಪ ಗಳಿಂದಲೂ ಮುಕ್ತನಾಗುವನು' ಎಂದು ಹೇಳಲಾಗಿದೆ. ಮುಕ್ತಿಯಲ್ಲಲ್ಲದೆ ಸಕಲಪಾಪನಾಶ ಬೇರೆ ಕಡೆ ಇಲ್ಲ. ಪ್ರಾರಬ್ಧಪಾಪವು ಮೋಕ್ಷಪರ್ಯಂತವೂ ಇರುತ್ತದೆ. ಆದ್ದರಿಂದ ಈ ಮುಕ್ತನಿಯಾಮಕತ್ವಫಲವು ಮೋಕ್ಷದಲ್ಲೇ ಸಂಸಾರದಲ್ಲಿ ಅಲ್ಲ.

**ಲೋಕಾಧಿಪತ್ಯಂ ಚ ವಿಧಾತುರೇವ**
**ಸರ್ವಾತ್ಮನೇತ್ಯಾಹ ತುರಶ್ರುತಿಶ್ಚ ।**
**ಸರ್ವೇ ಬಲಿಂ ದೇವಗಣಾ ವಹಂತೀ-**
**ತ್ಯೇತಚ್ಚ ನಾನ್ಯಸ್ಯ ಹಿ(ತು) ಯುಕ್ತಿಮೇತಿ ॥ ೭ ॥**

ಸರ್ವಾತ್ಮನಾ ಲೋಕಾಧಿಪತ್ಯಂ ಚ=ಎಲ್ಲ ಮುಕ್ತನಿಯಾಮಕತ್ವವು ವಿಧಾತುರೇವ=ಮುಕ್ತ ಚತುರ್ಮುಖ ಬ್ರಹ್ಮದೇವನಿಗೆ ಮಾತ್ರ ಇತಿ= ಹೀಗೆಂದು ತುರಶ್ರುತಿಃ ಅಹ='ತುರ' ಶ್ರುತಿಯು ಹೇಳುತ್ತದೆ. ಅಲ್ಲದೆ, ತೈತ್ತಿರೀಯಶ್ರುತಿಯಲ್ಲೂ ಹೀಗಿದೆ— ಸರ್ವೇ ದೇವಗಣಾಃ=ಎಲ್ಲ ಮುಕ್ತ ದೇವತಾಸಮೂಹವೂ ಬಲಿಮ್ ಆ ವಹಂತಿ=ಪೂಜೆಯನ್ನು ಸಲ್ಲಿಸುತ್ತಾರೆ,

ಇತ್ಯೇತಚ್ಚ=ಈ ಶ್ರುತಿಯೂ ಮುಕ್ತನಿಯಾಮಕತ್ವವನ್ನು ಹೇಳುತ್ತದೆ. ''ಸ ವೇದ ಬ್ರಹ್ಮ, ಸರ್ವೇಽಸ್ಮೈದೇವಾ ಬಲಿಮಾವಹಂತಿ' ಎನ್ನುವ ತೈತ್ತಿರೀಯಶ್ರುತಿಯು ಮುಕ್ತಬ್ರಹ್ಮನಿಗೆ ಎಲ್ಲ ಮುಕ್ತದೇವತೆಗಳಲ್ಲಿ ಪೂಜೆ ಸಲ್ಲಿಸುತ್ತಾರೆ, ಎಂದು ಹೇಳುತ್ತದೆ. ಏತಚ್ಚ=ಈ ಪೂಜೆಯು ಅನ್ಯಸ್ಯ=ಅಮುಕ್ತರದು ಎನ್ನುವುದು ಯುಕ್ತಿಂ ನ ಏತಿ=ಯುಕ್ತವಾಗುವುದಿಲ್ಲ.

**ಲೋಕಾ ಇತೀಹಾಪಿ ತು ಲೋಕಿನಾಂ ವಚೋ**
**ಲೋಕಾ ಇತಿ ಹ್ಯೇವ ರವಃ ಪ್ರಜಾಸು ।**
**ಪ್ರಯುಜ್ಯತೇ ಸರ್ವಜನ್ಯೈಃ ಸದೈವ**
**ತನ್ಮಾನಿನೋ ಲೋಕಪದೇನ ಚೋಕ್ತಾಃ ॥ ೮ ॥**

**ತದ್ಗಾಸ್ತು ಮುಕ್ತಾ ಇಹ ಲೋಕಶಬ್ದಾ**
**ಅನ್ಯೋನ್ಯನಾಥಾ ಇತಿ ಪೈಂಗಿನಾಂ ಶ್ರುತಿಃ ॥ ೯ ॥**

ಹಿಂದೆ ಹೇಳಿರುವ ಫಲಶ್ರುತಿಯಲ್ಲಿ ಲೋಕಪ್ರಾಪ್ತಿಯನ್ನಷ್ಟೇ ಹೇಳಲಾಗಿದೆ— ಮುಕ್ತ ನಿಯಾಮಕತ್ವವನ್ನು ಅಲ್ಲಿ ಹೇಳಲಾಗಿಲ್ಲ, ಎನ್ನುವ ಆಕ್ಷೇಪಕ್ಕೆ ಹೀಗೆ ಸಮಾಧಾನ— ಇಹಾಪಿತು=ಈ ಫಲಶ್ರುತಿಯಲ್ಲಿ ಲೋಕಾ ಇತಿ ಪದಂ=ಲೋಕಾಃ, ಎಂಬ ಪದವು ಲೋಕಿನಾಂ ವಚಃ=ಆ ಲೋಕದಲ್ಲಿರುವ ಜನರಿಗೆ ವಾಚಕ. ಇದು ರೂಢಲಕ್ಷಣಾ. ಲೋಕಾಃ ಇತಿ ರವಃ='ಲೋಕಾಃ' ಎಂಬ ಪದವು ಪ್ರಜಾಸು=ಆ ಲೋಕದಲ್ಲಿರುವ ಜನರ ವಿಷಯದಲ್ಲಿ ಸರ್ವಜನ್ಯೈಃ=ಎಲ್ಲರಿಂದಲೂ ಸದೈವ=ಯಾವಾಗಲೂ ಪ್ರಯುಜ್ಯತೇ= ಪ್ರಯೋಗಿಸಲ್ಪಡುತ್ತದೆ. ಅಥವಾ ತನ್ಮಾನಿನಃ=ಆ ಲೋಕಾಭಿಮಾನಿಗಳು ಲೋಕಪದೇನ ಚೋಕ್ತಾಃ=ಲೋಕ ಎಂಬ ಪದದಿಂದ ಹೇಳಲ್ಪಡುತ್ತಾರೆ.

ಭಾವಾರ್ಥ— ಲೋಕಶಬ್ದಕ್ಕೆ ವಾಚ್ಯಾರ್ಥ ಸ್ವರ್ಗಾದಿಸ್ಥಾನವಿಶೇಷಗಳಾದರೂ ಅದಕ್ಕೆ ಆ ಲೋಕದಲ್ಲಿರುವ ಜನರು, ಎಂದು ರೂಢಲಕ್ಷಣಯಾ ಅರ್ಥವಾಗುತ್ತದೆ. ಅಥವಾ 'ಲೋಕಸ್ತು ಭುವನೇ ಜನೇ' ಎಂಬ ಕೋಶದಲ್ಲಿ ಲೋಕಶಬ್ದಕ್ಕೆ ಜನರು ಎಂದು ವಾಚ್ಯಾರ್ಥವನ್ನೇ ಹೇಳಲಾಗಿದೆ. ಅಥವಾ,

ಅಭಿಮಾನ್ಯಧಿಕರಣನ್ಯಾಯದಿಂದ ಲೋಕಶಬ್ದಕ್ಕೆ ಲೋಕಾಭಿಮಾನಿದೇವತೆಗಳು, ಎಂದು ಅರ್ಥ.

ಲೋಕಶಬ್ದಕ್ಕೆ ಲೋಕದಲ್ಲಿರುವ ಜನರು, ಎಂದು ಅರ್ಥವನ್ನು ಮಾಡಬಹುದಾದರೂ ಪ್ರಕೃತಶ್ರುತಿಗೆ ಆ ಅರ್ಥವು ವಿವಕ್ಷಿತ ಎನ್ನುವುದು ಹೇಗೆ?— ತದ್ಗಾಸ್ತು ಮುಕ್ತಾಃ=ಆ ಲೋಕದಲ್ಲಿರುವ ಮುಕ್ತರು ಇಹ=ಈ ಶ್ರುತಿಯಲ್ಲಿ ಲೋಕಶಬ್ದಾಃ=ಲೋಕಶಬ್ದವಾಚ್ಯರು, ಅವರು ಅನ್ಯೋನ್ಯ-ನಾಥಾಃ=ಉತ್ತಮರು ಕೆಳಗಿನವರಿಗೆ ನಿಯಾಮಕರು, ಇತಿ=ಹೀಗೆ ಪೈಂಗಿನಾಂ ಶ್ರುತಿಃ=ಪೈಗಿಶ್ರುತಿ ಇದೆ.

**ಅಲೋಕಶಬ್ದೇನ ವಿಮುಕ್ತಿಭಾಜೋ**
**ವಾಚ್ಯಾಃ ಪದಂ ತಾದೃಗಪೀಹ ಯುಕ್ತಮ್ ।**
**ಲೋಕಾಭಿಧಾಶ್ಚಾಪಿ ಯತೋ ಹಿ ಮುಕ್ತಾಃ**
**ಪ್ರಕಾಶರೂಪಾಃ ಸತತಂ ಚ ಸರ್ವೇ ॥ ೧೦ ॥**

ಲೋಕಾತೀತರಾದುದರಿಂದ ಅಥವಾ ದೇಹರಹಿತರಾದುದರಿಂದ ಅಲೋಕಶಬ್ದೇನ=ಅಲೋಕಶಬ್ದದಿಂದ ವಿಮುಕ್ತಿಭಾಜಃ=ಮುಕ್ತರು ವಾಚ್ಯಾಃ=ವಾಚ್ಯರು. ತಾದೃಕ್ ಪದಮಪಿ=ಅಲೋಕ ಎಂಬ ಪದವೂ ಇಹ ಯುಕ್ತಮ್='ಪಾರಾಂಚೋऽಲೋಕಾಃ, ಅರ್ವಾಂಚೋऽಲೋಕಾಃ' ಎಂಬಲ್ಲಿ ಛೇದ ಮಾಡಲು ಯೋಗ್ಯವಾಗಿದೆ.

ಅಥವಾ, ಯತಃ=ಯಾವ ಕಾರಣದಿಂದ ಸತತಂ=ಸದಾ ಸರ್ವೇ=ಎಲ್ಲಾ ಮುಕ್ತಾಃ=ಮುಕ್ತರು ಪ್ರಕಾಶರೂಪಾಃ=ಪ್ರಕಾಶಸ್ವರೂಪರೋ ಆದ್ದರಿಂದಲೂ ಲೋಕಾಭಿಧಾ ಅಪಿ=ಲೋಕ ಎಂಬ ಹೆಸರುಳ್ಳವರಾಗಿರುತ್ತಾರೆ.

ಭಾವಾರ್ಥ— 'ಪರಾಂಚೋಲೋಕಾಃ' ಎಂಬ ಶ್ರುತಿವಾಕ್ಯದಲ್ಲಿ 'ಅಲೋಕಾಃ' ಎಂದೂ ಪದವಿಭಾಗ ಮಾಡಬಹುದು. ಜಡದೇಹಿಗಳು ಲೋಕಾಃ ಎನಿಸುತ್ತಾರೆ. ಚಿದ್ದೇಹಿಗಳಾದ ಮುಕ್ತರು 'ಅಲೋಕಾಃ' ಎನಿಸಿದ್ದಾರೆ. ಅಥವಾ, ಲೋಕ ಎಂದರೆ ಪ್ರಕಾಶ. ಮುಕ್ತಿಯಲ್ಲಿ ಸದಾ ಪ್ರಕಾಶಾತ್ಮಕರಾದುದರಿಂದ ಲೋಕಾಃ ಎಂದರೆ ಮುಕ್ತರು.

ಬ್ರಹ್ಮೈವ ಲೋಕಾಧಿಪತಿರ್ವಿಮುಕ್ತೋ
ಭವೇದಿತಿ ಪ್ರಾಹ ತುರಶ್ರುತಿಶ್ಚ ॥ ೧೧ ॥

ತುರಶ್ರುತಿಶ್ಚ ಪ್ರಾಹ=ಹಿಂದಿನ ತುರಶ್ರುತಿಯೂ ಹೇಳುತ್ತದೆ— ವಿಮುಕ್ತೋ ಬ್ರಹ್ಮೈವ=ಮುಕ್ತನಾದ ಬ್ರಹ್ಮದೇವನೇ ಲೋಕಾಧಿಪತಿಃ ಭವೇತ್=ಲೋಕಾಧಿಪತಿಯಾಗಿರುತ್ತಾನೆ, ಇತಿ=ಹೀಗೆಂದು.

**ಪರಾಭಿಮತ ಶ್ರುತ್ಯರ್ಥ ನಿರಾಸ**

ನಚೇಹ ವಿಜ್ಞಾನಫಲಂ ಸಮುಕ್ತಂ
ಲೋಕಾಧಿಪತ್ಯಂ ರವಿಬಿಂಬಗೇ ಹರೌ ।
ಉಕ್ತಂ ಪೃಥಕ್ ತಚ್ಚ ಪುರೈವ ಯಸ್ಮಾದ್
ಭೇದೋಽಮುನೇತ್ಯಾದಿ ಚ ಸಮ್ಯಗುಕ್ತಃ ॥ ೧೨ ॥

ಈ ಶ್ರುತಿಗೆ ಪರಾಭಿಮತವಾದ ಅರ್ಥವು ಯುಕ್ತವಲ್ಲ—ಇಹ=ಈ ಫಲಶ್ರುತಿಯಲ್ಲಿ ಲೋಕಾಧಿಪತ್ಯಂ ವಿಜ್ಞಾನಫಲಂ=ಲೋಕಾಧಿಪತ್ಯವು ಜ್ಞಾನದ ಫಲವಾಗಿ ನ ಸಮುಕ್ತಂ=ಹೇಳಲ್ಪಟ್ಟಿಲ್ಲ. ಯಸ್ಮಾತ್=ಏಕೆಂದರೆ, ತಚ್ಚ=ಲೋಕಾಧಿಪತ್ಯವು ಪೃಥಕ್ ರವಿಬಿಂಬಗೇ=ಆದಿತ್ಯನಲ್ಲಿ ಮತ್ತು ಚಕ್ಷುಸ್ಸಿನಲ್ಲಿ ಇರುವ ಹರೌ=ಶ್ರೀಹರಿಯಲ್ಲಿ ಪುರೈವ=ಮೊದಲೇ ಉಕ್ತಂ= ಹೇಳಲ್ಪಟ್ಟಿದೆ.

ಭಾವಾರ್ಥ— ಈ ಫಲಶ್ರುತಿಯಲ್ಲಿ ಜ್ಞಾನಿಗಳಿಗೆ ಉತ್ತಮಾಧಮ ಲೋಕಾಧಿಪತ್ಯವನ್ನೇ ಹೇಳಲಾಗಿದೆ, ಎಂದು ಪರವ್ಯಾಖ್ಯಾನ. ಆದರೆ, ಆ ಲೋಕಾಧಿಪತ್ಯವನ್ನು ಶ್ರೀಹರಿಗೆ ಹೇಳಲಾಗಿದೆ— 'ಅಥ ಯ ಏಷೋಽಂತರಾದಿತ್ಯೇ ಪುರುಷೋ ದೃಷ್ಯತೇ' ಎಂದು ಪ್ರಕರಣವನ್ನು ಆರಂಭಿಸಿ 'ಸ ಏಷ ಯೇ ಚಾಮುಷ್ಮಾತ್ ಪರಾಂಚೋ ಲೋಕಾಃ ತೇಷಾಂ ಚೇಷ್ಟೇ' ಎಂದು ಆದಿತ್ಯಾಂತರ್ಗತನಾದ ಶ್ರೀಹರಿಯೇ ಆದಿತ್ಯಮಂಡಲಕ್ಕಿಂತ ಮೇಲಿರುವ ಲೋಕಾಧಿಪತಿ, ಎಂದು ಹೇಳಲಾಗಿದೆ.

'ಅಥ ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ' ಎಂದು

ಪ್ರಕರಣಾಂತರವನ್ನು ಆರಂಭಿಸಿ 'ಸ ಏಷ ಯೇ ಚೈತಸ್ಮಾತ್ ಅರ್ವಾಂಚೋ ಲೋಕಾಃ ತೇಷಾಂ ಚೇಷ್ಟೇ'' ಎಂದು ಚಕ್ಷುರಂತಃಸ್ಥಪುರುಷನಿಗೆ ಕೆಳಗಿನ ಲೋಕಗಳ ನಿಯಾಮಕತ್ವವನ್ನು ಹೇಳಲಾಗಿದೆ. ಹೀಗೆ ಸರ್ವಲೋಕ ನಿಯಾಮಕತ್ವವು ಭಗವಂತನ ಧರ್ಮ, ಮುಕ್ತನಲ್ಲಿ ಅದು ಇರಲು ಸಾಧ್ಯವಿಲ್ಲ.

ಆದ್ದರಿಂದ, 'ಅಥ ಯ ಏವಂ 'ವಿದ್ವಾನ್' ಎಂದು ಪ್ರಕರಣದ ಕೊನೆಯಲ್ಲಿ ಆದಿತ್ಯ ಮತ್ತು ಚಕ್ಷುಸ್ಸು ಇವೆರಡರ ಒಳಗೆ ನಿಯಾಮಕನಾಗಿರುವ ಪರಮಾತ್ಮನ ಜ್ಞಾನಿಯನ್ನು ಪರಾಮರ್ಶೆಮಾಡಿ 'ಸೋಽಮುನೈವ ಯೇ ಚಾಮುಷ್ಮಾತ್ ಪರಾಂಚೋ ಲೋಕಾಃ ತಾಂಶ್ಚಾಪ್ನೋತಿ' ಇತ್ಯಾದಿಯಾಗಿ ಸ್ವಾಧೀನ ಮುಕ್ತನಿಯಾಮಕತ್ವಫಲವನ್ನೇ ಹೇಳಲಾಗಿದೆ.

ಮೋಕ್ಷದಲ್ಲಿ ಸರ್ವಲೋಕಾಧಿಪತಿಯಾದ ಪರಮಾತ್ಮನಿಂದ ಅಭೇದವು ಮುಕ್ತನಿಗೆ ಇದೆ. ಆದ್ದರಿಂದ ಅವನೂ ಸರ್ವಲೋಕಾಧಿಪತಿಯಾಗುತ್ತಾನೆ, ಎನ್ನುವುದು ಸರಿಯಲ್ಲ—ಭೇದಃ=ಜ್ಞಾನಿಗೆ ಪರಮಾತ್ಮನಿಂದ ಭೇದವು ಇದೆ ಎಂದು ಶ್ರುತಿಯಲ್ಲಿರುವ 'ಅಮುನಾ' 'ಅನೇನ' ಪದಗಳಿಂದಲೇ ಇತ್ಯಾದಿ ಚ=ಈ ಮೊದಲಾದ ವಿಷಯವು ಪೂರ್ವಂ ಉಕ್ತಃ=ಹಿಂದೆಯೇ ಹೇಳಲ್ಪಟ್ಟಿದೆ.

ಭಾವಾರ್ಥ— ಫಲಶ್ರುತಿಯಲ್ಲಿ 'ಸಃ ಅಮುನೈವ=ಆದಿತ್ಯನನ್ನು ತಿಳಿದ ಜ್ಞಾನಿಯು ಆ ಪರಮಾತ್ಮನಿಂದಲೇ' ಎಂದೂ 'ಅಥ ಅನೇನೈವ' ಚಕ್ಷುರಂತಃಸ್ಥ ನಿಂದಲೇ ಎಂದೂ ಇದೆ. ಜ್ಞಾನಿ ಪಡೆಯುವ ಫಲ ಭಗವಂತನ ಪ್ರಸಾದದಿಂದ. ಆದ್ದರಿಂದ, ಮುಕ್ತರಿಗೂ ಪರಮಾತ್ಮನಿಗೂ ಭೇದವು ಶ್ರುತಿಯಿಂದಲೇ ಸಿದ್ಧವಾಗಿದೆ.

**ತ್ವಪ್ರತ್ಯಯಂ ಚಾಪ್ಯತಿಹಾಯ ನೈವ**
**ರೂಪೇಣ ತೇನೇತಿ ಭವೇದಿಹಾರ್ಥಃ ।**
**ಭವತ್ಯಸಾವಿತ್ಯಣುಶಬ್ದಮತ್ರ**
**ವಿಹಾಯ ವಾಕ್ಯಾನಿ ಬಹೂನಿ ದೋಷಃ ॥ ೧೩ ॥**

ತ್ವಪ್ರತ್ಯಯಂ='ತ್ವ' ಎಂಬ ಭಾವಾರ್ಥಕ ಪ್ರತ್ಯಯವನ್ನೂ ಅಪಿ=ಮತ್ತು 'ತೇನ ರೂಪೇಣ' ಇತಿ=ಪರಮಾತ್ಮಸ್ವರೂಪದಿಂದ ಎಂದೂ ಅತಿಹಾಯ=

ಬಿಟ್ಟು ಪ್ರವೃತ್ತವಾದ ಇಹ=ಈ ಶ್ರುತಿಯಲ್ಲಿ ಅರ್ಥಃ='ಅಮುನಾ' ಅನೇನ' ಎಂಬ ಶಬ್ದಗಳಿಗೆ ಮುಕ್ತಾಭಿನ್ನನಾದ ಪರಮಾತ್ಮನಿಂದ ಎಂಬ ಅರ್ಥವು ನ ಭವೇತ್=ಆಗಲಾರದು.

**ಭಾವಾರ್ಥ—** ಶ್ರುತಿಯಲ್ಲಿರುವ 'ಅಮನಾ' 'ಅನೇನ' ಎಂಬ ಪದಗಳಿಗೆ ಪರಮಾತ್ಮನ ಪ್ರಸಾದದಿಂದ ಎಂದು ಅರ್ಥಮಾಡಿದರೆ ಮುಕ್ತ–ಪರಮಾತ್ಮರಿಗೆ ಭೇದವು ತಿಳಿಯಬಹುದು. ಆದರೆ ಅದಕ್ಕೆ ಹಾಗೆ ಅರ್ಥವಲ್ಲ. ಅಮುನಾ ಶಬ್ದದೊಂದಿಗೆ ರೂಪೇಣ ಎಂಬ ಶಬ್ದವನ್ನು ಸೇರಿಸಿ ಅಮುನಾ ರೂಪೇಣ=ಪರಮಾತ್ಮನ ಅಭೇದವನ್ನು ಹೊಂದಿ, ಎಂದರ್ಥ. ಅನೇನ ರೂಪೇಣ=ಪರಮಾತ್ಮರೂಪದಿಂದ ಎಂದೂ ಅರ್ಥ. ಆದ್ದರಿಂದ ಶ್ರುತಿಯು ಮುಕ್ತಾಭೇದಕ್ಕೆ ಬಾಧಕವಾಗಿಲ್ಲ, ಎಂದು ಪೂರ್ವಪಕ್ಷ.

**ಸಿದ್ಧಾಂತ—** ಅಭೇದಾಭಿಪ್ರಾಯವಿದ್ದಲ್ಲಿ ಅದಸ್ತ್ವೇನ=ಭಗವದ್ರೂಪತ್ವೇನ ಅಥವಾ ಅಮುನಾರೂಪೇಣ=ಭಗವದ್ರೂಪದಿಂದ ಎಂದು ಶ್ರುತಿಯಲ್ಲಿ ಹೇಳಬೇಕಾಗಿತ್ತು. ಆದರೆ, ಶ್ರುತಿ ಹಾಗಿಲ್ಲ. ಆದ್ದರಿಂದ ಅಭೇದವು ಶ್ರುತಿಯ ಅಭಿಪ್ರಾಯವಲ್ಲ.

ಶ್ರುತಿಯ ಅಮುನಾ ಎಂಬುದು ಭಾವಪ್ರಧಾನ ನಿರ್ದೇಶ–ಅದಸ್ತ್ವೇನ ಎಂದೇ ಅರ್ಥ. ಅಥವಾ ಆಕಾಂಕ್ಷಿತವಾದ 'ರೂಪೇಣ' ಎಂಬ ಶಬ್ದವನ್ನು ಅಧ್ಯಾಹಾರ ಮಾಡಬೇಕು. ಆದ್ದರಿಂದ ಇದೇನೂ ಹೊಸ ಕಲ್ಪನೆಯಲ್ಲ, ಎಂದು ಆಕ್ಷೇಪ. ಅದಕ್ಕುತ್ತರ— 'ಭವತಿ ಅಸೌ=ಇವನು ಬ್ರಹ್ಮನೇ ಆಗುತ್ತಾನೆ' ಇತಿ=ಹೀಗೆ ಅಣುಶಬ್ದಂ ಅತ್ರ ವಿಹಾಯ=ಹೀಗೆ ಲಘುವಾದ ವಾಕ್ಯವನ್ನು ಬಿಟ್ಟು ಬಹೂನಿ ವಾಕ್ಯಾನಿ=ಅನೇಕ ಶಬ್ದಗಳನ್ನು ಫಲಶ್ರುತಿಯಲ್ಲಿ ಹೇಳಲಾಗಿದೆ. ಇದು ದೋಷಃ=ವ್ಯರ್ಥವಾದೀತು.

**ಭಾವಾರ್ಥ—** ಬ್ರಹ್ಮಾಭೇದವು ಶ್ರುತಿಗೆ ಅಭಿಪ್ರೇತವಾಗಿದ್ದಲ್ಲಿ 'ಅಯಮ್ ಅಸೌ ಭವತಿ'–ಜ್ಞಾನಿಯು ಬ್ರಹ್ಮನೇ ಆಗುತ್ತಾನೆ, ಎಂದಿದ್ದರೆ ಸಾಕು. ಬ್ರಹ್ಮನು ಸರ್ವಲೋಕಾಧಿಪತಿ ಎಂದು ಹಿಂದೆ ಹೇಳಿರುವುದರಿಂದ ಜ್ಞಾನಿಗೂ ಸರ್ವಲೋಕಾಧಿಪತ್ಯ ಸಿದ್ಧವಾಗುತ್ತದೆ. ಅದಕ್ಕಾಗಿ ಇಷ್ಟು ದೀರ್ಘವಾದ ಫಲವಿಧಾಯಕ ವಾಕ್ಯದ ಅಗತ್ಯವಿರುತ್ತಿರಲಿಲ್ಲ.

**ಪಾದಾರ್ಥ ಸಂಕ್ಷೇಪ**

**ಅತೋ ಜಗದ್ವ್ಯಾಪೃತಿಮಂತ ಏವ**
**ಬ್ರಹ್ಮಾದಯಃ ಪೂರ್ಣಗುಣಾಃ ಕ್ರಮೇಣ ।**
**ಅಮಂದಮಾನಂದಮಜಸ್ರಮೇವ**
**ಭುಂಜಂತ ಆತ್ಮೀಯಮಜಾತ್ ಸಮಾಸತೇ** ॥ ೧೪ ॥

ಅತಃ=ಆದ್ದರಿಂದ ಬ್ರಹ್ಮಾದಯಃ=ಮುಕ್ತರಾದ ಬ್ರಹ್ಮಾದಿ ದೇವತೆಗಳು ಪೂರ್ಣ ಗುಣಾಃ=ಜ್ಞಾನಾನಂದಾದಿ ಸ್ವಯೋಗ್ಯಪೂರ್ಣಗುಣರಾಗಿ ಕ್ರಮೇಣ ಜಗದ್-ವ್ಯಾಪೃತಿಮಂತ ಏವ=ಸ್ವಾವರ-ನಿಯಮಕರಾಗಿಯೇ ಇರುತ್ತಾರೆ. ಅಜಾತ್=ಪ್ರಸನ್ನನಾದ ಭಗವಂತನಿಂದ ಆತ್ಮೀಯಂ=ತಮ್ಮದೇ ಆದ ಅಜಸ್ರಮ್ ಆನಂದಂ=ಪೂರ್ಣಾನಂದವನ್ನು ಭುಂಜಂತಃ=ಅನುಭವಿಸುವವರಾಗಿ ಇರುತ್ತಾರೆ.

**ಇಲ್ಲಿಗೆ ಅನನ್ಯಾಧಿಪತ್ಯಧಿಕರಣ ಮುಗಿಯಿತು.**

**ಅಂತಿಮ ಮಂಗಳ**

**ನಮೋನಮೋಽಶೇಷವಿಶೇಷಪೂರ್ಣ-**
**ಗುಣೈಕಧಾಮ್ನೇ ಪುರುಷೋತ್ತಮಾಯ।**
**ಭಕ್ತಾನುಕಂಪಾದತಿಶುದ್ಧಸಂವಿ-**
**ದ್ದಾತ್ರೇಽನುಪಾಧಿಪ್ರಿಯಸದ್ಗುಣಾತ್ಮನೇ** ॥ ೧೫ ॥

ಅಶೇಷ-ವಿಶೇಷ ಪೂರ್ಣಗುಣೈಕಧಾಮ್ನೇ=ಸಕಲ ವಿಶೇಷಗಳಿಂದ ಪೂರ್ಣವಾಗಿರುವ ಗುಣಗಳಿಗೆ ಮುಖ್ಯಾಶ್ರಯನಾದ ಭಕ್ತಾನುಕಂಪಾತ್=ಭಕ್ತನಾದ ನನ್ನ ಮೇಲೆ ಕೃಪೆಯಿಂದ ಅತಿಶುದ್ಧ-ಸಂವಿದ್-ದಾತ್ರೇ=ಪರಿಶುದ್ಧವಾದ ಜ್ಞಾನವನ್ನು ನೀಡಿರುವ, ಸ್ವಾರ್ಥಾಪೇಕ್ಷೆ ಇಲ್ಲದ ನಿರ್ವ್ಯಾಜ ಪ್ರೇಮಾಸ್ಪದ ಹಾಗೂ ಸದ್ಗುಣಸ್ವರೂಪನಾದ ಪುರುಷೋತ್ತಮಾಯ=ಸರ್ವೋತ್ತಮನಿಗೆ ನಮೋನಮಃ=ಪುನಃಪುನಃ ನಮಸ್ಕಾರ.

ಪರಮಾತ್ಮಸ್ವರೂಪಜ್ಞಾನದಂತೆ ಗುರುಗಳಾದ ತಮ್ಮ ಮಹತ್ತ್ವಜ್ಞಾನವೂ ಭಕ್ತರಿಗೆ ಆವಶ್ಯಕ. ಅದಕ್ಕಾಗಿ ಆಚಾರ್ಯರು ಸ್ವಸ್ವರೂಪವನ್ನೂ ತಿಳಿಸುತ್ತಾರೆ—

**ಯಸ್ಯ ತ್ರೀಣ್ಯುದಿತಾನಿ ವೇದವಚನೇ ರೂಪಾಣಿ ದಿವ್ಯಾನ್ಯಲಂ**
**ಬಟ್ ತದ್ ದರ್ಶತಮಿತ್ಥಮೇವ ನಿಹಿತಂ ದೇವಸ್ಯ ಭರ್ಗೋ ಮಹತ್**
**ವಾಯೋ ರಾಮವಚೋನಯಂ ಪ್ರಥಮಕಂ ಪೃಕ್ಷೋ ದ್ವಿತೀಯಂ**
**ವಪುರ್ಮಧ್ವೋ ಯತ್ತು ತೃತೀಯಮೇತದಮುನಾ ಗ್ರಂಥಃ ಕೃತಃ**
**ಕೇಶವೇ ॥ ೧೬ ॥**

ಯಸ್ಯ=ಯಾವ ವಾಯುದೇವನ ದಿವ್ಯಾನಿ=ಅದ್ಭುತಗಳಾದ ತ್ರೀಣಿ ರೂಪಾಣಿ=ಮೂರು ರೂಪಗಳು ವೇದವಚನೇ=ಬಳಿತ್ಥಾಸೂಕ್ತಾದಿ ವೇದದ ಮಾತುಗಳಲ್ಲಿ ಅಲಂ=ಚೆನ್ನಾಗಿ ಉದಿತಾನಿ=ಹೇಳಲ್ಪಟ್ಟಿವೆಯೋ ಅಮುನಾ= ಅಂತಹ ವಾಯುದೇವನಿಂದ ಕೇಶವೇ=ಭಗವದ್ವಿಷಯದಲ್ಲಿ ಗ್ರಂಥಃ ಕೃತಃ=ಈ ಗ್ರಂಥವು ರಚಿಸಲ್ಪಟ್ಟಿದೆ.

ಯಸ್ಯ=ವಾಯುದೇವನ ಮೂಲರೂಪವು ಬಟ್=ಬಲಾತ್ಮಾಕವಾದುದು, ದರ್ಶತಂ=ಜ್ಞಾನರೂಪವಾದುದು. ವಾಯುಶಬ್ದದ ವಕಾರವು ಬಲವಾಚಕ ಆಯುಃ=ಜ್ಞಾನ ಮತ್ತು ಭರ್ಗಃ=ಭರಣಕರ್ತೃ=ಜಗದ್ಧಾರಕವು ಗಮನಕರ್ತೃ=ಜಗತ್ ಪ್ರೇರಕವಾದುದು. ಇದೂ ವಾಯುಶಬ್ದದ ಅರ್ಥ. ಅದು ಮಹತ್=ಶ್ರೇಷ್ಠವಾದುದು.

ಮೂಲರೂಪಮಾತ್ರವಲ್ಲದೆ, ಅವತಾರಗಳೂ ನಿಹಿತಂ=ಭಗವಂತ ನಿಂದ ಪ್ರೇರಿತವೂ ಇತ್ಥಮೇವ=ಮೂಲರೂಪದಂತೆಯೇ ಸಾಮರ್ಥ್ಯವುಳ್ಳವುಗಳು.

ಯಸ್ಯ ಪ್ರಥಮಕಂ ರೂಪಂ=ಯಾವ ವಾಯುದೇವನ ಮೊದಲರೂಪ ರಾಮವಚೋನಯಂ=ಶ್ರೀರಾಮವಿಷಯಕವಾದ ಮಾತುಗಳೆನಿಸಿದ ಮೂಲರಾಮಾಯಣಾದಿಗಳನ್ನು ಶಿಷ್ಯರಿಗೆ ಉಪದೇಶ ನೀಡಿ ತಲುಪಿಸಿದ ಹನುಮದ್ರೂಪ.

ಯಸ್ಯದ್ವಿತೀಯಂ ರೂಪಂ=ವಾಯುದೇವನ ಎರಡನೆಯ ಭೀಮರೂಪ ಪೃಕ್ಷಃ=ಶತ್ರುಸೇನೆಯನ್ನು ನಾಶಮಾಡಿರುವಂತಹುದು.

ಯಸ್ಯ ತೃತೀಯಂ ವಪುಃ=ಯಾವ ವಾಯುದೇವನ ಮೂರನೆಯ ರೂಪ ಏತತ್=ಈ ಮಧ್ವಃ=ಮಧ್ವರೂಪವು. ಅಮುನಾ=ಈ ಮಧ್ವರಿಂದ ಕೇಶವೇ=ಪರಮಾತ್ಮನ ವಿಷಯದಲ್ಲಿ ಗ್ರಂಥಃ ಕೃತಃ=ಈ ಗ್ರಂಥವು ರಚಿಸಲ್ಪಟ್ಟಿದೆ.

ಭಗವಂತನ ಸ್ವರೂಪದ ನಿರೂಪಣೆಯಲ್ಲೇ ಗ್ರಂಥವು ಪರಿಸಮಾಪ್ತಿ ಹೊಂದಬೇಕೆಂದು ಕೊನೆಯಲ್ಲಿ ಮತ್ತೊಂದು ಮಂಗಲಪದ್ಯ—

**ನಿಃಶೇಷದೋಷರಹಿತ ಕಲ್ಯಾಣಾಖಿಲಸದ್ಗುಣ ।**
**ಭೂತಿಸ್ವಯಂಭುಶರ್ವಾದಿವಂದ್ಯಂ ತ್ವಾಂ ನೌಮಿ ಮೇ**
**ಪ್ರಿಯಮ್ ॥ ೧೭ ॥**

ನಿಃಶೇಷಧೋಷರಹಿತ=ಸಕಲದೋಷದೂರನೆ, ಕಲ್ಯಾಣಾಖಿಲ ಸದ್ಗುಣ=ನಿಖಿಲಸದ್ಗುಣರೂಪನೇ ಭೂತಿ–ಸಯಂಭು–ಶರ್ವಾದಿವಂದ್ಯಂ= ಮಹಾಲಕ್ಷ್ಮೀ–ಬ್ರಹ್ಮದೇವ–ರುದ್ರದೇವಾದಿಗಳಿಂದ ವಂದ್ಯನಾದ, ಮೇ= ನನಗೆ ಪ್ರಿಯಂ=ಪ್ರಿಯನಾದ ತ್ವಾಂ=ನಿನ್ನನ್ನು ನೌಮಿ=ನಮಸ್ಕರಿಸುತ್ತೇನೆ.

## ನ್ಯಾಯಸುಧಾದ ಅಂತಿಮ ಮಂಗಳ

**ವಚನಪ್ರಸೂನಮಾಲಾ ಜಯತೀರ್ಥಾಖ್ಯೇನ ಭಿಕ್ಷುಣಾ ರಚಿತಾ ।**
**ಧ್ರಿಯತಾಂ ಹೃದಯೇ ಸದಯೇ ಕಮಲಾಮಹಿಲೇನ ಪುರುಷೇಣ ॥ ೧**

ಮಾತುಗಳೆಂಬ ಹೂಗಳ ಈ ಮಾಲೆಯು (ಸುಧಾ) ಶ್ರೀಜಯತೀರ್ಥ ರೆಂಬ ಯತಿಯಿಂದ ರಚಿಸಲ್ಪಟ್ಟಿದೆ. ಕಮಲಾಪತಿಯಾದ ಪೂರ್ಣಷಡ್ಗುಣ ನಿಂದ ದಯಾಪೂರ್ಣವಾದ ಹೃದಯದಲ್ಲಿ ಇದು ಧರಿಸಲ್ಪಡಲಿ.

**ನ ವೈದುಷ್ಯಭ್ರಾಂತ್ಯಾ ನ ಚ ವಚನಚಾತುರ್ಯಕುಧಿಯಾ**
**ನ ಮಾತ್ಸರ್ಯಾವೇಶಾನ್ನ ಚ ಚಪಲತಾದೋಷವಶತಃ ।**
**ಪರಂ ಶ್ರದ್ಧಾಜಾಡ್ಯಾದಕೃಷಿ ಕೃತಿಮಾಚಾರ್ಯವಚಸಿ**
**ಸ್ಖಲನ್ನಪ್ಯೇತಸ್ಮಾಜ್ಜಗತಿ ನ ಹಿ ನಿಂದ್ಯೋಽಸ್ಮಿ ವಿದುಷಾಮ್ ॥೨॥**

'ಈ ಗ್ರಂಥವನ್ನು ನಾನು ಪಾಂಡಿತ್ಯವಿದೆ ಎನ್ನುವ ಭ್ರಾಂತಿಯಿಂದಾಗಲೀ ಹೇಳುವ ಚಾತುರ್ಯಪ್ರದರ್ಶನದ ಕೀಳು ಬುದ್ಧಿಯಿಂದಾಗಲೀ, ಮಾತ್ಸರ್ಯ ತುಂಬಿಕೊಂಡಾಗಲೀ ಚಪಲತೆ ಎಂಬ ದೋಷದಿದಂದಾಗಲೀ ರಚಿಸಿದ್ದಲ್ಲ. ಹೊರತು, ಶ್ರೀಮದಾಚಾರ್ಯರ ಮಾತಿನ ಮೇಲೆ ಭಕ್ತಿಪರವಶತೆಯಿಂದ ರಚಿಸಿರುವೆನು. ಆದ್ದರಿಂದ ವ್ಯತ್ಯಾಸಗಳಾಗಿದ್ದರೂ ವಿದ್ವಾಂಸರ ನಿಂದೆಗೆ ಪಾತ್ರನಲ್ಲ.

**ಅನುವ್ಯಾಖ್ಯಾಮೃತಾಂಬೋಧೇಃ ಸಮುತ್ಪನ್ನಾऽತಿನಿರ್ಮಲಾ ।**
**ಇಯಂ ನ್ಯಾಯಸುಧಾ ಭೌಮ್ಯೈರ್ವಿಬುಧ್ಯೈಃ ಸೇವ್ಯತಾಂ ಸದಾ ॥ ೩॥**

ಅನುವ್ಯಾಖ್ಯಾನ ಎಂಬ ಸಮುದ್ರದಿಂದ ಉದಿಸಿದ ಈ ಪರಿಶುದ್ಧವಾದ ನ್ಯಾಯಸುಧೆಯು (ಅಮೃತವು) ಭೂಸುರರಿಂದ ಅಸ್ವಾದಿಸಲ್ಪಡಲಿ.

**ಇತಿ ಶ್ರೀಮತ್ಪೂರ್ಣಪ್ರಮತಿಭಗವತ್ಪಾದಸುಕೃತೇ-**
**ರನುವ್ಯಾಖ್ಯಾನಸ್ಯ ಪ್ರಗುಣಜಯತೀರ್ಥಾಖ್ಯಯತಿನಾ ।**
**ಕೃತಾಯಾಂ ಟೀಕಾಯಾಂ ವಿಷಮಪದವಾಕ್ಯಾರ್ಥವಿವೃತೌ**
**ಚತುರ್ಥೇऽಧ್ಯಾಯೇऽಸ್ಮಿಂಶ್ಚರಮಚರಣಃ ಪರ್ಯವಸಿತಃ ॥ ೪ ॥**

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರು ರಚಿಸಿದ ಅನುವ್ಯಾಖ್ಯಾನಕ್ಕೆ ಋಜುಸ್ವಭಾವದ ಶ್ರೀಜಯತೀರ್ಥಯತಿಗಳಿಂದ ರಚಿತವಾದ ಕ್ಲಿಷ್ಟಪದ ಹಾಗೂ ವಾಕ್ಯಗಳ ಅರ್ಥವಿವರಣೆಯಲ್ಲಿ ನಾಲ್ಕನೆಯ ಅಧ್ಯಾಯದ ಕೊನೆಯ ಪಾದವು ಮುಗಿಯಿತು.

**ಇಲ್ಲಿಗೆ ನಾಲ್ಕನೆಯ ಅಧ್ಯಾಯದ ನಾಲ್ಕನೆಯ ಪಾದ ಮುಗಿಯಿತು.**

ಗ್ರಂಥವು ಸಮಾಪ್ತಿಯಾಯಿತು.

॥ ಶ್ರೀಕೃಷ್ಣಾರ್ಪಣಮಸ್ತು ॥

# ಸರ್ವಮೂಲಗ್ರಂಥಗಳು

ಶ್ರೀ ಮಧ್ವಾಚಾರ್ಯರು ವಿರಚಿಸಿದ ಮೂವತ್ತೇಳು ಗ್ರಂಥಗಳು ಸರ್ವಮೂಲಗ್ರಂಥಗಳೆಂದು ಪ್ರಸಿದ್ಧವಾಗಿವೆ. ಇವುಗಳನ್ನು೧. ಗೀತಾಪ್ರಸ್ಥಾನ ೨. ಉಪನಿಷತ್ಪ್ರಸ್ಥಾನ ೩. ಸೂತ್ರಪ್ರಸ್ಥಾನ ೪. ಋಕ್‌ಪ್ರಸ್ಥಾನ ೫. ಇತಿಹಾಸ ಪುರಾಣಗಳು ೬. ದಶಪ್ರಕರಣಗಳು ೭. ತಂತ್ರಸಾರ ಮತ್ತು ಸ್ತೋತ್ರ ಪೂಜಾದಿಗಳು ಎಂದು ವಿಂಗಡಿಸಲಾಗುವುದು.

ತತ್ವಜ್ಞಾನ ಧರ್ಮ ಮತ್ತು ಭಾರತೀಯ ಸಂಸ್ಕೃತಿಯ ಸಮಗ್ರಸಾರವೇ ಇವುಗಳಲ್ಲಿ ಅಡಕವಾಗಿರುವುದು. ಈ ಸಾರವನ್ನು ಕನ್ನಡದಲ್ಲಿ ಒದಗಿಸಲು ಶ್ರೀ ಶ್ರೀ ಶ್ರೀ ಪೇಜಾವರ ಮಠಾಧೀಶ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರ ಮಾರ್ಗದರ್ಶನದಲ್ಲಿ ಸರ್ವಮೂಲಗ್ರಂಥಗಳ ಕನ್ನಡ ಅನುವಾದದ ಯೋಜನೆಯನ್ನು ಕೈಕೊಳ್ಳಲಾಗಿದೆ.